ಪ್ರಕಾಶಕರು : ಶ್ರೀಗುರುರಾಜ ಅಸೋಸಿಯೇಷನ್ (ರಿ.) ಬಸವನಗುಡಿ, ಬೆಂಗಳೂರು 560 004.



ಸಂಪುಟ-೨

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ ವಿರಚಿತ:

# ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯ:

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಃ

# ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಃ

## (ಒಂಭತ್ತನೆಯ ಅಧ್ಯಾಯದಿಂದ ಹದಿನಾರನೆಯ ಅಧ್ಯಾಯದವರೆಗೆ)


ಪ್ರತಿಪದಾರ್ಥ ಮತ್ತು ವಿವರಣೆ :

ವಿದ್ವಾನ್ ಡಾ|| ಡಿ.ಪಿ. ಮಧುಸೂದನಾಚಾರ್ಯ
(9ನೇ ಅಧ್ಯಾಯ)

ವಿದ್ವಾನ್ ವಿ.ಹೆಚ್.ಪಿ. ನಾಗರಾಜಾಚಾರ್ಯ
(10ನೇ ಅಧ್ಯಾಯ)

ವಿದ್ವಾನ್ ವಿ.ಎಲ್. ಸುಧೀಂದ್ರಾಚಾರ್ಯ
ಮತ್ತು ಡಾ|| ಧನಂಜಯಾಚಾರ್ಯ
(11ನೇ ಅಧ್ಯಾಯ)

ವಿದ್ವಾನ್ ವಿ. ಮಾತರಿಶ್ವಾಚಾರ್ಯ
(12ನೇ ಅಧ್ಯಾಯ)

ವಿದ್ವಾನ್ ವಿ. ಶ್ರೀಕಾಂತಾಚಾರ್ಯ ಬಾಯರಿ
(13ನೇ ಅಧ್ಯಾಯ)

ವಿದ್ವಾನ್ ಡಾ|| ರಂಗನಾಥಾಚಾರ್ಯ ಕಟ್ಟಿ
(14ನೇ ಅಧ್ಯಾಯ)

ವಿದ್ವಾನ್ ಡಾ|| ಎಲ್.ಎಸ್. ವಾದಿರಾಜಾಚಾರ್ಯ
(15ನೇ ಅಧ್ಯಾಯ)

ವಿದ್ವಾನ್ ವಿ.ಎಲ್. ಸುಧೀಂದ್ರಾಚಾರ್ಯ
(16ನೇ ಅಧ್ಯಾಯ)



ಪ್ರಕಾಶಕರು

ಶ್ರೀ ಗುರುರಾಜ ಅಸೋಸಿಯೇಷನ್

ಮಾಡೆಲ್ ಹೌಸ್ ಬೀದಿ, ಬಸವನಗುಡಿ, ಬೆಂಗಳೂರು.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಃ

**ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಃ**

(ಒಂಭತ್ತನೆಯ ಅಧ್ಯಾಯದಿಂದ ಹದಿನಾರನೆಯ ಅಧ್ಯಾಯದವರೆಗೆ)

ಕನ್ನಡಾನುವಾದ :

**ವಿದ್ವಾನ್ ಡಾ|| ಡಿ.ಪಿ. ಮಧುಸೂದನಾಚಾರ್ಯ** (9ನೇ ಅಧ್ಯಾಯ),
**ವಿದ್ವಾನ್ ವಿ.ಹೆಚ್.ಪಿ. ಸಾಗರಾಜಾಚಾರ್ಯ** (10ನೇ ಅಧ್ಯಾಯ)
**ವಿದ್ವಾನ್ ವಿ.ಎಲ್. ಸುಧೀಂದ್ರಾಚಾರ್ಯ ಮತ್ತು**
**ಡಾ|| ಧನಂಜಯಾಚಾರ್ಯ** (11ನೇ ಅಧ್ಯಾಯ)
**ವಿದ್ವಾನ್ ವಿ. ಮಾತರಿಶ್ವಾಚಾರ್ಯ** (12ನೇ ಅಧ್ಯಾಯ)
**ವಿದ್ವಾನ್ ವಿ. ಶ್ರೀಕಾಂತಾಚಾರ್ಯ ಬಾಯರಿ** (13ನೇ ಅಧ್ಯಾಯ)
**ವಿದ್ವಾನ್ ಡಾ|| ರಂಗನಾಥಾಚಾರ್ಯ ಕಟ್ಟಿ** (14ನೇ ಅಧ್ಯಾಯ)
**ವಿದ್ವಾನ್ ಡಾ|| ಎಲ್.ಎಸ್. ವಾದಿರಾಜಾಚಾರ್ಯ** (15ನೇ ಅಧ್ಯಾಯ)
**ವಿದ್ವಾನ್ ವಿ.ಎಲ್. ಸುಧೀಂದ್ರಾಚಾರ್ಯ** (16ನೇ ಅಧ್ಯಾಯ)

**ಪ್ರಕಾಶಕರು ಶ್ರೀ ಗುರುರಾಜ ಅಸೋಸಿಯೇಷನ್, ಮಾಡೆಲ್ ಹೌಸ್ ಬೀದಿ,**
**ಬಸವನಗುಡಿ, ಬೆಂಗಳೂರು - ೫೬೦ ೦೦೪. ದೂರವಾಣಿ : ೨೬೬೨೫೬೫೮/೯**



ಪ್ರತಿಗಳು : ೧೦೦೦

ಪ್ರಕಟಿತ ವರ್ಷ : ೨೦೧೩

ಬೆಲೆ : ರೂ.೨೦೦/-

**ಅಕ್ಷರ ವಿನ್ಯಾಸ ಮತ್ತು ಮುದ್ರಣ**
**ವಾಗರ್ಥ, ನಂ.149, 8ನೇ ಕ್ರಾಸ್, ನರಸಿಂಹರಾಜಾ ಕಾಲೋನಿ, ಬೆಂಗಳೂರು-560 019.**
**ದೂರವಾಣಿ : 080-22427677**

# ಅನುಗ್ರಹ ಸಂದೇಶ

ಮಹಾಭಾರತತಾತ್ಪರ್ಯನಿರ್ಣಯ ಶ್ರೀಮದಾಚಾರ್ಯರು ಇತಿಹಾಸಪುರಾಣಗಳ ವಿಮರ್ಶೆಗೆ ನೀಡಿದ ಮಹೋನ್ನತ ಕೃತಿ. ಪ್ರಮಾಣಗಳ ಸ್ವರೂಪ ಮತ್ತು ಪ್ರಮಾಣಗಳಿಂದ ಸಿದ್ಧವಾಗುವ ಹರಿಸರ್ವೋತ್ತಮತ್ವ, ವಾಯುಜೀವೋತ್ತಮತ್ವ ಮೊದಲಾದ ಮಹಾಪ್ರಮೇಯಗಳು ಅಲ್ಲಿ ನವಿರಾಗಿ ನಿರೂಪಿಸಲ್ಪಟ್ಟಿವೆ.

ಶ್ರೀಮದಾಚಾರ್ಯರು, ಯಥಾವತ್ತಾದ ಕಥೆಯ ನಿರೂಪಣೆಯ ನೆಪದಿಂದ ಇಲ್ಲಿ ಅನುಸಂಧೇಯ ತತ್ತ್ವರಹಸ್ಯಗಳನ್ನು ಅನುಗ್ರಹಿಸಿರುವುದು ಈ ಕೃತಿಯ ಹಿರಿಮೆ. ಶ್ರೀಮದಾಚಾರ್ಯರೇ ಹೇಳುವಂತೆ ಈ ಕೃತಿಯ ಅಧ್ಯಯನ ನಾರಾಯಣನ ಪರಮಪ್ರೀತಿಗೆ ಕಾರಣ – 'ನಾರಾಯಣಃ ಪ್ರೀತಿಮುಪೈತಿ ತತೋಽಲಮ್'. ಇಂತಹ ಮನೋಜ್ಞ ಕೃತಿಯನ್ನು, ಸಂಸ್ಕೃತ ಬಾರದ ಜಿಜ್ಞಾಸುಗಳ ಸೌಕರ್ಯಕ್ಕಾಗಿ ಬೆಂಗಳೂರಿನ ಮಾಡಲ್‌ಹೌಸ್ ಬೀದಿಯ ಶ್ರೀ ಗುರುರಾಜ ಅಸೋಸಿಯೇಷನ್ನಿನ ಪದಾಧಿಕಾರಿಗಳು ಶ್ರೀಮನ್ಮಹಾಭಾರತತಾತ್ಪರ್ಯ ನಿರ್ಣಯದ ಪದಚ್ಛೇದ, ಪ್ರತಿಪದಾರ್ಥ, ತಾತ್ಪರ್ಯಗಳ ನಿರೂಪಣೆಯೊಂದಿಗೆ ಕನ್ನಡದ ಅನುವಾದದ ಎರಡನೆಯ ಮುದ್ರಣವನ್ನು ಮಾಡಿಸಿ ಓದುಗರಿಗೆ ಶ್ರೀಮಠವು ನೀಡುತ್ತಿರುವುದು ಸಂತೋಷವನ್ನು ತಂದಿದೆ.

ಶ್ರೀ ರಾಘವೇಂದ್ರತೀರ್ಥರು ಜ್ಞಾನಮಾರ್ಗದಲ್ಲಿ ಸಾಗಿ ವಿದ್ವತ್ ಸಮಾಜಕ್ಕೆ ಉಪಯುಕ್ತವಾದ ಕೃತಿಗಳನ್ನು ರಚಿಸಿದರು. ಶ್ರೀಮಠವು ಶ್ರೀ ರಾಘವೇಂದ್ರ ತೀರ್ಥರಿಗೆ ಇಷ್ಟವಾದ ಅವರು ತೋರಿಸಿದ ಮಾರ್ಗದಲ್ಲಿಯೇ ಸಾಗುತ್ತಿರುವುದು ಸಂತೋಷವಾಗಿದೆ. ಶ್ರೀಮಠದಿಂದ ಹೀಗೆಯೇ ನಿರಂತರವಾಗಿ ಇಂತಹ ಉಪಯುಕ್ತ ಕಾರ್ಯಗಳು ನಡೆಯಲಿ ಎಂದು ಶ್ರೀ ಕೃಷ್ಣನಲ್ಲಿ ಪ್ರಾರ್ಥಿಸುತ್ತೇವೆ.

ಈ ಕೃತಿಗಳ ಉಪಯೋಗವನ್ನು ಎಲ್ಲಾ ಸಜ್ಜನರು ಪಡೆಯುವಂತೆ ಆಗಲಿ ಎಂದು ಅಪೇಕ್ಷಿಸುತ್ತೇವೆ. ಈ ಕೃತಿಯ ಅನುವಾದವನ್ನು ಮಾಡಿದ ಸಕಲ ವಿದ್ವಾಂಸರಿಗೂ ಶ್ರೀಕೃಷ್ಣನು ಅನುಗ್ರಹಿಸಿ ಇನ್ನೂ ಹೆಚ್ಚಿನ ಸೇವೆಯನ್ನು ಸ್ವೀಕರಿಸಲೆಂದು ಹಾರೈಸುತ್ತೇವೆ.

ಇತಿ ನಾರಾಯಣಸ್ಮರಣೆಗಳು

**ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದರು.**

# ಮುನ್ನುಡಿ

ಜಗದ್ಗುರು ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರು ಮುಖ್ಯಪ್ರಾಣನ ಮೂರನೆಯ ಅವತಾರ. ಶ್ರೀ ಹರಿಯ ಆದೇಶವನ್ನು ಮುಡಿಯಲ್ಲಿ ಹೊತ್ತು, ದೇವತೆಗಳ ಬಿನ್ನಹವನ್ನು ಹೃದಯಹಾರವಾಗಿಸಿಕೊಂಡು, ಸುಜನರುದ್ಧಾರಕ್ಕಾಗಿ ಧರೆಗಿಳಿದು ಬಂದವರು. ಜ್ಞಾನದ ಎಲ್ಲ ಶಾಖೆಗಳಿಗೂ ಅಪೂರ್ವ ಹಾಗೂ ವಿಶಿಷ್ಟ ವ್ಯಾಖ್ಯಾನವನ್ನು ಕರುಣಿಸಿರುವುದು ಶ್ರೀಮದಾಚಾರ್ಯರ ಹಿರಿಮೆ. ವೇದ – ಉಪನಿಷತ್ – ಬ್ರಹ್ಮಸೂತ್ರಗಳು – ಇತಿಹಾಸ – ಪುರಾಣ – ತಂತ್ರ – ಧರ್ಮಶಾಸ್ತ್ರ – ವೇದಾಂಗಗಳು ಮತ್ತು ಕಲಾವಿದ್ಯೆಗಳ ಬಗ್ಗೆ ಬೆಳಕು ಚೆಲ್ಲಿದ ಮೊದಲ ಆಚಾರ್ಯರು – ಶ್ರೀಮದಾಚಾರ್ಯರು. ಇತಿಹಾಸ–ಪುರಾಣಗಳಲ್ಲಿ 'ಆವಾಪೋದ್ವಾಪ' ಹೆಚ್ಚಿದೆಯೆಂಬ ಹಿನ್ನೆಲೆಯಲ್ಲಿ ಅದನ್ನು ಮುಟ್ಟಲಂಜಿದವರು ಬಹಳ ಮಂದಿ. ಆದರೆ, ಯಾವ ಆಚಾರ್ಯರ ಪುರುಷರೂ ಮಾಡಲಾಗದ ಮಹಾಭಾರತದ ಪ್ರಮೇಯನಿರ್ಣಯ, ಭಾಗವತದ ಪಾಠಶುದ್ಧಿ – ಅರ್ಥನಿರ್ಣಯದ ಬಗ್ಗೆ ಅಧಿಕೃತ ಕೊಡುಗೆ ಕೊಟ್ಟವರು ಶ್ರೀಮಧ್ವಾಚಾರ್ಯರು.

ದೊರಕಿದ ವೇದಭಾಗ ಅತ್ಯಲ್ಪ. ಕಳೆದುಕೊಂಡದ್ದು ಬಹುಭಾಗ. ವೇದ – ಉಪನಿಷತ್ತುಗಳ ವ್ಯಾಖ್ಯೆ ಬಲು ಕಠಿಣ. ಇದರಂತೆ ಇತಿಹಾಸ–ಪುರಾಣಗಳಲ್ಲಿ ಹೆಜ್ಜೆ–ಹೆಜ್ಜೆಗೆ ವಿರೋಧಗಳು, ಅಸಂಗತಿಗಳು, ಅಸ್ಪಷ್ಟತೆಗಳು ಕಣ್ಣಿಗೆ ರಾಚುತ್ತವೆ. ಇವುಗಳಲ್ಲಿನ ಏಕವಾಕ್ಯತೆ – ಅಪೂರ್ವತೆಯನ್ನು ಆವಿಷ್ಕರಿಸುವುದು ಸರ್ವಜ್ಞರಿಗೆ ಮಾತ್ರವೇ ಸಾಧ್ಯವಾದ ಕಾಯಕ. ಇದನ್ನು ಮಾಡಿಕೊಟ್ಟವರು – ಪೂರ್ಣಪ್ರಜ್ಞರು.

ಇತಿಹಾಸ–ಪುರಾಣಗಳ ಮಾರ್ಗದರ್ಶನದಲ್ಲಿ ವೇದಗಳ ಅಧ್ಯಯನ ನಡೆಸಬೇಕೆಂದು ಪ್ರಾಚೀನರು ಆದೇಶಿಸಿದರು — 'ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್' ಇತಿಹಾಸ–ಪುರಾಣಗಳು ಸಾಮಾನ್ಯ ಕೃತಿಗಳಲ್ಲ, ಸರ್ವಜ್ಞತಮರಾದ ನಾರಾಯಣಾವತಾರಿಗಳಾದ ಶ್ರೀವೇದವ್ಯಾಸರ ಕೃತಿರತ್ನಗಳು. ಇವುಗಳ ಹೃದಯವನ್ನು ಆವಿಷ್ಕರಿಸುವ ಕಾರ್ಯ, ಶ್ರೀವ್ಯಾಸರ ಆದೇಶದಂತೆ ಶ್ರೀಮಧ್ವರಿಂದ ನಡೆದಿದೆ. ಕಲಿಯುಗದಲ್ಲಿ ವೇದಾಧ್ಯಯನ ಯೋಗ್ಯತೆ ಇರುವವರು ವಿರಳ. ಬ್ರಹ್ಮಬಂಧುಗಳೇ ಎಲ್ಲೆಡೆ ಇರುವವರು. ಬ್ರಾಹ್ಮಣರು – ಸ್ತ್ರೀಯರು – ಸಂಸ್ಕಾರಹೀನವಾದ ಸುಜನವರ್ಗ ವಿಶ್ವದಲ್ಲಿ ವ್ಯಾಪಿಸಿದೆ. ಇವರ ಪಾಲಿಗೆ

ಮಹಾಭಾರತವೇ - ವೇದ. ಇದರ ಅಧ್ಯಯನವಿಲ್ಲದೆ ಅರಿವೆಲ್ಲಿ? ಅರಿವಿಲ್ಲದೆ ಮುಕ್ತಿ ಹೇಗೆ? ಈ ಹಿನ್ನಲೆಯಲ್ಲಿ ಮಹಾಭಾರತದ ಮೂಲಕ ವೇದೋಪನಿಷತ್ತುಗಳಲ್ಲಿ ಮುಚ್ಚಿಟ್ಟ ತತ್ತ್ವರಹಸ್ಯಗಳ, ಸೂಕ್ಷ್ಮಪ್ರಮೇಯಗಳ ಆವಿಷ್ಕರಣಕ್ಕಾಗಿ ಆಚಾರ್ಯರು ಕರುಣಿಸಿದ ಮಂಗಲಕೃತಿ - ಮಹಾಭಾರತತಾತ್ಪರ್ಯ ನಿರ್ಣಯ. ಇದು ಸಕಲಶಾಸ್ತ್ರಗಳ ಹೃದಯವನ್ನು ತೆರೆದಿಡಲೆಂದೇ ಮೈದಳೆದ ಸಂಶೋಧನಾತ್ಮಕ ಹಾಗೂ ನಿರ್ಣಯಾತ್ಮಕ ಕೃತಿ. ಇದರ ಅಧ್ಯಯನದಿಂದ ಇಹ-ಪರಗಳಲ್ಲಿ ಮಂಗಲ-ಶಾಂತಿ ನಿಶ್ಚಿತ. ಇದರ ಅಧ್ಯಯನದಿಂದ ಶ್ರೀಹರಿಯ ಒಲುಮೆ ನಿಶ್ಚಿತ - 'ನಾರಾಯಣಃ ಪ್ರೀತಿಮುಪೈತಿ ತತೋಽಲಮ್'.

ಬೆಂಗಳೂರಿನ ಪ್ರತಿಷ್ಠಿತವಾದ ಗುರುರಾಜ ಅಸೋಸಿಯೇಷನ್ ಈ ಕೃತಿಯನ್ನು ಹೊರತರುತ್ತಿರುವುದು. ನಾಡಿನ ಜನತೆಯ ಭಾಗ್ಯ. ಇಂದು ಮಹಾಭಾರತ ತಾತ್ಪರ್ಯನಿರ್ಣಯದ ಆಂತರ್ಯವನ್ನು ಆವಿಷ್ಕರಿಸಲು ಮೈದಳೆದ ಎರಡು ಅನುವಾದಗಳು ಕನ್ನಡದ ಕನ್ನಡಿಯಲ್ಲಿವೆ. ಸಕಲಶಾಸ್ತ್ರ ವಿಶಾರದರೂ ಸಂಶೋಧಕರೂ ಆದ ಪೂಜ್ಯ ಶ್ರೀ ಹಯವದನಪುರಾಣಿಕರು ನಿರ್ಮಾಣ ಮಾಡಿದ ಕೃತಿರತ್ನ ಒಂದಾದರೆ, ವ್ಯಾಸಮಧ್ವ ಸಂಶೋಧನ ಪ್ರತಿಷ್ಠಾನದ ನಿರ್ದೇಶಕರೂ ಪಾಠ-ಪ್ರವಚನ, ಅಪೂರ್ವ ಹಸ್ತಪ್ರತಿಗಳ ಸಂಗ್ರಹ ಪ್ರಕಾಶನದಿಂದ ವಿಖ್ಯಾತರೂ ಆದ ವಿದ್ವನ್ಮಣಿಗಳಾದ ಶ್ರೀ ಪ್ರಭಂಜನಾಚಾರ್ಯರು ನೀಡಿದ ಕೃತಿ ಮತ್ತೊಂದು. ಈ ಎರಡೂ ಕೃತಿಗಳು ವಿದ್ವಾಂಸರ ಹಸಿವು ನೀಗಿಸುವಂತಹ ಅಮೂಲ್ಯ ಕೃತಿಗಳು.

ಶ್ರೀ ಗುರುರಾಜ ಅಸೋಸಿಯೇಷನ್ ಪ್ರಕಾಶನಗೊಳಿಸುತ್ತಿರುವ ಈ ಕೃತಿಯು, ಶ್ರೀಸಾಮಾನ್ಯರಿಗೆ ತತ್ತ್ವಜ್ಞಾನಸುಧೆ ಹರಿಸುವ ಹಿನ್ನೆಲೆಯಿಂದ ಲೋಕಾರ್ಪಣಗೊಂಡಿದೆ.

ಶ್ರೇಷ್ಠವಿದ್ವಾಂಸರಲ್ಲಿ ಮಾನನೀಯರೂ ನಿರಂತರ ಪಾಠಪ್ರವಚನದೀಕ್ಷಿತರೂ ಆದ ಪ್ರೊ. ಡಿ. ಪ್ರಹ್ಲಾದಾಚಾರ್ಯರು ಹಾಗೂ ಸಕಲಶಾಸ್ತ್ರನಿಷ್ಣಾತರು ಸದಾ ಪಾಠಪ್ರವಚನನಿರತರೂ, ವಿದ್ವನ್ಮಾನ್ಯರೂ ಆದ ಪ್ರೊ. ಜಿ. ಗುರುವೆಂಕಟಾಚಾರ್ಯರು (ಪ್ರಸಕ್ತ ಶ್ರೀ ೧೦೦೮ ಶ್ರೀ ಸುವಿದ್ಯೇಂದ್ರ ತೀರ್ಥಶ್ರೀಪಾದರು) ಸಂಸ್ಕೃತಬಾರದ ಓದುಗರಿಗಾಗಿ ಪದಚ್ಛೇದ - ಅನ್ವಯ - ಪ್ರತಿಪದಾರ್ಥ ಹಾಗೂ ಶ್ರೀ ವಾದಿರಾಜ ಗುರುಸಾರ್ವಭೌಮರ ವ್ಯಾಖ್ಯಾನ ವಿಶೇಷಾಂಶಗಳಿಂದ ಅಲಂಕರಿಸಿ ೧, ೨ ಅಧ್ಯಾಯಗಳ ಅನುವಾದ ಮಾಡಿಕೊಟ್ಟಿದ್ದರು. ನನ್ನ ಮಿತ್ರರೂ ಶ್ರೇಷ್ಠ ವಿದ್ವಾಂಸರೂ ಆದ ಶ್ರೀ ರಾಮವಿಠಲಾಚಾರ್ಯರೂ ೩ನೇ ಅಧ್ಯಾಯದ ಅನುವಾದ ಮಾಡಿಕೊಟ್ಟಿದ್ದರು.

೩ನೇ ಅಧ್ಯಾಯಗಳನ್ನೊಳಗೊಂಡ ಮೊದಲ ಸಂಪುಟ ೧೯೯೦ರಲ್ಲಿ ಮುದ್ರಣಗೊಂಡಿತ್ತು. ಇದೀಗ ೧೬ ಅಧ್ಯಾಯಗಳನ್ನು ಒಳಗೊಂಡ ೨ ಸಂಪುಟಗಳು ಪ್ರತಿ ಪದಾರ್ಥ ವಿವರಣೆಯೊಂದಿಗೆ ಮುದ್ರಿತಗೊಳ್ಳುತ್ತಿರುವುದು ತುಂಬ ಸಂತಸದ ಸಂಗತಿ.

ಪ್ರಸಕ್ತ, ಗುರುರಾಜ ಅಸೋಸಿಯೇಷನ್ ಪದಾಧಿಕಾರಿಗಳೆಲ್ಲರೂ ಈ ವಾಙ್ಮಯ ಸೇವೆಯಿಂದ ಅಭಿನಂದನಾರ್ಹರಾಗಿದ್ದಾರೆ. ಇವರಿಗೆ ಉತ್ತಮ ಮಾರ್ಗದರ್ಶನ ನೀಡಿ, ಉತ್ಸಾಹ ತುಂಬಿ ಈ ಕೃತಿಯ ಪ್ರಕಾಶನಕ್ಕೆ ನಿರಂತರ ಶ್ರಮಿಸಿದ ವಿದ್ವಾನ್ ಬ್ರಹ್ಮಣ್ಯಾಚಾರ್ಯರೂ ಗಣನೀಯ ಸೇವೆ ಸಲ್ಲಿಸಿದ್ದಾರೆ. ಈ ಎಲ್ಲ ಮಹನೀಯರಿಗೆ ಶ್ರೀಹರಿವಾಯುಗಳು ಮತ್ತು ಬೃಂದಾವನದಲ್ಲಿ ಸನ್ನಿಹಿತರಾಗಿರುವ ಕರುಣಾಸಾಗರರಾದ ಶ್ರೀಗುರುರಾಜರು ಎಲ್ಲ ಬಗೆಯ ಭಾಗ್ಯಗಳನ್ನು ಕರುಣಿಸಿ ಹರಸಲೆಂದು ಭಕ್ತಿಯಿಂದ ಬಿನ್ನವಿಸುವೆ.

ಶ್ರೀ ಗುರುರಾಜ ಅಸೋಸಿಯೇಷನ್‌ನಂತಹ ಮಾಧ್ವ ಸಂಸ್ಥೆಗಳು, ಭಕ್ತರು ಶ್ರದ್ಧೆಯಿಂದ ನೀಡುವ ದೇಣಿಗೆಯನ್ನು ಕೇವಲ ಕಟ್ಟಡದ ವಿಸ್ತರಣೆ, ಬೆಳ್ಳಿ-ಬಂಗಾರಗಳ ಕವಚನಿರ್ಮಾಣಕ್ಕೆ ಮಾತ್ರವೇ ವಿನಿಯೋಗಿಸದೆಯೇ, ವಿದ್ವಾಂಸರ ಪೋಷಣೆ-ಗ್ರಂಥಪ್ರಕಾಶನ - ವಿದ್ಯಾರ್ಥಿವೇತನ ಇತ್ಯಾದಿಗಳಿಗೆ ಬಳಸುತ್ತಿರುವುದು ಹೆಮ್ಮೆ-ಅಭಿಮಾನ ತರುವ ಸಂಗತಿ. ಎಲ್ಲದಕ್ಕಿಂತ ಹೆಚ್ಚಾಗಿ ಶ್ರೀ ಗುರುರಾಜರ ಅಂತರಂಗದ ಅನುಗ್ರಹಕ್ಕೆ ಕಾರಣವಾದ ಭಾಗ್ಯೋದಯವಿದು. ಎಲ್ಲ ಸಂಘಸಂಸ್ಥೆಗಳು ಹಾಗೂ ಮಠಗಳು ತಮ್ಮ ಸಂಪನ್ಮೂಲವನ್ನು ಗ್ರಂಥಪ್ರಕಾಶನ - ಗ್ರಂಥಾನುವಾದ ವಿದ್ವಾಂಸರ-ವೈದಿಕರ ಸಂಪೋಷಣೆಗೆ ಬಳಸಿದಲ್ಲಿ ಧರ್ಮದರ್ಶಿಗಳಾದ ಸಾರ್ಥಕಸೇವೆ ಸಲ್ಲಿಸಿದಂತಾಗುವುದು. ಇಂತಹ ಭಾವ ಶುದ್ಧಿಯನ್ನು ಶ್ರೀಗುರುರಾಜರು ನೀಡಿ ಈ ಪದಾಧಿಕಾರಿಗಳಿಂದ ಇನ್ನೂ ಹೆಚ್ಚಿನ ಶಾಸ್ತ್ರಸೇವೆ ಹಾಗೂ ಶ್ರೀಗುರುರಾಜರ ಸೇವೆ ಸ್ವೀಕರಿಸುವಂತಾಗಲೆಂದು ಶ್ರೀಗುರುರಾಜರಲ್ಲಿ ಭಕ್ತಿಯಿಂದ ಬಿನ್ನವಿಸುವೆ.

ಇತಿ

ಸುಜನರ ಅನುಗ್ರಹಾಕಾಂಕ್ಷಿ

ಎ. ವಿ. ನಾಗಸಂಪಿಗೆ

# ಪ್ರಕಾಶಕರ ನುಡಿ

ಜಗದ್ಗುರುಗಳಾದ ಶ್ರೀಮನ್ ಮಧ್ವಾಚಾರ್ಯರು ಶ್ರೀ ಭಗವಾನ್ ವೇದವ್ಯಾಸರಿಂದ ರಚಿತವಾದ ಶ್ರೀಮನ್ ಮಹಾಭಾರತದ ಮೇಲೆ ಬೆಳಕು ಚೆಲ್ಲುವ ವಿಸ್ತಾರವಾದ ನಿರ್ಣಯ ಗ್ರಂಥವನ್ನು ರಚಿಸಿದ್ದಾರೆ. ಅದೇ "ಶ್ರೀಮನ್ ಮಹಾಭಾರತ ತಾತ್ಪರ್ಯ ನಿರ್ಣಯ". ಈ ಗ್ರಂಥವು ೫೦೦೦ ಶ್ಲೋಕಗಳಿಂದ ಕೂಡಿದ್ದು ಅದು ಕೇವಲ ಮಹಾಭಾರತದ ಕಥೆ ನಿರ್ಣಯವೇ ಅಲ್ಲದೆ ಉಳಿದ ಪುರಾಣಗಳ ಮೇಲೆಯೂ ಕೂಡ ಬೆಳಕು ಚೆಲ್ಲುವ ಸರ್ವ ಶಾಸ್ತ್ರಾರ್ಥ ಸಂಗ್ರಹ ರೂಪವೇ ಆಗಿದೆ. ಇಂತಹ ಗ್ರಂಥವನ್ನು ಪರಮ ಕರುಣಾಳುಗಳಿಂದ ಶ್ರೀ ರಾಘವೇಂದ್ರ ಗುರುಸಾರ್ವಭೌಮರ ಕೃಪಾಬಲದಿಂದ ನಮ್ಮ ಶ್ರೀ ಗುರುರಾಜಾ ಅಸೋಸಿಯೇಷನ್ (ರಿ.)ನ ಆಡಳಿತ ಮಂಡಳಿಯವರು ಅನೇಕ ವರ್ಷಗಳಿಂದ ಶ್ರೀಮನ್ ಮಧ್ವಾಚಾರ್ಯ ಈ ತಾತ್ಪರ್ಯ ನಿರ್ಣಯ ಗ್ರಂಥವನ್ನು ಶ್ರೀಗುರುರಾಜರ ಆರಾಧನಾ ಮಹೋತ್ಸವದ ಕಾಲದಲ್ಲಿ ಪ್ರಕಾಶನ ಮಾಡುತ್ತಿರುವುದು ಎಲ್ಲರಿಗೂ ತಿಳಿದ ಸಂಗತಿಯಾಗಿದೆ. ೩೨ ಅಧ್ಯಾಯಗಳ ಸಮಗ್ರ ಗ್ರಂಥವನ್ನು ಪ್ರಕಾಶನ ಮಾಡುವ ಉದ್ದೇಶ ನಮ್ಮದಾಗಿದೆ. ಈಗಾಗಲೇ ೧೧ ಅಧ್ಯಾಯಗಳ ಪ್ರಕಾಶನವಾಗಿದ್ದರೂ ಅವು ಒಂದೊಂದೇ ಬಿಡಿ ಬಿಡಿಯಾಗಿ ಪ್ರಕಾಶನಗೊಂಡಿದೆ ಹಾಗೂ ಅನುಪಲಬ್ಧವಾದ ಕಾರಣ ಈ ೩೪೨ನೇ ಶ್ರೀ ಗುರುರಾಜರ ಆರಾಧನಾ ಮಹೋತ್ಸದ ಸುಸಂದರ್ಭದಲ್ಲಿ ಒಟ್ಟು೧೬ ಅಧ್ಯಾಯಗಳನ್ನು ೮+೨ ರಂತೆ ಪ್ರಕಾಶನಗೊಳಿಸಬೇಕೆಂದು ಸಂಕಲ್ಪಿಸಿ ಈ ಗ್ರಂಥ ಪ್ರಕಾಶನದ ಮೇಲ್ವಿಚಾರಣೆಯನ್ನು ಪೂರ್ಣಪ್ರಜ್ಞ ಸಂಶೋಧನ ಮಂದಿರದ ನಿರ್ದೇಶಕರಾದ ಡಾ|| ಎ.ವಿ. ನಾಗಸಂಪಿಗೆ ಯವರಿಗೆ ವಹಿಸಿಕೊಟ್ಟಾಗ ಅವರು ತಮ್ಮ ಬಿಡುವಿಲ್ಲದ ಕಾರ್ಯದ ನಡುವೆಯೂ ಕೂಡ ಬಹಳ ಉತ್ತಮವಾಗಿ ತಮ್ಮ ಕಾರ್ಯವನ್ನು ನಿರ್ವಹಿಸಿ ಈ ಗ್ರಂಥ ಹೊರಬರಲು ಸಹಕರಿಸಿರುತ್ತಾರೆ. ಈ ಗ್ರಂಥದ ಮುನ್ನುಡಿಯನ್ನು ನೀಡಿರುತ್ತಾರೆ. ಅವರಿಗೆ ನಮ್ಮ ಸಂಸ್ಥೆಯು ಚಿರಋಣಿಯಾಗಿದೆ. ಈ ಸಂದರ್ಭದಲ್ಲಿ ಕರಡುಪ್ರತಿಯನ್ನು ತಿದ್ದಿ ತಮ್ಮ ಅಮೂಲ್ಯ ಸಲಹೆಗಳನ್ನು ಕೊಟ್ಟ ವಿದ್ವಾನ್ ಸಿ.ಹೆಚ್. ಬದರೀ ಆಚಾರ್ಯರಿಗೂ ಸಂಸ್ಥೆ ಚಿರಋಣಿಯಾಗಿದೆ. ಅದೇ ರೀತಿ ಪ್ರತಿ ಅಧ್ಯಾಯವನ್ನು ಬೇರೆ ಬೇರೆ ವಿದ್ವಾಂಸರು ಕನ್ನಡೀಕರಿಸಿರುತ್ತಾರೆ. ಅವರೆಲ್ಲರಿಗೂ ಸಂಸ್ಥೆಯು ಚಿರಋಣಿಯಾಗಿದೆ. ಈ ಗ್ರಂಥಕ್ಕೆ ತಮ್ಮ ಆಶೀರ್ವಚನದ ನುಡಿಗಳನ್ನು ಇತ್ತು ಹಾರೈಸಿ ಪ್ರೋತ್ಸಾಹಿಸಿದ ಪರಮ ಪೂಜ್ಯ ಪೇಜಾವರ ಮಠದ ಹಿರಿಯ ಶ್ರೀಪಾದಂಗಳವರಿಗೂ ನಮ್ಮ ಅನಂತಾನಂತ ಶಿರಸಾಷ್ಟಾಂಗ ನಮಸ್ಕಾರಗಳು.

ಮುದ್ರಣ ಕಾರ್ಯದಲ್ಲಿ ನಮ್ಮೊಂದಿಗೆ ಸದಾ ಇದ್ದು ಸುಂದರವಾಗಿ ಮುದ್ರಿಸಿ ಸಕಾಲದಲ್ಲಿ ಕೊಟ್ಟ ವಾಗರ್ಥ ಮುದ್ರಣಾಲಯದವರಿಗೂ ನಮ್ಮ ಅಭಿನಂದನೆಗಳು.

**ಗುರುರಾಜ ಅಸೋಸಿಯೇಷನ್**

ಮಾಡೆಲ್ ಹೌಸ್ ಬೀದಿ, ಬೆಂಗಳೂರು.

# ವಿಷಯಾನುಕ್ರಮಣಿಕೆ

**ಅಧ್ಯಾಯ - 10**

## ಅಧ್ಯಾಯ - 11

## ಅಧ್ಯಾಯ - 12

## ಅಧ್ಯಾಯ - 13

## ಅಧ್ಯಾಯ - 14



## ಅಧ್ಯಾಯ - 15

## ಅಧ್ಯಾಯ - 16

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಃ

# ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಃ

## ಅಧ್ಯಾಯ - 9

### ಲಕ್ಷ್ಮಣನಿಂದ ಯುವರಾಜಪದವಿನಿರಾಕರಣೆ

ಓಂ ॥ ಅಥಾಪ್ತರಾಜ್ಯೋ ಭಗವಾನ್ ಸ ಲಕ್ಷ್ಮಣಂ
ಜಗಾದ ರಾಜಾ ತರುಣೋ ಭವಾಶು ।
ಇತೀರಿತಸ್ತ್ವಾಹ ಸ ಲಕ್ಷ್ಮಣೋ ಗುರುಂ
ಭವತ್ಪದಾಬ್ಜಾನ್ನ ಪರಂ ವೃಣೋಮ್ಯಹಮ್ ॥ ೧ ॥

**ಪದಚ್ಛೇದ :** ಅಥ ಆಪ್ತರಾಜ್ಯಃ ಭಗವಾನ್ ಸಃ ಲಕ್ಷ್ಮಣಂ ಜಗಾದ ರಾಜಾ ತರುಣಃ ಭವ ಆಶು । ಇತಿ ಈರಿತಃ ತು ಆಹ ಸಃ ಲಕ್ಷ್ಮಣಃ ಗುರುಂ ಭವತ್ಪದಾಬ್ಜಾತ್ ನ ಪರಂ ವೃಣೋಮಿ ಅಹಮ್ ॥

**ಅರ್ಥ :-** **ಅಥ** ಎಲ್ಲಾ ಭಕ್ತಜನರನ್ನೂ ಅವರ ಯೋಗ್ಯತಾನುಸಾರವಾಗಿ ವಸ್ತ್ರಭೂಷಣಾದಿಗಳಿಂದ ಸಂತೋಷಗೊಳಿಸಿದ ನಂತರ **ಆಪ್ತರಾಜ್ಯಃ** ಸಾಮ್ರಾಜ್ಯವನ್ನು ಹೊಂದಿದ **ಭಗವಾನ್** ಷಡ್ಗುಣೈಶ್ವರ್ಯಸಂಪನ್ನನಾದ **ಸಃ** ಶ್ರೀರಾಮಚಂದ್ರನು **ಲಕ್ಷ್ಮಣಂ** ಲಕ್ಷ್ಮಣನನ್ನು **ತರುಣಃ ರಾಜಾ** ಯುವರಾಜನು **ಆಶು** ಕೂಡಲೇ **ಭವ** ಆಗು ಎಂದು **ಜಗಾದ** ಹೇಳಿದನು. **ಇತಿ** ಈ ರೀತಿಯಾಗಿ **ಈರಿತಃ** ಹೇಳಲ್ಪಟ್ಟ **ಸಃ ಲಕ್ಷ್ಮಣಸ್ತು** ಆ ಲಕ್ಷ್ಮಣನಾದರೂ **ಭಗವತ್ಪದಾಬ್ಜಾತ್** ನಿನ್ನ ಪಾದಕಮಲದ ಹೊರತು **ಪರಂ** ಇನ್ನೊಂದನ್ನು **ಅಹಂ** ನಾನು **ನ ವೃಣೋಮಿ** ಸ್ವೀಕರಿಸುವುದಿಲ್ಲ **ಇತಿ** ಎಂದು **ಗುರುಂ** ಅಣ್ಣನಾದ ಶ್ರೀರಾಮಚಂದ್ರನನ್ನು ಕುರಿತು **ಆಹ** ಹೇಳಿದನು.

**ತಾತ್ಪರ್ಯ :-** ಎಲ್ಲಾ ಆಶ್ರಿತಜನರನ್ನೂ ಅವರ ಅರ್ಹತಾನುಸಾರವಾಗಿ ವಸನಾಲಂಕಾರಾದಿಗಳಿಂದ ತೃಪ್ತಿ ಪಡಿಸಿದ ನಂತರ ಲಕ್ಷ್ಮಣನಿಗೆ ಹೇಳಿದನು: ''ನೀನು ಯುವರಾಜಪದವಿಯನ್ನು ಸ್ವೀಕರಿಸು'' ಈ ರೀತಿಯಾಗಿ ಆಜ್ಞಾಪಿಸಿದ ಅಣ್ಣನಾದ ಶ್ರೀರಾಮಚಂದ್ರನಿಗೆ ಲಕ್ಷ್ಮಣನು ಹೇಳಿದನು: ''ನಿನ್ನ ಪಾದ ಕಮಲಗಳ ಸೇವೆಯನ್ನು ಹೊರತು ನಾನು ಏನನ್ನೂ ಬಯಸುವುದಿಲ್ಲ''

ನ ಮಾಂ ಭವತ್ಪಾದನಿಷೇವಣೈಕ
ಸ್ಪೃಹಂ ತದನ್ಯತ್ರ ನಿಯೋಕ್ತುಮರ್ಹಸಿ ।
ನ ಹೀದೃಶಃ ಕಶ್ಚಿದನುಗ್ರಹಃ ಕ್ವಚಿತ್
ತದೇವ ಮೇ ದೇಹಿ ತತಃ ಸದೈವ ॥ ೨ ॥

ಪದಚ್ಛೇದ : ನ ಮಾಂ ಭವತ್ಪಾದನಿಷೇವಣೈಕಸ್ಪೃಹಂ ತತ್ ಅನ್ಯತ್ರ ನಿಯೋಕ್ತುಮ್ ಅರ್ಹಸಿ । ನ ಹಿ ಈದೃಶಃ ಕಶ್ಚಿದ್ ಅನುಗ್ರಹಃ ಕ್ವಚಿತ್ ತತ್ ಏವ ಮೇ ದೇಹಿ ತತಃ ಸದಾ ಏವ ॥

**ಅರ್ಥ** :- **ಭಗವತ್ಪಾದನಿಷೇವಣೈಕಸ್ಪೃಹಂ** ನಿನ್ನ ಪಾದಗಳ ಸೇವೆಯೊಂದನ್ನೇ ಬಯಸುವ **ಮಾಂ** ನನ್ನನ್ನು **ತದನ್ಯತ್ರ** ಬೇರೆ ಕಾರ್ಯದಲ್ಲಿ **ನಿಯೋಕ್ತುಂ** ನಿಯೋಜಿಸಲು (ಆದೇಶಿಸಲು) **ನಾರ್ಹಸಿ** ಯೋಗ್ಯನಲ್ಲ **ಹಿ** ಏಕೆಂದರೆ **ಈದೃಶಃ** ನಿನ್ನ ಪಾದಸೇವೆಗೆ ಸಮನಾದ **ಅನುಗ್ರಹಃ** ಅನುಗ್ರಹವು **ಕಶ್ಚಿತ್** ಯಾವುದೂ **ಕ್ವಚಿತ್** ಎಲ್ಲೂ ಕೂಡ **ನ** ಇಲ್ಲವಷ್ಟೆ **ತತಃ** ಆದ್ದರಿಂದ **ತದೇವ** ನಿನ್ನ ಪಾದಸೇವೆಯನ್ನೇ **ಮೇ** ನನಗೆ **ಸದೈವ** ಯಾವಾಗಲೂ **ದೇಹಿ** ಕೊಡು.

**ತಾತ್ಪರ್ಯ** :- ನಿನ್ನ ಪಾದಗಳನ್ನು ಸೇವಿಸಬೇಕೆಂಬುದೇ ನನ್ನ ಪರಮ ಮುಖ್ಯವಾದ ಅಭಿಲಾಷೆ. ನನ್ನನ್ನು ನೀನು ಬೇರೆ ಕಾರ್ಯದಲ್ಲಿ ತೊಡಗಿಸಬೇಡ. ಏಕೆಂದರೆ, ಇಂತಹ ಪಾದಸೇವೆಗೆ ಸಮನಾದ ಅನುಗ್ರಹ ಬೇರೆ ಯಾವುದೂ ಎಲ್ಲಿಯೂ ಇಲ್ಲ. ಆದ್ದರಿಂದ ನಿನ್ನ ಪಾದಸೇವೆಯನ್ನೇ ನನಗೆ ನಿರಂತರವೂ ನೀಡು.

### ಭರತನಿಗೆ ಯುವರಾಜಪದವಿ

ಇತೀರಿತಸ್ತಸ್ಯ ತದೇವ ದತ್ವಾ
ದೃಢಂ ಸಮಾಶ್ಲಿಷ್ಯ ಸ ರಾಘವಃ ಪ್ರಭುಃ ।
ಸ ಯೌವರಾಜ್ಯೇ ಭರತಂ ನಿಧಾಯ
ಜುಗೋಪ ಲೋಕಾನಖಿಲಾನ್ ಸಧರ್ಮಕಾನ್ ॥ ೩ ॥

ಪದಚ್ಛೇದ : ಇತಿ ಈರಿತಃ ತಸ್ಯ ತತ್ ಏವ ದತ್ವಾ ದೃಢಂ ಸಮಾಶ್ಲಿಷ್ಯ ಸಃ ರಾಘವಃ ಪ್ರಭುಃ । ಸಃ ಯೌವರಾಜ್ಯೇ ಭರತಂ ನಿಧಾಯ ಜುಗೋಪ ಲೋಕಾನ್ ಅಖಿಲಾನ್ ಸಧರ್ಮಕಾನ್ ॥

**ಅರ್ಥ** :- **ಇತಿ** ಈ ರೀತಿಯಾಗಿ **ಈರಿತಃ** ಹೇಳಲ್ಪಟ್ಟ **ಪ್ರಭುಃ** ಸಮರ್ಥನಾದ **ಸಃ** ಆ **ರಾಘವಃ** ರಾಮಚಂದ್ರನು **ತಸ್ಯ** ಆ ಲಕ್ಷ್ಮಣನಿಗೆ **ತದೇವ** ತನ್ನ ಪಾದಸೇವೆಯನ್ನೇ **ಚ** ಮತ್ತು **ದತ್ವಾ** ಕೊಟ್ಟು **ದೃಢಂ** ಗಾಢವಾಗಿ **ಸಮಾಶ್ಲಿಷ್ಯ** ಆಲಂಗಿಸಿ **ಸಃ** ರಾಮಚಂದ್ರನು **ಯೌವರಾಜ್ಯೇ** ಯುವರಾಜ ಪದವಿಯಲ್ಲಿ **ಭರತಂ** ಭರತನನ್ನು **ನಿಧಾಯ** ಸ್ಥಾಪಿಸಿ **ಸಧರ್ಮಕಾನ್** ಧರ್ಮಗಳಿಂದ ಕೂಡಿದನು **ಲೋಕಾನ್** ಜಗತ್ತನ್ನು **ಜುಗೋಪ** ರಕ್ಷಿಸಿದನು.

**ತಾತ್ಪರ್ಯ** :- ತಮ್ಮನಾದ ಲಕ್ಷ್ಮಣನು ಹೀಗೆ ಹೇಳಿದಾಗ ಪ್ರಭು ಶ್ರೀರಾಮ ಚಂದ್ರನು ಅವನಿಗೆ ಪಾದಸೇವಾವಕಾಶವೆಂಬ ವಿಶೇಷವಾದ ಅನುಗ್ರಹವನ್ನೇ ನೀಡಿ ಗಾಢವಾಗಿ ಆಲಿಂಗಿಸಿ, ಭರತನನ್ನು ಯುವರಾಜ ಸ್ಥಾನದಲ್ಲಿ ಅವನನ್ನು ಕೂಡಿಸಿ, ವರ್ಣಾಶ್ರಮಧರ್ಮಾನುಷ್ಠಾನ ನಿರತರಾದ ಸಕಲ ಪ್ರಜೆಗಳನ್ನು ರಕ್ಷಿಸಿದನು.

### ರಾಮರಾಜ್ಯ

**ಪ್ರಶಾಸತೀಶೇ ಪೃಥಿವೀ ಬಭೂವ**
**ವಿರಿಂಚಲೋಕಸ್ಯ ಸಮಾ ಗುಣೋನ್ನತೌ ।**
**ಜನೋಽಖಿಲೋ ವಿಷ್ಣುಪರೋ ಬಭೂವ**
**ನ ಧರ್ಮಹಾನಿಶ್ಚ ಬಭೂವ ಕಸ್ಯಚಿತ್ ॥ ೪ ॥**

ಪದಚ್ಛೇದ : ಪ್ರಶಾಸತಿ ಈಶೇ ಪೃಥಿವೀ ಬಭೂವ ವಿರಿಂಚಲೋಕಸ್ಯ ಸಮಾ ಗುಣೋನ್ನತೌ । ಜನಃ ಅಖಿಲಃ ವಿಷ್ಣುಪರಃ ಬಭೂವ ನ ಧರ್ಮಹಾನಿಃ ಚ ಬಭೂವ ಕಸ್ಯಚಿತ್ ॥

**ಅರ್ಥ** :- **ಈಶೇ** ಪ್ರಭು ಶ್ರೀರಾಮಚಂದ್ರನು **ಪ್ರಶಾಸತಿ** ಸತಿ ಪೃಥಿವಿಯನ್ನು ಪಾಲಿಸುತ್ತಿರಲು **ಪೃಥಿವೀ** ಭೂಲೋಕವು **ಗುಣೋನ್ನತೌ** ಗುಣದ ಹಿರಿಮೆಯ ವಿಷಯದಲ್ಲಿ **ವಿರಿಂಚಲೋಕಸ್ಯ** ಬ್ರಹ್ಮಲೋಕಕ್ಕೆ **ಸಮಾ** ಸದೃಶವು **ಬಭೂವ** ಆಯಿತು. **ಅಖಿಲಃ** ಎಲ್ಲ **ಜನಃ** ಜನರು **ವಿಷ್ಣುಪರಃ** ವಿಷ್ಣುವೇ ಸರ್ವೋತ್ತಮನೆಂದು ತಿಳಿದವರಾಗಿ **ಬಭೂವ** ಆದರು. **ಕಸ್ಯಚಿತ್** ಯಾರಿಗೂ **ಧರ್ಮಹಾನಿಃ** ಧರ್ಮಲೋಪವು **ನ ಬಭೂವ** ಆಗಲಿಲ್ಲ.

**ತಾತ್ಪರ್ಯ** :- ಪ್ರಭು ಶ್ರೀರಾಮಚಂದ್ರನು ರಾಜ್ಯವನ್ನು ಆಳುತ್ತಿರಲು, ಭೂಲೋಕವು ಧರ್ಮಸಮೃದ್ಧಿಗಳಿಂದ ಪೂರ್ಣವಾಗಿದ್ದು ಹಿರಿಮೆಯಲ್ಲಿ ಬ್ರಹ್ಮ

ಲೋಕಕ್ಕೆ ಸಮುವೆನ್ನಿಸಿತು. ಎಲ್ಲಾ ಪ್ರಜೆಗಳೂ ವಿಷ್ಣುಸರ್ವೋತ್ತಮತ್ವ ಜ್ಞಾನವನ್ನು ಪಡೆದು ವಿಷ್ಣುಪರರಾದರು.ಯಾರೂ ಶಾಸ್ತ್ರದಲ್ಲಿ ನಿರೂಪಿಸಿದ ಧರ್ಮವನ್ನು ಬಿಡಲಿಲ್ಲ.

**ಗುಣೈಶ್ಚ ಸರ್ವೈರುದಿತಾಶ್ಚ ಸರ್ವೇ**
**ಯಥಾ ಯಥಾ ಯೋಗ್ಯತಯೋಚ್ಚನೀಚಾಃ ।**
**ಸಮಸ್ತರೋಗಾದಿಭಿರುಜ್ಝಿತಾಶ್ಚ**
**ಸರ್ವೇ ಸಹಸ್ರಾಯುಷ ಊರ್ಜಿತಾ ಧನೈಃ ॥ ೫ ॥**

**ಪದಚ್ಛೇದ : ಗುಣೈಃ ಚ ಸರ್ವೈಃ ಉದಿತಾಃ ಚ ಸರ್ವೇ ಯಥಾ ಯಥಾ ಯೋಗ್ಯತಯಾ ಉಚ್ಚನೀಚಾಃ । ಸಮಸ್ತರೋಗಾದಿಭಿಃ ಉಜ್ಝಿತಾಃ ಚ ಸರ್ವೇ ಸಹಸ್ರಾಯುಷಃ ಊರ್ಜಿತಾಃ ಧನೈಃ ॥**

**ಅರ್ಥ :- ಸರ್ವೇ ಚ** ಎಲ್ಲ ಜನರೂ ಕೂಡ **ಯಥಾ ಯಥಾ ಯೋಗ್ಯತಯಾ** ತಮ್ಮ ಸ್ವರೂಪಯೋಗ್ಯತಾನುಸಾರವಾಗಿ **ಉಚ್ಚನೀಚಾಃ** ಉತ್ತಮಾಧಮರಾಗಿದ್ದರು. **ಸರ್ವೈಃ ಗುಣೈಶ್ಚ** ಎಲ್ಲ ಗುಣಗಳಿಂದಲೂ **ಉದಿತಾಃ** ಕೂಡಿದವರಾಗಿದ್ದರು. **ಸರ್ವೇ** ಎಲ್ಲರೂ **ಸಮಸ್ತರೋಗಾದಿಭಿಃ** ಸಕಲ ರೋಗಾದಿಗಳಿಂದ **ಉಜ್ಝಿತಾಃ** ರಹಿತರು. **ಸರ್ವೇ** ಎಲ್ಲರೂ **ಸಹಸ್ರಾಯುಷಃ** ಸಾವಿರಾರು ವರ್ಷ ಆಯುಷ್ಯವುಳ್ಳವರು. **ಚ** ಮತ್ತು **ಧನೈಃ** ಸಂಪತ್ತಿನಿಂದಲೂ **ಊರ್ಜಿತಾಃ** ಪೂರ್ಣರಾಗಿದ್ದರು.

**ತಾತ್ಪರ್ಯ :-** ಎಲ್ಲಾ ಪ್ರಜೆಗಳೂ ಸಕಲ ಸದ್ಗುಣಗಳಿಂದ ಕೂಡಿದ್ದು ತಮ್ಮ ಸ್ವರೂಪಯೋಗ್ಯತೆಗೆ ಅನುಗುಣವಾಗಿ ತಾರತಮ್ಯ ಹೊಂದಿದ್ದರು. ಎಲ್ಲಾ ಬಗೆಯ ಮಾನಸಿಕ, ದೈಹಿಕ ರೋಗಗಳಿಂದ ದೂರರಾಗಿದ್ದರು. ಎಲ್ಲ ವಿಧದ ಸಂಪತ್ತಿನಿಂದ ಸಹಿತರಾಗಿ ಸಾವಿರಾರು ವರ್ಷಗಳ ಸಾರ್ಥಕ ಬಾಳನ್ನು ಬಾಳಿದರು.

**ಸರ್ವೇ ನರಾ ನಿತ್ಯಬಲೋಪಪನ್ನಾ**
**ಯಥೇಷ್ಟಸಿದ್ಧ್ಯಾ ಚ ಸದೋಪಪನ್ನಾಃ ।**
**ಸಮಸ್ತದೋಷೈಶ್ಚ ಸದಾ ವಿಹೀನಾಃ**
**ಸರ್ವೇ ಸುರೂಪಾಶ್ಚ ಸದಾ ಮಹೋತ್ಸವಾಃ ॥ ೬ ॥**

ಪದಚ್ಛೇದ : ಸರ್ವೇ ನರಾಃ ನಿತ್ಯಬಲೋಪಪನ್ನಾಃ ಯಥೇಷ್ಟಸಿದ್ಧ್ಯಾ ಚ ಸದಾ ಉಪಪನ್ನಾಃ । ಸಮಸ್ತದೋಷೈಃ ಚ ಸದಾ ವಿಹೀನಾಃ ಸರ್ವೇ ಸುರೂಪಾಃ ಚ ಸದಾ ಮಹೋತ್ಸವಾಃ ॥

**ಅರ್ಥ** :- **ಸರ್ವೇ** ಎಲ್ಲ **ನರಾಃ** ಪ್ರಜೆಗಳೂ **ನಿತ್ಯಬಲೋಪಪನ್ನಾಃ** ಸದಾ ಸಾಮರ್ಥ್ಯದಿಂದ ಕೂಡಿದವರೂ **ಯಥೇಷ್ಟಸಿದ್ಧ್ಯಾ ಚ** ಬಯಸಿದ ಎಲ್ಲವನ್ನೂ **ಸದಾ** ಯಾವಾಗಲೂ **ಉಪಪನ್ನಾಃ** ಹೊಂದಿದವರೂ **ಸದಾ** ಯಾವಾಗಲೂ **ಸಮಸ್ತದೋಷೈಃ** ಎಲ್ಲ ದೋಷಗಳಿಂದಲೂ **ವಿಹೀನಾಶ್ಚ** ರಹಿತರೂ **ಸರ್ವೇ** ಎಲ್ಲರೂ **ಸರೂಪಾಶ್ಚ** ಸುಂದರರೂಪವುಳ್ಳವರೂ **ಸದಾ** ಯಾವಾಗಲೂ **ಮಹೋತ್ಸವಾಃ** ಬಹಳ ಆನಂದವುಳ್ಳವರೂ **ಬಭೂವುಃ** ಆಗಿದ್ದರು.

**ತಾತ್ಪರ್ಯ** :- ಎಲ್ಲ ಪ್ರಜೆಗಳೂ ಮುಪ್ಪು ಇಲ್ಲದವರಾಗಿ ಜೀವನ ದುದ್ದಕ್ಕೂ ಶಕ್ತಿಶಾಲಿಗಳಾಗಿದ್ದರು. ತಾವು ಅಪೇಕ್ಷಿಸಿದ್ದನ್ನೆಲ್ಲವನ್ನೂ ಸದಾ ಪಡೆಯುತ್ತಿದ್ದರು. ರಾಗದ್ವೇಷಾದಿದೋಷಗಳಿಂದ ದೂರರಾಗಿದ್ದರು. ಎಲ್ಲರೂ ಸುಂದರರಾಗಿ ಸುಖಸಂಭ್ರಮಗಳಿಂದ ತುಂಬಿಹೋಗಿದ್ದರು. ಯಾವಾಗಲೂ ಪರಮಾನಂದವುಳ್ಳವರಾಗಿದ್ದರು.

**ಸರ್ವೇ ಮನೋವಾಕ್ತನುಭಿಃ ಸದೈವ**
**ವಿಷ್ಣುಂ ಯಜಂತೇ ನ ತು ಕಂಚಿದನ್ಯಮ್ ।**
**ಸಮಸ್ತರತ್ನೋದ್ಭರಿತಾ ಚ ಪೃಥ್ವೀ**
**ಯಥೇಷ್ಟಧಾನ್ಯಾ ಬಹುದುಗ್ಧಗೋಮತೀ ॥ ೭ ॥**

ಪದಚ್ಛೇದ : ಸರ್ವೇ ಮನೋವಾಕ್ತನುಭಿಃ ಸದಾ ಏವ ವಿಷ್ಣುಂ ಯಜಂತೇ ನ ತು ಕಂಚಿತ್ ಅನ್ಯಮ್ । ಸಮಸ್ತರತ್ನೋದ್ಭರಿತಾ ಚ ಪೃಥ್ವೀ ಯಥೇಷ್ಟಧಾನ್ಯಾ ಬಹುದುಗ್ಧಗೋಮತೀ ॥

**ಅರ್ಥ** :- **ಸರ್ವೇ** ಎಲ್ಲರೂ **ಮನೋವಾಕ್ತನುಭಿಃ** ಮನಸ್ಸು, ಮಾತು, ಶರೀರಗಳಿಂದ **ಸದೈವ** ಯಾವಾಗಲೂ **ವಿಷ್ಣುಂ** ಶ್ರೀಹರಿಯನ್ನು **ಯಜಂತಿ** ಆರಾಧಿಸುತ್ತಿದ್ದರು. **ಅನ್ಯಂ** ವಿಷ್ಣುವನ್ನು ಬಿಟ್ಟು ಬೇರೆ **ಕಂಚಿತ್** ಯಾವ ದೇವತೆಯನ್ನೂ **ನ ತು** ಸರ್ವೋತ್ತಮನೆಂದು ಪೂಜಿಸುತ್ತಿರಲಿಲ್ಲ. **ಪೃಥ್ವೀ ಚ** ಭೂಮಿಯಾದರೂ **ಸಮಸ್ತರತ್ನೋದ್ಭರಿತಾ** ಸಮಸ್ತ ರತ್ನಗಳಿಂದ ತುಂಬಿದ್ದು

**ಯಥೇಷ್ಟಧಾನ್ಯಾ** ಯಥೇಚ್ಛಧಾನ್ಯಗಳಿಂದ ಕೂಡಿದ್ದು **ಬಹುದುಗ್ಧಗೋಮತೀ** ಬಹಳ ಹಾಲು ಕೊಡುವ ಗೋವುಗಳುಳ್ಳದ್ದು **ಬಭೂವ** ಆಗಿತ್ತು.

**ತಾತ್ಪರ್ಯ** :- ಎಲ್ಲಾ ಪ್ರಜೆಗಳೂ ಬ್ರಹ್ಮಾದಿದೇವತೆಗಳನ್ನು ವಿಷ್ಣುವಿನ ದಾಸರೆಂದೇ ಆರಾಧಿಸುತ್ತಿದ್ದರು. ವಿಷ್ಣುವನ್ನೇ ಹಿರಿಯ ದೈವವೆಂದು ನಂಬಿ ಮೈಮನಸ್ಸು ಮಾತುಗಳಿಂದ ಆರಾಧಿಸುತ್ತಿದ್ದರು. ಎಲ್ಲಾ ಬಗೆಯ ಮುತ್ತು ರತ್ನಗಳಿಂದ ತುಂಬಿದ ಭೂಮಿಯು ಎಲ್ಲಾ ಬಗೆಯ ದವಸ ಧಾನ್ಯಗಳಿಂದಲೂ ಸಮೃದ್ಧವಾಗಿ ಬಯಸಿದಷ್ಟು ಹಾಲು ನೀಡುವ ಆಕಳುಗಳಿಂದ ವಿರಾಜಿಸಿತ್ತು.

**ಸಮಸ್ತಗಂಧಾಶ್ಚ ಸದಾಽತಿಹೃದ್ಯಾ**
**ರಸಾ ಮನೋಹಾರಿಣ ಏವ ತತ್ರ ।**
**ಶಬ್ದಾಶ್ಚ ಸರ್ವೇ ಶ್ರವಣಾತಿಹಾರಿಣಃ**
**ಸ್ಪರ್ಶಾಶ್ಚ ಸರ್ವೇ ಸ್ಪರ್ಶೇಂದ್ರಿಯಪ್ರಿಯಾಃ ॥ ೮ ॥**

ಪದಚ್ಛೇದ : ಸಮಸ್ತಗಂಧಾಃ ಚ ಸದಾ ಅತಿಹೃದ್ಯಾಃ ರಸಾಃ ಮನೋಹಾರಿಣಃ ಏವ ತತ್ರ । ಶಬ್ದಾಃ ಚ ಸರ್ವೇ ಶ್ರವಣಾತಿಹಾರಿಣಃ ಸ್ಪರ್ಶಾಃ ಚ ಸರ್ವೇ ಸ್ಪರ್ಶೇಂದ್ರಿಯಪ್ರಿಯಾಃ ॥

**ಅರ್ಥ** :- **ತತ್ರ** ರಾಮರಾಜ್ಯದಲ್ಲಿ **ಸಮಸ್ತಗಂಧಾಶ್ಚ** ಚಂದನವೇ ಮೊದಲಾದ ಎಲ್ಲಾ ಬಗೆಯ ಪರಿಮಳದ್ರವ್ಯಗಳು **ಸದಾ** ಯಾವಾಗಲೂ **ಅತಿಹೃದ್ಯಾಃ** ಬಹಳವಾಗಿ ಮನಸ್ಸಿಗೆ ಮುದವನ್ನು ನೀಡುತ್ತಿದ್ದವು. **ರಸಾಃ** ಎಲ್ಲ ರಸಗಳೂ **ಮನೋಹಾರಿಣ ಏವ** ಮನಸ್ಸನ್ನು ಸೂರೆಗೊಂಡುವುಗಳಾಗಿದ್ದವು. **ಸರ್ವೇ** ಎಲ್ಲ **ಶಬ್ದಾಶ್ಚ** ಶಬ್ದಗಳೂ **ಶ್ರವಣಾತಿಹಾರಿಣಃ** ಕಿವಿಗಳನ್ನು ಬಹಳವಾಗಿ ಸೆಳೆಯುತ್ತಿದ್ದವು. **ಸರ್ವೇ** ಎಲ್ಲ **ಸ್ಪರ್ಶಾಶ್ಚ** ಸ್ಪರ್ಶಗಳೂ **ಸ್ಪರ್ಶೇಂದ್ರಿಯ ಪ್ರಿಯಾಃ** ತ್ವಗಿಂದ್ರಿಯಕ್ಕೆ ಪ್ರಿಯವಾಗಿದ್ದವು.

**ತಾತ್ಪರ್ಯ** :- ರಾಮರಾಜ್ಯದಲ್ಲಿ ಚಂದನಾದಿ ಎಲ್ಲಾ ಸುಗಂಧ ಪದಾರ್ಥಗಳೂ ಮನಸ್ಸಿಗೆ ಅತ್ಯಂತ ಆಪ್ಯಾಯಮಾನವಾಗಿ ಯಾವಾಗಲೂ ಇರುತ್ತಿದ್ದವು. ಸಕಲರಸಗಳೂ ಮನಸ್ಸಿಗೆ ಆಹ್ಲಾದವನ್ನುಂಟುಮಾಡುತ್ತಿದ್ದವು. ಎಲ್ಲ ಶಬ್ದಗಳೂ ಶ್ರವಣೇಂದ್ರಿಯವನ್ನು ಆಕರ್ಷಿಸುತ್ತಿದ್ದವು. ಎಲ್ಲ ಪದಾರ್ಥಗಳ ಸ್ಪರ್ಶಗಳು ಚರ್ಮೇಂದ್ರಿಯಕ್ಕೆ ಆನಂದವನ್ನುಂಟುಮಾಡುತ್ತಿದ್ದವು.

ನ ಕಸ್ಯಚಿದ್ದುಃಖಮಭೂತ್ ಕಥಂಚಿತ್
ನ ವಿತ್ತಹಾನಿಶ್ಚ ಬಭೂವ ಕಸ್ಯಚಿತ್ ।
ನಾಧರ್ಮಶೀಲೋ ನ ಚ ಕಶ್ಚನಾಪ್ರಜೋ
ನ ದುಷ್ಪ್ರಜೋ ನೈವ ಕುಭಾರ್ಯಕಶ್ಚ ॥ ೯ ॥

ಪದಚ್ಛೇದ : ನ ಕಸ್ಯಚಿತ್ ದುಃಖಮ್ ಅಭೂತ್ ಕಥಂಚಿತ್ ನ ವಿತ್ತಹಾನಿಃ ಚ ಬಭೂವ ಕಸ್ಯಚಿತ್ । ನ ಅಧರ್ಮಶೀಲಃ ನ ಚ ಕಶ್ಚನ ಅಪ್ರಜಃ ನ ದುಷ್ಪ್ರಜಃ ನ ಏವ ಕುಭಾರ್ಯಕಃ ಚ ॥

**ಅರ್ಥ** :- **ಕಸ್ಯಚಿತ್** ಯಾರಿಗೂ ಕೂಡ **ಕಥಂಚಿತ್** ಯಾವ ಕಾರಣ ದಿಂದಲೂ **ದುಃಖಂ** ದುಃಖವು **ನಾಭೂತ್** ಆಗಲಿಲ್ಲ **ಕಸ್ಯಚಿತ್** ಯಾರಿಗೂ ಕೂಡ **ವಿತ್ತಹಾನಿಶ್ಚ** ಧನಹಾನಿಯು **ನ ಬಭೂವ** ಆಗಲಿಲ್ಲ **ಕಶ್ಚನ ಚ** ಯಾರೂ **ಅಧರ್ಮಶೀಲಃ** ಅಧರ್ಮಬುದ್ಧಿಯುಳ್ಳವನು **ನ** ಇರಲಿಲ್ಲ **ನ ಅಪ್ರಜಶ್ಚ** ಸಂತಾನವಿಲ್ಲದವನು **ನ** ಇರಲಿಲ್ಲ **ದುಷ್ಪ್ರಜಃ** ದುಷ್ಟಸಂತಾನವುಳ್ಳವನು **ನ** ಇರಲಿಲ್ಲ **ಕುಭಾರ್ಯಕಶ್ಚ** ಕೆಟ್ಟ ಹೆಂಡತಿಯುಳ್ಳವನು **ನ ಏವ** ಇರಲಿಲ್ಲ

**ತಾತ್ಪರ್ಯ** :- ಯಾರಿಗೂ ಯಾವ ಕಾರಣದಿಂದಲೂ ದುಃಖವುಂಟಾ ಗುತ್ತಿರಲಿಲ್ಲ, ಯಾರಿಗೂ ಧನನಾಶವಾಗುತ್ತಿರಲಿಲ್ಲ. ಯಾರೂ ಅಧರ್ಮ ಬುದ್ಧಿ ಯುಳ್ಳವನಿರಲಿಲ್ಲ. ಯಾರೂ ಸಂತಾನವಿಲ್ಲದವನಾಗಿರಲಿಲ್ಲ. ದುಷ್ಟ ಸಂತಾನ ವನ್ನೂ, ಕೆಟ್ಟ ಹೆಂಡತಿಯನ್ನು ಹೊಂದಿರುವವನು ಇರಲೇ ಇಲ್ಲ.

ಸ್ತ್ರಿಯೋ ನ ಚಾಸನ್ ವಿಧವಾಃ ಕಥಂಚಿತ್
ನ ವೈ ಪುಮಾಂಸೋ ವಿಧುರಾ ಬಭೂವುಃ ।
ನಾನಿಷ್ಟಯೋಗಶ್ಚ ಬಭೂವ ಕಸ್ಯಚಿತ್
ನ ಚೇಷ್ಟಹಾನಿರ್ನ ಚ ಪೂರ್ವಮೃತ್ಯುಃ ॥ ೧೦ ॥

ಪದಚ್ಛೇದ : ಸ್ತ್ರಿಯಃ ನ ಚ ವಿಧವಾಃ ಆಸನ್ ಕಥಂಚಿತ್ ನ ವೈ ಪುಮಾಂಸಃ ವಿಧುರಾಃ ಬಭೂವುಃ । ನ ಅನಿಷ್ಟಯೋಗಃ ಚ ಬಭೂವ ಕಸ್ಯಚಿತ್ ನ ಚ ಇಷ್ಟಹಾನಿಃ ನ ಚ ಪೂರ್ವಮೃತ್ಯುಃ ॥

**ಅರ್ಥ** :- **ಸ್ತ್ರಿಯಃ** ಸ್ತ್ರೀಯರು **ವಿಧವಾಃ** ವಿಧವೆಯರು **ನ ಆಸನ್** ಆಗುತ್ತಿರಲಿಲ್ಲ **ಪುಮಾಂಸಃ** ಪುರುಷರು **ವಿಧುರಾಃ** ಹೆಂಡತಿ ಇಲ್ಲದವರು **ನ ವೈ**

**ಬಭೂವುಃ** ಆಗಲೇ ಇಲ್ಲ, **ಕಸ್ಯಚಿತ್** ಯಾರಿಗೂ **ಅನಿಷ್ಟಯೋಗಶ್ಚ** ಅನಿಷ್ಟ ವಸ್ತುವಿನ ಸಂಪರ್ಕ **ನ ಬಭೂವ** ಆಗಲಿಲ್ಲ, **ಇಷ್ಟಹಾನಿಶ್ಚ** ಇಷ್ಟವಸ್ತುವಿನ ವಿಯೋಗವೂ **ನ ಚ** ಆಗಲಿಲ್ಲ **ಪೂರ್ವಮೃತ್ಯುಃ** ಅಕಾಲ ಮರಣವೂ **ನ** ಆಗಲಿಲ್ಲ.

**ತಾತ್ಪರ್ಯ :-** ಸ್ತ್ರೀಯರೆಂದಿಗೂ ಯಾವ ಕಾರಣದಿಂದಲೂ ವಿಧವೆಯರಾಗುತ್ತಿರಲಿಲ್ಲ. ಪುರುಷರು ವಿಧುರರೂ ಆಗುತ್ತಿರಲಿಲ್ಲ. ಬೇಡವಾದದ್ದನ್ನು ಎಂದೂ ಯಾರೂ ಪಡೆಯುತ್ತಿರಲಿಲ್ಲ. ಬಯಸಿದ ಪ್ರಿಯ ವಸ್ತುವನ್ನು ಎಂದೂ ಕಳೆದುಕೊಳ್ಳುತ್ತಿರಲಿಲ್ಲ. ತಮಗೆ ನಿಗದಿಯಾದ ಆಯುರ್ಮಾನ ಪೂರ್ಣಗೊಳ್ಳದೆ ಯಾರೂ ಮೊದಲೇ ಸಾವನ್ನಪ್ಪುತ್ತಿರಲಿಲ್ಲ.

**ಯಥೇಷ್ಟಮಾಲ್ಯಾಭರಣಾನುಲೇಪನಾ**
**ಯಥೇಷ್ಟಪಾನಾಶನವಾಸಸೋಽಖಿಲಾಃ ।**
**ಬಭೂವುರೀಶೇ ಜಗತಾಂ ಪ್ರಶಾಸತಿ**
**ಪ್ರಕೃಷ್ಟಧರ್ಮೇಣ ಜನಾರ್ದನೇ ನೃಪೇ ॥ ೧೧ ॥**

ಪದಚ್ಛೇದ : ಯಥೇಷ್ಟಮಾಲ್ಯಾಭರಣಾನುಲೇಪನಾಃ ಯಥೇಷ್ಟಪಾನಾ ಶನವಾಸಸಃ **ಅಖಿಲಾಃ ।** ಬಭೂವುಃ ಈಶೇ ಜಗತಾಂ ಪ್ರಶಾಸತಿ ಪ್ರಕೃಷ್ಟ ಧರ್ಮೇಣ ಜನಾರ್ದನೇ ನೃಪೇ ॥

**ಅರ್ಥ :-** ಜಗತಾಂ ಜಗತ್ತುಗಳಿಗೆ **ಈಶೇ** ಸ್ವಾಮಿಯಾದ **ಜನಾರ್ದನೇ** ಭಗವಂತನು **ನೃಪೇ** ರಾಜನಾಗಿ ಜಗತೀಂ ಲೋಕವನ್ನು **ಪ್ರಕೃಷ್ಟಧರ್ಮೇಣ** ಶ್ರೇಷ್ಠವಾದ ಧರ್ಮಮಾರ್ಗದಿಂದ **ಪ್ರಶಾಸತಿ ಸತಿ** ಆಳುತ್ತಿರಲು **ಅಖಿಲಾಃ** ಎಲ್ಲಾ ಪ್ರಜೆಗಳೂ **ಯಥೇಷ್ಟಮಾಲ್ಯಾಭರಣಾನುಲೇಪನಾಃ** ಯಥೇಚ್ಛವಾದಷ್ಟು ಮಾಲೆ-ಆಭರಣ-ಸುಗಂಧ ಲೇಪನವುಳ್ಳವರೂ **ಯಥೇಷ್ಟ ಪಾನಾಶನ ವಾಸಸಃ** ಬಯಸಿದಷ್ಟು ಅನ್ನಪಾನ ವಸನಗಳಿಂದ ಕೂಡಿದವರಾಗಿ **ಬಭೂವುಃ** ಆಗಿದ್ದರು.

**ತಾತ್ಪರ್ಯ :-** ಜಗದೊಡೆಯನಾದ ಶ್ರೀರಾಮಚಂದ್ರನು ರಾಜನಾಗಿ ಶ್ರೇಷ್ಠ ಧರ್ಮದಿಂದ ರಾಜ್ಯವನ್ನು ಆಳುತ್ತಿರಲು ಸಕಲ ಜನರು ಉಪಭೋಗ ಸಾಮಗ್ರಿಗಳಾದ ಮಾಲೆ, ಆಭರಣ ಚಂದನಾದಿ ದ್ರವ್ಯಗಳನ್ನು ಹಾಗೂ ಜೀವನಾವಶ್ಯಕವಾದ ಅನ್ನ ನೀರು, ಬಟ್ಟೆ ಮೊದಲಾದ ಸಾಮಗ್ರಿಗಳನ್ನು ತಾವು ಸಮೃದ್ಧವಾಗಿ ಬಳಸುತ್ತಿದ್ದರು.

ಸ ಬ್ರಹ್ಮರುದ್ರಮರುದಶ್ವಿದಿವಾಕರಾದಿ
ಮೂರ್ಧನ್ಯರತ್ನಪರಿಘಟ್ಟಿತಪಾದಪೀಠಃ ।
ನಿತ್ಯಂ ಸುರೈಃ ಸಹ ನರೈರಥ ವಾನರೈಶ್ಚ
ಸಂಪೂಜ್ಯಮಾನಚರಣೋ ರಮತೇ ರಮೇಶಃ ॥ ೧೨ ॥

ಪದಚ್ಛೇದ : ಸಃ ಬ್ರಹ್ಮರುದ್ರಮರುದಶ್ವಿದಿವಾಕರಾದಿಮೂರ್ಧನ್ಯರತ್ನಪರಿಘಟ್ಟಿತಪಾದಪೀಠಃ । ನಿತ್ಯಂ ಸುರೈಃ ಸಹ ನರೈಃ ಅಥ ವಾನರೈಃ ಚ ಸಂಪೂಜ್ಯಮಾನಚರಣಃ ರಮತೇ ರಮೇಶಃ ॥

ಅರ್ಥ :- ಬ್ರಹ್ಮರುದ್ರಮರುದಶ್ವಿದಿವಾಕರಾದಿಮೂರ್ಧನ್ಯ ರತ್ನ ಪರಿಘಟ್ಟಿತ ಪಾದಪೀಠಃ ಬ್ರಹ್ಮ ಬ್ರಹ್ಮದೇವರು ರುದ್ರ ರುದ್ರದೇವರು ಮರುತ್ ಇಂದ್ರದೇವರು ಅಶ್ವಿ ಅಶ್ವಿನಿದೇವತೆಗಳು ದಿವಾಕರಾದಿ ಸೂರ್ಯ ಮುಂತಾದ ದೇವತೆಗಳ ಮೂರ್ಧನ್ಯರತ್ನ ಕಿರೀಟದಲ್ಲಿರುವ ಅಮೂಲ್ಯ ರತ್ನಗಳಿಂದ ಪರಿಘಟ್ಟಿತಪಾದಪೀಠಃ ಘರ್ಷಣೆ ಹೊಂದಿದ ಪಾದಪೀಠವನ್ನುಳ್ಳ ಸಃ ರಮೇಶಃ ಆ ಲಕ್ಷ್ಮೀಪತಿಯಾದ ಶ್ರೀರಾಮಚಂದ್ರನು ನಿತ್ಯಂ ಯಾವಾಗಲೂ ನರೈಃ ಮನುಷ್ಯರಿಂದ ಅಥ ಹಾಗೂ ವಾನರೈಶ್ಚ ಕಪಿಗಳಿಂದಲೂ ಸಹ ಕೂಡಿದ ಸುರೈಃ ದೇವತೆಗಳಿಂದ ಸಂಪೂಜ್ಯಮಾನ ಚರಣಃ ಸನ್ ಪೂಜಿಸಲ್ಪಟ್ಟ ಪಾದವುಳ್ಳವನಾಗಿ ರಮತೇ ಕ್ರೀಡಿಸುತ್ತಾನೆ.

ತಾತ್ಪರ್ಯ :- ಬ್ರಹ್ಮದೇವರು, ರುದ್ರದೇವರು, ಮನೋಽಭಿಮಾನಿಯಾಗಿ ಮಾನಸಜ್ಞಾನಜನಕರಾದ ಇಂದ್ರದೇವರು, ಅಶ್ವಿನಿ, ಸೂರ್ಯ ಮೊದಲಾದ ದೇವತೆಗಳ ಕಿರೀಟದ ರತ್ನಗಳಿಂದ ಘರ್ಷಿಸುವ ಪಾದಪೀಠವುಳ್ಳ ಲಕ್ಷ್ಮೀಪತಿಯಾದ ಶ್ರೀರಾಮಚಂದ್ರನು ಸದಾ ಸುರನರ ವಾನರರಿಂದ ಪೂಜೆಗೊಂಡ ಪಾದವುಳ್ಳವನಾಗಿ ಆತ್ಮಾರಾಮನಾಗಿದ್ದನು.

ರಾಮ ಮತ್ತು ಸೀತೆ

ತಸ್ಯಾಖಿಲೇಶಿತುರನಾದ್ಯನುಗೈವ ಲಕ್ಷ್ಮೀಃ
ಸೀತಾಭಿಧಾ ತ್ವರಮಯತ್ ಸ್ವರತಂ ರಮೇಶಮ್ ।
ನಿತ್ಯಾವಿಯೋಗಿಪರಮೋಚ್ಚನಿಜಸ್ವಭಾವ
ಸೌಂದರ್ಯವಿಭ್ರಮಸುಲಕ್ಷಣಪೂರ್ವಭಾವಾ ॥ ೧೩ ॥

ಪದಚ್ಛೇದ : ತಸ್ಯ ಅಖಿಲೇಶಿತುಃ ಅನಾದ್ಯನುಗಾ ಏವ ಲಕ್ಷ್ಮೀಃ ಸೀತಾಭಿಧಾ ತು ಅರಮಯತ್ ಸ್ವರತಂ ರಮೇಶಮ್ । ನಿತ್ಯಾವಿಯೋಗಿಪರಮೋಚ್ಚನಿಜಸ್ವಭಾವ ಸೌಂದರ್ಯವಿಭ್ರಮಸುಲಕ್ಷಣಪೂರ್ವಭಾವಾ ॥

**ಅರ್ಥ :- ಅಖಿಲೇಶಿತುಃ** ಎಲ್ಲರಿಗೂ ಒಡೆಯನಾದ **ತಸ್ಯ** ಶ್ರೀರಾಮ ಚಂದ್ರನಿಗೆ **ಅನಾದ್ಯನುಗೈವ** ಅನಾದಿಕಾಲದಿಂದಲೂ ಸೇವಕಳಾದ **ಸೀತಾಭಿಧಾ** ಸೀತಾ ಎಂದು ಹೆಸರುಳ್ಳ **ಲಕ್ಷ್ಮೀಃ** ಲಕ್ಷ್ಮೀದೇವಿಯು **ನಿತ್ಯಾವಿಯೋಗಿಪರಮೋಚ್ಚ ನಿಜಸ್ವಭಾವಸೌಂದರ್ಯವಿಭ್ರಮಸು ಲಕ್ಷಣಪೂರ್ವಭಾವಾ ನಿತ್ಯಾವಿಯೋಗಿ** ಎಂದೂ ವಿಯೋಗವಿಲ್ಲದ **ಪರಮೋಚ್ಚನಿಜಸ್ವಭಾವ** ಅತ್ಯಂತ ಹಿರಿದಾದ ಸ್ವರೂಪಭೂತವಾದ **ಸೌಂದರ್ಯವಿಭ್ರಮಸುಲಕ್ಷಣಪೂರ್ವಭಾವಾ** ಸೌಂದರ್ಯ ವಿಲಾಸಸುಲಕ್ಷಣಗಳು ಇವೇ ಮೊದಲಾದವುಗಳುಳ್ಳವಳಾಗಿ **ಸ್ವರತಂ** ತನ್ನಲ್ಲೇ ಸುಖಪಡುವ **ರಮೇಶಂ** ಶ್ರೀರಾಮನನ್ನು **ಅರಮಯತ್** ಸಂತೋಷಪಡಿಸಿದಳು.

**ತಾತ್ಪರ್ಯ :-** ಲಕ್ಷ್ಮೀದೇವಿಯು ಸರ್ವೋತ್ತಮನಾದ ಶ್ರೀರಾಮ ಚಂದ್ರನಿಗೆ ಅನಾದಿಕಾಲದಿಂದಲೂ ಸೇವಕಳಾಗಿರುವಳು. ಈ ಅವತಾರದಲ್ಲಿ ಸೀತಾ ಎಂದು ಹೆಸರನ್ನು ಪಡೆದ ಅವಳು ಎಂದೂ ಪತಿಯ ಅಗಲಿಕೆಯಿಲ್ಲ ದಿರುವವಳಾಗಿದ್ದಾಳೆ. ಪರಮೋತ್ಕೃಷ್ಟ ಹಾಗೂ ಸೌಂದರ್ಯಲಕ್ಷಣ ಬೆಡಗು ಬಿನ್ನಾಣವೇ ಮೊದಲಾದ ತನ್ನ ಸ್ವರೂಪವೇ ಆದ ಹಿರಿಯ ಗುಣಗಳಿಂದ ಅವಳು ಸ್ವರಮಣನಾದ (ಸುಖಕ್ಕೆ ಬೇರೆಯವರನ್ನು ಅಪೇಕ್ಷಿಸದಿರುವ ಪತಿ ಯಾದ) ಶ್ರೀರಾಮನನ್ನು ಸಂತೋಷಪಡಿಸಿದಳು.

**ರೇಮೇ ತಯಾ ಸ ಪರಮಃ ಸ್ವರತೋಽಪಿ ನಿತ್ಯಂ**
**ನಿತ್ಯೋನ್ನತಪ್ರಮದಭಾರಭೃತಸ್ವಭಾವಃ ।**
**ಪೂರ್ಣೋಡುರಾಜಸುವಿರಾಜಿತಸನ್ನಿಶಾಸು**
**ದೀವ್ಯನ್ ಅಶೋಕವನಿಕಾಸು ಸುಪುಷ್ಪಿತಾಸು ॥ ೧೪ ॥**

ಪದಚ್ಛೇದ : ರೇಮೇ ತಯಾ ಸಃ ಪರಮಃ ಸ್ವರತಃ ಅಪಿ ನಿತ್ಯಂ ನಿತ್ಯೋನ್ನತ ಪ್ರಮದಭಾರಭೃತಸ್ವಭಾವಃ । ಪೂರ್ಣೋಡುರಾಜಸುವಿರಾಜಿತ ಸನ್ನಿಶಾಸು ದೀವ್ಯನ್ ಅಶೋಕವನಿಕಾಸು ಸುಪುಷ್ಪಿತಾಸು ॥

**ಅರ್ಥ** :- **ಪರಮಃ** ಸರ್ವೋತ್ತಮನಾದ **ನಿತ್ಯೋನ್ನತಪ್ರಮದಭಾರ ಭೃತಸ್ವಭಾವಃ** ನಿತ್ಯೋನ್ನತ ಯಾವಾಗಲೂ ಉತ್ತಮವಾದ **ಪ್ರಮದಭಾರ** ಆನಂದಭಾರದಿಂದ **ಭೃತಸ್ವಭಾವಃ** ತುಂಬಿದ ಸ್ವಭಾವವುಳ್ಳ **ಸಃ** ರಾಮ ಚಂದ್ರನು **ನಿತ್ಯಂ** ಯಾವಾಗಲೂ **ಸ್ವರತೋಽಪಿ** ತನ್ನಲ್ಲೇ ಕ್ರೀಡಿಸುವವನಾದರೂ **ತಯಾ** ಸೀತಾದೇವಿಯಿಂದ **ಪೂರ್ಣೋಡುರಾಜಸುವಿರಾಜಿತಸನ್ನಿಶಾಸು ಪೂರ್ಣೋಡುರಾಜ** ಪೂರ್ಣಚಂದ್ರನಿಂದ **ಸುವಿರಾಜಿತ** ಬೆಳಗುವ **ಸನ್ನಿಶಾಸು** ಉತ್ತಮ ರಾತ್ರಿಗಳಲ್ಲಿ **ಸುಪುಷ್ಪಿತಾಸು** ಚೆನ್ನಾಗಿ ಹೂ ಬಿಟ್ಟ **ಅಶೋಕವನಿಕಾಸು** ಅಶೋಕವನಗಳಲ್ಲಿ **ದೀಪ್ಯನ್** ಶೋಭಿಸುತ್ತಾ **ರೇಮೇ** ವಿಹರಿಸಿದನು.

**ತಾತ್ಪರ್ಯ** :- ಸರ್ವೋತ್ತಮನಾದ ಶ್ರೀರಾಮನು ಬಾಹ್ಯವಸ್ತುಗಳ ಅಪೇಕ್ಷೆ ಯಿಲ್ಲದೆಯೇ ತನ್ನಲ್ಲಿ ತಾನು ರಮಿಸುವವನು. ಸದಾ ಉತ್ಕೃಷ್ಟವಾದ ಆನಂದದಿಂದ ನಿತ್ಯತೃಪ್ತನು.ಪೂರ್ಣಚಂದ್ರನಿಂದ ಶೋಭಿತವಾದ ರಾತ್ರಿಗಳಲ್ಲಿ ಸೊಗಸಾಗಿ ಹೂಬಿಟ್ಟ ಅಶೋಕವನದಲ್ಲಿ ಅವನು ಸೀತೆಯೊಂದಿಗೆ ವಿಹರಿಸಿದನು.

ರಾಮನ ಗುಣಗಾನ

**ಗಾಯಂತಿ ಚೈನಮನುರಕ್ತಧಿಯಃ ಸುಕಂಠಾ**
**ಗಂಧರ್ವಚಾರಣಗಣಾಃ ಸಹ ಚಾಪ್ಸರೋಭಿಃ ।**
**ತಂ ತುಷ್ಟುವುರ್ಮುನಿಗಣಾಃ ಸಹಿತಾಃ ಸುರೇಶೈ**
**ರಾಜಾನ ಏನಮನುಯಾಂತಿ ಸದಾಽಪ್ರಮತ್ತಾಃ ॥ ೧೫ ॥**

ಪದಚ್ಛೇದ : **ಗಾಯಂತಿ** ಚ **ಏನಮ್ ಅನುರಕ್ತಧಿಯಃ ಸುಕಂಠಾಃ ಗಂಧರ್ವ ಚಾರಣಗಣಾಃ** ಸಹ ಚ **ಅಪ್ಸರೋಭಿಃ** । **ತಂ ತುಷ್ಟುವುಃ ಮುನಿಗಣಾಃ ಸಹಿತಾಃ ಸುರೇಶೈಃ** ರಾಜಾನಃ **ಏನಮ್ ಅನುಯಾಂತಿ** ಸದಾ **ಅಪ್ರಮತ್ತಾಃ** ॥

**ಅರ್ಥ** :- **ಗಂಧರ್ವಚಾರಣಗಣಾಃ** ಗಂಧರ್ವರು ಚಾರಣರು ಮೊದಲಾದವರ ಗಣಗಳು **ಅಪ್ಸರೋಭಿಃ ಚ ಸಹ** ಅಪ್ಸರಸ್ತ್ರೀಯರೊಂದಿಗೆ **ಅನುರಕ್ತಧಿಯಃ** ಪ್ರೀತಿಯುಕ್ತ ಮನಸ್ಸಿನಿಂದ **ಸುಕಂಠಾಃ** ಸುಸ್ವರಕಂಠದಿಂದ **ಏನಮ್** ಶ್ರೀರಾಮನನ್ನು **ಗಾಯಂತಿ** ಹಾಡುತ್ತಾರೆ. **ಮುನಿಗಣಾಃ** ಮುನಿ ಸಮೂಹಗಳು **ಪರೇಶೈಃ** ದೇವೋತ್ತಮರಿಂದ ಕೂಡಿಕೊಂಡು **ತಂ** ರಾಮನನ್ನು **ತುಷ್ಟುವುಃ** ಸ್ತುತಿಸಿದರು. **ರಾಜಾನಃ** ರಾಜರುಗಳು **ಸದಾ** ಯಾವಾಗಲೂ

**ಅಪ್ರಮತ್ತಾಃ** ಜಾಗರೂಕರಾಗಿ **ಏನಮ್** ಶ್ರೀರಾಮನನ್ನು **ಅನುಯಾಂತಿ** ಅನುಸರಿಸುತ್ತಾರೆ.

ತಾತ್ಪರ್ಯ :- ಕೊರಳಿನಲ್ಲಿ ಇಂಪಾದ ಸ್ವರದಿಂದ ಕೂಡಿದನು ಗಂಧರ್ವ ಚಾರಣ ಸಮೂಹಗಳು ಅಪ್ಸರಸ್ತ್ರೀಯರಿಂದ ಕೂಡಿ ಭಕ್ತಿಭಾವದಿಂದ ಶ್ರೀರಾಮನ ಗುಣಗಳನ್ನು ಹಾಡುತ್ತಿದ್ದವು. ಮುನಿಗಳ ಗುಂಪುಗಳೂ ಸುರೋತ್ತಮರಿಂದ ಸಹಿತರಾಗಿ ಸ್ತುತಿಸಿದವು. ರಾಜರುಗಳು ಪರಮಾದರದಿಂದ ಯಾವಾಗಲೂ ಶ್ರೀರಾಮನನ್ನು ಅನುಸರಿಸುತ್ತಿದ್ದರು.

### ರಾಮನ ರಾಜ್ಯಭಾರ : ಹದಿಮೂರು ಸಾವಿರ ವರ್ಷಗಳು

**ಏವಂ ತ್ರಯೋದಶಸಹಸ್ರಮಸೌ ಸಮಾಸ್ತು**
**ಪೃಥ್ವೀಂ ರರಕ್ಷ ವಿಜಿತಾರಿರಮೋಘವೀರ್ಯಃ ।**
**ಆನಂದಮಿಂದುರಿವ ಸಂದಧದಿಂದಿರೇಶೋ**
**ಲೋಕಸ್ಯ ಸಾಂದ್ರಸುಖವಾರಿಧಿರಪ್ರಮೇಯಃ ॥ ೧೬ ॥**

ಪದಚ್ಛೇದ : ಏವಂ ತ್ರಯೋದಶಸಹಸ್ರಂ ಅಸೌ ಸಮಾಃ ತು ಪೃಥ್ವೀಂ ರರಕ್ಷ ವಿಜಿತಾರಿಃ ಅಮೋಘವೀರ್ಯಃ । ಆನಂದಮ್ ಇಂದುಃ ಇವ ಸಂದಧತ್ ಇಂದಿರೇಶಃ ಲೋಕಸ್ಯ ಸಾಂದ್ರಸುಖವಾರಿಧಿಃ ಅಪ್ರಮೇಯಃ ॥

ಅರ್ಥ :- **ಏವಂ** ಈ ರೀತಿಯಾಗಿ **ವಿಜಿತಾರಿಃ** ಶತ್ರುಗಳನ್ನು ಗೆದ್ದ **ಅಮೋಘವೀರ್ಯಃ** ಬಹಳಪರಾಕ್ರಮವುಳ್ಳ **ಸಾಂದ್ರಸುಖವಾರಿಧಿಃ** ನಿಬಿಡ ವಾದ ಸುಖದ ಸಮುದ್ರದಂತಿರುವ **ಅಪ್ರಮೇಯಃ** ಬುದ್ಧಿಗೆ ನಿಲುಕದ **ಇಂದಿರೇಶಃ** ಲಕ್ಷ್ಮೀಪತಿಯಾದ **ಅಸೌ** ಈ ಶ್ರೀರಾಮಚಂದ್ರನು **ಇಂದುರಿವ** ಚಂದ್ರನಂತೆ **ಲೋಕಸ್ಯ** ಜನರಿಗೆ **ಆನಂದಮ್** ಸಂತೋಷವನ್ನು **ಸಂದಧತ್** ಮಾಡುವವನಾಗಿ **ತ್ರಯೋದಶಸಹಸ್ರಂ** ಹದಿಮೂರುಸಾವಿರ **ಸಮಾಸ್ತು** ವರ್ಷಗಳವರೆಗೆ **ಪೃಥ್ವೀಂ** ಭೂಮಿಯನ್ನು **ರರಕ್ಷ** ರಕ್ಷಣೆ ಮಾಡಿದನು.

ತಾತ್ಪರ್ಯ :- ಶತ್ರುಗಳನ್ನು ಗೆದ್ದವನೂ, ಬಹಳ ಪರಾಕ್ರಮಶಾಲಿಯೂ ಆದ ಲಕ್ಷ್ಮೀಪತಿ ಶ್ರೀರಾಮನು ನಿಬಿಡವಾದ ಆನಂದಸಮುದ್ರವನ್ನು ತುಂಬಿ ಕೊಂಡಿರುವನು. ಯಾವುದೇ ಸಾಧಕರ ಮಿತ ಬುದ್ಧಿಗೂ ನಿಲುಕಲಾರದ ಮಹಾಮಹಿಮನಾಗಿದ್ದುಕೊಂಡು ಲೋಕಕ್ಕೆ ಚಂದ್ರನಂತೆ ಆನಂದ ಉಂಟು ಮಾಡಿದವನು. ಇಂಥ ಶ್ರೀರಾಮನು ಹದಿಮೂರುಸಾವಿರವರ್ಷಗಳ ಕಾಲ ಭೂಮಿಯನ್ನು ಪಾಲಿಸಿದನು.

ಕುಶಲವ ಜನನ ಮತ್ತು ಶತ್ರುಘ್ನನಿಂದ ಲವಣಾಸುರಸಂಹಾರ

ದೇವ್ಯಾಂ ಸ ಚಾಜನಯದಿಂದ್ರಹುತಾಶನೌ ದ್ವೌ
ಪುತ್ರೌ ಯಮೌ ಕುಶಲವೌ ಬಲಿನೌ ಗುಣಾಢ್ಯೌ ।
ಶತ್ರುಘ್ನತೋ ಲವಣಮುಲ್ಬಣಬಾಣದಗ್ಧಂ
ಕೃತ್ವಾ ಚಕಾರ ಮಧುರಾಪುರಮುಗ್ರವೀರ್ಯಃ ॥ ೧೭ ॥

ಪದಚ್ಛೇದ : ದೇವ್ಯಾಂ ಸಃ ಚ ಅಜಯನತ್ ಇಂದ್ರಹುತಾಶನೌ ದ್ವೌ ಪುತ್ರೌ ಯಮೌ ಕುಶಲವೌ ಬಲಿನೌ ಗುಣಾಢ್ಯೌ । ಶತ್ರುಘ್ನತಃ ಲವಣಂ ಉಲ್ಬಣ ಬಾಣದಗ್ಧಂ ಕೃತ್ವಾ ಚಕಾರ ಮಧುರಾಪುರಂ ಉಗ್ರವೀರ್ಯಃ ॥

**ಅರ್ಥ** :- ಸ ಚ ಆ ರಾಮನು ದೇವ್ಯಾಂ ಸೀತಾದೇವಿಯಲ್ಲಿ **ಇಂದ್ರ ಹುತಾಶನೌ** ಇಂದ್ರಾಗ್ನಿಗಳ ಅವತಾರರೂಪರಾದ **ಕುಶಲವೌ** ಕುಶಲವರೆಂಬ **ಯಮೌ** ಅವಳಿಗಳಾದ **ದ್ವೌ** ಇಬ್ಬರು **ಪುತ್ರೌ** ಮಕ್ಕಳನ್ನು **ಅಜನಯತ್** ಪಡೆದನು **ಉಗ್ರವೀರ್ಯಃ** ಭಯಂಕರ ಪರಾಕ್ರಮಶಾಲಿಯಾದ ಆ ಶ್ರೀರಾಮನು **ಶತ್ರುಘ್ನತಃ** ಶತ್ರುಘ್ನನಿಂದ **ಲವಣಂ** ಲವಣಾಸುರನನ್ನು **ಉಲ್ಬಣಬಾಣದಗ್ಧಂ** ಕ್ರೂರವಾದ ಬಾಣದಿಂದ ಸುಟ್ಟವನ್ನಾಗಿ **ಕೃತ್ವಾ** ಮಾಡಿಸಿ **ಮಧುರಾಂ** ಮಧುರಾ ವೆಂಬ **ಪುರೀಂ** ಪಟ್ಟಣವನ್ನು **ಚಕಾರ** ಮಾಡಿಸಿದನು.

**ತಾತ್ಪರ್ಯ** :- ಸೀತಾದೇವಿಯಲ್ಲಿ ಶ್ರೀರಾಮನು ಕುಶ ಮತ್ತು ಲವನೆಂಬ ಅವಳಿ ಮಕ್ಕಳನ್ನು ಪಡೆದನು. ಈ ಮಕ್ಕಳು ಬಲಶಾಲಿಗಳೂ ಗುಣಸಂಪನ್ನರೂ ಆಗಿದ್ದರು. ಇಂದ್ರ ಮತ್ತು ಅಗ್ನಿಗಳೇ ಕುಶ ಮತ್ತು ಲವರಾಗಿ ಅವತರಿಸಿದ್ದರು. ಭಯಂಕರ ಪರಾಕ್ರಮಿಯಾದ ಶ್ರೀರಾಮನು ತನ್ನ ತಮ್ಮನಾದ ಶತ್ರುಘ್ನನಿಂದ ತಾನು ಧರಿಸಿದ ತೀಕ್ಷ್ಣವಾದ ಬಾಣದಿಂದ ಲವಣಾಸುರನನ್ನು ಸುಡಿಸಿ ಅವನ ಮಧುವನವನ್ನು ಮಧುರಾಪಟ್ಟಣವನ್ನಾಗಿ ಪರಿವರ್ತಿಸಿದನು.

ಗಂಧರ್ವರಿಂದ ಜನಿಸಿದ ಅಸುರರ ಸಂಹಾರ : ಭರತನಿಂದ

ಕೋಟಿತ್ರಯಂ ಸ ನಿಜಘಾನ ತಥಾಽಸುರಾಣಾಂ
ಗಂಧರ್ವಜನ್ಮ ಭರತೇನ ಸತಾಂ ಚ ಧರ್ಮಮ್ ।
ಸಂಶಿಕ್ಷಯನ್ನಯಜದುತ್ತಮಕಲ್ಪಕೈಃ ಸ್ವಂ
ಯಜ್ಞೈರ್ಭರ್ಗವಾಜಮುಖಸತ್ಸಚಿವಾಶ್ಚ ಯತ್ರ ॥ ೧೮ ॥

ಪದಚ್ಛೇದ : ಕೋಟಿತ್ರಯಂ ಸಃ ನಿಜಘಾನ ತಥಾ ಅಸುರಾಣಾಂ ಗಂಧರ್ವಜನ್ಮ ಭರತೇನ ಸತಾಂ ಧರ್ಮಮ್ । ಸಂಶಿಕ್ಷಯನ್ ಚ ಅಯಜತ್ ಉತ್ತಮಕಲ್ಪಕೈಃ ಸ್ವಂ ಯಜ್ಞೈಃ ಭವಾಜಮುಖಸತ್ಸಚಿವಾಃ ಚ ಯತ್ರ ॥

**ಅರ್ಥ** :- **ತಥಾ** ಅದೇ ರೀತಿಯಾಗಿ **ಸಃ** ಶ್ರೀರಾಮನು **ಗಂಧರ್ವಜನ್ಮ** ಗಂಧರ್ವರಿಂದ ಜನಿಸಿದ್ದ **ಅಸುರಾಣಾಂ** ದೈತ್ಯರ **ಕೋಟಿತ್ರಯಂ** ಮೂರು ಕೋಟಿಯನ್ನು **ಭರತೇನ** ಭರತನಿಂದ **ನಿಜಘಾನ** ಕೊಲ್ಲಿಸಿದನು. **ಯತ್ರ** ಯಾವ ಯಾಗದಲ್ಲಿ **ಭವಾಜಮುಖಸತ್ಸಚಿವಾಃ ಚ** ರುದ್ರಬ್ರಹ್ಮ ಮೊದಲಾದವರೂ ಸಹ ಒಳ್ಳೆಯ ಪರಿಚಾರಕರಾಗಿವುಳ್ಳ **ಉತ್ತಮ ಕಲ್ಪಕೈಃ** ಶ್ರೇಷ್ಠವಾದ **ಯಜ್ಞೈಃ** ಯಾಗಗಳಿಂದ **ಸತಾಂ ಚ** ಸಜ್ಜನರಿಗೂ **ಧರ್ಮಂ** ಧರ್ಮವನ್ನು **ಸಂಶಿಕ್ಷಯನ್** ತಿಳಿಸಿಕೊಡುವುದಕ್ಕಾಗಿ **ಸ್ವಂ** ತನ್ನನ್ನು **ಅಯಜತ್** ಅರ್ಚಿಸಿದನು.

**ತಾತ್ಪರ್ಯ** :- ಶ್ರೀರಾಮನು ಗಂಧರ್ವರಿಂದ ಹುಟ್ಟಿದ ಮೂರು ಕೋಟಿ ಅಸುರರನ್ನು ಭರತನಿಂದ ವಧೆ ಮಾಡಿಸಿದನು ಮತ್ತು ಸಜ್ಜನರಿಗೂ ಧರ್ಮ ವನ್ನು ತಿಳಿಸಿಕೊಡುವುದಕ್ಕಾಗಿ ಶ್ರೇಷ್ಠವಾದ ಯಜ್ಞಗಳಿಂದ ತನ್ನನ್ನು ತಾನೇ ಪೂಜಿಸಿಕೊಂಡನು. ಆ ಯಜ್ಞಗಳಲ್ಲಿ ಬ್ರಹ್ಮರುದ್ರಾದಿದೇವತೆಗಳೂ ಸಹ ಪರಿಚಾರಕ ರಾಗಿ ಭಾಗವಹಿಸಿದ್ದರು.

ಶಂಬೂಕನ ವಧೆ

**ಅಥ ಶೂದ್ರತಪಶ್ಚರ್ಯಾನಿಹತಂ ವಿಪ್ರಪುತ್ರಕಮ್ ।**
**ಉಜ್ಜೀವಯಾಮಾಸ ವಿಭುರ್ಹತ್ವಾ ತಂ ಶೂದ್ರತಾಪಸಮ್ ॥ ೧೯ ॥**

ಪದಚ್ಛೇದ : ಅಥ ಶೂದ್ರತಪಶ್ಚರ್ಯಾನಿಹತಂ ವಿಪ್ರಪುತ್ರಕಮ್ । ಉಜ್ಜೀವ ಯಾಮಾಸ ವಿಭುಃ ಹತ್ವಾ ತಂ ಶೂದ್ರತಾಪಸಮ್ ॥

**ಅರ್ಥ** :- **ಅಥ** ಅನಂತರ **ಶೂದ್ರತಪಶ್ಚರ್ಯಾನಿಹತಂ** ಶೂದ್ರನು ತಪಸ್ಸು ಮಾಡಿದುದರಿಂದ ಹತನಾದ **ವಿಪ್ರಪುತ್ರಕಂ** ಬ್ರಾಹ್ಮಣ ಕುಮಾರನನ್ನು **ವಿಭುಃ** ಶ್ರೀರಾಮಚಂದ್ರನು **ತಂ ಶೂದ್ರತಾಪಸಂ** ಶೂದ್ರ ತಪಸ್ವಿಯನ್ನು **ಹತ್ವಾ** ಕೊಂದು **ಉಜ್ಜೀವಯಾಮಾಸ** (ಆ ಬ್ರಾಹ್ಮಣ ಕುಮಾರನನ್ನು) ಬದುಕಿಸಿದನು.

**ತಾತ್ಪರ್ಯ** :- ಅನಂತರ ತನ್ನ ತಪಸ್ಸಿನ ಪರಿಣಾಮವಾಗಿ ಬ್ರಾಹ್ಮಣ ಕುಮಾರನೊಬ್ಬನ ಸಾವಿಗೆ ಕಾರಣನಾಗಿದ್ದ ಶೂದ್ರತಪಸ್ವಿಯೋರ್ವನನ್ನು ಕೊಂದು ಶ್ರೀರಾಮನು ಬ್ರಾಹ್ಮಣಕುಮಾರನನ್ನು ಬದುಕಿಸಿದನು.

ಜಂಘನಾಮಾಽಸುರಃ ಪೂರ್ವಂ ಗಿರಿಜಾವರದಾನತಃ ।
ಬಭೂವ ಶೂದ್ರಃ ಕಲ್ಪಾಯುಃ ಸ ಲೋಕಕ್ಷಯಕಾಮ್ಯಯಾ ॥ ೨೦ ॥

ತಪಶ್ಚಚಾರ ದುರ್ಬುದ್ಧಿರಿಚ್ಛನ್ ಮಾಹೇಶ್ವರಂ ಪದಮ್ ।
ಅನನ್ಯವಧ್ಯಂ ತಂ ತಸ್ಮಾಜ್ಜಘಾನ ಪುರುಷೋತ್ತಮಃ ॥ ೨೧ ॥

ಪದಚ್ಛೇದ : ಜಂಘನಾಮಾ ಅಸುರಃ ಪೂರ್ವಂ ಗಿರಿಜಾವರದಾನತಃ । ಬಭೂವ ಶೂದ್ರಃ ಕಲ್ಪಾಯುಃ ಸಃ ಲೋಕಕ್ಷಯಕಾಮ್ಯಯಾ ॥ ತಪಃ ಚಚಾರ ದುರ್ಬುದ್ಧಿಃ ಇಚ್ಛನ್ ಮಾಹೇಶ್ವರಂ ಪದಮ್ । ಅನನ್ಯವಧ್ಯಂ ತಂ ತಸ್ಮಾತ್ ಜಘಾನ ಪುರುಷೋತ್ತಮಃ ॥

ಅರ್ಥ :- **ಪೂರ್ವಂ** ಹಿಂದೆ **ಜಂಘನಾಮಾ** ಜಂಘನೆಂಬ **ಅಸುರಃ** ರಾಕ್ಷಸನು **ಗಿರಿಜಾವರದಾನತಃ** ಪಾರ್ವತಿಯ ವರದಾನದಿಂದ **ಕಲ್ಪಾಯುಃ** ಒಂದು ಕಲ್ಪ ಪರ್ಯಂತ ಆಯುಷ್ಯವುಳ್ಳವನಾಗಿ **ಶೂದ್ರಃ** ಶೂದ್ರನು **ಬಭೂವ** ಆದನು. **ದುರ್ಬುದ್ಧಿಃ** ದುಷ್ಟಬುದ್ಧಿಯವನಾದ **ಸಃ** ಆ ಅಸುರನು **ಲೋಕಕ್ಷಯ ಕಾಮ್ಯಯಾ** ಜಗತ್ತಿನ ನಾಶದ ಇಚ್ಛೆಯಿಂದ **ಮಾಹೇಶ್ವರಂ** ರುದ್ರಸಂಬಂಧಿ ಯಾದ **ಪದಂ** ಸ್ಥಾನವನ್ನು **ಇಚ್ಛನ್** ಅಪೇಕ್ಷಿಸಿದವನಾಗಿ **ತಪಃ** ತಪಸ್ಸನ್ನು **ಚಚಾರ** ಮಾಡಿದನು. **ತಸ್ಮಾತ್** ಆದ್ದರಿಂದ **ಪುರುಷೋತ್ತಮಃ** ಶ್ರೀರಾಮ ಚಂದ್ರನು **ಅನನ್ಯವಧ್ಯಂ** ಇನ್ನೊಬ್ಬರಿಂದ ಕೊಲ್ಲಲು ಸಾಧ್ಯವಿಲ್ಲದ **ತಂ** ಅಸುರನನ್ನು **ಜಘಾನ** ಕೊಂದನು.

ತಾತ್ಪರ್ಯ :- ಹಿಂದೆ ಜಂಘನೆಂಬ ದೈತ್ಯನು ಪಾರ್ವತಿಯ ವರಬಲ ದಿಂದ ಒಂದು ಕಲ್ಪಪರ್ಯಂತ ಆಯುಷ್ಯವನ್ನು ಹೊಂದಿ ಶೂದ್ರನಾಗಿ ಜನಿಸಿದ್ದನು. ಅವನು ಜಗತ್ತಿನ ನಾಶದ ಇಚ್ಛೆಯಿಂದ ಹಾಗೂ ರುದ್ರಪದವಿ ಯನ್ನು ಬಯಸಿ ತಪಸ್ಸನ್ನು ಮಾಡಿದನು. ಬೇರೆ ಯಾರಿಂದಲೂ ಮರಣವಿಲ್ಲದ ಅವನನ್ನು ಶ್ರೀರಾಮನು ಸಂಹರಿಸಿದ.

### ಶ್ವೇತರಾಜನ ಮಾಲೆ

ಶ್ವೇತದತ್ತಾಂ ತಥಾ ಮಾಲಾಮಗಸ್ತ್ಯಾದಾಪ ರಾಘವಃ ।
ಅನನ್ನಯಜ್ಞಕೃಚ್ಛ್ವೇತೋ ರಾಜಾ ಕ್ಷುದ್ವಿನಿವರ್ತನಮ್ ॥ ೨೨ ॥

**ಕುರ್ವನ್ ಸ್ವಮಾಂಸೈರ್ಧಾತ್ರೋಕ್ತೋ**
**ಮಾಲಾಂ ರಾಮಾರ್ಥಮರ್ಪಯತ್ ।**
**ಅಗಸ್ತ್ಯಾಯ ನ ಸಾಕ್ಷಾತ್ ತು**
**ರಾಮೇ ದದ್ಯಾದಯಂ ನೃಪಃ ॥ ೨೩ ॥**

ಪದಚ್ಛೇದ : ಶ್ವೇತದತ್ತಾಂ ತಥಾ ಮಾಲಾಂ ಅಗಸ್ತ್ಯಾತ್ ಆಪ ರಾಘವಃ । ಅನನ್ನಯಜ್ಞಕೃತ್ ಶ್ವೇತಃ ರಾಜಾ ಕ್ಷುದ್ವಿನಿರ್ವರ್ತನಮ್ ॥ ಕುರ್ವನ್ ಸ್ವಮಾಂಸೈಃ ಧಾತ್ರಾ ಉಕ್ತಃ ಮಾಲಾಂ ರಾಮಾರ್ಥಮ್ ಅರ್ಪಯತ್ । ಅಗಸ್ತ್ಯಾಯ ನ ಸಾಕ್ಷಾತ್ ತು ರಾಮೇ ದದ್ಯಾತ್ ಅಯಂ ನೃಪಃ ॥

**ಅರ್ಥ** :- **ತಥಾ** ಹಾಗೆಯೇ **ರಾಘವಃ** ಶ್ರೀರಾಮಚಂದ್ರನು **ಶ್ವೇತದತ್ತಾಂ** ಶ್ವೇತರಾಜನು ನೀಡಿದನು **ಮಾಲಾಂ** ಮಾಲೆಯನ್ನು **ಅಗಸ್ತ್ಯಾತ್** ಅಗಸ್ತ್ಯರಿಂದ **ಆಪ** ಹೊಂದಿದನು. **ಅನನ್ನಯಜ್ಞಕೃತ್** ಅನ್ನದಾನವಿಲ್ಲದೆ ಯಜ್ಞವನ್ನು ಮಾಡುತ್ತಿದ್ದ **ಶ್ವೇತಃ** ಶ್ವೇತನೆಂಬ **ರಾಜಾ** ರಾಜನು **ಕ್ಷುದ್ವಿನಿವರ್ತನಂ** ಹಸಿವಿನ ಬಾಧೆಯ ಪರಿಹಾರವನ್ನು **ಸ್ವಮಾಂಸೈಃ** ತನ್ನ ಮಾಂಸದಿಂದಲೇ **ಕುರ್ವನ್** ಮಾಡಿಕೊಳ್ಳುತ್ತಿದ್ದ **ಅಯಂ ನೃಪಃ** ಈ ರಾಜನು **ಸಾಕ್ಷಾತ್** ತಾನಾಗಿಯೇ **ರಾಮೇ** ಶ್ರೀರಾಮಚಂದ್ರನಲ್ಲಿ **ನ ದದ್ಯಾತ್** ಮಾಲೆಯನ್ನು ಕೊಡದಿರಲಿ **ಇತಿ** ಎಂದು **ಧಾತ್ರೋಕ್ತಃ** ಬ್ರಹ್ಮನಿಂದ ಹೇಳಲ್ಪಟ್ಟವನಾಗಿ **ರಾಮಾರ್ಥಂ** ರಾಮನಿಗೋಸ್ಕರ **ಮಾಲಾಂ** ಮಾಲೆಯನ್ನು **ಅಗಸ್ತ್ಯಾಯ** ಅಗಸ್ತ್ಯರ ಕೈಯಲ್ಲಿ **ಅರ್ಪಯತ್** ನೀಡಿದನು.

**ತಾತ್ಪರ್ಯ** :- ಶ್ವೇತರಾಜನು ಅಗಸ್ತ್ಯ ಋಷಿಗಳ ಮುಖಾಂತರ ನೀಡಿದ ಹಾರವನ್ನು ಶ್ರೀರಾಮಚಂದ್ರನು ಸ್ವೀಕರಿಸಿದ. ಅದು ಹೇಗೆಂದರೆ, ಶ್ವೇತರಾಜನು ಅನ್ನದಾನ ಮಾಡದೆ ಯಜ್ಞಗಳನ್ನು ಮಾಡುತ್ತಿದ್ದ. ಆದ್ದರಿಂದ ತನ್ನ ಹಸಿವಿನ ಬಾಧೆಯ ಪರಿಹಾರಕ್ಕಾಗಿ ತನ್ನ ದೇಹದ ಮಾಂಸವನ್ನೇ ತಿನ್ನ ಬೇಕಾಗುತ್ತಿತ್ತು.

**ಕ್ಷುದಭಾವಮಾತ್ರಫಲದಂ ನ ಸಾಕ್ಷಾದ್ರಾಘವೇಽರ್ಪಿತಮ್ ।**
**ಕ್ಷುದಭಾವಮಾತ್ರಮಾಕಾಂಕ್ಷನ್ ಮಾಮಸೌ ಪರಿಪೃಚ್ಛತಿ ॥ ೨೪ ॥**

**ವ್ಯವಧಾನತಸ್ತತೋ ರಾಮೇ ದದ್ಯಾಚ್ಛ್ವೇತ ಇತಿ ಪ್ರಭುಃ ।**
**ಮತ್ವಾ ಬ್ರಹ್ಮಾऽದಿಶನ್ಮಾಲಾಂ ಪ್ರದಾತುಂ ಕುಂಭಯೋನಯೇ ॥ ೨೫ ॥**

ಪದಚ್ಛೇದ : ಕ್ಷುದಭಾವಮಾತ್ರಫಲದಂ ನ ಸಾಕ್ಷಾತ್ ರಾಘವೇ ಅರ್ಪಿತಮ್। ಕ್ಷುದಭಾವಮಾತ್ರಂ ಆಕಾಂಕ್ಷನ್ ಮಾಂ ಅಸೌ ಪರಿಪೃಚ್ಛತಿ ॥ ವ್ಯವಧಾನತಃ ತತಃ ರಾಮೇ ದದ್ಯಾತ್ ಶ್ವೇತಃ ಇತಿ ಪ್ರಭುಃ । ಮತ್ವಾ ಬ್ರಹ್ಮಾ ಆದಿಶತ್ ಮಾಲಾಂ ಪ್ರದಾತುಂ ಕುಂಭಯೋನಯೇ ॥

**ಅರ್ಥ** :- **ಸಾಕ್ಷಾತ್** ತಾನಾಗಿಯೇ **ರಾಘವೇ** ರಾಮಚಂದ್ರನಲ್ಲಿ **ಅರ್ಪಿತಃ** ಅರ್ಪಿಸಿದ ಈ ಮಾಲೆಯು **ಕ್ಷುದಭಾವಮಾತ್ರಫಲದಂ** ಕೇವಲ ಹಸಿವೆಯ ಸಂಕಟ ಪರಿಹರಿಸುವುದು **ನ** ಅಲ್ಲ **ಅಸೌ** ಆ ರಾಜನಾದರೂ **ಕ್ಷುದಭಾವಮಾತ್ರಂ** ಕೇವಲ ಹಸಿವಿನ ಪರಿಹಾರವನ್ನು **ಆಕಾಂಕ್ಷನ್** ಅಪೇಕ್ಷಿಸುವವನಾಗಿ **ಮಾಂ** ನನ್ನನ್ನು **ಪರಿಪೃಚ್ಛತಿ** ಕೇಳುತ್ತಿದ್ದಾನೆ. **ತತಃ** ಆದ್ದರಿಂದ **ವ್ಯವಧಾನತಃ** ಒಬ್ಬ ವ್ಯಕ್ತಿಯ ಮೂಲಕವೇ **ಶ್ವೇತಃ** ಶ್ವೇತರಾಜನು **ರಾಮೇ** ರಾಮನಲ್ಲಿ **ದದ್ಯಾತ್** ಕೊಡಲಿ **ಇತಿ** ಎಂದು **ಪ್ರಭುಃ** ಪೂಜ್ಯನಾದ **ಬ್ರಹ್ಮಾ** ಚತುರ್ಮುಖ ಬ್ರಹ್ಮನು **ಮತ್ವಾ** ತಿಳಿದು **ಮಾಲಾಂ** ಮಾಲೆಯನ್ನು **ಕುಂಭಯೋನಯೇ** ಅಗಸ್ತ್ಯರಿಗೆ **ಪ್ರದಾತುಂ** ಕೊಡಲು **ಆದಿಶತ್** ಆಜ್ಞಾಪಿಸಿದ.

**ತಾತ್ಪರ್ಯ** :- ಅನಂತರ ಬ್ರಹ್ಮದೇವರ ಆದೇಶದಂತೆ ಶ್ವೇತರಾಜನು ಆ ಹಾರವನ್ನು ಶ್ರೀರಾಮನಿಗೆ ನೀಡಲೆಂದು ಅಗಸ್ತ್ಯರಿಗೆ ಕೊಟ್ಟನು. ಏಕೆಂದರೆ, ನೇರವಾಗಿ ತಾನೇ ಆ ಹಾರವನ್ನು ಶ್ರೀರಾಮನಿಗೆ ಅರ್ಪಿಸಿದರೆ, ಅದು ಕೇವಲ ಹಸಿವಿನ ಬಾಧೆಯ ಪರಿಹಾರಕ್ಕೆ ಮಾತ್ರವೇ ಕಾರಣವಾಗದೇ ಇನ್ನೂ ಅನೇಕ ಉತ್ಕೃಷ್ಟ ಫಲಗಳನ್ನು ನೀಡುತ್ತಿತ್ತು. ''ಶ್ವೇತರಾಜ ಹಸಿವಿನ ಬಾಧೆಯ ಪರಿಹಾರವನ್ನು ಮಾತ್ರ ನನ್ನ ಹತ್ತಿರ ಪ್ರಾರ್ಥಿಸುತ್ತಿದ್ದಾನೆ. ಆದ್ದರಿಂದ ಇವನು ಇನ್ನೊಬ್ಬರ ಮೂಲಕವೇ ಹಾರವನ್ನು ಶ್ರೀರಾಮನಿಗೆ ಅರ್ಪಿಸಬೇಕು'' ಹೀಗೆ ಬ್ರಹ್ಮದೇವರು ಆಲೋಚಿಸಿ ಹಾರವನ್ನು ಅಗಸ್ತ್ಯರ ಕೈಗೆ ಕೊಡಲು ಅವನಿಗೆ ಆಜ್ಞಾಪಿಸಿದರು.

**ತಾಮಗಸ್ತ್ಯಕರಪಲ್ಲವಾರ್ಪಿತಾಂ**
**ಭಕ್ತ ಏಷ ಮಮ ಕುಂಭಸಂಭವಃ ।**
**ಇತ್ಯವೇತ್ಯ ಜಗೃಹೇ ಜನಾರ್ದನ**
**ಸ್ತೇನ ಸಂಸ್ತುತ ಉಪಾಗಮತ್ ಪುರಮ್ ॥ ೨೬ ॥**

ಪದಚ್ಛೇದ : ತಾಂ ಅಗಸ್ತ್ಯಕರಪಲ್ಲವಾರ್ಪಿತಾಂ ಭಕ್ತಃ ಏಷಃ ಮಮ ಕುಂಭಸಂಭವಃ । ಇತಿ ಅವೇತ್ಯ ಜಗೃಹೇ ಜನಾರ್ದನಃ ತೇನ ಸಂಸ್ತುತಃ ಉಪಾಗಮತ್ ಪುರಮ್ ॥

**ಅರ್ಥ** :- ಏಷಃ ಈ ಕುಂಭಸಂಭವಃ ಅಗಸ್ತ್ಯನು ಮಮ ನನ್ನ ಭಕ್ತಃ ಭಕ್ತನು ಇತಿ ಎಂದು ಅವೇತ್ಯ ತಿಳಿದು ಜನಾರ್ದನಃ ಶ್ರೀರಾಮನು ಅಗಸ್ತ್ಯ ಕರಪಲ್ಲವಾರ್ಪಿತಾಂ ಅಗಸ್ತ್ಯರ ಕರಪಲ್ಲವದಿಂದ ಸಮರ್ಪಿತವಾದ ತಾಂ ಆ ಮಾಲೆಯನ್ನು ಜಗೃಹೇ ಸ್ವೀಕರಿಸಿದನು. ತೇನ ಆ ಅಗಸ್ತ್ಯನಿಂದ ಸಂಸ್ತುತಃ ಸ್ತುತಿಸಲ್ಪಟ್ಟನಾಗಿ ಪುರಂ ತನ್ನ ಪಟ್ಟಣವನ್ನು ಕುರಿತು ಉಪಾಗಮತ್ ಬಂದನು.

**ತಾತ್ಪರ್ಯ** :- ಈ ಅಗಸ್ತ್ಯರು ತನ್ನ ಭಕ್ತರು ಎಂದು ತಿಳಿದು ಶ್ರೀರಾಮ ಚಂದ್ರನು ಅಗಸ್ತ್ಯರ ಕರಪಲ್ಲವದಿಂದ ಸಮರ್ಪಿತವಾದ ಆ ಮಾಲೆಯನ್ನು ಸ್ವೀಕರಿಸಿದನು. ಅನಂತರ, ಅಗಸ್ತ್ಯರಿಂದ ಬಹಳವಾಗಿ ಸ್ತೋತ್ರ ಮಾಡಲ್ಪಟ್ಟವ ನಾಗಿ ಅಯೋಧ್ಯೆಗೆ ಹಿಂತಿರುಗಿದ.

### ಸೀತಾ ಪರಿತ್ಯಾಗ

**ಅಥ ಕೇಚಿದಾಸುರಸುರಾಃ ಸುರಾಣಕಾ**
**ಇತ್ಯುರುಪ್ರಥಿತಪೌರುಷಾಃ ಪುರಾ ।**
**ತೇ ತಪಃ ಸುಮಹದಾಸ್ಥಿತಾ ವಿಭುಂ**
**ಪದ್ಮಸಂಭವಮವೇಕ್ಷ್ಯ ಚೋಚಿರೇ ॥ ೨೭ ॥**

ಪದಚ್ಛೇದ : ಅಥ ಕೇಚಿತ್ ಆಸುಃ ಅಸುರಾಃ ಸುರಾಣಕಾಃ ಇತಿ ಉರುಪ್ರಥಿತ ಪೌರುಷಾಃ ಪುರಾ । ತೇ ತಪಃ ಸುಮಹತ್ ಆಸ್ಥಿತಾಃ ವಿಭುಂ ಪದ್ಮಸಂಭವಂ ಅವೇಕ್ಷ್ಯ ಚ ಊಚಿರೇ ॥

**ಅರ್ಥ** :- ಅಥ ಅನಂತರ ಪುರಾ ಹಿಂದೆ ಉರುಪ್ರಥಿತಪೌರುಷಾಃ ಬಹಳ ಪ್ರಸಿದ್ಧ ಪರಾಕ್ರಮಿಗಳಾದ ಸುರಾಣಕಾಃ ಸುರಾಣಕರೆಂಬ ಕೇಚಿತ್ ಕೆಲವು ಅಸುರಾಃ ದೈತ್ಯರು ಆಸುಃ ಇದ್ದರು. ತೇ ಅವರು ಸುಮಹತ್ ಬಹಳ ತಪಃ ತಪಸ್ಸನ್ನು ಆಸ್ಥಿತಾಃ ಮಾಡಿದವರಾಗಿ ವಿಭುಂ ಸಮರ್ಥನಾದ ಪದ್ಮ ಸಂಭವಂ ಬ್ರಹ್ಮ ದೇವನನ್ನು ಅವೇತ್ಯ ಹೊಂದಿ ಊಚಿರೇ ಚ ಹೇಳಿದರು.

**ತಾತ್ಪರ್ಯ** :- ಹಿಂದೆ ಬಹಳ ಪ್ರಸಿದ್ಧವಾದ ಪರಾಕ್ರಮವುಳ್ಳ ಸುರಾಣಕ ರೆಂಬ ಹೆಸರುಳ್ಳ ರಾಕ್ಷಸರು ಇದ್ದರು. ಅವರು ಬಹಳ ಉಗ್ರವಾದ ತಪಸ್ಸನ್ನು

ಮಾಡಿದರು. ಆದರ ಫಲವಾಗಿ ಚತುರ್ಮುಖ ಬ್ರಹ್ಮದೇವರು ಪ್ರತ್ಯಕ್ಷರಾದಾಗ ವರ ಕೇಳಿಕೊಂಡರು.

ಭೂರಿಪಾಪಕೃತಿನೋಽಪಿ ನಿಶ್ಚಯಾ
ನ್ಮುಕ್ತಿಮಾಪ್ನುಮ ಉದಾರಸದ್ಗುಣ ।
ಇತ್ಯುದೀರಿತಮಜೋಽವಧಾರ್ಯ ತಾನ್
ಪ್ರಾಹ ಚ ಪ್ರಹಸಿತಾನನಃ ಪ್ರಭುಃ ॥ ೨೮ ॥

ಪದಚ್ಛೇದ : ಭೂರಿಪಾಪಕೃತಿನಃ ಅಪಿ ನಿಶ್ಚಯಾತ್ ಮುಕ್ತಿಂ ಆಪ್ನುಮಃ ಉದಾರಸದ್ಗುಣ। ಇತಿ ಉದೀರಿತಂ ಅಜಃ ಅವಧಾರ್ಯ ತಾನ್ ಪ್ರಾಹ ಚ ಪ್ರಹಸಿತಾನನಃ ಪ್ರಭುಃ ॥

**ಅರ್ಥ** :- **ಉದಾರಸದ್ಗುಣ** ಉತ್ಕೃಷ್ಟ ಸದ್ಗುಣಶಾಲಿಯೇ **ಭೂರಿಪಾಪ ಕೃತಿನೋಽಪಿ** ನಾವು ಬಹಳ ಪಾಪ ಮಾಡಿದರೂ **ನಿಶ್ಚಯಾತ್** ಖಂಡಿತ ವಾಗಿಯೂ **ಮುಕ್ತಿಂ** ಮೋಕ್ಷವನ್ನು **ಆಪ್ನುಮಃ** ಹೊಂದಬೇಕು. **ಇತಿ** ಈ ರೀತಿಯಾಗಿ **ಉದೀರಿತಂ** ಹೇಳಿದುದನ್ನು **ಅಜಃ** ಬ್ರಹ್ಮದೇವನು **ಅವಧಾರ್ಯ** ಕೇಳಿ **ಪ್ರಹಸಿತಾನನಃ** ನಗುಮುಖವುಳ್ಳವನಾಗಿ **ತಾನ್** ಅವರನ್ನು ಕುರಿತು **ಪ್ರಾಹ** ಹೇಳಿದನು.

**ತಾತ್ಪರ್ಯ** :- "ಶ್ರೇಷ್ಠವಾದ ಒಳ್ಳೆಯ ಗುಣಗಳುಳ್ಳ ಚತುರ್ಮುಖ ಬ್ರಹ್ಮ ದೇವರೆ! ನಾವು ಬಹಳ ಪಾಪಗಳನ್ನು ಮಾಡಿದರೂ ನಿಶ್ಚಿತವಾಗಿ ಮುಕ್ತಿ ಪಡೆಯುವಂತೆ ಆಗಲೇಬೇಕು." ಸರ್ವಸಮರ್ಥಬ್ರಹ್ಮದೇವರು ಹೀಗೆ ಹೇಳಿದುದನ್ನು ಕೇಳಿ ನಗುಮುಖದಿಂದ ನುಡಿದರು.

ಯಾವದೇವ ರಮಯಾ ರಮೇಶ್ವರಂ
ನೋ ವಿಯೋಜಯಥ ಸದ್ಗುಣಾರ್ಣವಮ್ ।
ತಾವದುಚ್ಚಮಪಿ ದುಷ್ಕೃತಂ ಭವ
ನ್ಮೋಕ್ಷಮಾರ್ಗಪರಿಪಂಥಿ ನೋ ಭವೇತ್ ॥ ೨೯ ॥

ಪದಚ್ಛೇದ : ಯಾವತ್ ಏವ ರಮಯಾ ರಮೇಶ್ವರಂ ನೋ ವಿಯೋಜಯಥ ಸದ್ಗುಣಾರ್ಣವಮ್ । ತಾವತ್ ಉಚ್ಚಮ್ ಅಪಿ ದುಷ್ಕೃತಂ ಭವತ್ ಮೋಕ್ಷ ಮಾರ್ಗಪರಿಪಂಥಿ ನೋ ಭವೇತ್ ॥

**ಅರ್ಥ :- ಯೂಯಂ** ನೀವು **ಯಾವದೇವ** ಎಂದಿನವರೆಗೆ **ಸದ್ಗುಣಾರ್ಣವಂ** ಸದ್ಗುಣಸಾಗರನಾದ **ರಮೇಶ್ವರಂ** ಶ್ರೀಮನ್ನಾರಾಯಣನನ್ನು **ರಮಯಾ** ಲಕ್ಷ್ಮೀದೇವಿಯಿಂದ **ನೋ ವಿಯೋಜಯಥ** ಅಗಲಿಸುವುದಿಲ್ಲವೋ **ತಾವತ್** ಅಂದಿನವರೆಗೂ **ಉಚ್ಚಂ** ದೊಡ್ಡದಾದ **ಪಾಪಮಪಿ** ಪಾಪವೂ **ಭವನ್ಮೋಕ್ಷ ಮಾರ್ಗಪರಿಪಂಥಿ ಭವತ್** ನಿಮ್ಮ **ಮೋಕ್ಷಮಾರ್ಗ** ಮೋಕ್ಷ ಮಾರ್ಗಕ್ಕೆ **ಪರಿಪಂಥಿ** ಪ್ರತಿಬಂಧಕವಾದದ್ದು **ನೋ ಭವೇತ್** ಆಗುವುದಿಲ್ಲ.

**ತಾತ್ಪರ್ಯ :-** ''ಎಲ್ಲಿಯವರೆಗೆ ನೀವು ಸದ್ಗುಣಸಾಗರನಾದ ಶ್ರೀಮನ್ನಾರಾಯಣನನ್ನು ಲಕ್ಷ್ಮೀದೇವಿಯಿಂದ ಅಗಲಿಸುವುದಿಲ್ಲವೋ, ಅಲ್ಲಿಯ ವರೆಗೆ ಎಂತಹ ದೊಡ್ಡ ಪಾಪವನ್ನು ಮಾಡಿದರೂ, ನಿಮಗೆ ಮುಕ್ತಿ ದೊರಕದು.''

**ಇತ್ಯುದೀರಿತಮವೇತ್ಯ ತೇಽಸುರಾಃ**
**ಕ್ಷಿಪ್ರಮೋಕ್ಷಗಮನೋತ್ಸುಕಾಃ ಕ್ಷಿತೌ ।**
**ಸಾಧನೋಪಚಯಕಾಂಕ್ಷಿಣೋ ಹರೌ**
**ಶಾಸತಿ ಕ್ಷಿತಿಮಶೇಷತೋಽಭವನ್ ॥ ೩೦ ॥**

ಪದಚ್ಛೇದ : **ಇತಿ ಉದೀರಿತಂ ಅವೇತ್ಯ ತೇ ಅಸುರಾಃ ಕ್ಷಿಪ್ರಮೋಕ್ಷಗಮ ನೋತ್ಸುಕಾಃ ಕ್ಷಿತೌ । ಸಾಧನೋಪಚಯಕಾಂಕ್ಷಿಣಃ ಹರೌ ಶಾಸತಿ ಕ್ಷಿತಿಂ ಅಶೇಷತಃ ಅಭವನ್ ॥**

**ಅರ್ಥ :- ಇತಿ** ಈ ರೀತಿಯಾಗಿ **ಉದೀರಿತಂ** ಬ್ರಹ್ಮನಿಂದ ಹೇಳಲ್ಪಟ್ಟಿದ್ದನ್ನು **ಅವೇತ್ಯ** ತಿಳಿದು **ತೇ ಅಸುರಾಃ** ರಾಕ್ಷಸರು **ಕ್ಷಿಪ್ರಮೋಕ್ಷ ಗಮನೋತ್ಸುಕಾಃ ಕ್ಷಿಪ್ರ** ಕೂಡಲೇ **ಮೋಕ್ಷಗಮನ** ಮೋಕ್ಷಕ್ಕೆ ಹೋಗುವುದರಲ್ಲಿ **ಉತ್ಸುಕಾಃ** ಅಪೇಕ್ಷೆ ಯುಳ್ಳವರಾಗಿ **ಕ್ಷಿತೌ** ಭೂಮಿಯಲ್ಲಿ **ಸಾಧನೋಪಚಯಕಾಂಕ್ಷಿಣಃ** ಹೆಚ್ಚಿನ ಸಾಧನಾನುಷ್ಠಾನ ಮಾಡುವ ಇಚ್ಛೆಯಿಂದ **ಹರೌ** ವಿಷ್ಣುವಿನ ಅವತಾರ ರೂಪನಾದ ಶ್ರೀರಾಮಚಂದ್ರನು **ಕ್ಷಿತಿಂ** ಭೂಮಿಯನ್ನು **ಶಾಸತಿ** ರಕ್ಷಿಸುತ್ತಿರಲು **ಅಶೇಷತಃ** ಎಲ್ಲರೂ **ಅಭವನ್** ಹುಟ್ಟಿದರು.

**ತಾತ್ಪರ್ಯ :-** ಚತುರ್ಮುಖಬ್ರಹ್ಮದೇವರು ಹೀಗೆ ಹೇಳಿದ್ದನ್ನು ಕೇಳಿ, ಆ ಅಸುರರೆಲ್ಲ ಕೂಡಲೇ ಮೋಕ್ಷಕ್ಕೆ ಹೋಗುವ ಅಪೇಕ್ಷೆಯುಳ್ಳವರಾಗಿ, ಮೋಕ್ಷಕ್ಕೆ ಹೆಚ್ಚು ಸಾಧನವಾಗಲೆಂದು ಬಯಸಿ ಭೂಮಿಯಲ್ಲಿ, ಹುಟ್ಟಿದರು. ಆಗ ಶ್ರೀರಾಮನು ಭೂಮಿಯನ್ನು ಪಾಲಿಸುತ್ತಿದ್ದನು.

ತಾನನಾದಿಕೃತದೋಷಸಂಚಯೈ

ರ್ಮೋಕ್ಷಮಾರ್ಗಗತಿಯೋಗ್ಯತೋಜ್ಝಿತಾನ್ ।

ಮೈಥಿಲಸ್ಯ ತನಯಾ ವ್ಯಚಾಲಯತ್

ಮಾಯಯಾ ಸ್ವತನುವಾ ಸ್ವಮಾರ್ಗತಃ ॥ ೩೧ ॥

ಪದಚ್ಛೇದ : ತಾನ್ ಅನಾದಿಕೃತದೋಷಸಂಚಯೈಃ ಮೋಕ್ಷಮಾರ್ಗ ಗತಿಯೋಗ್ಯತೋಜ್ಝಿತಾನ್ । ಮೈಥಿಲಸ್ಯ ತನಯಾ ವ್ಯಚಾಲಯತ್ ಮಾಯಯಾ ಸ್ವತನುವಾ ಸ್ವಮಾರ್ಗತಃ ॥

**ಅರ್ಥ** :- **ಅನಾದಿಕೃತದೋಷಸಂಚಯೈಃ** ಅನಾದಿಕಾಲದಿಂದ ಮಾಡಿದ ಪಾಪ ರಾಶಿಗಳಿಂದ **ಮೋಕ್ಷಮಾರ್ಗಗತಿಯೋಗ್ಯತೋಜ್ಝಿತಾನ್** ಮೋಕ್ಷ ಮಾರ್ಗ ಮೋಕ್ಷಮಾರ್ಗದಲ್ಲಿ ಗತಿ ಮುನ್ನಡೆಯಲು **ಯೋಗ್ಯತೋಜ್ಝಿತಾನ್** ಯೋಗ್ಯತೆಯಿಲ್ಲದ **ತಾನ್** ಆ ಅಸುರರನ್ನು **ಮೈಥಿಲಸ್ಯ** ಜನಕರಾಜನ **ತನಯಾ** ಮಗಳಾದ ಸೀತೆಯು **ಸ್ವತನುವಾ** ತನ್ನ ಸ್ವರೂಪಭೂತವಾದ **ಮಾಯಯಾ** ಮಾಯೆಯಿಂದ **ಸ್ವಮಾರ್ಗತಃ** ತತ್ತ್ವಜ್ಞಾನಮಾರ್ಗದಿಂದ **ವ್ಯಚಾಲಯತ್** ಚ್ಯುತರನ್ನಾಗಿ ಮಾಡಿದಳು.

**ತಾತ್ಪರ್ಯ** :- ಅನಾದಿಕಾಲದಿಂದ ಮಾಡಿದ ಪಾಪಗಳ ರಾಶಿಯಿಂದ ಮೋಕ್ಷವನ್ನು ಹೊಂದಲು ಯೋಗ್ಯತೆಯಿಲ್ಲದ ಅಸುರರನ್ನು ಸೀತಾ ದೇವಿಯು ತನ್ನ ಸ್ವರೂಪವೇ ಆಗಿದ್ದ ಮಾಯೆಯಿಂದ ಮೋಹಿತರನ್ನಾಗಿಸಿ, ಜ್ಞಾನಮಾರ್ಗ ದಿಂದ ಚ್ಯುತರನ್ನಾಗಿ ಮಾಡಿದಳು.

ಆಜ್ಞಯೈವ ಹಿ ಹರೇಸ್ತು ಮಾಯಯಾ

ಮೋಹಿತಾಸ್ತು ದಿತಿಜಾ ವ್ಯನಿಂದಯನ್ ।

ರಾಘವೋ ನಿಶಿಚರಾಹೃತಾಂ ಪುನ

ರ್ಜಾನಕೀಂ ಜಗೃಹ ಇತ್ಯನೇಕಶಃ ॥ ೩೨ ॥

ಪದಚ್ಛೇದ : ಆಜ್ಞಯಾ ಏವ ಹಿ ಹರೇಃ ತು ಮಾಯಯಾ ಮೋಹಿತಾಃ ತು ದಿತಿಜಾಃ ವ್ಯನಿಂದಯನ್ । ರಾಘವಃ ನಿಶಿಚರಾಹೃತಾಂ ಪುನಃ ಜಾನಕೀಂ ಜಗೃಹೇ ಇತಿ ಅನೇಕಶಃ ॥

**ಅರ್ಥ** :- **ಹರೇಃ** ಶ್ರೀಹರಿಯ **ಆಜ್ಞಯೈವ** ಆದೇಶದಿಂದಲೇ **ಮಾಯಯಾ** ಮಾಯೆಯಿಂದ **ಮೋಹಿತಾಂ** ಮೋಹಿತರಾದ **ದಿತಿಜಾಃ** ಅಸುರರು **ರಾಘವಃ** ಶ್ರೀರಾಮಚಂದ್ರನು **ನಿಶಿಚರಾಹೃತಾಂ** ರಾಕ್ಷಸರಿಂದ ಅಪಹರಿಸಲ್ಪಟ್ಟ **ಜಾನಕೀಂ** ಸೀತೆಯನ್ನು **ಪುನಃ** ಮತ್ತೊಮ್ಮೆ **ಜಗೃಹೇ** ಸ್ವೀಕರಿಸಿದನು. **ಇತಿ** ಈ ರೀತಿಯಾಗಿ **ಅನೇಕಶಃ** ಬಹಳವಾಗಿ **ವ್ಯನಿಂದಯನ್** ನಿಂದಿಸಿದರು.

**ತಾತ್ಪರ್ಯ** :- ಭಗವಂತನ ಅಪ್ಪಣೆಯಿಂದಲೇ ಅಜ್ಞಾನದ ಅಭಿಮಾನಿ ಯಾದ ದುರ್ಗೆಯು ಅಸುರರನ್ನು ಮೋಹಿತರನ್ನಾಗಿ ಮಾಡಿದಳು. ಹೀಗೆ ಮೋಹಿತರಾದ ಆ ಅಸುರರು ಶ್ರೀರಾಮನನ್ನು "ರಾಕ್ಷಸರು ಅಪಹರಿಸಿದ ಸೀತೆಯನ್ನು ಮರಳಿ ಸ್ವೀಕರಿಸಿದನು" ಎಂದು ಅನೇಕ ರೀತಿಯಿಂದ ನಿಂದಿಸ ತೊಡಗಿದರು.

**ಬ್ರಹ್ಮವಾಕ್ಯಮೃತಮೇವ ಕಾರಯನ್**
**ಪಾತಯಂಸ್ತಮಸಿ ಚಾಂಧ ಆಸುರಾನ್ ।**
**ನಿತ್ಯಮೇವ ಸಹಿತೋऽಪಿ ಸೀತಯಾ**
**ಸೋऽಜ್ಞಸಾಕ್ಷಿಕಮಭೂದ್ವಿಯುಕ್ತವತ್ ॥ ೩೩ ॥**

**ಪದಚ್ಛೇದ** : ಬ್ರಹ್ಮವಾಕ್ಯಂ ಋತಂ ಏವ ಕಾರಯನ್ ಪಾತಯನ್ ತಮಸಿ ಚ ಅಂಧೇ ಆಸುರಾನ್ । ನಿತ್ಯಂ ಏವ ಸಹಿತಃ ಅಪಿ ಸೀತಯಾ ಸಃ ಅಜ್ಞಸಾಕ್ಷಿಕಂ ಅಭೂತ್ ವಿಯುಕ್ತವತ್ ॥

**ಅರ್ಥ** :- **ಸಃ** ರಾಮಚಂದ್ರನು **ಬ್ರಹ್ಮವಾಕ್ಯಂ** ಬ್ರಹ್ಮನ ಮಾತನ್ನು **ಋತ ಮೇವ** ಸತ್ಯವನ್ನಾಗಿ **ಕಾರಯನ್** ಮಾಡುವವನಾಗಿ **ಅಸುರಾನ್** ದೈತ್ಯರನ್ನು **ಅಂಧೇ ತಮಸಿ** ಅಂಧಂತಮಸ್ಸಿನಲ್ಲಿ **ಪಾತಯನ್** ಕಳುಹಿಸುವವನಾಗಿ **ನಿತ್ಯ ಮೇವ** ಯಾವಾಗಲೂ **ಸೀತಯಾ** ಸೀತೆಯಿಂದ **ಸಹಿತೋऽಪಿ** ಕೂಡಿದವ ನಾದರೂ **ಅಜ್ಞಸಾಕ್ಷಿಕಂ** ಅಜ್ಞರ ದೃಷ್ಟಿಗೆ **ವಿಯುಕ್ತವತ್** ವಿಯೋಗ ಹೊಂದಿದವ ನಂತೆ **ಅಭೂತ್** ಆದನು.

**ತಾತ್ಪರ್ಯ** :- ಚತುರ್ಮುಖ ಬ್ರಹ್ಮದೇವರ ಮಾತನ್ನು ಸತ್ಯ ಮಾಡಲೆಂದು ಮತ್ತು ಆ ದೈತ್ಯರನ್ನು ಅಂಧಂತಮಸ್ಸಿನಲ್ಲಿ ಹಾಕುವುದಕ್ಕೆಂದು ಅಜ್ಞ ಜನರ ದೃಷ್ಟಿಯಲ್ಲಿ ವಿಯೋಗ ಹೊಂದಿದವನಂತೆ ಶ್ರೀರಾಮನು ತೋರ್ಪಡಿಸಿಕೊಂಡನು.

ಆದರೆ, ವಸ್ತುತಃ ಯಾವಾಗಲೂ ಸೀತೆಯು ರಾಮನೊಂದಿಗೆ ಅವಿಯೋಗಿನಿಯಾಗಿರುತ್ತಾಳೆ.

**ತೇನ ಚಾಂಧತಮ ಈಯುರಾಸುರಾ**
**ಯಜ್ಞಮಾಹ್ವಯದಸೌ ಚ ಮೈಥಿಲೀಮ್ ।**
**ತತ್ರ ಭೂಮಿಶಪಥಚ್ಛಲಾನ್ನೃಣಾಂ**
**ದೃಷ್ಟಿಮಾರ್ಗಮಪಹಾಯ ಸಾ ಸ್ಥಿತಾ ॥ ೩೪ ॥**

ಪದಚ್ಛೇದ : ತೇನ ಚ ಅಂಧತಮಃ ಈಯುಃ ಆಸುರಾಃ ಯಜ್ಞಂ ಆಹ್ವಯತ್ ಅಸೌ ಚ ಮೈಥಿಲೀಮ್ । ತತ್ರ ಭೂಮಿಶಪಥಚ್ಛಲಾತ್ ನೃಣಾಂ ದೃಷ್ಟಿಮಾರ್ಗಂ ಅಪಹಾಯ ಸಾ ಸ್ಥಿತಾ ॥

**ಅರ್ಥ** :- **ತೇನ** ಆ ಕಾರಣದಿಂದ **ಆಸುರಾಃ** ಅಸುರಸಂತಾನರಾದ ರಾಕ್ಷಸರು **ಅಂಧಂತಮಃ** ಅಂಧಂತಮಸ್ಸನ್ನು **ಈಯುಃ** ಹೊಂದಿದರು. **ಅಸೌ ಚ** ಶ್ರೀರಾಮನಾದರೂ **ಮೈಥಿಲೀಂ** ಜಾನಕಿಯನ್ನು **ಯಜ್ಞಂ** ಯಾಗವನ್ನು ನಡೆಸಲು **ಆಹ್ವಯತ್** ಕರೆದನು. **ತತ್ರ** ಆ ಯಾಗಸ್ಥಳದಲ್ಲಿ **ಸಾ** ಸೀತಾದೇವಿಯು **ಭೂಮಿಶಪಥಚ್ಛಲಾತ್** ಭೂಮಿಯನ್ನು ಕುರಿತು ಶಪಥ ಮಾಡುವ ನೆಪದಿಂದ **ನೃಣಾಂ** ಜನರ **ದೃಷ್ಟಿಮಾರ್ಗಂ** ದೃಷ್ಟಿಗೆ ಗೋಚರವಾಗುವಿಕೆಯನ್ನು **ಅಪಹಾಯ** ತೊರೆದು **ಸ್ಥಿತಾ** ಇದ್ದಳು.

**ತಾತ್ಪರ್ಯ** :- ಈ ಕಾರಣದಿಂದ ಅಸುರರೆಲ್ಲ ಅಂಧಂತಮಸ್ಸನ್ನು ಹೊಂದಿದರು. ಅನಂತರ ಶ್ರೀರಾಮ ಯಾಗಕ್ಕೆ ಸೀತಾದೇವಿಯನ್ನು ಕರೆದನು. ಅಲ್ಲಿ ಭೂಮಿಯನ್ನು ಕುರಿತು ಮಾಡಿದ (ನಾನು ಲಂಕೆಯಲ್ಲಿ ಶುದ್ಧಚರಿತ್ರಳಾಗಿರುವುದು ಸತ್ಯವಾಗಿದ್ದಲ್ಲಿ ಆ ಸತ್ಯದಿಂದ ಭೂಮಿಯು ನನ್ನನ್ನು ನುಂಗಿಹಾಕಲಿ ಎಂಬ) ಶಪಥದ ನೆಪದಿಂದ ಸೀತಾದೇವಿಯು ಜನರ ಕಣ್ಣಿಗೆ ಗೋಚರವಾಗದಂತೆ ಶ್ರೀರಾಮನ ಜೊತೆಗೆ ಇದ್ದಳು.

### ಬ್ರಹ್ಮರುದ್ರಾದಿಗಳ ವರಗಳು : ಸಫಲ/ವಿಫಲ

**ಗುರುಂ ಹಿ ಜಗತೋ ವಿಷ್ಣುರ್ಬ್ರಹ್ಮಾಣಮಸೃಜತ್ ಸ್ವಯಮ್ ।**
**ತೇನ ತದ್ವಚನಂ ಸತ್ಸು ನಾನೃತಂ ಕುರುತೇ ಕ್ವಚಿತ್ ॥ ೩೫ ॥**

ಪದಚ್ಛೇದ : ಗುರುಂ ಹಿ ಜಗತಃ ವಿಷ್ಣುಃ ಬ್ರಹ್ಮಾಣಮ್ ಅಸೃಜತ್ ಸ್ವಯಮ್। ತೇನ ತದ್ವಚನಂ ಸತ್ಸು ನ ಅನೃತಂ ಕುರುತೇ ಕ್ವಚಿತ್ ॥

**ಅರ್ಥ** :- **ವಿಷ್ಣುಃ** ಪರಮಾತ್ಮನು **ಸ್ವಯಂ** ತಾನು **ಬ್ರಹ್ಮಾಣಂ** ಬ್ರಹ್ಮನನ್ನು **ಜಗತಃ** ಪ್ರಪಂಚಕ್ಕೆ **ಗುರುಂ ಹಿ** ಗುರುವನ್ನಾಗಿ **ಅಸೃಜತ್** ಸೃಷ್ಟಿ ಮಾಡಿದನು. **ತೇನ** ಆ ಕಾರಣದಿಂದ **ತದ್ವಚನಂ** ಬ್ರಹ್ಮನ ಮಾತನ್ನು **ಸತ್ಸು** ಸಜ್ಜನರಲ್ಲಿ **ಕ್ವಚಿತ್** ಎಲ್ಲಿಯೂ **ಅನೃತಂ** ಸುಳ್ಳನ್ನಾಗಿ **ನ ಕುರುತೇ** ಮಾಡುವುದಿಲ್ಲ.

**ತಾತ್ಪರ್ಯ** :- ವಿಷ್ಣುವು ಬ್ರಹ್ಮದೇವರನ್ನು ಜಗದ್ಗುರುವಾಗಿ ತಾನೇ ಸೃಷ್ಟಿ ಮಾಡಿದನು. ಆದ್ದರಿಂದ ಬ್ರಹ್ಮನ ಮಾತನ್ನು ಸಜ್ಜನರ ವಿಷಯದಲ್ಲಿ ಸುಳ್ಳಾಗಿಸುವುದಿಲ್ಲ.

**ನಾಸತ್ಸ್ವಪ್ಯನೃತಂ ಕುರ್ಯಾದ್ವಚನಂ ಪಾರಲೌಕಿಕಮ್ ।**
**ಐಹಿಕಂ ತ್ವಸುರೇಷ್ವೇವ ಕ್ವಚಿದ್ಧಂತಿ ಜನಾರ್ದನಃ ॥ ೩೬ ॥**

ಪದಚ್ಛೇದ : ನ ಅಸತ್ಸು ಅಪಿ ಅನೃತಂ ಕುರ್ಯಾತ್ ವಚನಂ ಪಾರಲೌಕಿಕಮ್ । ಐಹಿಕಂ ತು ಅಸುರೇಷು ಏವ ಕ್ವಚಿತ್ ಹಂತಿ ಜನಾರ್ದನಃ ॥

**ಅರ್ಥ** :- **ಪಾರಲೌಕಿಕಂ** ಪರಲೋಕಕ್ಕೆ ಸಂಬಂಧಿಸಿದ **ವಚನಂ** ಮಾತನ್ನು **ಅಸತ್ಸ್ವಪಿ** ದುರ್ಜನರಲ್ಲಿಯೂ **ಅನೃತಂ** ಸುಳ್ಳನ್ನು **ನ ಕುರ್ಯಾತ್** ಮಾಡುವುದಿಲ್ಲ. **ಜನಾರ್ದನಃ** ಪರಮಾತ್ಮನು **ಐಹಿಕಂ** ಈ ಲೋಕಕ್ಕೆ ಸಂಬಂಧಿಸಿದ ವರವನ್ನು **ಅಸುರೇಷ್ವೇವ** ದುರ್ಜನರಲ್ಲಿಯೇ **ಕ್ವಚಿತ್** ಕೆಲವೆಡೆ **ಹಂತಿ** ನಾಶ ಮಾಡುತ್ತಾನೆ.

**ತಾತ್ಪರ್ಯ** :- ಪರಲೋಕಸಂಬಂಧವಾದ (ಮೋಕ್ಷಕ್ಕೆ ಸಂಬಂಧಿಸಿದ) ಬ್ರಹ್ಮ ದೇವರ ಮಾತನ್ನು ಅಸತ್ಪುರುಷರ ವಿಷಯದಲ್ಲಿಯೂ ಪರಮಾತ್ಮನು ಎಂದೂ ಸುಳ್ಳು ಮಾಡುವುದಿಲ್ಲ. ಆದರೆ (ನೀನು ಅವಧ್ಯನಾಗು ಇತ್ಯಾದಿ ವರ ನೀಡಿದಾಗ) ಈ ಲೋಕಕ್ಕೆ ಸಂಬಂಧಿಸಿದ ವಿಷಯದಲ್ಲಿ ಕೆಲವೊಮ್ಮೆ ಸುಳ್ಳು ಮಾಡುತ್ತಾನೆ.

**ನಿಜಾಧಿಕ್ಯಸ್ಯ ವಿಜ್ಞಪ್ತ್ಯೈ ಕ್ವಚಿದ್ವಾಯುಸ್ತದಾಜ್ಞಯಾ ।**
**ಹಂತಿ ಬ್ರಹ್ಮತ್ವಮಾತ್ಮೀಯಮದ್ಧಾ ಜ್ಞಾಪಯಿತುಂ ಪ್ರಭುಃ ॥ ೩೭ ॥**

ಪದಚ್ಛೇದ : ನಿಜಾಧಿಕ್ಯಸ್ಯ ವಿಜ್ಞಪ್ತ್ಯೈ ಕ್ವಚಿತ್ ವಾಯುಃ ತದಾಜ್ಞಯಾ । ಹಂತಿ ಬ್ರಹ್ಮತ್ವಮ್ ಆತ್ಮೀಯಮ್ ಅದ್ಧಾ ಜ್ಞಾಪಯಿತುಂ ಪ್ರಭುಃ ॥

**ಅರ್ಥ** :- **ನಿಜಾಧಿಕಸ್ಯ** ತಾನು ಇತರ ದೇವತೆಗಳಿಗಿಂತ ಉತ್ತಮನೆಂದು **ವಿಜ್ಞಪ್ತ್ಯೈ** ತಿಳಿಸುವುದಕ್ಕಾಗಿ **ವಾಯುಃ** ವಾಯುದೇವನು **ತದಾಜ್ಞಯಾ** ವಿಷ್ಣುವಿನ ಅನುಜ್ಞೆಯಿಂದ **ಕ್ವಚಿತ್** ಕೆಲವೆಡೆ (ಬ್ರಹ್ಮನು ಅಸುರನಿಗೆ ಕೊಟ್ಟ ವರವನ್ನು) **ತಥಾ** ಹಾಗೆಯೇ **ಪ್ರಭುಃ** ವಾಯುದೇವನು **ಆತ್ಮೀಯಮ್** ತನಗೆ **ಬ್ರಹ್ಮತ್ವಂ** ಬ್ರಹ್ಮಪದವಿಯು **ಅದ್ಧಾ** ನಿಶ್ಚಿತವೆಂದು **ಜ್ಞಾಪಯಿತುಂ** ತಿಳಿಸಲು **ಹಂತಿ** ಬ್ರಹ್ಮನ ವರವನ್ನು ಫಲಕಾರಿಯಾಗದಂತೆ ಮಾಡುವನು.

**ತಾತ್ಪರ್ಯ** :- ತಾನು ಶೇಷಾದಿದೇವತೆಗಳಿಗಿಂತ ಉತ್ತಮನೆಂದು ತಿಳಿಸುವುದಕ್ಕಾಗಿ ಬ್ರಹ್ಮಪದವಿಗೆ ಯೋಗ್ಯನೆಂದು ತಿಳಿಸುವುದಕ್ಕಾಗಿ ವಾಯುದೇವನು ಕೆಲವೊಮ್ಮೆ ಬ್ರಹ್ಮನು ನೀಡಿದ ವರವನ್ನು ವ್ಯರ್ಥಗೊಳಿಸುತ್ತಾನೆ.

**ನಾನ್ಯಃ ಕಶ್ಚಿತ್ ತದ್ವರಾಣಾಂ ಶಾಪಾನಾಮಪ್ಯತಿಕ್ರಮೀ ।**
**ಅಯೋಗ್ಯೇಷು ತು ರುದ್ರಾದಿವಾಕ್ಯಂ ತೌ ಕುರುತೋ ಮೃಷಾ ॥ ೩೮॥**

ಪದಚ್ಛೇದ : ನ ಅನ್ಯಃ ಕಶ್ಚಿತ್ ತದ್ವರಾಣಾಂ ಶಾಪಾನಾಂ ಅಪಿ ಅತಿಕ್ರಮೀ । ಅಯೋಗ್ಯೇಷು ತು ರುದ್ರಾದಿವಾಕ್ಯಂ ತೌ ಕುರುತಃ ಮೃಷಾ ॥

**ಅರ್ಥ** :- **ಅನ್ಯಃ** ಇನ್ನೊಬ್ಬರು **ಕಶ್ಚಿತ್** ಯಾರೂ ಕೂಡ **ತದ್ವರಾಣಾಂ** ಬ್ರಹ್ಮನ ವರಗಳನ್ನಾಗಲಿ **ಶಾಪಾನಾಂ** ಶಾಪಗಳನ್ನಾಗಲಿ **ಅತಿಕ್ರಮೀ** ಮೀರುವವರು **ನ** ಇಲ್ಲ, **ತೌ** ಹರಿವಾಯುಗಳು **ಅಯೋಗ್ಯೇಷು** ದುರ್ಜನರಲ್ಲಿ **ರುದ್ರಾದಿವಾಕ್ಯಂ** ರುದ್ರಾದಿಗಳ ವರವನ್ನು **ಮೃಷಾ** ಸುಳ್ಳನ್ನಾಗಿ **ಕುರುತಃ** ಮಾಡುತ್ತಾರೆ.

**ತಾತ್ಪರ್ಯ** :- ಹರಿವಾಯುಗಳು ಹೊರತು ಇತರರಾರೂ ಬ್ರಹ್ಮದೇವರು ನೀಡುವ ವರವನ್ನಾಗಲಿ ಶಾಪವನ್ನಾಗಲಿ ಮೀರಲು ಸಾಧ್ಯವಿಲ್ಲ, ದುಷ್ಟರ ವಿಚಾರದಲ್ಲಿ ರುದ್ರಾದಿಗಳ ವರವನ್ನು ಹರಿವಾಯುಗಳು ಸುಳ್ಳು ಮಾಡುತ್ತಾರೆ.

**ಏಕದೇಶೇನ ಸತ್ಯಂ ತು ಯೋಗ್ಯೇಷ್ವಪಿ ಕದಾಚನ ।**
**ನ ವಿಷ್ಣೋರ್ವಚನಂ ಕ್ವಾಪಿ ಮೃಷಾ ಭವತಿ ಕಸ್ಯಚಿತ್ ।**
**ಏತದರ್ಥೋऽವತಾರಸ್ತು ವಿಷ್ಣೋರ್ಭವತಿ ಸರ್ವದಾ ॥ ೩೯ ॥**

ಪದಚ್ಛೇದ : ಗುರುಂ ಹಿ ಜಗತಃ ವಿಷ್ಣುಃ ಬ್ರಹ್ಮಾಣಮ್ ಅಸೃಜತ್ ಸ್ವಯಮ್। ತೇನ ತದ್ವಚನಂ ಸತ್ಸು ನ ಅನೃತಂ ಕುರುತೇ ಕ್ವಚಿತ್ ॥

**ಅರ್ಥ :-** **ವಿಷ್ಣುಃ** ಪರಮಾತ್ಮನು **ಸ್ವಯಂ** ತಾನು **ಬ್ರಹ್ಮಾಣಂ** ಬ್ರಹ್ಮನನ್ನು **ಜಗತಃ** ಪ್ರಪಂಚಕ್ಕೆ **ಗುರುಂ ಹಿ** ಗುರುವನ್ನಾಗಿ **ಅಸೃಜತ್** ಸೃಷ್ಟಿ ಮಾಡಿದನು. **ತೇನ** ಆ ಕಾರಣದಿಂದ **ತದ್ವಚನಂ** ಬ್ರಹ್ಮನ ಮಾತನ್ನು **ಸತ್ಸು** ಸಜ್ಜನರಲ್ಲಿ **ಕ್ವಚಿತ್** ಎಲ್ಲಿಯೂ **ಅನೃತಂ** ಸುಳ್ಳನ್ನಾಗಿ **ನ ಕುರುತೇ** ಮಾಡುವುದಿಲ್ಲ.

**ತಾತ್ಪರ್ಯ :-** ವಿಷ್ಣುವು ಬ್ರಹ್ಮದೇವರನ್ನು ಜಗದ್ಗುರುವಾಗಿ ತಾನೇ ಸೃಷ್ಟಿ ಮಾಡಿದನು. ಆದ್ದರಿಂದ ಬ್ರಹ್ಮನ ಮಾತನ್ನು ಸಜ್ಜನರ ವಿಷಯದಲ್ಲಿ ಸುಳ್ಳಾಗಿಸುವುದಿಲ್ಲ.

**ನಾಸತ್ಸ್ವಪ್ಯನೃತಂ ಕುರ್ಯಾದ್ವಚನಂ ಪಾರಲೌಕಿಕಮ್ ।**
**ಐಹಿಕಂ ತ್ವಸುರೇಷ್ವೇವ ಕ್ವಚಿದ್ಧಂತಿ ಜನಾರ್ದನಃ ॥ ೩೬ ॥**

ಪದಚ್ಛೇದ : ನ ಅಸತ್ಸು ಅಪಿ ಅನೃತಂ ಕುರ್ಯಾತ್ ವಚನಂ ಪಾರಲೌಕಿಕಮ್ । ಐಹಿಕಂ ತು ಅಸುರೇಷು ಏವ ಕ್ವಚಿತ್ ಹಂತಿ ಜನಾರ್ದನಃ ॥

**ಅರ್ಥ :-** **ಪಾರಲೌಕಿಕಂ** ಪರಲೋಕಕ್ಕೆ ಸಂಬಂಧಿಸಿದ **ವಚನಂ** ಮಾತನ್ನು **ಅಸತ್ಸ್ವಪಿ** ದುರ್ಜನರಲ್ಲಿಯೂ **ಅನೃತಂ** ಸುಳ್ಳನ್ನು **ನ ಕುರ್ಯಾತ್** ಮಾಡುವುದಿಲ್ಲ. **ಜನಾರ್ದನಃ** ಪರಮಾತ್ಮನು **ಐಹಿಕಂ** ಈ ಲೋಕಕ್ಕೆ ಸಂಬಂಧಿಸಿದ ವರವನ್ನು **ಅಸುರೇಷ್ವೇವ** ದುರ್ಜನರಲ್ಲಿಯೇ **ಕ್ವಚಿತ್** ಕೆಲವೆಡೆ **ಹಂತಿ** ನಾಶ ಮಾಡುತ್ತಾನೆ.

**ತಾತ್ಪರ್ಯ :-** ಪರಲೋಕಸಂಬಂಧವಾದ (ಮೋಕ್ಷಕ್ಕೆ ಸಂಬಂಧಿಸಿದ) ಬ್ರಹ್ಮ ದೇವರ ಮಾತನ್ನು ಅಸತ್ಪುರುಷರ ವಿಷಯದಲ್ಲಿಯೂ ಪರಮಾತ್ಮನು ಎಂದೂ ಸುಳ್ಳು ಮಾಡುವುದಿಲ್ಲ. ಆದರೆ (ನೀನು ಅವಧ್ಯನಾಗು ಇತ್ಯಾದಿ ವರ ನೀಡಿದಾಗ) ಈ ಲೋಕಕ್ಕೆ ಸಂಬಂಧಿಸಿದ ವಿಷಯದಲ್ಲಿ ಕೆಲವೊಮ್ಮೆ ಸುಳ್ಳು ಮಾಡುತ್ತಾನೆ.

**ನಿಜಾಧಿಕ್ಯಸ್ಯ ವಿಜ್ಞಪ್ತ್ಯೈ ಕ್ವಚಿದ್ವಾಯುಸ್ತದಾಜ್ಞಯಾ ।**
**ಹಂತಿ ಬ್ರಹ್ಮತ್ವಮಾತ್ಮೀಯಮದ್ಧಾ ಜ್ಞಾಪಯಿತುಂ ಪ್ರಭುಃ ॥ ೩೭ ॥**

ಪದಚ್ಛೇದ : ನಿಜಾಧಿಕ್ಯಸ್ಯ ವಿಜ್ಞಪ್ತ್ಯೈ ಕ್ವಚಿತ್ ವಾಯುಃ ತದಾಜ್ಞಯಾ । ಹಂತಿ ಬ್ರಹ್ಮತ್ವಮ್ ಆತ್ಮೀಯಮ್ ಅದ್ಧಾ ಜ್ಞಾಪಯಿತುಂ ಪ್ರಭುಃ ॥

**ಅರ್ಥ** :- **ನಿಜಾಧಿಕಸ್ಯ** ತಾನು ಇತರ ದೇವತೆಗಳಿಗಿಂತ ಉತ್ತಮನೆಂದು **ವಿಜ್ಞಪ್ತ್ಯೈ** ತಿಳಿಸುವುದಕ್ಕಾಗಿ **ವಾಯುಃ** ವಾಯುದೇವನು **ತದಾಜ್ಞಯಾ** ವಿಷ್ಣುವಿನ ಅನುಜ್ಞೆಯಿಂದ **ಕ್ವಚಿತ್** ಕೆಲವೆಡೆ (ಬ್ರಹ್ಮನು ಅಸುರನಿಗೆ ಕೊಟ್ಟ ವರವನ್ನು) **ತಥಾ** ಹಾಗೆಯೇ **ಪ್ರಭುಃ** ವಾಯುದೇವನು **ಆತ್ಮೀಯಮ್** ತನಗೆ **ಬ್ರಹ್ಮತ್ವಂ** ಬ್ರಹ್ಮಪದವಿಯು **ಅದ್ಧಾ** ನಿಶ್ಚಿತವೆಂದು **ಜ್ಞಾಪಯಿತುಂ** ತಿಳಿಸಲು **ಹಂತಿ** ಬ್ರಹ್ಮನ ವರವನ್ನು ಫಲಕಾರಿಯಾಗದಂತೆ ಮಾಡುವನು.

**ತಾತ್ಪರ್ಯ** :- ತಾನು ಶೇಷಾದಿದೇವತೆಗಳಿಗಿಂತ ಉತ್ತಮನೆಂದು ತಿಳಿಸುವುದಕ್ಕಾಗಿ ಬ್ರಹ್ಮಪದವಿಗೆ ಯೋಗ್ಯನೆಂದು ತಿಳಿಸುವುದಕ್ಕಾಗಿ ವಾಯುದೇವನು ಕೆಲವೊಮ್ಮೆ ಬ್ರಹ್ಮನು ನೀಡಿದ ವರವನ್ನು ವ್ಯರ್ಥಗೊಳಿಸುತ್ತಾನೆ.

**ನಾನ್ಯಃ ಕಶ್ಚಿತ್ ತದ್ವರಾಣಾಂ ಶಾಪಾನಾಮಪ್ಯತಿಕ್ರಮೀ ।**
**ಅಯೋಗ್ಯೇಷು ತು ರುದ್ರಾದಿವಾಕ್ಯಂ ತೌ ಕುರುತೋ ಮೃಷಾ ॥ ೩೮॥**

ಪದಚ್ಛೇದ : ನ ಅನ್ಯಃ ಕಶ್ಚಿತ್ ತದ್ವರಾಣಾಂ ಶಾಪಾನಾಂ ಅಪಿ ಅತಿಕ್ರಮೀ । ಅಯೋಗ್ಯೇಷು ತು ರುದ್ರಾದಿವಾಕ್ಯಂ ತೌ ಕುರುತಃ ಮೃಷಾ ॥

**ಅರ್ಥ** :- **ಅನ್ಯಃ** ಇನ್ನೊಬ್ಬರು **ಕಶ್ಚಿತ್** ಯಾರೂ ಕೂಡ **ತದ್ವರಾಣಾಂ** ಬ್ರಹ್ಮನ ವರಗಳನ್ನಾಗಲಿ **ಶಾಪಾನಾಂ** ಶಾಪಗಳನ್ನಾಗಲಿ **ಅತಿಕ್ರಮೀ** ಮೀರುವವರು **ನ** ಇಲ್ಲ. **ತೌ** ಹರಿವಾಯುಗಳು **ಅಯೋಗ್ಯೇಷು** ದುರ್ಜನರಲ್ಲಿ **ರುದ್ರಾದಿವಾಕ್ಯಂ** ರುದ್ರಾದಿಗಳ ವರವನ್ನು **ಮೃಷಾ** ಸುಳ್ಳನ್ನಾಗಿ **ಕುರುತಃ** ಮಾಡುತ್ತಾರೆ.

**ತಾತ್ಪರ್ಯ** :- ಹರಿವಾಯುಗಳು ಹೊರತು ಇತರರಾರೂ ಬ್ರಹ್ಮದೇವರು ನೀಡುವ ವರವನ್ನಾಗಲಿ ಶಾಪವನ್ನಾಗಲಿ ಮೀರಲು ಸಾಧ್ಯವಿಲ್ಲ. ದುಷ್ಟರ ವಿಚಾರದಲ್ಲಿ ರುದ್ರಾದಿಗಳ ವರವನ್ನು ಹರಿವಾಯುಗಳು ಸುಳ್ಳು ಮಾಡುತ್ತಾರೆ.

**ಏಕದೇಶೇನ ಸತ್ಯಂ ತು ಯೋಗ್ಯೇಷ್ವಪಿ ಕದಾಚನ ।**
**ನ ವಿಷ್ಣೋರ್ವಚನಂ ಕ್ವಾಪಿ ಮೃಷಾ ಭವತಿ ಕಸ್ಯಚಿತ್ ।**
**ಏತದರ್ಥೋಽವತಾರಸ್ತು ವಿಷ್ಣೋರ್ಭವತಿ ಸರ್ವದಾ ॥ ೩೯ ॥**

ಪದಚ್ಛೇದ : ಏಕದೇಶೇನ ಸತ್ಯಂ ತು ಯೋಗ್ಯೇಷು ಅಪಿ ಕದಾಚನ । ನ ವಿಷ್ಣೋಃ ವಚನಂ ಕ್ವ ಅಪಿ ಮೃಷಾ ಭವತಿ ಕಸ್ಯಚಿತ್ । ಏತದರ್ಥಃ ಅವತಾರಃ ತು ವಿಷ್ಣೋಃ ಭವತಿ ಸರ್ವದಾ ॥

**ಅರ್ಥ** :- **ಯೋಗ್ಯೇಷ್ವಪಿ** ಯೋಗ್ಯ ಜನರಲ್ಲಿಯೂ **ಕದಾಚನ** ಕೆಲವು ಸಲ **ಏಕದೇಶೇನ** ಸ್ವಲ್ಪ ಮಾತನ್ನು **ಸತ್ಯಂ ತು** ಸತ್ಯವನ್ನಾಗಿ **ಕುರುತೇ** ಮಾಡುತ್ತಾನೆ. **ವಿಷ್ಣೋಃ** ಭಗವಂತನ **ವಚನಂ** ಮಾತು **ಕ್ವಾಪಿ** ಎಲ್ಲಿಯೂ ಕೂಡ **ಮೃಷಾ** ಸುಳ್ಳು **ನ ಭವತಿ** ಆಗುವುದಿಲ್ಲ. **ಏತದರ್ಥಂ** ಈ ಉದ್ದೇಶ ದಿಂದಲೇ **ವಿಷ್ಣೋಃ** ಭಗವಂತನ **ಅವತಾರಃ** ಅವತಾರವು **ಸರ್ವದಾ** ಯಾವಾಗಲೂ **ಭವತಿ** ಆಗುತ್ತದೆ.

**ತಾತ್ಪರ್ಯ** :- ಯೋಗ್ಯರ ವಿಚಾರದಲ್ಲಿ ಹರಿವಾಯುಗಳು ಸಾಮಾನ್ಯ ವಾಗಿ ರುದ್ರಾದಿಗಳ ವರವನ್ನು ಸತ್ಯ ಮಾಡುವರು. ಕೆಲವೊಮ್ಮೆ ಸುಳ್ಳು ಮಾಡುತ್ತಾರೆ. ವಿಷ್ಣುವಿನ ವಚನವು ಮಾತ್ರ ಯಾರ ವಿಚಾರದಲ್ಲಿಯೂ ಎಂದೂ ಸುಳ್ಳಾಗುವುದೇ ಇಲ್ಲ.ಈ ಉದ್ದೇಶದಿಂದಲೇ ವಿಷ್ಣುವಿನ ಅವತಾರವು ಯಾವಾಗಲೂ ಆಗುತ್ತದೆ.

ಸೀತೆ : ನಿತ್ಯ ಅವಿಯೋಗಿನೀ

**ಪ್ರವಿಶ್ಯ ಭೂಮೌ ಸಾ ದೇವೀ ಲೋಕದೃಷ್ಟ್ಯನುಸಾರತಃ ।**
**ರೇಮೇ ರಾಮೇಣಾವಿಯುಕ್ತಾ ಭಾಸ್ಕರೇಣ ಪ್ರಭಾ ಯಥಾ ॥ ೪೦ ॥**

ಪದಚ್ಛೇದ : ಪ್ರವಿಶ್ಯ ಭೂಮೌ ಸಾ ದೇವೀ ಲೋಕದೃಷ್ಟನುಸಾರತಃ । ರೇಮೇ ರಾಮೇಣ ಅವಿಯುಕ್ತಾ ಭಾಸ್ಕರೇಣ ಪ್ರಭಾ ಯಥಾ ॥

**ಅರ್ಥ** :- **ಸಾ ದೇವೀ** ಆ ಸೀತಾದೇವಿಯು **ಲೋಕದೃಷ್ಟ್ಯನುಸಾರತಃ** ಲೋಕದೃಷ್ಟಿಗೆ ಅನುಸಾರವಾಗಿ **ಭೂಮೌ** ಭೂಮಿಯಲ್ಲಿ **ಪ್ರವಿಶ್ಯ** ಪ್ರವೇಶ ಮಾಡಿ **ಭಾಸ್ಕರೇಣ** ಸೂರ್ಯನಿಂದ **ಪ್ರಭಾ** ಕಾಂತಿಯು **ಯಥಾ** ಹೇಗೋ **ತಥಾ** ಹಾಗೆ **ರಾಮೇಣ** ಶ್ರೀರಾಮಚಂದ್ರನಿಂದ **ಅವಿಯುಕ್ತಾ** ವಿಯೋಗ ಹೊಂದದೆ **ರೇಮೇ** ವಿಹರಿಸಿದಳು.

**ತಾತ್ಪರ್ಯ** :- ಸೀತಾದೇವಿಯು ಜನರ ದೃಷ್ಟಿಗೆ ಕಾಣುವಂತೆ ಭೂಮಿ ಯೊಳಗೆ ಪ್ರವೇಶ ಮಾಡಿದ್ದರೂ ಸಹ ಸೂರ್ಯನ ಜೊತೆಗಿರುವ ಅವನ ಪ್ರಭೆ

ಹೇಗೆ ಸೂರ್ಯನಿಂದ ಬೇರ್ಪಡುವುದೇ ಇಲ್ಲವೋ ಹಾಗೆ ಶ್ರೀರಾಮನೊಂದಿಗೆ ವಿಯೋಗವಿಲ್ಲದವಳಾಗಿ ವಿಹರಿಸಿದಳು.

**ಶ್ರೀರಾಮನು ಅದೃಶ್ಯಸೀತೆಯೊಂದಿಗೆ ಆಚರಿಸಿದ ಯಾಗಗಳು**

**ಏವಂ ರಮಾಲಾಲಿತಪಾದಪಲ್ಲವಃ**
**ಪುನಃ ಸ ಯಜ್ಞೈಶ್ಚ ಯಜನ್ ಸ್ವಮೇವ ।**
**ವರಾಶ್ವಮೇಧಾದಿಭಿರಾಪ್ತಕಾಮೋ**
**ರೇಮೇಭಿರಾಮೋ ನೃಪತೀನ್ ವಿಶಿಕ್ಷಯನ್ ॥ ೪೧ ॥**

ಪದಚ್ಛೇದ : ಏವಂ ರಮಾಲಾಲಿತಪಾದಪಲ್ಲವಃ ಪುನಃ ಸಃ ಯಜ್ಞೈಃ ಚ ಯಜನ್ ಸ್ವಮ್ ಏವ । ವರಾಶ್ವಮೇಧಾದಿಭಿಃ ಆಪ್ತಕಾಮಃ ರೇಮೇ ಅಭಿರಾಮಃ ನೃಪತೀನ್ ವಿಶಿಕ್ಷಯನ್ ॥

**ಅರ್ಥ** :- **ಏವಂ** ಈ ರೀತಿಯಾಗಿ **ರಮಾಲಾಲಿತಪಾದಪಲ್ಲವಃ** ಸೀತೆಯಿಂದ ಆದರಿಸಲ್ಪಟ್ಟ ಪಾದಪಲ್ಲವವುಳ್ಳವನಾಗಿ **ಸಃ** ಆ ಶ್ರೀರಾಮನು **ರೇಮೇ** ಆನಂದಿಸಿದನು. **ನೃಪತೀನ್** ರಾಜರುಗಳಿಗೆ **ವಿಶಿಕ್ಷಯನ್** ಆದರ್ಶಗಳನ್ನು ತಿಳಿಸುವವನಾಗಿ **ಆಪ್ತಕಾಮಃ** ಪೂರ್ಣಕಾಮನಾಗಿದ್ದರೂ ಸಹ **ಅಭಿರಾಮಃ** ಮನೋಹರನಾದ ಶ್ರೀರಾಮನು **ವರಾಶ್ವಮೇಧಾದಿಭಿಃ** ಶ್ರೇಷ್ಠವಾದ ಅಶ್ವಮೇಧವೇ ಮೊದಲಾದ **ಯಜ್ಞೈಃ** ಯಾಗಗಳಿಂದ **ಸ್ವಮೇವ** ತನ್ನನ್ನೇ **ಪುನಶ್ಚ** ಮತ್ತೊಮ್ಮೆ **ಅಯಜತ್** ಪೂಜಿಸಿಕೊಂಡನು.

**ತಾತ್ಪರ್ಯ** :- ಹೀಗೆ ಪರಿಪೂರ್ಣಕಾಮನೂ, ಮನೋಹರನೂ ಆದ ಶ್ರೀರಾಮನು ಲಕ್ಷ್ಮೀದೇವಿಯಿಂದ ಆರಾಧಿತನಾಗಿ, ರಾಜರುಗಳಿಗೆ (ರಾಜರು ಯಜ್ಞಗಳನ್ನು ಮಾಡಬೇಕು) ಶಿಕ್ಷಣ ನೀಡಲೆಂದು ಶ್ರೇಷ್ಠವಾದ ಅಶ್ವ ಮೇಧಾದಿ ಯಾಗಗಳನ್ನು ಮಾಡಿ ತನ್ನನ್ನೇ ಆರಾಧಿಸಿಕೊಂಡು ಆನಂದಿಸಿದನು.

**ಶ್ರೀರಾಮ ಹಾಗೂ ಅದೃಶ್ಯಸೀತೆ : ಅಲೌಕಿಕಾನಂದದ ಏಳುನೂರು ವರ್ಷಗಳು**

**ರಾಮಸ್ಯ ದೃಶ್ಯಾ ತ್ವನ್ಯೇಷಾಮದೃಶ್ಯಾ ಜನಕಾತ್ಮಜಾ ।**
**ಭೂಮಿಪ್ರವೇಶಾದೂರ್ಧ್ವಂ ಸಾ ರೇಮೇ ಸಪ್ತಶತಂ ಸಮಾಃ ॥ ೪೨ ॥**

ಪದಚ್ಛೇದ : ಏಕದೇಶೇನ ಸತ್ಯಂ ತು ಯೋಗ್ಯೇಷು ಅಪಿ ಕದಾಚನ । ನ ವಿಷ್ಣೋಃ ವಚನಂ ಕ್ವ ಅಪಿ ಮೃಷಾ ಭವತಿ ಕಸ್ಯಚಿತ್ । ಏತದರ್ಥಃ ಅವತಾರಃ ತು ವಿಷ್ಣೋಃ ಭವತಿ ಸರ್ವದಾ ॥

**ಅರ್ಥ** :- **ಯೋಗ್ಯೇಷ್ವಪಿ** ಯೋಗ್ಯ ಜನರಲ್ಲಿಯೂ **ಕದಾಚನ** ಕೆಲವು ಸಲ **ಏಕದೇಶೇನ** ಸ್ವಲ್ಪ ಮಾತನ್ನು **ಸತ್ಯಂ ತು** ಸತ್ಯವನ್ನಾಗಿ **ಕುರುತೇ** ಮಾಡುತ್ತಾನೆ. **ವಿಷ್ಣೋಃ** ಭಗವಂತನ **ವಚನಂ** ಮಾತು **ಕ್ವಾಪಿ** ಎಲ್ಲಿಯೂ ಕೂಡ **ಮೃಷಾ** ಸುಳ್ಳು **ನ ಭವತಿ** ಆಗುವುದಿಲ್ಲ. **ಏತದರ್ಥಂ** ಈ ಉದ್ದೇಶ ದಿಂದಲೇ **ವಿಷ್ಣೋಃ** ಭಗವಂತನ **ಅವತಾರಃ** ಅವತಾರವು **ಸರ್ವದಾ** ಯಾವಾಗಲೂ **ಭವತಿ** ಆಗುತ್ತದೆ.

**ತಾತ್ಪರ್ಯ** :- ಯೋಗ್ಯರ ವಿಚಾರದಲ್ಲಿ ಹರಿವಾಯುಗಳು ಸಾಮಾನ್ಯ ವಾಗಿ ರುದ್ರಾದಿಗಳ ವರವನ್ನು ಸತ್ಯ ಮಾಡುವರು. ಕೆಲವೊಮ್ಮೆ ಸುಳ್ಳು ಮಾಡುತ್ತಾರೆ. ವಿಷ್ಣುವಿನ ವಚನವು ಮಾತ್ರ ಯಾರ ವಿಚಾರದಲ್ಲಿಯೂ ಎಂದೂ ಸುಳ್ಳಾಗುವುದೇ ಇಲ್ಲ.ಈ ಉದ್ದೇಶದಿಂದಲೇ ವಿಷ್ಣುವಿನ ಅವತಾರವು ಯಾವಾಗಲೂ ಆಗುತ್ತದೆ.

ಸೀತೆ : ನಿತ್ಯ ಅವಿಯೋಗಿನೀ

**ಪ್ರವಿಶ್ಯ ಭೂಮೌ ಸಾ ದೇವೀ ಲೋಕದೃಷ್ಟ್ಯನುಸಾರತಃ ।**
**ರೇಮೇ ರಾಮೇಣಾವಿಯುಕ್ತಾ ಭಾಸ್ಕರೇಣ ಪ್ರಭಾ ಯಥಾ ॥ ४೦ ॥**

ಪದಚ್ಛೇದ : ಪ್ರವಿಶ್ಯ ಭೂಮೌ ಸಾ ದೇವೀ ಲೋಕದೃಷ್ಟ್ಯನುಸಾರತಃ । ರೇಮೇ ರಾಮೇಣ ಅವಿಯುಕ್ತಾ ಭಾಸ್ಕರೇಣ ಪ್ರಭಾ ಯಥಾ ॥

**ಅರ್ಥ** :- **ಸಾ ದೇವೀ** ಆ ಸೀತಾದೇವಿಯು **ಲೋಕದೃಷ್ಟ್ಯನುಸಾರತಃ** ಲೋಕದೃಷ್ಟಿಗೆ ಅನುಸಾರವಾಗಿ **ಭೂಮೌ** ಭೂಮಿಯಲ್ಲಿ **ಪ್ರವಿಶ್ಯ** ಪ್ರವೇಶ ಮಾಡಿ **ಭಾಸ್ಕರೇಣ** ಸೂರ್ಯನಿಂದ **ಪ್ರಭಾ** ಕಾಂತಿಯು **ಯಥಾ** ಹೇಗೋ **ತಥಾ** ಹಾಗೆ **ರಾಮೇಣ** ಶ್ರೀರಾಮಚಂದ್ರನಿಂದ **ಅವಿಯುಕ್ತಾ** ವಿಯೋಗ ಹೊಂದದೆ **ರೇಮೇ** ವಿಹರಿಸಿದಳು.

**ತಾತ್ಪರ್ಯ** :- ಸೀತಾದೇವಿಯು ಜನರ ದೃಷ್ಟಿಗೆ ಕಾಣುವಂತೆ ಭೂಮಿ ಯೊಳಗೆ ಪ್ರವೇಶ ಮಾಡಿದ್ದರೂ ಸಹ ಸೂರ್ಯನ ಜೊತೆಗಿರುವ ಅವನ ಪ್ರಭೆ

ಹೇಗೆ ಸೂರ್ಯನಿಂದ ಬೇರ್ಪಡುವುದೇ ಇಲ್ಲವೋ ಹಾಗೆ ಶ್ರೀರಾಮನೊಂದಿಗೆ ವಿಯೋಗವಿಲ್ಲದವಳಾಗಿ ವಿಹರಿಸಿದಳು.

**ಶ್ರೀರಾಮನು ಅದೃಶ್ಯಸೀತೆಯೊಂದಿಗೆ ಆಚರಿಸಿದ ಯಾಗಗಳು**

**ಏವಂ ರಮಾಲಾಲಿತಪಾದಪಲ್ಲವಃ**
**ಪುನಃ ಸ ಯಜ್ಞೈಶ್ಚ ಯಜನ್ ಸ್ವಮೇವ ।**
**ವರಾಶ್ವಮೇಧಾದಿಭಿರಾಪ್ತಕಾಮೋ**
**ರೇಮೇಭಿರಾಮೋ ನೃಪತೀನ್ ವಿಶಿಕ್ಷಯನ್ ॥ ೪೧ ॥**

ಪದಚ್ಛೇದ : ಏವಂ ರಮಾಲಾಲಿತಪಾದಪಲ್ಲವಃ ಪುನಃ ಸಃ ಯಜ್ಞೈಃ ಚ ಯಜನ್ ಸ್ವಮ್ ಏವ । ವರಾಶ್ವಮೇಧಾದಿಭಿಃ ಆಪ್ತಕಾಮಃ ರೇಮೇ ಅಭಿರಾಮಃ ನೃಪತೀನ್ ವಿಶಿಕ್ಷಯನ್ ॥

**ಅರ್ಥ** :- **ಏವಂ** ಈ ರೀತಿಯಾಗಿ **ರಮಾಲಾಲಿತಪಾದಪಲ್ಲವಃ** ಸೀತೆಯಿಂದ ಆದರಿಸಲ್ಪಟ್ಟ ಪಾದಪಲ್ಲವವುಳ್ಳವನಾಗಿ **ಸಃ** ಆ ಶ್ರೀರಾಮನು **ರೇಮೇ** ಆನಂದಿಸಿದನು. **ನೃಪತೀನ್** ರಾಜರುಗಳಿಗೆ **ವಿಶಿಕ್ಷಯನ್** ಆದರ್ಶಗಳನ್ನು ತಿಳಿಸುವವನಾಗಿ **ಆಪ್ತಕಾಮಃ** ಪೂರ್ಣಕಾಮನಾಗಿದ್ದರೂ ಸಹ **ಅಭಿರಾಮಃ** ಮನೋಹರನಾದ ಶ್ರೀರಾಮನು **ವರಾಶ್ವಮೇಧಾದಿಭಿಃ** ಶ್ರೇಷ್ಠವಾದ ಅಶ್ವಮೇಧವೇ ಮೊದಲಾದ **ಯಜ್ಞೈಃ** ಯಾಗಗಳಿಂದ **ಸ್ವಮೇವ** ತನ್ನನ್ನೇ **ಪುನಶ್ಚ** ಮತ್ತೊಮ್ಮೆ **ಅಯಜತ್** ಪೂಜಿಸಿಕೊಂಡನು.

**ತಾತ್ಪರ್ಯ** :- ಹೀಗೆ ಪರಿಪೂರ್ಣಕಾಮನೂ, ಮನೋಹರನೂ ಆದ ಶ್ರೀರಾಮನು ಲಕ್ಷ್ಮೀದೇವಿಯಿಂದ ಆರಾಧಿತನಾಗಿ, ರಾಜರುಗಳಿಗೆ (ರಾಜರು ಯಜ್ಞಗಳನ್ನು ಮಾಡಬೇಕು) ಶಿಕ್ಷಣ ನೀಡಲೆಂದು ಶ್ರೇಷ್ಠವಾದ ಅಶ್ವ ಮೇಧಾದಿ ಯಾಗಗಳನ್ನು ಮಾಡಿ ತನ್ನನ್ನೇ ಆರಾಧಿಸಿಕೊಂಡು ಆನಂದಿಸಿದನು.

**ಶ್ರೀರಾಮ ಹಾಗೂ ಅದೃಶ್ಯಸೀತೆ : ಅಲೌಕಿಕಾನಂದದ ಏಳುನೂರು ವರ್ಷಗಳು**

**ರಾಮಸ್ಯ ದೃಶ್ಯಾ ತ್ವನ್ಯೇಷಾಮದೃಶ್ಯಾ ಜನಕಾತ್ಮಜಾ ।**
**ಭೂಮಿಪ್ರವೇಶಾದೂರ್ಧ್ವಂ ಸಾ ರೇಮೇ ಸಪ್ತಶತಂ ಸಮಾಃ ॥ ೪೨ ॥**

ಪದಚ್ಛೇದ : ರಾಮಸ್ಯ ದೃಶ್ಯಾ ತು ಅನ್ಯೇಷಾಂ ಅದೃಶ್ಯಾ ಜನಕಾತ್ಮಜಾ । ಭೂಮಿಪ್ರವೇಶಾತ್ ಊರ್ಧ್ವಂ ಸಾ ರೇಮೇ ಸಪ್ತಶತಂ ಸಮಾಃ ॥

**ಅರ್ಥ** :- **ರಾಮಸ್ಯ** ಶ್ರೀರಾಮನಿಗೆ **ದೃಶ್ಯಾ** ಕಾಣಿಸಿಕೊಂಡು **ಅನ್ಯೇಷಾಂ** ಇತರರಿಗೆ **ಅದೃಶ್ಯಾ** ಅದೃಶ್ಯಳಾಗಿ **ಜನಕಾತ್ಮಜಾ** ಸೀತಾದೇವಿಯು **ಭೂಮಿ ಪ್ರವೇಶಾತ್** ಭೂಮಿಯೊಳಗೆ ಪ್ರವೇಶಿಸಿದ **ಊರ್ಧ್ವಂ** ಅನಂತರ **ಸಪ್ತಶತಂ** ಏಳುನೂರು **ಸಮಾಃ** ವರ್ಷಗಳ ಕಾಲ **ರೇಮೇ** ಆನಂದಿಸಿದಳು.

**ತಾತ್ಪರ್ಯ** :- ಜನಕರಾಜನ ಮಗಳಾದ ಸೀತಾದೇವಿಯು ಭೂಮಿ ಪ್ರವೇಶ ಮಾಡಿದಾಗ ಶ್ರೀರಾಮನಿಗೆ ಮಾತ್ರ ಕಾಣಿಸಿಕೊಂಡು ಉಳಿದವರಿಗೆ ಅದೃಶ್ಯಳಾದಳು. ಅವನೊಡನೆ ಏಳುನೂರು ವರ್ಷಗಳ ಕಾಲ ಸುಖವಾಗಿದ್ದಳು.

### ಶ್ರೀರಾಮಾವತಾರಕಾರ್ಯಗಳು : ಬ್ರಹ್ಮಾದಿಗಳಿಂದಲೂ ಅಚಿಂತ್ಯ

**ಏವಂವಿಧಾನ್ಯಗಣಿತಾನಿ ಜನಾರ್ದನಸ್ಯ**
**ರಾಮಾವತಾರಚರಿತಾನಿ ತದನ್ಯಪುಂಭಿಃ ।**
**ಶಕ್ಯಾನಿ ನೈವ ಮನಸಾಽಪಿ ಹಿ ತಾನಿ ಕರ್ತುಂ**
**ಬ್ರಹ್ಮೇಶಶೇಷಪುರುಹೂತಮುಖ್ಯೈಃ ಸುರೈಶ್ಚ ॥ ೪೩ ॥**

ಪದಚ್ಛೇದ : ಏವಂವಿಧಾನಿ ಅಗಣಿತಾನಿ ಜನಾರ್ದನಸ್ಯ ರಾಮಾವತಾರ ಚರಿತಾನಿ ತದನ್ಯಪುಂಭಿಃ । ಶಕ್ಯಾನಿ ನ ಏವ ಮನಸಾ ಅಪಿ ಹಿ ತಾನಿ ಕರ್ತುಂ ಬ್ರಹ್ಮೇಶಶೇಷಪುರುಹೂತಮುಖ್ಯೈಃ ಸುರೈಃ ಚ ॥

**ಅರ್ಥ** :- **ತದನ್ಯಪುಂಭಿಃ** ಭಗವದಿತರ ಜೀವರಿಂದ **ಬ್ರಹ್ಮೇಶಶೇಷ ಪುರುಹೂತ ಮುಖ್ಯೈಃ ಬ್ರಹ್ಮ** ಬ್ರಹ್ಮದೇವರು **ಈಶ** ರುದ್ರದೇವರು **ಶೇಷ** ಶೇಷದೇವರು **ಪುರುಹೂತಮುಖ್ಯೈಃ** ಇಂದ್ರದೇವರೇ ಮೊದಲಾದ **ಸುರೈಃ ಚ** ದೇವತೆಗಳಿಂದಲೂ ಕೂಡ **ಮನಸಾಽಪಿ** ಮನಸ್ಸಿನಿಂದಲೂ ಕೂಡ **ಕರ್ತುಂ** ಮಾಡಲು **ನೈವ ಶಕ್ಯಾನಿ** ಸಾಧ್ಯವಿಲ್ಲ. **ಜನಾರ್ದನಸ್ಯ** ಪರಮಾತ್ಮನ **ಚರಿತಾನಿ** ರಾಮಾವತಾರದ ಚರಿತ್ರೆಗಳು **ಏವಂವಿಧಾನಿ** ಈ ರೀತಿಯಾದವುಗಳು **ಅಗಣಿತಾನಿ** ಅಸಂಖ್ಯಾತಗಳು (ಅಸನ್ ಆಗಿದ್ದವು).

ತಾತ್ಪರ್ಯ :- ಭಗವಂತನ ಇಂತಹ ರಾಮಾವತಾರ ಕಾರ್ಯಗಳು ಅಗಣಿತವಾಗಿವೆ. ಶ್ರೀಹರಿಯನ್ನು ಹೊರತುಪಡಿಸಿ ಬ್ರಹ್ಮ, ರುದ್ರ, ಶೇಷ, ಇಂದ್ರ ಮೊದಲಾದ ಸಕಲ ಸುರರಿಂದ ಹಾಗೂ ಇತರ ಜೀವರಿಂದ ಮನಸ್ಸಿನಿಂದಲೂ ಕೂಡ ಮಾಡಲು ಸಾಧ್ಯವಿಲ್ಲ.

ವಿಷ್ಣು ವೈಕುಂಠಕ್ಕೆ ತೆರಳಲಿ : ಬ್ರಹ್ಮನಲ್ಲಿ ದೇವತೆಗಳ ಪ್ರಾರ್ಥನೆ

ತಸ್ಯೈವಮಬ್ಜಭವಲೋಕಸಮಾಮಿಮಾಂ ಕ್ಷ್ಮಾಂ
ಕೃತ್ವಾನುಶಾಸತ ಉದೀಕ್ಷ್ಯ ಗುಣಾನ್ ಧರಾಯಾಃ ।
ವೈಶೇಷ್ಯಮಾತ್ಮಸದನಸ್ಯ ಹಿ ಕಾಂಕ್ಷಮಾಣಾ
ವೃಂದಾರಕಾಃ ಕಮಲಜಂ ಪ್ರತಿ ತಚ್ಛಶಂಸುಃ ॥ ೪೪ ॥

ಪದಚ್ಛೇದ : ತಸ್ಯ ಏವಂ ಅಬ್ಜಭವಲೋಕಸಮಾಮ್ ಇಮಾಂ ಕ್ಷ್ಮಾಂ ಕೃತ್ವಾ ಅನುಶಾಸತಃ ಉದೀಕ್ಷ್ಯ ಗುಣಾನ್ ಧರಾಯಾಃ । ವೈಶೇಷ್ಯಮ್ ಆತ್ಮಸದನಸ್ಯ ಹಿ ಕಾಂಕ್ಷಮಾಣಾಃ ವೃಂದಾರಕಾಃ ಕಮಲಜಂ ಪ್ರತಿ ತತ್ ಶಶಂಸುಃ ॥

ಅರ್ಥ :- ಏವಂ ಈ ರೀತಿಯಾಗಿ ಇಮಾಂ ಈ ಕ್ಷ್ಮಾಂ ಭೂಲೋಕ ವನ್ನು ಅಬ್ಜಭವಲೋಕಸಮಾಮ್ ಬ್ರಹ್ಮಲೋಕಕ್ಕೆ ಸಮವನ್ನಾಗಿ ಕೃತ್ವಾ ಮಾಡಿ ಅನುಶಾಸತಃ ಸತಃ ಪಾಲಿಸುತ್ತಿರಲು ತಸ್ಯ ಶ್ರೀರಾಮನ ಆಳ್ವಿಕೆಯ ಭೂಪ್ರದೇಶ ಕ್ಕಿಂತ ಆತ್ಮಸದನಸ್ಯ ತಮ್ಮ ಲೋಕಕ್ಕೆ ವೈಶೇಷ್ಯಂ ಶ್ರೇಷ್ಠತ್ವವನ್ನು ಕಾಂಕ್ಷಮಾಣಾಃ ಅಪೇಕ್ಷಿಸುವ ವೃಂದಾರಕಾಃ ದೇವತೆಗಳು ಧರಾಯಾಃ ಭೂಲೋಕದ ಗುಣಾನ್ ಹಿರಿಮೆಯನ್ನು ಉದೀಕ್ಷ್ಯ ನೋಡಿ ಕಮಲಜಂ ಪ್ರತಿ ಬ್ರಹ್ಮನನ್ನು ಕುರಿತು ತತ್ ಆ ಮಾತನ್ನು ಶಶಂಸುಃ ಹೇಳಿದರು.

ತಾತ್ಪರ್ಯ :- ಹೀಗೆ ಚತುರ್ಮುಖ ಬ್ರಹ್ಮದೇವರ ಲೋಕವಾದ ಸತ್ಯ ಲೋಕಕ್ಕೆ ಸಮವನ್ನಾಗಿ ಮಾಡಿ ಭೂಲೋಕವನ್ನು ಶ್ರೀರಾಮನು ಆಳುತ್ತಿದ್ದಾಗ, ಭೂಲೋಕದ ಹಿರಿಮೆಯನ್ನು ಗಮನಿಸಿ ನೋಡಿ ಆ ರೀತಿಯ ವೈಶಿಷ್ಟ್ಯವು ತಮ್ಮ ಲೋಕಕ್ಕೆ ಮಾತ್ರ ಬರಲೆಂದು ಅಪೇಕ್ಷಿಸುವ ದೇವತೆಗಳು ಬ್ರಹ್ಮ ದೇವರಿಗೆ ಹೇಳಿದರು.

ವೈಕುಂಠಕ್ಕೆ ತೆರಳು : ಬ್ರಹ್ಮನ ಆದೇಶಕ್ಕೆ ಅನುಸಾರವಾಗಿ
ಶ್ರೀರಾಮನಲ್ಲಿ ರುದ್ರದೇವರ ಪ್ರಾರ್ಥನೆ

ಆಮನ್ತ್ರ್ಯ ತೈಃ ಸಹ ವಿಭುರ್ಭಗವತ್ಪ್ರಯಾಣಂ
ಸ್ವೀಯಾಯ ಸದ್ಮನ ಇಯೇಷ ದಿದೇಶ ಚಾಶು ।
ರುದ್ರಂ ಸ್ವಲೋಕಗಮನಾಯ ರಘೂತ್ತಮಸ್ಯ
ಸಂಪ್ರಾರ್ಥನೇ ಸ ಚ ಸಮೇತ್ಯ ವಿಭುಂ ಯಯಾಚೇ ॥ ४४ ॥

ಪದಚ್ಛೇದ : ಆಮನ್ತ್ರ್ಯ ತೈಃ ಸಹ ವಿಭುಃ ಭಗವತ್ಪ್ರಯಾಣಂ ಸ್ವೀಯಾಯ ಸದ್ಮನಃ ಇಯೇಷ ದಿದೇಶ ಚ ಆಶು । ರುದ್ರಂ ಸ್ವಲೋಕಗಮನಾಯ ರಘೂತ್ತಮಸ್ಯ ಸಂಪ್ರಾರ್ಥನೇ ಸಃ ಚ ಸಮೇತ್ಯ ವಿಭುಂ ಯಯಾಚೇ ॥

ಅರ್ಥ :- ವಿಭುಃ ಚತುರ್ಮುಖಬ್ರಹ್ಮನು ತೈಃ ದೇವತೆಗಳಿಂದ ಸಹ ಕೂಡಿಕೊಂಡು ಆಮನ್ತ್ರ್ಯ ವಿಚಾರ ಮಾಡಿ ಸ್ವೀಯಾಯ ತನ್ನ (ಭಗವಂತನ) ಸದನೇ ಲೋಕಕ್ಕೆ ಭಗವತ್ಪ್ರಯಾಣಂ ಪರಮಾತ್ಮನ ಆಗಮನವನ್ನು ಇಯೇಷ ಇಚ್ಛಿಸಿದನು. ರಘೂತ್ತಮಸ್ಯ ಶ್ರೀರಾಮನ ಸ್ವಲೋಕಗಮನಾಯ ತನ್ನ ಲೋಕಕ್ಕೆ ಹಿಂತಿರುಗಲು ಸಂಪ್ರಾರ್ಥನೇ ಪ್ರಾರ್ಥಿಸಲು ರುದ್ರಂ ಶಿವನನ್ನು ಆಶು ಕೂಡಲೇ ದಿದೇಶ ಚ ಆದೇಶಿಸಿದನು. ಸ ಚ ರುದ್ರನಾದರೂ ವಿಭುಂ ಶ್ರೀರಾಮನನ್ನು ಸಮೇತ್ಯ ಹೊಂದಿ ಯಯಾಚೇ ಬೇಡಿದನು.

ತಾತ್ಪರ್ಯ :- ಬ್ರಹ್ಮದೇವರು ದೇವತೆಗಳೊಂದಿಗೆ ಸಮಾಲೋಚಿಸಿ ಭಗವಂತ ತನ್ನ ಲೋಕಕ್ಕೆ ಪ್ರಯಾಣ ಮಾಡಲೆಂದು ಅಪೇಕ್ಷಿಸಿದರು. ಶ್ರೀರಾಮನನ್ನು ತನ್ನ ಲೋಕಕ್ಕೆ ಮರಳಲು ಪ್ರಾರ್ಥಿಸಬೇಕೆಂದು ರುದ್ರದೇವರನ್ನು ಕಳುಹಿಸಿಕೊಟ್ಟರು. ರುದ್ರದೇವರು ಶ್ರೀರಾಮನ ಬಳಿಗೆ ಬಂದು ಪ್ರಾರ್ಥಿಸಿಕೊಂಡರು.

ಏಕಾಂತಮೇತ್ಯ ರಘುಪೇಣ ಸಮಸ್ತಕಾಲೋ
ರುದ್ರೋ ಜಗಾದ ವಚನಂ ಜಗತೋ ವಿಧಾತುಃ ।
ವೈಶೇಷ್ಯಮಾತ್ಮಸದನಸ್ಯ ಹಿ ಕಾಂಕ್ಷಮಾಣಾ
ಸ್ತ್ವಾಮರ್ಥಯಂತಿ ವಿಬುಧಾಃ ಸಹಿತಾ ವಿಧಾತ್ರಾ ॥ ४६ ॥

ಪದಚ್ಛೇದ : ಏಕಾಂತಮ್ ಏತ್ಯ ರಘುಪೇಣ ಸಮಸ್ತಕಾಲಃ ರುದ್ರಃ ಜಗಾದ ವಚನಂ ಜಗತಃ ವಿಧಾತುಃ । ವೈಶೇಷ್ಯಮ್ ಆತ್ಮಸದನಸ್ಯ ಹಿ ಕಾಂಕ್ಷಮಾಣಾಃ ತ್ವಾಮ್ ಅರ್ಥಯಂತಿ ವಿಬುಧಾಃ ಸಹಿತಾಃ ವಿಧಾತ್ರಾ.

**ಅರ್ಥ** :- **ಸಮಸ್ತಕಾಲಃ** ಸಮಸ್ತವನ್ನೂ ನಾಶಪಡಿಸುವ **ರುದ್ರಃ** ರುದ್ರನು **ರಘುಪೇಣ** ಶ್ರೀರಾಮಚಂದ್ರನಿಂದ **ಏಕಾಂತಮ್** ಏಕಾಂತವನ್ನು ಏತ್ಯ ಹೊಂದಿ **ವಿಧಾತ್ರಾ** ಬ್ರಹ್ಮನಿಂದ **ಸಹಿತಾಃ** ಕೂಡಿದ **ವಿಬುಧಾಃ** ದೇವತೆಗಳು **ಆತ್ಮಸದನಸ್ಯ ಹಿ** ತಮ್ಮ ಲೋಕಕ್ಕೇ **ವೈಶಿಷ್ಟ್ಯಂ** ಶ್ರೇಷ್ಠತ್ವವನ್ನು **ಕಾಂಕ್ಷಮಾಣಾಃ** ಅಪೇಕ್ಷಿಸುವವರಾಗಿ **ತ್ವಾಮ್** ನಿನ್ನನ್ನು **ಅರ್ಥಯಂತಿ** ಪ್ರಾರ್ಥಿಸುತ್ತಾರೆ **ಇತಿ** ಎಂದು **ಜಗತಃ** ಜಗತ್ತಿನ **ವಿಧಾತುಃ** ಸೃಷ್ಟಿಕರ್ತನಾದ ಬ್ರಹ್ಮನ **ವಚನಂ** ಮಾತನ್ನು **ಜಗಾದ** ಹೇಳಿದನು.

**ತಾತ್ಪರ್ಯ** :- ಸಮಸ್ತವನ್ನೂ ನಾಶಪಡಿಸುವ ರುದ್ರನು ಜಗತ್ತಿನ ಸೃಷ್ಟಿಕರ್ತನಾದ ಬ್ರಹ್ಮನ ಮಾತನ್ನು ಶ್ರೀರಾಮನೊಂದಿಗೆ ಏಕಾಂತದಲ್ಲಿ ನಿವೇದಿಸಿಕೊಂಡನು. ''ತಮ್ಮ ಲೋಕಗಳಿಗೇ ಶ್ರೇಷ್ಠತ್ವವನ್ನು ಬಯಸಿರುವ ಬ್ರಹ್ಮಸಮೇತರಾದ ಎಲ್ಲಾ ದೇವತೆಗಳು ನಿನ್ನನ್ನು ವೈಕುಂಠಕ್ಕೆ ತೆರಳಲು ಪ್ರಾರ್ಥಿಸುತ್ತಿದ್ದಾರೆ.''

**ಪುತ್ರಸ್ತವೇಶ ಕಮಲಪ್ರಭವಸ್ತಥಾಽಹಂ**
**ಪೌತ್ರಸ್ತು ಪೌತ್ರಕವಚೋ ಯದಪಿ ಹ್ಯಯೋಗ್ಯಮ್ ।**
**ಸಂಭಾವಯಂತಿ ಗುಣಿನಸ್ತದಹಂ ಯಯಾಚೇ**
**ಗಂತುಂ ಸ್ವಸದ್ಮ ನತಿಪೂರ್ವಮಿತೋ ಭವಂತಮ್ ॥ ೪೭ ॥**

ಪದಚ್ಛೇದ : ಪುತ್ರಃ ತವ ಈಶ ಕಮಲಪ್ರಭವಃ ತಥಾ ಅಹಂ ಪೌತ್ರಃ ತು ಪೌತ್ರಕವಚಃ ಯತ್ ಅಪಿ ಹಿ ಅಯೋಗ್ಯಮ್ । ಸಂಭಾವಯಂತಿ ಗುಣಿನಃ ತತ್ ಅಹಂ ಯಯಾಚೇ ಗಂತುಂ ಸ್ವಸದ್ಮ ನತಿಪೂರ್ವಮ್ ಇತಃ ಭವಂತಮ್ ॥

**ಅರ್ಥ** :- ಹೇ **ಈಶ** ಪ್ರಭು, **ಕಮಲಪ್ರಭವಃ** ಚತುರ್ಮುಖಬ್ರಹ್ಮನು **ತವ** ನಿನ್ನ **ಪುತ್ರಃ** ಮಗನು **ತಥಾ** ಹಾಗೇ **ಅಹಂ** ನಾನು **ಪೌತ್ರಃ** ಮೊಮ್ಮಗನು **ಯದಪಿ** ಒಂದು ವೇಳೆ **ಪೌತ್ರಕವಚಃ** ಮೊಮ್ಮಗನ ಮಾತು, **ಅಯೋಗ್ಯಂ ಹಿ** ಗ್ರಾಹ್ಯವಲ್ಲವೆನಿಸಿದರೂ **ಗುಣಿನಃ** ಗುಣವಂತರು, **ತತ್** ಮೊಮ್ಮಗನ ಮಾತನ್ನು **ಸಂಭಾವಯಂತಿ** ಕೇಳುತ್ತಾರೆ. **ಅಹಂ** ನಾನು **ಭವಂತಂ** ನಿನ್ನನ್ನು **ಸ್ವಸದ್ಮ** ನಿನ್ನ ಲೋಕವಾದ ವೈಕುಂಠಕ್ಕೆ **ಇತಃ** ಇಲ್ಲಿಂದ **ಗಂತುಂ** ಹೋಗಲು **ನತಿಪೂರ್ವಂ** ನಮಸ್ಕಾರ ಪೂರ್ವಕವಾಗಿ **ಯಯಾಚೇ** ಪ್ರಾರ್ಥಿಸುತ್ತೇನೆ.

**ತಾತ್ಪರ್ಯ** :- ಪ್ರಭು ! ಕಮಲಸಂಭವನಾದ ಚತುರ್ಮುಖಬ್ರಹ್ಮ ನಿನ್ನ ಮಗ. ಅದರಂತೆ ನಾನು ನಿನ್ನ ಮೊಮ್ಮಗ. ಮೊಮ್ಮಗನ ಮಾತು ಕಿರಿಯನಾದ ಕಾರಣ ಗ್ರಾಹ್ಯವಲ್ಲದಿದ್ದರೂ ಗುಣವಂತರು ಅದನ್ನು ಅಂಗೀಕರಿಸುತ್ತಾರೆ. ಆದ್ದರಿಂದ ನಾನು ನಿನ್ನನ್ನು ನಿನ್ನ ಸ್ಥಳವಾದ ವೈಕುಂಠಕ್ಕೆ ಹೋಗಬೇಕೆಂದು ನಮಸ್ಕಾರ ಪೂರ್ವಕವಾಗಿ ಬೇಡಿಕೊಳ್ಳುತ್ತೇನೆ.

**ಯತ್ಕಾರ್ಯಸಾಧನಕೃತೇ ವಿಬುಧಾರ್ಥಿತಸ್ತ್ವಂ**
**ಪ್ರಾದುಶ್ಚಕರ್ಥ ನಿಜರೂಪಮಶೇಷಮೇವ ।**
**ತತ್ ಸಾಧಿತಂ ಹಿ ಭವತಾ ತದಿತಃ ಸ್ವಧಾಮ**
**ಕ್ಷಿಪ್ರಂ ಪ್ರಯಾಹಿ ಹರುಷಂ ವಿಬುಧೇಷು ಕುರ್ವನ್ ॥ ೪೮ ॥**

ಪದಚ್ಛೇದ : **ಯತ್ಕಾರ್ಯಸಾಧನಕೃತೇ ವಿಬುಧಾರ್ಥಿತಃ ತ್ವಂ ಪ್ರಾದುಶ್ಚಕರ್ಥ ನಿಜರೂಪಮ್ ಅಶೇಷಮ್ ಏವ । ತತ್ ಸಾಧಿತಂ ಹಿ ಭವತಾ ತತ್ ಇತಃ ಸ್ವಧಾಮ ಕ್ಷಿಪ್ರಂ ಪ್ರಯಾಹಿ ಹರುಷಂ ವಿಬುಧೇಷು ಕುರ್ವನ್ ॥**

**ಅರ್ಥ** :- **ಯತ್ಕಾರ್ಯಸಾಧನಕೃತೇ** ಯಾವ ಕಾರ್ಯವನ್ನು ಸಾಧಿಸಲೆಂದು **ವಿಬುಧಾರ್ಥಿತಃ** ದೇವತೆಗಳಿಂದ ಪ್ರಾರ್ಥಿತನಾಗಿ **ತ್ವಂ** ನೀನು **ನಿಜರೂಪಂ** ನಿನ್ನ ರೂಪವನ್ನು **ಪ್ರಾದುಶ್ಚಕರ್ಥ** ಪ್ರಕಟಪಡಿಸಿದೆಯೋ **ತತ್** ಅಂತಹ **ಅಶೇಷಮೇವ** ಎಲ್ಲ ಕಾರ್ಯಗಳೂ **ಸಾಧಿತಂ ಹಿ** ಸಾಧಿತವಾಗಿಯೇ ಇದೆ. **ತತ್** ಆದ್ದರಿಂದ **ಇತಃ** ಈ ಭೂಲೋಕದಿಂದ **ಕ್ಷಿಪ್ರಂ** ಕೂಡಲೇ **ವಿಬುಧೇಷು** ದೇವತೆಗಳಲ್ಲಿ **ಹರುಷಂ** ಸಂತೋಷವನ್ನು **ಕುರ್ವನ್** ಮಾಡುವವನಾಗಿ **ಸ್ವಧಾಮ** ವೈಕುಂಠಲೋಕವನ್ನು ಕುರಿತು **ಪ್ರಯಾಹಿ** ಹೊರಡು.

**ತಾತ್ಪರ್ಯ** :- ಯಾವ ಧ್ಯೇಯವನ್ನು ಸಾಧಿಸಬೇಕೆಂದು ದೇವತೆಗಳಿಂದ ಪ್ರಾರ್ಥಿತನಾಗಿ ನೀನು ಈ ರೂಪದಿಂದ (ಈ ರಾಮರೂಪದಿಂದ) ಅವತಾರ ಮಾಡಿದೆಯೋ, ಆ ಕಾರ್ಯವನ್ನು ನೀನು ಪೂರ್ಣವಾಗಿ ಸಾಧಿಸಿರುವಿ. ಆದ್ದರಿಂದ ದೇವತೆಗಳಿಗೆ ಸಂತೋಷವನ್ನುಂಟುಮಾಡಲು ಇಲ್ಲಿಂದ ಬೇಗನೆ ನಿನ್ನ ಲೋಕಕ್ಕೆ ತೆರಳು.

(ವಿ.ಸೂ. : ಕೆಲವೊಮ್ಮೆ ಸಂಸ್ಕೃತದಲ್ಲಿ ಸಂಯುಕ್ತಾಕ್ಷರಗಳ ಮಧ್ಯದಲ್ಲಿ ಸ್ವರ ಸೇರಿಕೊಂಡಿರುವ ಉದಾಹರಣೆಗಳುಂಟು. ಉದಾ : ಪೃಥ್ವೀ ಪೃಥಿವೀ. ಚಂದ್ರ

ಚಂದಿರ. ಹೀಗಾಗಿ ಇಲ್ಲಿ ಹರುಷ ಎಂದು ಛಂದೋಭಂಗ ನಿವಾರಣಾರ್ಥ ವಾಗಿ ಆಚಾರ್ಯರು ಹೊಸದಾಗಿ ಕಲ್ಪಿಸಿದ ಪ್ರಯೋಗವೆಂದು ಹೇಳ ಬೇಕಾಗಿಲ್ಲ. ಅದಕ್ಕೆ ಬದಲಾಗಿ ಆಚಾರ್ಯರು ತಮ್ಮ ಕಾಲದಲ್ಲಿ ಇದ್ದ ಪ್ರಯೋಗವನ್ನು ನೋಡಿ ಸಹಜವಾಗಿಯೇ ಈ ಶಬ್ದವನ್ನು ಇಲ್ಲಿ ಬಳಸಿ ದ್ದಾರೆಂದು ಭಾವಿಸುವುದೇ ಸೂಕ್ತ.)

**ಶ್ರೀರಾಮನ ಅಂಗೀಕಾರ ; ದುರ್ವಾಸಮುನಿಯ ಆಗಮನ**

**ಓಮಿತ್ಯುವಾಚ ಭಗವಾಂಸ್ತದಶೇಷಮೇವ**
**ಶ್ರುತ್ವಾ ರಹಸ್ಯಥ ತನುಸ್ತ್ವಪರಾ ಹರಸ್ಯ ।**
**ದುರ್ವಾಸನಾಮಯುಗಿಹಾಗಮದಾಶು 'ರಾಮ**
**ಮಾಂ ಭೋಜಯ ಕ್ಷುಧಿತ'ಮಿತ್ಯಸಕೃದ್ ಬ್ರುವಾಣಃ ॥ ೪೯ ॥**

**ಪದಚ್ಛೇದ :** ಓಮ್ ಇತಿ ಉವಾಚ ಭಗವಾನ್ ತತ್ ಅಶೇಷಮ್ ಏವಂ ಏವ ಶ್ರುತ್ವಾ ರಹಸಿ ಅಥ ತನುಃ ತು ಅಪರಾ ಹರಸ್ಯ । ದುರ್ವಾಸನಾಮಯುಕ್ ಇಹ ಅಗಮತ್ ಆಶು ರಾಮ ಮಾಂ ಭೋಜಯ ಕ್ಷುಧಿತಮ್ ಇತಿ ಅಸಕೃತ್ ಬ್ರುವಾಣಃ ॥

**ಅರ್ಥ :-** **ಭಗವಾನ್** ಶ್ರೀರಾಮಚಂದ್ರನು **ರಹಸಿ** ಏಕಾಂತದಲ್ಲಿ **ತತ್** ಆ **ಅಶೇಷಂ** ಎಲ್ಲ ವಿಚಾರವನ್ನೂ **ಶ್ರುತ್ವೈವ** ಕೇಳಿಯೇ **ಓಮಿತಿ** ಆಗಲೆಂದು **ಉವಾಚ** ಹೇಳಿದನು. **ಅಥ** ಅನಂತರ **ಹರಸ್ಯ** ರುದ್ರನ **ಅಪರಾ** ಇನ್ನೊಂದು **ದುರ್ವಾಸನಾಮಯುಕ್** ದುರ್ವಾಸ ಎಂಬ ಹೆಸರಿನಿಂದ ಕೂಡಿದ **ತನುಃ** ಶರೀರವು **ಕ್ಷುಧಿತಂ** ಹಸಿದಿರುವ **ಮಾಂ** ನನ್ನನ್ನು **ಭೋಜಯ** ಉಣಿಸು **ಇತಿ** ಎಂದು **ಅಸಕೃತ್** ಮತ್ತೆ ಮತ್ತೆ **ಬ್ರುವಾಣಃ** ಹೇಳತಕ್ಕದ್ದಾಗಿ **ಇಹ** ರಾಮನಲ್ಲಿಗೆ **ಆಶು** ಕೂಡಲೇ **ಅಗಮತ್** ಬಂದಿತು.

**ತಾತ್ಪರ್ಯ :-** ಶ್ರೀರಾಮಚಂದ್ರನು ಏಕಾಂತದಲ್ಲಿ ರುದ್ರನು ಹೇಳಿದ ಎಲ್ಲ ವಿಚಾರವನ್ನು ಕೇಳಿ ಕೂಡಲೇ 'ಆಗಲಿ' ಎಂದು ನುಡಿದನು. ಇದೇ ಸಮಯ ದಲ್ಲಿ ಶಿವನ ಇನ್ನೊಂದು ಅವತಾರವಾದ ದುರ್ವಾಸನು 'ರಾಮ ! ಹಸಿದಿರುವ ನನಗೆ ಭೋಜನ ನೀಡು' ಎಂದು ಪುನಃ ಪುನಃ ಹೇಳುತ್ತಾ ಅಲ್ಲಿಗೆ ವೇಗವಾಗಿ ಧಾವಿಸಿದನು.

ದುರ್ವಾಸಪ್ರತಿಜ್ಞಾಭಂಗ

ಸಿದ್ಧಂ ನ ದೇಯಮುತ ಸಾಧ್ಯಮಪೀತಿ ವಾಚಂ
ಶ್ರುತ್ವಾಽಸ್ಯ ವಾಕ್ಸಮಯಜಾತಮುರು ಸ್ವಹಸ್ತಾತ್ ।
ಅನ್ನಂ ಚತುರ್ಗುಣಮದಾದಮೃತೋಪಮಾನಂ
ರಾಮಸ್ತದಾಪ್ಯ ಬುಭುಜೇಽಥ ಮುನಿಃ ಸುತುಷ್ಟಃ ॥ ೫೦ ॥

ಪದಚ್ಛೇದ : ಸಿದ್ಧಂ ನ ದೇಯಂ ಉತ ಸಾಧ್ಯಮ್ ಅಪಿ ಇತಿ ವಾಚಂ ಶ್ರುತ್ವಾ ಅಸ್ಯ ವಾಕ್ಸಮಯಜಾತಮ್ ಉರು ಸ್ವಹಸ್ತಾತ್ । ಅನ್ನಂ ಚತುರ್ಗುಣಮ್ ಅದಾತ್ ಅಮೃತೋಪಮಾನಂ ರಾಮಃ ತತ್ ಆಪ್ಯ ಬುಭುಜೇ ಅಥ ಮುನಿಃ ಸುತುಷ್ಟಃ ॥

**ಅರ್ಥ :-** **ಸಿದ್ಧಂ** ಮೊದಲು ಸಿದ್ಧವಾದದ್ದು **ನ ದೇಯಂ** ಕೊಡಬಾರದು **ಉತ** ಹಾಗೇ **ಸಾಧ್ಯಮಪಿ** ಮುಂದೆ ಸಿದ್ಧಮಾಡತಕ್ಕದ್ದೂ **ನ ದೇಯಂ** ಕೊಡಬಾರದು **ಇತಿ** ಎಂದು **ವಾಚಂ** ಮಾತನ್ನು **ಶ್ರುತ್ವಾ** ಕೇಳಿ **ಸ್ವಹಸ್ತಾತ್** ತನ್ನ ಕೈಯಿಂದ **ಅಸ್ಯ** ದುರ್ವಾಸರ **ವಾಕ್ಸಮಯಜಾತಂ** ಮಾತಿನ ಸಮಯ ದಲ್ಲಿಯೇ ಸಿದ್ಧವಾದ **ಉರು** ಶ್ರೇಷ್ಠವಾದ **ಅಮೃತೋಪಮಾನಂ** ಅಮೃತಕ್ಕೆ ಸದೃಶವಾದ **ಚತುರ್ಗುಣಂ** ನಾಲ್ಕುವಿಧವಾದ **ಅನ್ನಂ** ಅನ್ನವನ್ನು **ರಾಮಃ** ಶ್ರೀರಾಮನು **ಅದಾತ್** ಕೊಟ್ಟನು. **ತತಃ** ಆ ಅನ್ನವನ್ನು **ಆಪ್ಯ** ಹೊಂದಿ, **ಮುನಿಃ** ದುರ್ವಾಸಮುನಿಯು **ಬುಭುಜೇ** ಉಂಡನು. **ಅಥ** ಅನಂತರ **ಸುತುಷ್ಟಃ** ಸಂತೋಷಗೊಂಡನು.

**ತಾತ್ಪರ್ಯ :-** ''ಮೊದಲೇ ಸಿದ್ಧ ಪಡಿಸಿರುವ ಅಡುಗೆಯನ್ನೂ ನನಗೆ ಕೊಡಬೇಡ. ಅಥವಾ ಇನ್ನು ಮುಂದೆ ಸಿದ್ಧವಾಗಲಿರುವ ಅಡುಗೆಯನ್ನೂ ಕೊಡಬೇಡ'' ಎಂದು ದುರ್ವಾಸನ ಮಾತನ್ನು ಕೇಳಿ ಅವರು ಹೀಗೆ ಮಾತಾಡುತ್ತಿದ್ದಂತೆಯೇ ಶ್ರೀರಾಮನು ಶ್ರೇಷ್ಠವಾದ, ಅಮೃತಕ್ಕೆ ಸಮಾನವಾದ (ಭಕ್ಷ್ಯ, ಭೋಜ್ಯ, ಲೇಹ್ಯ ಹಾಗೂ ಪೇಯ ಎಂಬ ನಾಲ್ಕು ವಿಧವಾದ) ಅನ್ನವನ್ನು ತನ್ನ ಕೈಯಿಂದಲೇ ಕೊಟ್ಟನು. ದುರ್ವಾಸಮುನಿಯು ಅದನ್ನು ಸ್ವೀಕರಿಸಿ, ಬಹಳ ಸಂತೋಷ ಹೊಂದಿದನು.

ತೃಪ್ತೋ ಯಯೌ ಚ ಸಕಲಾನ್ ಪ್ರತಿ ಕೋಪಯಾನಃ
ಕಶ್ಚಿನ್ನ ಮೇಽರ್ಥಿತವರಂ ಪ್ರತಿದಾತುಮೀಶಃ ।

ಏವಂ ಪ್ರತಿಜ್ಞಕ ಋಷಿಃ ಸ ಹಿ ತತ್ಪ್ರತಿಜ್ಞಾಂ
ಮೋಘಾಂ ಚಕಾರ ಭಗವಾನ್ ನ ತು ಕಶ್ಚಿದನ್ಯಃ ॥ ೫೧ ॥

ಪದಚ್ಛೇದ : ತೃಪ್ತಃ ಯಯೌ ಚ ಸಕಲಾನ್ ಪ್ರತಿ ಕೋಪಯಾನಃ ಕಶ್ಚಿತ್ ನ ಮೇ ಅರ್ಥಿತವರಂ ಪ್ರತಿದಾತುಮ್ ಈಶಃ । ಏವಂ ಪ್ರತಿಜ್ಞಕ ಋಷಿಃ ಸಃ ಹಿ ತತ್ ಪ್ರತಿಜ್ಞಾಂ ಮೋಘಾಂ ಚಕಾರ ಭಗವಾನ್ ನ ತು ಕಶ್ಚಿತ್ ಅನ್ಯಃ ॥

**ಅರ್ಥ** :- **ಕಶ್ಚಿತ್** ಯಾರೂ **ಮೇ** ನನ್ನ **ಅರ್ಥಿತವರಂ** ಕೇಳಿದ ಅಭೀಷ್ಟವನ್ನು **ಪ್ರತಿದಾತುಂ** ಕೊಡಲು **ನ ಈಶಃ** ಸಮರ್ಥನಲ್ಲ **ಇತಿ** ಎಂದು **ಏವಂ ಪ್ರತಿಜ್ಞಕಃ** ಈ ರೀತಿಯಾಗಿ ಪ್ರತಿಜ್ಞೆಯುಳ್ಳ ಹಾಗೂ **ಸಕಲಾನ್ ಪ್ರತಿ** ಎಲ್ಲರ ಬಗ್ಗೆಯೂ **ಕೋಪಯಾನಃ** (ಈ ಹಿಂದೆ ಹಲವಾರು ಸಲ) ಕ್ರೋಧವನ್ನು ಮಾಡಿದ **ಋಷಿಃ** ದುರ್ವಾಸಮುನಿಯು (ಈ ಬಾರಿಗೆ ಮಾತ್ರ) **ತೃಪ್ತಃ** ಸಂತೋಷಗೊಂಡವನಾಗಿ **ಯಯೌ** ಹಿಂತಿರುಗಿದನು. **ಭಗವಾನ್** ಪೂಜ್ಯನಾದ **ಸಃ** ಶ್ರೀರಾಮನು **ತತ್ಪ್ರತಿಜ್ಞಾಂ** ದುರ್ವಾಸರ ಪ್ರತಿಜ್ಞೆಯನ್ನು **ಮೋಘಾಂ** ವ್ಯರ್ಥವನ್ನಾಗಿ **ಚಕಾರ ಹಿ** ಮಾಡಿದನಷ್ಟೇ. ಈ ರೀತಿಯಾಗಿ **ಅನ್ಯಃ** ಇನ್ನೊಬ್ಬನು **ಕಶ್ಚಿತ್** ಯಾರೂ ಕೂಡ **ನ ತು** ಮಾಡಲಾರ.

**ತಾತ್ಪರ್ಯ** :- ''ನಾನು ಬಯಸಿದ ಅಭೀಷ್ಟವನ್ನು ನೀಡಲು ಯಾರೂ ಸಮರ್ಥನಲ್ಲ'' ಎಂಬ ಪ್ರತಿಜ್ಞೆಯನ್ನು ಮಾಡಿ (ಅಂದುಕೊಂಡು) ಅದುವರೆಗೆ ಎಲ್ಲರ ಮೇಲೂ ಸಿಟ್ಟಾಗುತ್ತಿದ್ದ ದುರ್ವಾಸಮುನಿ ಶ್ರೀರಾಮನಿಂದ ಆತಿಥ್ಯ ಸ್ವೀಕರಿಸಿ ಸಂತೋಷಗೊಂಡವನಾಗಿ ಹೊರಟುಹೋದ. ಅವನು ಮಾಡಿದ ಪ್ರತಿಜ್ಞೆಯನ್ನು (ಅಂದುಕೊಂಡಿದ್ದನ್ನು) ಭಂಗಗೊಳಿಸಿದ್ದು ಭಗವಂತನಾದ ಶ್ರೀರಾಮನೇ. ಬೇರೆ ಯಾರೂ ಕೂಡ ಹಾಗೆ ಮಾಡಲಾರರು.

ಕುಂತೀ ತು ತಸ್ಯ ಹಿ ಮುನೇರ್ವರತೋಽಜಯತ್ ತಂ
ರಾಮಃ ಸ ಕೃಷ್ಣತನುವಾ ಸ್ವಬಲಾಜ್ಜಿಗಾಯ ।
ತಸ್ಮಿಂಚ್ಛಿವೇ ಪ್ರತಿಗತೇ ಮುನಿರೂಪಕೇ ಚ
ಯಾಹೀತಿ ಲಕ್ಷ್ಮಣಮುವಾಚ ರಮಾಪತಿಃ ಸಃ ॥ ೫೨ ॥

ಪದಚ್ಛೇದ : ಕುಂತೀ ತು ತಸ್ಯ ಹಿ ಮುನೇಃ ವರತಃ ಅಜಯತ್ ತಂ ರಾಮಃ ಸಃ ಕೃಷ್ಣತನುವಾ ಸ್ವಬಲಾತ್ ಜಿಗಾಯ । ತಸ್ಮಿನ್ ಶಿವೇ ಪ್ರತಿಗತೇ ಮುನಿರೂಪಕೇ ಚ ಯಾಹಿ ಇತಿ ಲಕ್ಷ್ಮಣಮ್ ಉವಾಚ ರಮಾಪತಿಃ ಸಃ ॥

**ಅರ್ಥ :- ಕುಂತೀ ತು** ಕುಂತಿಯಾದರೂ **ತಸ್ಯ** ಆ **ಮುನೇಃ** ಮುನಿಯ **ವರತೋ ಹಿ** ವರಬಲದಿಂದಲೇ **ಅಜಯತ್** ಗೆದ್ದಳು. **ಸಃ** ಆ **ರಾಮಃ** ಶ್ರೀರಾಮನು **ಕೃಷ್ಣತನುವಾ** ಕೃಷ್ಣರೂಪದಿಂದ **ಸ್ವಬಲಾತ್** ತನ್ನ ಶಕ್ತಿಯಿಂದ **ಜಿಗಾಯ** ಗೆದ್ದನು **ಮುನಿರೂಪಕೇ ಚ** ಮುನಿರೂಪದ ಶಿವನೂ **ತಸ್ಮಿನ್** ಆ **ಶಿವೇ** ರುದ್ರನು **ಪ್ರತಿಗತೇ** ಹೋಗುತ್ತಿರಲು **ಸಃ** ಆ **ರಮಾಪತಿಃ** ಶ್ರೀರಾಮಚಂದ್ರನು **ಲಕ್ಷ್ಮಣಂ** ಲಕ್ಷ್ಮಣನನ್ನು **ಯಾಹಿ ಇತಿ** ಹೊರಡು ಎಂದು **ಉವಾಚ** ಹೇಳಿದನು.

**ತಾತ್ಪರ್ಯ :-** ಕುಂತಿಯು ದುರ್ವಾಸಮುನಿಯು ಕೊಟ್ಟಿರುವ ವರಬಲದಿಂದಲೇ ಅವನ ಹೃದಯವನ್ನು ಗೆದ್ದಳು. ಶ್ರೀರಾಮಚಂದ್ರನು ಕೃಷ್ಣರೂಪದಿಂದ ಸ್ವರೂಪ ಭೂತವಾದ ಸಾಮರ್ಥ್ಯದಿಂದ ಅವನ ಹೃದಯವನ್ನು ಗೆದ್ದನು. ಹೀಗೆ ಮೂಲರೂಪದ ಶಿವ ಮತ್ತು ಮುನಿರೂಪದ ಶಿವ ಇಬ್ಬರೂ ಹೊರಟಾಗ ರಮಾಪತಿಯಾದ ಶ್ರೀರಾಮಚಂದ್ರನು ಲಕ್ಷ್ಮಣನನ್ನು (ವೈಕುಂಠಕ್ಕೆ) ನೀನು ತೆರಳು ಎಂದು ನುಡಿದನು.

### ಲಕ್ಷ್ಮಣ ! ಮೂಲರೂಪಕ್ಕೆ ತೆರಳು : ಶ್ರೀರಾಮನ ಆದೇಶ

**ಏಕಾಂತೇ ತು ಯದಾ ರಾಮಶ್ಚಕ್ರೇ ರುದ್ರೇಣ ಸಂವಿದಮ್ ।**
**ದ್ವಾರಪಾಲಂ ಸ ಕೃತವಾಂಸ್ತದಾ ಲಕ್ಷ್ಮಣಮೇವ ಚ ॥ ೫೩ ॥**

**ಯದ್ಯತ್ರ ಪ್ರವಿಶೇತ್ ಕಶ್ಚಿದ್ಧನ್ಮಿ ತ್ವೇತಿ ವಚೋ ಬ್ರುವನ್ ।**
**ತದಂತರಾಗತಮೃಷಿಂ ದೃಷ್ಟ್ವಾ ಽಮನ್ಯತ ಲಕ್ಷ್ಮಣಃ ॥ ೫೪ ॥**

ಪದಚ್ಛೇದ : ಏಕಾಂತೇ ತು ಯದಾ ರಾಮಃ ಚಕ್ರೇ ರುದ್ರೇಣ ಸಂವಿದಮ್ । ದ್ವಾರಪಾಲಂ ಸಃ ಕೃತವಾನ್ ತದಾ ಲಕ್ಷ್ಮಣಮ್ ಏವ ಚ । ಯದಿ ಅತ್ರ ಪ್ರವಿಶೇತ್ ಕಶ್ಚಿತ್ ಹನ್ಮಿ ತ್ವಾ ಇತಿ ವಚಃ ಬ್ರುವನ್ । ತದಂತಃ ಆಗತಂ ಋಷಿಂ ದೃಷ್ಟ್ವಾ ಅಮನ್ಯತ ಲಕ್ಷ್ಮಣಃ ॥

**ಅರ್ಥ :- ಯದಾ** ಯಾವಾಗ **ರಾಮಃ** ಶ್ರೀರಾಮನು **ಏಕಾಂತೇ** ಏಕಾಂತದಲ್ಲಿ **ರುದ್ರೇಣ** ರುದ್ರನೊಂದಿಗೆ **ಸಂವಿದಂ** ವಿಚಾರವನ್ನು **ಚಕ್ರೇ** ಮಾಡಿದನೋ **ತದಾ** ಆಗ **ಲಕ್ಷ್ಮಣಮೇವ** ಲಕ್ಷ್ಮಣನನ್ನೇ **ದ್ವಾರಪಾಲಂ**

ದ್ವಾರಪಾಲಕನನ್ನಾಗಿ **ಕೃತವಾನ್** ಮಾಡಿದನು. **ಯದಿ** ಒಂದು ವೇಳೆ **ಅತ್ರ** ಸಂಭಾಷಣೆ ನಡೆಯುವ ಕಾಲದಲ್ಲಿ **ಕಶ್ಚಿತ್** ಯಾರಾದರೂ **ಪ್ರವಿಶೇತ್** ಪ್ರವೇಶ ಮಾಡಿದರೆ **ತ್ವಾಂ** ನಿನ್ನನ್ನು **ಹನ್ಮಿ** ಕೊಲ್ಲುವೆನು **ಇತಿ** ಎಂದು **ವಚಃ** ಮಾತನ್ನು **ಬ್ರುವನ್** ಹೇಳುವವನಾಗಿ (**ದ್ವಾರಪಾಲಂ** ದ್ವಾರಪಾಲಕನನ್ನಾಗಿ **ಕೃತವಾನ್** ಮಾಡಿದನು) **ತದಂತಃ ಆಗತಂ** ರಾಮರುದ್ರರ ಸಂಭಾಷಣೆಯ ನಡುವೆ ಬಂದ **ಋಷಿಂ** ದುರ್ವಾಸಮುನಿಯನ್ನು **ದೃಷ್ಟ್ವಾ** ನೋಡಿ **ಲಕ್ಷ್ಮಣಃ** ಲಕ್ಷ್ಮಣನು **ಅಮನ್ಯತ** ವಿಚಾರ ಮಾಡಿದನು.

**ತಾತ್ಪರ್ಯ** :- ಏಕಾಂತದಲ್ಲಿ ಶ್ರೀರಾಮ ಶಿವನೊಂದಿಗೆ ಸಂಭಾಷಣೆಯನ್ನು ಮಾಡುತ್ತಿರುವಾಗ ಲಕ್ಷ್ಮಣನನ್ನು ದ್ವಾರಪಾಲಕನನ್ನಾಗಿ ನಿಯೋಜಿಸಿದ್ದನು. ಯಾರಾದರೂ ಒಳಗೆ ಪ್ರವೇಶ ಮಾಡಿದರೆ ನಿನ್ನನ್ನು ಕೊಲ್ಲುವೆನೆಂದು ತಿಳಿಸಿದ್ದನು. ಈ ಸಮಯದಲ್ಲಿ ಬಂದ ದುರ್ವಾಸಮುನಿಯನ್ನು ಕಂಡು ಲಕ್ಷ್ಮಣ ಆಲೋಚಿಸಿದನು.

**ದುರ್ವಾಸಸಃ ಪ್ರತಿಜ್ಞಾ ತು ರಾಮಂ ಪ್ರಾಪ್ಯೈವ ಭಜ್ಯತಾಮ್ ।**
**ಅನ್ಯಥಾ ತ್ವಯಶೋ ರಾಮೇ ಕರೋತ್ಯೇಷ ಮುನಿರ್ಧ್ರುವಮ್ ॥ ೫೫ ॥**

**ರಾಘವೋ ಘ್ನನ್ನಪಿ ತು ಮಾಂ ಕರೋತ್ಯೇವ ದಯಾಂ ಮಯಿ ।**
**ಇತಿ ಮತ್ವಾ ದದೌ ಮಾರ್ಗಂ ಸ ತು ದುರ್ವಾಸಸೇ ತದಾ ॥ ೫೬ ॥**

ಪದಚ್ಛೇದ : ದುರ್ವಾಸಸಃ ಪ್ರತಿಜ್ಞಾ ತು ರಾಮಂ ಪ್ರಾಪ್ಯ ಏವ ಭಜ್ಯತಾಮ್ । ಅನ್ಯಥಾ ತು ಅಯಶಃ ರಾಮೇ ಕರೋತಿ ಏಷಃ ಮುನಿಃ ಧ್ರುವಮ್ । ರಾಘವಃ ಘ್ನನ್ ಅಪಿ ತು ಮಾಂ ಕರೋತಿ ಏವ ದಯಾಂ ಮಯಿ । ಇತಿ ಮತ್ವಾ ದದೌ ಮಾರ್ಗಂ ಸಃ ತು ದುರ್ವಾಸಸೇ ತದಾ ॥

**ಅರ್ಥ** :- **ದುರ್ವಾಸಸಃ** ದುರ್ವಾಸ ಮುನಿಗಳ **ಪ್ರತಿಜ್ಞಾ ತು** ಪ್ರತಿಜ್ಞೆಯಾದರೂ **ರಾಮಂ** ಶ್ರೀರಾಮನನ್ನು **ಪ್ರಾಪ್ಯೈವ** ಹೊಂದಿಯೇ **ಭಜ್ಯತಾಂ** ಭಗ್ನವಾಗಲಿ **ಅನ್ಯಥಾ ತು** ಇಲ್ಲವಾದರೆ **ಏಷಃ** ದುರ್ವಾಸಮುನಿಯು **ರಾಮೇ** ರಾಮನಲ್ಲಿ **ಅಯಶಃ** ಅಪಕೀರ್ತಿಯನ್ನು **ಧ್ರುವಂ** ನಿಶ್ಚಯವಾಗಿ **ಕರೋತಿ** ಮಾಡುತ್ತಾನೆ. **ರಾಘವಃ** ಶ್ರೀರಾಮನು **ಮಾಂ** ನನ್ನನ್ನು **ಘ್ನನ್ನಪಿ** ಕೊಲ್ಲುತ್ತೇನೆಂದು ಹೇಳಿದರೂ ಕೂಡ **ಮಯಿ** ನನ್ನಲ್ಲಿ **ದಯಾಂ** ಕರುಣೆಯನ್ನು

**ಕರೋತ್ಯೇವ** ಮಾಡುವನು ಇತಿ ಎಂದು **ಮತ್ವಾ** ತಿಳಿದು **ಸ ತು** ಲಕ್ಷ್ಮಣನು **ತದಾ** ಆವಾಗ **ದುರ್ವಾಸಸೇ** ದುರ್ವಾಸರಿಗೆ **ಮಾರ್ಗಂ** ದಾರಿಯನ್ನು **ದದೌ** ಕೊಟ್ಟನು.

**ತಾತ್ಪರ್ಯ** :- "ದುರ್ವಾಸಮುನಿಯ ಪ್ರತಿಜ್ಞೆಯು ಶ್ರೀರಾಮನನ್ನು ನೋಡಿಯೇ ಭಂಗವಾಗಲಿ. ಇಲ್ಲವಾದರೆ ಈ ಋಷಿಯು ನಿಶ್ಚಯವಾಗಿಯೂ ಶ್ರೀರಾಮನಿಗೆ ಅಪಕೀರ್ತಿಯನ್ನುಂಟುಮಾಡುತ್ತಾನೆ. ರಾಮನು ನನ್ನನ್ನು ಕೊಂದರೂ, ನನ್ನಲ್ಲಿ ಕೃಪೆಯನ್ನೇ ತೋರುತ್ತಾನೆ' ಎಂದು ಆಲೋಚಿಸಿ ದುರ್ವಾಸಮುನಿಗೆ ಲಕ್ಷ್ಮಣನು ದಾರಿಬಿಟ್ಟನು.

**ಸ್ವಲೋಕಗಮನಾಕಾಂಕ್ಷೀ ಸ್ವಯಮೇವ ತು ರಾಘವಃ ।**
**ಇಯಂ ಪ್ರತಿಜ್ಞಾಹೇತುಃ ಸ್ಯಾದಿತಿ ಹನ್ಮೀತಿ ಸೋಽಕರೋತ್ ॥ ೫೭ ॥**

ಪದಚ್ಛೇದ : **ಸ್ವಲೋಕಗಮನಾಕಾಂಕ್ಷೀ ಸ್ವಯಮ್ ಏವ ತು ರಾಘವಃ । ಇಯಂ ಪ್ರತಿಜ್ಞಾ ಹೇತುಃ ಸ್ಯಾತ್ ಇತಿ ಹನ್ಮಿ ಇತಿ ಸಃ ಅಕರೋತ್ ॥**

**ಅರ್ಥ** :- **ರಾಘವಃ ತು** ಶ್ರೀರಾಮನಾದರೂ **ಸ್ವಲೋಕಗಮನಾಕಾಂಕ್ಷೀ** ತನ್ನ ಲೋಕಕ್ಕೆ ಮರಳಬೇಕೆಂಬ ಇಚ್ಛೆಯುಳ್ಳವನಾಗಿ **ಸ್ವಯಮೇವ** ತಾನಾಗಿಯೇ **ಇಯಂ** ಈ **ಪ್ರತಿಜ್ಞಾ** ಪ್ರತಿಜ್ಞೆಯು **ಹೇತುಃ** ಕಾರಣವು **ಸ್ಯಾತ್** ಆಗಲಿ **ಇತಿ** ಎಂದು **ಹನ್ಮೀತಿ** ಕೊಲ್ಲುತ್ತೇನೆಂಬ ಪ್ರತಿಜ್ಞೆಯನ್ನು **ಸಃ** ಶ್ರೀರಾಮನು **ಅಕರೋತ್** ಮಾಡಿದನು.

**ತಾತ್ಪರ್ಯ** :- ಲಕ್ಷ್ಮಣನು ತನ್ನ ಲೋಕವಾದ ಶೇಷಲೋಕಕ್ಕೆ ತೆರಳಲೆಂದು ಬಯಸಿದ ಶ್ರೀರಾಮನು 'ಈ ಪ್ರತಿಜ್ಞೆಯು ಅದಕ್ಕೆ ಕಾರಣವಾಗಲಿ' ಎಂದು ಆಲೋಚಿಸಿಯೇ 'ನಿನ್ನನ್ನು ಕೊಲ್ಲುತ್ತೇನೆ' ಎಂದು ಪ್ರತಿಜ್ಞೆ ಮಾಡಿದನು.

**ಅತ್ಯಂತಬಂಧುನಿಧನಂ ತ್ಯಾಗ ಏವೇತಿ ಚಿಂತಯನ್ ।**
**ಯಾಹಿ ಸ್ವಲೋಕಮಚಿರಾದಿತ್ಯುವಾಚ ಸ ಲಕ್ಷ್ಮಣಮ್ ॥ ೫೮ ॥**

ಪದಚ್ಛೇದ : **ಅತ್ಯಂತಬಂಧುನಿಧನಂ ತ್ಯಾಗಃ ಏವ ಇತಿ ಚಿಂತಯನ್ । ಯಾಹಿ ಸ್ವಲೋಕಮ್ ಅಚಿರಾತ್ ಇತಿ ಉವಾಚ ಸಃ ಲಕ್ಷ್ಮಣಮ್ ॥**

**ಅರ್ಥ** :- **ಅತ್ಯಂತಬಂಧುನಿಧನಂ** ಹತ್ತಿರದ ಬಂಧುವನ್ನು ಕೊಲ್ಲುವುದೆಂದರೆ ತ್ಯಾಗ ಏವ ಪರಿತ್ಯಾಗವೇ ಇತಿ ಎಂದು **ಚಿಂತಯನ್** ಆಲೋಚಿಸಿ **ಅಚಿರಾತ್** ಕೂಡಲೇ **ಸ್ವಲೋಕಂ** ನಿನ್ನ ಲೋಕಕ್ಕೆ **ಯಾಹಿ** ತೆರಳು ಇತಿ ಎಂದು ಲಕ್ಷ್ಮಣನನ್ನು ಕುರಿತು **ಉವಾಚ** ಹೇಳಿದನು.

**ತಾತ್ಪರ್ಯ** :- ಅತ್ಯಂತ ಹತ್ತಿರದ ಬಂಧುವನ್ನು ವಧೆ ಮಾಡುವುದೆಂದರೆ ಅವನನ್ನು ಬಿಟ್ಟುಬಿಡುವುದೇ ಎಂದು ಯೋಚಿಸಿ ಶ್ರೀರಾಮನು ಲಕ್ಷ್ಮಣನನ್ನು ಕೂಡಲೇ ನಿನ್ನ ಲೋಕಕ್ಕೆ ತೆರಳು ಎಂದು ಹೇಳಿದನು.

### ಮೂಲರೂಪವಾದ ಶೇಷಪದವಿಯಲ್ಲಿ ಲಕ್ಷ್ಮಣನ ಪುನಃ ಪ್ರವೇಶ

**ಇತ್ಯುಕ್ತಃ ಸ ಯಯೌ ಜಗದ್ಭವಭಯಧ್ವಾಂತಚ್ಛಿದಂ ರಾಘವಂ**
**ಧ್ಯಾಯನ್ನಾಪ ಚ ತತ್ಪದಂ ದಶಶತೈರ್ಯುಕ್ತೋ ಮುಖಾಂಭೋರುಹೈಃ ।**
**ಆಸೀಚ್ಛೇಷಮಹಾಫಣೀ ಮುಸಲಭೃದ್ದಿವ್ಯಾಕೃತಿರ್ಲಾಂಗಲೀ**
**ಪರ್ಯಂಕತ್ವಮವಾಪ ಯೋ ಜಲನಿಧೌ ವಿಷ್ಣೋಃ ಶಯಾನಸ್ಯ ಚ ॥ ೫೯॥**

ಪದಚ್ಛೇದ : ಇತಿ ಉಕ್ತಃ ಸಃ ಯಯೌ ಜಗತ್ ಭವಭಯಧ್ವಾಂತಚ್ಛಿದಂ ರಾಘವಂ ಧ್ಯಾಯನ್ ಆಪ ಚ ತತ್ ಪದಂ ದಶಶತೈಃ ಯುಕ್ತಃ ಮುಖಾಂಭೋ ರುಹೈಃ । ಆಸೀತ್ ಶೇಷಮಹಾಫಣೀ ಮುಸಲಭೃತ್ ದಿವ್ಯಾಕೃತಿಃ ಲಾಂಗಲೀ ಪರ್ಯಂಕತ್ವಮ್ ಅವಾಪ ಯಃ ಜಲನಿಧೌ ವಿಷ್ಣೋಃ ಶಯಾನಸ್ಯ ಚ ॥

**ಅರ್ಥ** :- **ಇತಿ** ಈ ರೀತಿಯಾಗಿ **ಉಕ್ತಃ** ಹೇಳಿದ **ಸಃ** ಲಕ್ಷ್ಮಣನು **ಜಗದ್ಭವ ಭಯಧ್ವಾಂತಚ್ಛಿದಂ** ಜಗತ್‌ಭವಭಯ ಲೋಕದಲ್ಲಿ ಉಂಟಾಗುವ ಭಯವೆಂಬ **ಧ್ವಾಂತಚ್ಛಿದಂ** ಕತ್ತಲೆಗೆ ನಾಶಕನಾದ **ರಾಘವಂ** ಶ್ರೀರಾಮನನ್ನು **ಧ್ಯಾಯನ್** ಧ್ಯಾನ ಮಾಡುವವನಾಗಿ **ದಶಶತೈಃ** ಸಾವಿರ **ಮುಖಾಂ ಭೋರುಹೈಃ** ಮುಖಕಮಲಗಳಿಂದ **ಯುಕ್ತಃ** ಕೂಡಿದವನಾಗಿ **ತತ್ಪದಂ** ಶೇಷಸ್ಥಾನವನ್ನು **ಆಪ** ಹೊಂದಿದನು. **ಯಃ** ಯಾರು **ಜಲನಿಧೌ** ಕ್ಷೀರಸಾಗರದಲ್ಲಿ **ಶಯಾನಸ್ಯ** ಮಲಗುವ **ವಿಷ್ಣೋಃ** ವಿಷ್ಣುವಿಗೆ **ಪರ್ಯಂ ಕತ್ವಮ್** ಹಾಸಿಗೆಯಾಗುವಿಕೆಯನ್ನು **ಅವಾಪ** ಹೊಂದಿದನೋ (**ತಾದೃಶಃ** ಅಂತಹ) **ಮಹಾಫಣೀ** ದೊಡ್ಡ ಹೆಡೆಯುಳ್ಳ **ಮುಸಲಭೃತ್** ಮುಸಲ ಎಂಬ ಆಯುಧವನ್ನು ಹಿಡಿದಿರುವ **ಲಾಂಗಲೀ** ನೇಗಿಲೆಂಬ ಆಯುಧ ಹಿಡಿದ **ದಿವ್ಯಾಕೃತಿಃ** ದಿವ್ಯ ಶರೀರವುಳ್ಳ **ಶೇಷಃ** ಶೇಷನೆಂಬ ಸರ್ಪನು **ಆಸೀತ್** ಆದನು.

**ತಾತ್ಪರ್ಯ** :- ಶ್ರೀರಾಮ ಹೀಗೆ ಹೇಳಿದಾಗ ಲಕ್ಷ್ಮಣನು ಭೂಲೋಕ ದಿಂದ ಹೊರಟು ಹೋದ. ಜಗತ್ತಿನ ಭಯವೆಂಬ ಕತ್ತಲೆಯನ್ನು ನಾಶ ಮಾಡುವ ಶ್ರೀರಾಮಚಂದ್ರನನ್ನು ಧ್ಯಾನಿಸುತ್ತಾ ತನ್ನ ಮೂಲಸ್ಥಾನವಾದ ಶೇಷ (ರೂಪ) ಪದವಿಯನ್ನು ಹೊಂದಿದನು. ಸಾವಿರ ಮುಖಕಮಲಗಳಿಂದ ಯುಕ್ತ ನಾಗಿ, ಮುಸಲ ಮತ್ತು ನೇಗಿಲುಗಳು ಎಂಬ ಆಯುಧಗಳನ್ನು ಧರಿಸಿರುವ, ಅಲೌಕಿಕವಾದ ಶರೀರವುಳ್ಳ, ಕ್ಷೀರಸಮುದ್ರದಲ್ಲಿ ಮಲಗುವ ವಿಷ್ಣುವಿಗೆ ಹಾಸಿಗೆ ಯಾದ ಅಂತಹ ಶೇಷನೆಂಬ ಮಹಾಸರ್ಪದ ರೂಪವನ್ನು ಲಕ್ಷ್ಮಣನು ಪಡೆದನು.

**ಮಹಾಪ್ರಸ್ಥಾನಕ್ಕೆ ಸಿದ್ಧತೆ**

**ಅಥ ರಾಘವಃ ಸ್ವಭವನೋಪಗತೌ**
**ವಿದಧೇ ಮತಿಂ ಸಹ ಜನೈರಖಿಲೈಃ ।**
**ಸಮಘೋಷಯಚ್ಚ ಯ ಇಹೇಚ್ಛತಿ ತತ್**
**ಪದಮಕ್ಷಯಂ ಸಪದಿ ಮೈತ್ವಿತಿ ಸಃ ॥ ೬೦ ॥**

ಪದಚ್ಛೇದ : ಅಥ ರಾಘವಃ ಸ್ವಭವನೋಪಗತೌ ವಿದಧೇ ಮತಿಂ ಸಹ ಜನೈಃ ಅಖಿಲೈಃ । ಸಮಘೋಷಯತ್ ಚ ಯಃ ಇಹ ಇಚ್ಛತಿ ತತ್ಪದಮ್ ಅಕ್ಷಯಂ ಸಪದಿ ಮಾ ಏತು ಇತಿ ಸಃ ॥

**ಅರ್ಥ** :- **ಅಥ** ಅನಂತರ **ರಾಘವಃ** ಶ್ರೀರಾಮನು **ಅಖಿಲೈಃ** ಎಲ್ಲ **ಜನೈಃ** ಜನರೊಂದಿಗೆ **ಸ್ವಭವನೋಪಗತೌ** ತನ್ನ ಲೋಕಕ್ಕೆ ಹೊರಡಲು **ಮತಿಂ** ನಿಶ್ಚಯವನ್ನು **ವಿದಧೇ** ಮಾಡಿದನು. **ಯಃ** ಯಾರು **ಅಕ್ಷಯಂ** ನಾಶರಹಿತ ವಾದ **ತತ್** ಆ **ಪದಂ** ಸ್ಥಾನವನ್ನು **ಇಚ್ಛತಿ** ಬಯಸುವನೋ **ಸಃ** ಅವನು **ಸಪದಿ** ಕೂಡಲೇ **ಮಾಂ** ನನ್ನನ್ನು **ಏತು** ಹೊಂದಲಿ **ಇತಿ** ಎಂದು **ಇಹ** ಇಲ್ಲಿ **ಸಮಘೋಷಯಚ್ಚ** ಘೋಷಣೆ ಮಾಡಿಸಿದನು.

**ತಾತ್ಪರ್ಯ** :- ಲಕ್ಷ್ಮಣ ಹಿಂತಿರುಗಿದ ಅನಂತರ ಶ್ರೀರಾಮನು ಎಲ್ಲ ಜನರಿಂದ ಕೂಡಿಕೊಂಡು ತನ್ನ ಲೋಕಕ್ಕೆ ಹೊರಡಲು ನಿಶ್ಚಯಿಸಿದನು. ನಾಶರಹಿತವಾದ ವೈಕುಂಠಲೋಕವನ್ನು ಬಯಸುವವರೆಲ್ಲ ಕೂಡಲೇ ನನ್ನ ಬಳಿಗೆ ಬರಲಿ ಎಂದು ಘೋಷಣೆ ಮಾಡಿಸಿದನು.

ಶ್ರುತ್ವಾ ತು ತದ್ಯ ಇಹ ಮೋಕ್ಷಪದೇಚ್ಛವಸ್ತೇ
ಸರ್ವೇ ಸಮಾಯಯುರಥಾತೃಣಮಾಪಿಪೀಲಮ್ ।
ರಾಮಾಜ್ಞಯಾ ಗಮನಶಕ್ತಿರಭೂತ್ ತೃಣಾದೇ
ರ್ಯೇ ತತ್ರ ದೀರ್ಘಭವಿನೋ ನ ತು ತೇ ತದೈಚ್ಛನ್ ॥ ೬೧ ॥

ಪದಚ್ಛೇದ : ಶ್ರುತ್ವಾ ತು ತತ್ ಯೇ ಇಹ ಮೋಕ್ಷಪದೇಚ್ಛವಃ ತೇ ಸರ್ವೇ ಸಮಾಯಯುಃ ಅಥ ಆತೃಣಂ ಆಪಿಪೀಲಮ್ । ರಾಮಾಜ್ಞಯಾ ಗಮನಶಕ್ತಿಃ ಅಭೂತ್ ತೃಣಾದೇಃ ಯೇ ತತ್ರ ದೀರ್ಘಭವಿನಃ ನ ತು ತೇ ತತ್ ಐಚ್ಛನ್ ॥

**ಅರ್ಥ** :- **ತತ್** ತು ಆ ಮಾತನ್ನು **ಶ್ರುತ್ವಾ** ಕೇಳಿ **ಇಹ** ಇಲ್ಲಿ **ಯಃ** ಯಾರು **ಮೋಕ್ಷಪದೇಚ್ಛವಃ** ಮೋಕ್ಷವನ್ನು ಬಯಸಿರುವರೋ **ತೇ** ಅವರು **ಸರ್ವೇ** ಎಲ್ಲರೂ **ಆತೃಣಂ** ಹುಲ್ಲನ್ನು ಆರಂಭಿಸಿ **ಆಪಿಪೀಲಮ್** ಇರುವೆಯ ತನಕ **ಸಮಾಯಯುಃ** ಬಂದರು. **ತೃಣಾದೇಃ** ಹುಲ್ಲು ಮೊದಲಾದವುಗಳಿಗೆ **ರಾಮಾಜ್ಞಯಾ** ಶ್ರೀರಾಮನ ಅಪ್ಪಣೆಯಿಂದ **ಗಮನಶಕ್ತಿಃ** ನಡೆಯುವ ಶಕ್ತಿಯು **ಅಭೂತ್** ಉಂಟಾಯಿತು. **ಯೇ** ಯಾರು **ತತ್ರ** ರಾಮರಾಜ್ಯದಲ್ಲಿ **ದೀರ್ಘಭವಿನಃ** ದೀರ್ಘಕಾಲ ಇರಬೇಕೆಂದು ಬಯಸಿದರೋ **ತೇ ತು** ಅವರಾದರೂ **ತತ್** ಆ ಸ್ಥಾನವನ್ನು **ನ ಐಚ್ಛನ್** ಅಪೇಕ್ಷಿಸಲಿಲ್ಲ.

**ತಾತ್ಪರ್ಯ** :- ಶ್ರೀರಾಮ ಮಾಡಿಸಿದ ಘೋಷಣೆಯನ್ನು ಕೇಳಿ ಮೋಕ್ಷ ಸ್ಥಾನವನ್ನು ಬಯಸಿ ತೃಣಜೀವರಿಂದ ಆರಂಭಿಸಿ ಇರುವೆಯವರೆಗಿನ ಎಲ್ಲ ಜೀವಿಗಳೂ ಬಂದವು. ಶ್ರೀರಾಮನ ಆದೇಶದಿಂದ ಹುಲ್ಲು ಮುಂತಾದುವು ಗಳಿಗೂ ನಡೆಯುವ ಶಕ್ತಿ ಉಂಟಾಯಿತು. ಯಾರು ಇನ್ನೂ ಬಹಳ ಕಾಲ ಸಂಸಾರದಲ್ಲಿ ಇರಬೇಕಾಗಿತ್ತೋ ಆ ಜನರು ಮಾತ್ರ ರಾಮನೊಡನೆ ಭೂಲೋಕದಿಂದ ಹೊರಡಲು ಅಪೇಕ್ಷಿಸಲಿಲ್ಲ.

**ಕುಶ, ಲವ ಹಾಗೂ ಅಂಗದ : ರಾಜ್ಯಭಾರದ ಹೊಣೆ**

ಸಂಸ್ಥಾಪಯಾಮಾಸ ಕುಶಂ ಸ್ವರಾಜ್ಯೇ
ತೈಃ ಸಾಕಮೇವ ಚ ಲವಂ ಯುವರಾಜಮೀಶಃ ।
ಸಂಸ್ಥಾಪ್ಯ ವಾಲಿತನಯಂ ಕಪಿರಾಜ್ಯ ಆಶು
ಸೂರ್ಯಾತ್ಮಜೋಽಪಿ ರಘುವೀರಸಮೀಪಮಾಯಾತ್ ॥ ೬೨ ॥

ಪದಚ್ಛೇದ : ಸಂಸ್ಥಾಪಯಾಮಾಸ ಕುಶಂ ಸ್ವರಾಜ್ಯೇ ತೈಃ ಸಾಕಂ ಏವ ಚ ಲವಂ ಯುವರಾಜಂ ಈಶಃ । ಸಂಸ್ಥಾಪ್ಯ ವಾಲಿತನಯಂ ಕಪಿರಾಜ್ಯೇ ಆಶು ಸೂರ್ಯಾತ್ಮಜಃ ಅಪಿ ರಘುವೀರಸಮೀಪಮ್ ಆಯಾತ್ ॥

**ಅರ್ಥ** :- **ತೈಃ** ಅಲ್ಲಿಯೇ ಉಳಿದವರಿಂದ **ಸಾಕಮೇವ** ಕೂಡಿಕೊಂಡೇ **ಕುಶಂ** ಕುಶನನ್ನು **ಸ್ವರಾಜ್ಯೇ** ಅಯೋಧ್ಯೆಯಲ್ಲಿ **ಸಂಸ್ಥಾಪಯಾಮಾಸ** ಪಟ್ಟಾಭಿಷಿಕ್ತನನ್ನಾಗಿ ಮಾಡಿದನು. **ಈಶಃ** ಶ್ರೀರಾಮಚಂದ್ರನು **ಲವಂ** ಲವನನ್ನು **ಯುವರಾಜಂ** ಚ ಯುವರಾಜನನ್ನಾಗಿ (ಸಂಸ್ಥಾಪಯಾಮಾಸ ಪಟ್ಟಾಭಿಷಿಕ್ತ ನನ್ನಾಗಿ ಮಾಡಿದನು). **ಸೂರ್ಯಾತ್ಮಜೋಽಪಿ** ಸೂರ್ಯಪುತ್ರನಾದ (ಸುಗ್ರೀವ ನಾದರೂ) **ಕಪಿರಾಜ್ಯೇ** ಕಪಿರಾಜ್ಯದಲ್ಲಿ **ವಾಲಿತನಯಂ** ಅಂಗದನನ್ನು **ಸಂಸ್ಥಾಪ್ಯ** ಸಂಸ್ಥಾಪಿಸಿ **ಆಶು** ಕೂಡಲೇ **ರಘುವೀರ ಸಮೀಪಮ್** ಶ್ರೀರಾಮನ ಬಳಿಗೆ **ಆಯಾತ್** ಬಂದನು.

**ತಾತ್ಪರ್ಯ** :- ಭೂಮಿಯಲ್ಲಿಯೇ ಇರುವ ಅಪೇಕ್ಷೆಯುಳ್ಳ ಜನರಿಗೆ ಶಾಸನ ಮಾಡಲು ಶ್ರೀರಾಮನು ಕುಶನನ್ನು ರಾಜನನ್ನಾಗಿ ಮಾಡಿದನು. ಲವ ನನ್ನು ಯುವರಾಜನನ್ನಾಗಿ ಮಾಡಿದನು. ಇತ್ತ, ಸೂರ್ಯಪುತ್ರನಾದ ಸುಗ್ರೀವನು ವಾಲಿಪುತ್ರನಾದ ಅಂಗದನನ್ನು ಕಪಿರಾಜ್ಯದಲ್ಲಿ ಕುಳ್ಳಿರಿಸಿ ಶ್ರೀರಾಮನ ಬಳಿಗೆ ಬಂದನು.

### ಶ್ರೀರಾಮನ ಹನುಮತ್ಪ್ರಶಂಸೆ ಮತ್ತು ಉತ್ಕೃಷ್ಟಪದವೀಪ್ರದಾನ

**ಅಥಾಹ ವಾಯುನಂದನಂ ಸ ರಾಘವಃ ಸಮಾಶ್ಲಿಷನ್ ।**
**ತವಾಹಮಕ್ಷಿಗೋಚರಃ ಸದಾ ಭವಾಮಿ ನಾನ್ಯಥಾ ॥ ೬೩ ॥**

ಪದಚ್ಛೇದ : ಅಥ ಆಹ ವಾಯುನಂದನಂ ಸಃ ರಾಘವಃ ಸಮಾಶ್ಲಿಷನ್ । ತವ ಅಹಂ ಅಕ್ಷಿಗೋಚರಃ ಸದಾ ಭವಾಮಿ ನ ಅನ್ಯಥಾ ॥

**ಅರ್ಥ** :- **ಅಥ** ಅನಂತರ **ಸಃ** ಆ **ರಾಘವಃ** ಶ್ರೀರಾಮಚಂದ್ರನು **ವಾಯುನಂದನಂ** ವಾಯುಸುತನಾದ ಹನುಮಂತನನ್ನು **ಸಮಾಶ್ಲಿಷ್ಯ** ಗಾಢ ವಾಗಿ ಆಲಂಗಿಸಿದವನಾಗಿ **ಅಹಂ** ನಾನು ಸದಾ ಯಾವಾಗಲೂ **ತವ** ನಿನ್ನ **ಅಕ್ಷಿಗೋಚರಃ** ಕಣ್ಣಿಗೆ ಕಾಣಿಸುವವನು **ಭವಾಮಿ** ಆಗುವೆನು. **ಅನ್ಯಥಾ** ವ್ಯತ್ಯಾಸವಾಗಿ **ನ** ಇಲ್ಲ **ಇತಿ** ಎಂದು **ಆಹ** ಹೇಳಿದನು.

ತಾತ್ಪರ್ಯ :- ಅನಂತರ ಶ್ರೀರಾಮನು ವಾಯುಪುತ್ರನಾದ ಹನುಮಂತನನ್ನು ಗಾಢವಾಗಿ ಆಲಂಗಿಸಿಕೊಂಡು ಹೇಳಿದ "ನಾನು ಸದಾ ನಿನ್ನ ಕಣ್ಣಿಗೆ ಗೋಚರಿಸುತ್ತಿರುವೆನು. ಎಂದೂ ಕಣ್ಣಿಗೆ ಕಾಣಿಸದೆ ಇರುವುದಿಲ್ಲ"

**ತ್ವಯಾ ಸದಾ ಮಹತ್ತಪಃ ಸುಕಾರ್ಯಮುತ್ತಮೋತ್ತಮಮ್ ।**
**ತದೇವ ಮೇ ಮಹತ್ಪ್ರಿಯಂ ಚಿರಂ ತಪಸ್ತ್ವಯಾ ಕೃತಮ್ ॥ ೬೪ ॥**

ಪದಚ್ಛೇದ : ತ್ವಯಾ ಸದಾ ಮಹತ್ ತಪಃ ಸುಕಾರ್ಯಮ್ ಉತ್ತಮೋತ್ತ ಮಮ್ । ತತ್ ಏವ ಮೇ ಮಹತ್ ಪ್ರಿಯಂ ಚಿರಂ ತಪಃ ತ್ವಯಾ ಕೃತಮ್ ॥

**ಅರ್ಥ** :- **ತ್ವಯಾ** ನಿನ್ನಿಂದ **ಸದಾ** ಯಾವಾಗಲೂ **ಉತ್ತಮೋತ್ತಮಂ** ಶ್ರೇಷ್ಠವಾದ **ಮಹತ್ತಪಃ** ಬಹಳ ತಪಸ್ಸು **ಸುಕಾರ್ಯಂ** ಮಾಡಲ್ಪಡಬೇಕು. **ತದೇವ** ಅದೇ **ಮೇ** ನನಗೆ **ಮಹತ್** ಬಹಳ **ಪ್ರಿಯಂ** ಪ್ರಿಯವಾದದ್ದು **ತ್ವಯಾ** ನಿನ್ನಿಂದ **ಚಿರಂ** ಬಹುಕಾಲ **ತಪಃ** ತಪಸ್ಸು **ಕೃತಂ** ಮಾಡಲ್ಪಟ್ಟಿದೆ.

**ತಾತ್ಪರ್ಯ** :- "ನೀನು ಯಾವಾಗಲೂ ಸರ್ವಶ್ರೇಷ್ಠವಾದ ನನ್ನ ಅವಯವಗಳನ್ನು ಧ್ಯಾನಿಸುವ ಮಹಾತಪಸ್ಸನ್ನು ಆಚರಿಸುತ್ತಿರಬೇಕು. ಅದೇ ನನಗೆ ಅತ್ಯಂತ ಪ್ರಿಯವಾದುದು. ನೀನು ಬಹುಕಾಲದಿಂದ ಅಂತಹ ತಪಸ್ಸನ್ನು ಸಾಗಿಸಿಕೊಂಡು ಹೋಗಿರುವೆ. ಅದನ್ನೇ ಮುಂದುವರೆಸು" ಎಂದು ಶ್ರೀರಾಮನು ಹೇಳಿದನು.

(ವಿ.ಸೂ. : ಧ್ಯಾನವು "ನನ್ನ ಅವಯವಗಳನ್ನು ಕುರಿತಾದದ್ದು"ಎಂದು ಜನಾರ್ದನ ಭಟ್ಟ ವಿರಚಿತ ಪದಾರ್ಥದೀಪಿಕಾದಲ್ಲಿದೆ.)

**ದಶಾಸ್ಯಕುಂಭಕರ್ಣಕೌ ಯಥಾ ಸುಶಕ್ತಿಮಾನಪಿ ।**
**ಜಘಂಥ ನ ಪ್ರಿಯಾಯ ಮೇ ತಥೈವ ಜೀವ ಕಲ್ಪಕಮ್ ॥ ೬೫ ॥**

ಪದಚ್ಛೇದ : ದಶಾಸ್ಯಕುಂಭಕರ್ಣಕೌ ಯಥಾ ಸುಶಕ್ತಿಮಾನ್ ಅಪಿ । ಜಘಂಥ ನ ಪ್ರಿಯಾಯ ಮೇ ತಥಾ ಏವ ಜೀವ ಕಲ್ಪಕಮ್ ॥

**ಅರ್ಥ** :- **ಯಥಾ** ಯಾವ ಕಾರಣದಿಂದ **ಸುಶಕ್ತಿಮಾನಪಿ** ಒಳ್ಳೆಯ ಶಕ್ತಿಶಾಲಿಯಾಗಿದ್ದರೂ **ದಶಾಸ್ಯಕುಂಭಕರ್ಣಕೌ** ರಾವಣಕುಂಭಕರ್ಣರನ್ನು

ಮೇ ಪ್ರಿಯಾಯ ನನ್ನ ಸಂತೋಷಕ್ಕಾಗಿ ನ ಜಘಂಥ ಕೊಲ್ಲಲಿಲ್ಲವೋ ತಥೈವ = ಆ ಕಾರಣದಿಂದಲೇ ಕಲ್ಪಕಮ್ ಕಲ್ಪಪರ್ಯಂತ ಜೀವ ಜೀವಿಸು.

ತಾತ್ಪರ್ಯ :- "ನೀನು ಎಲ್ಲಾ ರಾಕ್ಷಸರನ್ನು ಕೊಲ್ಲುವಂತಹ ಹೆಚ್ಚಿನ ಪರಾಕ್ರಮಶಾಲಿಯಾಗಿದ್ದರೂ ರಾವಣಕುಂಭಕರ್ಣರನ್ನು ಮಾತ್ರ ನನ್ನ ಸಂತೋಷಕ್ಕಾಗಿ ಕೊಲ್ಲದೆ ಬಿಟ್ಟಿರುವಿ. ಆದ್ದರಿಂದ ನೀನು ಒಂದು ಕಲ್ಪ ಪರ್ಯಂತ ಜೀವಿಸು."

**ಪಯೋಬ್ಧಿಮಧ್ಯಗಂ ಚ ಮೇ ಸುಸದ್ಮ ಚಾನ್ಯದೇವ ವಾ ।**
**ಯಥೇಷ್ಟತೋ ಗಮಿಷ್ಯಸಿ ಸ್ವದೇಹಸಂಯುತೋಽಪಿ ಸನ್ ॥ ೬೬ ॥**

ಪದಚ್ಛೇದ : ಪಯೋಬ್ಧಿಮಧ್ಯಗಂ ಚ ಮೇ ಸುಸದ್ಮ ಚ ಅನ್ಯತ್ ಏವ ವಾ । ಯಥೇಷ್ಟತಃ ಗಮಿಷ್ಯಸಿ ಸ್ವದೇಹಸಂಯುತಃ ಅಪಿ ಸನ್ ॥

ಅರ್ಥ :- ಮೇ ನನ್ನ ಪಯೋಬ್ಧಿಮಧ್ಯಗಂ ಕ್ಷೀರಸಾಗರ ಮಧ್ಯದಲ್ಲಿರುವ (ಲೋಕಗಳನ್ನೂ) ಚ ಮತ್ತು ಅನ್ಯದೇವ ಬೇರೆ ಕಡೆಯಲ್ಲಿರುವ ಸುಸದ್ಮ ಚ ಲೋಕಗಳನ್ನೂ ಯಥೇಷ್ಟತಃ ಬಯಸಿದಾಗ ಸ್ವದೇಹಸಂಯುತೋಽಪಿ ಸನ್ ಇದೇ ದೇಹವುಳ್ಳವನಾದರೂ ಗಮಿಷ್ಯಸಿ ಹೋಗುವಿ.

ತಾತ್ಪರ್ಯ :- "ಕ್ಷೀರಸಮುದ್ರ ಮಧ್ಯದಲ್ಲಿರುವ ನನ್ನ ಮಂದಿರ ಶ್ವೇತ ದ್ವೀಪಕ್ಕಾಗಲಿ ಅಥವಾ ಅನಂತಾಸನ ವೈಕುಂಠಗಳೆಂಬ ಇತರ ಲೋಕಕ್ಕಾಗಲಿ ನೀನು ಇಷ್ಟಬಂದಾಗ ಇದೇ ವಾನರ ದೇಹದೊಂದಿಗೆ ಹೋಗಬಹುದು."

**ಯಥೇಷ್ಟಭೋಗಸಂಯುತಃ ಸುರೇಶಗಾಯಕಾದಿಭಿಃ ।**
**ಸಮೀಡ್ಯಮಾನಸದ್ಯಶಾ ರಮಸ್ವ ಮತ್ಪುರಃ ಸದಾ ॥ ೬೭ ॥**

ಪದಚ್ಛೇದ : ಯಥೇಷ್ಟಭೋಗಸಂಯುತಃ ಸುರೇಶಗಾಯಕಾದಿಭಿಃ । ಸಮೀಡ್ಯಮಾನಸದ್ಯಶಾಃ ರಮಸ್ವ ಮತ್ಪುರಃ ಸದಾ ॥

ಅರ್ಥ :- ಯಥೇಷ್ಟಭೋಗಸಂಯುತಃ ಯಥೇಷ್ಟಭೋಗಯುಕ್ತನಾಗಿ ಸುರೇಶಗಾಯಕಾದಿಭಿಃ ದೇವೇಂದ್ರನ ಗಾಯಕರಾದ ಗಂಧರ್ವಾದಿಗಳಿಂದ ಸಮೀಡ್ಯಮಾನಸದ್ಯಶಾಃ ಚೆನ್ನಾಗಿ ಸ್ತುತಿಸಲ್ಪಡುವ ಕೀರ್ತಿಯುಳ್ಳವನಾಗಿ ಮತ್ಪುರಃ ನನ್ನ ಸಮಕ್ಷಮದಲ್ಲಿ ಸದಾ ಯಾವಾಗಲೂ ರಮಸ್ವ ಆನಂದಿಸು.

**ತಾತ್ಪರ್ಯ :-** ಅಪೇಕ್ಷಿಸುವ ಸಕಲ ಭೋಗಗಳಿಂದ ಸದಾ ಕೂಡಿದವನಾಗಿ, ಇಂದ್ರನ ಗಾಯಕರಾದ ಗಂಧರ್ವರೇ ಮೊದಲಾದವರು ನಿನ್ನ ಉತ್ತಮ ಕೀರ್ತಿಯನ್ನು ಸ್ತುತಿಸಲಿ. ನೀನು ನನ್ನೆದುರು ಸದಾ ಆನಂದಿಸುತ್ತಿರು.

**ತವೇಪ್ಸಿತಂ ನ ಕಿಂಚನ ಕ್ವಚಿತ್ ಕುತಶ್ಚಿದೇವ ವಾ ।**
**ಮೃಷಾ ಭವೇತ್ ಪ್ರಿಯಶ್ಚ ಮೇ ಪುನಃ ಪುನರ್ಭವಿಷ್ಯಸಿ ॥ ೬೮ ॥**

ಪದಚ್ಛೇದ : ತವ ಈಪ್ಸಿತಂ ನ ಕಿಂಚನ ಕ್ವಚಿತ್ ಕುತಶ್ಚಿತ್ ಏವ ವಾ । ಮೃಷಾ ಭವೇತ್ ಪ್ರಿಯಃ ಚ ಮೇ ಪುನಃ ಪುನಃ ಭವಿಷ್ಯಸಿ ॥

**ಅರ್ಥ :-** ತವ ನಿನಗೆ **ಈಪ್ಸಿತಂ** ಅಭೀಷ್ಟವಾದದ್ದು **ಕಿಂಚನ** ಯಾವುದೂ **ಕ್ವಚಿತ್** ಎಲ್ಲಿಯೂ **ಕುತಶ್ಚಿದೇವ** ಯಾವ ರೀತಿಯಿಂದಲೂ **ಮೃಷಾ** ಸುಳ್ಳಾದದ್ದು ನ ಆಗುವುದಿಲ್ಲ. **ಮೇ** ನನಗೆ **ಪುನಃ ಪುನಃ** ಮತ್ತೆ ಮತ್ತೆ **ಪ್ರಿಯಃ ಚ** ಪ್ರಿಯನಾದವನೂ **ಭವಿಷ್ಯಸಿ** ಆಗುವಿ.

**ತಾತ್ಪರ್ಯ :-** ''ನಿನಗೆ ಅಪೇಕ್ಷಿತವಾದದ್ದು ಯಾವುದೂ ಎಲ್ಲಿಯೂ ಯಾವ ಕಾರಣದಿಂದಲೂ ದೊರಕದೇ ಹೋಗುವುದಿಲ್ಲ. ನನಗೆ ನೀನು ಪುನಃ ಪುನಃ ಪ್ರಿಯನಾದವನೂ ಆಗುವಿ.''

### ಹನುಮಂತನ ಶ್ರೀರಾಮಭಕ್ತಿ

**ಇತೀರಿತೋ ಮರುತ್ಸುತೋ ಜಗಾದ ವಿಶ್ವನಾಯಕಮ್ ।**
**ವಿಧೇಹಿ ಪಾದಪಂಕಜೇ ತವೇಶ ಭಕ್ತಿಮುತ್ತಮಾಮ್ ॥ ೬೯ ॥**

ಪದಚ್ಛೇದ : ಇತಿ ಈರಿತಃ ಮರುತ್ಸುತಃ ಜಗಾದ ವಿಶ್ವನಾಯಕಮ್ । ವಿಧೇಹಿ ಪಾದಪಂಕಜೇ ತವ ಈಶ ಭಕ್ತಿಮ್ ಉತ್ತಮಾಮ್ ॥

**ಅರ್ಥ :-** **ಇತಿ** ಈ ರೀತಿಯಾಗಿ **ಈರಿತಃ** ಹೇಳಲ್ಪಟ್ಟ **ಮರುತ್ಸುತಃ** ಹನುಮಂತನು **ವಿಶ್ವನಾಯಕಂ** ಜಗದೊಡೆಯನಿಗೆ, ''**ಹೇ ಈಶ** ಪ್ರಭು ಶ್ರೀರಾಮ! **ತವ** ನಿನ್ನ **ಪಾದಪಂಕಜೇ** ಪಾದಕಮಲಗಳಲ್ಲಿ **ಉತ್ತಮಾಂ** ಶ್ರೇಷ್ಠವಾದ **ಭಕ್ತಿಮ್** ಭಕ್ತಿಯನ್ನು **ವಿಧೇಹಿ** ಕೊಡು'' ಎಂದು **ಜಗಾದ** = ಹೇಳಿದನು.

**ತಾತ್ಪರ್ಯ :-** ಹೀಗೆ ಹೇಳಿದ ಜಗದೊಡೆಯನಾದ ಶ್ರೀರಾಮಚಂದ್ರನಲ್ಲಿ ವಾಯುಸುತನಾದ ಹನುಮಂತನು ಬೇಡಿಕೊಂಡನು. ''ಪ್ರಭು! ನಿನ್ನ

ಚರಣಕಮಲಗಳಲ್ಲಿ ನನಗೆ ರುದ್ರದೇವರು ಭಾರತಿ ಮುಂತಾದವರಿಗಿರುವ ಭಕ್ತಿಗಿಂತಲೂ ಉತ್ತಮ ಭಕ್ತಿಯನ್ನು ಕರುಣಿಸು.''

(ವಿ.ಸೂ. :- ತಾತ್ಪರ್ಯದಲ್ಲಿ ಸೇರಿಸಿರುವ ''ರುದ್ರದೇವರು ಭಾರತಿ ಮುಂತಾದವರಿಗಿರುವ ಭಕ್ತಿಗಿಂತಲೂ ಉತ್ತಮ ಭಕ್ತಿಯನ್ನು ಕರುಣಿಸು'' ಎಂಬ ಭಾಗವು ಜನಾರ್ದನಭಟ್ಟೀಯವ್ಯಾಖ್ಯಾನುಸಾರಿಯಾಗಿದೆ.)

**ಸದಾ ಪ್ರವರ್ಧಮಾನಯಾ ತಯಾ ರಮೇಽಹಮಂಜಸಾ ।**
**ಸಮಸ್ತಜೀವಸಂಚಯಾತ್ ಸದಾಽದಿಕಾ ಹಿ ಮೇಽಸ್ತು ಸಾ ॥ ೭೦ ॥**

ಪದಚ್ಛೇದ : ಸದಾ ಪ್ರವರ್ಧಮಾನಯಾ ತಯಾ ರಮೇ ಅಹಂ ಅಂಜಸಾ । ಸಮಸ್ತಜೀವಸಂಚಯಾತ್ ಸದಾ ಅಧಿಕಾ ಹಿ ಮೇ ಅಸ್ತು ಸಾ ॥

**ಅರ್ಥ** :- **ಸದಾ** ಯಾವಾಗಲೂ **ಪ್ರವರ್ಧಮಾನಯಾ** ಹೆಚ್ಚಾಗುತ್ತಿರುವ **ತಯಾ** ಭಕ್ತಿಯಿಂದ **ಅಹಂ** ನಾನು **ಅಂಜಸಾ** ಚೆನ್ನಾಗಿ **ರಮೇ** ಕ್ರೀಡಿಸುವೆನು. **ಸಾ** ಆ ಭಕ್ತಿಯು **ಸಮಸ್ತಜೀವಸಂಚಯಾತ್** ಸಕಲ ಜೀವಸಮುದಾಯಕ್ಕಿಂತ **ಸದಾ** ಯಾವಾಗಲೂ **ಅಧಿಕಾ** ಅಧಿಕವಾದದ್ದು **ಅಸ್ತು** ಆಗಲಿ.

**ತಾತ್ಪರ್ಯ** :- ''ಸದಾಕಾಲ ನನ್ನಲ್ಲಿ ಬೆಳೆಯುತ್ತಿರುವಂತಹ ಭಕ್ತಿಯಿಂದ ನಾನು ಸಂತೋಷಪಡುತ್ತೇನೆ. ಸಕಲಜೀವಸಮುದಾಯದಲ್ಲಿ ಇರುವುದಕ್ಕಿಂತ ಹೆಚ್ಚಾದ ಭಕ್ತಿಯು ಸದಾ ನನಗಿರಲಿ.''

**ನಮೋ ನಮೋ ನಮೋ ನಮೋ ನತೋಽಸ್ಮಿ ತೇ ಸದಾ ಪದಮ್ ।**
**ಸಮಸ್ತಸದ್ಗುಣೋಚ್ಛ್ರಿತಂ ನಮಾಮಿ ತೇ ಪದಂ ಪುನಃ ॥ ೭೧ ॥**

ಪದಚ್ಛೇದ : ನಮಃ ನಮಃ ನಮಃ ನಮಃ ನತಃ ಅಸ್ಮಿ ತೇ ಸದಾ ಪದಮ್ । ಸಮಸ್ತಸದ್ಗುಣೋಚ್ಛ್ರಿತಂ ನಮಾಮಿ ತೇ ಪದಂ ಪುನಃ ॥

**ಅರ್ಥ** :- **ತೇ** ನಿನಗೆ **ನಮಃ ನಮಃ ನಮಃ ನಮಃ** ಮತ್ತೆ ಮತ್ತೆ ನಮಿಸುವೆನು. **ತೇ** ನಿನ್ನ **ಪದಂ** ಪಾದವನ್ನು ಸದಾ ಯಾವಾಗಲೂ **ನತೋಽಸ್ಮಿ** ನಮಸ್ಕರಿಸುವೆನು. **ಸಮಸ್ತಸದ್ಗುಣೋಚ್ಛ್ರಿತಂ** **ಸಮಸ್ತಸದ್ಗುಣ** ಸಕಲ ಸದ್ಗುಣ ಗಳಿಂದ **ಉಚ್ಛ್ರಿತಂ** ಉತ್ಕೃಷ್ಟವಾಗಿರುವ **ತೇ** ನಿನ್ನ **ಪದಂ** ಪಾದವನ್ನು **ಪುನಃ** ಮತ್ತೊಮ್ಮೆ **ನಮಾಮಿ** ನಮಸ್ಕರಿಸುವೆನು.

**ತಾತ್ಪರ್ಯ** :- "ನಿನಗೆ ಮತ್ತೆ ನಮನಗಳನ್ನು ಅರ್ಪಿಸುವೆ. ನಿನ್ನ ಪಾದವನ್ನು ಸದಾ ವಂದಿಸುತ್ತೇನೆ. ಸಕಲ ಸದ್ಗುಣಗಳಿಂದ ಉತ್ಕೃಷ್ಟವಾಗಿರುವ ನಿನ್ನ ಚರಣವನ್ನು ಪುನಃ ಪುನಃ ನಮಸ್ಕರಿಸುತ್ತೇನೆ."

**ಚರಾಚರಜೀವಿಗಳೊಡನೆ ಶ್ರೀರಾಮನ ವೈಕುಂಠಲೋಕಗಮನ**

**ಇತೀರಿತೇ ತಥೇತಿ ತಂ ಜಗಾದ ಪುಷ್ಕರೇಕ್ಷಣಃ ।**
**ಜಗಾಮ ಧಾಮ ಚಾತ್ಮನಸ್ತೃಣಾದಿಭಿಃ ಸಹೈವ ಸಃ ॥ ೭೨ ॥**

ಪದಚ್ಛೇದ : ಇತಿ **ಈರಿತೇ** ತಥಾ ಇತಿ ತಂ ಜಗಾದ ಪುಷ್ಕರೇಕ್ಷಣಃ । ಜಗಾಮ ಧಾಮ ಚ ಆತ್ಮನಃ ತೃಣಾದಿಭಿಃ ಸಹ ಏವ ಸಃ ॥

**ಅರ್ಥ** :- **ಇತಿ** ಈ ರೀತಿಯಾಗಿ **ಈರಿತೇ** ಹೇಳುತ್ತಿರಲು **ತಂ** ಹನುಮಂತನನ್ನು **ತಥೇತಿ** ಹಾಗೇ ಆಗಲೆಂದು **ಪುಷ್ಕರೇಕ್ಷಣಃ** ಕಮಲದಂತೆ ಕಂಗಳುಳ್ಳ ಶ್ರೀರಾಮಚಂದ್ರನು **ಜಗಾದ** ಹೇಳಿದನು. **ಸಃ** ಶ್ರೀರಾಮನು **ತೃಣಾದಿಭಿಃ** = ತೃಣಾದಿಜೀವರೊಂದಿಗೆ **ಸಹೈವ** ಕೂಡಿಕೊಂಡು **ಆತ್ಮನಃ** ತನ್ನ **ಧಾಮ** ಲೋಕಕ್ಕೆ **ಜಗಾಮ** ಹೊರಟನು.

**ತಾತ್ಪರ್ಯ** :- ಹನುಮಂತನು ಈ ರೀತಿಯಾಗಿ ಪ್ರಾರ್ಥಿಸಲು ಕಮಲಾಕ್ಷನಾದ ಶ್ರೀರಾಮಚಂದ್ರನು 'ಹಾಗೆಯೇ ಆಗಲಿ' ಎಂದನು. ಹುಲ್ಲು ಮುಂತಾದ ಸ್ಥಾವರಜೀವಿಗಳೊಂದಿಗೆ ಹಾಗೂ ಇರುವೆ ಮುಂತಾದ ಜಂಗಮ ಜೀವಿಗಳೊಂದಿಗೆ ತನ್ನ ಲೋಕವಾದ ವೈಕುಂಠಕ್ಕೆ ತೆರಳಿದನು.

**ಖಗಾ ಮೃಗಾಸ್ತೃಣಾದಯಃ ಪಿಪೀಲಿಕಾಶ್ಚ ಗರ್ದಭಾಃ ।**
**ತದಾಽಽಸುರುತ್ತಮಾ ಯತೋ ನೃವಾನರಾಶ್ಚ ಕಿಂ ಪುನಃ ॥ ೭೩ ॥**

ಪದಚ್ಛೇದ : ಖಗಾಃ ಮೃಗಾಃ ತೃಣಾದಯಃ ಪಿಪೀಲಿಕಾಃ ಚ ಗರ್ದಭಾಃ । ತದಾ ಆಸುಃ ಉತ್ತಮಾಃ ಯತಃ ನೃವಾನರಾಃ ಚ ಕಿಂ ಪುನಃ ॥

**ಅರ್ಥ** :- **ಯತಃ** ಯಾವ ಶ್ರೀರಾಮನಿಂದ **ಖಗಾಃ** ಪಕ್ಷಿಗಳು **ಮೃಗಾಃ** ಪ್ರಾಣಿಗಳು, **ತೃಣಾದಯಃ** ಹುಲ್ಲು ಮೊದಲಾದವುಗಳು **ಪಿಪೀಲಿಕಾಃ** ಇರುವೆಗಳು **ಗರ್ದಭಾಃ ಚ** ಕತ್ತೆಗಳೂ ಕೂಡ **ತದಾ** ಆಗ **ಉತ್ತಮಾಃ** ಶ್ರೇಷ್ಠರು **ಆಸುಃ** ಆದರೋ, **ನೃವಾನರಾಶ್ಚ** ಮನುಷ್ಯರು ಮತ್ತು ವಾನರರು ಉತ್ತಮರಾದರೆಂದು **ಕಿಂ ಪುನಃ** ಪ್ರತ್ಯೇಕವಾಗಿ ಬಿಡಿಸಿ ಹೇಳಬೇಕೇನು?

ತಾತ್ಪರ್ಯ :- ಸ್ವರ್ಗಕ್ಕೆ ಪ್ರವೇಶಿಸುವ ಕಾಲದಲ್ಲಿ ಶ್ರೀರಾಮನ ಜೊತೆ ವೈಕುಂಠಕ್ಕೆ ತೆರಳಿದ ಮೃಗಗಳು, ಹುಲ್ಲು, ಗಿಡ ಮೊದಲಾದವುಗಳು ಇರುವೆಗಳು ಕತ್ತೆಗಳೂ ಕೂಡ ಶ್ರೇಷ್ಠ ಜೀವರೇ ಆಗುತ್ತಾರೆಂದ ಮೇಲೆ ಅವನ ಜೊತೆ ತೆರಳಿದ ಕಪಿಗಳು ಮತ್ತು ಮನುಷ್ಯರು ಉತ್ತಮಜೀವರಾಗುತ್ತಾರೆಂದು ಬಿಡಿಸಿ ಹೇಳಬೇಕಾದ ಆವಶ್ಯಕತೆಯುಂಟೇ ?

**ಸದೈವ ರಾಮಭಾವನಾಃ ಸದಾ ಸುತತ್ತ್ವವೇದಿನಃ ।**
**ಯತೋಽಭವಂಸ್ತತಸ್ತು ತೇ ಯಯುಃ ಪದಂ ಹರೇಸ್ತದಾ ॥ ೭೪ ॥**

ಪದಚ್ಛೇದ : ಸದಾ ಏವ ರಾಮಭಾವನಾಃ ಸದಾ ಸುತತ್ತ್ವವೇದಿನಃ । ಯತಃ ಅಭವನ್ ತತಃ ತು ತೇ ಯಯುಃ ಪದಂ ಹರೇಃ ಸದಾ ॥

**ಅರ್ಥ** :- **ಯತಃ** ಯಾವ ಕಾರಣದಿಂದ **ಸದೈವ** ಯಾವಾಗಲೂ **ರಾಮಭಾವನಾಃ** ಶ್ರೀರಾಮನನ್ನು ಧ್ಯಾನಿಸುವವರು **ಸದಾ** ನಿರಂತರವಾಗಿ **ಸುತತ್ತ್ವವೇದಿನಃ** ಭಗವತ್ತತ್ತ್ವವನ್ನು ತಿಳಿದವರು **ಅಭವನ್** ಆದರೋ **ತತಃ** ಆದ್ದರಿಂದ **ತೇ** ಆ ಜೀವಿಗಳು **ತದಾ** ಆಗ **ಹರೇಃ** ಪರಮಾತ್ಮನ **ಪದಂ** ಸ್ಥಾನವನ್ನು **ಯಯುಃ** ಹೊಂದಿದರು.

ತಾತ್ಪರ್ಯ :- (ಬ್ರಹ್ಮಜ್ಞಾನವಿಲ್ಲದೇ ಮೋಕ್ಷ ಸಿಗಲು ಸಾಧ್ಯವಿಲ್ಲವಾದರೂ) ತೃಣಾದಿಜೀವರೆಲ್ಲರೂ ಯಾವಾಗಲೂ ವಿಷ್ಣುಸರ್ವೋತ್ತಮತ್ವವನ್ನು ತಿಳಿದವರೂ ಮತ್ತು ಶ್ರೀರಾಮನನ್ನೇ ಸದಾ ಧ್ಯಾನಿಸುವವರೂ ಆಗಿದ್ದರಿಂದಲೇ ಶ್ರೀರಾಮ ಕರೆದಾಗ ವೈಕುಂಠಕ್ಕೆ ಹೊರಡಲು ಅವರು ಸಮರ್ಥರಾದರು.

**ಸ ತೈಃ ಸಮಾವೃತೋ ವಿಭುರ್ಯಯೌ ದಿಶಂ ತದೋತ್ತರಾಮ್ ।**
**ಅನಂತಸೂರ್ಯದೀಧಿತಿರ್ದುರಂತಸದ್ಗುಣಾರ್ಣವಃ ॥ ೭೫ ॥**

ಪದಚ್ಛೇದ : ಸಃ ತೈಃ ಸಮಾವೃತಃ ವಿಭುಃ ಯಯೌ ದಿಶಂ ತದಾ ಉತ್ತರಾಮ್। ಅನಂತಸೂರ್ಯದೀಧಿತಿಃ ದುರಂತಸದ್ಗುಣಾರ್ಣವಃ ॥

**ಅರ್ಥ** :- **ಅನಂತಸೂರ್ಯದೀಧಿತಿಃ** ಅಸಂಖ್ಯ ಸೂರ್ಯರಂತೆ ಕಾಂತಿಯುಳ್ಳ **ದುರಂತಸದ್ಗುಣಾರ್ಣವಃ** ತಿಳಿಯಲಸಾಧ್ಯವಾದ ಸದ್ಗುಣಸಾಗರನಾದ **ವಿಭುಃ** ಸಮರ್ಥನಾದ **ಸಃ** ಶ್ರೀರಾಮನು **ತೈಃ** ಆ ಜನರಿಂದ **ಸಮಾವೃತಃ**

ಸುತ್ತುವರೆಯಲ್ಪಟ್ಟು ತದಾ ಆಗ **ಉತ್ತರಾಮ್** ಉತ್ತರದ **ದಿಶಂ** ದಿಕ್ಕನ್ನು **ಯಯೌ** ಹೋದನು.

**ತಾತ್ಪರ್ಯ** :- ಅನಂತಸೂರ್ಯರ ಪ್ರಭೆಯುಳ್ಳವನೂ ಅಪರಿಮಿತ ಸದ್ಗುಣ ಸಾಗರನೂ ಆದ ಪ್ರಭು ಶ್ರೀರಾಮಚಂದ್ರನು ತನ್ನೊಡನೆ ಬಂದ ಸಕಲ ಚರಾಚರ ಜೀವಿಗಳಿಂದ ಸುತ್ತುವರೆಯಲ್ಪಟ್ಟು ಉತ್ತರ ದಿಕ್ಕಿನತ್ತ ಹೊರಟನು.

### ಶ್ರೀರಾಮನ ಅವಯವಗಳ ವರ್ಣನೆ

**ಸಹಸ್ರಸೂರ್ಯಮಂಡಲಜ್ವಲತ್ಕಿರೀಟಮೂರ್ಧಜಃ ।**
**ಸುನೀಲಕುಂತಲಾವೃತಾಮಿತೇಂದುಕಾಂತಿಸನ್ಮುಖಃ ॥ ೭೬ ॥**

ಪದಚ್ಛೇದ : ಸಹಸ್ರಸೂರ್ಯಮಂಡಲಜ್ವಲತ್ಕಿರೀಟಮೂರ್ಧಜಃ । ಸುನೀಲ ಕುಂತಲಾವೃತಅಮಿತೇಂದುಕಾಂತಿಸನ್ಮುಖಃ ॥

**ಅರ್ಥ** :- **ಸಹಸ್ರಸೂರ್ಯಮಂಡಲಜ್ವಲತ್ಕಿರೀಟಮೂರ್ಧಜಃ ಸಹಸ್ರ ಸೂರ್ಯ** ಸಾವಿರಾರು ಸೂರ್ಯಮಂಡಲಗಳಂತೆ **ಜ್ವಲತ್** ಉಜ್ಜ್ವಲವಾದ **ಕಿರೀಟಮೂರ್ಧಜಃ** ಕಿರೀಟವನ್ನು ಕೇಶರಾಶಿಯಲ್ಲಿ ಧರಿಸಿದ **ಸುನೀಲಕುಂತಲಾ ವೃತಅಮಿತೇಂದುಕಾಂತಿ** ಗಾಢವಾದ ಕಪ್ಪು ಕೂದಲುಗಳಿಂದ ಕೂಡಿರುವ ಅನಂತಚಂದ್ರರಂತೆ ಕಾಂತಿಯುಳ್ಳ **ಸನ್ಮುಖಃ** ಸುಂದರ ಮುಖದವನು.

**ತಾತ್ಪರ್ಯ** :- (ಆ ಶ್ರೀರಾಮನು) ಸಾವಿರಾರು ಸೂರ್ಯಮಂಡಲ ಗಳಂತೆ ಪ್ರಕಾಶಿಸುವ ಕಿರೀಟವನ್ನು ತಲೆಯಲ್ಲಿ ಧರಿಸಿಕೊಂಡವನೂ ಗಾಢವಾದ ಕಪ್ಪಾದ ಕೂದಲುಗಳಿಂದ ಕೂಡಿದವನೂ ಅನಂತಚಂದ್ರರ ಕಾಂತಿಯುಳ್ಳ ಸುಂದರಮುಖದವನೂ ಆಗಿದ್ದನು.

**ಸುರಕ್ತಪದ್ಮಲೋಚನಃ ಸುವಿದ್ಯುದಾಭಕುಂಡಲಃ ।**
**ಸುಹಾಸವಿದ್ರುಮಾಧರಃ ಸಮಸ್ತವೇದವಾಗ್ರಸಃ ॥ ೭೭ ॥**

ಪದಚ್ಛೇದ : ಸುರಕ್ತಪದ್ಮಲೋಚನಃ ಸುವಿದ್ಯುದಾಭಕುಂಡಲಃ । ಸುಹಾಸ ವಿದ್ರುಮಾಧರಃ ಸಮಸ್ತವೇದವಾಗ್ರಸಃ ॥

**ಅರ್ಥ** :- **ಸುರಕ್ತಪದ್ಮಲೋಚನಃ** ಕಡು ಕೆಂಪಾದ ತಾವರೆಯಂಥ ಕಣ್ಣುಗಳುಳ್ಳ, **ಸುವಿದ್ಯುದಾಭಕುಂಡಲಃ** ದಟ್ಟವಾದ ಮಿಂಚಿನಂತೆ ಹೊಳೆಯುವ ಕುಂಡಲಗಳುಳ್ಳ **ಸುಹಾಸವಿದ್ರುಮಾಧರಃ** ಸುಂದರವಾದ ಮಂದಹಾಸದಿಂದ ಕೂಡಿದ ಹವಳದಂಥ ತುಟಿಯುಳ್ಳ **ಸಮಸ್ತವೇದವಾಗ್ರಸಃ** ಸಕಲ ವೇದಗಳನ್ನು ಉಚ್ಚರಿಸುವ ನಾಲಿಗೆಯುಳ್ಳವನು.

**ತಾತ್ಪರ್ಯ** :- (ಆ ಶ್ರೀರಾಮನ) ಕಣ್ಣುಗಳು ಕಡುಕೆಂಪಾದ ತಾವರೆ ಯಂತೆ ವಿಶಾಲವಾಗಿದ್ದವು; ಕರ್ಣಕುಂಡಲಗಳು ಮಿಂಚಿನಂತೆ ಪ್ರಜ್ವಲಿಸುತ್ತಿದ್ದವು; ತುಟಿಗಳು ಹವಳದಂತಿದ್ದು ಮಂದಹಾಸದಿಂದ ಕಂಗೊಳಿಸುತ್ತಿದ್ದವು; ಜಿಹ್ವೆಯು ಸಕಲ ವೇದಗಳನ್ನೂ ಉಚ್ಚರಿಸುತ್ತಿತ್ತು.

**ದಿವಾಕರೌಘಕೌಸ್ತುಭಪ್ರಭಾಸಕೋರುಕಂಧರಃ ।**
**ಸುಪೀವರೋನ್ನತೋರುಸಜ್ಜಗದ್ಧರಾಂಸಯುಗ್ಮಕಃ ॥ ೭೮ ॥**

ಪದಚ್ಛೇದ : ದಿವಾಕರೌಘಕೌಸ್ತುಭಪ್ರಭಾಸಕೋರುಕಂಧರಃ । ಸುಪೀವರೋನ್ನತೋರುಸಜ್ಜಗದ್ಧರಾಂಸಯುಗ್ಮಕಃ ॥

**ಅರ್ಥ** :- **ದಿವಾಕರೌಘಕೌಸ್ತುಭಪ್ರಭಾಸಕಉರುಕಂಧರಃ** ಸೂರ್ಯ ಸಮೂಹದಂತೆ ಬೆಳಗುವ ಕೌಸ್ತುಭಮಣಿಯನ್ನು ಬೆಳಗಿಸುವ ಉತ್ತಮವಾದ ಕಂಠವುಳ್ಳ **ಸುಪೀವರೋನ್ನತೋರುಸಜ್ಜಗದ್ಧರಾಂಸಯುಗ್ಮಕಃ** ಚೆನ್ನಾಗಿ ಪುಷ್ಟ ವಾಗಿಯೂ ಎತ್ತರವಾಗಿಯೂ ಇರುವ, ಮಹತ್ತಾದ ಜಗತ್ತಿನ ಭಾರವನ್ನು ಹೊರುವಂಥ ಎರಡು ಹೆಗಲುಳ್ಳವನಾಗಿದ್ದನು.

**ತಾತ್ಪರ್ಯ** :- ಆ ಶ್ರೀರಾಮನು ಸೂರ್ಯಸಮೂಹದಂತೆ ಶೋಭಿಸುವ ಕೌಸ್ತುಭಮಣಿಗೆ ಮತ್ತಷ್ಟು ಕಾಂತಿಯನ್ನು ಕೊಡುವ ಉತ್ತಮವಾದ ಕಂಠ ವುಳ್ಳವನು. ಜಗತ್ತಿನ ಭಾರವನ್ನು ಧರಿಸಿರುವ ಪುಷ್ಟವಾಗಿಯೂ ಉನ್ನತ ವಾಗಿಯೂ ಇದ್ದ ಮಹತ್ತಾದ ಎರಡು ಭುಜಗಳನ್ನು ಅವನು ಹೊಂದಿದ್ದನು.

**ಸುವೃತ್ತದೀರ್ಘಪೀವರೋಲ್ಲಸದ್ಭುಜದ್ವಯಾಂಕಿತಃ ।**
**ಜಗದ್ವಿಮಥ್ಯ ಸಂಭೃತಃ ಶರೋಽಸ್ಯ ದಕ್ಷಿಣೇ ಕರೇ ॥ ೭೯ ॥**

ಪದಚ್ಛೇದ : ಸುವೃತ್ತದೀರ್ಘಪೀವರೋಲ್ಲಸದ್ಭುಜದ್ವಯಾಂಕಿತಃ । ಜಗತ್ ವಿಮಥ್ಯ ಸಂಭೃತಃ ಶರಃ ಅಸ್ಯ ದಕ್ಷಿಣೇ ಕರೇ ॥

**ಅರ್ಥ** :- (ಆ ಶ್ರೀರಾಮನು) **ಸುವೃತ್ತದೀರ್ಘಪೀವರಉಲ್ಲಸತ್ ಭುಜದ್ವಯಾಂಕಿತಃ** ಚೆನ್ನಾಗಿ ದುಂಡಾದ ನೀಳವಾದ ಪುಷ್ಟವಾಗಿ ಶೋಭಿಸುವ ಎರಡು ತೋಳುಗಳಿಂದ ಕೂಡಿದವನಾಗಿದ್ದನು. **ಜಗತ್** ಲೋಕವನ್ನು **ವಿಮಥ್ಯ** ಮಥಿಸಿ **ಸಂಭೃತಃ** ಧರಿಸಲ್ಪಟ್ಟ **ಅಸ್ಯ** ಆ ಶ್ರೀರಾಮನ **ಶರಃ** ಬಾಣವು **ದಕ್ಷಿಣೇ** ಬಲಭಾಗದ **ಕರೇ** ಕೈಯಲ್ಲಿ (**ಅಸ್ತಿ** ಇದೆ).

**ತಾತ್ಪರ್ಯ** :- ಆ ಶ್ರೀರಾಮನು ಚೆನ್ನಾಗಿ ದುಂಡಾದ, ದೀರ್ಘವೂ ಪುಷ್ಟವೂ ಆಗಿ ಶೋಭಿಸುವ ಎರಡು ತೋಳುಗಳಿಂದ ಕೂಡಿದವನು.ಅವನ ಬಲಗೈಯಲ್ಲಿರುವ ಬಾಣವು ಜಗತ್ತಿನ ಸಾರವನ್ನೇ (ಮೇರು ಮಂದರಪರ್ವತ ಹಿಮಾಲಯ ಮುಂತಾದ ಶಿಲಾತ್ಮಕವಾದ ಸಕಲ ಜಗತ್ತುಗಳನ್ನೂ ಒಟ್ಟು ಗೂಡಿಸಿ) ಮಥಿಸಿ ತೆಗೆದಂಥದ್ದು.

(ವಿ.ಸೂ. ತಾತ್ಪರ್ಯದಲ್ಲಿ ಸೇರಿಸಿರುವ ''ಮೇರು ಮಂದರಪರ್ವತ ಹಿಮಾಲಯ ಮುಂತಾದ ಶಿಲಾತ್ಮಕವಾದ ಸಕಲ ಜಗತ್ತುಗಳನ್ನೂ ಒಟ್ಟು ಗೂಡಿಸಿ'' ಎಂಬ ಭಾಗವು ವಾದಿರಾಜೀಯ ವ್ಯಾಖ್ಯಾನುಸಾರಿಯಾಗಿದೆ.)

**ಸ್ವಯಂ ಚ ತೇನ ನಿರ್ಮಿತೋ ಹತೋ ಮಧುಶ್ಚ ಕೈಟಭಃ ।**
**ಶರೇಣ ತೇನ ವಿಷ್ಣುನಾ ದದೌ ಚ ಲಕ್ಷ್ಮಣಾನುಜೇ ॥ ೮೦ ॥**

ಪದಚ್ಛೇದ : ಸ್ವಯಂ ಚ ತೇನ ನಿರ್ಮಿತಃ ಹತಃ ಮಧುಃ ಚ ಕೈಟಭಃ । ಶರೇಣ ತೇನ ವಿಷ್ಣುನಾ ದದೌ ಚ ಲಕ್ಷ್ಮಣಾನುಜೇ ॥

**ಅರ್ಥ** :- **ಸಃ** ಆ ಬಾಣವು **ಸ್ವಯಂ** ಸ್ವತಃ **ವಿಷ್ಣುನಾ ತೇನ** ಶ್ರೀರಾಮನಿಂದ **ನಿರ್ಮಿತಃ** ನಿರ್ಮಿತವಾಗಿದೆ. **ತೇನ** ಆ **ಶರೇಣ** ಬಾಣದಿಂದ **ಮಧುಃ ಕೈಟಭಃ ಚ** ಮಧುಕೈಟಭರೂ **ಹತಃ** ಕೊಲ್ಲಲ್ಪಟ್ಟರು. ಅದನ್ನು ಅನಂತರ ಶ್ರೀರಾಮನು **ಲಕ್ಷ್ಮಣಾನುಜೇ** ಶತ್ರುಘ್ನನ ಕೈಯಲ್ಲಿ **ದದೌ ಚ** ಕೊಟ್ಟನು.

**ತಾತ್ಪರ್ಯ** :- ಸ್ವತಃ ವಿಷ್ಣುವಿನಿಂದಲೇ ನಿರ್ಮಿತವಾದದ್ದು ಆ ಬಾಣ. ಆ ಬಾಣದಿಂದಲೇ ಮಧುಕೈಟಭರೆಂಬ ದೈತ್ಯರು ಹತರಾದದ್ದು. ಅದನ್ನೇ ಅವನು ಲಕ್ಷ್ಮಣನ ಅನುಜನಾದ ಶತ್ರುಘ್ನನಿಗೆ ನೀಡಿದ್ದನು.

**ಸ ಶತ್ರುಸೂದನೋಽವಧೀನ್ಮಧೋಃ ಸುತಂ ರಸಾಹ್ವಯಮ್ ।**
**ಶರೇಣ ಯೇನ ಚಾಕರೋತ್ ಪುರೀಂ ಚ ಮಾಧುರಾಭಿಧಾಮ್ ॥೮೧॥**

**ಪದಚ್ಛೇದ : ಸಃ ಶತ್ರುಸೂದನಃ ಅವಧೀತ್ ಮಧೋಃ ಸುತಂ ರಸಾಹ್ವಯಮ್ ।**
**ಶರೇಣ ಯೇನ ಚ ಅಕರೋತ್ ಪುರೀಂ ಚ ಮಾಧುರಾಭಿಧಾಮ್ ॥**

**ಅರ್ಥ :-** **ಸಃ** ಆ **ಶತ್ರುಸೂದನಃ** ಶತ್ರುಘ್ನನು **ಮಧೋಃ** ಮಧು ನಾಮಕ ದೈತ್ಯನ **ಸುತಂ** ಮಗನಾದ **ರಸಾಹ್ವಯಂ** ಲವಣಾಸುರನನ್ನು **ಯೇನ ಶರೇಣ** ಯಾವ ಬಾಣದಿಂದ **ಅವಧೀತ್** ಕೊಂದನೋ **ಚ** ಮತ್ತು **ಮಾಧುರಾಭಿಧಾಂ** ಮಧುರಾ ಎಂಬ **ಪುರೀಂ** ಪಟ್ಟಣವನ್ನು **ಅಕರೋತ್** ಮಾಡಿದನು.

**ತಾತ್ಪರ್ಯ :-** ಆ ಶತ್ರುಘ್ನನು ಆ ಬಾಣದಿಂದಲೇ ಮಧುನಾಮಕ ದೈತ್ಯನ ಮಗನಾದ ಲವಣಾಸುರನನ್ನು ಕೊಂದಿದ್ದನು ಮತ್ತು ಅದೇ ಸ್ಥಳದಲ್ಲಿ ''ಮಧುರಾ'' ಎಂಬ ಹೆಸರಿನ ಪಟ್ಟಣವನ್ನು ನಿರ್ಮಿಸಿದನು.

**ಸಮಸ್ತಸಾರಸಂಭವಂ ಶರಂ ದಧಾರ ತಂ ಕರೇ ।**
**ಸ ವಾಮಬಾಹುನಾ ಧನುರ್ದಧಾರ ಶಾರ್ಙ್ಗಸಂಜ್ಞಿತಮ್ ॥ ೮೨ ॥**

**ಪದಚ್ಛೇದ : ಸಮಸ್ತಸಾರಸಂಭವಂ ಶರಂ ದಧಾರ ತಂ ಕರೇ । ಸಃ ವಾಮಬಾಹುನಾ ಧನುಃ ದಧಾರ ಶಾರ್ಙ್ಗಸಂಜ್ಞಿತಮ್ ॥**

**ಅರ್ಥ :-** **ತಂ** ಅಂತಹ **ಸಮಸ್ತಸಾರಸಂಭವಂ** ಸಕಲ ಜಗತ್ತಿನ ಸಾರಭೂತವಾದ **ಶರಂ** ಬಾಣವನ್ನು **ಕರೇ** ಕೈಯಲ್ಲಿ **ದಧಾರ** ಧರಿಸಿದನು. **ಸಃ** ಶ್ರೀರಾಮನು **ವಾಮಬಾಹುನಾ** ಎಡಗೈಯಿಂದ **ಶಾರ್ಙ್ಗಸಂಜ್ಞಿತಮ್** ಶಾರ್ಙ್ಗ ಎಂಬ ಹೆಸರಿನ **ಧನುಃ** ಧನುಸ್ಸನ್ನು **ದಧಾರ** ಧರಿಸಿದನು.

**ತಾತ್ಪರ್ಯ :-** ಹೀಗೆ ಸಕಲ ಜಗತ್ತಿನ ಸಾರಭೂತವಾದ ಬಾಣವನ್ನು ಶ್ರೀರಾಮಚಂದ್ರನು ಬಲಗೈಯಲ್ಲಿ ಹಿಡಿದಿದ್ದನು. ಎಡಗೈಯಲ್ಲಿ ಶಾರ್ಙ್ಗವೆಂಬ ಧನುಸ್ಸನ್ನು ಹಿಡಿದಿದ್ದನು.

**ಉದಾರಬಾಹುಭೂಷಣಃ ಶುಬಾಂಗದಃ ಸಕಂಕಣಃ ।**
**ಮಹಾಂಗುಲೀಯಭೂಷಿತಃ ಸುರಕ್ತಸತ್ಕರಾಂಬುಜಃ ॥ ೮೩ ॥**

ಪದಚ್ಛೇದ : ಉದಾರಬಾಹುಭೂಷಣಃ ಶುಭಾಂಗದಃ ಸಕಂಕಣಃ ।
ಮಹಾಂಗುಲೀಯಭೂಷಿತಃ ಸುರಕ್ತಸತ್ಕರಾಂಬುಜಃ ॥

**ಅರ್ಥ** :- **ಉದಾರಬಾಹುಭೂಷಣಃ** ಉದಾರ ಉತ್ಕೃಷ್ಟವಾದ **ಬಾಹು** ತೋಳುಗಳಿಗೆ **ಭೂಷಣಃ** ಆಭರಣಗಳನ್ನು ತೊಟ್ಟವನು **ಶುಬಾಂಗದಃ** ಮಂಗಳಕರವಾದ ತೋಳ್ಬಂದಿಗಳುಳ್ಳವನು **ಸಕಂಕಣಃ** ಎರಡು ಕಡಗಗಳುಳ್ಳ ವನು **ಮಹಾಂಗುಲೀಯಭೂಷಿತಃ** ಶ್ರೇಷ್ಠವಾದ ಉಂಗುರಗಳಿಂದ ಭೂಷಿತ ನಾದವನು ಹಾಗೂ **ಸುರಕ್ತಸತ್ಕರಾಂಬುಜಃ** ಅತ್ಯಂತ ಕೆಂಪಗಿರುವ ಉತ್ಕೃಷ್ಟ ವಾದ ತಾವರೆಯಂತಹ ಕೈಗಳುಳ್ಳವನೂ ಆಗಿದ್ದಾನೆ.

**ತಾತ್ಪರ್ಯ** :- ಪ್ರಶಸ್ತವಾದ ಬಾಹುಭೂಷಣಗಳು ಇರುವ ಆ ಶ್ರೀರಾಮ ಚಂದ್ರನು ಮಂಗಳವಾದ ತೋಳ್ಬಂದಿಗಳುಳ್ಳವನು, ಎರಡು ಕೈಗಳಲ್ಲಿ ಕಡಗ ಗಳನ್ನು ಧರಿಸಿ, ಬೆರಳುಗಳಲ್ಲಿ ಶ್ರೇಷ್ಠವಾದ ಉಂಗುರಗಳಿಂದ ಭೂಷಿತ ನಾದವನು ಹಾಗೂ ಅತ್ಯಂತ ಕೆಂಪಗಿರುವ ಉತ್ಕೃಷ್ಟವಾದ ತಾವರೆಯಂತಹ ಕೈಗಳುಳ್ಳವನು.

**ಅನರ್ಘ್ಯರತ್ನಮಾಲಯಾ ವನಾಖ್ಯಯಾ ಚ ಮಾಲಯಾ ।**
**ವಿಲಾಸಿವಿಸ್ತೃತೋರಸಾ ಬಬಾರ ಚ ಶ್ರಿಯಂ ಪ್ರಭುಃ ॥ ೮೪ ॥**

ಪದಚ್ಛೇದ : ಅನರ್ಘ್ಯರತ್ನಮಾಲಯಾ ವನಾಖ್ಯಯಾ ಚ ಮಾಲಯಾ ।
ವಿಲಾಸಿವಿಸ್ತೃತೋರಸಾ ಬಭಾರ ಚ ಶ್ರಿಯಂ ಪ್ರಭುಃ ॥

**ಅರ್ಥ** :- **ಅನರ್ಘ್ಯರತ್ನಮಾಲಯಾ** ಅನರ್ಘ್ಯವಾದ ರತ್ನಗಳ ಮಾಲೆ ಯಿಂದ **ವನಾಖ್ಯಯಾ ಮಾಲಯಾ ಚ** ವನಮಾಲೆಯಿಂದಲೂ, **ವಿಲಾಸಿ ವಿಸ್ತೃತೋರಸಾ** ಶೋಭಿಸುವ ವಿಶಾಲವಾದ ಎದೆಯಿಂದಲೂ ಕೂಡಿದ **ಪ್ರಭುಃ** ಶ್ರೀರಾಮಚಂದ್ರನು **ಶ್ರಿಯಂ ಚ** ಲಕ್ಷ್ಮಿಯನ್ನೂ **ಬಭಾರ** ಧರಿಸಿದ್ದಾನೆ.

**ತಾತ್ಪರ್ಯ** :- ಶ್ರೀರಾಮಚಂದ್ರನು ಅನರ್ಘ್ಯವಾದ ರತ್ನದ ಹಾರ ಮತ್ತು ವನಮಾಲೆಯಿಂದ ಶೋಭಾಯಮಾನವಾದ ಹಾಗೂ ವಿಶಾಲ ವಾಗಿರುವ ಎದೆಯಲ್ಲಿ ಲಕ್ಷ್ಮಿಯನ್ನು ಧರಿಸಿದ್ದಾನೆ.

ಸಭೂತಿವತ್ಸಭೂಷಣಸ್ತನೂದರೇ ವಲಿತ್ರಯೀ ।
ಉದಾರಮಧ್ಯಭೂಷಣೋಲ್ಲಸತ್ತಟಿತ್ಪ್ರಭಾಂಬರಃ ॥ ೮೫ ॥

ಪದಚ್ಛೇದ : ಸಭೂತಿವತ್ಸಭೂಷಣಃ ತನೂದರೇ ವಲಿತ್ರಯೀ । ಉದಾರಮಧ್ಯ ಭೂಷಣೋಲ್ಲಸತ್ತಟಿತ್ಪ್ರಭಾಂಬರಃ ॥

**ಅರ್ಥ** :- ಆ ಶ್ರೀರಾಮನು **ಸಭೂತಿವತ್ಸಭೂಷಣಃ** ಶ್ರೀವತ್ಸ ಚಿಹ್ನೆಯಿಂದ ಅಲಂಕೃತನಾಗಿ **ತನೂದರೇ** ತೆಳುವಾದ ಹೊಟ್ಟೆಯಲ್ಲಿ **ವಲಿತ್ರಯೀ** ತ್ರಿವಳಿಗಳುಳ್ಳ **ಉದಾರಮಧ್ಯಭೂಷಣಃ** ಕಟಿಯಲ್ಲಿ ಶ್ರೇಷ್ಠವಾದ ಆಭರಣವುಳ್ಳವನಾಗಿ **ಉಲ್ಲಸತ್ತಟಿತ್ಪ್ರಭಾಂಬರಃ ಉಲ್ಲಸತ್** ಶೋಭಿಸುವ **ತಟಿತ್ಪ್ರಭಾ** ಮಿಂಚಿನಂತೆ ಕಾಂತಿ ಇರುವ **ಅಂಬರಃ** ಪೀತಾಂಬರಧಾರಿಯಾಗಿದ್ದನು.

**ತಾತ್ಪರ್ಯ** :- (ಶ್ರೀರಾಮನು) ಶ್ರೀವತ್ಸಚಿಹ್ನೆಯಿಂದ ಅಲಂಕೃತನಾಗಿ, ತೆಳುವಾದ ಉದರದ ಮೇಲೆ ತ್ರಿವಳಿಗಳುಳ್ಳವನು. ಶ್ರೇಷ್ಠವಾದ ಕಟಿಯ ಆಭರಣದಿಂದ ಶೋಭಿಸುವ ಮಿಂಚಿನ ಪ್ರಭೆಯಂತೆ ಇರುವ ಪೀತಾಂಬರವನ್ನು ಧರಿಸಿದವನು.

ಕರೀಂದ್ರಸತ್ಕರೋರುಯುಕ್ ಸುವೃತ್ತಜಾನುಮಂಡಲಃ ।
ಕ್ರಮಾಲ್ಪವೃತ್ತಜಂಘಕಃ ಸುರಕ್ತಪಾದಪಲ್ಲವಃ ॥ ೮೬ ॥

ಪದಚ್ಛೇದ : ಕರೀಂದ್ರಸತ್ಕರೋರುಯುಕ್ ಸುವೃತ್ತಜಾನುಮಂಡಲಃ । ಕ್ರಮಾಲ್ಪವೃತ್ತಜಂಘಕಃ ಸುರಕ್ತಪಾದಪಲ್ಲವಃ ॥

**ಅರ್ಥ** :- **ಕರೀಂದ್ರಸತ್ಕರೋರುಯುಕ್** = ಗಜೇಂದ್ರನ ಉತ್ತಮ ಸೊಂಡಿಲಿನಂತಿರುವ ತೊಡೆಗಳುಳ್ಳ **ಸುವೃತ್ತಜಾನುಮಂಡಲಃ** ಉರುಟಾದ ಮೊಳಗಾಲುಗಳುಳ್ಳ, **ಕ್ರಮಾಲ್ಪವೃತ್ತಜಂಘಕಃ** ಕ್ರಮವಾಗಿ ತೆಳ್ಳಗಿರುವ ದುಂಡಾದ ಜಂಘೆಗಳುಳ್ಳ **ಸುರಕ್ತಪಾದಪಲ್ಲವಃ** ಕೆಂಪಾದ ಎಳೆ ಚಿಗುರಿನಂತೆ ಪಾದವುಳ್ಳವನು.

**ತಾತ್ಪರ್ಯ** :- ಶ್ರೇಷ್ಠವಾದ ಆನೆಯ ಉತ್ತಮವಾದ ಸೊಂಡಲಿನಂತಹ ತೊಡೆಗಳು. ದುಂಡಾದ ಮೊಳಕಾಲುಗಳು, ಕ್ರಮವಾಗಿ ತೆಳ್ಳಗಾದ ಉರುಟಾದ ಜಂಘೆಗಳು, ಎಳೆ ಚಿಗುರಿನಂತಹ ಕೆಂಪಾದ ಪಾದಗಳು.

ಲಸದ್ಧರಿನ್ಮಣಿದ್ಯುತೀ ರರಾಜ ರಾಘವೋಽಧಿಕಮ್ ।
ಅಸಂಖ್ಯಸತ್ಸುಖಾರ್ಣವಃ ಸಮಸ್ತಶಕ್ತಿಸತ್ತನುಃ ॥ ೮೭ ॥

ಪದಚ್ಛೇದ : ಲಸನ್ಮಣಿದ್ಯುತಿಃ ರರಾಜ ರಾಘವಃ ಅಧಿಕಮ್ । ಅಸಂಖ್ಯ ಸತ್ಸುಖಾರ್ಣವಃ ಸಮಸ್ತಶಕ್ತಿಸತ್ತನುಃ ॥

**ಅರ್ಥ :- ಲಸದ್ಧರಿನ್ಮಣಿದ್ಯುತಿಃ ಲಸತ್** ಹೊಳೆಯುವ **ಹರಿನ್ಮಣಿದ್ಯುತಿಃ** ಇಂದ್ರನೀಲಮಣಿಯಂತೆ ಕಾಂತಿಯುಳ್ಳ **ಅಸಂಖ್ಯಸತ್ಸುಖಾರ್ಣವಃ ಅಸಂಖ್ಯ** ಎಣಿಸಲಾಗದ **ಸತ್ಸುಖಾರ್ಣವಃ** ಉತ್ತಮ ಸುಖಸಾಗರನಾದ **ಸಮಸ್ತ ಶಕ್ತಿ ಸತ್ತನುಃ** ಸಕಲಶಕ್ತಿಗಳೇ ಶರೀರವಾಗಿಯುಳ್ಳ **ರಾಘವಃ** ಶ್ರೀರಾಮನು **ಅಧಿಕಂ** ಬಹಳವಾಗಿ **ರರಾಜ** ಶೋಭಿಸಿದನು.

**ತಾತ್ಪರ್ಯ :-** ಪ್ರಜ್ವಲಿಸುವ ಇಂದ್ರನೀಲಮಣಿಯಂತೆ ದೇಹದ ಕಾಂತಿಯುಳ್ಳ ಕಲ್ಪನೆಗೆ ನಿಲುಕದ ಉತ್ತಮ ಸುಖಸಾಗರನಾದ, ಸಕಲಶಕ್ತಿಗಳೇ ಶರೀರವಾಗಿರುವ ಶ್ರೀರಾಮಚಂದ್ರನು ಬಹಳವಾಗಿ ಶೋಭಿಸಿದನು.

ಮಹಾಪ್ರಸ್ಥಾನ

ಜ್ಞಾನಂ ನೇತ್ರಾಬ್ಜಯುಗ್ಮಾನ್ಮುಖವರಕಮಲಾತ್ ಸರ್ವವೇದಾರ್ಥಸಾರಾನ್
ತನ್ವಾ ಬ್ರಹ್ಮಾಂಡಬಾಹ್ಯಾಂತರಮಧಿಕರುಚಾ ಭಾಸಯನ್ ಭಾಸುರಾಸ್ಯಃ ।
ಸರ್ವಾಭೀಷ್ಟಾಭಯೇ ಚ ಸ್ವಕರವರಯುಗೇನಾರ್ಥಿನಾಮಾದಧಾನಃ
ಪ್ರಾಯಾದ್ದೇವಾಧಿದೇವಃ ಸ್ವಪದಮಭಿಮುಖಶ್ಚೋತ್ತರಾಶಾಂ ವಿಶೋಕಾಮ್
॥ ೮೮ ॥

ಪದಚ್ಛೇದ : ಜ್ಞಾನಂ ನೇತ್ರಾಬ್ಜಯುಗ್ಮಾತ್ ಮುಖವರಕಮಲಾತ್ ಸರ್ವ ವೇದಾರ್ಥಸಾರಾನ್ ತನ್ವಾ ಬ್ರಹ್ಮಾಂಡಬಾಹ್ಯಾಂತರಮ್ ಅಧಿಕರುಚಾ ಭಾಸಯನ್ ಭಾಸುರಾಸ್ಯಃ । ಸರ್ವಾಭೀಷ್ಟಾಭಯೇ ಚ ಸ್ವಕರವರಯುಗೇನ ಅರ್ಥಿನಾಮ್ ಆದಧಾನಃ ಪ್ರಾಯಾತ್ ದೇವಾಧಿದೇವಃ ಸ್ವಪದಮ್ ಅಭಿಮುಖಃ ಚ ಉತ್ತರಾಶಾಂ ವಿಶೋಕಾಮ್ ॥

**ಅರ್ಥ :-** ತನ್ವಾ ಶರೀರದಿಂದ ಅಧಿಕಕಾಂತಿಯುಳ್ಳ **ಬ್ರಹ್ಮಾಂಡ ಬಾಹ್ಯಾಂತರಂ** ಬ್ರಹ್ಮಾಂಡದ ಒಳಗೂ ಹೊರಗೂ **ಭಾಸಯನ್** ಬೆಳಗುತ್ತಾ

**ಭಾಸುರಾಸ್ಯಃ** ಪ್ರಕಾಶಮಾನವಾದ ಮುಖವುಳ್ಳ **ದೇವಾಧಿದೇವಃ** ದೇವತೆಗಳಿಗೂ ಸ್ವಾಮಿಯಾದ ಶ್ರೀರಾಮನು **ನೇತ್ರಾಬ್ಜಯುಗ್ಮಾತ್** ತಾವರೆಯಂಥ ಎರಡುಕಣ್ಣುಗಳಿಂದ **ಜ್ಞಾನಂ** ಜ್ಞಾನವನ್ನು **ಮುಖವರಕಮಲಾತ್** ಕಮಲದಂತೆ ಕಂಗೊಳಿಸುವ ಮುಖದಿಂದ **ಸರ್ವವೇದಾರ್ಥಸಾರಾನ್** ಸಕಲವೇದಾರ್ಥ ಸಾರವನ್ನು **ಸ್ವಕರವರಯುಗೇನ** ತನ್ನ ಉತ್ತಮವಾದ ಎರಡು ಕೈಗಳಿಂದ **ಸರ್ವಾಭೀಷ್ಟಾಭಯೇ ಚ** ಎಲ್ಲ ಅಭೀಷ್ಟ ಮತ್ತು ಅಭಯಗಳನ್ನು **ಅರ್ಥಿನಾಮ್** ಬೇಡುವವರಿಗೆ **ಆದಧಾನಃ** ಕೊಡುವವನಾಗಿ **ಸ್ವಪದಂ** ತನ್ನ ಲೋಕಕ್ಕೆ **ಅಭಿಮುಖಂ** ಅಭಿಮುಖವಾಗಿ **ವಿಶೋಕಾಂ** ಶೋಕರಹಿತವಾದ **ಉತ್ತರಾಶಾಂ** ಉತ್ತರದಿಕ್ಕನ್ನು **ಪ್ರಾಯಾತ್** ಹೋದನು.

**ತಾತ್ಪರ್ಯ** :- ಕಮಲದಂತಹ ಎರಡು ಕಣ್ಣುಗಳಿಂದ ಜ್ಞಾನವನ್ನು ನೀಡುತ್ತ, ಶ್ರೇಷ್ಠವಾದ ಮುಖಕಮಲದಿಂದ ಸಕಲವೇದಾರ್ಥಗಳ ತಾತ್ಪರ್ಯವನ್ನು ವ್ಯಾಖ್ಯಾನಿಸುತ್ತ, ಅಪಾರಕಾಂತಿಯುಳ್ಳ ಶರೀರದಿಂದ ಬ್ರಹ್ಮಾಂಡದ ಒಳಗೂ ಹೊರಗೂ ಬೆಳಗುತ್ತ, ಪ್ರಕಾಶಮಾನವಾದ ಮುಖವುಳ್ಳ ಹಾಗೂ ತನ್ನ ಶ್ರೇಷ್ಠವಾದ ಎರಡು ಕೈಗಳಿಂದ ಬೇಡುವ ಸಕಲರಿಗೂ ಅಭೀಷ್ಟವನ್ನೂ ಅಭಯವನ್ನೂ ನೀಡುತ್ತಿದ್ದವನಾಗಿ ಸಕಲದೇವತೆಗಳಿಗೂ ಒಡೆಯನಾದ ಶ್ರೀರಾಮಚಂದ್ರನು ಶೋಕವಿರದ ಉತ್ತರದಿಕ್ಕಿಗೆ ಅಭಿಮುಖವಾಗಿ ತನ್ನ ಲೋಕಕ್ಕೆ ಹೊರಟನು.

ದಧ್ರೇ ಛತ್ರಂ ಹನೂಮಾನ್
ಸ್ರವದಮೃತಮಯಂ ಪೂರ್ಣಚಂದ್ರಾಯುತಾಭಂ
ಸೀತಾ ಸೈವಾಖಿಲಾಕ್ಷ್ಣಾಂ
ವಿಷಯಮುಪಗತಾ ಶ್ರೀರಿತಿ ಹ್ರೀರಥೈಕಾ ।
ದ್ವೇಧಾ ಭೂತ್ವಾ ದುಧಾವ
ವ್ಯಜನಮುಭಯತಃ ಪೂರ್ಣಚಂದ್ರಾಂಶುಗೌರಂ
ಪ್ರೋದ್ಯದ್ಭಾಸ್ವತ್ಪ್ರಭಾಭಾ
ಸಕಲಗುಣತನುರ್ಭೂಷಿತಾ ಭೂಷಣೈಸ್ವೈಃ ॥೮೯॥

ಪದಚ್ಛೇದ : ದಧ್ರೇ ಛತ್ರಂ ಹನೂಮಾನ್ ಸ್ರವದಮೃತಮಯಂ ಪೂರ್ಣಚಂದ್ರಾಯುತಾಭಂ ಸೀತಾ ಸಾ ಏವ ಅಖಿಲಾಕ್ಷ್ಣಾಂ ವಿಷಯಮ್ ಉಪಗತಾ ಶ್ರೀಃ

**ಇತಿ ಹ್ರೀಃ ಅಥ ಏಕಾ । ದ್ವೇಧಾ ಭೂತ್ವಾ ದುಧಾವ ವ್ಯಜನಮ್ ಉಭಯತಃ ಪೂರ್ಣಚಂದ್ರಾಂಶುಗೌರಂ ಪ್ರೋದ್ಯದ್ಭಾಸ್ವತ್ಪ್ರಭಾಭಾ ಸಕಲಗುಣತನುಃ ಭೂಷಿತಾ ಭೂಷಣೈಃ ಸ್ವೈಃ ॥**

**ಅರ್ಥ :-** ಹನುಮಾನ್ ಹನುಮಂತನು ಸ್ರವದಮೃತಮಯಂ ಅಮೃತ ಸ್ರವಿಸುತ್ತಿದ್ದ ಮತ್ತು **ಪೂರ್ಣಚಂದ್ರಾಯುತಾಭಂ** ಹತ್ತು ಸಾವಿರ ಪೂರ್ಣ ಚಂದ್ರರಂತೆ ಕಾಂತಿಯುಳ್ಳ ಛತ್ರಂ ಛತ್ರವನ್ನು ದಧ್ರೇ ಹಿಡಿದನು. ಸಾ ಆ ಸೀತಾ ಸೀತಾದೇವಿಯು **ಏಕೈವ** ಒಬ್ಬಳೇ **ಅಖಿಲಾಕ್ಷ್ಣಾಂ** ಎಲ್ಲರ ಕಣ್ಣುಗಳಿಗೆ **ವಿಷಯಮ್** ಕಾಣುವಿಕೆಯನ್ನು **ಉಪಗತಾ** ಹೊಂದಿದವಳಾಗಿ **ಶ್ರೀರಿತಿ** ಶ್ರೀದೇವಿ ಎಂದೂ **ಅಥ** ಹಾಗೆಯೇ **ಹ್ರೀಃ** ಹ್ರೀ ಎಂದೂ **ದ್ವೇಧಾ ಭೂತ್ವಾ** ಎರಡು ರೂಪಗಳನ್ನು ಹೊಂದಿ **ಪ್ರೋದ್ಯದ್ಭಾಸ್ವತ್ಪ್ರಭಾಭಾ** ಉದಿಸುವ ಸೂರ್ಯನ ಪ್ರಕಾಶದಂತೆ ಕಾಂತಿಯುಳ್ಳವಳಾಗಿ **ಸಕಲಗುಣತನುಃ** ಎಲ್ಲ ಸದ್ಗುಣಗಳೇ ಶರೀರ ವುಳ್ಳವಳಾಗಿ **ಸ್ವೈಃ** ತನ್ನ **ಭೂಷಣೈಃ** ಅಲಂಕಾರಗಳಿಂದ **ಭೂಷಿತಾ** ಅಲಂಕೃತ ಳಾಗಿ **ಪೂರ್ಣಚಂದ್ರಾಂಶುಗೌರಂ** ಪೂರ್ಣಚಂದ್ರನಂತೆ ಬಿಳಿಯಾದ **ವ್ಯಜನಂ** ಚಾಮರವನ್ನು **ಉಭಯತಃ** ಎರಡು ಪಾರ್ಶ್ವದಿಂದಲೂ **ದುಧಾವ** ಬೀಸಿದಳು.

**ತಾತ್ಪರ್ಯ :-** ಹನುಮಂತನು ಅಮೃತ ಸೂಸುತ್ತಿರುವ, ಹತ್ತುಸಾವಿರ ಪೂರ್ಣಚಂದ್ರರ ಕಾಂತಿಯಿಂದ ಕೂಡಿದ ಛತ್ರವನ್ನು ಹಿಡಿದಿದ್ದನು. ಉದಿಸುವ ಸೂರ್ಯನ ಪ್ರಕಾಶದಂತೆ ಕಾಂತಿ ಇರುವ, ಜ್ಞಾನಭಕ್ತ್ಯಾದಿ ಸಕಲಗುಣಗಳೇ ಸ್ವರೂಪವಾದ ಶರೀರವುಳ್ಳ ಸೀತಾದೇವಿಯು ತನ್ನದೇ ಆದ ಅಲಂಕಾರಗಳಿಂದ ಭೂಷಿತಳಾಗಿ, ಒಬ್ಬಳೇ ಆಗಿದ್ದೂ ಶ್ರೀ ಮತ್ತು ಹ್ರೀ ಎಂಬ ಎರಡು ರೂಪ ಗಳಿಂದ ಎಲ್ಲರ ಕಣ್ಣುಗಳಿಗೆ ಕಾಣಿಸುವವಳಾಗಿ ಶ್ರೀರಾಮನ ಎರಡೂ ಪಾರ್ಶ್ವ ಗಳಲ್ಲಿ ಹುಣ್ಣಿಮೆಚಂದ್ರನಂತೆ ಬಿಳಿಯಾದ ಚಾಮರಗಳನ್ನು ಬೀಸಿದಳು.

**ಸಾಕ್ಷಾಚ್ಚಕ್ರತನುಸ್ತಥೈವ ಭರತಶ್ಚಕ್ರಂ ದಧದ್ದಕ್ಷಿಣೇ**
**ನಾಯಾತ್ ಸವ್ಯತ ಏವ ಶಂಖವರಭೃಚ್ಛಂಖಾತ್ಮಕಃ ಶತ್ರುಹಾ ।**
**ಅಗ್ರೇ ಬ್ರಹ್ಮಪುರೋಗಮಾಃ ಸುರಗಣಾ ವೇದಾಶ್ಚ ಸೋಂಕಾರಕಾಃ**
**ಪಶ್ಚಾತ್ ಸರ್ವಜಗಜ್ಜಗಾಮ ರಘುಪಂ ಯಾಂತಂ ನಿಜಂ ಧಾಮ ತಮ್**
**॥ ೯೦ ॥**

ಪದಚ್ಛೇದ : ಸಾಕ್ಷಾತ್ ಚಕ್ರತನುಃ ತಥಾ ಏವ ಭರತಃ ಚಕ್ರಂ ದಧತ್ ದಕ್ಷಿಣೇನ ಆಯಾತ್ ಸವ್ಯತಃ ಏವ ಶಂಖವರಭೃತ್ ಶಂಖಾತ್ಮಕಃ ಶತ್ರುಹಾ । ಅಗ್ರೇ ಬ್ರಹ್ಮಪುರೋಗಮಾಃ ಸುರಗಣಾಃ ವೇದಾಃ ಚ ಸೋಂಕಾರಕಾಃ ಪಶ್ಚಾತ್ ಸರ್ವಜಗತ್ ಜಗಾಮ ರಘುಪಂ ಯಾಂತಂ ನಿಜಂ ಧಾಮ ತಮ್ ॥

**ಅರ್ಥ** :- **ತಥೈವ** ಹಾಗೆಯೇ **ಸಾಕ್ಷಾತ್** ಮುಖ್ಯವಾಗಿ **ಚಕ್ರತನುಃ** ಚಕ್ರಕ್ಕೆ ಅಭಿಮಾನಿಯಾದ **ಭರತಃ** ಭರತನು **ಚಕ್ರಂ** ಚಕ್ರವನ್ನು **ದಧತ್** ಧರಿಸಿದವನಾಗಿ **ದಕ್ಷಿಣೇನ** ಬಲಭಾಗದಿಂದ **ಆಯಾತ್** ಹೋದನು. **ಶಂಖಾತ್ಮಕಃ** ಶಂಖಾಭಿಮಾನಿಯಾದ **ಶತ್ರುಹಾ** ಶತ್ರುಘ್ನನು **ಶಂಖವರಭೃತ್** ಉತ್ತಮ ಶಂಖವನ್ನು ಧರಿಸಿದವನಾಗಿ **ಸವ್ಯತ ಏವ** ಎಡಬದಿಯಲ್ಲಿ **ಆಯಾತ್** ಹೊರಟನು. **ಅಗ್ರೇ** ಮುಂಭಾಗದಲ್ಲಿ **ಬ್ರಹ್ಮಪುರೋಗಮಾಃ** ಬ್ರಹ್ಮನೇ ಮೊದಲಾದ **ಸುರಗಣಾಃ** ದೇವತೆಗಳು **ಸೋಂಕಾರಕಾಃ** ಓಂಕಾರಾಭಿಮಾನಿ ದೇವತೆಗಳಿಂದ ಸಹಿತರಾದ **ವೇದಾಶ್ಚ** ವೇದಾಭಿಮಾನಿಗಳೂ ಕೂಡ **ಆಯಾತ್** ಹೊರಟರು. **ನಿಜಂ** ತನ್ನ **ಧಾಮ** ಲೋಕವನ್ನು **ಯಾಂತಂ** ಹೊಂದಲಿರುವ **ತಂ** ಶ್ರೀರಾಮಚಂದ್ರನನ್ನು **ಪಶ್ಚಾತ್** ಹಿಂಬದಿಯಲ್ಲಿ **ಸರ್ವಜಗತ್** ಎಲ್ಲ ಜಗತ್ತೂ **ಜಗಾಮ** ಅನುಸರಿಸಿತು.

**ತಾತ್ಪರ್ಯ** :- ಚಕ್ರಾಭಿಮಾನಿಯಾದ ಭರತನು ಚಕ್ರವನ್ನು ಹಿಡಿದು ಶ್ರೀರಾಮನ ಬಲಬದಿಯಲ್ಲಿ ನಡೆದನು. ಶಂಖಾಭಿಮುನಿಯಾದ ಶತ್ರುಘ್ನನು ಶಂಖಗಳಲ್ಲಿ ಶ್ರೇಷ್ಠವಾದ ಪಾಂಚಜನ್ಯ ಶಂಖವನ್ನು ಹಿಡಿದು ಎಡಬದಿಯಲ್ಲಿ ನಡೆದನು. ಮುಂಭಾಗದಲ್ಲಿ ಬ್ರಹ್ಮನೇ ಮೊದಲಾದ ಸಕಲದೇವತೆಗಳು ಹಾಗೂ ಓಂಕಾರ ಸಹಿತ ಸಕಲ ವೇದಾಭಿಮಾನಿ ದೇವತೆಗಳೂ ನಡೆದರು. ಹಾಗೆಯೇ ಪರಂಧಾಮಕ್ಕೆ ಹೊರಟ ಶ್ರೀರಾಮಚಂದ್ರನ ಹಿಂದೆ ಸಕಲ ಜಗತ್ತೂ ನಡೆಯಿತು.

**ತಸ್ಯ ಸೂರ್ಯಸುತಪೂರ್ವವಾನರಾ**
**ದಕ್ಷಿಣೇನ ಮನುಜಾಸ್ತು ಸವ್ಯತಃ ।**
**ರಾಮಜನ್ಮಚರಿತಾನಿ ತಸ್ಯ ತೇ**
**ಕೀರ್ತಯಂತ ಉಚ್ಚೈರ್ದ್ರುತಂ ಯಯುಃ ॥ ೯೧ ॥**

ಪದಚ್ಛೇದ : ತಸ್ಯ ಸೂರ್ಯಸುತಪೂರ್ವವಾನರಾಃ ದಕ್ಷಿಣೇನ ಮನುಜಾಃ ತು ಸವ್ಯತಃ। ರಾಮಜನ್ಮಚರಿತಾನಿ ತಸ್ಯ ತೇ ಕೀರ್ತಯಂತಃ ಉಚಚ್ಛೈಃ ದ್ರುತಂ ಯಯುಃ ॥

**ಅರ್ಥ** :- **ಸೂರ್ಯಸುತಪೂರ್ವವಾನರಾಃ** ಸುಗ್ರೀವನೇ ಮೊದಲಾದ ವಾನರರು **ತಸ್ಯ** ಶ್ರೀರಾಮನ **ದಕ್ಷಿಣೇನ** ಬಲಭಾಗದಿಂದ, **ಮನುಜಾಸ್ತು** ಮನುಷ್ಯರು **ಸವ್ಯತಃ** ಎಡಭಾಗದಿಂದ **ತಸ್ಯ** ಶ್ರೀರಾಮನ **ರಾಮಜನ್ಮಚರಿತಾನಿ** ರಾಮಾವತಾರದ ಚರಿತ್ರೆಗಳನ್ನು **ಉಚಚ್ಛೈಃ** ಗಟ್ಟಿಯಾಗಿ **ಕೀರ್ತಯಂತಃ** ಸ್ತುತಿಸುತ್ತಾ **ದ್ರುತಂ** ವೇಗವಾಗಿ **ಯಯುಃ** ಹೊರಟರು.

ತಾತ್ಪರ್ಯ :- ಶ್ರೀರಾಮನ ಬಲಬದಿಯಲ್ಲಿ ಸುಗ್ರೀವನೇ ಮೊದಲಾದ ವಾನರರೂ ಎಡಬದಿಯಲ್ಲಿ ಮನುಷ್ಯರೂ, ಶ್ರೀರಾಮನ ಅವತಾರದ ಚರಿತ್ರೆಗಳನ್ನು ಗಟ್ಟಿಯಾಗಿ ಸ್ತೋತ್ರ ಮಾಡುತ್ತ ವೇಗವಾಗಿ ಮುಂದೆ ಸಾಗಿದರು.

**ಗಂಧರ್ವೈರ್ಗೀಯಮಾನೋ ವಿಬುಧಮುನಿಗಣೈರಬ್ಜಸಂಭೂತಿಪೂರ್ವೈ**
**ರ್ವೇದೋದಾರಾರ್ಥವಾಗ್ಭಿಃ ಪ್ರಣಿಹಿತಸುಮನಾಃ ಸರ್ವದಾ ಸ್ತೂಯಮಾನಃ ।**
**ಸರ್ವೈರ್ಭೂತೈಶ್ಚ ಭಕ್ತ್ಯಾ ಸ್ವನಿಮಿಷನಯನೈಃ ಕೌತುಕಾದ್ ವೀಕ್ಷ್ಯಮಾಣಃ**
**ಪ್ರಾಯಾಚ್ಛೇಷಗರುತ್ಮದಾದಿಕನಿಜೈಃ ಸಂಸೇವಿತಂ ಸ್ವಂ ಪದಮ್ ॥ ೯೨ ॥**

ಪದಚ್ಛೇದ : ಗಂಧರ್ವೈಃ ಗೀಯಮಾನಃ ವಿಬುಧಮುನಿಗಣೈಃ ಅಬ್ಜಸಂಭೂತಿ ಪೂರ್ವೈಃ ವೇದೋದಾರಾರ್ಥವಾಗ್ಭಿಃ ಪ್ರಣಿಹಿತಸುಮನಾಃ ಸರ್ವದಾ ಸ್ತೂಯಮಾನಃ । ಸರ್ವೈಃ ಭೂತೈಃ ಚ ಭಕ್ತ್ಯಾ ಸ್ವನಿಮಿಷನಯನೈಃ ಕೌತುಕಾತ್ ವೀಕ್ಷ್ಯಮಾಣಃ ಪ್ರಾಯಾತ್ ಶೇಷಗರುತ್ಮದಾದಿಕನಿಜೈಃ ಸಂಸೇವಿತಂ ಸ್ವಂ ಪದಮ್ ॥

**ಅರ್ಥ** :- **ಗಂಧರ್ವೈಃ** ಗಂಧರ್ವರಿಂದ **ಗೀಯಮಾನಃ** ಹಾಡಿಸಿಕೊಳ್ಳುತ್ತ **ಅಬ್ಜಸಂಭೂತಿಪೂರ್ವೈಃ** ಬ್ರಹ್ಮನೇ ಮೊದಲಾದ **ವಿಬುಧಮುನಿಗಣೈಃ** ದೇವತೆಗಳು, ಋಷಿಗಳು ಇವರ ಸಮೂಹದಿಂದ **ವೇದೋದಾರಾರ್ಥವಾಗ್ಭಿಃ** ವೇದದ ಉತ್ತಮ ಅರ್ಥಗಳಿಂದ ಕೂಡಿದ ಮಾತುಗಳಿಂದ **ಪ್ರಣಿಹಿತ ಸುಮನಾಃ** ಪುಷ್ಪ ವೃಷ್ಟಿ ಮಾಡಿಸಿಕೊಂಡವನಾಗಿ, **ಸರ್ವದಾ** ಯಾವಾಗಲೂ **ಸ್ತೂಯ ಮಾನಃ** ಸ್ತುತಿಸಲ್ಪಟ್ಟವನಾಗಿ **ಸರ್ವೈಃ** ಎಲ್ಲ **ಭೂತೈಃ** ಪ್ರಾಣಿ ಗಳಿಂದಲೂ **ಸ್ವನಿಮಿಷನಯನೈಃ** ಸ್ವಲ್ಪವೂ ಕಣ್ಣುಮುಚ್ಚದೇ ಇರುವವರಾಗಿ **ಕೌತುಕಾತ್** ಕುತೂಹಲದಿಂದ **ವೀಕ್ಷ್ಯಮಾಣಃ** ನೋಡಲ್ಪಟ್ಟವನಾಗಿ **ಶೇಷ**

**ಗರುತ್ಮದಾದಿಕ ನಿಜೈಃ** ಶೇಷಗರುಡ ಮೊದಲಾದ ತನ್ನ ಭಕ್ತರಿಂದ **ಸಂಸೇವಿತಂ** ಸೇವಿತವಾದಂಥ **ಸ್ವಂ** ತನ್ನ **ಪದಂ** ಧಾಮವನ್ನು ಕುರಿತು **ಪ್ರಾಯಾತ್** ಹೊರಟನು.

**ತಾತ್ಪರ್ಯ** :- ಗಂಧರ್ವರಿಂದ ಗಾಯನ ಮಾಡಿಸಿಕೊಳ್ಳುತ್ತ ಚತುರ್ಮುಖ ಬ್ರಹ್ಮನೇ ಮೊದಲಾದ ದೇವತೆಗಳು ಹಾಗೂ ಮುನಿಗಳ ಸಮೂಹಗಳಿಂದ ವೇದದ ಶ್ರೇಷ್ಠ ಅರ್ಥಗಳಿಂದ ಕೂಡಿದ ಮಾತುಗಳಿಂದ ಪುಷ್ಪವೃಷ್ಟಿಯನ್ನು (ಸ್ತೋತ್ರವನ್ನು) ಸ್ವೀಕರಿಸಿಕೊಳ್ಳುತ್ತ,ಸ್ವಲ್ಪವೂ ಕಣ್ಣು ಮಿಟುಕಿಸದಂತಹ ಸಕಲ ಪ್ರಾಣಿಗಳೂ ಭಕ್ತಿಪೂರ್ವಕ ಆಶ್ಚರ್ಯದಿಂದ ನೋಡುತ್ತಿದ್ದಂತೆಯೇ, ಶ್ರೀರಾಮಚಂದ್ರನು ಶೇಷಗರುಡಾದಿ ತನ್ನ ಭಕ್ತ ಜನರಿಂದ ಸೇವಿತವಾದ ತನ್ನ ಲೋಕಕ್ಕೆ ತೆರಳಿದನು.

**ಬ್ರಹ್ಮರುದ್ರಗರುಡೈಃ ಸಶೇಷಕೈಃ**
**ಪ್ರೋಚ್ಯಮಾನಸುಗುಣೋರುವಿಸ್ತರಃ ।**
**ಆರುರೋಹ ವಿಭುರಂಬರಂ ಶನೈ**
**ಸ್ತೇ ಚ ದಿವ್ಯವಪುಷೋಽಭವಂಸ್ತದಾ ॥ ೯೩ ॥**

ಪದಚ್ಛೇದ : ಬ್ರಹ್ಮರುದ್ರಗರುಡೈಃ ಸಶೇಷಕೈಃ ಪ್ರೋ ವಿಸ್ತರಃ । ಆರುರೋಹ ವಿಭುಃ ಅಂಬರಂ ಶನೈಃ ತೇ ಚ ದಿವ್ಯವಪುಷಃ ಅಭವನ್ ತದಾ ॥

**ಅರ್ಥ** :- **ಸಶೇಷಕೈಃ** ಶೇಷನಿಂದ ಕೂಡಿದ **ಬ್ರಹ್ಮರುದ್ರಗರುಡೈಃ** ಬ್ರಹ್ಮ ರುದ್ರ ಗರುಡರಿಂದ **ಪ್ರೋ** ಪ್ರೋ ಸ್ತುತಿಸಲ್ಪಡುವ **ಸುಗುಣೋರುವಿಸ್ತರಃ** ಸದ್ಗುಣಗಳ ಮಹಾರಾಶಿಯುಳ್ಳವನಾಗಿ **ವಿಭುಃ** ಶ್ರೀರಾಮಚಂದ್ರನು **ಶನೈಃ** ಮೆಲ್ಲನೆ **ಅಂಬರಂ** ಆಕಾಶವನ್ನು **ಆರುರೋಹ** ಏರಿದನು. **ತೇ ಚ** ಆ ಜೀವಿಗಳಾದರೂ **ತದಾ** ಆಗ **ದಿವ್ಯವಪುಷಃ** ಉತ್ತಮಶರೀರವುಳ್ಳವರು **ಅಭವನ್** ಆದರು.

**ತಾತ್ಪರ್ಯ** :- ಬ್ರಹ್ಮ ರುದ್ರ, ಗರುಡ, ಶೇಷರುಗಳು ಸ್ತುತಿಸುತ್ತಿರುವಂತೆ ಸದ್ಗುಣಸಾಗರನಾದ ಪ್ರಭು ಶ್ರೀರಾಮಚಂದ್ರನು ನಿದಾನವಾಗಿ ಆಕಾಶ ವನ್ನೇರಿದನು. ಅವನೊಂದಿಗೆ ಬಂದ ತೃಣಾದಿಪರ್ಯಂತ ಸಕಲಜೀವರೂ ದಿವ್ಯರೂಪವನ್ನು ಪಡೆದರು.

**ಅಥ ಬ್ರಹ್ಮಾ ಹರಿಂ ಸ್ತುತ್ವಾ ಜಗಾದೇದಂ ವಚೋ ವಿಭುಮ್ ।**
**ತ್ವದಾಜ್ಞಯಾ ಮಯಾ ದತ್ತಂ ಸ್ಥಾನಂ ದಶರಥಸ್ಯ ಹಿ ॥ ೯೪ ॥**

ಪದಚ್ಛೇದ : ಅಥ ಬ್ರಹ್ಮಾ ಹರಿಂ ಸ್ತುತ್ವಾ ಜಗಾದ ಇದಂ ವಚಃ ವಿಭುಮ್ ।
ತ್ವದಾಜ್ಞಯಾ ಮಯಾ ದತ್ತಂ ಸ್ಥಾನಂ ದಶರಥಸ್ಯ ಹಿ ॥

**ಅರ್ಥ** :- **ಅಥ** ಅನಂತರ **ಬ್ರಹ್ಮಾ** ಚತುರ್ಮುಖಬ್ರಹ್ಮನು **ವಿಭುಂ** ಶ್ರೀಹರಿಯಾದ ಶ್ರೀರಾಮನನ್ನು **ಸ್ತುತ್ವಾ** ಸ್ತುತಿಸಿ **ಇದಂ** ಈ **ವಚಃ** ಮಾತನ್ನು **ಜಗಾದ** ಹೇಳಿದನು. **ತ್ವದಾಜ್ಞಯಾ** ನಿನ್ನ ಅಪ್ಪಣೆಯಂತೆ **ಮಯಾ** ನನ್ನಿಂದ **ದಶರಥಸ್ಯ** ದಶರಥನಿಗೆ **ಸ್ಥಾನಂ** ಉತ್ತಮಸ್ಥಾನವು **ದತ್ತಂ ಹಿ** ಖಂಡಿತ ವಾಗಿಯೂ ಕೊಡಲ್ಪಟ್ಟಿದೆ.

**ತಾತ್ಪರ್ಯ** :- ಅನಂತರ ಚತುರ್ಮುಖಬ್ರಹ್ಮನು ಪ್ರಭುವಾದ ಶ್ರೀರಾಮ ಚಂದ್ರನನ್ನು ಸ್ತುತಿಸಿ, ಈ ಮಾತನ್ನು ಹೇಳಿದನು: 'ನಿನ್ನ ಅಪ್ಪಣೆಯಂತೆ ನಾನು ದಶರಥನಿಗೆ ಉತ್ತಮಸ್ಥಾನವನ್ನು ನೀಡಿರುವೆನು.'

**ಮಾತೃಣಾಂ ಚಾಪಿ ತಲ್ಲೋಕಸ್ತ್ವಯುತಾಬ್ದಾದಿತೋಽಗ್ರತಃ ।**
**ಅನರ್ಹಾಯಾಸ್ತ್ವಯಾಽಽಜ್ಞಪ್ತಾ ಕೈಕೇಯ್ಯಾ ಅಪಿ ಸದ್ಗತಿಃ ॥ ೯೫ ॥**

ಪದಚ್ಛೇದ : ಮಾತೃಣಾಂ ಚ ಅಪಿ ತತ್ ಲೋಕಃ ತು ಅಯುತಾಬ್ದಾತ್ ಇತಃ ಅಗ್ರತಃ ।
ಅನರ್ಹಾಯಾಃ ತ್ವಯಾ ಆಜ್ಞಪ್ತಾ ಕೈಕೇಯ್ಯಾ ಅಪಿ ಸದ್ಗತಿಃ ॥

**ಅರ್ಥ** :- **ಇತಃ** ಇಂದಿನಿಂದ **ಅಯುತಾಬ್ದಾತ್ ಅಗ್ರತಃ** ಹತ್ತುಸಾವಿರ ವರ್ಷಗಳ ಪರ್ಯಂತ **ಮಾತೃಣಾಂ ಚ ಅಪಿ** (ನಿನ್ನ) ತಾಯಂದಿರಿಗೂ **ತಲ್ಲೋಕಃ ತು** ದಶರಥನ ಲೋಕವೇ (**ದತ್ತಃ** ಕೊಡಲ್ಪಟ್ಟಿದೆ) **ಅನರ್ಹಾಯಾಃ** ಅನರ್ಹಳಾಗಿದ್ದ **ಕೈಕೇಯ್ಯಾ ಅಪಿ** ಕೈಕೇಯಿಗೂ **ಸದ್ಗತಿಃ** ಒಳ್ಳೆಯ ಸ್ಥಾನವು **ತ್ವಯಾ** ನಿನ್ನಿಂದ **ಆಜ್ಞಪ್ತಾ** ಆಜ್ಞಾಪಿಸಲ್ಪಟ್ಟಿದೆ.

**ತಾತ್ಪರ್ಯ** :- ನೀನು ಸ್ವರ್ಗಾರೋಹಣ ಮಾಡಿದ ಈಗಿನಿಂದ ಮುಂದೆ ಹತ್ತುಸಾವಿರವರ್ಷಗಳವರೆಗೆ ನಿನ್ನ ತಾಯಂದಿರಿಗೂ ದಶರಥನ ಲೋಕವನ್ನೇ ನೀಡಿದ್ದೇನೆ. ಅನರ್ಹಳಾಗಿದ್ದ ಕೈಕೇಯಿಗೂ ಕೂಡ ಉತ್ತಮಸ್ಥಾನವನ್ನು ಕೊಡಲು ನೀನು ಆಜ್ಞಾಪಿಸಿದ್ದೀಯೇ.

ಸೂತ್ವಾ ತು ಭರತಂ ನೈಷಾ ಗಚ್ಛೇತ ನಿರಯಾನಿತಿ ।
ತಥಾऽಪಿ ಸಾ ಯದಾವೇಶಾಚ್ಚಕಾರ ತ್ವಯ್ಯಶೋಭನಮ್ ॥ ೯೬ ॥

ನಿಕೃತಿರ್ನಾಮ ಸಾ ಕ್ಷಿಪ್ತಾ ಮಯಾ ತಮಸಿ ಶಾಶ್ವತೇ ।
ಕೈಕೇಯೀ ತು ಚಲಾನ್ ಲೋಕಾನ್ ಪ್ರಾಪ್ತಾ ನೈವಾಚಲಾನ್ ಕ್ವಚಿತ್ ॥೯೭॥

ಪಶ್ಚಾದ್ಭಕ್ತಿಮತೀ ಯಸ್ಮಾತ್ ತ್ವಯಿ ಸಾ ಯುಕ್ತಮೇವ ತತ್ ।
ಮಂಥರಾ ತು ತಮಸ್ಯಂಧೇ ಪಾತಿತಾ ದುಷ್ಟಚಾರಿಣೀ ॥ ೯೮ ॥

ಪದಚ್ಛೇದ : ಸೂತ್ವಾ ತು ಭರತಂ ನ ಏಷಾ ಗಚ್ಛೇತ ನಿರಯಾನ್ ಇತಿ । ತಥಾ ಅಪಿ ಸಾ ಯತ್ ಆವೇಶಾತ್ ಚಕಾರ ತ್ವಯಿ ಅಶೋಭನಮ್ ॥ ನಿಕೃತಿಃ ನಾಮ ಸಾ ಕ್ಷಿಪ್ತಾ ಮಯಾ ತಮಸಿ ಶಾಶ್ವತೇ । ಕೈಕೇಯೀ ತು ಚಲಾನ್ ಲೋಕಾನ್ ಪ್ರಾಪ್ತಾ ನ ಏವ ಅಚಲಾನ್ ಕ್ವಚಿತ್ ॥ ಪಶ್ಚಾತ್ ಭಕ್ತಿಮತೀ ಯಸ್ಮಾತ್ ತ್ವಯಿ ಸಾ ಯುಕ್ತಮ್ ಏವ ತತ್ । ಮಂಥರಾ ತು ತಮಸಿ ಅಂಧೇ ಪಾತಿತಾ ದುಷ್ಟಚಾರಿಣೀ ॥

ಅರ್ಥ :- ಏಷಾ ಕೈಕೇಯಿಯು ಭರತಂ ಭರತನನ್ನು ಸೂತ್ವಾ ಹೆತ್ತು ನಿರಯಾನ್ ನರಕವನ್ನು ನ ಗಚ್ಛೇತ ಹೋಗಬಾರದು ಇತಿ ಎಂದು (ಆಜ್ಞಾಪ್ತಾ ಆದೇಶಿಸಿರುವಿ) ತಥಾऽಪಿ ಹಾಗಿದ್ದರೂ ಸಾ ಕೈಕೇಯಿಯು ಯದಾವೇಶಾತ್ ಯಾರ ಆವೇಶದಿಂದ ತ್ವಯಿ ನಿನ್ನಲ್ಲಿ ಅಶೋಭನಮ್ ದುಷ್ಕೃತ್ಯವನ್ನು ಚಕಾರ ಮಾಡಿದಳೋ ನಿಕೃತಿಃ ನಿಕೃತಿ ಎಂದು ನಾಮ ಹೆಸರುಳ್ಳ ಸಾ ಅವಳು ಮಯಾ ನನ್ನಿಂದ ಶಾಶ್ವತೇ ನಿತ್ಯವಾದ ತಮಸಿ ತಮಸ್ಸಿನಲ್ಲಿ ಕ್ಷಿಪ್ತಾ ಹಾಕಲ್ಪಟ್ಟಿದ್ದಾಳೆ. ಕೈಕೇಯೀ ತು ಕೈಕೇಯಿಯಾದರೂ ಚಲಾನ್ ಅಸ್ಥಿರವಾದ ಲೋಕಾನ್ ಲೋಕಗಳನ್ನು ಪ್ರಾಪ್ತಾ ಹೊಂದಿದಳು. ಅಚಲಾನ್ ಶಾಶ್ವತವಾದ ಲೋಕಾನ್ ಲೋಕವನ್ನು ಕ್ವಚಿತ್ ಯಾವ ಕಾರಣದಿಂದಲೂ ನೈವ ಹೊಂದಲಿಲ್ಲ. ಪಶ್ಚಾತ್ ಅನಂತರ ಸಾ ಕೈಕೇಯಿಯು ಯಸ್ಮಾತ್ ಯಾವ ಕಾರಣದಿಂದ ತ್ವಯಿ ನಿನ್ನಲ್ಲಿ ಭಕ್ತಿಮತೀ ಭಕ್ತಿವುಳ್ಳವಳಾದಳೋ (ತಸ್ಮಾತ್ ಆ ಕಾರಣದಿಂದ) ತತ್ ಆ ಉತ್ತಮಲೋಕ ಪ್ರಾಪ್ತಿಯು ಯುಕ್ತಮೇವ ಉಚಿತವೇ ಆಗಿದೆ. ಮಂಥರಾ ತು ಮಂಥರೆಯಾದರೂ ದುಷ್ಟಚಾರಿಣೀ ದುಷ್ಕೃತ್ಯವನ್ನು ಮಾಡಿದವಳಾಗಿ ಅಂಧೇ ತಮಸಿ ಅಂಧಂತಮಸ್ಸಿನಲ್ಲಿ ಪಾತಿತಾ ತಳ್ಳಲ್ಪಟ್ಟಿರುವಳು.

ತಾತ್ಪರ್ಯ :- 'ಭರತನನ್ನು ಮಗನನ್ನಾಗಿ ಹಡೆದ ಕೈಕೇಯಿಯು ನರಕಕ್ಕೆ ಹೋಗಬಾರದು' ಎಂದು ನೀನು ಆಜ್ಞಾಪಿಸಿರುವಿ. ಕೈಕೇಯಿಯು ಸದ್ಗತಿಗೆ ಯೋಗ್ಯಳಾಗಿದ್ದರೂ ಅವಳು ಯಾರ ಆವೇಶದಿಂದಾಗಿ ನಿನ್ನಲ್ಲಿ ಪಟ್ಟಾಭಿಷೇಕಕ್ಕೆ ವಿಘ್ನವುಂಟುಮಾಡಿ ಅಪರಾಧವೆಸಗಿದಳೋ ಆ 'ನಿಕೃತಿ' ಎಂಬ ರಾಕ್ಷಸಿಯನ್ನು ನಾನು ನಿತ್ಯವಾದ ತಮಸ್ಸಿಗೆ ಹಾಕಿರುವೆನು. ಕೈಕೇಯಿಯು ಈಗ ಹೊಂದಿರುವುದು ಚಲಲೋಕಗಳನ್ನೇ ಹೊರತು ಕೌಸಲ್ಯಾ, ಸುಮಿತ್ರೆಯರಂತೆ ಅಚಲ ಲೋಕಗಳನ್ನು ಈಗ ಪಡೆಯಲಿಲ್ಲ. ಅನಂತರ ನಿನ್ನಲ್ಲಿ ಭಕ್ತಿ ಮಾಡಿದ್ದರಿಂದ ನೀನು ಕೈಕೇಯಿಗೆ ಅಚಲಲೋಕವನ್ನು ಕೊಟ್ಟಿರುವುದು ಯೋಗ್ಯವೇ ಆಗಿದೆ. ರಾಮಪಟ್ಟಾಭಿಷೇಕಕ್ಕೆ ವಿಘ್ನವನ್ನು ಮಾಡಿದ ದುಷ್ಟ ಸ್ವಭಾವಳಾದ ಕೈಕೇಯಿಯ ದಾಸಿಯಾದ ಮಂಥರೆಯನ್ನು ಅಂಧಂತಮಸ್ಸಿನಲ್ಲಿಯೇ ಹಾಕಿದ್ದೇನೆ.

> ಸೀತಾರ್ಥಂ ಯೇ ತ್ವನಿಂದಂಸ್ತ್ವಾಂ ತೇಽಪಿ ಯಾತಾ ಮಹತ್ತಮಃ ।
> ಪ್ರಾಯಶೋ ರಾಕ್ಷಸಾಶ್ಚೈವ ತ್ವಯಿ ಕೃಷ್ಣತ್ವಮಾಗತೇ ॥ ೯೯ ॥
>
> ಶೇಷಾ ಯಾಸ್ಯಂತಿ ತಚ್ಛೇಷಾ ಅಷ್ಟಾವಿಂಶೇ ಕಲೌ ಯುಗೇ ।
> ಗತೇ ಚತುಃಸಹಸ್ರಾಬ್ದೇ ತಮೋಗಾಸ್ತ್ರಿಶತೋತ್ತರೇ ॥ ೧೦೦ ॥

ಪದಚ್ಛೇದ : ಸೀತಾರ್ಥಂ ಯೇ ತು ಅನಿಂದನ್ ತ್ವಾಂ ತೇ ಅಪಿ ಯಾತಾ ಮಹತ್ತಮಃ। ಪ್ರಾಯಶಃ ರಾಕ್ಷಸಾಃ ಚ ಏವ ತ್ವಯಿ ಕೃಷ್ಣತ್ವಮ್ ಆಗತೇ ॥ ಶೇಷಾಃ ಯಾಸ್ಯಂತಿ ತಚ್ಛೇಷಾಃ ಅಷ್ಟಾವಿಂಶೇ ಕಲೌ ಯುಗೇ । ಗತೇ ಚತುಃಸಹಸ್ರಾಬ್ದೇ ತಮೋಗಾಃ ತ್ರಿಶತೋತ್ತರೇ ॥

ಅರ್ಥ :- ಯೇ ಯಾವ ಅಸುರರು ಸೀತಾರ್ಥಂ ಸೀತೆಗೋಸ್ಕರ ತ್ವಾಂ ನಿನ್ನನ್ನು ಅನಿಂದನ್ ನಿಂದಿಸಿದರೋ ತೇ ಚ ಅಂತಹ ಅಸುರರು ಮಹತ್ತಮಃ = ಅಂಧಂತಮಸ್ಸನ್ನು ಯಾತಾಃ ಹೊಂದಿದರು. ಪ್ರಾಯಶಃ ಹೆಚ್ಚಿನ ರಾಕ್ಷಸಾಃ ರಾಕ್ಷಸರು ಮಹತ್ತಮಃ ಅಂಧಂತಮಸ್ಸನ್ನು ಯಾತಾಃ ಹೊಂದಿದರು. ಶೇಷಾಃ ಉಳಿದವರು ತ್ವಯಿ ನೀನು ಕೃಷ್ಣತ್ವಮ್ ಕೃಷ್ಣಾವತಾರವನ್ನು ಆಗತೇ ಹೊಂದುತ್ತಿರಲು ಯಾಸ್ಯಂತಿ ಹೊಂದುವರು. ತಚ್ಛೇಷಾಃ ಆಗಲೂ ಉಳಿದವರು ಅಷ್ಟಾವಿಂಶೇ ಇಪ್ಪತ್ತೆಂಟನೆಯ ಕಲೌ ಯುಗೇ ಕಲಿಯುಗವು ಗತೇ ನಡೆಯುತ್ತಿರಲು ತ್ರಿಶತೋತ್ತರೇ ಮುನ್ನೂರಕ್ಕೆ ಅಧಿಕವಾಗಿಯುಳ್ಳ

**ಚತುಃಸಹಸ್ರಾಬ್ದೇ** ನಾಲ್ಕುಸಾವಿರ ವರ್ಷಗಳು (ನಾಲ್ಕು ಸಾವಿರದ ಮುನ್ನೂರು ವರ್ಷಗಳು) **ಗತೇ** ಕಳೆದ ಮೇಲೆ **ತಮೋಗಾಃ** ತಮಸ್ಸಿಗೆ ಹೋಗುವವರು.

**ತಾತ್ಪರ್ಯ** :- ಬ್ರಹ್ಮದೇವರ ವರದಿಂದ ಭೂಮಿಗೆ ಬಂದ ಸುರಾಣಕ ದೈತ್ಯರು 'ಶ್ರೀರಾಮನು ರಾಕ್ಷಸರಿಂದ ಅಪಹೃತಳಾದ ಸೀತೆಯನ್ನು ಸ್ವೀಕರಿಸಿದನು' ಎಂದು ಸೀತೆಯನ್ನು ನಿಮಿತ್ತೀಕರಿಸಿ ನಿನ್ನನ್ನು ಬಹಳವಾಗಿ ನಿಂದಿಸಿದ್ದರಿಂದ ಅವರು ಭಯಂಕರವಾದ ತಮಸ್ಸನ್ನು ಹೊಂದಿದ್ದಾರೆ. ಅದರಂತೆ ನಿನ್ನಿಂದ ಹತರಾದ ಇತರ ರಾಕ್ಷಸರೂ ತಮಸ್ಸನ್ನು ಹೊಂದಿದ್ದಾರೆ. ಉಳಿದ ರಾಕ್ಷಸರು ನೀನು ಕೃಷ್ಣನಾಗಿ ಅವತರಿಸಿದಾಗ ನಿನ್ನ ದ್ವೇಷದಿಂದ ತಮಸ್ಸನ್ನು ಹೊಂದುವರು. ಅವರಲ್ಲಿಯೂ ಉಳಿದವರು ಇಪ್ಪತ್ತೆಂಟನೆಯ ಕಲಿಯುಗದಲ್ಲಿ ನಾಲ್ಕು ಸಾವಿರದ ಮುನ್ನೂರು ವರ್ಷಗಳು ಕಳೆದ ಮೇಲೆ ದುರ್ವಾದಗಳನ್ನು ವಿಶ್ವದಲ್ಲಿ ಹರಡಿ ತಮ್ಮ ಪಾಪದ ಕೊಡ ತುಂಬಿಸಿಕೊಂಡು ತಮಸ್ಸಿಗೆ ಹೋಗುವರು.

**ಅಥ ಯೇ ತ್ವತ್ಪದಾಂಭೋಜಮಕರಂದೈಕಲಿಪ್ಸವಃ ।**
**ತ್ವಯಾ ಸಹಾಗತಾಸ್ತೇಷಾಂ ವಿಧೇಹಿ ಸ್ಥಾನಮುತ್ತಮಮ್ ॥ ೧೦೧ ॥**

**ಪದಚ್ಛೇದ : ಅಥ ಯೇ ತ್ವತ್ಪದಾಂಭೋಜಮಕರಂದೈಕಲಿಪ್ಸವಃ । ತ್ವಯಾ ಸಹ ಆಗತಾಃ ತೇಷಾಂ ವಿಧೇಹಿ ಸ್ಥಾನಮ್ ಉತ್ತಮಮ್ ॥**

**ಅರ್ಥ** :- **ಅಥ** ಅನಂತರ **ತ್ವತ್ಪದಾಂಭೋಜಮಕರಂದೈಕಲಿಪ್ಸವಃ ತ್ವತ್ಪದಾಂಭೋಜ** ನಿನ್ನ ಪಾದಕಮಲಗಳ **ಮಕರಂದೈಕಲಿಪ್ಸವಃ** ಮಕರಂದವನ್ನು ಮಾತ್ರ ಹೊಂದುವ ಇಚ್ಛೆಯುಳ್ಳ **ಯೇ** ಯಾರು **ತ್ವಯಾ** ನಿನ್ನಿಂದ **ಸಹ** ಕೂಡಿಕೊಂಡು **ಆಗತಾಃ** ಬಂದಿದ್ದಾರೋ **ತೇಷಾಂ** ಅವರಿಗೆ **ಉತ್ತಮಂ** ಯೋಗ್ಯವಾದ **ಸ್ಥಾನಮ್** ಸ್ಥಾನವನ್ನು **ವಿಧೇಹಿ** ಆಜ್ಞಾಪಿಸು.

**ತಾತ್ಪರ್ಯ** :- ಭೂಲೋಕದಿಂದ ನಿನ್ನೊಂದಿಗೆ ಬಂದ ಸಕಲ ಜೀವಿಗಳು ನಿನ್ನ ಪಾದಾರವಿಂದದ ಮಕರಂದ ಒಂದನ್ನೇ ಅಪೇಕ್ಷಿಸುವವರಾಗಿದ್ದಾರೆ. ಅವರಿಗೆ ಎಂತಹ ಉತ್ತಮಸ್ಥಾನವನ್ನು ನೀಡಬೇಕೆಂದು ಆಜ್ಞಾಪಿಸು.

**ಅಹಂ ಭವಃ ಸುರೇಶಾದ್ಯಾಃ ಕಿಂಕರಾಃ ಸ್ಮ ತವೇಶ್ವರ ।**
**ಯಚ್ಚ ಕಾರ್ಯಮಿಹಾಸ್ಮಾಭಿಸ್ತದಪ್ಯಾಜ್ಞಾಪಯಾಶು ನಃ ॥ ೧೦೨ ॥**

ಪದಚ್ಛೇದ : ಅಹಂ ಭವಃ ಸುರೇಶಾದ್ಯಾಃ ಕಿಂಕರಾಃ ಸ್ಮ ತವ ಈಶ್ವರ । ಯತ್ ಚ ಕಾರ್ಯಮ್ ಇಹ ಅಸ್ಮಾಭಿಃ ತತ್ ಅಪಿ ಆಜ್ಞಾಪಯ ಆಶು ನಃ ॥

**ಅರ್ಥ** :- **ಅಹಂ** ನಾನು **ಭವಃ** ರುದ್ರನು **ಸುರೇಶಾದ್ಯಾಃ** ಇಂದ್ರನೇ ಮೊದಲಾದವರು **ತವ** ನಿನ್ನ **ಕಿಂಕರಾಃ ಸ್ಮ** ಸೇವಕರು. **ಹೇ ಈಶ್ವರ** ಪ್ರಭುವೇ **ಯತ್ ಚ** ಯಾವುದು **ಅಸ್ಮಾಭಿಃ** ನಮ್ಮಿಂದ **ಇಹ** ಇಲ್ಲಿ **ಕಾರ್ಯಮ್ ಅಪಿ** ಮಾಡಲ್ಪಡಬೇಕೋ **ತತ್** ಅದನ್ನು **ಆಶು** ಕೂಡಲೇ **ನಃ** ನಮಗೆ **ಆಜ್ಞಾಪಯ** ಆಜ್ಞಾಪಿಸು.

ತಾತ್ಪರ್ಯ :- ಜಗದೊಡೆಯನಾದ ಪ್ರಭುವೆ ! ನಾನು, ಶಿವ ಇಂದ್ರ ಮೊದಲಾದ ದೇವತೆಗಳೆಲ್ಲರೂ ನಿನ್ನ ಪಾದಸೇವಕರು. ನಾವೆಲ್ಲರೂ ಇನ್ನೇನು ಕೆಲಸವನ್ನು ಮಾಡಬೇಕೆಂಬುದಾಗಿ ಈ ಕೂಡಲೇ ಆಜ್ಞಾಪಿಸು.

**ಇತ್ಯುದೀರಿತಮಾಕರ್ಣ್ಯ ಶತಾನಂದೇನ ರಾಘವಃ ।**
**ಜಗಾದ ಭಾವಗಂಭೀರಂ ಸುಸ್ಮಿತಾಧರಪಲ್ಲವಃ ॥ ೧೦೩ ॥**

ಪದಚ್ಛೇದ : ಇತಿ ಉದೀರಿತಮ್ ಆಕರ್ಣ್ಯ ಶತಾನಂದೇನ ರಾಘವಃ । ಜಗಾದ ಭಾವಗಂಭೀರಂ ಸುಸ್ಮಿತಾಧರಪಲ್ಲವಃ ॥

**ಅರ್ಥ** :- **ಇತಿ** ಈ ರೀತಿಯಾಗಿ **ಶತಾನಂದೇನ** ಬ್ರಹ್ಮನಿಂದ **ಉದೀರಿತಮ್** ಹೇಳಲ್ಪಟ್ಟದ್ದನ್ನು **ಆಕರ್ಣ್ಯ** ಕೇಳಿ **ರಾಘವಃ** ಶ್ರೀರಾಮಚಂದ್ರನು **ಭಾವಗಂಭೀರಂ** ಅರ್ಥಗರ್ಭಿತವಾದ **ಸುಸ್ಮಿತಾಧರಪಲ್ಲವಃ** ಮಂದಹಾಸದಿಂದ ಕೂಡಿದ ಚಿಗುರಿನಂತಹ ತುಟಿಯುಳ್ಳವನಾಗಿ **ಜಗಾದ** ಹೇಳಿದನು.

ತಾತ್ಪರ್ಯ :- ಚತುರ್ಮುಖಬ್ರಹ್ಮನು ನುಡಿದಿದ್ದನ್ನು ಕೇಳಿ ಶ್ರೀರಾಮಚಂದ್ರನು ಚಿಗುರಿನಂತಹ ತುಟಿಗಳಿಂದ ಸುಂದರ ಕಿರುನಗೆ ಬೀರುತ್ತ ಅರ್ಥಗರ್ಭಿತವಾಗಿ ಹೇಳಿದನು.

**ಜಗದ್ಗುರುತ್ವಮಾದಿಷ್ಟಂ ಮಯಾ ತೇ ಕಮಲೋದ್ಭವ ।**
**ಗುರ್ವಾದೇಶಾನುಸಾರೇಣ ಮಯಾಽಽದಿಷ್ಟಾ ಚ ಸದ್ಗತಿಃ ॥ ೧೦೪ ॥**

ಪದಚ್ಛೇದ : ಜಗದ್ಗುರುತ್ವಮ್ ಆದಿಷ್ಟಂ ಮಯಾ ತೇ ಕಮಲೋದ್ಭವ । ಗುರ್ವಾದೇಶಾನುಸಾರೇಣ ಮಯಾ ಆದಿಷ್ಟಾ ಚ ಸದ್ಗತಿಃ ॥

**ಅರ್ಥ** :- **ಕಮಲೋದ್ಭವ** ಚತುರ್ಮುಖಬ್ರಹ್ಮನೆ ! **ಮಯಾ** ನನ್ನಿಂದ **ತೇ** ನಿನಗೆ **ಜಗದ್ಗುರುತ್ವಮ್** ಜಗದ್ಗುರುತ್ವವು **ಆದಿಷ್ಟಂ** ಆಜ್ಞಾಪಿಸಲ್ಪಟ್ಟಿದೆ. **ಮಯಾ** ನನ್ನಿಂದ **ಸದ್ಗತಿಶ್ಚ** ಉತ್ತಮಸ್ಥಾನವಾದರೂ **ಗುರ್ವಾದೇಶಾನು ಸಾರೇಣ** ಗುರುವಿನ ಆದೇಶಾನುಸಾರ **ಆದಿಷ್ಟಾ ಚ** ಆಜ್ಞಾಪಿಸಲ್ಪಟ್ಟಿದೆ.

**ತಾತ್ಪರ್ಯ** :- ಕಮಲಸಂಭವನಾದ ಬ್ರಹ್ಮ ! ನಾನು ನಿನಗೆ ಜಗದಾಚಾರ್ಯ ಪದವಿಯನ್ನು ಕೊಟ್ಟಿರುವೆನು. ಗುರುವಿನ ಆದೇಶವಿದ್ದರೆ ಮಾತ್ರ ಜೀವಿಗಳಿಗೆ ಸದ್ಗತಿಯಾಗಬೇಕೆಂದು ಶಾಸನ ಮಾಡಿರುವೆನು.

**ಅತಸ್ತ್ವಯಾ ಪ್ರದೇಯಾ ಹಿ ಲೋಕಾ ಏಷಾಂ ಮದಾಜ್ಞಯಾ ।**
**ಹೃದಿ ಸ್ಥಿತಂ ಚ ಜಾನಾಸಿ ತ್ವಮೇವೈಕಃ ಸದಾ ಮಮ ॥ ೧೦೫ ॥**

ಪದಚ್ಛೇದ : ಅತಃ ತ್ವಯಾ ಪ್ರದೇಯಾಃ ಹಿ ಲೋಕಾಃ ಏಷಾಂ ಮದಾಜ್ಞಯಾ । ಹೃದಿ ಸ್ಥಿತಂ ಚ ಜಾನಾಸಿ ತ್ವಮ್ ಏವ ಏಕಃ ಸದಾ ಮಮ ॥

**ಅರ್ಥ** :- **ತ್ವಮ್** ನೀನು **ಏಕ ಏವ** ಒಬ್ಬನೇ **ಮಮ** ನನ್ನ **ಹೃದಿ** ಮನಸ್ಸಿನಲ್ಲಿ **ಸ್ಥಿತಂ** ಇರುವುದನ್ನು **ಸದಾ** ಯಾವಾಗಲೂ **ಜಾನಾಸಿ** ತಿಳಿದಿರುವಿ. **ಅತಃ** ಆದ್ದರಿಂದ **ಮದಾಜ್ಞಯಾ** ನನ್ನ ಅಪ್ಪಣೆಯಂತೆ **ಏಷಾಂ** ಇವರಿಗೆ **ಲೋಕಾಃ** ಉತ್ತಮಲೋಕಗಳು **ತ್ವಯಾ** ನಿನ್ನಿಂದ **ಪ್ರದೇಯಾಃ ಹಿ** ಕೊಡಲ್ಪಡಬೇಕು.

**ತಾತ್ಪರ್ಯ** :- ಎಂದೂ ನೀನೊಬ್ಬನೇ ನನ್ನ ಮನಸ್ಸಿನಲ್ಲಿರುವುದನ್ನು ಅರಿಯಬಲ್ಲವನು. ಆದ್ದರಿಂದ ಇವರಿಗೆಲ್ಲ ಉತ್ತಮ ಲೋಕಗಳನ್ನು ನನ್ನ ಆದೇಶದಂತೆ ನೀಡಬೇಕು.

**ಇತೀರಿತೋ ಹರೇರ್ಭಾವವಿಜ್ಞಾನೀ ಕಂಜಸಂಭವಃ ।**
**ಪಿಪೀಲಿಕಾತೃಣಾಂತಾನಾಂ ದದೌ ಲೋಕಾನನುತ್ತಮಾನ್ ॥**
**ವೈಷ್ಣವಾನ್ ಸಂತತತ್ವಾಚ್ಚ ನಾಮ್ನಾ ಸಾಂತಾನಿಕಾನ್ ವಿಭುಃ ॥ ೧೦೬॥**

ಪದಚ್ಛೇದ : ಇತಿ ಈರಿತಃ ಹರೇಃ ಭಾವವಿಜ್ಞಾನೀ ಕಂಜಸಂಭವಃ । ಪಿಪೀಲಿಕಾ ತೃಣಾಂತಾನಾಂ ದದೌ ಲೋಕಾನ್ ಅನುತ್ತಮಾನ್ । ವೈಷ್ಣವಾನ್ ಸಂತತತ್ವಾತ್ ಚ ನಾಮ್ನಾ ಸಾಂತಾನಿಕಾನ್ ವಿಭುಃ ॥

**ಅರ್ಥ** :- **ಇತಿ** ಈ ರೀತಿಯಾಗಿ **ಈರಿತಃ** ಹೇಳಲ್ಪಟ್ಟ **ವಿಭುಃ** ಸಮರ್ಥನಾದ **ಹರೇಃ** ಪರಮಾತ್ಮನ **ಭಾವವಿಜ್ಞಾನೀ** ಭಾವವನ್ನು ಅರಿತಿರುವ **ಕಂಜಸಂಭವಃ** ಬ್ರಹ್ಮನು **ಪಿಪೀಲಿಕಾತೃಣಾಂತಾನಾಂ** ಇರುವೆ, ಹುಲ್ಲುಕಡ್ಡಿಯ ವರೆಗಿನ ಜೀವರಿಗೆ **ಸಂತತತ್ವಾತ್ ಚ** ಸತತವಾಗಿರುವುದರಿಂದ **ನಾಮ್ನಾ** ಹೆಸರಿನಿಂದ **ಸಾಂತಾನಿಕಾನ್** ಸಾಂತಾನಿಕವೆಂಬ **ಅನುತ್ತಮಾನ್** ಶ್ರೇಷ್ಠವಾದ **ವೈಷ್ಣವಾನ್** ವಿಷ್ಣುವಿಗೆ ಸಂಬಂಧಿಸಿದ **ಲೋಕಾನ್** ಲೋಕಗಳನ್ನು **ದದೌ** ನೀಡಿದನು.

**ತಾತ್ಪರ್ಯ** :- ಶ್ರೀರಾಮಚಂದ್ರನು ಹೀಗೆ ಹೇಳುತ್ತಿರಲು ಭಗವಂತನ ಮನದಿಂಗಿತವನ್ನು ತಿಳಿದ ಬ್ರಹ್ಮನು ಇರುವೆಯಿಂದ ಆರಂಭಿಸಿ ಹುಲ್ಲುಕಡ್ಡಿ ಯವರೆಗಿನ ಸಕಲ ಜೀವರಾಶಿಗಳಿಗೆ ಅತ್ಯುತ್ತಮವಾದ ವಿಷ್ಣುಲೋಕಗಳನ್ನು ನೀಡಿದನು. ಎಂದೂ ನಾಶವಾಗದೆ ಸತತವಾಗಿರುವುದರಿಂದ ಆ ಲೋಕಗಳಿಗೆ ಸಾಂತಾನಿಕ ಲೋಕಗಳು ಎಂದು ಹೆಸರು.

**ತೇ ಜರಾಮೃತಿಹೀನಾಶ್ಚ ಸರ್ವದುಃಖವಿವರ್ಜಿತಾಃ ।**
**ಸಂಸಾರಮುಕ್ತಾ ನ್ಯವಸಂಸ್ತತ್ರ ನಿತ್ಯಸುಖಾಧಿಕಾಃ ॥ ೧೦೭ ॥**

**ಪದಚ್ಛೇದ : ತೇ ಜರಾಮೃತಿಹೀನಾಃ ಚ ಸರ್ವದುಃಖವಿವರ್ಜಿತಾಃ । ಸಂಸಾರಮುಕ್ತಾಃ ನ್ಯವಸನ್ ತತ್ರ ನಿತ್ಯಸುಖಾಧಿಕಾಃ ॥**

**ಅರ್ಥ** :- **ತೇ** ಆ ಜೀವರು **ಜರಾಮೃತಿಹೀನಾಃ** ಮುಪ್ಪು ಮರಣ ರಹಿತರಾಗಿ **ಸರ್ವದುಃಖವಿವರ್ಜಿತಾಃ** ಎಲ್ಲ ದುಃಖರಹಿತರಾಗಿ **ಸಂಸಾರ ಮುಕ್ತಾಃ** ಸಂಸಾರದಿಂದ ಬಿಡುಗಡೆ ಹೊಂದಿದವರಾಗಿ **ನಿತ್ಯಸುಖಾಧಿಕಾಃ** ಯಾವಾಗಲೂ ಶ್ರೇಷ್ಠ ಸುಖವುಳ್ಳವರಾಗಿ **ತತ್ರ** ವಿಷ್ಣುಲೋಕದಲ್ಲಿ **ನ್ಯವಸನ್** ವಾಸಮಾಡಿದರು.

**ತಾತ್ಪರ್ಯ** :- ಭೂಲೋಕದಿಂದ ಶ್ರೀರಾಮನೊಂದಿಗೆ ತೆರಳಿದ ಸಕಲ ಜೀವರೂ ಮುಪ್ಪು ಮತ್ತು ಸಾವುಗಳು ಇಲ್ಲದವರಾಗಿ ಸಕಲದುಃಖಗಳಿಂದ ರಹಿತರಾಗಿ, ಯಾವಾಗಲೂ ಶ್ರೇಷ್ಠ ಸುಖದಿಂದ ಕೂಡಿದವರಾಗಿ ಆ ಸಾಂತಾನಿಕ ಲೋಕಗಳಲ್ಲಿ ವಾಸ ಮಾಡಿದರು.

ಮೂಲರೂಪಕ್ಕೆ ತೆರಳದ ಮೈಂದ ಮತ್ತು ವಿವಿದರು

ಯೇ ತು ದೇವಾ ಇಹೋದ್ಭೂತಾ ನೃವಾನರಶರೀರಿಣಃ ।
ತೇ ಸರ್ವೇ ಸ್ವಾಂಶಿತಾಮಾಪುಸ್ತನ್ಮೈಂದವಿವಿದಾವೃತೇ ॥ ೧೦೮ ॥

ಪದಚ್ಛೇದ : ಯೇ ತು ದೇವಾಃ ಇಹ ಉದ್ಭೂತಾಃ ನೃವಾನರಶರೀರಿಣಃ । ತೇ ಸರ್ವೇ ಸ್ವಾಂಶಿತಾಮ್ ಆಪುಃ ತತ್ ಮೈಂದವಿವಿದೌ ಋತೇ ॥

ಅರ್ಥ :- ಯೇ ತು ಯಾವ ದೇವಾಃ ದೇವತೆಗಳು ನೃವಾನರಶರೀರಿಣಃ ನರ ಮತ್ತು ವಾನರ ರೂಪವುಳ್ಳವರಾಗಿ ಇಹ ಈ ಭೂಮಿಯಲ್ಲಿ ಉದ್ಭೂತಾಃ ಅವತರಿಸಿದರೋ ತೇ ಸರ್ವೇ ಅವರೆಲ್ಲರೂ, ತನ್ಮೈಂದವಿವಿದೌ ಆ ಮೈಂದ ಮತ್ತು ವಿವಿದರನ್ನು ಋತೇ ಹೊರತು ಸ್ವಾಂಶಿತಾಮ್ ತಮ್ಮ ಮೂಲ ರೂಪಗಳನ್ನು ಆಪುಃ ಹೊಂದಿದರು.

ತಾತ್ಪರ್ಯ :- ನರ ಮತ್ತು ವಾನರರ ಶರೀರದಿಂದ ಭೂಲೋಕದಲ್ಲಿ ಅವತರಿಸಿದ ಎಲ್ಲ ದೇವತೆಗಳೂ ತಮ್ಮ ತಮ್ಮ ಮೂಲರೂಪವನ್ನು ಹೊಂದಿದರು. ಆದರೆ ಮೈಂದ ಮತ್ತು ವಿವಿದರಿಬ್ಬರು ಮಾತ್ರ ತಮ್ಮ ಮೂಲರೂಪವನ್ನು ಸೇರಿಕೊಳ್ಳಲಿಲ್ಲ.

ಅಸುರಾವೇಶತಸ್ತೌತು ನ ರಾಮಮನುಜಗ್ಮತುಃ ।
ಪೀತಾಮೃತೌ ಪುರಾ ಯಸ್ಮಾನ್ಮಮ್ರುತುರ್ನ ಚ ತೌ ತದಾ ॥ ೧೦೯ ॥

ಪದಚ್ಛೇದ : ಅಸುರಾವೇಶತಃ ತೌ ತು ನ ರಾಮಮ್ ಅನುಜಗ್ಮತುಃ । ಪೀತಾಮೃತೌ ಪುರಾ ಯಸ್ಮಾತ್ ಮಮ್ರುತುಃ ನ ಚ ತೌ ತದಾ ॥

ಅರ್ಥ :- ತೌ ತು ಮೈಂದವಿವಿದರಾದರೂ ಅಸುರಾವೇಶತಃ ಅಸುರಾವೇಶದಿಂದ ರಾಮಂ ಶ್ರೀರಾಮನನ್ನು ನ ಅನುಜಗ್ಮತುಃ ಅನುಸರಿಸಿ ಹೋಗಲಿಲ್ಲ. ಯಸ್ಮಾತ್ ಯಾವ ಕಾರಣದಿಂದ ಪುರಾ ಹಿಂದೆ ಪೀತಾಮೃತೌ ಅಮೃತವನ್ನು ಕುಡಿದರೂ (ತಸ್ಮಾತ್ ಆ ಕಾರಣದಿಂದ) ತೌ ಚ ಅವರಿಬ್ಬರೂ ತದಾ ಆ ಸಮಯದಲ್ಲಿ ನ ಮಮ್ರುತುಃ ಮರಣ ಹೊಂದಲಿಲ್ಲ.

ತಾತ್ಪರ್ಯ :- ಮೈಂದ ಮತ್ತು ವಿವಿದರು ಅಸುರಾವೇಶವುಳ್ಳವರಾದ್ದರಿಂದ ಶ್ರೀರಾಮನ ಹಿಂದೆ ತೆರಳಲಿಲ್ಲ. ಹಿಂದೆ ಅಮೃತಪಾನ ಮಾಡಿದ್ದರಿಂದ ಮರಣವನ್ನೂ ಹೊಂದಲಿಲ್ಲ.

ತಯೋಶ್ಚ ತಪಸಾ ತುಷ್ಟಶ್ಚಕ್ರೇ ತಾವಜರಾಮರೌ ।
ಪುರಾ ಸ್ವಯಂಭೂಸ್ತೇನೋಭೌ ದರ್ಪಾದಮೃತಮಂಥನೇ ।
ಪ್ರಸಹ್ಯಾಪಿಬತಾಂ ದೇವೈರ್ದೇವಾಂಶತ್ವಾದುಪೇಕ್ಷಿತೌ ॥ ೧೧೦ ॥

ಪದಚ್ಛೇದ : ತಯೋಃ ಚ ತಪಸಾ ತುಷ್ಟಃ ಚಕ್ರೇ ತೌ ಅಜರಾಮರೌ । ಪುರಾ ಸ್ವಯಂಭೂಃ ತೇನ ಉಭೌ ದರ್ಪಾತ್ ಅಮೃತಮಂಥನೇ । ಪ್ರಸಹ್ಯ ಅಪಿಬತಾಂ ದೇವೈಃ ದೇವಾಂಶತ್ವಾತ್ ಉಪೇಕ್ಷಿತೌ ॥

**ಅರ್ಥ** :- **ತಯೋಃ** ಮೈಂದ ವಿವಿದರ **ತಪಸಾ** ತಪಸ್ಸಿನಿಂದ **ತುಷ್ಟಃ** ಸಂತುಷ್ಟನಾದ **ಸ್ವಯಂಭೂಃ** ಬ್ರಹ್ಮನು **ತೌ** ಅವರನ್ನು **ಅಜರಾಮರೌ** ಮರಣವಿಲ್ಲದವರನ್ನಾಗಿ **ಚಕ್ರೇ** ಮಾಡಿದನು. **ತೇನ** ಬ್ರಹ್ಮನ ವರಬಲದಿಂದ **ಉಭೌ** ಅವರಿಬ್ಬರೂ **ದರ್ಪಾತ್** ಅಹಂಕಾರದಿಂದ **ಅಮೃತಮಂಥನೇ** ಅಮೃತಕ್ಕಾಗಿ (ಸಮುದ್ರ)ಮಂಥನಕಾಲದಲ್ಲಿ **ಪ್ರಸಹ್ಯ** ಬಲಾತ್ಕಾರವಾಗಿ **ಅಪಿಬತಾಂ** ಅಮೃತವನ್ನು ಕುಡಿದಿದ್ದರು. **ದೇವಾಂಶತ್ವಾತ್** ದೇವಾಂಶರಾದ್ದರಿಂದ **ದೇವೈಃ** ಇತರ ದೇವತೆಗಳಿಂದ **ಉಪೇಕ್ಷಿತೌ** ಕಡೆಗಣಿಸಲ್ಪಟ್ಟರು (ಶಿಕ್ಷಿಸಲ್ಪಡಲಿಲ್ಲ).

**ತಾತ್ಪರ್ಯ** :- ಹಿಂದೆ ಮೈಂದ ಮತ್ತು ವಿವಿದರು ಚತುರ್ಮುಖ ಬ್ರಹ್ಮ ದೇವರನ್ನು ಕುರಿತು ತಪಸ್ಸು ಮಾಡಿದರು. ಇದರಿಂದ ಸಂತೋಷಗೊಂಡ ಬ್ರಹ್ಮದೇವರು ಅವರಿಗೆ ಮುಪ್ಪು ಸಾವುಗಳಿರದಂತೆ ವರವನ್ನು ನೀಡಿದರು. ಅದರಿಂದ ಗರ್ವಗೊಂಡ ಅವರಿಬ್ಬರೂ ಸಮುದ್ರಮಥನದ ಅನಂತರ ಅಮೃತ ವನ್ನು ಕುಡಿದರು. ದೇವಾಂಶಸಂಭೂತರಾದ್ದರಿಂದ ಇಂದ್ರಾದಿ ದೇವತೆಗಳೂ ಅವರಿಗೆ ಅಡ್ಡಿಪಡಿಸದೆ ಸುಮ್ಮನಾದರು.

ಪೀತಾಮೃತೇಷು ದೇವೇಷು ಯುಧ್ಯಮಾನೇಷು ದಾನವೈಃ ।
ತೈರ್ದತ್ತಮಾತ್ಮಹಸ್ತೇ ತು ರಕ್ಷಾಯೈ ಪೀತಮಾಶು ತತ್ ।
ತಸ್ಮಾದ್ದೋಷಾದಾಪತುಸ್ತಾವಾಸುರಂ ಭಾವಮೂರ್ಜಿತಮ್ ॥ ೧೧೧ ॥

ಪದಚ್ಛೇದ : ಪೀತಾಮೃತೇಷು ದೇವೇಷು ಯುಧ್ಯಮಾನೇಷು ದಾನವೈಃ । ತೈಃ ದತ್ತಮ್ ಆತ್ಮಹಸ್ತೇ ತು ರಕ್ಷಾಯೈ ಪೀತಮ್ ಆಶು ತತ್ । ತಸ್ಮಾತ್ ದೋಷಾತ್ ಆಪತುಃ ತೌ ಆಸುರಂ ಭಾವಮ್ ಊರ್ಜಿತಮ್ ॥

**ಅರ್ಥ :- ಪೀತಾಮೃತೇಷು** ಕುಡಿಯಲ್ಪಟ್ಟ ಅಮೃತವುಳ್ಳ **ದೇವೇಷು** ದೇವತೆಗಳು **ದಾನವೈಃ** ರಾಕ್ಷಸರೊಡನೆ **ಯುಧ್ಯಮಾನೇಷು (ಸತ್ಸು)** ಯುದ್ಧ ಮಾಡುತ್ತಿರಲು **ತೈಃ** ದೇವತೆಗಳಿಂದ **ರಕ್ಷಾಯೈ** ರಕ್ಷಣೆಗೋಸ್ಕರ **ಆತ್ಮಹಸ್ತೇ** ತಮ್ಮ ಹಸ್ತದಲ್ಲಿ **ದತ್ತಮ್** ಕೊಡಲ್ಪಟ್ಟ **ತತ್** ಆ ಅಮೃತವು **ಆಶು** ಕೂಡಲೇ **ಪೀತಮ್** ಮೈಂದ ವಿವಿದರಿಂದ ಕುಡಿಯಲ್ಪಟ್ಟಿತು. **ತಸ್ಮಾತ್** ಆ **ದೋಷಾತ್** ದೋಷದಿಂದ **ತೌ** ಮೈಂದ ವಿವಿದರು **ಊರ್ಜಿತಂ** ಕ್ರೂರವಾದ **ಆಸುರಂ** ಅಸುರಸಂಬಂಧಿಯಾದ **ಭಾವಂ** ಸ್ವಭಾವವನ್ನು **ಆಪತುಃ** ಹೊಂದಿದರು.

**ತಾತ್ಪರ್ಯ :-** ಸಮುದ್ರಮಥನ ಕಾಲದಲ್ಲಿ ಬಂದ ಅಮೃತವನ್ನು ಕುಡಿದ ದೇವತೆಗಳು ದೈತ್ಯರೊಂದಿಗೆ ಯುದ್ಧ ಮಾಡುವಾಗ ಆ ಅಮೃತಕಲಶವನ್ನು ರಕ್ಷಿಸಲೆಂದು ಮೈಂದವಿವಿದರಿಗೆ ನೀಡಿದ್ದರು. ತಮ್ಮ ಕೈಗೆ ನೀಡಿದ್ದ ಅಮೃತವನ್ನು ಅವರು ಕೂಡಲೇ ಕುಡಿದಿದ್ದರು. ಈ ದೋಷದಿಂದಾಗಿ ಅವರು ಕ್ರೂರವಾದ ಅಸುರಸ್ವಭಾವವನ್ನು ಹೊಂದಿದ್ದರು.

### ಅಂಗದನ ಮೂಲರೂಪಪ್ರವೇಶ

**ಅಂಗದಃ ಕಾಲತಸ್ತ್ಯಕ್ತ್ವಾ ದೇಹಮಾಪ ನಿಜಾಂ ತನುಮ್ ।**
**ರಾಮಾಜ್ಞಯೈವ ಕುರ್ವಾಣೋ ರಾಜ್ಯಂ ಕುಶಸಮನ್ವಿತಃ ॥ ೧೧೨ ॥**

ಪದಚ್ಛೇದ : ಅಂಗದಃ ಕಾಲತಃ ತ್ಯಕ್ತ್ವಾ ದೇಹಮ್ ಆಪ ನಿಜಾಂ ತನುಮ್ ।
ರಾಮಾಜ್ಞಯಾ ಏವ ಕುರ್ವಾಣಃ ರಾಜ್ಯಂ ಕುಶಸಮನ್ವಿತಃ ॥

**ಅರ್ಥ :- ಕುಶಸಮನ್ವಿತಃ** ಕುಶನಿಂದ ಕೂಡಿಕೊಂಡು **ರಾಜ್ಯಂ** ರಾಜ್ಯವನ್ನು **ಕುರ್ವಾಣಃ** ರಕ್ಷಿಸುವ **ಅಂಗದಃ** ಅಂಗದನು **ಕಾಲತಃ** ಕಾಲಕ್ರಮೇಣ **ದೇಹಂ** ತನ್ನ ಶರೀರವನ್ನು **ತ್ಯಕ್ತ್ವಾ** ಪರಿತ್ಯಾಗಮಾಡಿ **ನಿಜಾಂ** ತನ್ನ **ತನುಮ್** ಮೂಲರೂಪವನ್ನು **ಆಪ** ಹೊಂದಿದನು.

**ತಾತ್ಪರ್ಯ :-** ಶ್ರೀರಾಮನ ಆಜ್ಞೆಯಂತೆ ಅಂಗದನು ಕುಶನೊಂದಿಗೆ ಭೂಲೋಕದಲ್ಲಿಯೇ ಇದ್ದು ಕಪಿರಾಜ್ಯವನ್ನಾಳುತ್ತ ಕಾಲಕ್ರಮದಲ್ಲಿ ತನ್ನ ದೇಹವನ್ನು ಬಿಟ್ಟು ಮೂಲರೂಪವನ್ನು ಹೊಂದಿದನು.

### ವಿಭೀಷಣನ ರಾಜ್ಯಭಾರ

ವಿಭೀಷಣಶ್ಚ ಧರ್ಮಾತ್ಮಾ ರಾಘವಾಜ್ಞಾಪುರಸ್ಕೃತಃ ।
ಸೇನಾಪತಿರ್ಧನೇಶಸ್ಯ ಕಲ್ಪಮಾವೀತ್ ಸ ರಾಕ್ಷಸಾನ್ ॥ ೧೧೩ ॥

ಪದಚ್ಛೇದ : ವಿಭೀಷಣಃ ಚ ಧರ್ಮಾತ್ಮಾ ರಾಘವಾಜ್ಞಾಪುರಸ್ಕೃತಃ । ಸೇನಾಪತಿಃ ಧನೇಶಸ್ಯ ಕಲ್ಪಮ್ ಆವೀತ್ ಸಃ ರಾಕ್ಷಸಾನ್ ॥

**ಅರ್ಥ**:- **ಧರ್ಮಾತ್ಮಾ** ಧರ್ಮನಿಷ್ಠನಾದ **ವಿಭೀಷಣಶ್ಚ** ವಿಭೀಷಣನಾದರೂ **ರಾಘವಾಜ್ಞಾಪುರಸ್ಕೃತಃ** ಶ್ರೀರಾಮನ ಅಪ್ಪಣೆಯಲ್ಲಿ ಆದರವುಳ್ಳವನಾಗಿ **ಧನೇಶಸ್ಯ** ಕುಬೇರನ **ಸೇನಾಪತಿಃ** ಸೇನಾಧಿಪತಿಯಾಗಿ **ರಾಕ್ಷಸಾನ್** ರಾಕ್ಷಸರನ್ನು **ಕಲ್ಪಂ** ಒಂದು ಕಲ್ಪ ಪರ್ಯಂತ **ಆವೀತ್** ರಕ್ಷಿಸಿದನು.

**ತಾತ್ಪರ್ಯ** :- ಧರ್ಮಬುದ್ಧಿಯುಳ್ಳವನಾದ ವಿಭೀಷಣನೂ ಶ್ರೀರಾಮನ ಆದೇಶವನ್ನು ಪಾಲಿಸುತ್ತ ಕುಬೇರನ ಸೇನಾಧಿಪತಿಯಾಗಿ ಒಂದು ಕಲ್ಪ ಕಾಲದವರೆಗೆ ರಾಕ್ಷಸರನ್ನು ಪಾಲಿಸಿದನು.

### ಜಾಂಬವಂತನ ತಪಸ್ಸು

ರಾಮಾಜ್ಞಯಾ ಜಾಂಬವಾಂಶ್ಚ ನ್ಯವಸತ್ ಪೃಥಿವೀತಲಮ್ ।
ಉತ್ಪತ್ತ್ಯರ್ಥಂ ಜಾಂಬವತ್ಯಾಸ್ತದರ್ಥಂ ಸುತಪಶ್ಚರನ್ ॥ ೧೧೪ ॥

ಪದಚ್ಛೇದ : ರಾಮಾಜ್ಞಯಾ ಜಾಂಬವಾನ್ ಚ ನ್ಯವಸತ್ ಪೃಥಿವೀತಲಮ್ । ಉತ್ಪತ್ತ್ಯರ್ಥಂ ಜಾಂಬವತ್ಯಾಃ ತದರ್ಥಂ ಸುತಪಃ ಚರನ್ ॥

**ಅರ್ಥ** :- **ಜಾಂಬವಾನ್ ಚ** ಜಾಂಬವಂತನಾದರೂ **ರಾಮಾಜ್ಞಯಾ** ಶ್ರೀರಾಮನ ಆಜ್ಞೆಯಿಂದ **ಜಾಂಬವತ್ಯಾಃ** ಜಾಂಬವತಿಯ **ಉತ್ಪತ್ತ್ಯರ್ಥಂ** ಉತ್ಪತ್ತಿಗಾಗಿ **ತದರ್ಥಂ** ಅದಕ್ಕೋಸ್ಕರವೇ **ಸುತಪಃ** ಒಳ್ಳೆಯ ತಪಸ್ಸನ್ನು **ಚರನ್** ಮಾಡುವವನಾಗಿ **ಪೃಥಿವೀತಲೇ** ಭೂಮಿಯಲ್ಲಿ **ನ್ಯವಸತ್** ವಾಸ ಮಾಡಿದನು.

**ತಾತ್ಪರ್ಯ** :- ಜಾಂಬವಂತನು ಶ್ರೀರಾಮನ ಆದೇಶದಂತೆ ಭೂಲೋಕದಲ್ಲಿಯೇ ಇದ್ದು ಜಾಂಬವತಿಯನ್ನು ತನ್ನ ಮಗಳಾಗಿ ಪಡೆಯಬೇಕೆಂಬ ಉದ್ದೇಶದಿಂದ ತೀವ್ರವಾದ ತಪಸ್ಸನ್ನು ಮಾಡುತ್ತಾ ಭೂಮಿಯಲ್ಲಿ ನೆಲೆಸಿದ್ದನು.

ಶ್ರೀರಾಮನ ವಿವಿಧ ರೂಪಗಳು

**ಅಥೋ ರಘೂಣಾಂ ಪ್ರವರಃ ಸುರಾರ್ಚಿತಃ**
**ಸ್ವಯೈಕತನ್ವಾ ನ್ಯವಸತ್ ಸುರಾಲಯೇ ।**
**ದ್ವಿತೀಯಯಾ ಬ್ರಹ್ಮಸದಸ್ಯಧೀಶ್ವರ**
**ಸ್ತೇನಾರ್ಚಿತೋಽಥಾಪರಯಾ ನಿಜಾಲಯೇ ॥ ೧೧೫ ॥**

ಪದಚ್ಛೇದ : ಅಥೋ ರಘೂಣಾಂ ಪ್ರವರಃ ಸುರಾರ್ಚಿತಃ ಸ್ವಯಾ ಏಕತನ್ವಾ ನ್ಯವಸತ್ ಸುರಾಲಯೇ । ದ್ವಿತೀಯಯಾ ಬ್ರಹ್ಮಸದಸಿ ಅಧೀಶ್ವರಃ ತೇನ ಅರ್ಚಿತಃ ಅಥ ಅಪರಯಾ ನಿಜಾಲಯೇ ॥

**ಅರ್ಥ** :- **ಅಥೋ** ಅನಂತರ **ರಘೂಣಾಂ** ರಘುವಂಶಕ್ಕೆ **ಪ್ರವರಃ** ಶ್ರೇಷ್ಠನಾದ **ಅಧೀಶ್ವರಃ** ಸರ್ವೋತ್ತಮನಾದ ಶ್ರೀರಾಮನು **ಸ್ವಯಾ** ತನ್ನ **ಏಕತನ್ವಾ** ಒಂದು ರೂಪದಿಂದ **ಸುರಾಲಯೇ** ಸ್ವರ್ಗಲೋಕದಲ್ಲಿ **ಸುರಾರ್ಚಿತಃ** ದೇವತೆಗಳಿಂದ ಪೂಜಿಸಲ್ಪಟ್ಟವನಾಗಿ **ನ್ಯವಸತ್** ವಾಸಮಾಡಿದನು. **ದ್ವಿತೀಯಯಾ** ಎರಡನೇ ರೂಪದಿಂದ **ಬ್ರಹ್ಮಸದನೇ** ಬ್ರಹ್ಮನ ಸಭೆಯಲ್ಲಿ **ತೇನ** ಆ ಬ್ರಹ್ಮನಿಂದ **ಅರ್ಚಿತಃ** ಪೂಜಿಸಲ್ಪಟ್ಟವನಾಗಿ (**ನ್ಯವಸತ್** ವಾಸ ಮಾಡಿದನು). **ಅಥ** ಅನಂತರ **ಅಪರಯಾ** ಇನ್ನೊಂದು ರೂಪದಿಂದ **ನಿಜಾಲಯೇ** ತನ್ನ ಲೋಕವಾದ ಶ್ವೇತದ್ವೀಪದಲ್ಲಿ **ನ್ಯವಸತ್** ವಾಸ ಮಾಡಿದನು.

**ತಾತ್ಪರ್ಯ** :- ರಘುವಂಶಪ್ರದೀಪನಾದ ಸರ್ವೋತ್ತಮ ಶ್ರೀರಾಮಚಂದ್ರನು ತನ್ನ ಅವತಾರಕೃತ್ಯವನ್ನು ಮುಗಿಸಿಕೊಂಡು ಆಕಾಶಮಾರ್ಗವಾಗಿ ತೆರಳಿದ ಅನಂತರ ತನ್ನ ಒಂದು ರೂಪದಿಂದ ಸ್ವರ್ಗಲೋಕದಲ್ಲಿ ದೇವತೆಗಳಿಂದ ಪೂಜಿತನಾಗಿ ನೆಲಸಿದನು. ಎರಡನೆಯ ರೂಪದಿಂದ ಬ್ರಹ್ಮನ ಸಭೆಯಲ್ಲಿ ಬ್ರಹ್ಮನಿಂದ ಪೂಜಿತನಾಗಿ ನೆಲಸಿದನು ಮತ್ತು ಮೂರನೆಯ ರೂಪದಿಂದ ತನ್ನ ಶ್ವೇತದ್ವೀಪಧಾಮದಲ್ಲಿ ನೆಲಸಿದನು.

**ತೃತೀಯರೂಪೇಣ ನಿಜಂ ಪದಂ ಪ್ರಭುಂ**
**ವ್ರಜಂತಮುಚ್ಚೈರನುಗಮ್ಯ ದೇವತಾಃ ।**
**ಅಗಮ್ಯಮರ್ಯಾದಮುಪೇತ್ಯ ಚ ಕ್ರಮಾದ್**
**ವಿಲೋಕಯಂತೋಽತಿವಿದೂರತೋಽಸ್ತುವನ್ ॥ ೧೧೬ ॥**

ಪದಚ್ಛೇದ : ತೃತೀಯರೂಪೇ| ನಿಜಂ ಪದಂ ಪ್ರಭುಂ ವ್ರಜಂತಮ್ ಉಚ್ಚೈಃ ಅನುಗಮ್ಯ ದೇವತಾಃ । ಅಗಮ್ಯಮರ್ಯಾದಮ್ ಉಪೇತ್ಯ ಚ ಕ್ರಮಾತ್ ವಿಲೋಕಯಂತಃ ಅತಿವಿದೂರತಃ ಅಸ್ತುವನ್ ॥

**ಅರ್ಥ** :- **ತೃತೀಯರೂಪೇಣ** ಮೂರನೇ ರೂಪದಿಂದ **ನಿಜಂ** ತನ್ನ **ಪದಂ** ಸ್ಥಾನವನ್ನು **ವ್ರಜಂತಂ** ಹೋಗತಕ್ಕ **ಪ್ರಭುಂ** ಶ್ರೀರಾಮನನ್ನು **ದೇವತಾಃ** ದೇವತೆಗಳೂ **ಅನುಗಮ್ಯ** ಅನುಸರಿಸಿ **ಕ್ರಮಾತ್** ಕ್ರಮವಾಗಿ **ಅಗಮ್ಯ ಮರ್ಯಾದಂ** ತಾವು ತಲುಪಲಾರದ ಸ್ಥಳಗಳ ಎಲ್ಲೆಯನ್ನು **ಉಪೇತ್ಯ ಚ** ಸಮೀಪಿಸಿ **ಅತಿವಿದೂರತಃ** ಬಹಳ ದೂರದಿಂದಲೇ **ವಿಲೋಕಯಂತಃ** ನೋಡುವವರಾಗಿ **ಉಚ್ಚೈಃ** ಗಟ್ಟಿಯಾಗಿ **ಅಸ್ತುವನ್** ಸ್ತುತಿಸಿದರು.

**ತಾತ್ಪರ್ಯ** :- ಮೂರನೆಯ ರೂಪದಿಂದ ತನ್ನ ವಾಸಸ್ಥಾನವಾದ ವೈಕುಂಠಕ್ಕೆ ಹೋಗುತ್ತಿದ್ದ ಶ್ರೀರಾಮನನ್ನು ಅನುಸರಿಸಿದ ದೇವತೆಗಳು ತಾರ ತಮ್ಯಾನುಗುಣವಾಗಿ ತಾವು ತಲುಪಲು ಸಾಧ್ಯವಿರುವ ಪ್ರದೇಶದ ಎಲ್ಲೆಯವರೆಗೆ ತೆರಳಿ ಅನಂತರ ಅತಿದೂರದಿಂದಲೇ ಶ್ರೀರಾಮನನ್ನು ನೋಡುತ್ತ ಸ್ತುತಿಸಿದರು.

**ತಮ್ಮ ಲೋಕಕ್ಕೆ ತೆರಳಿದ ಬ್ರಹ್ಮಾದಿ ದೇವತೆಗಳು**

**ಬ್ರಹ್ಮಾ ಮರುನ್ಮಾರುತಸೂನುರೀಶಃ**
**ಶೇಷೋ ಗರುತ್ಮಾನ್ ಹರಿಜಃ ಶಕ್ರಕಾದ್ಯಾಃ ।**
**ಕ್ರಮಾದನುವ್ರಜ್ಯ ತು ರಾಘವಸ್ಯ**
**ಶಿರಸ್ಯಥಾಜ್ಞಾಂ ಪ್ರಣಿಧಾಯ ನಿರ್ಯಯುಃ ॥ ೧೧೭ ॥**

ಪದಚ್ಛೇದ : ಬ್ರಹ್ಮಾ ಮರುತ್ ಮಾರುತಸೂನುಃ ಈಶಃ ಶೇಷಃ ಗರುತ್ಮಾನ್ ಹರಿಜಃ ಶಕ್ರಕಾದ್ಯಾಃ । ಕ್ರಮಾತ್ ಅನುವ್ರಜ್ಯ ತು ರಾಘವಸ್ಯ ಶಿರಸಿ ಅಥ ಆಜ್ಞಾಂ ಪ್ರಣಿಧಾಯ ನಿರ್ಯಯುಃ ॥

**ಅರ್ಥ** :- **ಬ್ರಹ್ಮಾ** ಚತುರ್ಮುಖಬ್ರಹ್ಮನು **ಮರುತ್** ವಾಯುದೇವರು **ಮಾರುತಸೂನುಃ** ಹನುಮಂತನು **ಈಶಃ** ರುದ್ರನು **ಶೇಷಃ** ಶೇಷನು **ಗರುತ್ಮಾನ್** ಗರುಡನು **ಹರಿಜಃ** ಮನ್ಮಥನು **ಶಕ್ರಕಾದ್ಯಾಃ** ಇಂದ್ರನೇ ಮೊದಲಾದವರು **ಕ್ರಮಾತ್ ತು** ಕ್ರಮವಾಗಿ **ಅನುವ್ರಜ್ಯ** ಅನುಸರಿಸಿ **ರಾಘವಸ್ಯ** ಶ್ರೀರಾಮನ **ಆಜ್ಞಾಂ** ಅಪ್ಪಣೆಯನ್ನು **ಶಿರಸಿ** ತಲೆಯಲ್ಲಿ **ಪ್ರಣಿಧಾಯ** ಇಟ್ಟುಕೊಂಡು **ನಿರ್ಯಯುಃ** ಹಿಂದಿರುಗಿದರು.

**ತಾತ್ಪರ್ಯ :-** ಚತುರ್ಮುಖಬ್ರಹ್ಮ, ಪ್ರಾಣದೇವ, ಪ್ರಾಣಪುತ್ರ ಹನುಮಂತ, ರುದ್ರ, ಶೇಷ, ಗರುಡ, ಶ್ರೀಹರಿಯ ಪುತ್ರನಾದ ಕಾಮ, ಇಂದ್ರ, ದಕ್ಷ ಇವರೇ ಮೊದಲಾದವರು ಕ್ರಮವಾಗಿ ಶ್ರೀರಾಮನನ್ನು ಅನುಸರಿಸಿ, ಅವನ ಆಜ್ಞೆಯನ್ನು ಶಿರಸಾವಹಿಸಿ ಹಿಂತಿರುಗಿದರು.

**ಬದರಿಯಲ್ಲಿ ವಾಸ ಮಾಡಿದ ಹನುಮಂತ**

**ಸ್ವಂ ಸ್ವಂ ಚ ಸರ್ವೇ ಸದನಂ ಸುರಾ ಯಯುಃ**
**ಪುರಂದರಾದ್ಯಾಶ್ಚ ವಿರಿಂಚಪೂರ್ವಕಾಃ ।**
**ಮರುತ್ಸುತೋಽಥೋ ಬದರೀಮವಾಪ್ಯ**
**ನಾರಾಯಣಸ್ಯೈವ ಪದಂ ಸಿಷೇವೇ ॥ ೧೧೮ ॥**

ಪದಚ್ಛೇದ : ಸ್ವಂ ಸ್ವಂ ಚ ಸರ್ವೇ ಸದನಂ ಸುರಾಃ ಯಯುಃ ಪುರಂದರಾದ್ಯಾಃ ಚ ವಿರಿಂಚಪೂರ್ವಕಾಃ । ಮರುತ್ಸುತಃ ಅಥೋ ಬದರೀಮ್ ಅವಾಪ್ಯ ನಾರಾಯಣಸ್ಯ ಏವ ಪದಂ ಸಿಷೇವೇ ॥

**ಅರ್ಥ:-** **ಸರ್ವೇ** ಎಲ್ಲ **ವಿರಿಂಚಪೂರ್ವಕಾಃ** ಬ್ರಹ್ಮನೇ ಮೊದಲಾದ ಹಾಗೂ **ಪುರಂದರಾದ್ಯಾಃ** ಇಂದ್ರನೇ ಮೊದಲಾದ **ಸುರಾಃ ಚ** ದೇವತೆಗಳು **ಸ್ವಂ ಸ್ವಂ** ತಮ್ಮ ತಮ್ಮ **ಸದನಂ** ಲೋಕವನ್ನು **ಯಯುಃ** ಹೊಂದಿದರು. **ಅಥೋ** ಅನಂತರ **ಮರುತ್ಸುತಃ** ಹನುಮಂತನು **ಬದರೀಮ್** ಬದರಿಯನ್ನು **ಅವಾಪ್ಯ** ಹೊಂದಿ **ನಾರಾಯಣಸ್ಯ** ಶ್ರೀನಾರಾಯಣನ **ಪದಮೇವ** ಪಾದವನ್ನೇ **ಸಿಷೇವೇ** ಸೇವಿಸಿದನು.

**ತಾತ್ಪರ್ಯ :-** ಚತುರ್ಮುಖನು ಸತ್ಯಲೋಕಕ್ಕೆ ತೆರಳಿದರೆ, ಉಳಿದ ದೇವತೆಗಳೆಲ್ಲ ತಮ್ಮ ತಮ್ಮ ಲೋಕಕ್ಕೆ ಹಿಂತಿರುಗಿದರು. ಪವನಪುತ್ರ ಹನುಮಂತನು ಬದರೀಕ್ಷೇತ್ರಕ್ಕೆ ತೆರಳಿ ಅಲ್ಲಿ ಶ್ರೀಮನ್ನಾರಾಯಣನ ಪಾದಗಳನ್ನೇ ಸೇವಿಸಿದನು.

**ಹನುಮಂತ : ವೇದವ್ಯಾಸರಿಂದ ಸಚ್ಛಾಸ್ತ್ರಶ್ರವಣ**

**ಸಮಸ್ತಶಾಸ್ತ್ರೋದ್ಧರಿತಂ ಹರೇರ್ವಚೋ**
**ಮುದಾ ತದಾ ಶ್ರೋತ್ರಪುಟೇನ ಸಂಭರನ್ ।**
**ವದಂಶ್ಚ ತತ್ತ್ವಂ ವಿಬುಧರ್ಷಭಾಣಾಂ**
**ಸದಾ ಮುನೀನಾಂ ಚ ಸುಖಂ ಹ್ಯುವಾಸ ॥ ೧೧೯ ॥**

ಪದಚ್ಛೇದ : ಸಮಸ್ತಶಾಸ್ತ್ರೋದ್ಧರಿತಂ ಹರೇಃ ವಚಃ ಮುದಾ ತದಾ ಶ್ರೋತ್ರಪುಟೇನ ಸಂಭರನ್ । ವದನ್ ಚ ತತ್ತ್ವಂ ವಿಬುಧರ್ಷಭಾಣಾಂ ಸದಾ ಮುನೀನಾಂ ಚ ಸುಖಂ ಹಿ ಉವಾಸ ॥

**ಅರ್ಥ** :- **ಸಮಸ್ತಶಾಸ್ತ್ರೋದ್ಧರಿತಂ** ಸಕಲಶಾಸ್ತ್ರಾರ್ಥಗಳಿಂದ ತುಂಬಿದ **ಹರೇಃ** ಶ್ರೀಹರಿಯ **ವಚಃ** ಮಾತನ್ನು **ಮುದಾ** ಸಂತೋಷದಿಂದ **ತದಾ** ಆಗ **ಶ್ರೋತ್ರಪುಟೇನ** ಶ್ರವಣಪುಟದಿಂದ **ಸಂಭರನ್** ತುಂಬಿದವನಾಗಿ **ವಿಭುಧರ್ಷಭಾಣಾಂ** ದೇವೋತ್ತಮರಿಗೆ **ತದಾ** ಹಾಗೆಯೇ **ಮುನೀನಾಂ ಚ** ಋಷಿಗಳಿಗೂ **ತತ್ತ್ವಂ** ತತ್ವವನ್ನು **ವದನ್ ಚ** ಹೇಳುವವನಾಗಿ **ಸುಖಂ** ಸುಖವಾಗಿ **ಉವಾಸ ಹಿ** ವಾಸಮಾಡಿದನಷ್ಟೆ!

**ತಾತ್ಪರ್ಯ** :- ಬದರಿಕಾಶ್ರಮದಲ್ಲಿ ನಿರ್ಣಾಯಕವಾದ ಸರ್ವಶಾಸ್ತ್ರಗಳಿಂದ ಕೂಡಿದ ಶ್ರೀವೇದವ್ಯಾಸರ ಮಾತುಗಳನ್ನು ಸಂತೋಷದಿಂದ ತನ್ನ ಕಿವಿಗಳಲ್ಲಿ ತುಂಬಿಕೊಂಡು, ದೇವಶ್ರೇಷ್ಠರಿಗೂ ಹಾಗು ಮುನಿಗಳಿಗೂ ಹರಿಸ್ವರೂಪವೆಂಬ ತತ್ತ್ವವನ್ನು ಉಪದೇಶಿಸುತ್ತ ಆ ಹನುಮಂತನು ಅಲ್ಲಿಯೇ ಸುಖದಿಂದಿದ್ದನು.

**ಹನುಮಂತ : ಮತ್ತೊಂದು ರೂಪದಿಂದ ಕಿಂಪುರುಷದಲ್ಲಿ ವಾಸ**

**ರಾಮಾಜ್ಞಯಾ ಕಿಂಪುರುಷೇಷು ರಾಜ್ಯಂ**
**ಚಕಾರ ರೂಪೇಣ ತಥಾಽಪರೇಣ ।**
**ರೂಪೈಸ್ತಥಾಽನ್ಯೈಶ್ಚ ಸಮಸ್ತಸದ್ಮ**
**ನ್ಯುವಾಸ ವಿಷ್ಣೋಃ ಸತತಂ ಯಥೇಷ್ಟಮ್ ॥ ೧೨೦ ॥**

ಪದಚ್ಛೇದ : ರಾಮಾಜ್ಞಯಾ ಕಿಂಪುರುಷೇಷು ರಾಜ್ಯಂ ಚಕಾರ ರೂಪೇಣ ತಥಾ ಅಪರೇಣ । ರೂಪೈಃ ತಥಾ ಅನ್ಯೈಃ ಚ ಸಮಸ್ತಸದ್ಮನಿ ಉವಾಸ ವಿಷ್ಣೋಃ ಸತತಂ ಯಥೇಷ್ಟಮ್ ॥

**ಅರ್ಥ** :- **ತಥಾ** ಹಾಗೆಯೇ **ರಾಮಾಜ್ಞಯಾ** ಶ್ರೀರಾಮನ ಆಜ್ಞೆಯಂತೆ **ಕಿಂಪುರುಷೇಷು** ಕಿಂಪುರುಷ ಖಂಡದಲ್ಲಿ **ಅಪರೇಣ** ಮತ್ತೊಂದು **ರೂಪೇಣ** ರೂಪದಿಂದ **ರಾಜ್ಯಂ** ರಾಜ್ಯವನ್ನು **ಚಕಾರ** ಆಳಿದನು. **ತಥಾ** ಹಾಗೆಯೇ **ಅನ್ಯೈಃ** ಬೇರೆ **ರೂಪೈಃ** ರೂಪಗಳಿಂದ **ವಿಷ್ಣೋಃ** ಪರಮಾತ್ಮನ **ಸಮಸ್ತ ಸದ್ಮನಿ**

**ಚ** ಸಕಲ ಮಂದಿರಗಳಲ್ಲೂ **ಯಥೇಷ್ಟಮ್** ಯಥೇಚ್ಛವಾಗಿ **ಸತತಂ** ಯಾವಾಗಲೂ **ಉವಾಸ** ವಾಸ ಮಾಡಿದನು.

**ತಾತ್ಪರ್ಯ :-** ಶ್ರೀರಾಮನ ಅಪ್ಪಣೆಯಂತೆ ಕಿಂಪುರುಷ ಖಂಡದಲ್ಲಿ ಇನ್ನೊಂದು ರೂಪದಿಂದ ಹನುಮಂತನು ರಾಜ್ಯವಾಳಿದನು. ಹಾಗೆಯೇ ಇನ್ನೂ ಅನೇಕ ಹನುಮದ್ರೂಪಗಳಿಂದ ಶ್ರೀಮನ್ನಾರಾಯಣನ ಸಮಸ್ತಮಂದಿರ ಗಳಲ್ಲಿಯೂ ತನ್ನ ಇಚ್ಛೆಯಂತೆ ನಿರಂತರವಾಗಿ ವಾಸ ಮಾಡಿದ್ದು ಮಾತ್ರವಲ್ಲದೇ ಶ್ವೇತ ದ್ವೀಪ ಅನಂತಾಸನ ವೈಕುಂಠಗಳಲ್ಲಿಯೂ ಸಹ ತನ್ನ ಇಚ್ಛೆಯಂತೆ ವಾಸ ಮಾಡಿದನು. (ಶ್ರೀವಾದಿರಾಜರು '' 'ತ್ರಿಕೋಟಿರೂಪಃ ಪವನಶ್ಚ ಮೇ ಸುತಃ' ಇತಿ ಹನುಮಾನುಚ್ಯತೇ'' ಅರ್ಥಾತ್, ಹನುಮಂತನಿಗೆ ಮೂರು ಕೋಟಿ ರೂಪಗಳಿವೆ ಎಂದಿದ್ದಾರೆ.)

ಹನುಮಂತ : ಸಚ್ಚಾಸ್ತ್ರಾನಂದ

**ಇತ್ಥಂ ಸ ಗಾಯಂಚ್ಛತಕೋಟಿವಿಸ್ತರಂ**
**ರಾಮಾಯಣಂ ಭಾರತಪಂಚರಾತ್ರಮ್ ।**
**ವೇದಾಂಶ್ಚ ಸರ್ವಾನ್ ಸಹಿತಬ್ರಹ್ಮಸೂತ್ರಾನ್**
**ವ್ಯಾಚಕ್ಷಾಣೋ ನಿತ್ಯಸುಖೋದ್ಧರೋಽಭೂತ್ ॥ ೧೨೧ ॥**

ಪದಚ್ಛೇದ : ಇತ್ಥಂ ಸಃ ಗಾಯನ್ ಶತಕೋಟಿವಿಸ್ತರಂ ರಾಮಾಯಣಂ ಭಾರತಪಂಚರಾತ್ರಮ್ । ವೇದಾನ್ ಚ ಸರ್ವಾನ್ ಸಹಿತಬ್ರಹ್ಮಸೂತ್ರಾನ್ ವ್ಯಾಚಕ್ಷಾಣಃ ನಿತ್ಯಸುಖೋದ್ಧರಃ ಅಭೂತ್ ॥

**ಅರ್ಥ :-** **ಇತ್ಥಂ** ಈ ರೀತಿಯಾಗಿ **ಶತಕೋಟಿವಿಸ್ತರಂ** ಶತಕೋಟಿ ಶ್ಲೋಕ ಗಳಷ್ಟು ವಿಸ್ತೃತವಾದ ಗ್ರಂಥವುಳ್ಳ **ರಾಮಾಯಣಂ** ರಾಮಾಯಣವನ್ನೂ **ಭಾರತಂ** ಭಾರತವನ್ನೂ **ಪಂಚರಾತ್ರಂ** ಪಂಚರಾತ್ರವನ್ನೂ **ಗಾಯನ್** ಗಾಯನ ಮಾಡುತ್ತಾ, **ಚ** ಮತ್ತು **ಸಹಿತಬ್ರಹ್ಮಸೂತ್ರಾನ್** ಬ್ರಹ್ಮಸೂತ್ರಗಳಿಂದ ಕೂಡಿದ **ಸರ್ವಾನ್** ಎಲ್ಲ **ವೇದಾನ್** ವೇದಗಳನ್ನೂ **ವ್ಯಾಚಕ್ಷಾಣಃ** ವ್ಯಾಖ್ಯಾನ ಮಾಡುವವನಾಗಿ **ನಿತ್ಯಸುಖೋದ್ಧರಃ** ಯಾವಾಗಲೂ ಆನಂದದಿಂದ ಕೂಡಿದವನು **ಅಭೂತ್** ಆದನು.

ತಾತ್ಪರ್ಯ :- ಹನುಮಂತನು ನೂರುಕೋಟಿ ಶ್ಲೋಕಗಳಷ್ಟು ವಿಸ್ತಾರವುಳ್ಳ ವ್ಯಾಸೋಕ್ತ ಮೂಲರಾಮಾಯಣವನ್ನೂ ಭಾರತ, ಪಂಚರಾತ್ರ ಗಳನ್ನೂ ಹಾಡುತ್ತಾ ಮತ್ತು ಸಕಲವೇದಗಳನ್ನೂ ಹಾಗೆಯೇ ಬ್ರಹ್ಮಸೂತ್ರಗಳನ್ನೂ ವ್ಯಾಖ್ಯಾನಿಸುತ್ತಾ ನಿತ್ಯ ಅಲೌಕಿಕಾನಂದಾತಿಶಯದಿಂದ ತುಂಬಿಹೋಗಿದ್ದನು.

ಶ್ರೀರಾಮನ ದಿವ್ಯವೈಭವ

**ರಾಮೋಽಪಿ ಸಾರ್ಧಂ ಪವನಾತ್ಮಜೇನ**
**ಸ ಸೀತಯಾ ಲಕ್ಷ್ಮಣಪೂರ್ವಕೈಶ್ಚ ।**
**ತಥಾ ಗರುತ್ಮತ್ಪ್ರಮುಖೈಶ್ಚ ಪಾರ್ಷದೈಃ**
**ಸಂಸೇವ್ಯಮಾನೋ ನ್ಯವಸತ್ ಪಯೋಽಬ್ಧೌ ॥ ೧೨೨ ॥**

ಪದಚ್ಛೇದ : ರಾಮಃ ಅಪಿ ಸಾರ್ಧಂ ಪವನಾತ್ಮಜೇನ ಸಃ ಸೀತಯಾ ಲಕ್ಷ್ಮಣ ಪೂರ್ವಕೈಃ ಚ । ತಥಾ ಗರುತ್ಮತ್ಪ್ರಮುಖೈಃ ಚ ಪಾರ್ಷದೈಃ ಸಂಸೇವ್ಯಮಾನಃ ನ್ಯವಸತ್ ಪಯೋಽಬ್ಧೌ ॥

ಅರ್ಥ :- **ಸಃ ರಾಮೋಽಪಿ** ಶ್ರೀರಾಮನು **ಪವನಾತ್ಮಜೇನ** ಹನುಮಂತನಿಂದಲೂ **ಸೀತಯಾ** ಸೀತೆಯಿಂದಲೂ ಲಕ್ಷ್ಮಣನೇ ಮೊದಲಾದ **ಗರುತ್ಪ್ರಮುಖೈಃ ಚ** ಗರುಡನೇ ಮೊದಲಾದ **ಪಾರ್ಷದೈಃ ಚ ಸಾರ್ಧಂ** ತನ್ನ ಪರಿವಾರದಿಂದಲೂ **ಸಂಸೇವ್ಯಮಾನಃ** ಸೇವಿಸಲ್ಪಟ್ಟವನಾಗಿ **ಪಯೋಽಬ್ಧೌ** ಕ್ಷೀರಸಾಗರದಲ್ಲಿ **ನ್ಯವಸತ್** ವಾಸಮಾಡಿದನು.

ತಾತ್ಪರ್ಯ :- ಶ್ರೀರಾಮನೂ ಸಹ ಹನುಮಂತ ಸೀತೆಯರಿಂದ ಕೂಡಿದವನಾಗಿ ಮತ್ತು ಲಕ್ಷ್ಮಣನೇ ಮೊದಲಾದವರಿಂದಲೂ, ಗರುಡನೇ ಮೊದಲಾದ ಭೃತ್ಯರಿಂದಲೂ ಚೆನ್ನಾಗಿ ಸೇವಿತನಾಗಿ ಕ್ಷೀರಸಾಗರದಲ್ಲಿ ನೆಲಸಿ ದನು. (ಲಕ್ಷ್ಮಣ ಮೊದಲಾದವರು ಮೂಲರೂಪದಲ್ಲಿ ಸೇರಿಕೊಂಡಿದ್ದರೂ ಸ್ವೇಚ್ಛೆಯಿಂದ ಇನ್ನೊಮ್ಮೆ ಲಕ್ಷ್ಮಣರೂಪದಿಂದಲೇ ಶ್ರೀರಾಮನನ್ನು ಸೇವಿಸಿದರು.)

**ಕದಾಚಿದೀಶಃ ಸಕಲಾವತಾರಾನ್**
**ಏಕಂ ವಿಧಾಯಾಹಿಪತೌ ಹಿ ಶೇತೇ ।**
**ಪೃಥಕ್ ಚ ಸಂವ್ಯೂಹ್ಯ ಕದಾಚಿದಿಚ್ಛಯಾ**
**ರೇಮೇ ರಮೇಶೋಽಮಿತಸದ್ಗುಣಾರ್ಣವಃ ॥ ೧೨೩ ॥**

ಪದಚ್ಛೇದ : ಕದಾಚಿತ್ ಈಶಃ ಸಕಲಾವತಾರಾನ್ ಏಕಂ ವಿಧಾಯ ಅಹಿಪತೌ ಹಿ ಶೇತೇ । ಪೃಥಕ್ ಚ ಸಂವ್ಯೂಹ್ಯ ಕದಾಚಿತ್ ಇಚ್ಛಯಾ ರೇಮೇ ರಮೇಶಃ ಅಮಿತಸದ್ಗುಣಾರ್ಣವಃ ॥

**ಅರ್ಥ :- ಕದಾಚಿತ್** ಕೆಲವೊಮ್ಮೆ **ಈಶಃ** ಶ್ರೀರಾಮನು **ಸಕಲಾವ ತಾರಾನ್** ಎಲ್ಲ ಅವತಾರಗಳನ್ನೂ **ಏಕಂ ವಿಧಾಯ** ಒಂದಾಗಿಸಿ **ಅಹಿಪತೌ** ಶೇಷನ ಮೇಲೆ **ಶೇತೇ** ಮಲಗುತ್ತಾನೆ. **ಕದಾಚಿತ್** ಕೆಲವೊಮ್ಮೆ **ಪೃಥಕ್ ಚ** ಪ್ರತ್ಯೇಕವಾಗಿ **ಸಂವ್ಯೂಹ್ಯ** ವ್ಯೂಹ ರೂಪದಲ್ಲಿ ಸೇರಿಸಿಕೊಂಡು **ಇಚ್ಛಯಾ** ತನ್ನ ಇಚ್ಛೆಯಿಂದ **ಅಮಿತಸದ್ಗುಣಾರ್ಣವಃ** ಅನಂತ ಸದ್ಗುಣಸಾಗರನಾದ **ರಮೇಶಃ** ಶ್ರೀರಾಮನು **ರೇಮೇ** ಕ್ರೀಡಿಸಿದನು.

**ತಾತ್ಪರ್ಯ :-** (ಸಮರ್ಥನಾದ ಶ್ರೀಮನ್ನಾರಾಯಣನು) ಕೆಲವೊಮ್ಮೆ ತನ್ನ ಎಲ್ಲ ವಾಸುದೇವಾದಿ ಅನಂತ ರೂಪಗಳನ್ನೂ ಐಕ್ಯಗೊಳಿಸಿ (ಒಂದನ್ನಾಗಿಸಿ) ಶೇಷನ ಮೇಲೆ ಮಲಗಿದರೆ, ಇನ್ನೊಮ್ಮೆ ಆ ರೂಪಗಳನ್ನು ಪ್ರತ್ಯೇಕಿಸಿ ವ್ಯೂಹ ವನ್ನಾಗಿಸಿ ಅಮಿತ ಸದ್ಗುಣಗಳ ಖನಿಯಾದ ರಮಾಪತಿಯು ತನ್ನ ಇಚ್ಛೆಗನು ಗುಣವಾಗಿ ಕ್ರೀಡಿಸುವನು.

### ಶ್ರೀರಾಮಕಥಾನಿರ್ಣಯ

**ಇತ್ಯಶೇಷಪುರಾಣೇಭ್ಯಃ ಪಂಚರಾತ್ರೇಭ್ಯ ಏವ ಚ ।**
**ಭಾರತಾಚ್ಚೈವ ವೇದೇಭ್ಯೋ ಮಹಾರಾಮಾಯಣಾದಪಿ ॥ ೧೨೪ ॥**

**ಪರಸ್ಪರವಿರೋಧಸ್ಯ ಹಾನಾನ್ನಿರ್ಣೀಯ ತತ್ತ್ವತಃ ।**
**ಯುಕ್ತ್ಯಾ ಬುದ್ಧಿಬಲಾಚ್ಚೈವ ವಿಷ್ಣೋರೇವ ಪ್ರಸಾದತಃ ॥ ೧೨೫ ॥**

**ಬಹುಕಲ್ಪಾನುಸಾರೇಣ ಮಯೇಯಂ ಸತ್ಕಥೋದಿತಾ ।**
**ನೈಕಗ್ರಂಥಾಶ್ರಯಾತ್ ತಸ್ಮಾನ್ನಾಶಂಕ್ಯಾऽತ್ರ ವಿರುದ್ಧತಾ ॥ ೧೨೬ ॥**

ಪದಚ್ಛೇದ : ಇತಿ ಅಶೇಷಪುರಾಣೇಭ್ಯಃ ಪಂಚರಾತ್ರೇಭ್ಯಃ ಏವ ಚ । ಭಾರತಾತ್ ಚ ಏವ ವೇದೇಭ್ಯಃ ಮಹಾರಾಮಾಯಣಾತ್ ಅಪಿ ॥ ಪರಸ್ಪರವಿರೋಧಸ್ಯ ಹಾನಾತ್ ನಿರ್ಣೀಯ ತತ್ತ್ವತಃ । ಯುಕ್ತ್ಯಾ ಬುದ್ಧಿಬಲಾತ್ ಚ ಏವ ವಿಷ್ಣೋಃ ಏವ ಪ್ರಸಾದತಃ ॥ ಬಹುಕಲ್ಪಾನುಸಾರೇಣ ಮಯಾ ಇಯಂ ಸತ್ಕಥಾ ಉದಿತಾಣ ನ ಏಕಗ್ರಂಥಾಶ್ರಯಾತ್ ತಸ್ಮಾತ್ ನ ಆಶಂಕ್ಯಾ ಅತ್ರ ವಿರುದ್ಧತಾ ॥

**ಅರ್ಥ** :- **ಇತಿ** ಈ ರೀತಿಯಾಗಿ **ಅಶೇಷಪುರಾಣೇಭ್ಯಃ** ಎಲ್ಲ ಪುರಾಣಗಳಿಂದ **ಪಂಚರಾತ್ರೇಭ್ಯಃ** ಏವ ಪಂಚರಾತ್ರಗಳಿಂದಲೂ **ಭಾರತಾಚ್ಚೈವ** ಭಾರತಗ್ರಂಥದಿಂದಲೂ **ವೇದೇಭ್ಯಃ** ವೇದಗಳಿಂದಲೂ **ಮಹಾರಾಮಾಯಣಾದಪಿ** ಮಹಾರಾಮಾಯಣದಿಂದಲೂ **ಪರಸ್ಪರ ವಿರೋಧಸ್ಯ** ಪರಸ್ಪರ ವಿರೋಧವನ್ನು **ಹಾನಾತ್** ಪರಿಹರಿಸುವುದರ ಮೂಲಕವೂ **ತತ್ತ್ವತಃ** ತತ್ತ್ವವನ್ನು **ನಿರ್ಣೀಯ** ನಿರ್ಣಯಿಸಿಯೂ, **ಯುಕ್ತ್ಯಾ** ಯುಕ್ತಿಗಳಿಂದ **ಬುದ್ಧಿಬಲಾಚ್ಚೈವ** ಬುದ್ಧಿಬಲದಿಂದಲೂ **ವಿಷ್ಣೋರೇವ** ವಿಷ್ಣುವಿನ **ಪ್ರಸಾದತಃ** ಅನುಗ್ರಹದಿಂದ **ಬಹುಕಲ್ಪಾನುಸಾರೇಣ** ಬಹುಕಲ್ಪಗಳಿಗೆ ಅನುಗುಣವಾಗಿ **ಮಯಾ** ನನ್ನಿಂದ **ಇಯಂ** ಈ **ಕಥಾ** ಕಥೆಯು **ಉದಿತಾ** ಹೇಳಲ್ಪಟ್ಟಿದೆ. **ಏಕಗ್ರಂಥಾಶ್ರಯಾ** ಒಂದೇ ಗ್ರಂಥವನ್ನು ಆಧರಿಸಿಕೊಂಡು **ನ** ಹೇಳಲ್ಪಟ್ಟಿಲ್ಲ. **ತಸ್ಮಾತ್** ಆದ್ದರಿಂದ **ಅತ್ರ** ಇಲ್ಲಿ **ವಿರುದ್ಧತಾ** ವಿರೋಧವು **ನ ಆಶಂಕ್ಯಾ** ಶಂಕಿಸಲ್ಪಡಕೂಡದು.

**ತಾತ್ಪರ್ಯ** :- ಹೀಗೆ ಸಮಸ್ತ ಪುರಾಣಗಳಿಂದಲೂ ಪಂಚರಾತ್ರದಿಂದಲೂ, ಭಾರತ ಹಾಗೂ ವೇದಗಳು ಮತ್ತು ಮೂಲರಾಮಾಯಣದಿಂದಲೂ ಅವುಗಳಿಗೆ ಪರಸ್ಪರ ವಿರೋಧ ಬಾರದಂತೆ ಯುಕ್ತಿಯಿಂದಲೂ, ಪ್ರಜ್ಞಾಬಲದಿಂದಲೂ ಹಾಗೂ ವಿಷ್ಣುವಿನ ಪ್ರಸಾದದಿಂದಲೂ ತತ್ತ್ವವನ್ನು ನಿರ್ಣಯಿಸಿ, ಅನೇಕ ಕಲ್ಪಗಳಿಗನುಗುಣವಾಗಿ ನಾನು ಈ ರಾಮಾಯಣವೆಂಬ ಸತ್ಕಥೆಯನ್ನು ಹೇಳಿರುವೆನು.ಯಾವುದೋ ಒಂದೇ ಗ್ರಂಥವನ್ನು ಆಶ್ರಯಿಸಿ ಅಲ್ಲ. ಹೀಗಿರುವುದರಿಂದ ಇಲ್ಲಿ ಕಥಾವಿರೋಧವನ್ನು ಶಂಕಿಸಬಾರದು.

**ಕ್ವಚಿನ್ಮೋಹಾಯಾಸುರಾಣಾಂ ವ್ಯತ್ಯಾಸಃ ಪ್ರತಿಲೋಮತಾ ।**
**ಉಕ್ತಾ ಗ್ರಂಥೇಷು ತಸ್ಮಾದ್ಧಿ ನಿರ್ಣಯೋಽಯಂ ಕೃತೋ ಮಯಾ ॥೧೨೭॥**

**ಪದಚ್ಛೇದ :** ಕ್ವಚಿತ್ ಮೋಹಾಯ ಅಸುರಾಣಾಂ ವ್ಯತ್ಯಾಸಃ ಪ್ರತಿಲೋಮತಾ । ಉಕ್ತಾ ಗ್ರಂಥೇಷು ತಸ್ಮಾತ್ ಹಿ ನಿರ್ಣಯಃ ಅಯಂ ಕೃತಃ ಮಯಾ ॥

**ಅರ್ಥ** :- **ಗ್ರಂಥೇಷು** ಭಾರತಾದಿಗ್ರಂಥಗಳಲ್ಲಿ **ಕ್ವಚಿತ್** ಕೆಲವೆಡೆ **ಆಸುರಾಣಾಂ** ದೈತ್ಯರಿಗೆ **ಮೋಹಾಯ** ಮೋಹಕ್ಕೋಸ್ಕರ **ವ್ಯತ್ಯಾಸಃ** ಕಾಲ, ಪುರುಷ ವ್ಯತ್ಯಾಸವು (**ಉಕ್ತಃ** ಹೇಳಲ್ಪಟ್ಟಿದೆ) **ಪ್ರತಿಲೋಮತಾ** ಪ್ರಸಿದ್ಧಕಥಾ ವಸ್ತುವಿಗಿಂತ ಭಿನ್ನವಾಗಿ **ಉಕ್ತಃ** ಹೇಳಲ್ಪಟ್ಟಿದೆ. **ತಸ್ಮಾತ್** ಆದ್ದರಿಂದ **ಅಯಂ**

ಈ ನಿರ್ಣಯಃ ಮಹಾಭಾರತತಾತ್ಪರ್ಯನಿರ್ಣಯವೆಂಬ ಗ್ರಂಥವು ಮಯಾ ನನ್ನಿಂದ ಕೃತಃ ಮಾಡಲ್ಪಟ್ಟಿದೆ.

ತಾತ್ಪರ್ಯ :- ಅಸುರರ ಮೋಹಕ್ಕಾಗಿ ಭಾರತಾದಿ ಕೆಲವು ಗ್ರಂಥಗಳಲ್ಲಿ ಕಾಲ ವ್ಯತ್ಯಾಸ, ಪುರುಷವ್ಯತ್ಯಾಸವೇ ಮೊದಲಾದ ನಾನಾ ಬಗೆಯ ವ್ಯತ್ಯಾಸಗಳು ವಿಪರೀತ ಕ್ರಮಗಳು ಉಕ್ತವಾಗಿದೆ. ಆದ್ದರಿಂದ ಈ ಮಹಾಭಾರತ ತಾತ್ಪರ್ಯ ನಿರ್ಣಯವೆಂಬ ಗ್ರಂಥವನ್ನು ರಚಿಸಿದ್ದೇನೆ.

**ಏವಂ ಚ ವಕ್ಷ್ಯಮಾಣೇಷು ನೈವಾಶಂಕ್ಯಾ ವಿರುದ್ಧತಾ ।**
**ಸರ್ವಕಲ್ಪಸಮಶ್ಚಾಯಂ ಪಾರಂಪರ್ಯಕ್ರಮಃ ಸದಾ ॥ ೧೨೮ ॥**

ಪದಚ್ಛೇದ : ಏವಂ ಚ ವಕ್ಷ್ಯಮಾಣೇಷು ನ ಏವ ಆಶಂಕ್ಯಾ ವಿರುದ್ಧತಾ । ಸರ್ವಕಲ್ಪಸಮಃ ಚ ಅಯಂ ಪಾರಂಪರ್ಯಕ್ರಮಃ ಸದಾ ॥

ಅರ್ಥ :- ಏವಂ ಚ ಈ ರೀತಿಯಾಗಿ ವಕ್ಷ್ಯಮಾಣೇಷು ಮುಂದೆ ಹೇಳುವ ವಿಷಯಗಳಲ್ಲಿಯೂ ವಿರುದ್ಧತಾ ವಿರೋಧವು ನೈವ ಆಶಂಕ್ಯಾ ಶಂಕಿಸಲ್ಪಡಕೂಡದು. ಅಯಂ ಈ (ಗ್ರಂಥದ ಮೊದಲ ಮೂರು ಅಧ್ಯಾಯಗಳಲ್ಲಿ ಹೇಳಿದ) ಪಾರಂಪರ್ಯಕ್ರಮಃ ಸೃಷ್ಟ್ಯಾದಿ ಪರಂಪರೆಯ ಕ್ರಮಗಳು ಸದಾ ಯಾವಾಗಲೂ ಸರ್ವಕಲ್ಪಸಮಃ ಚ ಸಕಲ ಕಲ್ಪಗಳಿಗೂ ಸಮಃ ಸಮವಾದುದು.

ತಾತ್ಪರ್ಯ :- ಆದ್ದರಿಂದ ಮುಂದೆ ಹೇಳುವ ವಿಷಯಗಳಲ್ಲಿಯೂ ಸಹ ವಿರೋಧವನ್ನು ಶಂಕಿಸಬಾರದು. ಈ ನಿರ್ಣಯಗ್ರಂಥದಲ್ಲಿ ಹೇಳಿರುವ ಸೃಷ್ಟ್ಯಾದಿ ಪರಂಪರೆಗೆ ಸಂಬಂಧಿಸಿದ ಕ್ರಮಗಳು ಸರ್ವಕಾಲಗಳಿಗೂ, ಸಕಲ ಕಲ್ಪಗಳಿಗೂ ಸಮಾನವಾದದ್ದು.

**ಪುಂವ್ಯತ್ಯಾಸೇನ ಚೋಕ್ತಿಃ ಸ್ಯಾತ್ ಪುರಾಣಾದಿಷು ಕುತ್ರಚಿತ್ ।**
**ಕೃಷ್ಣಾಮಾಹ ಯಥಾ ಕೃಷ್ಣೋ ಧನಂಜಯಶರೈರ್ಹತಾನ್ ॥ ೧೨೯ ॥**

**ಶತಂ ದುರ್ಯೋಧನಾದೀಂಸ್ತೇ ದರ್ಶಯಿಷ್ಯ ಇತಿ ಪ್ರಭುಃ ।**
**ಭೀಮಸೇನಹತಾಸ್ತೇ ಹಿ ಜ್ಞಾಯಂತೇ ಬಹುವಾಕ್ಯತಃ ॥ ೧೩೦ ॥**

ಪದಚ್ಛೇದ : ಪುಂವ್ಯತ್ಯಾಸೇನ ಚ ಉಕ್ತಿಃ ಸ್ಯಾತ್ ಪುರಾಣಾದಿಷು ಕುತ್ರಚಿತ್ । ಕೃಷ್ಣಾಮ್ ಆಹ ಯಥಾ ಕೃಷ್ಣಃ ಧನಂಜಯಶರೈಃ ಹತಾನ್ ॥ ಶತಂ ದುರ್ಯೋಧನಾದೀನ್ ತೇ ದರ್ಶಯಿಷ್ಯೇ ಇತಿ ಪ್ರಭುಃ । ಭೀಮಸೇನಹತಾಃ ತೇ ಹಿ ಜ್ಞಾಯಂತೇ ಬಹುವಾಕ್ಯತಃ ॥

**ಅರ್ಥ** :- **ಪುರಾಣೇಷು** ಪುರಾಣಗಳಲ್ಲಿ **ಕುತ್ರಚಿತ್** ಕೆಲವೆಡೆ **ಪುಂವ್ಯತ್ಯಾಸೇನ** ಪುರುಷ ವ್ಯತ್ಯಾಸದಿಂದ **ಉಕ್ತಿಃ** ಹೇಳುವಿಕೆಯು **ಸ್ಯಾತ್** ಇದೆ. **ಯಥಾ** ಹೇಗೆಂದರೆ **ಪ್ರಭುಃ** ಈಶನಾದ **ಕೃಷ್ಣಃ** ಶ್ರೀಕೃಷ್ಣನು **ಶತಂ** ನೂರು (ಸಂಖ್ಯೆಯುಳ್ಳ) **ದುರ್ಯೋಧನಾದೀನ್ ಚ** ದುರ್ಯೋಧನಾದಿಗಳನ್ನು **ಧನಂಜಯಶರೈಃ** ಅರ್ಜುನನ ಬಾಣಗಳಿಂದ **ಹತಾನ್** ಹತರಾದವರನ್ನು **ತೇ** ನಿನಗೆ **ದರ್ಶಯಿಷ್ಯೇ** ತೋರಿಸುತ್ತೇನೆ **ಇತಿ** ಎಂದು **ಕೃಷ್ಣಾಂ** ದ್ರೌಪದಿಗೆ **ಆಹ** ಹೇಳಿದನು. **ತೇ ತು** ದುರ್ಯೋಧನಾದಿಗಳು **ಭೀಮಸೇನಹತಾಃ** ಭೀಮನಿಂದ ಹತರಾದರೆಂದು **ಬಹುವಾಕ್ಯತಃ** ಬಹಳ ಗ್ರಂಥಗಳಿಂದ **ಜ್ಞಾಯಂತೇ ಹಿ** ತಿಳಿದುಬರುತ್ತದೆಯಷ್ಟೆ!

**ತಾತ್ಪರ್ಯ** :- ಪುರಾಣಗಳ ಕೆಲವು ಸ್ಥಳಗಳಲ್ಲಿ ಪುರುಷವ್ಯತ್ಯಾಸದಿಂದ ಹೇಳುವುದೂ ಇದೆ. ಮಹಾಭಾರತದ ಒಂದು ಸಂದರ್ಭದಲ್ಲಿ "ದುರ್ಯೋಧನಾದಿ ನೂರು ಜನರು ಅರ್ಜುನನ ಬಾಣಗಳಿಂದ ಹತರಾಗುವುದನ್ನು ತೋರಿಸುತ್ತೇನೆ" ಎಂದು ಶ್ರೀಕೃಷ್ಣನು ದ್ರೌಪದಿಗೆ ಹೇಳಿದ ಪ್ರಸಂಗ. ಆದರೆ ದುರ್ಯೋಧನಾದಿಗಳನ್ನು ಭೀಮಸೇನನು ಸಂಹಾರ ಮಾಡಿದನೆಂದು ಅನೇಕ ವಾಕ್ಯಗಳಿಂದ ಕಂಡುಬರುತ್ತದೆ.

**ವಿಸ್ತಾರೇ ಭೀಮನಿಹತಾಃ ಸಂಕ್ಷೇಪ್ದೇರ್ಜುನಪಾತಿತಾಃ ।**
**ಉಚ್ಯಂತೇ ಬಹವಶ್ಚಾನ್ಯೇ ಪುಂವ್ಯತ್ಯಾಸಸಮಾಶ್ರಯಾತ್ ॥ ೧೩೧ ॥**

ಪದಚ್ಛೇದ : ವಿಸ್ತಾರೇ ಭೀಮನಿಹತಾಃ ಸಂಕ್ಷೇಪೇ ಅರ್ಜುನಪಾತಿತಾಃ । ಉಚ್ಯಂತೇ ಬಹವಃ ಚ ಅನ್ಯೇ ಪುಂವ್ಯತ್ಯಾಸಸಮಾಶ್ರಯಾತ್ ॥

**ಅರ್ಥ** :- **ವಿಸ್ತಾರೇ** ವಿಸ್ತಾರವಾಗಿ ಹೇಳುವಾಗ **ಭೀಮನಿಹತಾಃ** ಭೀಮನಿಂದ ಹತರಾದರೆಂದೂ, **ಸಂಕ್ಷೇಪೇ** ಸಂಕ್ಷೇಪದಲ್ಲಿ ಹೇಳುವಾಗ **ಅರ್ಜುನಪಾತಿತಾಃ** ಅರ್ಜುನನಿಂದ ಹತರಾದರೆಂದೂ **ಉಚ್ಯಂತೇ** ಹೇಳಲಾಗಿದೆ **ಅನ್ಯೇ**

ಬೇರೆ ಬಹವಃ ಚ ಬಹುವಿಚಾರಗಳು ಪುಂವ್ಯತ್ಯಾಸಸಮಾಶ್ರಯಾತ್ ಪುರುಷ ವ್ಯತ್ಯಾಸದಿಂದ (ಉಚ್ಯಂತೇ ಹೇಳಲ್ಪಡುತ್ತವೆ).

**ತಾತ್ಪರ್ಯ** :- ವಿಸ್ತಾರವಾಗಿ ಹೇಳುವಾಗ ದುರ್ಯೋಧನಾದಿಗಳು ಭೀಮನಿಂದ ಹತರಾದವರೆಂದೂ, ಸಂಕ್ಷೇಪವಾಗಿ ಹೇಳುವಾಗ ಅರ್ಜುನನಿಂದ ಹತರಾದವರೆಂದು ಉಕ್ತವಾಗಿದೆ. ಇದರಂತೆ ಇನ್ನೂ ಅನೇಕ ವ್ಯಕ್ತಿಗಳ ವಿಷಯದಲ್ಲಿ (ಇತಿಹಾಸಪುರಾಣಾದಿಗಳಲ್ಲಿ) ವ್ಯತ್ಯಾಸ ಮಾಡಿ ಹೇಳಿರುವುದು ಕಂಡು ಬರುತ್ತದೆ.

**ವಿಸ್ತಾರೇ ಕೃಷ್ಣನಿಹತಾ ಬಲಭದ್ರಹತಾ ಇತಿ ।**
**ಉಚ್ಯಂತೇ ಚ ಕ್ವಚಿತ್ ಕಾಲವ್ಯತ್ಯಾಸೋಽಪಿ ಕ್ವಚಿದ್ಭವೇತ್ ॥ ೧೩೨ ॥**

ಪದಚ್ಛೇದ : ವಿಸ್ತಾರೇ ಕೃಷ್ಣನಿಹತಾಃ ಬಲಭದ್ರಹತಾಃ ಇತಿ । ಉಚ್ಯಂತೇ ಚ ಕ್ವಚಿತ್ ಕಾಲವ್ಯತ್ಯಾಸಃ ಅಪಿ ಕ್ವಚಿತ್ ಭವೇತ್ ॥

**ಅರ್ಥ** :- **ವಿಸ್ತಾರೇ** ವಿಸ್ತಾರವಾಗಿ ಹೇಳುವಾಗ **ಕ್ವಚಿತ್** ಕೆಲವು ಪ್ರಮಾಣ ಗ್ರಂಥಗಳಲ್ಲಿ **ಕೃಷ್ಣನಿಹತಾಃ** ಶ್ರೀಕೃಷ್ಣನಿಂದ ಹತರಾದವರು **ಇತಿ** ಎಂದೂ, (ಸಂಕ್ಷೇಪವಾಗಿ ಹೇಳುವಾಗ) **ಬಲಭದ್ರಹತಾಃ** ಬಲರಾಮನಿಂದ ಹತ ರಾದರೆಂದೂ **ಉಚ್ಯಂತೇ** ಹೇಳಲ್ಪಟ್ಟಿದ್ದಾರೆ. **ಕ್ವಚಿತ್** ಕೆಲವೆಡೆ **ಕಾಲವ್ಯತ್ಯಾಸಃ ಅಪಿ** ಕಾಲ ವ್ಯತ್ಯಾಸವೂ ಕೂಡ **ಭವೇತ್** ಆಗುತ್ತದೆ.

**ತಾತ್ಪರ್ಯ** :- ವಿಸ್ತಾರವಾಗಿ ಹೇಳುವಾಗ ಶ್ರೀಕೃಷ್ಣನಿಂದ ಹತರಾದವ ರೆಂದು, ಸಂಕ್ಷೇಪವಾಗಿ ಹೇಳುವಾಗ ಬಲರಾಮನಿಂದ ಹತರಾದವರೆಂದು ಹೇಳಿರುವುದುಂಟು. ಇದರಂತೆ ಕೆಲವೆಡೆ ಕಾಲವ್ಯತ್ಯಾಸವನ್ನೂ ಮಾಡಿರುವುದಿದೆ.

**ಯಥಾ ದುರ್ಯೋಧನಂ ಭೀಮಃ ಪ್ರಾಹಸತ್ ಕೃಷ್ಣಸನ್ನಿಧೌ ।**
**ಇತಿ ವಾಕ್ಯೇಷು ಬಹುಷು ಜ್ಞಾಯಂತೇ ನಿರ್ಣಯಾದಪಿ ॥ ೧೩೩ ॥**

ಪದಚ್ಛೇದ : ಯಥಾ ದುರ್ಯೋಧನಂ ಭೀಮಃ ಪ್ರಾಹಸತ್ ಕೃಷ್ಣಸನ್ನಿಧೌ । ಇತಿ ವಾಕ್ಯೇಷು ಬಹುಷು ಜ್ಞಾಯಂತೇ ನಿರ್ಣಯಾತ್ ಅಪಿ ॥

**ಅರ್ಥ** :- **ಯಥಾ** ಉದಾಹರಣೆಗೆ **ಭೀಮಃ** ಭೀಮಸೇನನು **ಸುಯೋಧನಂ** ದುರ್ಯೋಧನನನ್ನು **ಕೃಷ್ಣಸನ್ನಿಧೌ** ಶ್ರೀಕೃಷ್ಣನ ಸಮ್ಮುಖದಲ್ಲಿ **ಪ್ರಾಹಸತ್**

ಹಾಸ್ಯ ಮಾಡಿದನು **ಇತಿ** ಎಂದು **ಬಹುಷು ವಾಕ್ಯೇಷು ಅಪಿ** ಬಹಳ ವಾಕ್ಯಗಳಲ್ಲಿ **ನಿರ್ಣಯಾತ್** ನಿರ್ಣಯದಿಂದ **ಜ್ಞಾಯಂತೇ** ತಿಳಿಯುತ್ತದೆ.

**ತಾತ್ಪರ್ಯ :-** ಕಾಲವ್ಯತ್ಯಾಸ ಮಾಡಿರುವುದಕ್ಕೆ ಉದಾಹರಣೆ ಭೀಮನು (ರಾಜಸೂಯಯಾಗ ನಡೆಯುತ್ತಿರುವಾಗ) ದುರ್ಯೋಧನನ್ನು ಕಂಡು ಹಾಸ್ಯ ಮಾಡಿದ್ದು ಶ್ರೀಕೃಷ್ಣನ ಸಮ್ಮುಖದಲ್ಲಿಯೇ ಎಂದು ಬಹುವಾಕ್ಯಗಳಿಂದಲೂ, ನಿರ್ಣಯದಿಂದಲೂ ತಿಳಿದುಬರುತ್ತದೆ.

**ಅನಿರ್ಣಯೇ ತು ಕೃಷ್ಣಸ್ಯ ಪೂರ್ವಮುಕ್ತಾ ಗತಿಸ್ತತಃ ।**
**ವ್ಯತ್ಯಾಸಾಸ್ತ್ವೇವಮಾದ್ಯಾಶ್ಚ ಪ್ರಾತಿಲೋಮ್ಯಾದಯಸ್ತಥಾ ॥ ೧೩೪॥**

**ದೃಶ್ಯಂತೇ ಭಾರತಾದ್ಯೇಷು ಲಕ್ಷಣಗ್ರಂಥತಶ್ಚ ತೇ ।**
**ಜ್ಞಾಯಂತೇ ಬಹುಭಿರ್ವಾಕ್ಯೈರ್ನಿರ್ಣಯಗ್ರಂಥತಸ್ತಥಾ ॥ ೧೩೫ ॥**

ಪದಚ್ಛೇದ : ಅನಿರ್ಣಯೇ ತು ಕೃಷ್ಣಸ್ಯ ಪೂರ್ವಮ್ ಉಕ್ತಾ ಗತಿಃ ತತಃ । ವ್ಯತ್ಯಾಸಾಃ ತು ಏವಮ್ ಆದ್ಯಾಃ ಚ ಪ್ರಾತಿಲೋಮ್ಯಾದಯಃ ತಥಾ । ದೃಶ್ಯಂತೇ ಭಾರತಾದ್ಯೇಷು ಲಕ್ಷಣಗ್ರಂಥತಃ ಚ ತೇ । ಜ್ಞಾಯಂತೇ ಬಹುಭಿಃ ವಾಕ್ಯೈಃ ನಿರ್ಣಯಗ್ರಂಥತಃ ತಥಾ ॥

**ಅರ್ಥ :- ಅನಿರ್ಣಯೇ** ನಿರ್ಣಯ ಮಾಡದಿದ್ದಾಗ **ಕೃಷ್ಣಸ್ಯ** ಶ್ರೀಕೃಷ್ಣನ **ಗತಿಃ** ಗಮನವು **ಪೂರ್ವಂ** ಭೀಮಸೇನನು ದುರ್ಯೋಧನನನ್ನು ಹಾಸ್ಯ ಮಾಡುವ ಮೊದಲೇ **ಉಕ್ತಾ** ಹೇಳಲ್ಪಟ್ಟಿದೆ. **ಏವಮಾದ್ಯಾಃ** ಈ ರೀತಿಯೇ ಮೊದಲಾದ **ವ್ಯತ್ಯಾಸಾಃ** ವ್ಯತ್ಯಾಸಗಳು **ತಥಾ** ಹಾಗೆಯೇ **ಪ್ರಾತಿಲೋಮ್ಯಾದಯಃ** ವಿಪರೀತಕ್ರಮ ಮುಂತಾದವು **ಭಾರತಾದ್ಯೇಷು** ಭಾರತವೇ ಮೊದಲಾದ ಗ್ರಂಥಗಳಲ್ಲಿ **ದೃಶ್ಯಂತೇ** ಕಾಣುತ್ತವೆ. **ತೇ** ಈ ರೀತಿಯ ವ್ಯತ್ಯಾಸಗಳು **ಲಕ್ಷಣಗ್ರಂಥತಃ** ಲಕ್ಷಣಗ್ರಂಥಗಳಿಂದಲೂ **ನಿರ್ಣಯಗ್ರಂಥತಃ** ನಿರ್ಣಯ ಗ್ರಂಥಗಳಿಂದಲೂ **ತಥಾ** ಹಾಗೆಯೇ **ಬಹುಭಿಃ ವಾಕ್ಯೈಃ** ಬಹುವಾಕ್ಯಗಳಿಂದಲೂ **ಜ್ಞಾಯಂತೇ** ತಿಳಿಯುತ್ತವೆ.

**ತಾತ್ಪರ್ಯ :-** ನಿರ್ಣಯ ಮಾಡದಿದ್ದಾಗ, ಭೀಮನು ನೀರಿನಲ್ಲಿ ಬಿದ್ದಿದ್ದ ದುರ್ಯೋಧನನನ್ನು ನೋಡಿ ಹಾಸ್ಯ ಮಾಡಿದ್ದು ಇಂದ್ರಪ್ರಸ್ಥದಿಂದ ಸಾಲ್ವವಧೆಗಾಗಿ ಕೃಷ್ಣನು ದ್ವಾರಕೆಗೆ ಹೋದ ಅನಂತರದಲ್ಲಿ ಎಂದು ತಿಳಿಯಬೇಕಾದೀತು. ಇಂತಹ ಪುರುಷವ್ಯತ್ಯಾಸ, ಕಾಲವ್ಯತ್ಯಾಸ ಮತ್ತು ವಿಪರೀತಕ್ರಮಗಳೇ

ಮೊದಲಾದವುಗಳು ಭಾರತವೇ ಮೊದಲಾದ ಗ್ರಂಥಗಳಲ್ಲಿ ಕಾಣುತ್ತವೆ. ಪರಾಮರ್ಶಿಸಿದಾಗ ಈ ವ್ಯತ್ಯಾಸಾದಿಗಳು ಲಕ್ಷಣಗ್ರಂಥಗಳಿಂದಲೂ, ನಿರ್ಣಯ ಗ್ರಂಥಗಳಿಂದಲೂ ಬಹುವಾಕ್ಯಗಳಿಂದಲೂ ಗೋಚರವಾಗುತ್ತದೆ.

**ತಸ್ಮಾದ್ ವಿನಿರ್ಣಯಗ್ರಂಥಾನಾಶ್ರಿತ್ಯೈವ ಚ ಲಕ್ಷಣಮ್ ।**
**ಬಹುವಾಕ್ಯಾನುಸಾರೇಣ ನಿರ್ಣಯೋಽಯಂ ಮಯಾ ಕೃತಃ ॥ ೧೩೬ ॥**

ಪದಚ್ಛೇದ : ತಸ್ಮಾತ್ ವಿನಿರ್ಣಯಗ್ರಂಥಾನ್ ಆಶ್ರಿತ್ಯ ಏವ ಚ ಲಕ್ಷಣಮ್। ಬಹುವಾಕ್ಯಾನುಸಾರೇಣ ನಿರ್ಣಯಃ ಅಯಂ ಮಯಾ ಕೃತಃ ॥

**ಅರ್ಥ** :- **ತಸ್ಮಾತ್** ಆದ್ದರಿಂದ **ನಿರ್ಣಯಗ್ರಂಥಾನ್** ನಿರ್ಣಾಯಕ ಗ್ರಂಥಗಳನ್ನು **ಲಕ್ಷಣಂ ಚ** ಲಕ್ಷಣಗ್ರಂಥವನ್ನೂ **ಆಶ್ರಿತ್ಯೈವ** ಆಧರಿಸಿಯೇ **ಬಹು ವಾಕ್ಯಾನು ಸಾರೇಣ** ಬಹುವಾಕ್ಯಾನುಸಾರವಾಗಿ **ಅಯಂ** ಈ **ನಿರ್ಣಯಃ** ನಿರ್ಣಯ ಗ್ರಂಥವು **ಮಯಾ** ನನ್ನಿಂದ **ಕೃತಃ** ಮಾಡಲ್ಪಟ್ಟಿದೆ.

**ತಾತ್ಪರ್ಯ** :- ಆದ್ದರಿಂದ ನಿರ್ಣಯ ಗ್ರಂಥಗಳನ್ನು ಮತ್ತು ಲಕ್ಷಣ ಗ್ರಂಥಗಳನ್ನು ಆಶ್ರಯಿಸಿ ಬಹಳ ಪ್ರಮಾಣವಾಕ್ಯಗಳಿಗೆ ಅನುಸಾರವಾಗಿ ನಾನು ಈ ನಿರ್ಣಯ ಗ್ರಂಥವನ್ನು ರಚಿಸಿದ್ದೇನೆ.

**ಉಕ್ತಂ ಚ ಲಕ್ಷಣಗ್ರಂಥೇ ಕೃಷ್ಣದ್ವೈಪಾಯನೋದಿತೇ ।**
**ತ್ರಿಭಾಷಾಂ ಯೋ ನ ಜಾನಾತಿ ರೀತೀನಾಂ ಶತಮೇವ ಚ ॥ ೧೩೭ ॥**

**ವ್ಯತ್ಯಾಸಾದೀನ್ ಸಪ್ತಭೇದಾನ್ ವೇದಾದ್ಯರ್ಥಂ ತಥಾ ವದೇತ್ ।**
**ಸ ಯಾತಿ ನಿರಯಂ ಘೋರಮನ್ಯಥಾಜ್ಞಾನಸಂಭವಮ್ ॥ ೧೩೮ ॥**

ಪದಚ್ಛೇದ : ಉಕ್ತಂ ಚ ಲಕ್ಷಣಗ್ರಂಥೇ ಕೃಷ್ಣದ್ವೈಪಾಯನೋದಿತೇ। ತ್ರಿಭಾಷಾಂ ಯಃ ನ ಜಾನಾತಿ ರೀತೀನಾಂ ಶತಂ ಏವ ಚ ॥ ವ್ಯತ್ಯಾಸಾದೀನ್ ಸಪ್ತಭೇದಾನ್ ವೇದಾದ್ಯರ್ಥಂ ತಥಾ ವದೇತ್ । ಸಃ ಯಾತಿ ನಿರಯಂ ಘೋರಂ ಅನ್ಯಥಾಜ್ಞಾನಸಂಭವಮ್ ॥

**ಅರ್ಥ** :- **ತ್ರಿಭಾಷಾಂ** ಸಮಾಧಿ, ದರ್ಶನ, ಗುಹ್ಯಭಾಷೆಗಳನ್ನೂ **ರೀತೀನಾಂ** ವೈದರ್ಭೀ, ಗೌಡೀ, ಪಾಂಚಾಲೀ ಮೊದಲಾದ ರೀತಿಗಳ **ಶತ ಮೇವ ಚ** ನೂರನ್ನೂ **ವ್ಯತ್ಯಾಸಾದೀನ್** ವ್ಯತ್ಯಾಸವೇ ಮೊದಲಾದ **ಸಪ್ತ** ಏಳು

**ಭೇದಾನ್** ಪ್ರಭೇದಗಳನ್ನೂ **ಯಃ** ಯಾರು **ನ ಜಾನಾತಿ** ತಿಳಿಯುವುದಿಲ್ಲವೋ **ತಥಾ** ಹಾಗೆಯೇ **ವೇದಾದ್ಯರ್ಥಂ** ವೇದಾದಿಗಳ ಅರ್ಥವನ್ನು **ವದೇತ್** ಹೇಳುತ್ತಾನೋ **ಸಃ** ಅವನು **ಅನ್ಯಥಾಜ್ಞಾನ ಸಂಭವಮ್** ವಿಪರೀತಜ್ಞಾನದಿಂದ ಉಂಟಾದ **ಘೋರಂ** ಭಯಂಕರವಾದ **ನಿರಯಂ** ನರಕವನ್ನು **ಯಾತಿ** ಹೊಂದುತ್ತಾನೆ (**ಇತಿ** ಎಂದು) **ಕೃಷ್ಣದ್ವೈಪಾಯನೋದಿತೇ** ವೇದವ್ಯಾಸರಿಂದ ರಚಿತವಾದ **ಲಕ್ಷಣಗ್ರಂಥೇ** ಲಕ್ಷಣಗ್ರಂಥದಲ್ಲಿ **ಉಕ್ತಂ ಚ** ಹೇಳಲ್ಪಟ್ಟಿದೆ.

**ತಾತ್ಪರ್ಯ** :- ಶ್ರೀವೇದವ್ಯಾಸರಿಂದ ರಚಿತವಾದ ಲಕ್ಷಣಗ್ರಂಥದಲ್ಲಿ ಹೀಗೆ ಹೇಳಿದೆ ಮೂರು ಭಾಷೆಗಳನ್ನೂ (ಸಮಾಧಿ, ದರ್ಶನ ಮತ್ತು ಗುಹ್ಯ) ನೂರು ರೀತಿಗಳನ್ನೂ (ವೈದರ್ಭೀ, ಗೌಡೀ, ಪಾಂಚಾಲಿ ಇವೇ ಮೊದಲಾದ ನೂರು ರೀತಿಗಳು) ವ್ಯತ್ಯಾಸ ಮೊದಲಾದ ಏಳು ಭೇದಗಳನ್ನೂ ಅರಿಯದೆ ವೇದಾದಿಗಳ ಅರ್ಥವನ್ನು ಹಾಗೆಯೇ ಹೇಳಿದರೆ ವಿಪರೀತಜ್ಞಾನದಿಂದ ಲಭಿಸುವ ಘೋರ ನರಕವನ್ನೇ ಹೊಂದುವನು.

**ಇತ್ಯನ್ಯೇಷು ಚ ಶಾಸ್ತ್ರೇಷು ತತ್ರ ತತ್ರೋದಿತಂ ಬಹು ।**
**''ವ್ಯತ್ಯಾಸಃ ಪ್ರಾತಿಲೋಮ್ಯಂ ಚ ಗೋಮೂತ್ರೀ ಪ್ರಘಸಸ್ತಥಾ ॥ ೧೩೯॥**

**ಉಕ್ಷಣಃ ಸುಧುರಃ ಸಾಧುಃ ಸಪ್ತಭೇದಾಃ ಪ್ರಕೀರ್ತಿತಾಃ ।''**
**ಇತ್ಯಾದಿ ಲಕ್ಷಣಾನ್ಯತ್ರ ನೋಚ್ಯಂತೇಽನ್ಯಪ್ರಸಂಗತಃ ॥ ೧೪೦ ॥**

ಪದಚ್ಛೇದ : ಇತಿ ಅನ್ಯೇಷು ಚ ಶಾಸ್ತ್ರೇಷು ತತ್ರ ತತ್ರ ಉದಿತಂ ಬಹು । ''ವ್ಯತ್ಯಾಸಃ ಪ್ರಾತಿಲೋಮ್ಯಂ ಚ ಗೋಮೂತ್ರೀ ಪ್ರಘಸಃ ತಥಾ ॥ ಉಕ್ಷಣಃ ಸುಧುರಃ ಸಾಧುಃ ಸಪ್ತಭೇದಾಃ ಪ್ರಕೀರ್ತಿತಾಃ'' । ಇತ್ಯಾದಿಲಕ್ಷಣಾನಿ ಅತ್ರ ನ ಉಚ್ಯಂತೇ ಅನ್ಯಪ್ರಸಂಗತಃ ॥

**ಅರ್ಥ** :- **ಇತಿ** ಈ ರೀತಿಯಾಗಿ **ಅನ್ಯೇಷು** ಬೇರೆ **ಶಾಸ್ತ್ರೇಷು ಚ** ಶಾಸ್ತ್ರಗಳಲ್ಲಿಯೂ **ತತ್ರ ತತ್ರ** ಅಲ್ಲಲ್ಲಿ **ಬಹು** ಬಹಳವಾಗಿ **ಉದಿತಂ** ಹೇಳಲ್ಪಟ್ಟಿದೆ. ''**ವ್ಯತ್ಯಾಸಃ** ವ್ಯತ್ಯಾಸವು, **ಪ್ರಾತಿಲೋಮ್ಯಂ** ಪ್ರಾತಿಲೋಮ್ಯವು **ಗೋಮೂತ್ರೀ** ಗೋಮೂತ್ರಿಯು **ತಥಾ** ಹಾಗೆಯೇ **ಉಕ್ಷಣಃ** ಉಕ್ಷಣವು **ಸುಧುರಃ** ಸುಧುರವು **ಚ** ಮತ್ತು **ಸಾಧುಃ** ಸಾಧುವು ಹೀಗೆ **ಸಪ್ತಭೇದಾಃ** ಏಳು ಭೇದಗಳು (ಎಂದು) **ಪ್ರಕೀರ್ತಿತಾಃ''** ಉಕ್ತವಾಗಿದೆ **ಇತ್ಯಾದಿ** ಇವೇ ಮೊದಲಾದ **ಲಕ್ಷಣಾನಿ** ಲಕ್ಷಣಗಳು **ಅತ್ರ** ಇಲ್ಲಿ **ಅನ್ಯಪ್ರಸಂಗತಃ** ವಿಷಯಾಂತರವಾಗುವುದೆಂದು **ನ ಉಚ್ಯಂತೇ** ಹೇಳಲ್ಪಡುವುದಿಲ್ಲ.

ತಾತ್ಪರ್ಯ :- ಹೀಗೆ ಬೇರೆ ಬೇರೆ ಶಾಸ್ತ್ರಗಳಲ್ಲಿ ಅಲ್ಲಲ್ಲಿ ಬಹುವಾಗಿ ಉಲ್ಲೇಖಿಸಲಾಗಿದೆ. ''ವ್ಯತ್ಯಾಸವು, ಪ್ರಾತಿಲೋಮ್ಯವು ಗೋಮೂತ್ರಿಯು ಹಾಗೆಯೇ ಉಕ್ಷಣವು ಸುಧುರವು ಮತ್ತು ಸಾಧುವು ಹೀಗೆ ಏಳು ಭೇದಗಳು (ಎಂದು) ಉಕ್ತವಾಗಿದೆ' ಇವೇ ಮೊದಲಾದ ಲಕ್ಷಣಗಳನ್ನು ಇಲ್ಲಿ ಹೇಳದಿರುವ ಕಾರಣವೇನೆಂದರೆ, ಶ್ರೀಹರಿಯ ಅವತಾರದ ಕಥೆಯ ನಿರ್ಣಯ ಪ್ರಸಂಗದಲ್ಲಿ ವ್ಯತ್ಯಾಸ ಮುಂತಾದುವುಗಳ ಲಕ್ಷಣವನ್ನು ಹೇಳುವುದು ವಿಷಯಾಂತರವಾಗುತ್ತದೆ.

**ಅನುಸಾರೇಣ ತೇಷಾಂ ತು ನಿರ್ಣಯಃ ಕ್ರಿಯತೇ ಮಯಾ ।**
**ತಸ್ಮಾನ್ನಿರ್ಣಯಗ್ರಂಥತ್ವಾತ್ ಗ್ರಾಹ್ಯಮೇತದ್ಬುಭೂಷುಭಿಃ ॥ ೧೪೧ ॥**

ಪದಚ್ಛೇದ : ಅನುಸಾರೇಣ ತೇಷಾಂ ತು ನಿರ್ಣಯಃ ಕ್ರಿಯತೇ ಮಯಾ । ತಸ್ಮಾತ್ ನಿರ್ಣಯಗ್ರಂಥತ್ವಾತ್ ಗ್ರಾಹ್ಯಮ್ ಏತತ್ ಬುಭೂಷುಭಿಃ ॥

ಅರ್ಥ :- **ತೇಷಾಂ ತು** ಅವುಗಳ **ಅನುಸಾರೇಣ** ಅನುಸಾರವಾಗಿ **ಮಯಾ** ನನ್ನಿಂದ **ನಿರ್ಣಯಃ** ನಿರ್ಣಯಗ್ರಂಥವು **ಕ್ರಿಯತೇ** ಮಾಡಲ್ಪಡುತ್ತದೆ. **ತಸ್ಮಾತ್** ಆದ್ದರಿಂದ **ನಿರ್ಣಯಗ್ರಂಥತ್ವಾತ್** ನಿರ್ಣಯಗ್ರಂಥವಾದುದರಿಂದ **ಬುಭೂಷುಭಿಃ** ಜಿಜ್ಞಾಸುಗಳಿಂದ **ಏತತ್** ಈ ಗ್ರಂಥವು **ಗ್ರಾಹ್ಯಂ** ಸ್ವೀಕರಿಸಲ್ಪಡಬೇಕು.

ತಾತ್ಪರ್ಯ :- ನಾನು ನಿರ್ಣಯ ಕೈಗೊಳ್ಳುತ್ತಿರುವುದು ಆ ಪ್ರಮಾಣ ಗ್ರಂಥಗಳ ಅನುಸಾರವಾಗಿಯೇ. ಹೀಗೆ ಇದು ನಿರ್ಣಯಗ್ರಂಥ ವಾದುದರಿಂದ ಜಿಜ್ಞಾಸುಗಳಿಗೆ ಉಪಾದೇಯವಾಗಿರುತ್ತದೆ.

### ಶ್ರೀರಾಮಕಥಾಫಲಶ್ರುತಿ

**ಇತೀರಿತಾ ರಾಮಕಥಾ ಪರಾ ಮಯಾ**
**ಸಮಸ್ತಶಾಸ್ತ್ರಾನುಸೃತೇರ್ಭವಾಪಹಾ ।**
**ಪಠೇದಿಮಾಂ ಯಃ ಶೃಣುಯಾದಥಾಪಿ ವಾ**
**ವಿಮುಕ್ತಬಂಧಶ್ಶರಣಂ ಹರೇರ್ವ್ರಜೇತ್ ॥ ೧೪೨ ॥**

ಪದಚ್ಛೇದ : ಇತಿ ಈರಿತಾ ರಾಮಕಥಾ ಪರಾ ಮಯಾ ಸಮಸ್ತಶಾಸ್ತ್ರಾನುಸೃತೇಃ ಭವಾಪಹಾ । ಪಠೇತ್ ಇಮಾಂ ಯಃ ಶೃಣುಯಾತ್ ಅಥ ಅಪಿ ವಾ ವಿಮುಕ್ತಬಂಧಃ ಚರಣಂ ಹರೇಃ ವ್ರಜೇತ್ ॥

**ಅರ್ಥ** : **ಇತಿ** ಈ ರೀತಿಯಾಗಿ **ಮಯಾ** ನನ್ನಿಂದ **ಪರಾ** ಶ್ರೇಷ್ಠವಾದ **ಭವಾಪಹಾ** ಸಂಸಾರವನ್ನು ಕಳೆಯುವ **ರಾಮಕಥಾ** ಶ್ರೀರಾಮಚಂದ್ರನ ಚರಿತ್ರೆಯು **ಸಮಸ್ತಶಾಸ್ತ್ರಾನುಸೃತೇಃ** ಸಕಲಶಾಸ್ತ್ರಾನುಸಾರವಾಗಿ **ಈರಿತಾ** ಹೇಳಲ್ಪಟ್ಟಿದೆ. **ಯಃ** ಯಾರು **ಇಮಾಂ** ಈ ಕಥೆಯನ್ನು **ಪಠೇತ್** ಪಠಿಸುವನೋ **ಅಥಾಽಪಿ ವಾ** ಅಥವಾ **ಶೃಣುಯಾತ್** ಕೇಳುವನೋ **ಸಃ** ಅವನು **ವಿಮುಕ್ತ ಬಂಧಃ** ಸಂಸಾರಬಂಧದಿಂದ ಬಿಡುಗಡೆ ಹೊಂದಿ **ಹರೇಃ** ಭಗವಂತನ **ಚರಣಂ** ಪಾದವನ್ನು **ವ್ರಜೇತ್** ಹೊಂದುತ್ತಾನೆ.

**ತಾತ್ಪರ್ಯ** :- ಈ ಪ್ರಕಾರವಾಗಿ ನಾನು ಹೇಳಿದ ಶ್ರೀರಾಮಚರಿತ್ರವು ಶ್ರೇಷ್ಠವೂ ಸಂಸಾರವನ್ನು ಕಳೆಯುವಂಥದ್ದೂ ಸಮಸ್ತ ಶಾಸ್ತ್ರಗಳಿಗೆ ಅನುಗುಣ ವಾದದ್ದೂ ಆಗಿರುತ್ತದೆ.ಇದನ್ನು ಓದುವವರಿಗೆ ಹಾಗೂ ಕೇಳುವವರಿಗೆ ಎಲ್ಲಾ ಸಂಸಾರಬಂಧನವೂ ಬಿಡುಗಡೆಯಾಗಿ ಅವರು ಭಗವಂತನ ಶ್ರೀಚರಣಗಳನ್ನು ಹೊಂದುವರು.

ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ
ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯೇ
ಶ್ರೀರಾಮಚರಿತೇ ಶ್ರೀರಾಮಸ್ವಧಾಮಪ್ರವೇಶೋ
(ಉತ್ತರಕಾಂಡಕಥಾನಿರೂಪಣಂ) ನಾಮ
ನವಮೋಽಧ್ಯಾಯಃ ॥

ಇಲ್ಲಿಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರು ವಿರಚಿಸಿದ ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಶ್ರೀರಾಮಚರಿತದಲ್ಲಿ ಶ್ರೀರಾಮಸ್ವಧಾಮಪ್ರವೇಶ (ಉತ್ತರಕಾಂಡಕಥಾನಿರೂಪಣ)ವೆಂಬ ಒಂಬತ್ತನೇ ಅಧ್ಯಾಯ ಮುಗಿಯಿತು.

# ಅಧ್ಯಾಯ - 10

## ವ್ಯಾಸಾವತಾರಾನುವರ್ಣನಂ

### ವ್ಯಾಸಾವತಾರಕ್ಕಾಗಿ ದೇವತೆಗಳ ಪ್ರಾರ್ಥನೆ

**ದ್ವಾಪರೇಽಥ ಯುಗೇ ಪ್ರಾಪ್ತೇ ತ್ವಷ್ಟಾವಿಂಶತಿಮೇ ಪುನಃ ।**
**ಸ್ವಯಂಭುಶರ್ವಶಕ್ರಾದ್ಯಾ ದುಗ್ಧಾಬ್ಧೇಸ್ತೀರಮಾಯಯುಃ ॥ ೧ ॥**

ಪದಚ್ಛೇದ :- ದ್ವಾಪರೇ, ಅಥ, ಯುಗೇ, ಪ್ರಾಪ್ತೇ, ತು, ಅಷ್ಟಾವಿಂಶತಿಮೇ, ಪುನಃ, ಸ್ವಯಂಭುಶರ್ವಶಕ್ರಾದ್ಯಾಃ, ದುಗ್ಧಾಬ್ಧೇಃ, ತೀರಮ್, ಆಯಯುಃ ।

**ಅರ್ಥ** :- **ಅಥ** ಅನೇಕಯುಗಚಕ್ರಗಳು ತಿರುಗಿದ ಅನಂತರ, **ಅಷ್ಟಾವಿಂಶತಿಮೇ** ಇಪ್ಪತ್ತೆಂಟನೆಯ, **ದ್ವಾಪರೇ ಯುಗೇ** ದ್ವಾಪರ ಯುಗವು, **ಪ್ರಾಪ್ತೇ ತು** ಬರುತ್ತಿರಲು, **ಪುನಃ** ಮತ್ತೊಮ್ಮೆ, **ಸ್ವಯಂಭುಶರ್ವಶಕ್ರಾದ್ಯಾಃ** ಚತುರ್ಮುಖಬ್ರಹ್ಮದೇವರು, ರುದ್ರ ದೇವರು, ಮತ್ತು ದೇವೇಂದ್ರನೇ ಮೊದಲಾದ ದೇವತೆಗಳು, **ದುಗ್ಧಾಬ್ಧೇಃ** ಕ್ಷೀರಸಮುದ್ರದ, **ತೀರಂ** ದಡವನ್ನು ಕುರಿತು, **ಆಯಯುಃ** ಬಂದರು.

**ತಾತ್ಪರ್ಯ** :- ಈ ಅಧ್ಯಾಯದಲ್ಲಿ ಕೂರ್ಮಾವತಾರವನ್ನು ವರ್ಣಿಸಿ, ವ್ಯಾಸಾವತಾರಕ್ಕಾಗಿ ದೇವತೆಗಳು ಪ್ರಾರ್ಥನೆಯ ನೆಪದಲ್ಲಿ ಸಮುದ್ರ ಮಥನವನ್ನು ವರ್ಣಿಸುವಾಗ ಧನ್ವಂತರಿ ಮತ್ತು ಮೋಹಿನೀ ರೂಪಗಳನ್ನು ವರ್ಣಿಸಿ, ವ್ಯಾಸಾವತಾರದ ಮಹಿಮೆಗಳನ್ನು ವರ್ಣಿಸಿದ್ದಾರೆ. ವೈವಸ್ವತ ಮನ್ವಂತರದಲ್ಲಿ ಮೂರನೇ ಐದನೇ, ಹದಿನಾರನೇ, ಹಾಗೂ ಇಪ್ಪತ್ತೆಂಟನೇ ದ್ವಾಪರ ಯುಗಗಳಲ್ಲಿ ಸಾಕ್ಷಾತ್ ನಾರಾಯಣನೇ ವ್ಯಾಸರಾಗಿ ಅವತರಿಸುತ್ತಾನೆ. ಇಪ್ಪತ್ತನಾಲ್ಕನೇ ತ್ರೇತಾಯುಗದಲ್ಲಿ ರಾಮಾವತಾರ. ಹೀಗಾಗಿ ರಾಮಾವತಾರದ ನಂತರ ಪುನಃ ವ್ಯಾಸಾವತಾರಕ್ಕೋಸ್ಕರ ಪ್ರಾರ್ಥನೆ ಮಾಡಲು ಬ್ರಹ್ಮ-ರುದ್ರ-ಇಂದ್ರ ಮೊದಲಾದ ದೇವತೆಗಳು ಕ್ಷೀರ ಸಮುದ್ರದ ತೀರಕ್ಕೆ ಬಂದರು.

**ಪಯೋಬ್ಧೇರುತ್ತರಂ ತೀರಮಾಸಾದ್ಯ ವಿಬುಧರ್ಷಭಾಃ ।**
**ತುಷ್ಟುವುಃ ಪುಂಡರೀಕಾಕ್ಷಮಕ್ಷಯಂ ಪುರುಷೋತ್ತಮಮ್ ॥ ೨ ॥**

ಪದಚ್ಛೇದ :ಪಯೋಬ್ಧೇಃ, ಉತ್ತರಮ್, ತೀರಮ್, ಆಸಾದ್ಯ, ವಿಬುಧರ್ಷಭಾಃ, ತುಷ್ಟುವುಃ, ಪುಂಡರೀಕಾಕ್ಷಮ್, ಅಕ್ಷಯಮ್, ಪುರುಷೋತ್ತಮಮ್ ।

**ಅರ್ಥ** :- **ವಿಬುಧರ್ಷಭಾಃ** ಶ್ರೇಷ್ಠರಾದ ದೇವತೆಗಳು, **ಪಯೋಬ್ಧೇಃ** ಕ್ಷೀರ ಸಮುದ್ರದ, **ಉತ್ತರಂ ತೀರಂ** ಉತ್ತರದ ದಡವನ್ನು , **ಆಸಾದ್ಯ**-ಹೊಂದಿ, **ಅಕ್ಷಯಂ** ಯಾವುದೇ ರೀತಿಯ ನಾಶವಿಲ್ಲದ, **ಪುರುಷೋತ್ತಮಂ** ಸರ್ವೋತ್ತಮ ನಾದ, **ಪುಂಡರೀಕಾಕ್ಷಂ** ಕಮಲದಂತೆ ಕಣ್ಣುಗಳುಳ್ಳ ಪರಮಾತ್ಮನನ್ನು , **ತುಷ್ಟುವುಃ** ಸ್ತೋತ್ರ ಮಾಡಿದರು.

**ತಾತ್ಪರ್ಯ** :- ಎಲ್ಲ ದೇವತೆಗಳು ಕ್ಷೀರ ಸಮುದ್ರದ ಉತ್ತರ ದಡಕ್ಕೆ ಬಂದು ಸೇರಿದರು. ಅಲ್ಲಿ ಭಗವಂತನನ್ನು ಸ್ತೋತ್ರ ಮಾಡಿದರು. ಆ ಭಗವಂತ ನಾಶರಹಿತ, ಸರ್ವೋತ್ತಮ, ಕಮಲದಂತೆ ಕಣ್ಣುಗಳುಳ್ಳವನು.

**ನಮೋ ನಮೋಽಗಣ್ಯಗುಣೈಕಧಾಮ್ನೇ ಸಮಸ್ತ ವಿಜ್ಞಾನಮರೀಚಿಮಾಲಿನೇ ।**
**ಅನಾದ್ಯವಿಜ್ಞಾನತಮೋನಿಹಂತ್ರೇ ಪರಾಮೃತಾನಂದಪದಪ್ರದಾಯಿನೇ ॥೩॥**

ಪದಚ್ಛೇದ : ನಮಃ, ನಮಃ ಅಗಣ್ಯಗುಣೈಕಧಾಮ್ನೇ, ಸಮಸ್ತವಿಜ್ಞಾನ ಮರೀಚಿಮಾಲಿನೇ, ಅನಾದ್ಯವಿಜ್ಞಾನತಮೋನಿಹಂತ್ರೇ, ಪರಾಮೃತಾನಂದ ಪದಪ್ರದಾಯಿನೇ ॥

**ಅರ್ಥ** :- **ಅಗಣ್ಯಗುಣೈಕಧಾಮ್ನೇ ಅಗಣ್ಯ** ಲೆಕ್ಕವಿಲ್ಲದಷ್ಟು **ಗುಣ** ಆನಂದಾದಿಗುಣಗಳಿಗೆ, **ಏಕಧಾಮ್ನೇ** ಮುಖ್ಯಾಶ್ರಯನಾದ, **ಸಮಸ್ತ ವಿಜ್ಞಾನ ಮರೀಚಿಮಾಲಿನೇ ಸಮಸ್ತ** ಎಲ್ಲಾ, **ವಿಜ್ಞಾನ** ವಿಶಿಷ್ಟವಾದ, ವಿಲಕ್ಷಣವಾದ ಜ್ಞಾನದಿಂದ, **ಮರೀಚಿಮಾಲಿನೇ** ಸೂರ್ಯನಂತಿರುವ, **ಅನಾದ್ಯವಿಜ್ಞಾನತಮೋ ನಿಹಂತ್ರೇ ಅನಾದಿ**-ಅನಾದಿಯಾದ, **ಅವಿಜ್ಞಾನ** ಅಜ್ಞಾನವೆಂಬ, **ತಮಃ** ಕತ್ತಲನ್ನು, **ನಿಹಂತ್ರೇ** ನಾಶಪಡಿಸುವ, **ಪರಾಮೃತಾನಂದಪದಪ್ರದಾಯಿನೇ ಪರ** ಉತ್ಕೃಷ್ಟವಾದ, **ಅಮೃತ** ನಾಶರಹಿತವಾದ, **ಆನಂದ** ಸ್ವರೂಪ ಸುಖವೆಂಬ ಮೋಕ್ಷದ, **ಪದ** ಸ್ಥಾನವನ್ನು, **ಪ್ರದಾಯಿನೇ** ಕೊಡುವ ಪರಮಾತ್ಮನಿಗೆ, **ನಮೋ ನಮಃ** ಭಕ್ತ್ಯಾದಿಗಳಿಂದ ಕೂಡಿದ ನಮಸ್ಕಾರವು.

**ತಾತ್ಪರ್ಯ** :- ಇಲ್ಲಿಂದ ಆರಂಭಿಸಿ ದೇವತೆಗಳು ಮಾಡಿದ ಭಗವಂತನ ಸ್ತೋತ್ರವನ್ನು ಆಚಾರ್ಯರು ನಿರೂಪಿಸಿದ್ದಾರೆ. ಆರಂಭದಲ್ಲಿ ಭಗವಂತನಿಗೆ ನಮಸ್ಕಾರ.

ಅವನ ಸ್ವರೂಪವನ್ನು ವರ್ಣಿಸುತ್ತಿದ್ದಾರೆ ಅವನು ಗುಣಪರಿಪೂರ್ಣ, ಎಲ್ಲ ಗುಣಗಳೂ ಅವನನ್ನು ಆಶ್ರಯಿಸಿವೆ. ಜ್ಞಾನಸೂರ್ಯ ಅವನು. ಅನಾದಿ ಕಾಲದಿಂದ ಜೀವರಲ್ಲಿ ಇರುವ ಅಜ್ಞಾನವನ್ನು ಪರಿಹರಿಸುವವ. ಕೊನೆಗೆ ಎಲ್ಲರೂ ಬಯಸುವ ಶ್ರೇಷ್ಠ ಆನಂದರೂಪವಾದ ಮೋಕ್ಷವನ್ನು ಕೊಟ್ಟು ರಕ್ಷಿಸುವವನು. ಇಲ್ಲಿ ಅಜ್ಞಾನ ಎಂದರೆ ಎಲ್ಲ ಪದಾರ್ಥಗಳ ಅರಿವು ಇಲ್ಲದಿರುವಿಕೆ. ಅವಿಜ್ಞಾನ ಎಂದರೆ. ಭಗವಂತನು ಸರ್ವ ವಿಲಕ್ಷಣ. ಸರ್ವಗುಣಪರಿಪೂರ್ಣ ಸರ್ವದೋಷ ದೂರ ಎಂಬ ಜ್ಞಾನವಿಲ್ಲದಿರುವಿಕೆ. ನಮೋ ನಮಃ ಎನ್ನುವುದರಿಂದ ಭಕ್ತ್ಯತಿಶಯವನ್ನು ತಿಳಿಸಿದಂತೆ ಆಗುತ್ತದೆ.

### ಸಮುದ್ರ ಮಥನ ಕಥಾ ನಿರ್ಣಯ

**ಸ್ವದತ್ತಮಾಲಾಭುವಿಪಾತಕೋಪತೋ**
**ದುರ್ವಾಸಸಃ ಶಾಪತ ಆಶು ಹಿ ಶ್ರಿಯಾ ।**
**ಶಕ್ರೇ ವಿಹೀನೇ ದಿತಿಜೈಃ ಪರಾಜಿತೇ**
**ಪುರಾ ವಯಂ ತ್ವಾಂ ಶರಣಂ ಗತಾಃ ಸ್ಮ ॥ ೪ ॥**

ಪದಚ್ಛೇದ :ಸ್ವದತ್ತಮಾಲಾಭುವಿಪಾತಕೋಪತಃ, ದುರ್ವಾಸಸಃ, ಶಾಪತಃ, ಆಶು, ಹಿ, ಶ್ರಿಯಾ । ಶಕ್ರೇ, ವಿಹೀನೇ, ದಿತಿಜೈಃ, ಪರಾಜಿತೇ, ಪುರಾ, ವಯಮ್, ತ್ವಾಮ್, ಶರಣಮ್, ಗತಾಃ, ಸ್ಮ ।

**ಅರ್ಥ** :- **ಪುರಾ** ಹಿಂದೆ, **ಸ್ವದತ್ತಮಾಲಾಭುವಿಪಾತಕೋಪತಃ** **ಸ್ವ** ತನ್ನಿಂದ (ದುರ್ವಾಸರಿಂದ), **ದತ್ತ** ಕೊಡಲ್ಪಟ್ಟ, **ಮಾಲಾ** ಹೂವಿನ ಹಾರದ, **ಭುವಿಪಾತ** ಭೂಮಿಗೆ ಬೀಳಿಸುವಿಕೆಯಿಂದ (ಉಂಟಾದ), **ಕೋಪತಃ** ಕೋಪದಿಂದ, **ದುರ್ವಾಸಸಃ** ದುರ್ವಾಸರ, **ಶಾಪತಃ** ಶಾಪದಿಂದ, **ಆಶು** ಕೂಡಲೇ, **ಶ್ರಿಯಾ** ಸಂಪತ್ತಿನಿಂದ, **ವಿಹೀನೇ** ರಹಿತನಾದ, **ಶಕ್ರೇ** ದೇವೇಂದ್ರನು, **ದಿತಿಜೈಃ** ದೈತ್ಯರಿಂದ, **ಪರಾಜಿತೇ** ಸೋಲಿಸಲ್ಪಡುತ್ತಿರಲು, **ವಯಂ** ನಾವು (ದೇವತೆಗಳು), **ತ್ವಾಂ** ನಿನ್ನನ್ನು, **ಶರಣಂ** ರಕ್ಷಕನನ್ನಾಗಿ, **ಗತಾಃ ಸ್ಮ** ಹೊಂದಿದ್ದೇವಷ್ಟೆ, **ಹಿ** ಪ್ರಸಿದ್ಧವು.

**ತಾತ್ಪರ್ಯ** :- ಹಿಂದೆ ಲೋಕ ಸಂಚರಿಸುತ್ತಿದ್ದ ದುರ್ವಾಸರು ಒಮ್ಮೆ ವಿದ್ಯಾಧರಿಯ ಕೈಯಲ್ಲಿ ಅದ್ಭುತವಾದ ಮಾಲೆಯನ್ನು ಕಂಡರು. ಆ ಮಾಲೆ ತನಗೆ ಬೇಕೆಂದು ಅವಳಲ್ಲಿ ಬೇಡಿದರು. ಆ ಋಷಿಗಳನ್ನು ನಮಸ್ಕರಿಸಿ, ಅವಳು

ಆ ಮಾಲೆಯನ್ನು ಕೊಟ್ಟಳು. ಐರಾವತದ ಮೇಲೆ ಶಚಿಯೊಂದಿಗೆ ಕುಳಿತು ಬರುತ್ತಿದ್ದ ದೇವೇಂದ್ರನಿಗೆ ದುರ್ವಾಸರು ಆ ಮಾಲೆಯನ್ನು ಕೊಟ್ಟರು. ಐಶ್ವರ್ಯದ ಮದದಿಂದ ದೇವೇಂದ್ರ ಅದನ್ನು ಆನೆಯ ಮೇಲೆ ಹಾಕಿದ. ಮತ್ತೇರಿದ ಆನೆ ಸೊಂಡಿಲಿನಿಂದ ಆ ಮಾಲೆಯನ್ನು ಆಘ್ರಾಣಿಸಿ, ಭೂಮಿ ಯಲ್ಲಿ ಹಾಕಿತು. ಸಿಟ್ಟಿನಿಂದ ದೂರ್ವಾಸರು ಇಂದ್ರನಿಗೆ ಶಾಪವನ್ನಿತ್ತರು. 'ನಾನು ಕೊಟ್ಟ ಮಾಲೆಯನ್ನು ಗೌರವಿಸದೇ, ಅವಮಾನಿಸಿದ ಕಾರಣ ನಿನ್ನ ಮೂರ್ಲೋಕದ ಸಂಪತ್ತು ನಶಿಸಲಿ.' ಎಂದು. ಈ ಶಾಪದಿಂದ ದೇವೇಂದ್ರನ ಸಂಪತ್ತು ನಶಿಸಿತು. ಆಗ ನಾವೆಲ್ಲ ನಿನ್ನನ್ನು ರಕ್ಷಕನನ್ನಾಗಿ ಪ್ರಾರ್ಥನೆ ಮಾಡಿದೆವು ಎಂದು ದೇವತೆಗಳು ಭಗವಂತನಿಗೆ ತಿಳಿದಿರುವ ಹಿಂದಿನ ಕಥೆಯನ್ನೇ ನಿರೂಪಿಸುತ್ತಿದ್ದಾರೆ.

**ತ್ವದಾಜ್ಞಯಾ ಬಲಿನಾ ಸಂದಧಾನಾ**
**ವರಾದ್ ಗಿರೀಶಸ್ಯ ಪರ್ಯೈರಚಾಲ್ಯಮ್ ।**
**ವೃಂದಾರಕಾ ಮಂದರಮೇತ್ಯ ಬಾಹುಭಿರ್ನ**
**ಶೇಕುರುದ್ಧರ್ತುಮಿಮೇ ಸಮೇತಾಃ ॥ ೫ ॥**

ಪದಚ್ಛೇದ :ತ್ವದಾಜ್ಞಯಾ, ಬಲಿನಾ, ಸಂದಧಾನಾಃ, ವರಾತ್, ಗಿರೀಶಸ್ಯ, ಪರ್ಯೈಃ ಅಚಾಲ್ಯಮ್, ವೃಂದಾರಕಾಃ, ಮಂದರಮ್, ಏತ್ಯ, ಬಾಹುಭಿಃ, ನ, ಶೇಕುಃ, ಉದ್ಧರ್ತುಮ್, ಇಮೇ, ಸಮೇತಾಃ ॥

**ಅರ್ಥ** :- **ವೃಂದಾರಕಾಃ** ದೇವತೆಗಳು, **ತ್ವದಾಜ್ಞಯಾ** ನಿನ್ನ (ಪರಮಾತ್ಮನ) ಆಜ್ಞೆಯಿಂದ, **ಬಲಿನಾ** ಬಲಿಯೊಟ್ಟಿಗೆ, **ಸಂದಧಾನಾಃ** ಸಂಧಾನ ಮಾಡಿಕೊಂಡವರಾಗಿ, **ಗಿರೀಶಸ್ಯ** ರುದ್ರದೇವರ, **ವರಾತ್** ವರದಿಂದ, **ಪರ್ಯೈಃ** ಮತ್ತೊಬ್ಬರಿಂದ, **ಅಚಾಲ್ಯಂ** ಅಲ್ಲಾಡಿಸಲು ಅಶಕ್ಯವಾದ, **ಮಂದರಂ** ಮಂದರ ಪರ್ವತವನ್ನು, **ಏತ್ಯ** ಹೊಂದಿ, **ಇಮೇ** ಈ ದೇವತೆಗಳು **ಸಮೇತಾಃ** ಎಲ್ಲರೂ ಸೇರಿದವರಾದರೂ (ಕೂಡ), **ಉದ್ಧರ್ತುಂ** ಎತ್ತಲು, **ನ** **ಶೇಕುಃ** ಸಮರ್ಥರಾಗಲಿಲ್ಲ.

**ತಾತ್ಪರ್ಯ** :- ಈ ಎಲ್ಲಾ ಕಥಾಭಾಗಗಳನ್ನು ದೇವತೆಗಳು ಪರಮಾತ್ಮನಿಗೆ ಹೇಳುವ ರೀತಿಯಲ್ಲಿ ನಿರೂಪಿತವಾಗಿವೆ. ದೇವತೆಗಳು ದೇವೇಂದ್ರನ ಸಂಪತ್ತು ಮರಳಿ ಬರುವ ಉಪಾಯವನ್ನು ಭಗವಂತನ ಹತ್ತಿರ ಪ್ರಶ್ನಿಸಿದಾಗ, ದೈತ್ಯರೊಟ್ಟಿಗೆ

ಸಂಧಾನ ಮಾಡಿಕೊಳ್ಳಬೇಕೆಂದು ಭಗವಂತ ಆಜ್ಞೆ ಮಾಡಿದ. ನಂತರ ಸಮುದ್ರ ಮಥನಕ್ಕಾಗಿ ಮಂದರ ಪರ್ವತವನ್ನು ತರಲು ದೇವತೆಗಳು ದೈತ್ಯರು ಹೊರಟರು. ಆದರೆ, ಮಂದರ ಪರ್ವತಕ್ಕೆ ರುದ್ರದೇವರ ವರವಿದ್ದುದರಿಂದ ಅದನ್ನು ಅಲ್ಲಾಡಿಸಲೂ ಕೂಡ ಆಗುವುದಿಲ್ಲ.

**ತದಾ ತ್ವಯಾ ನಿತ್ಯಬಲತ್ವಹೇತುತೋ ಯೋಽನಂತನಾಮಾ ಗರುಡಸ್ತದಂಸಕೇ ।**
**ಉತ್ಪಾಟ್ಯ ಚೈಕೇನ ಕರೇಣ ಮಂದರೋ ನಿಧಾಪಿತಸ್ತಂ ಸ ಸಹ ತ್ವಯಾಽವಹತ್ ॥ ೬ ॥**

**ಪದಚ್ಛೇದ :**ತದಾ, ತ್ವಯಾ, ನಿತ್ಯಬಲತ್ವಹೇತುತಃ, ಯಃ ಅನಂತನಾಮಾ, ಗರುಡಃ ತದಂಸಕೇ, ಉತ್ಪಾಟ್ಯ, ಚ, ಏಕೇನ, ಕರೇಣ, ಮಂದರಃ ನಿಧಾಪಿತಃ, ತಂ, ಸಃ, ಸಹ, ತ್ವಯಾ, ಅವಹತ್ ॥

**ಅರ್ಥ :-** **ತದಾ** ಆಗ, **ತ್ವಯಾ** ನಿನ್ನಿಂದ, **ನಿತ್ಯಬಲತ್ವಹೇತುತಃ** ನಿತ್ಯವಾದ ಬಲವುಳ್ಳವನಾದುದರಿಂದ, **ಯಃ** ಯಾರು **ಅನಂತನಾಮಾ** ಅನಂತನೆಂದು ಹೆಸರುಳ್ಳ, **ಗರುಡಃ** ಗರುಡನೋ, **ತದಂಸಕೇ** ಅವನ ಹೆಗಲಿನ ಮೇಲೆ, **ಏಕೇನ** ಒಂದು, **ಕರೇಣ** ಕೈಯಿಂದ, **ಉತ್ಪಾಟ್ಯ** ಕಿತ್ತು, **ನಿಧಾಪಿತಃ** ಇರಿಸಲ್ಪಟ್ಟಿತು, **ತಂ** ಆ ಮಂದರ ಪರ್ವತವನ್ನು, **ಸಃ** ಆ ಅನಂತ ನಾಮಕ ಗರುಡನು, **ತ್ವಯಾ ಸಹ** ನಿನ್ನ ಜೊತೆಗೆ, **ಅವಹತ್** ಹೊತ್ತನು.

**ತಾತ್ಪರ್ಯ :-** ಮಂದರ ಪರ್ವತವನ್ನು ಅಲ್ಲಾಡಿಸಲು ಆಗದಿದ್ದಾಗ ದೇವತೆಗಳೆಲ್ಲರೂ ಬ್ರಹ್ಮದೇವರ ಮೂಲಕ ಪರಮಾತ್ಮನ ಪ್ರಾರ್ಥನೆ ಮಾಡುತ್ತಾರೆ. ಆಗ ಭಗವಂತನ ಶೇಷದೇವರಿಂದ ಆ ಪರ್ವತವನ್ನು ಕೀಳಿಸಿ, ಗರುಡನ ಮೇಲಿರಿಸುತ್ತಾನೆ. ಗರುಡನು ಅನಂತ ಎಂಬ ಹೆಸರನ್ನು ಪಡೆದಿದ್ದಾನೆ. ಏಕೆಂದರೆ ಅವನ ಬಲ ನಿತ್ಯವಾದುದು. ಇಂತಹ ಗರುಡನು ಸ್ವಯಂ ಪರ್ವತವನ್ನು ಹೊರಲು ಅಸಮರ್ಥ. ಹೀಗಾಗಿ ಭಗವಂತನೊಟ್ಟಿಗೆ ಗರುಡ ಪರ್ವತವನ್ನು ಹೊರುತ್ತಾನೆ. ಸಮುದ್ರಮಥನ ಎರಡು ಮನ್ವಂತರ ಗಳಲ್ಲಿ ನಡೆದಿದೆ. ರೈವತ ಮನ್ವಂತರದಲ್ಲಿ ಸುಪರ್ಣ ಎಂಬ ಹೆಸರು ಗರುಡನಿಗೆ. ವೈವಸ್ವತ ಮನ್ವಂತರದಲ್ಲಿ 'ಅನಂತ' ಎಂಬ ಹೆಸರು. ಎರಡೂ ಮನ್ವಂತರಗಳಲ್ಲಿ ಮಂದರ ಪರ್ವತ ಹೊರುವವನು ಗರುಡನೇ. ಹೆಸರು ಮಾತ್ರ ಬೇರೆ.

ಪುನಃ ಪರೀಕ್ಷದ್ಭಿರಸೌ ಗಿರಿಃ ಸುರೈಃ
ಸಹಾಸುರೈರುನ್ನಮಿತಸ್ತದಂಸತಃ ।
ವ್ಯಚೂರ್ಣಯತ್ತಾನಖಿಲಾನ್ ಪುನಶ್ಚ ತೇ
ತ್ವದೀಕ್ಷಯಾ ಪೂರ್ವವದುತ್ಥಿತಾಃ ಪ್ರಭೋ ॥ ೭ ॥

ಪದಚ್ಛೇದ :ಪುನಃ, ಪರೀಕ್ಷದ್ಭಿಃ, ಅಸೌ, ಗಿರಿಃ ಸುರೈಃ ಸಹಾಸುರೈಃ ಉನ್ನಮಿತಃ, ತದಂಸತಃ, ವ್ಯಚೂರ್ಣಯತ್, ತಾನ್, ಅಖಿಲಾನ್, ಪುನಃ, ಚ, ತೇ, ತ್ವದೀಕ್ಷಯಾ, ಪೂರ್ವವತ್, ಉತ್ಥಿತಾಃ, ಪ್ರಭೋ ॥

**ಅರ್ಥ** :- **ಪ್ರಭೋ** ಸಮರ್ಥನಾದ ಪರಮಾತ್ಮನೇ **ಪುನಃ** ಮತ್ತೊಮ್ಮೆ, **ಪರೀಕ್ಷದ್ಭಿಃ** ಪರೀಕ್ಷಿಸುತ್ತಿರುವ, **ಸಹಾಸುರೈಃ** ಅಸುರರಿಂದ ಕೂಡಿದ, **ಸುರೈಃ** ದೇವತೆಗಳಿಂದ, **ತದಂಸತಃ** ಆ ಗರುಡನ ಹೆಗಲಿನಿಂದ, **ಉನ್ನಮಿತಃ** ಎಳೆಯಲ್ಪಟ್ಟ , **ಅಸೌ** ಈ, **ಗಿರಿಃ** ಮಂದರಪರ್ವತವು **ತಾನ್ ಅಖಿಲಾನ್** ಎಲ್ಲಾ ದೇವತೆಗಳನ್ನು , **ವ್ಯಚೂರ್ಣಯತ್** ಪುಡಿ ಮಾಡಿತು, **ಚ** ಮತ್ತು, **ಪುನಃ** ಮತ್ತೊಮ್ಮೆ, **ತೇ** ಆ ದೇವತೆಗಳು, **ತ್ವದೀಕ್ಷಯಾ** ನಿನ್ನ ನೋಟದಿಂದ, **ಪೂರ್ವವತ್** ಹಿಂದಿನಂತೆ, **ಉತ್ಥಿತಾಃ** ಎಬ್ಬಿಸಲ್ಪಟ್ಟರು.

**ತಾತ್ಪರ್ಯ** :- ಒಬ್ಬನೇ ಗರುಡ ಮಂದರ ಪರ್ವತವನ್ನು ಹೊರಬಹುದಾದರೇ, ನಾವೇ ಹೊರಬಹುದು. ಪರೀಕ್ಷೆ ಮಾಡೋಣ ಎಂಬ ವಿಚಾರ ದೇವತೆಗಳ ಮತ್ತು ಅಸುರರ ಮನಸ್ಸಿಗೆ ಬಂತು. ಆಗ ಗರುಡನ ಹೆಗಲಿನಿಂದ ಪರ್ವತವನ್ನು ಕೆಳಗಿಳಿಸಲಾಯಿತು. ಪ್ರಯತ್ನಪಡುತ್ತಿರುವ ದೇವಾಸುರರು ಪರ್ವತ ಕೆಳಗೆ ಸಿಕ್ಕಿ ಹಾಕಿಕೊಂಡು ಅಂಗಾಂಗಳನ್ನು ಪುಡಿ ಮಾಡಿಕೊಂಡರು. ಪುನಃ ಭಗವಂತನನ್ನು ಪ್ರಾರ್ಥಿಸಿದಾಗ ತನ್ನ ಕರುಣಾಪೂರ್ಣದೃಷ್ಟಿಯಿಂದ ಹಿಂದಿನಂತೆ ಅವರವರ ಗಾಯಗಳನ್ನು ಪರಿಹಾರ ಮಾಡಿದನು. ಮತ್ತೆ ಮೊದಲಿನಂತೆ ದೇವಾಸುರರು ಎದ್ದು ನಿಂತರು.

ಪುನಶ್ಚ ವಾಮೇನ ಕರೇಣ ವೀಶ್ವರೇ
ನಿಧಾಯ ತಂ ಸ್ಕಂಧಗತಸ್ತ್ವಮಸ್ಯ ।
ಅಗಾಃ ಪಯೋಬ್ಧಿಂ ಸಹಿತಃ ಸುರಾಸುರೈಃ
ಮಥ್ನಾ ಚ ತೇನಾಬ್ಧಿಮಥಾಪ್ಯಮಥ್ನಾಃ ॥ ೮ ॥

ಪದಚ್ಛೇದ :ಪುನಃ, ಚ, ವಾಮೇನ, ಕರೇಣ, ವೀಶ್ವರೇ, ನಿಧಾಯ, ತಂ, ಸ್ಕಂಧಗತಃ, ತ್ವಮ್, ಅಸ್ಯ, ಅಗಾಃ, ಪಯೋಬ್ಧಿಮ್, ಸಹಿತಃ, ಸುರಾಸುರೈಃ, ಮಥ್ನಾ , ಚ, ತೇನ, ಅಬ್ಧಿಮ್, ಅಥ, ಅಪಿ, ಅಮಥ್ನಾಃ ॥

**ಅರ್ಥ** :- **ತ್ವಂ** ನೀನು (ಪರಮಾತ್ಮನು), **ಪುನಃ ಚ** ಮತ್ತೊಮ್ಮೆ, **ವಾಮೇನ ಕರೇಣ** ಎಡಗೈಯಿಂದ, **ತಂ** ಆ ಮಂದರ ಪರ್ವತವನ್ನು , **ವೀಶ್ವರೇ** ಪಕ್ಷಿಗಳಿಗೆ ಒಡೆಯನಾದ ಗರುಡನ ಮೇಲೆ, **ನಿಧಾಯ** ಇರಿಸಿ, **ಅಸ್ಯ** ಈ ಗರುಡನ, **ಸ್ಕಂಧಗತಃ** ಹೆಗಲನ್ನು ಏರಿದವನಾಗಿ, **ಸುರಾಸುರೈಃ** ದೇವತೆಗಳು ಮತ್ತು ಅಸುರರು ಇವರೊಂದಿಗೆ, **ಚ** ಮತ್ತು , **ಮಥ್ನಾ** ಕಡಗೋಲಾದ ಮಂದರ ಪರ್ವತದೊಂದಿಗೆ, **ಸಹಿತಃ** ಕೂಡಿದವನಾಗಿ, **ಪಯೋಬ್ಧಿಮ್** ಕ್ಷೀರಸಮುದ್ರವನ್ನು ಕುರಿತು, **ಅಗಾಃ** ಹೋದವನಾದಿ. **ಅಥ** ಮಂದರ ಪರ್ವತವನ್ನು ಕ್ಷೀರ ಸಮುದ್ರದಲ್ಲಿ ಹಾಕಿದ ನಂತರ, **ಅಬ್ಧಿಮ್** ಸಮುದ್ರವನ್ನು , **ತ್ವಮ್ ಅಪಿ** ನೀನೂ ಕೂಡ, **ಅಮಥ್ನಾಃ** ಮಥನ ಮಾಡಿದೆ.

**ತಾತ್ಪರ್ಯ** :- ದೇವತೆಗಳು ಅಸಮರ್ಥರಾದ ಬಳಿಕ ಕೆಳಗೆ ಬಿದ್ದಿದ್ದ ಮಂದರ ಪರ್ವತವನ್ನು ಮತ್ತೊಮ್ಮೆ ಭಗವಂತ ತನ್ನ ಎಡಕೈಯಿಂದ ಗರುಡನ ಹೆಗಲ ಮೇಲೆ ಇರಿಸಿದ. ತಾನೂ ಕೂಡ ಗರುಡಾರೂಢನಾಗಿ ದೇವಾಸುರರ ಒಡಗೂಡಿ ಕ್ಷೀರ ಸಮುದ್ರಕ್ಕೆ ಬಂದಿದ್ದಾನೆ. ಅಲ್ಲಿ ಪರ್ವತವನ್ನು ಕಡಗೋಲಾಗಿರಿಸಿ ದೇವಾಸುರ ರೊಂದಿಗೆ ತಾನೂ ಕೂಡ ಸಮುದ್ರ ಮಥನವನ್ನು ಮಾಡಿದ.

**ಕೃತಶ್ಚ ಕದ್ರ್ವಾಸ್ತನಯೋಽತ್ರ ವಾಸುಕಿರ್ನೇತ್ರಂ ತ್ವಯಾ ಕಶ್ಯಪಜಃ ಸ ನಾಗರಾಟ್ ।**
**ಮಮಂಥುರಬ್ಧಿಂ ಸಹಿತಾಸ್ತ್ವಯಾ ಸುರಾಃ ಸಹಾಸುರಾ ದಿವ್ಯಪಯೋ ಘೃತಾಧಿಕಮ್ ॥ ೯ ॥**

ಪದಚ್ಛೇದ :ಕೃತಃ, ಚ, ಕದ್ರ್ವಾಃ, ತನಯಃ, ಅತ್ರ, ವಾಸುಕಿಃ , ನೇತ್ರಮ್, ತ್ವಯಾ, ಕಶ್ಯಪಜಃ, ಸಃ, ನಾಗರಾಟ್, ಮಮಂಥುಃ, ಅಬ್ಧಿಮ್, ಸಹಿತಾಃ, ತ್ವಯಾ, ಸುರಾಃ, ಸಹಾಸುರಾಃ, ದಿವ್ಯಪಯಃ, ಘೃತಾಧಿಕಮ್ ॥

**ಅರ್ಥ** :- **ಅತ್ರ** ಈ ಸಮುದ್ರಮಥನ ಕಾರ್ಯದಲ್ಲಿ, **ಕದ್ರ್ವಾಃ** ಕದ್ರೂ ದೇವಿಯ, **ತನಯಃ** ಮಗನಾದ, **ಕಶ್ಯಪಜಃ** ಕಶ್ಯಪ ಋಷಿಗಳಿಂದ ಜನಿಸಿದ, **ಸಃ**

ಪ್ರಸಿದ್ಧನಾದ, **ನಾಗರಾಟ್** ನಾಗಗಳಿಗೆ ಒಡೆಯನಾದ, **ವಾಸುಕಿಃ** ವಾಸುಕಿಯು, **ತ್ವಯಾ** ನಿನ್ನಿಂದ (ಭಗವಂತನಿಂದ), **ನೇತ್ರಂ** ಕಡೆಯುವ ಹಗ್ಗವಾಗಿ, **ಕೃತಃ** ಮಾಡಲ್ಪಟ್ಟನು, **ತ್ವಯಾ** ನಿನ್ನಿಂದ, **ಸಹಿತಾಃ** ಕೂಡಿದ, **ಸಹಾಸುರಾಃ** ಅಸುರರಿಂದ ಸಹಿತರಾದ, **ಸುರಾಃ** ದೇವತೆಗಳು, **ಘೃತಾಧಿಕಂ** ತುಪ್ಪದ ಅಂಶ ಹೆಚ್ಚಾಗಿರುವ, **ದಿವ್ಯಪಯಃ** ದಿವ್ಯವಾದ ಹಾಲಿನಿಂದ ಕೂಡಿದ, **ಅಬ್ಧಿಮ್** ಸಮುದ್ರವನ್ನು, **ಮಮಂಥುಃ** ಕಡೆದರು.

**ತಾತ್ಪರ್ಯ** :- ನಾಗಗಳಿಗೆ ಒಡೆಯ ವಾಸುಕಿ. ಈತ ಕಶ್ಯಪ ಕದ್ರೂದೇವಿಯರ ಮಗ. ಅವನನ್ನು ಹಗ್ಗವನ್ನಾಗಿಸಿ ಅಸುರರೂ ದೇವತೆಗಳೂ ಭಗವಂತನಿಂದ ಕೂಡಿಕೊಂಡು ಸಮುದ್ರ ಮಥನ ಮಾಡಿದರು. ಈ ಸಮುದ್ರದ ಹಾಲು ದಿವ್ಯವಾದುದು ಮತ್ತು ತುಪ್ಪದ ಅಂಶ ಹೆಚ್ಚಾಗಿ ಇರುವಂತಹದ್ದು.

**ನೈಚ್ಛಂತ ಪುಚ್ಛಂ ದಿತಿಜಾ ಅಮಂಗಲಂ**
**ತದಿತ್ಯಥಾಗ್ರಂ ಜಗೃಹುರ್ವಿಷೋಲ್ಬಣಮ್।**
**ಶ್ರಾಂತಾಶ್ಚ ತೇಽತೋ ವಿಬುಧಾಸ್ತು**
**ಪುಚ್ಛಂ ತ್ವಯಾ ಸಮೇತಾ ಜಗೃಹುಸ್ತ್ವದಾಶ್ರಯಾಃ ॥ ೧೦ ॥**

**ಪದಚ್ಛೇದ** :ನ, ಐಚ್ಛಂತ, ಪುಚ್ಛಮ್, ದಿತಿಜಾಃ, ಅಮಂಗಲಂ, ತತ್, ಇತಿ, ಅಥ, ಅಗ್ರಮ್, ಜಗೃಹುಃ, ವಿಷೋಲ್ಬಣಮ್, ಶ್ರಾಂತಾಃ, ಚ, ತೇ, ಅತಃ, ವಿಬುಧಾಃ, ತು, ಪುಚ್ಛಮ್, ತ್ವಯಾ, ಸಮೇತಾಃ, ಜಗೃಹುಃ, ತ್ವದಾಶ್ರಯಾಃ ॥

**ಅರ್ಥ** :- **ದಿತಿಜಾಃ** ದೈತ್ಯರು, **ಪುಚ್ಛಂ** ಬಾಲವು, **ಅಮಂಗಲಂ** ಅಮಂಗಲವು, **ಇತಿ** ಎಂದು, **ತತ್** ಆ ಬಾಲವನ್ನು, **ನ ಐಚ್ಛಂತ** ಬಯಸಲಿಲ್ಲ, **ಅಥ** ಆದುದರಿಂದಲೇ, **ವಿಷೋಲ್ಬಣಂ** ವಿಷದ ತೀವ್ರತೆಯುಳ್ಳ, **ಅಗ್ರಂ** ಹೆಡೆಯ ಭಾಗವನ್ನು, **ಜಗೃಹುಃ** ಹಿಡಿದುಕೊಂಡರು, **ಅತಃ** ಆದುದರಿಂದ, **ತೇ** ಆ ಅಸುರರು, **ಶ್ರಾಂತಾಶ್ಚ** ಬಳಲಿದರೂ ಕೂಡ. **ತ್ವದಾಶ್ರಯಾಃ** ನಿನ್ನನ್ನು ಆಶ್ರಯಿಸಿದ, **ವಿಬುಧಾಃ ತು** ಜ್ಞಾನಿಗಳಾದ ದೇವತೆಗಳಾದರೂ, **ತ್ವಯಾ** ನಿನ್ನಿಂದ, **ಸಮೇತಾಃ** ಸಹಿತರಾಗಿ, **ಪುಚ್ಛಂ** ಬಾಲವನ್ನು, **ಜಗೃಹುಃ** ಹಿಡಿದರು.

**ತಾತ್ಪರ್ಯ** :- ಸಮುದ್ರವನ್ನು ಕಡೆಯುವಾಗ ದೇವತೆಗಳು ಒಂದು ಕಡೆ, ದೈತ್ಯರು ಒಂದು ಕಡೆ ಹಿಡಿದುಕೊಳ್ಳಬೇಕು. ಆದರೆ, ತಾವು ಕಶ್ಯಪನ ವಂಶದವರು, ವೇದಾದಿಪಾರಂಗತರು ಎಂಬ ಅಹಂಕಾರ ದೈತ್ಯರಿಗೆ. ಸರ್ಪಗಳ ಬಾಲ ಅಮಂಗಳ ಎಂದು ಅವರು ಬಾಲದ ಕಡೆ ತಾವು ಹಿಡಿಯುವುದಿಲ್ಲ ಎಂದು ವಿಷಪೂರಿತವಾದ ಹೆಡೆಯ ಭಾಗವನ್ನೇ ಹಿಡಿದರು. ವಾಸುಕಿಯ ವಿಷಾಗ್ನಿಗೆ ತತ್ತರಿಸಿದರು. ಆದರೆ, ಭಗವಂತನನ್ನು ರಕ್ಷಕನೆಂದು ತಿಳಿದ ದೇವತೆಗಳು ಬಾಲದ ಭಾಗ ಹಿಡಿದರು. ಜೊತೆಯಲ್ಲಿ ಪರಮಾತ್ಮನೂ ಇದ್ದ.

**ಅಥಾತಿಭಾರಾದವಿಶತ್ ಸುಕಾಂಚನೋ ಗಿರಿಃ ಸ ಪಾತಾಳಮಥ ತ್ವಮೇವ ।**
**ತಂ ಕಚ್ಛಪಾತ್ಮಾ ತ್ವಭರಃ ಸ್ವಪೃಷ್ಠೇ ಹ್ಯನನ್ಯಧಾರ್ಯಂ ಪುರುಲೀಲಯೈವ ॥ ೧೧ ॥**

**ಪದಚ್ಛೇದ :ಅಥ, ಅತಿಭಾರಾತ್, ಅವಿಶತ್, ಸುಕಾಂಚನಃ, ಗಿರಿಃ, ಸಃ, ಪಾತಾಳಮ್, ಅಥ, ತ್ವಮ್, ಏವ, ತಮ್, ಕಚ್ಛಪಾತ್ಮಾ, ತು, ಅಭರಃ, ಸ್ವಪೃಷ್ಠೇ, ಹಿ, ಅನನ್ಯಧಾರ್ಯಮ್, ಪುರುಲೀಲಯಾ, ಏವ ॥**

**ಅರ್ಥ** :- **ಅಥ** ಅನಂತರ, **ಸಃ** ಆ, **ಸುಕಾಂಚನಃ** ಬಹಳ ಬಂಗಾರದಿಂದ ಕೂಡಿದ, **ಗಿರಿಃ** ಮಂದರ ಪರ್ವತವು, **ಪಾತಾಳಂ** ಪಾತಾಳವನ್ನು, **ಅತಿ ಭಾರಾತ್** ಬಹಳ ಭಾರವಿರುವುದರಿಂದ, **ಅವಿಶತ್** ಪ್ರವೇಶಿಸಿತು, **ಅಥ** ಅನಂತರ, **ಅನನ್ಯಧಾರ್ಯಂ** ಬೇರೆಯವರಿಂದ ಧರಿಸಲು ಅಶಕ್ಯವಾದ, **ತಂ** ಆ ಪರ್ವತವನ್ನು, **ಕಚ್ಛಪಾತ್ಮಾ** ಕೂರ್ಮರೂಪಿಯಾದ, **ತ್ವಮೇವ** ನೀನೇ, **ಸ್ವಪೃಷ್ಠೇ** ನಿನ್ನ ಬೆನ್ನಿನ ಮೇಲೆ, **ಪುರುಲೀಲಯಾ** ಏವ ಪೂರ್ಣವಾದ ಲೀಲೆಯಿಂದಲೇ, **ಅಭರಃ ಹಿ** ಎತ್ತಿದೆಯಷ್ಟೇ.

**ತಾತ್ಪರ್ಯ** :- ಸಮುದ್ರದಲ್ಲಿ ಕಡಗೋಲಾಗಿಸಿದ ಮಂದರ ಪರ್ವತವು ಬಹಳ ಭಾರವಿದ್ದುದರಿಂದ ನೀರಿನಲ್ಲಿ ಮುಳುಗಿ ಪಾತಾಳಕ್ಕೆ ಹೋಯಿತು. ಬಂಗಾರ ಮಯವಾದ ಈ ಪರ್ವತ ಮುಳುಗಿದಾಗ ಅದನ್ನು ಎತ್ತಿ ಧರಿಸಲು ಯಾರಿಗೂ ಸಾಧ್ಯವಾಗದು. ಆಗ ದೇವತೆಗಳ ಪ್ರಾರ್ಥನೆಯಂತೆ ಭಗವಂತನು ಕೂರ್ಮರೂಪಿ ಯಾಗಿ ಅವತರಿಸಿದ. ತನ್ನ ಬೆನ್ನ ಮೇಲೆ ಆ ಪರ್ವತವನ್ನು ಹೊತ್ತು, ಮುಳುಗದಂತೆ ರಕ್ಷಿಸಿದ.

ಉಪರ್ಯಧಶ್ಚಾತ್ಮನಿ ನೇತ್ರಗೋತ್ರಯೋಸ್ತ್ವಯಾ
ಪರೇಣಾವಿಶತಾ ಸಮೇಧಿತಾಃ ।
ಮಮಂಥುರಬ್ಧಿಂ ತರಸಾ ಮದೋತ್ಕಟಾಃ
ಸುರಾಸುರಾಃ ಕ್ಷೋಭಿತನಕ್ರಚಕ್ರಮ್ ॥ ೧೨ ॥

ಪದಚ್ಛೇದ :ಉಪರಿ, ಅಧಃ, ಚ, ಆತ್ಮನಿ, ನೇತ್ರಗೋತ್ರಯೋಃ, ತ್ವಯಾ, ಪರೇಣ, ಆವಿಶತಾ, ಸಮೇಧಿತಾಃ, ಮಮಂಥುಃ, ಅಬ್ಧಿಮ್, ತರಸಾ, ಮದೋತ್ಕಟಾಃ, ಸುರಾಸುರಾಃ, ಕ್ಷೋಭಿತನಕ್ರಚಕ್ರಮ್ ॥

**ಅರ್ಥ** :- **ಉಪರಿ** ಪರ್ವತದ ಮೇಲೆ, **ಅಧಃ** ಪರ್ವತದ ಕೆಳಗೆ, **ಚ** ಮತ್ತು **ನೇತ್ರಗೋತ್ರಯೋಃ** ಹಗ್ಗವಾದ ವಾಸುಕಿ, ಮತ್ತು ಪರ್ವತಗಳ, **ಆತ್ಮನಿ** ಒಳಗೆ, **ಆವಿಶತಾ** ಪ್ರವೇಶಿಸಿದ, **ಪರೇಣ** ಸರ್ವೋತ್ತಮನಾದ, **ತ್ವಯಾ** ನಿನ್ನಿಂದ, **ಸಮೇಧಿತಾಃ** ಶಕ್ತಿವಂತರಾದ, **ಮದೋತ್ಕಟಾಃ** ಉತ್ಸಾಹ ಭರಿತರಾದ, **ಸುರಾಸುರಾಃ** ದೇವತೆಗಳು ಮತ್ತು ದೈತ್ಯರು, **ಅಬ್ಧಿಮ್** ಸಮುದ್ರವನ್ನು **ಕ್ಷೋಭಿತನಕ್ರಚಕ್ರಮ್** ಜಲಚರ ಪ್ರಾಣಿಗಳು ಗಲಿಬಿಲಿ ಗೊಳ್ಳುವಂತೆ, **ತರಸಾ** ವೇಗದಿಂದ, **ಮಮಂಥುಃ** ಕಡೆದರು.

**ತಾತ್ಪರ್ಯ** :- ಸಮುದ್ರಮಥನದ ಸಂದರ್ಭದಲ್ಲಿ ಕೇವಲ ಕೂರ್ಮ ರೂಪದಿಂದ ಮಾತ್ರ ಸಹಾಯ ಮಾಡಿದ್ದಲ್ಲ. ಪರ್ವತ ಮೇಲೆ ಹಾರಿ ಹೋಗದಂತೆ, ಮೇಲೆ ಒಂದು ರೂಪದಿಂದ, ಪರ್ವತ ಸೀಳದಂತೆ ಒಳಗೆ ಒಂದು ರೂಪದಿಂದ, ವಾಸುಕಿಯ ಒಳಗೆ ಒಂದು ರೂಪದಿಂದ ಪ್ರವೇಶಿಸಿದ. ದೇವ-ದೈತ್ಯರ ಒಳಗೂ ಪ್ರವೇಶಿಸಿದ. ಹೀಗಾಗಿ ಅವರು ಶಕ್ತಿವಂತರಾದರು. ಉತ್ಸಾಹ ಭರಿತರಾದರು. ವೇಗದಿಂದ ಸಮುದ್ರ ಮಥನ ಮಾಡಿದರು. ಆಗ ಅಲ್ಲಿರುವ ಎಲ್ಲಾ ಜಲಚರ ಪ್ರಾಣಿಗಳೂ ಕಳವಳಗೊಂಡವು.

### ವಿಷದ ಉತ್ಪತ್ತಿ

ಶ್ರಾಂತೇಷು ತೇಷ್ವೇಕ ಉರುಕ್ರಮ ತ್ವಂ
ಸುಧಾರಸಾಪ್ತ್ಯೈ ಮುದಿತೋಹ್ಯಮಥ್ನಾಃ ।
ತದಾ ಜಗದ್ಗ್ರಾಸಿ ವಿಷಂ ಸಮುತ್ಥಿತಂ
ತ್ವದಾಜ್ಞಯಾ ವಾಯುರಧಾತ್ ಕರೇ ನಿಜೇ ॥ ೧೩ ॥

ಪದಚ್ಛೇದ :ಶ್ರಾಂತೇಷು, ತೇಷು, ಏಕಃ, ಉರುಕ್ರಮ, ತ್ವಂ, ಸುಧಾರಸಾಪ್ತ್ಯೈ, ಮುದಿತಃ, ಹಿ, ಅಮಥ್ನಾಃ । ತದಾ, ಜಗದ್ಗ್ರಾಸಿ, ವಿಷಮ್, ಸಮುತ್ಥಿತಮ್, ತ್ವದಾಜ್ಞಯಾ, ವಾಯುಃ, ಅಧಾತ್, ಕರೇ, ನಿಜೇ ॥

**ಅರ್ಥ** :- **ಉರುಕ್ರಮ** ಹೆಚ್ಚಾದ ವಿಕ್ರಮವುಳ್ಳವನೇ, **ತೇಷು** ಆ ದೇವತೆಗಳು ಮತ್ತು ಅಸುರರು, **ಶ್ರಾಂತೇಷು** ಬಳಲುತ್ತಿರಲು, **ತ್ವಂ** ನೀನು, **ಏಕಃ** ಒಬ್ಬನೇ, **ಸುಧಾರಸಾಪ್ತ್ಯೈ** ಅಮೃತದ ಪ್ರಾಪ್ತಿಗೋಸ್ಕರ, **ಮುದಿತಃ** ಸಂತೋಷ ಗೊಂಡವನಾಗಿ, **ಅಮಥ್ನಾಃ ಹಿ** ಮಥಿಸಿದಿಯಷ್ಟೇ, **ತದಾ** ಆಗ, **ಜಗದ್ಗ್ರಾಸಿ** ಜಗತ್ತನ್ನು ಕಬಳಿಸುವ, **ವಿಷಂ** ವಿಷವು, **ಸಮುತ್ಥಿತಂ** ಆವಿರ್ಭವಿಸಿತು, **ತ್ವದಾಜ್ಞಯಾ** ನಿನ್ನ ಅಪ್ಪಣೆಯಿಂದ, **ವಾಯುಃ** ವಾಯುದೇವರು, **ನಿಜೇ** ತಮ್ಮ **ಕರೇ** ಕೈಯಲ್ಲಿ, **ಅಧಾತ್** ಧಾರಣೆ ಮಾಡಿದರು.

**ತಾತ್ಪರ್ಯ** :- ಸ್ವಲ್ಪ ಸಮಯದಲ್ಲಿಯೇ ದೇವಾಸುರರು ಬಳಲಿದರು. ಆಗ ಪರಮಾತ್ಮ ಒಬ್ಬನೇ ಅಮೃತಪ್ರಾಪ್ತಿಗಾಗಿ ಸಮುದ್ರಮಥನ ಮಾಡಿದ. ಭಗವಂತನ ಪರಾಕ್ರಮ ಅಪರಿಮಿತವಾದುದು. ಆಗ ಜಗತ್ತಿಗೆ ಕಂಟಕವಾದ ವಿಷ ಹುಟ್ಟಿತು. ಆಗ ಭಗವಂತ ವಾಯುದೇವರಿಗೆ ಆಜ್ಞೆ ಮಾಡಿದ. ವಾಯು ದೇವರು ಆ ವಿಷವನ್ನು ತಮ್ಮ ಕೈಯಲ್ಲಿ ಹಿಡಿದರು.

ವಾಯುದೇವರಿಂದ ವಿಷದ ಮಥನ

**ಕಲೇಃ ಸ್ವರೂಪಂ ತದತೀವ ದುಸ್ಸಹಂ**
**ವರಾದ್ ವಿಧಾತುಃ ಸಕಲೈಶ್ಚ ದುಃಸ್ಪೃಶಮ್ ।**
**ಕರೇ ವಿಮಥ್ಯಾಸ್ತಬಲಂ ವಿಧಾಯ ದದೌ**
**ಸ ಕಿಂಚಿತ್ ಗಿರಿಶಾಯ ವಾಯುಃ ॥ ೧೪ ॥**

ಪದಚ್ಛೇದ :ಕಲೇಃ, ಸ್ವರೂಪಮ್, ತತ್, ಅತೀವ, ದುಸ್ಸಹಮ್, ವರಾತ್, ವಿಧಾತುಃ, ಸಕಲೈಃ, ಚ, ದುಃಸ್ಪೃಶಮ್ । ಕರೇ, ವಿಮಥ್ಯ, ಅಸ್ತಬಲಮ್, ವಿಧಾಯ, ದದೌ, ಸಃ, ಕಿಂಚಿತ್, ಗಿರಿಶಾಯ, ವಾಯುಃ ॥

**ಅರ್ಥ** :- **ಸಃ ವಾಯುಃ** ಆ ವಾಯುದೇವರು, **ವಿಧಾತುಃ** ಬ್ರಹ್ಮದೇವರ, **ವರಾತ್** ವರದಿಂದ, **ಅತೀವ** ತುಂಬಾ, **ದುಸ್ಸಹಂ** ಸಹಿಸಲು ಅಸಾಧ್ಯವಾದ, **ಚ** ಮತ್ತು, **ಸಕಲೈಃ** ಎಲ್ಲರಿಂದಲೂ, **ದುಃಸ್ಪೃಶಂ** ಮುಟ್ಟಲು ಅಸಾಧ್ಯವಾದ,

**ಕಲೇಃ** ಕಲಿಯ, **ಸ್ವರೂಪಂ** ಸ್ವರೂಪವಾದ **ತತ್** ಆ ವಿಷವನ್ನು, **ಕರೇ** ಕೈಯಲ್ಲಿ **ವಿಮಥ್ಯ** ಮಥನ ಮಾಡಿ, **ಅಸ್ತಬಲಂ** ಶಕ್ತಿರಹಿತವನ್ನಾಗಿ, **ವಿಧಾಯ** ಮಾಡಿ, **ಕಿಂಚಿತ್** ಸ್ವಲ್ಪ ಭಾಗವನ್ನು **ಗಿರಿಶಾಯ** ರುದ್ರದೇವರಿಗೆ, **ದದೌ** ಕೊಟ್ಟರು.

**ತಾತ್ಪರ್ಯ** :- ಬ್ರಹ್ಮದೇವರ ವರದಿಂದಾಗಿ ಆ ವಿಷವು ಅತ್ಯಂತ ಘೋರವಾಗಿತ್ತು. ಯಾರೂ ಅದನ್ನು ಮುಟ್ಟಲು ಆಗುತ್ತಿರಲಿಲ್ಲ. ಅದು ಕಲಿಸ್ವರೂಪ. ಅಂದರೆ ವಿಷಕ್ಕೆ ಅಭಿಮಾನಿ ಕಲಿ. ಆದುದರಿಂದ ವಿಷವು ಕಲಿಗೆ ಅಧಿಷ್ಠಾನ. ಇಂತಹ ವಿಷವನ್ನು ವಾಯುದೇವರು ಕೈಯಲ್ಲಿ ಹಿಡಿದು ಮಥನ ಮಾಡಿ ಅದರ ಶಕ್ತಿಯನ್ನೆಲ್ಲಾ ಕಳೆದು, ಸ್ವಲ್ಪ ಭಾಗವನ್ನು ರುದ್ರದೇವರಿಗೆ ಕೊಟ್ಟರು. ಇದು 'ವಾಯುರಸ್ಮಾ ಉಪಾಮಂಥತ್ ಪಿನಷ್ಟಿ ಸ್ಮ ಕುನನ್ನಮಾ' ಎಂಬ ವೇದ ಮಂತ್ರದಲ್ಲಿ ಹೇಳಿದ ಕಥೆ.

**ರುದ್ರದೇವರ ಪರಿಸ್ಥಿತಿ**

**ಸ ತತ್ ಪಿಬತ್ ಕಂಠಗತೇನ ತೇನ**
**ನಿಪಾತಿತೋ ಮೂರ್ಛಿತ ಆಶು ರುದ್ರಃ ।**
**ಹರೇಃ ಕರಸ್ಪರ್ಶಬಲಾತ್ ಸ**
**ಸಂಜ್ಞಾಮವಾಪ ನೀಲೋಽಸ್ಯ ಗಳಸ್ತದಾಸೀತ್ ॥ ೧೫ ॥**

**ಪದಚ್ಛೇದ** :ಸಃ, ತತ್, ಪಿಬತ್, ಕಂಠಗತೇನ, ತೇನ, ನಿಪಾತಿತಃ, ಮೂರ್ಛಿತಃ, ಆಶು, ರುದ್ರಃ, ಹರೇಃ, ಕರಸ್ಪರ್ಶಬಲಾತ್, ಸಃ, ಸಂಜ್ಞಾಮ್, ಅವಾಪ, ನೀಲಃ, ಅಸ್ಯ, ಗಳಃ, ತದಾ, ಆಸೀತ್ ॥

**ಅರ್ಥ** :- **ಸಃ** ಆ ರುದ್ರದೇವರು, **ತತ್** ಆ ವಿಷವನ್ನು, **(ಅ)ಪಿಬತ್** ಕುಡಿದರು. **ಕಂಠಗತೇನ** ಕಂಠವನ್ನು ಸೇರಿದ, **ತೇನ** ಆ ವಿಷದಿಂದ, **ರುದ್ರಃ** ರುದ್ರದೇವರು, **ಆಶು** ಕೂಡಲೇ, **ಮೂರ್ಛಿತಃ** ಮೂರ್ಛೆ ಗೊಳಿಸಲ್ಪಟ್ಟವರಾಗಿ, **ನಿಪಾತಿತಃ** ಬೀಳಿಸಲ್ಪಟ್ಟರು, **ಸಃ** ಆ ರುದ್ರದೇವರು, **ಹರೇಃ** ಪರಮಾತ್ಮನ, **ಕರಸ್ಪರ್ಶಬಲಾತ್** ಕೈಯ್ಯಸ್ಪರ್ಶದಿಂದಾಗಿ, **ಸಂಜ್ಞಾಂ** ಎಚ್ಚರವನ್ನು **ಅವಾಪ** ಹೊಂದಿದರು, **ತದಾ** ಆಗ, **ಅಸ್ಯ** ಈ ರುದ್ರದೇವರ, **ಗಳಃ** ಕುತ್ತಿಗೆಯು, **ನೀಲಃ** ಕಪ್ಪು ಬಣ್ಣ ಉಳ್ಳದ್ದು, **ಆಸೀತ್** ಆಯಿತು.

**ತಾತ್ಪರ್ಯ** :- ವಾಯುದೇವರು ತಿಕ್ಕಿ ಶಕ್ತಿಹೀನವನ್ನಾಗಿ ಮಾಡಿಕೊಟ್ಟ ವಿಷವನ್ನು ರುದ್ರದೇವರು ಕುಡಿದರು. ಕೂಡಲೇ ಮೂರ್ಛೆಗೊಂಡು ಕೆಳಗೆ ಬಿದ್ದರು. ಆಗ ಭಗವಂತ ತನ್ನ ಕೈ ಸ್ಪರ್ಶದಿಂದ ಎಚ್ಚರಗೊಳಿಸಿದ. ಆ ಸಂದರ್ಭದಿಂದ ರುದ್ರದೇವರ ಕಂಠ ಕಪ್ಪಾಗಿ ಹೋಯಿತು.

**ವಾಯುದೇವರಿಂದ ವಿಷಪಾನ**

**ಅಥ ತ್ವದಾಜ್ಞಾಂ ಪುರತೋ ನಿಧಾಯ**
**ನಿಧಾಯ ಪಾತ್ರೇ ತಪನೀಯರೂಪೇ ।**
**ಸ್ವಯಂ ಚ ನಿರ್ಮಥ್ಯ ಬಲೋಪಪನ್ನಂ**
**ಪಪೌ ಸ ವಾಯುಸ್ತದು ಚಾಸ್ಯ ಜೀರ್ಣಮ್ ॥ ೧೬ ॥**

**ಪದಚ್ಛೇದ** :**ಅಥ, ತ್ವದಾಜ್ಞಾಮ್, ಪುರತಃ, ನಿಧಾಯ, ನಿಧಾಯ, ಪಾತ್ರೇ, ತಪನೀಯರೂಪೇ, ಸ್ವಯಂ ಚ, ನಿರ್ಮಥ್ಯ, ಬಲೋಪಪನ್ನಮ್, ಪಪೌ, ಸಃ, ವಾಯುಃ, ತತ್, ಉ, ಚ, ಅಸ್ಯ, ಜೀರ್ಣಮ್ ।**

**ಅರ್ಥ** :- **ಅಥ** ಅನಂತರ, **ತ್ವದಾಜ್ಞಾಂ** ಭಗವಂತನಾದ ನಿನ್ನ ಆಜ್ಞೆಯನ್ನು, **ಪುರತಃ ನಿಧಾಯ** ಪುರಸ್ಕರಿಸಿ, **ತತ್** ಆ ವಿಷವನ್ನು, **ತಪನೀಯ ರೂಪೇ** ಬಂಗಾರಮಯವಾದ, **ಪಾತ್ರೇ** ಪಾತ್ರೆಯಲ್ಲಿ **ನಿಧಾಯ** ಇರಿಸಿ, **ಬಲೋಪಪನ್ನಂ ಚ** ಹೆಚ್ಚಿನ ಶಕ್ತಿಯಿಂದ ಕೂಡಿದ್ದರೂ, **ಸ್ವಯಂ** ತಾವೇ, **ನಿರ್ಮಥ್ಯ** ಮಥಿಸಿ, **ಸಃ ವಾಯುಃ** ಆ ವಾಯುದೇವರು, **ಪಪೌ** ಕುಡಿದರು, **ಅಸ್ಯ** ಈ ವಾಯುದೇವರಿಗೆ, **ತತ್** ವಿಷವು, **ಜೀರ್ಣಂ** ಜೀರ್ಣವು, **ಅಭೂತ್** ಆಯಿತು, **ಉ** ಆಶ್ಚರ್ಯವು.

**ತಾತ್ಪರ್ಯ** :- ಭಗವಂತನ ಆಜ್ಞೆಯನ್ನು ಶಿರಸಾವಹಿಸಿದ ವಾಯು ದೇವರು ಬಂಗಾರದ ಪಾತ್ರೆಯಲ್ಲಿ ಆ ವಿಷವನ್ನಿರಿಸಿ, ತಾವೇ ಮಥಿಸಿ ಅತ್ಯಂತ ಶಕ್ತಿಯುತವಾದ ವಿಷವನ್ನು ಕುಡಿದರು. ಆಗ ಆ ವಿಷವು ವಾಯುದೇವರಿಗೆ ಜೀರ್ಣ ಆಯಿತು. ಇದು ಆಶ್ಚರ್ಯ.

**ರುದ್ರದೇವರಿಗೆ ತಲೆನೋವು**

**ಅತ್ಯಲ್ಪ ಪಾನಾಚ್ಚ ಬಭೂವ ಶೂಲಾ**
**ಶಿವಸ್ಯ ಶೀರ್ಷ್ಣಶ್ಚ ಕರಾವಶಿಷ್ಟಮ್ ।**

ಅಭೂತ್ ಕಲಿಃ ಸರ್ವಜಗತ್ಸು ಪೂರ್ಣಂ
ಪೀತ್ವಾ ವಿಕಾರೋ ನ ಬಭೂವ ವಾಯೋಃ ॥ ೧೭ ॥

ಪದಚ್ಛೇದ :ಅತ್ಯಲ್ಪಪಾನಾತ್, ಚ, ಬಭೂವ, ಶೂಲಾ, ಶಿವಸ್ಯ, ಶೀರ್ಷ್ಣಃ, ಚ, ಕರಾವಶಿಷ್ಟಮ್, ಅಭೂತ್, ಕಲಿಃ, ಸರ್ವಜಗತ್ಸು, ಪೂರ್ಣಮ್, ಪೀತ್ವಾ ವಿಕಾರಃ, ನ, ಬಭೂವ, ವಾಯೋಃ ॥

**ಅರ್ಥ** :- **ಶಿವಸ್ಯ** ರುದ್ರದೇವರಿಗೆ, **ಅತ್ಯಲ್ಪಪಾನಾಚ್ಚ** ಸ್ವಲ್ಪ ವಿಷವನ್ನು ಕುಡಿದುದರಿಂದಲೇ, **ಶೀರ್ಷ್ಣಃ** ತಲೆಯ, **ಶೂಲಾ** ನೋವು, **ಬಭೂವ** ಉಂಟಾಯಿತು, **ಕರಾವಶಿಷ್ಟಂ** ರುದ್ರದೇವರ ಕೈಯಲ್ಲಿ ಉಳಿದ ವಿಷವು, **ಕಲಿಃ** ಕಲಿಯಿಂದ ಅಭಿಮಾನ್ಯಮಾನವಾದುದು, **ಬಭೂವ** ಆಯಿತು, **ಸರ್ವಜಗತ್ಸು** ಎಲ್ಲಾ ಪ್ರಪಂಚದಲ್ಲಿ **ಪೂರ್ಣಂ** ಹರಡಿತು, **ವಾಯೋಃ** ವಾಯುದೇವರಿಗೆ, **ಪೂರ್ಣಂ** ಪರಿಪೂರ್ಣವಿಷವನ್ನು, **ಪೀತ್ವಾ** ಕುಡಿದು, **ವಿಕಾರಃ** (ಯಾವುದೇ) ವಿಕಾರವು, **ನ ಬಭೂವ** ಆಗಲಿಲ್ಲ.

**ತಾತ್ಪರ್ಯ** :- ರುದ್ರದೇವರು ವಿಷವನ್ನು ಕುಡಿದಾಗ ನೀಲಕಂಠ ರಾದುದು ಮಾತ್ರವಲ್ಲ, ವಿಪರೀತ ತಲೆನೋವು ಉಂಟಾಯಿತು. ಅವರು ಕುಡಿದದ್ದು ಸ್ವಲ್ಪವೇ. ಅಷ್ಟಕ್ಕೆ ಇಷ್ಟೆಲ್ಲ ತೊಂದರೆ. ಅವರ ಕೈಯಲ್ಲಿ ಉಳಿದ ವಿಷ ಅದು ಕಲಿಯ ವಾಸಸ್ಥಳವಾಯಿತು. ಇದೇ ಲೋಕದಲ್ಲಿ ಹರಡಿತು. ಆದರೆ ವಾಯುದೇವರು ಅಷ್ಟೂ ವಿಷವನ್ನು ಕುಡಿದರೂ ಯಾವ ತೊಂದರೆಯೂ ಆಗಲಿಲ್ಲ.

### ವಿಷದಿಂದ ಕ್ರೂರ ಪ್ರಾಣಿಗಳ ಉತ್ಪತ್ತಿ

ಕಲೇಃ ಶರೀರಾದ್ ಅಭವನ್ ಕುನಾಗಾಃ
ಸವೃಶ್ಚಿಕಾಃ ಶ್ವಾಪದ ಯಾತುಧಾನಾಃ ।
ಅಥ ತ್ವಯಾಬ್ಧೌ ತು ವಿಮಥ್ಯಮಾನೇ
ಸುರಾऽಭವತ್ ತಾಮಸುರಾ ಅವಾಪುಃ ॥ ೧೮ ॥

ಪದಚ್ಛೇದ :ಕಲೇಃ, ಶರೀರಾತ್, ಅಭವನ್, ಕುನಾಗಾಃ, ಸವೃಶ್ಚಿಕಾಃ ಶ್ವಾಪದಯಾ ತುಧಾನಾಃ, ಅಥ, ತ್ವಯಾ, ಅಬ್ಧೌ ತು, ವಿಮಥ್ಯಮಾನೇ, ಸುರಾ, ಅಭವತ್, ತಾಮ್, ಅಸುರಾಃ, ಅವಾಪುಃ.

**ಅರ್ಥ** :- **ಕಲೇಃ** ಕಲಿಯ, **ಶರೀರಾತ್** ಶರೀರದಂತಿರುವ ವಿಷದಿಂದ, **ಸವೃಶ್ಚಿಕಾಃ** ಚೇಳುಗಳಿಂದ ಸಹಿತವಾದ, **ಕುನಾಗಾಃ** ಕೆಟ್ಟ ಸರ್ಪಗಳು, **ಶ್ವಾಪದಯಾತುಧಾನಾಃ** ಹುಲಿಯೇ ಮೊದಲಾದ ನಾಲ್ಕು ಕಾಲಿನ ಹಿಂಸ್ರ ಪ್ರಾಣಿಗಳು ಮತ್ತು ಎರಡು ಕಾಲಿನ ಹಿಂಸ್ರ ಪ್ರಾಣಿಗಳಾದ ರಾಕ್ಷಸರು, **ಅಭವನ್** ಹುಟ್ಟಿದರು, **ಅಥ** ವಿಷದ ಉತ್ಪತ್ತಿಯ ಅನಂತರ, **ತ್ವಯಾ** ನಿನ್ನಿಂದ, **ಅಬ್ಧೌ** ಸಮುದ್ರವು, **ವಿಮಥ್ಯಮಾನೇ ತು** ಮಥಿಸಲ್ಪಡುತ್ತಿರಲು, **ಸುರಾ** ಮದ್ಯವು, **ಅಭವತ್** ಹುಟ್ಟಿತು, **ತಾಂ** ಆ ಮದ್ಯವನ್ನು **ಅಸುರಾಃ** ದೈತ್ಯರು, **ಅವಾಪುಃ** ಪಡೆದರು.

**ತಾತ್ಪರ್ಯ** :- ಕಲಿಯ ಶರೀರವಾದ ಈ ವಿಷದಿಂದ ಬಾಲದಲ್ಲಿ ವಿಷ ಇರುವ ಚೇಳು ಮೊದಲಾದವುಗಳು, ಮುಖದಲ್ಲಿ ವಿಷವಿರುವ ಹಾವು ಮೊದಲಾದವುಗಳು, ನಾಲ್ಕು ಕಾಲಿನ ಕ್ರೂರ ಪ್ರಾಣಿಗಳಾದ ಹುಲಿ, ಸಿಂಹ, ಮುಂತಾದವುಗಳು ಮತ್ತು ಎರಡು ಕಾಲಿನ ಕ್ರೂರಿಗಳಾದ ರಾಕ್ಷಸರೇ ಮೊದಲಾದವರು ಹುಟ್ಟಿದರು. ನಂತರ ಹುಟ್ಟಿದ್ದು ಮದ್ಯ. ಅದನ್ನು ದೈತ್ಯರು ಬಯಸಿ ಪಡೆದರು.

### ಉಚ್ಚೈಃಶ್ರವಾದಿಗಳ ಉತ್ಪತ್ತಿ

**ಉಚ್ಚೈಃಶ್ರವಾ ನಾಮ ತುರಂಗಮೋऽಥ ಕರೀ ತಥೈರಾವತನಾಮಧೇಯಃ ।**
**ಅನ್ಯೇ ಚ ದಿಕ್ಪಾಲಗಜಾ ಬಭೂವುರ್ವರಂ ತಥೈವಾಪ್ಸರಸಾಂ ಸಹಸ್ರಮ್**
**॥ ೧೯ ॥**

ಪದಚ್ಛೇದ :ಉಚ್ಚೈಃಶ್ರವಾಃ, ನಾಮ, ತುರಂಗಮಃ, ಅಥ, ಕರೀ, ತಥಾ, ಐರಾವತ ನಾಮಧೇಯಃ, ಅನ್ಯೇ, ಚ, ದಿಕ್ಪಾಲಗಜಾಃ, ಬಭೂವುಃ, ವರಮ್, ತಥಾ, ಏವ, ಅಪ್ಸರಸಾಮ್, ಸಹಸ್ರಮ್ ॥

**ಅರ್ಥ** :- **ಅಥ** ಸುರೆಯ ಉತ್ಪತ್ತ್ಯನಂತರ, **ಉಚ್ಚೈಃಶ್ರವಾಃ ನಾಮ** ಉಚ್ಚೈಃ ಶ್ರವ ಎಂದು ಹೆಸರುಳ್ಳ, **ತುರಂಗಮಃ** ಕುದುರೆಯು, **ತಥಾ** ಹಾಗೆಯೇ, **ಐರಾವತ ನಾಮಧೇಯಃ** ಐರಾವತ ಎಂಬ ಹೆಸರಿನ, **ಕರೀ** ಆನೆಯು, **ಚ** ಮತ್ತು, **ಅನ್ಯೇ** ಬೇರೆ, **ದಿಕ್ಪಾಲಗಜಾಃ** ದಿಕ್ಪಾಲಕರಾದ, ಅಗ್ನಿಮೊದಲಾದವರ ಆನೆಗಳು, **ಬಭೂವುಃ** ಹುಟ್ಟಿದವು, **ತಥೈವ** ಹಾಗೆಯೇ,

ವರಂ ಶ್ರೇಷ್ಠವಾದ, **ಅಪ್ಸರಸಾಂ ಸಹಸ್ರಂ** ಸಾವಿರ ಅಪ್ಸರ ಸ್ತ್ರೀಯರ ಗುಂಪು, **ಬಭೂವ** ಹುಟ್ಟಿತು.

**ತಾತ್ಪರ್ಯ** :- ಮದ್ಯ ಹುಟ್ಟಿದ ಅನಂತರ ಉಚ್ಚೈಃಶ್ರವ ಎಂಬ ಕುದುರೆ ಹುಟ್ಟಿತು. ಇದನ್ನು ಬಲಿ ಬಯಸಿದ. ಆದರೆ ಸಿಗಲಿಲ್ಲ. ಭಗವಂತನ ಎಚ್ಚರಿಕೆಯಂತೆ ದೇವೇಂದ್ರ ಬಯಸಲಿಲ್ಲ. ಆದರೂ ಅವನಿಗೆ ಸಿಕ್ಕಿತು. ನಂತರ ಐರಾವತ ಎಂಬ ಆನೆ ಮತ್ತು ಉಳಿದ ದಿಕ್ಪಾಲಕರ ಆನೆಗಳು ಹುಟ್ಟಿದವು. ಇವುಗಳ ಹೆಸರು ಕ್ರಮವಾಗಿ ಪುಂಡರೀಕ, ವಾಮನ, ಕುಮುದ, ಅಂಜನ, ಪುಷ್ಪದಂತ, ಸಾರ್ವಭೌಮ, ಸುಪ್ರತೀಕ ಎಂದು. ಇವುಗಳನ್ನು ಆಯಾ ದಿಕ್ಪಾಲಕರು ಪಡೆದರು. ನಂತರ ಸಾವಿರ ಮಂದಿಯ ಶ್ರೇಷ್ಠವಾದ ಅಪ್ಸರಸ್ತ್ರೀಯರ ಗಣ ಹುಟ್ಟಿತು. ಇವರು ದೇವತೆಗಳ ಸಂಪತ್ತು.

### ಪಾರಿಜಾತಾದಿ ಸೃಷ್ಟಿ

**ತಥಾಯುಧಾನ್ಯಾಭರಣಾನಿ ಚೈವ**
**ದಿವೌಕಸಾಂ ಪಾರಿಜಾತಸ್ತರುಶ್ಚ ।**
**ತಥೈವ ಸಾಕ್ಷಾತ್ ಸುರಭಿರ್ನಿಶೇಶೋ**
**ಬಭೂವ ತತ್ ಕೌಸ್ತುಭಂ ಲೋಕಸಾರಮ್ ॥ ೨೦ ॥**

**ಪದಚ್ಛೇದ** :ತಥಾ, ಆಯುಧಾನಿ, ಆಭರಣಾನಿ, ಚ, ಏವ, ದಿವೌಕಸಾಮ್, ಪಾರಿಜಾತಃ, ತರುಃ, ಚ, ತಥಾ, ಏವ, ಸಾಕ್ಷಾತ್, ಸುರಭಿಃ, ನಿಶೇಶಃ, ಬಭೂವ, ತತ್, ಕೌಸ್ತುಭಮ್, ಲೋಕಸಾರಮ್ ॥

**ಅರ್ಥ** :- **ತಥಾ** ಹಾಗೆಯೇ, **ದಿವೌಕಸಾಂ ಏವ** ದೇವತೆಗಳಿಗೆ ಮಾತ್ರ ಸಂಬಂಧಿಸಿದ, **ಆಯುಧಾನಿ** ಆಯುಧಗಳು, **ಚ** ಮತ್ತು, **ಆಭರಣಾನಿ** ಆಭರಣಗಳು, **ಚ** ಮತ್ತು, **ಪಾರಿಜಾತಃ ತರುಃ** ಪಾರಿಜಾತ ವೃಕ್ಷವು, **ತಥೈವ** ಹಾಗೆಯೇ, **ಸಾಕ್ಷಾತ್** ಸಾಕ್ಷಾತ್ತಾಗಿ, **ಸುರಭಿಃ** ಕಾಮಧೇನುವು, **ನಿಶೇಶಃ** ಚಂದ್ರನು, **ಬಭೂವ** ಹುಟ್ಟಿದನು, **ಲೋಕಸಾರಂ** ಲೋಕದಲ್ಲಿ ಶ್ರೇಷ್ಠವಾದ, **ತತ್** ಪ್ರಸಿದ್ಧವಾದ, **ಕೌಸ್ತುಭಂ** ಕೌಸ್ತುಭ ಮಣಿಯು, **ಬಭೂವ** ಹುಟ್ಟಿತು.

**ತಾತ್ಪರ್ಯ** :- ನಂತರ ಹುಟ್ಟಿದ್ದು ದೇವತೆಗಳ ಆಭರಣ, ಆಯುಧಗಳು, ಸ್ವರ್ಗದ ವೃಕ್ಷವಾದ ಪಾರಿಜಾತ, ಕಾಮಧೇನು ಚಂದ್ರ ಮತ್ತು ಸರ್ವಶ್ರೇಷ್ಠವಾದ

ಕೌಸ್ತುಭ ಮಣಿ. ಹಿಂದೆ ಐರಾವತದ ಮೇಲೆ ಕುಳಿತ ಇಂದ್ರ ಅಹಂಕಾರದಿಂದ ದುರ್ವಾಸರಿಗೆ ಅವಮಾನ ಮಾಡಿದ್ದರಿಂದ ವೈಭವ ಕಳೆದುಕೊಂಡ ನಂತರ ಮತ್ತೆ ಸಂಪತ್ತನ್ನು ಪಡೆಯಲು ಈ ಸಮುದ್ರಮಥನ ನಡೆಯುತ್ತಿದೆ. ಹೀಗಿರುವಾಗ ಐರಾವತ, ಆಯುಧ ಮುಂತಾದವು ಹುಟ್ಟಿದವು ಎಂದು ಹೇಳುವುದು ಹೇಗೆ? ಎಂಬ ಪ್ರಶ್ನೆ ಬರಬಹುದು. ಆದರೆ, ಇಲ್ಲಿ ಹುಟ್ಟಿದವು ಎಂದರೆ ಇಲ್ಲದೇ ಇದ್ದದ್ದು ಈಗ ಹುಟ್ಟಿತು ಎಂದರ್ಥವಲ್ಲ ಹೊರತು ಇದ್ದದ್ದೆ ಮತ್ತೊಂದು ರೂಪದಿಂದ ಆವಿರ್ಭವಿಸಿತು ಎಂದು ಅಭಿಪ್ರಾಯ. ಆದುದರಿಂದ ಯಾವುದೇ ವಿರೋಧವಿಲ್ಲ.

### ಲಕ್ಷ್ಮೀಪ್ರಾದುರ್ಭಾವ, ಧನ್ವಂತರಿ ಅವತಾರ

**ಅಥೇಂದಿರಾ ಯದ್ಯಪಿ ನಿತ್ಯದೇಹಾ ಬಭೂವ ತತ್ರಾಪರಯಾ ಸ್ವತನ್ವಾ ।**
**ತತೋ ಭವಾನ್ ದಕ್ಷಿಣಬಾಹುನಾ ಸುಧಾಕಮಂಡಲುಂ ಕಲಶಂ ಚಾಪರೇಣ ।**
**ಪ್ರಗೃಹ್ಯ ತಸ್ಮಾನ್ನಿರಗಾತ್ ಸಮುದ್ರಾದ್ ಧನ್ವಂತರಿರ್ನಾಮ ಹರಿನ್ಮಣಿದ್ಯುತಿಃ**
**॥ ೨೧ ॥**

ಪದಚ್ಛೇದ :ಅಥ, ಇಂದಿರಾ, ಯದಿ, ಅಪಿ, ನಿತ್ಯದೇಹಾ, ಬಭೂವ, ತತ್ರ, ಅಪರಯಾ, ಸ್ವತನ್ವಾ ತತಃ, ಭವಾನ್, ದಕ್ಷಿಣ ಬಾಹುನಾ, ಸುಧಾಕಮಂಡಲುಮ್, ಕಲಶಮ್, ಚ, ಅಪರೇಣ, ಪ್ರಗೃಹ್ಯ, ತಸ್ಮಾತ್, ನಿರಗಾತ್, ಸಮುದ್ರಾತ್, ಧನ್ವಂತರಿಃ, ನಾಮ, ಹರಿನ್ಮಣಿದ್ಯುತಿಃ ॥

ಅರ್ಥ :- **ಅಥ** ಅನಂತರ, **ಇಂದಿರಾ** ಮಹಾಲಕ್ಷ್ಮಿಯು, **ಯದ್ಯಪಿ** ನಿಜವಾಗಿಯೂ, **ನಿತ್ಯದೇಹಾ** ನಿತ್ಯವಾದ ಶರೀರವುಳ್ಳವಳು, **ತಥಾಪಿ** ಹಾಗಿದ್ದರೂ, **ಅಪರಯಾ** ಬೇರೆಯದ್ದಾದ, **ಸ್ವತನ್ವಾ** ಸ್ವರೂಪ ದೇಹ ದಿಂದ, **ತತ್ರ** ಆ ಸಮುದ್ರದಲ್ಲಿ, **ಬಭೂವ** ಆವಿರ್ಭವಿಸಿದಳು, **ತತಃ** ಅನಂತರ, **ದಕ್ಷಿಣಬಾಹುನಾ** ಬಲಗೈಯಿಂದ, **ಸುಧಾಕಮಂಡಲುಂ** ಅಮೃತ ಬಡಿಸುವ ಕಮಂಡಲುವನ್ನು **ಚ** ಮತ್ತು, **ಅಪರೇಣ** ಎಡಗೈಯಿಂದ, **ಕಲಶಂ** ಅಮೃತದಿಂದ ತುಂಬಿದ ಕಲಶವನ್ನು, **ಪ್ರಗೃಹ್ಯ** ಹಿಡಿದುಕೊಂಡು, **ಹರಿನ್ಮಣಿದ್ಯುತಿಃ** ಇಂದ್ರ ನೀಲ ಮಣಿಯಂತೆ ನೀಲ ಕಾಂತಿಯುಳ್ಳ, **ಭವಾನ್** ನೀನು, **ಧನ್ವಂತರಿಃ ನಾಮ** ಧನ್ವಂತರಿ ಎಂದು ಹೆಸರುಳ್ಳವನಾಗಿ, **ತಸ್ಮಾತ್** ಆ, **ಸಮುದ್ರಾತ್** ಸಮುದ್ರದಿಂದ, **ನಿರಗಾತ್** ಅವತರಿಸಿದನು.

**ತಾತ್ಪರ್ಯ** :- ಯದ್ಯಪಿ ಮಹಾಲಕ್ಷ್ಮಿಯ ದೇಹ ನಾಶವಾಗುವುದಿಲ್ಲ, ಹಾಗಿದ್ದರೂ ಅವಳು ತನ್ನ ಸ್ವರೂಪ ದೇಹದಿಂದಲೇ ಈಗ ಸಮುದ್ರದಲ್ಲಿ ಅವತರಿಸಿದ್ದಾಳೆ. ನಂತರ ಭಗವಂತ ಧನ್ವಂತರಿ ರೂಪದಿಂದ ಅವತರಿಸಿದ. ಇವನು ಇಂದ್ರನೀಲಮಣಿಯಂತೆ ನೀಲ ಕಾಂತಿಯುಳ್ಳವನು. ಬಲಗೈಯಲ್ಲಿ ಅಮೃತ ಬಡಿಸುವ ಪಾತ್ರೆ ಕಮಂಡಲು ಮತ್ತು ಎಡಗೈಯಲ್ಲಿ ಅಮೃತ ತುಂಬಿದ ಕಲಶವನ್ನು ಹಿಡಿದು ದೇವಾಸುರರ ಎದುರಿಗೆ ಕಾಣಿಸಿಕೊಂಡ.

**ತತೋ ಭವದ್ಧಸ್ತಗತಂ ದಿತೇಃ ಸುತಾಃ**
**ಸುಧಾಭರಂ ಕಲಶಂ ಚಾಪಜಹ್ರುಃ ।**
**ಮುಕ್ತಂ ತ್ವಯಾ ಶಕ್ತಿಮತಾಪಿ ದೈತ್ಯಾನ್**
**ಸತ್ಯಚ್ಯುತಾನ್ ಕಾರಯತಾ ವಧಾಯ ॥ ೨೨ ॥**

**ಪದಚ್ಛೇದ** :ತತಃ, ಭವದ್ಧಸ್ತ ಗತಮ್, ದಿತೇಃ, ಸುತಾಃ, ಸುಧಾಭರಮ್, ಕಲಶಮ್, ಚ, ಅಪಜಹ್ರುಃ, ಮುಕ್ತಮ್, ತ್ವಯಾ, ಶಕ್ತಿಮತಾ, ಅಪಿ, ದೈತ್ಯಾನ್, ಸತ್ಯಚ್ಯುತಾನ್, ಕಾರಯತಾ, ವಧಾಯ ॥

**ಅರ್ಥ** :- **ದಿತೇಃ** ದಿತಿಯ, **ಸುತಾಃ** ಮಕ್ಕಳಾದ ದೈತ್ಯರು, **ತತಃ** ಅನಂತರ, **ಭವದ್ಧಸ್ತಗತಂ** ನಿನ್ನ ಕೈಯಲ್ಲಿರುವ, **ಸುಧಾಭರಂ** ಅಮೃತದಿಂದ ತುಂಬಿರುವ, **ಕಲಶಂ** ಕಲಶವನ್ನು, **ಅಪಜಹ್ರುಃ** ಅಪಹರಿಸಿದರು, **ದೈತ್ಯಾನ್** ದೈತ್ಯರನ್ನು, **ಸತ್ಯಚ್ಯುತಾನ್** ಸತ್ಯಮಾರ್ಗದಿಂದ ತಪ್ಪಿದವರನ್ನಾಗಿ, **ಕಾರಯತಾ** ಮಾಡಿಸುತ್ತಿರುವ, **ವಧಾಯ** ಅಸುರರ ವಧೆಗೆ, **ಶಕ್ತಿಮತಾ ಅಪಿ** ಶಕ್ತಿಯುಳ್ಳವನಾದರೂ ಕೂಡ, **ತ್ವಯಾ** ನಿನ್ನಿಂದ, **ಮುಕ್ತಂ ಚ** ಬಿಡಲ್ಪಟ್ಟಿತೂ ಕೂಡ.

**ತಾತ್ಪರ್ಯ** :- ಅಮೃತ ಕಲಶವನ್ನು ನೋಡಿದ ಕೂಡಲೇ ಭಗವಂತನ ಕೈಯಲ್ಲಿರುವ ಕಲಶವನ್ನು ಕಿತ್ತುಕೊಂಡರು. ಅವರನ್ನು ತಡೆದು ಸಂಹಾರ ಮಾಡುವ ಶಕ್ತಿ ಭಗವಂತನಿಗೆ ಇದೆ. ಹಾಗಿದ್ದರೂ, ಆ ದೈತ್ಯರನ್ನು ಸತ್ಯಮಾರ್ಗದಿಂದ ಚ್ಯುತರನ್ನಾಗಿ ಮಾಡಲು ಪ್ರತಿರೋಧವನ್ನು ಮಾಡದೇ ಬಿಟ್ಟುಬಿಟ್ಟ

ಮೋಹಿನೀ ರೂಪದ ಉತ್ಪತ್ತಿ

ತತೋ ಭವಾನನುಪಮಮುತ್ತಮಂ ವಪುರ್ಬ-
ಭೂವ ದಿವ್ಯ ಪ್ರಮದಾತ್ಮಕಂ ತ್ವರನ್ ।
ಶ್ಯಾಮಂ ನಿತಂಬಾರ್ಪಿತರತ್ನಮೇಖಲಂ
ಜಾಂಬೂನದಾಭಾಂಬರಭೃತ್ ಸುಮಧ್ಯಮಮ್ ।
ಬೃಹನ್ನಿತಂಬಂ ಕಲಶೋಪಮಸ್ತನಂ
ಸತ್ಪುಂಡರೀಕಾಯತನೇತ್ರಮುಜ್ವಲಮ್ ॥ ೨೩ ॥

ಪದಚ್ಛೇದ :ತತಃ, ಭವಾನ್, ಅನುಪಮಮ್, ಉತ್ತಮಮ್, ವಪುಃ, ಬಭೂವ, ದಿವ್ಯ ಪ್ರಮದಾತ್ಮಕಮ್, ತ್ವರನ್, ಶ್ಯಾಮಮ್, ನಿತಂಬಾರ್ಪಿತರತ್ನಮೇಖಲಮ್, ಜಾಂಬೂನದಾಭಾಂಬರಭೃತ್, ಸುಮಧ್ಯಮಮ್, ಬೃಹನ್ನಿತಂಬಮ್, ಕಲಶೋಪಮಸ್ತನಮ್, ಸತ್ಪುಂಡರೀಕಾಯತನೇತ್ರಮ್, ಉಜ್ಜ್ವಲಮ್ ।

**ಅರ್ಥ** :- **ತತಃ** ಅನಂತರ, **ತ್ವರನ್** ದೇವತೆಗಳ ಕಾರ್ಯದಲ್ಲಿ ಅವಸರವುಳ್ಳ, **ಭವಾನ್** ನೀನು, **ಅನುಪಮಂ** ಹೋಲಿಕೆ ಇಲ್ಲದ, **ಉತ್ತಮಮ್** ಶ್ರೇಷ್ಠವಾದ, **ದಿವ್ಯಪ್ರಮದಾತ್ಮಕಮ್** ದಿವ್ಯವಾದ ಹೆಣ್ಣಿನ ಸ್ವರೂಪವುಳ್ಳ, **ಶ್ಯಾಮಮ್** ಹದಿನಾರು ವರ್ಷದ ಅಪಾರ ಶೋಭೆಯುಳ್ಳ, **ನಿತಂಬಾರ್ಪಿತರತ್ನ ಮೇಖಲಮ್** ಕಟಿಭಾಗದಲ್ಲಿ ರತ್ನದಮೇಖಲೆಯನ್ನು ಧರಿಸಿರುವ, **ಜಾಂಬೂ ನದಾಭಾಂಬರಭೃತ್** ಬಂಗಾರದಂತೆ ಕಾಂತಿಯುಳ್ಳ, ಪೀತಾಂಬರವನ್ನು ಧರಿಸಿರುವ, **ಸುಮಧ್ಯಮಮ್** ಸುಂದರವಾದ ನಡುವುಳ್ಳ, **ಬೃಹನ್ನಿತಂಬಮ್** ದೊಡ್ಡದಾದ ನಿತಂಬವುಳ್ಳ, **ಕಲಶೋಪಮಸ್ತನಂ** ಕಲಶದಂತೆ ಮೊಲೆಗಳುಳ್ಳ, **ಸತ್ಪುಂಡರೀಕಾಯತನೇತ್ರಮ್** ಒಳ್ಳೆಯ ಕೆಂಪು ಕಮಲದಂತೆ ವಿಸ್ತಾರವಾದ ಕಣ್ಣುಗಳುಳ್ಳ, **ಉಜ್ವಲಂ** ಪ್ರಕಾಶಮಾನವಾದ, **ವಪುಃ** ಸ್ವರೂಪವುಳ್ಳವನಾಗಿ, **ಬಭೂವ** ಪಾದುರ್ಭವಿಸಿದೆ.

**ತಾತ್ಪರ್ಯ** :- ಧನ್ವಂತರಿ ರೂಪಿಯಾದ ಭಗವಂತ ದೇವತೆಗಳ ಕಾರ್ಯವನ್ನು ಬೇಗನೆ ಮಾಡಬೇಕೆಂದು ಕೂಡಲೇ ಮೋಹಿನೀ ರೂಪವನ್ನು ಪಡೆದ. ಆ ಮೋಹಿನೀ ರೂಪವನ್ನು ಇಲ್ಲಿ ವರ್ಣಿಸಿದ್ದಾರೆ. ಹದಿನಾರು ವರ್ಷದ ಅಪ್ರತಿಮ ಶೋಭೆಯುಳ್ಳ ಸ್ತ್ರೀರೂಪ ಇದು. ಪೀತಾಂಬರವನ್ನು ಧರಿಸಿ, ರತ್ನ ಮೇಖಲೆಯನ್ನು ಧರಿಸಿದ ಕಟಿಭಾಗ, ಸುಂದರವಾದ ಸಣ್ಣನಡು, ದೊಡ್ಡದಾದ

ನಿತಂಬ, ಕಲಶದಂತೆ ಉನ್ನತವಾದ ಸ್ತನಗಳನ್ನು ಹೊಂದಿರುವ ರೂಪ, ಕೆಂಪು ಕಮಲದಂತೆ ಅಗಲವಾದ ಸ್ನಿಗ್ಧವಾದ ಕಣ್ಣುಗಳುಳ್ಳ ರೂಪ. ಅತ್ಯಂತ ಪ್ರಕಾಶ ಮಾನವಾದ ಇಂತಹ ರೂಪವನ್ನು ಭಗವಂತ ಧರಿಸಿದ.

**ದೈತ್ಯರ ಮೋಹ**

**ಸಮಸ್ತಸಾರಂ ಪರಿಪೂರ್ಣಸದ್ಗುಣಂ**
**ದೃಷ್ಟ್ವೈವ ತತ್ ಸಮ್ಮುಮುಹುಃ ಸುರಾರಯಃ ।**
**ಪರಸ್ಪರಂ ತೇಽಮೃತಹೇತುತೋಽಖಿಲಾ**
**ವಿರುಧ್ಯಮಾನಾಃ ಪ್ರದದುಃ ಸ್ಮ ತೇ ಕರೇ**
**ಸಮಂ ಸುಧಾಯಾಃ ಕಲಶಂ ವಿಭಜ್ಯ**
**ನಿಪಾಯಯಾಸ್ಮಾನಿತಿ ವಂಚಿತಾಸ್ತ್ವಯಾ ॥ ೨೪ ॥**

ಪದಚ್ಛೇದ :ಸಮಸ್ತಸಾರಮ್, ಪರಿಪೂರ್ಣಸದ್ಗುಣಮ್, ದೃಷ್ಟ್ವಾ, ಏವ, ತತ್, ಸಮ್ಮುಮುಹುಃ, ಸುರಾರಯಃ, ಪರಸ್ಪರಮ್, ತೇ, ಅಮೃತ ಹೇತುಃ, ಅಖಿಲಾಃ, ವಿರುಧ್ಯಮಾನಾಃ, ಪ್ರದದುಃ, ಸ್ಮ, ತೇ, ಕರೇ, ಸಮಮ್, ಸುಧಾಯಾಃ, ಕಲಶಮ್, ವಿಭಜ್ಯ, ನಿಪಾಯಯ, ಅಸ್ಮಾನ್, ಇತಿ ವಂಚಿತಾಃ, ತ್ವಯಾ ॥

**ಅರ್ಥ** :- **ಸಮಸ್ತಸಾರಂ** ಸಮಸ್ತ ಸ್ತ್ರೀ ಸಮೂಹಕ್ಕಿಂತ ಅತ್ಯಂತ ಸುಂದರವಾದ, **ಪರಿಪೂರ್ಣಸದ್ಗುಣಮ್** ಪರಿಪೂರ್ಣವಾದಜ್ಞಾನಾನಂದಾದಿ ಸದ್ಗುಣಗಳುಳ್ಳ, **ತತ್** ಆ ಮೋಹಿನೀ ರೂಪವನ್ನು, **ದೃಷ್ಟ್ವಾ ಏವ** ನೋಡಿಯೇ, **ಸುರಾರಯಃ** ದೇವತೆಗಳ ಶತೃಗಳಾದ ದೈತ್ಯರು, **ಸಮ್ಮುಮುಹುಃ** ಮೋಹಗೊಂಡವರಾಗಿ ಭೋಗಿಸುವ ಇಚ್ಛೆಯನ್ನು ಮಾಡಿದರು, **ಪರಸ್ಪರಂ** ಪರಸ್ಪರವಾಗಿ, **ಅಮೃತ ಹೇತುತಃ** ಅಮೃತದ ಕಾರಣದಿಂದ, **ವಿರುಧ್ಯ ಮಾನಾಃ** ವಿರೋಧಿಸುತ್ತಿರುವ, **ಅಖಿಲಾಃ** ಎಲ್ಲಾ, **ತೇ** ಆ ದೈತ್ಯರು, **ಸಮಂ** ಸರಿಯಾಗಿ, **ವಿಭಜ್ಯ** ವಿಭಾಗ ಮಾಡಿ, **ಅಸ್ಮಾನ್** ನಮ್ಮನ್ನು (ನಮಗೆ), **ನಿಪಾಯಯ** ಕುಡಿಸು (ಎಂದು ಹೇಳುತ್ತಾ), **ಸುಧಾಯಾಃ** ಅಮೃತದ, **ಕಲಶಂ** ಕಲಶವನ್ನು, **ತೇ** ನಿನ್ನ, **ಕರೇ** ಕೈಯಲ್ಲಿ, **ಪ್ರದದುಃ** ಕೊಟ್ಟರು, **ತ್ವಯಾ** ನಿನ್ನಿಂದ, **ವಂಚಿತಾಃ** ಮೋಸಗೊಳಿಸಲ್ಪಟ್ಟರು.

**ತಾತ್ಪರ್ಯ** :- ಆ ಮೋಹಿನೀರೂಪ ಸಕಲ ಸ್ತ್ರೀಸಮುದಾಯಕ್ಕಿಂತ ಹೆಚ್ಚು ಸುಂದರ ವಾದುದು. ಹಾಗೆಯೇ ಜ್ಞಾನಾನಂದಾದಿ ಸಕಲಗುಣಗಳಿಂದ ಪರಿಪೂರ್ಣ ವಾದುದು. ಆ ರೂಪವನ್ನು ನೋಡಿದ ಕೂಡಲೇ, ದೈತ್ಯರಿಗೆ ಎಲ್ಲರಿಗೂ ಅವಳನ್ನು ಭೋಗಿಸಬೇಕು ಎಂಬ ಕಾಮನೆ ಉಂಟಾಯಿತು. ಆಗ ಪರಸ್ಪರ ಜಗಳ ಆಡಲು ಆರಂಭಿಸಿದರು. ಅಮೃತವನ್ನು ಸರಿಯಾಗಿ ಹಂಚಿ ನಮಗೆ ಕುಡಿಸು' ಎಂದು ಹೇಳಿ ಆ ಅಮೃತಕಲಶವನ್ನು ಭಗವಂತನ ಕೈಯ್ಯಲ್ಲಿ ಕೊಟ್ಟರು. ಹೀಗೆ ಭಗವಂತ ಆ ದೈತ್ಯರನ್ನು ವಂಚಿಸಿದ.

**ಧರ್ಮಚ್ಛಲಂ ಪಾಪಜನೇಷು ಧರ್ಮ ಇತಿ**
**ತ್ವಯಾ ಜ್ಞಾಪಯಿತುಂ ತದೋಕ್ತಮ್ ।**
**ಯದ್ಯತ್ ಕೃತಂ ಮೇ ಭವತಾಂ ಯದೀಹ**
**ಸಂವಾದ ಏವೋದ್ವಿಭಜೇ ಸುಧಾಮಿಮಾಮ್ ।**
**ಯಥೇಷ್ಟತೋಽಹಂ ವಿಭಜಾಮಿ ಸರ್ವಥಾ**
**ನ ವಿಶ್ವಸಧ್ವಂ ಮಯಿ ಕೇನಚಿತ್ ಕ್ವಚಿತ್ ॥ ೨೫ ॥**

ಪದಚ್ಛೇದ :**ಧರ್ಮಚ್ಛಲಮ್, ಪಾಪಜನೇಷು, ಧರ್ಮಃ, ಇತಿ, ತ್ವಯಾ, ಜ್ಞಾಪಯಿತುಮ್, ತದಾ, ಉಕ್ತಮ್, ಯದ್ಯತ್, ಕೃತಮ್, ಮೇ, ಭವತಾಮ್, ಯದಿ, ಇಹ, ಸಂವಾದಃ, ಏವ, ಉದ್ವಭಜೇ, ಸುಧಾಮ್, ಇಮಾಮ್, ಯಥೇಷ್ಟತಃ, ಅಹಮ್, ವಿಭಜಾಮಿ, ಸರ್ವಥಾ, ನ, ವಿಶ್ವಸಧ್ವಮ್, ಮಯಿ, ಕೇನಚಿತ್, ಕ್ವಚಿತ್ ॥**

**ಅರ್ಥ** :- **ಪಾಪಜನೇಷು** ಪಾಪಿಗಳಾದ ಜನರಲ್ಲಿ, **ಧರ್ಮಚ್ಛಲಂ** ಧರ್ಮವನ್ನು ಮೀರುವುದೇ, **ಧರ್ಮಃ** ಧರ್ಮವು, **ಇತಿ** ಎಂದು, **ಜ್ಞಾಪಯಿತುಂ** ತಿಳಿಸಿಕೊಡಲು, **ತ್ವಯಾ** ನಿನ್ನಿಂದ, **ತದಾ** ಆಗ, **ಮೇ** ನನ್ನಿಂದ, **ಯದ್ಯತ್** ಯಾವುದು ಯಾವುದು, **ಕೃತಂ** ಮಾಡಲ್ಪಟ್ಟಿದೆಯೋ, **ಇಹ** ಆ ವಿಷಯದಲ್ಲಿ, **ಭವತಾಂ** ನಿಮ್ಮೆಲ್ಲರಿಗೂ, **ಯದಿ** ಒಂದುವೇಳೆ **ಸಂವಾದಃ** ಒಮ್ಮತವು (ಇರುವುದಾದರೇ), **ಉದ್ವಿಭಜೇ** ಹಂಚುತ್ತೇನೆ, **ಅಹಂ** ನಾನು, **ಇಮಾಂ** ಈ, **ಸುಧಾಂ** ಅಮೃತವನ್ನು, **ಯಥೇ ಷ್ಟತಃ** ನನ್ನ ಇಚ್ಛೆಗೆ ಅನುಗುಣವಾಗಿ, **ವಿಭಜಾಮಿ** ಹಂಚುತ್ತೇನೆ, **ಮಯಿ** ನನ್ನಲ್ಲಿ, **ಕೇನಚಿತ್** ಯಾವ

ಕಾರಣದಿಂದಲೂ, **ಕ್ವಚಿತ್** ಯಾವ ವಿಷಯದಲ್ಲಿಯೂ, **ಸರ್ವಥಾ** ಎಲ್ಲಾ ರೀತಿಯಿಂದಲೂ, **ನ ವಿಶ್ವಸಧ್ವಮ್** ವಿಶ್ವಾಸವಿರಿಸಬೇಡಿ, **ಇತಿ** ಎಂದು, **ಉಕ್ತಮ್** ಹೇಳಲ್ಪಟ್ಟಿತು.

**ತಾತ್ಪರ್ಯ :-** ಪಾಪಿಗಳೊಂದಿಗೆ ವ್ಯವಹಾರ ಮಾಡುವಾಗ ಧರ್ಮಮಾರ್ಗವನ್ನು ಅನುಸರಿಸಬೇಕಿಲ್ಲ, ಅಧರ್ಮವೇ ಅವರ ವಿಷಯದಲ್ಲಿ ಧರ್ಮ ಎಂದು ತಿಳಿಸುವುದಕ್ಕಾಗಿ ಭಗವಂತ ಆ ಸಂದರ್ಭದಲ್ಲಿ ದೈತ್ಯರನ್ನು ಕುರಿತು ಈ ರೀತಿ ಹೇಳುತ್ತಾನೆ. ''ನಾನೇನು ಮಾಡಿದರೂ ನೀವು ವಿರೋಧಿಸದೇ ಒಮ್ಮತದಿಂದ ಸಮ್ಮತಿಸಿದರೆ, ಅಮೃತವನ್ನು ಹಂಚುತ್ತೇನೆ. ಹಂಚುವಾಗ ನನಗೆ ಹೇಗೆ ಮನಸ್ಸು ಬರುತ್ತದೆಯೋ ಹಾಗೆ ಹಂಚುತ್ತೇನೆ. ನನ್ನ ಮಾತಿನಲ್ಲಿ ಯಾವ ರೀತಿಯಿಂದಲೂ ನಂಬಿಕೆ ಇಡಬೇಡಿ'' ಎಂದು.

**ಇತಿ ಪ್ರಹಸ್ಯಾಭಿಹಿತಂ ನಿಶಮ್ಯ**
**ಸ್ತ್ರೀಭಾವಮುಗ್ಧಾಸ್ತು ತಥೇತಿ ತೇऽವದನ್ ।**
**ತತಶ್ಚ ಸಂಸ್ಥಾಪ್ಯ ಪೃಥಕ್ ಸುರಾಸುರಾಂಸ್ತವಾತಿ-**
**ರೂಪೋಚ್ಚಲಿತಾನ್ ಸುರೇತರಾನ್ ।**
**ಸರ್ವಾನ್ ಭವದ್ದರ್ಶಿನ ಈಕ್ಷ್ಯ**
**ಲಜ್ಜಿತಾಸ್ಮ್ಯಹಂ ದೃಶೋ ಮೀಲಯತೇತ್ಯವೋಚಃ ॥ ೨೬ ॥**

ಪದಚ್ಛೇದ :ಇತಿ, ಪ್ರಹಸ್ಯ, ಅಭಿಹಿತಮ್, ನಿಶಮ್ಯ, ಸ್ತ್ರೀಭಾವಮುಗ್ಧಾಃ, ತು, ತಥಾ, ಇತಿ, ತೇ, ಅವದನ್, ತತಃ, ಚ, ಸಂಸ್ಥಾಪ್ಯ, ಪೃಥಕ್, ಸುರಾಸುರಾನ್, ತವ, ಅತಿರೂಪೋಚ್ಚಲಿತಾನ್, ಸುರೇತರಾನ್, ಸರ್ವಾನ್, ಭವದ್ದರ್ಶಿನಃ, ಈಕ್ಷ್ಯ, ಲಜ್ಜಿತಾ, ಅಸ್ಮಿ, ಅಹಮ್, ದೃಶಃ, ಮೀಲಯತ, ಇತಿ, ಅವೋಚಃ ॥

**ಅರ್ಥ :-** **ಇತಿ** ಹಿಂದೆ ಹೇಳಿದ ರೀತಿಯಲ್ಲಿ, **ಪ್ರಹಸ್ಯ** ನಕ್ಕು, **ಅಭಿಹಿತಂ** ಹೇಳಲ್ಪಟ್ಟ ಮಾತನ್ನು, **ನಿಶಮ್ಯ** ಕೇಳಿ, **ಸ್ತ್ರೀಭಾವಮುಗ್ಧಾಃ** ನಿನ್ನ ಹೆಣ್ತನವನ್ನು ಕಂಡು ಮೋಹಿತರಾದ, **ತೇ ತು** ಆ ಅಸುರಾದರೂ, **ತಥಾ** ಹಾಗೆಯೇ ಆಗಲಿ, **ಇತಿ** ಎಂದು, **ಅವದನ್** ಹೇಳಿದರು, **ತತಃ** ಅನಂತರ, **ಸುರಾಸುರಾನ್** ದೇವತೆಗಳು ಮತ್ತು ಅಸುರರು ಇವರನ್ನು, **ಪೃಥಕ್** ಬೇರೆ

ಬೇರೆಯಾಗಿ, ಸಂಸ್ಥಾಪ್ಯ ಅವರವರ ಯೋಗ್ಯತೆಗೆ ಅನುಗುಣವಾಗಿ ಕುಳ್ಳಿರಿಸಿ, **ತವ** ನಿನ್ನ, **ಅತಿರೂಪೋಚ್ಚಲಿತಾನ್** ಅತ್ಯಂತ ಸೌಂದರ್ಯದಿಂದ ಕಂಗೆಟ್ಟ, **ಭವದ್ದರ್ಶಿನಃ** ನಿನ್ನನ್ನೇ ನೋಡುತ್ತಿರುವ, **ಸರ್ವಾನ್** ಎಲ್ಲಾ, **ಸುರೇತರಾನ್** ದೈತ್ಯರನ್ನು, **ಈಕ್ಷ್ಯ** ನೋಡಿ, **ಅಹಂ** ನಾನು, **ಲಜ್ಜಿತಾ** ನಾಚಿಕೆಗೊಂಡವಳು, **ಅಸ್ಮಿ** ಆಗಿದ್ದೇನೆ, **ದೃಶಃ** ಕಣ್ಣನ್ನು, **ಮೀಲಯತ** ಮುಚ್ಚಿರಿ, **ಇತಿ** ಎಂದು **ಅವೋಚಃ** ಹೇಳಿದೆ.

**ತಾತ್ಪರ್ಯ** :- ಭಗವಂತ ನಗುತ್ತಾ ಈ ಮಾತುಗಳನ್ನು ಹೇಳಿದಾಗ, ಭಗವಂತನ ಈ ಹೆಣ್ಣುರೂಪವನ್ನು ಕಂಡು ಮೋಹಗೊಂಡ ಎಲ್ಲ ಅಸುರರು ಆಗಬಹುದು ಎಂದು ಸೂಚಿಸಿದರು. ಆಗ ಭಗವಂತ ದೇವತೆಗಳನ್ನು ಮತ್ತು ಅಸುರರನ್ನು ಅವರವರ ಯೋಗ್ಯತೆಗೆ ಅನುಗುಣವಾಗಿ ಬೇರೆಬೇರೆ ಪಂಕ್ತಿ ಯಲ್ಲಿ ಕುಳ್ಳಿರಿಸಿದ. ಭಗವಂತನ ಅತ್ಯದ್ಭುತ ಸೌಂದರ್ಯದಿಂದ ವಿಚಲಿತರಾದ 'ಅಮೃತವೇ ಬೇಡ, ಇವಳು ಸಿಕ್ಕರೆ ಸಾಕು' ಎಂಬ ಭಾವದಿಂದ ಆ ಮೋಹಿನಿಯನ್ನೇ ದೈತ್ಯರು ನೋಡುತ್ತಿದ್ದರು. ಆಗ 'ನೀವು ಹೀಗೆ ನೋಡಿದರೆ, ನನಗೆ ನಾಚಿಕೆ ಆಗುತ್ತದೆ' ಎಂದು ಭಗವಂತ ಹೇಳಿ 'ನೀವು ಕಣ್ಣು ಮುಚ್ಚಿಕೊಳ್ಳಬೇಕು' ಎಂದು ಹೇಳುತ್ತಾನೆ.

### ರಾಹು ಶಿರಸ್ಸಿನ ಅಪಹಾರ

**ನಿಮೀಲಿತಾಕ್ಷೇಷ್ವಸುರೇಷು ದೇವತಾ ನ್ಯಪಾ-**
**ಯಯಃ ಸಾಧ್ವಮೃತಂ ತತಃ ಪುಮಾನ್**
**ಕ್ಷಣೇನ ಭೂತ್ವಾ ಪಿಬತಃ ಸುಧಾಂ**
**ಶಿರೋ ರಾಹೋರ್ನ್ಯಕೃಂತಶ್ಚ ಸುದರ್ಶನೇನ ॥ ೨೭ ॥**

ಪದಚ್ಛೇದ :ನಿಮೀಲಿತಾಕ್ಷೇಷು, ಅಸುರೇಷು, ದೇವತಾಃ, ನ್ಯಪಾಯಯಃ, ಸಾಧು, ಅಮೃತಮ್, ತತಃ, ಪುಮಾನ್, ಕ್ಷಣೇನ, ಭೂತ್ವಾ ಪಿಬತಃ, ಸುಧಾಂ, ಶಿರಃ, ರಾಹೋಃ, ನ್ಯಕೃಂತಃ, ಚ, ಸುದರ್ಶನೇನ ॥

**ಅರ್ಥ** :- **ಅಸುರೇಷು** ದೈತ್ಯರೆಲ್ಲರೂ, **ನಿಮೀಲಿತಾಕ್ಷೇಷು** ಕಣ್ಣುಮುಚ್ಚಿ ಕೊಳ್ಳುತ್ತಿರಲು, **ದೇವತಾಃ** ದೇವತೆಗಳನ್ನು (ಗಳಿಗೆ), **ಅಮೃತಂ** ಅಮೃತವನ್ನು, **ಸಾಧು** ಚೆನ್ನಾಗಿ, **ನ್ಯಪಾಯಯಃ** ಕುಡಿಸಿದೆ, **ತತಃ** ಅನಂತರ, **ಕ್ಷಣೇನ**

ಒಂದುಕ್ಷಣದಲ್ಲಿ, **ಪುಮಾನ್ ಭೂತ್ವಾ** ಪುರುಷ ರೂಪದವನು ಆಗಿ, **ಸುಧಾಂ** ಅಮೃತವನ್ನು, **ಪಿಬತಃ** ಕುಡಿಯುತ್ತಿರುವ, **ರಾಹೋಃ** ರಾಹುವಿನ, **ಶಿರಃ** ತಲೆಯನ್ನು, **ಸುದರ್ಶನೇನ** ಸುದರ್ಶನ ಚಕ್ರದಿಂದ, **ನ್ಯಕೃಂತಃ** ಕತ್ತರಿಸಿದೆ.

**ತಾತ್ಪರ್ಯ** :- ಭಗವಂತನ ಮಾತಿನಂತೆ ಎಲ್ಲ ದೈತ್ಯರೂ ಕಣ್ಣು ಮುಚ್ಚಿದ್ದಾರೆ. ಆಗ ಭಗವಂತ ಎಲ್ಲ ದೇವತೆಗಳಿಗೂ ಚೆನ್ನಾಗಿ ಅಮೃತ ಬಡಿಸಿದ. ದೇವತೆಗಳು ಕುಡಿದರು. ದೇವತೆಗಳ ಪಂಕ್ತಿಯ ಕೊನೆಯಲ್ಲಿ ರಾಹು ಮೋಸದಿಂದ ಕುಳಿತಿದ್ದ. ಅವನು ಇನ್ನೇನು ಅಮೃತ ಕುಡಿಯಬೇಕು ಅಷ್ಟರಲ್ಲಿ ಭಗವಂತ ಪುರುಷರೂಪವನ್ನು ಧರಿಸಿ, ತನ್ನ ಸುದರ್ಶನದಿಂದ ರಾಹುವಿನ ತಲೆ ಕತ್ತರಿಸಿದ. ಈ ರಾಹು ಸಿಂಹಿಕೆ ಮತ್ತು ವಿಪ್ರಚಿತ್ತಿಯ ಮೊದಲ ಮಗ. ಸಿಂಹಿಕೆ ಹಿರಣ್ಯಕಶಿಪುವಿನ ಮಗಳು. ಇವರಿಗೆ ನೂರ ಒಂದು ಮಂದಿ ಮಕ್ಕಳು ಇವರಲ್ಲಿ ರಾಹು ಅಣ್ಣ. ಇವನ ತಮ್ಮಂದಿರು ೧೦೦ ಮಂದಿ ಕೇತುಗಳು.

**ತೇನಾಮೃತಾರ್ಥಂ ಹಿ ಸಹಸ್ರಜನ್ಮಸು**
**ಪ್ರತಪ್ಯ ಭೂಯಸ್ತಪ ಆರಿತೋ ವರಃ ।**
**ಸ್ವಯಂಭುವಸ್ತೇನ ಭವಾನ್ ಕರೇऽಸ್ಯ**
**ಬಿಂದುಂ ಸುಧಾಂ ಪ್ರಾಸ್ಯ ಶಿರೋ ಜಹಾರ ॥ ೨೮ ॥**

ಪದಚ್ಛೇದ :ತೇನ, ಅಮೃತಾರ್ಥಮ್, ಹಿ, ಸಹಸ್ರಜನ್ಮಸು, ಪ್ರತಪ್ಯ, ಭೂಯಃ, ತಪಃ, ಆರಿತಃ, ವರಃ, ಸ್ವಯಂಭುವಃ, ತೇನ, ಭವಾನ್, ಕರೇ, ಅಸ್ಯ, ಬಿಂದುಮ್ ಸುಧಾಮ್, ಪ್ರಾಸ್ಯ, ಶಿರಃ, ಜಹಾರ ॥

**ಅರ್ಥ** :- **ತೇನ** ಆ ರಾಹುವಿನಿಂದ, **ಅಮೃತಾರ್ಥಂ** ಅಮೃತ ಕ್ಕೋಸ್ಕರ **ಸಹಸ್ರಜನ್ಮಸು** ಸಾವಿರ ಜನ್ಮಗಳಲ್ಲಿ, **ಭೂಯಃ** ಹೆಚ್ಚಾದ, **ತಪಃ** ತಪಸ್ಸನ್ನು , **ಪ್ರತಪ್ಯ** ಆಚರಿಸಿ, **ಸ್ವಯಂಭುವಃ** ಬ್ರಹ್ಮದೇವರಿಂದ, **ವರಃ** ವರವು, **ಆರಿತಃ ಹಿ** ಹೊಂದಲ್ಪಟ್ಟಿತ್ತಷ್ಟೆ, **ತೇನ** ಆದುದರಿಂದ **ಭವಾನ್** ನೀನು, **ಅಸ್ಯ** ಈ ರಾಹುವಿನ, **ಕರೇ** ಕೈಯಲ್ಲಿ, **ಬಿಂದುಂ** ಬಿಂದುವಿನಷ್ಟು, **ಸುಧಾಂ** ಅಮೃತವನ್ನು, **ಪ್ರಾಸ್ಯ** ಹಾಕಿ, **ಶಿರಃ** ತಲೆಯನ್ನು, **ಜಹಾರ** ಕತ್ತರಿಸಿದೆ.

**ತಾತ್ಪರ್ಯ** :- ಆ ರಾಹು ಅಮೃತ ಸಿಗಬೇಕೆಂದು ಬ್ರಹ್ಮದೇವರನ್ನು ಕುರಿತು ಸಾವಿರ ಜನ್ಮಗಳಲ್ಲಿ ಭಾರೀ ತಪಸ್ಸನ್ನು ಆಚರಿಸಿದ್ದ. ಆ ತಪಸ್ಸಿನ

ಬೇರೆಯಾಗಿ, ಸಂಸ್ಥಾಪ್ಯ ಅವರವರ ಯೋಗ್ಯತೆಗೆ ಅನುಗುಣವಾಗಿ ಕುಳ್ಳಿರಿಸಿ, **ತವ** ನಿನ್ನ, **ಅತಿರೂಪೋಚ್ಚಲಿತಾನ್** ಅತ್ಯಂತ ಸೌಂದರ್ಯದಿಂದ ಕಂಗೆಟ್ಟ, **ಭವದ್ದರ್ಶಿನಃ** ನಿನ್ನನ್ನೇ ನೋಡುತ್ತಿರುವ, **ಸರ್ವಾನ್** ಎಲ್ಲಾ, **ಸುರೇತರಾನ್** ದೈತ್ಯರನ್ನು, **ಈಕ್ಷ್ಯ** ನೋಡಿ, **ಅಹಂ** ನಾನು, **ಲಜ್ಜಿತಾ** ನಾಚಿಕೆಗೊಂಡವಳು, **ಅಸ್ಮಿ** ಆಗಿದ್ದೇನೆ, **ದೃಶಃ** ಕಣ್ಣನ್ನು, **ಮೀಲಯತ** ಮುಚ್ಚಿರಿ, **ಇತಿ** ಎಂದು **ಅವೋಚಃ** ಹೇಳಿದೆ.

**ತಾತ್ಪರ್ಯ** :- ಭಗವಂತ ನಗುತ್ತಾ ಈ ಮಾತುಗಳನ್ನು ಹೇಳಿದಾಗ, ಭಗವಂತನ ಈ ಹೆಣ್ಣುರೂಪವನ್ನು ಕಂಡು ಮೋಹಗೊಂಡ ಎಲ್ಲ ಅಸುರರು ಆಗಬಹುದು ಎಂದು ಸೂಚಿಸಿದರು. ಆಗ ಭಗವಂತ ದೇವತೆಗಳನ್ನು ಮತ್ತು ಅಸುರರನ್ನು ಅವರವರ ಯೋಗ್ಯತೆಗೆ ಅನುಗುಣವಾಗಿ ಬೇರೆಬೇರೆ ಪಂಕ್ತಿಯಲ್ಲಿ ಕುಳ್ಳಿರಿಸಿದ. ಭಗವಂತನ ಅತ್ಯದ್ಭುತ ಸೌಂದರ್ಯದಿಂದ ವಿಚಲಿತರಾದ 'ಅಮೃತವೇ ಬೇಡ, ಇವಳು ಸಿಕ್ಕರೆ ಸಾಕು' ಎಂಬ ಭಾವದಿಂದ ಆ ಮೋಹಿನಿಯನ್ನೇ ದೈತ್ಯರು ನೋಡುತ್ತಿದ್ದರು. ಆಗ 'ನೀವು ಹೀಗೆ ನೋಡಿದರೆ, ನನಗೆ ನಾಚಿಕೆ ಆಗುತ್ತದೆ' ಎಂದು ಭಗವಂತ ಹೇಳಿ 'ನೀವು ಕಣ್ಣು ಮುಚ್ಚಿಕೊಳ್ಳಬೇಕು' ಎಂದು ಹೇಳುತ್ತಾನೆ.

ರಾಹು ಶಿರಸ್ಸಿನ ಅಪಹಾರ

**ನಿಮೀಲಿತಾಕ್ಷೇಷ್ವಸುರೇಷು ದೇವತಾ ನೃಪಾ-**
**ಯಯಃ ಸಾಧ್ವಮೃತಂ ತತಃ ಪುಮಾನ್**
**ಕ್ಷಣೇನ ಭೂತ್ವಾ ಪಿಬತಃ ಸುಧಾಂ**
**ಶಿರೋ ರಾಹೋರ್ನ್ಯಕೃಂತಶ್ಚ ಸುದರ್ಶನೇನ ॥ ೨೭ ॥**

ಪದಚ್ಛೇದ :ನಿಮೀಲಿತಾಕ್ಷೇಷು, ಅಸುರೇಷು, ದೇವತಾಃ , ನೃಪಾಯಯಃ , ಸಾಧು, ಅಮೃತಮ್, ತತಃ, ಪುಮಾನ್, ಕ್ಷಣೇನ, ಭೂತ್ವಾ, ಪಿಬತಃ, ಸುಧಾಂ, ಶಿರಃ, ರಾಹೋಃ, ನ್ಯಕೃಂತಃ, ಚ, ಸುದರ್ಶನೇನ ॥

**ಅರ್ಥ** :- **ಅಸುರೇಷು** ದೈತ್ಯರೆಲ್ಲರೂ, **ನಿಮೀಲಿತಾಕ್ಷೇಷು** ಕಣ್ಣುಮುಚ್ಚಿಕೊಳ್ಳುತ್ತಿರಲು, **ದೇವತಾಃ** ದೇವತೆಗಳನ್ನು (ಗಳಿಗೆ), **ಅಮೃತಂ** ಅಮೃತವನ್ನು, **ಸಾಧು** ಚೆನ್ನಾಗಿ, **ನೃಪಾಯಯಃ** ಕುಡಿಸಿದೆ, **ತತಃ** ಅನಂತರ, **ಕ್ಷಣೇನ**

ಒಂದುಕ್ಷಣದಲ್ಲಿ, **ಪುಮಾನ್ ಭೂತ್ವಾ** ಪುರುಷ ರೂಪದವನು ಆಗಿ, **ಸುಧಾಂ** ಅಮೃತವನ್ನು, **ಪಿಬತಃ** ಕುಡಿಯುತ್ತಿರುವ, **ರಾಹೋಃ** ರಾಹುವಿನ, **ಶಿರಃ** ತಲೆಯನ್ನು, **ಸುದರ್ಶನೇನ** ಸುದರ್ಶನ ಚಕ್ರದಿಂದ, **ನ್ಯಕೃಂತಃ** ಕತ್ತರಿಸಿದೆ.

**ತಾತ್ಪರ್ಯ** :- ಭಗವಂತನ ಮಾತಿನಂತೆ ಎಲ್ಲ ದೈತ್ಯರೂ ಕಣ್ಣು ಮುಚ್ಚಿದ್ದಾರೆ. ಆಗ ಭಗವಂತ ಎಲ್ಲ ದೇವತೆಗಳಿಗೂ ಚೆನ್ನಾಗಿ ಅಮೃತ ಬಡಿಸಿದ. ದೇವತೆಗಳು ಕುಡಿದರು. ದೇವತೆಗಳ ಪಂಕ್ತಿಯ ಕೊನೆಯಲ್ಲಿ ರಾಹು ಮೋಸದಿಂದ ಕುಳಿತಿದ್ದ. ಅವನು ಇನ್ನೇನು ಅಮೃತ ಕುಡಿಯಬೇಕು ಅಷ್ಟರಲ್ಲಿ ಭಗವಂತ ಪುರುಷರೂಪವನ್ನು ಧರಿಸಿ, ತನ್ನ ಸುದರ್ಶನದಿಂದ ರಾಹುವಿನ ತಲೆ ಕತ್ತರಿಸಿದ. ಈ ರಾಹು ಸಿಂಹಿಕೆ ಮತ್ತು ವಿಪ್ರಚಿತ್ತಿಯ ಮೊದಲ ಮಗ. ಸಿಂಹಿಕೆ ಹಿರಣ್ಯಕಶಿಪುವಿನ ಮಗಳು. ಇವರಿಗೆ ನೂರ ಒಂದು ಮಂದಿ ಮಕ್ಕಳು ಇವರಲ್ಲಿ ರಾಹು ಅಣ್ಣ. ಇವನ ತಮ್ಮಂದಿರು ೧೦೦ ಮಂದಿ ಕೇತುಗಳು.

**ತೇನಾಮೃತಾರ್ಥಂ ಹಿ ಸಹಸ್ರಜನ್ಮಸು**
**ಪ್ರತಪ್ಯ ಭೂಯಸ್ತಪ ಆರಿತೋ ವರಃ ।**
**ಸ್ವಯಂಭುವಸ್ತೇನ ಭವಾನ್ ಕರೇಽಸ್ಯ**
**ಬಿಂದುಂ ಸುಧಾಂ ಪ್ರಾಸ್ಯ ಶಿರೋ ಜಹಾರ ॥ ೨೮ ॥**

ಪದಚ್ಛೇದ :ತೇನ, ಅಮೃತಾರ್ಥಮ್, ಹಿ, ಸಹಸ್ರಜನ್ಮಸು, ಪ್ರತಪ್ಯ, ಭೂಯಃ, ತಪಃ, ಆರಿತಃ, ವರಃ, ಸ್ವಯಂಭುವಃ, ತೇನ, ಭವಾನ್, ಕರೇ, ಅಸ್ಯ, ಬಿಂದುಮ್ ಸುಧಾಮ್, ಪ್ರಾಸ್ಯ, ಶಿರಃ, ಜಹಾರ ॥

**ಅರ್ಥ** :- **ತೇನ** ಆ ರಾಹುವಿನಿಂದ, **ಅಮೃತಾರ್ಥಂ** ಅಮೃತ ಕ್ಕೋಸ್ಕರ **ಸಹಸ್ರಜನ್ಮಸು** ಸಾವಿರ ಜನ್ಮಗಳಲ್ಲಿ, **ಭೂಯಃ** ಹೆಚ್ಚಾದ, **ತಪಃ** ತಪಸ್ಸನ್ನು , **ಪ್ರತಪ್ಯ** ಆಚರಿಸಿ, **ಸ್ವಯಂಭುವಃ** ಬ್ರಹ್ಮದೇವರಿಂದ, **ವರಃ** ವರವು, **ಆರಿತಃ ಹಿ** ಹೊಂದಲ್ಪಟ್ಟಿತ್ತಷ್ಟೆ, **ತೇನ** ಆದುದರಿಂದ **ಭವಾನ್** ನೀನು, **ಅಸ್ಯ** ಈ ರಾಹುವಿನ, **ಕರೇ** ಕೈಯಲ್ಲಿ, **ಬಿಂದುಂ** ಬಿಂದುವಿನಷ್ಟು, **ಸುಧಾಂ** ಅಮೃತವನ್ನು, **ಪ್ರಾಸ್ಯ** ಹಾಕಿ, **ಶಿರಃ** ತಲೆಯನ್ನು, **ಜಹಾರ** ಕತ್ತರಿಸಿದೆ.

**ತಾತ್ಪರ್ಯ** :- ಆ ರಾಹು ಅಮೃತ ಸಿಗಬೇಕೆಂದು ಬ್ರಹ್ಮದೇವರನ್ನು ಕುರಿತು ಸಾವಿರ ಜನ್ಮಗಳಲ್ಲಿ ಭಾರೀ ತಪಸ್ಸನ್ನು ಆಚರಿಸಿದ್ದ. ಆ ತಪಸ್ಸಿನ

ಫಲವಾಗಿ ಬ್ರಹ್ಮದೇವರು ಪ್ರತ್ಯಕ್ಷರಾಗಿ ವರವನ್ನು ಕೊಟ್ಟಿದ್ದರು. ಇದರಿಂದ ಪರಮಾತ್ಮ ಅವನ ಕೈಗೆ ಒಂದು ಬಿಂದು ಅಮೃತವನ್ನು ಹಾಕಿದ. ಆದರೆ, ಅವನಿಗೆ ಅಮೃತಕುಡಿಯುವ ಯೋಗ್ಯತೆ ಇಲ್ಲದಿದ್ದುದರಿಂದ ಅವನ ತಲೆ ಕತ್ತರಿಸಿದ.

### ರಾಹು ಗ್ರಹವಾದ

**ಶಿರಸ್ತು ತಸ್ಯ ಗ್ರಹತಾಮವಾಪ ಸುರೈಃ**
**ಸಮಾವಿಷ್ಟ ಮಥೋ ಸಬಾಹು ।**
**ಕ್ಷಿಪ್ತಃ ಕಬಂಧೋಽಸ್ಯ ಶುಭೋದಸಾಗರೇ**
**ತ್ವಯಾ ಸ್ಥಿತೋಽದ್ಯಾಪಿ ಹಿ ತತ್ರ ಸಾಮೃತಃ ॥ ೨೯ ॥**

ಪದಚ್ಛೇದ :ಶಿರಃ, ತು, ತಸ್ಯ, ಗ್ರಹತಾಮ್, ಅವಾಪ, ಸುರೈಃ, ಸಮಾವಿಷ್ಟಮ್, ಅಥೋ, ಸಬಾಹು, ಕ್ಷಿಪ್ತಃ, ಕಬಂಧಃ, ಅಸ್ಯ, ಶುಭೋದಸಾಗರೇ, ತ್ವಯಾ, ಸ್ಥಿತಃ, ಅದ್ಯ, ಅಪಿ, ಹಿ, ತತ್ರ, ಸಾಮೃತಃ ॥

**ಅರ್ಥ** :- **ತಸ್ಯ** ಆ ರಾಹುವಿನ, **ಸಬಾಹು** ಭುಜದಿಂದ ಕೂಡಿದ, **ಶಿರಃ ತು** ತಲೆಯಾದರೂ, **ಸುರೈಃ** ದೇವತೆಗಳಿಂದ, **ಸಮಾವಿಷ್ಟಂ** ಕೂಡಿದ್ದಾಗಿ **ಗ್ರಹತಾಂ** ಗ್ರಹಭಾವವನ್ನು, **ಅವಾಪ** ಹೊಂದಿತು, **ಅಥೋ** ಅನಂತರ, **ಅಸ್ಯ** ಈ ರಾಹುವಿನ, **ಸಾಮೃತಃ** ಅಮೃತಸಹಿತವಾದ **ಕಬಂಧಃ** ಶರೀರ ಭಾಗವು, **ತ್ವಯಾ** ನಿನ್ನಿಂದ, **ಶುಭೋದ ಸಾಗರೇ** ನೀರಿನ ಸಮುದ್ರದಲ್ಲಿ, **ಕ್ಷಿಪ್ತಃ** ಬೀಳಿಸಲ್ಪಟ್ಟಿತು, **ತತ್ರ** ಅಲ್ಲಿ, **ಅದ್ಯ ಅಪಿ** ಈಗಲೂ ಕೂಡ, **ಸ್ಥಿತಃ ಹಿ** ಇದೆಯಷ್ಟೇ.

**ತಾತ್ಪರ್ಯ** :- ಕತ್ತರಿಸಿದ ರಾಹುವಿನ ಶಿರಸ್ಸಿನಲ್ಲಿ ದೇವತೆಗಳು ಪ್ರವೇಶಿಸಿದರು. ರಾಹು ಕೈಯಲ್ಲಿ ಅಮೃತ ಮುಟ್ಟಿದ್ದ. ಆದುದರಿಂದ ಕೈಯ್ಯ ಮೂಲವಾದ ಭುಜವನ್ನು ಕತ್ತರಿಸಿದ. ಹಾಗೆಯೇ ಬಾಹುವಿನಿಂದ ಕೂಡಿದ ಶಿರಸ್ಸು ಗ್ರಹವಾಯಿತು. ಅಮೃತಸ್ಪರ್ಶವಾದ ಶರೀರವನ್ನು ಶುಭೋದ ಸಾಗರದಲ್ಲಿ ಹಾಕಿದ. ಅದು ಇಂದಿಗೂ ಅಲ್ಲಿಯೇ ಇದೆ. ಆರನೆಯದ್ದು ಕ್ಷೀರಸಾಗರ. ಅಲ್ಲಿ ಅಮೃತಮಥನ. ಅದರ ನಂತರ ಪುಷ್ಕರದ್ವೀಪ. ಇಲ್ಲಿ ಮೋಹಿನಿ ಅಮೃತ ಬಡಿಸಿದ್ದು. ಏಳನೆಯದ್ದು ಶುದ್ಧೋದಸಾಗರ. ಇಲ್ಲಿ ರಾಹುವಿನ ಶರೀರವಿರುವುದು.

ದೈತ್ಯರ ಹನನ-ಸಕಲರಲ್ಲಿ ಕಲಿಯ ಪ್ರವೇಶ

ಅಥಾಸುರಾಃ ಪ್ರತ್ಯಪತನ್ನುದಾಯುಧಾಃ
ಸಮಸ್ತಶಸ್ತೇ ಚ ಹತಾಸ್ತ್ವಯಾ ರಣೇ ।
ಕಲಿಸ್ತು ಸ ಬ್ರಹ್ಮವರಾದಜೇಯೋ ಹ್ಯೃತೇ
ಭವಂತಂ ಪುರುಷೇಷು ಸಂಸ್ಥಿತಃ ॥ ೩೦ ॥

ಪದಚ್ಛೇದ :ಅಥ, ಅಸುರಾಃ, ಪ್ರತ್ಯಪತನ್, ಉದಾಯುಧಾಃ, ಸಮಸ್ತಶಃ, ತೇ, ಚ, ಹತಾಃ, ತ್ವಯಾ, ರಣೇ, ಕಲಿಃ, ತು, ಬ್ರಹ್ಮವರಾತ್, ಅಜೇಯಃ, ಹಿ, ಋತೇ, ಭವಂತಮ್, ಪುರುಷೇಷು, ಸಂಸ್ಥಿತಃ ॥

**ಅರ್ಥ** :- **ಅಥ** ಅನಂತರ, **ಉದಾಯುಧಾಃ** ಆಯುಧವನ್ನು ಎತ್ತಿದ **ಅಸುರಾಃ** ದೈತ್ಯರು, **ಸಮಸ್ತಶಃ** ಗುಂಪಾಗಿ, **ಪ್ರತ್ಯಪತನ್** ಯುದ್ಧಕ್ಕಾಗಿ ಬಂದರು, **ರಣೇ** ಯುದ್ಧದಲ್ಲಿ, **ತೇ ಚ** ಆ ಅಸುರರಾದರೂ, **ತ್ವಯಾ** ನಿನ್ನಿಂದ, **ಹತಾಃ** ಕೊಲ್ಲಲ್ಪಟ್ಟರು, **ಭವಂತಮ್ ಋತೇ** ನಿನ್ನನ್ನು ಹೊರತಾಗಿ, **ಪುರುಷೇಷು** ಮನುಷ್ಯರಲ್ಲಿ, **ಸಂಸ್ಥಿತಃ** ಇರುವ, **ಕಲಿಃತು** ಕಲಿಯಾದರೂ **ಬ್ರಹ್ಮವರಾತ್** ಬ್ರಹ್ಮದೇವರ ವರದಿಂದ, **ಭವಂತಮ್ ಋತೇ** ನಿನ್ನನ್ನು ಬಿಟ್ಟು ಬೇರೆಯವರಿಂದ, **ಅಜೇಯಃ** ಗೆಲ್ಲಲು ಅಸಾಧ್ಯನು, **ಹಿ** ಇದು ಪ್ರಸಿದ್ಧ

**ತಾತ್ಪರ್ಯ** :- ಅಮೃತ ಸಿಗದಿದ್ದಾಗ ಎಲ್ಲ ದೈತ್ಯರು ಆಯುಧ ಧಾರಿಗಳಾಗಿ ಯುದ್ಧಕ್ಕೆ ಬಂದರು. ಅವರೆಲ್ಲರನ್ನು ಭಗವಂತ ಸಂಹರಿಸಿದ. ಕಲಿಯು ಮಾತ್ರ ಅಜೇಯ. ಭಗವಂತ, ಬ್ರಹ್ಮವಾಯುಗಳು ಹೊರತಾಗಿ ಯಾರೂ ಅವನನ್ನು ಗೆಲ್ಲಲು ಸಾಧ್ಯವಿಲ್ಲ. ಅವನು ಭಗವಂತ ಬ್ರಹ್ಮ-ವಾಯು ಗಳನ್ನು ಬಿಟ್ಟು ಎಲ್ಲರಲ್ಲೂ ಪ್ರವೇಶಿಸಿದ್ದಾನೆ.

ಶ್ರೀವತ್ಸ ಕೌಸ್ತುಭಗಳು ಭಗವಂತನ ಆಭರಣ

ತಸ್ಯಾರ್ಧದೇಹಾತ್ ಸಮಭೂದ-
ಲಕ್ಷ್ಮೀಸ್ತತ್ಪುತ್ರಕಾ ದೋಷಗಣಾಶ್ಚ ಸರ್ವಶಃ ।
ಅಥೇಂದಿರಾ ವಕ್ಷಸಿ ತೇ ಸಮಾಸ್ಥಿತಾ
ತ್ವತ್ಕಂಠಗಂ ಕೌಸ್ತುಭಮಾಸ ಧಾತಾ ॥ ೩೧ ॥

ಪದಚ್ಛೇದ :ತಸ್ಯ, ಅರ್ಧದೇಹಾತ್, ಸಮಭೂತ್, ಅಲಕ್ಷ್ಮೀಃ, ತತ್ಪುತ್ರಕಾಃ, ದೋಷಗಣಾಃ, ಚ, ಸರ್ವಶಃ, ಅಥ, ಇಂದಿರಾ, ವಕ್ಷಸಿ, ತೇ, ಸಮಾಸ್ಥಿತಾ, ತ್ವತ್ಕಂಠಗಮ್, ಕೌಸ್ತುಭಮ್, ಆಸ, ಧಾತಾ ।

**ಅರ್ಥ** :- **ತಸ್ಯ** ಆ ಕಲಿಯ, **ಅರ್ಧದೇಹಾತ್** ಅರ್ಧದೇಹದಿಂದ **ಅಲಕ್ಷ್ಮೀಃ** ಅಲಕ್ಷ್ಮಿಯು, **ಸಮಭೂತ್** ಹುಟ್ಟಿದಳು, **ತತ್ಪುತ್ರಕಾಃ** ಆ ಅಲಕ್ಷ್ಮಿಯ ಮಕ್ಕಳಾದ, **ಸರ್ವಶಃ** ಎಲ್ಲ ರೀತಿಯ, **ದೋಷಗಣಾಃ ಚ** ದೋಷಗಳ ಸಮೂಹವೂ ಕೂಡ (ಹುಟ್ಟಿದವು), **ಅಥ** ಅನಂತರ, **ಇಂದಿರಾ** ಮಹಾಲಕ್ಷ್ಮಿಯು, **ತೇ** ನಿನ್ನ **ವಕ್ಷಸಿ** ಎದೆಯ ಭಾಗದಲ್ಲಿ **ಸಮಾಸ್ಥಿತಾ** ಆಶ್ರಯವನ್ನು ಪಡೆದಳು. **ಧಾತಾ** ಚತುರ್ಮುಖ ಬ್ರಹ್ಮದೇವರಿಂದ ಅಭಿಮನ್ಯಮಾನವಾದ, **ಕೌಸ್ತುಭಂ** ಕೌಸ್ತುಭ ಮಣಿಯು, **ತ್ವತ್ಕಂಠಗಮ್** ನಿನ್ನ ಕುತ್ತಿಗೆಯನ್ನಾಶ್ರಯಿಸಿದ್ದು, **ಆಸ** ಆಯಿತು.

**ತಾತ್ಪರ್ಯ** :- ಆ ಕಲಿಯ ಅರ್ಧದೇಹದಿಂದ ಅಲಕ್ಷ್ಮಿ ಮತ್ತು ಅವಳ ಮಕ್ಕಳಾದ ಸಕಲ ದೋಷಾಭಿಮಾನಿಗಳು ಹುಟ್ಟಿದರು. ಮಹಾಲಕ್ಷ್ಮಿಯು ಶ್ರೀವತ್ಸರೂಪದಿಂದ ಭಗವಂತನ ಎದೆಯನ್ನು ಆಶ್ರಯಿಸಿದಳು ಮತ್ತು ಬ್ರಹ್ಮ ದೇವರು ಕೌಸ್ತುಭ ರೂಪದಿಂದ ಕಂಠವನ್ನಾಶ್ರಯಿಸಿದರು.

ಅಮೃತ ವಿಭಾಗ ಮೋಕ್ಷಕ್ಕೆ ದೃಷ್ಟಾಂತ

**ಯಥಾವಿಭಾಗಂ ಚ ಸುರೇಷು ದತ್ತಾ-**
**ಸ್ತ್ವಯಾ ತಥಾನ್ಯೇಽಪಿ ಹಿ ತತ್ರ ಜಾತಾಃ ।**
**ಇತ್ಥಂ ತ್ವಯಾ ಸಾಧ್ವಮೃತಂ ಸುರೇಷು**
**ದತ್ತಂ ಹಿ ಮೋಕ್ಷಸ್ಯ ನಿದರ್ಶನಾಯ ॥ ೩೨ ॥**

ಯಥಾವಿಭಾಗಮ್, ಚ, ಸುರೇಷು, ದತ್ತಾಃ, ತ್ವಯಾ, ತಥಾ, ಅನ್ಯೇ, ಅಪಿ, ಹಿ, ತತ್ರ, ಜಾತಾಃ, ಇತ್ಥಮ್, ತ್ವಯಾ, ಸಾಧು, ಅಮೃತಮ್, ಸುರೇಷು, ದತ್ತಮ್, ಮೋಕ್ಷಸ್ಯ, ನಿದರ್ಶನಾಯ.

**ಅರ್ಥ** :- **ತತ್ರ** ಆ ಸಮುದ್ರದಲ್ಲಿ **ಜಾತಾಃ** ಹುಟ್ಟಿದ, **ಅನ್ಯೇ ಅಪಿ** ಬೇರೆ, ಉಚ್ಚೈಃ ಶ್ರವ ಎಂಬ ಕುದುರೆ ಮೊದಲಾದವೂ ಕೂಡ, **ತ್ವಯಾ** ನಿನ್ನಿಂದ,

**ಸುರೇಷು** ದೇವತೆಗಳಲ್ಲಿ, **ಯಥಾವಿಭಾಗಂ ಚ** ಅವರವರ ಯೋಗ್ಯತೆಗೆ ಅನುಗುಣವಾದ ವಿಭಾಗಕ್ಕೆ ಅನುಸಾರಿಯಾಗಿ, **ತಥಾ** ಅಮೃತದಂತೆಯೇ, **ದತ್ತಾಃ ಹಿ** ಕೊಡಲ್ಪಟ್ಟವಷ್ಟೇ, **ಇತ್ಥಮ್** ಈ ರೀತಿಯಾಗಿ, **ಮೋಕ್ಷಸ್ಯ** ಮೋಕ್ಷಕ್ಕೆ, **ನಿದರ್ಶನಾಯ** ದೃಷ್ಟಾಂತವೆಂಬಂತೆ, **ತ್ವಯಾ** ನಿನ್ನಿಂದ, **ಸುರೇಷು** ದೇವತೆಗಳಲ್ಲಿ, **ಅಮೃತಂ** ಅಮೃತವು, **ಸಾಧು** ಚನ್ನಾಗಿ, **ದತ್ತಮ್** ಕೊಡಲ್ಪಟ್ಟಿತು.

**ತಾತ್ಪರ್ಯ** :- ಅಮೃತವನ್ನು ಹಂಚಿದ ರೀತಿಯಲ್ಲಿಯೇ ಆಯಾಯಾ ದೇವತೆಗಳಿಗೆ ಅವರವರ ಪಾಲಿನ ವಸ್ತುಗಳನ್ನು ಹಂಚಿಕೊಟ್ಟ ಈ ರೀತಿಯಾಗಿ ಅಮೃತವನ್ನು ದೇವತೆಗಳಿಗೆ ಹಂಚಿದ್ದು ದೇವತೆಗಳಿಗೆ ಮಾತ್ರ ಮೋಕ್ಷ ಎಂಬ ಪ್ರಮೇಯವನ್ನು ದೃಷ್ಟಾಂತದ ಮೂಲಕ ದೃಢೀಕರಿಸಲು.

**ಭವೇದ್ಧಿ ಮೋಕ್ಷೋ ನಿಯತಂ ಸುರಾಣಾಂ**
**ನೈವಾಸುರಾಣಾಂ ಸ ಕಥಂಚನ ಸ್ಯಾತ್**
**ಉತ್ಸಾಹಯುಕ್ತಸ್ಯ ಚ ತತ್ ಪ್ರತೀಪಂ**
**ಭವೇದ್ಧಿ ರಾಹೋರಿವ ದುಃಖರೂಪಮ್ ॥ ೩೩ ॥**

ಪದಚ್ಛೇದ :ಭವೇತ್, ಹಿ, ಮೋಕ್ಷಃ, ನಿಯತಮ್, ಸುರಾಣಾಮ್, ನ, ಏವ, ಅಸುರಾಣಾಮ್, ಸಃ, ಕಥಂಚನ, ಸ್ಯಾತ್, ಉತ್ಸಾಹಯುಕ್ತಸ್ಯ, ಚ, ತತ್, ಪ್ರತೀಪಮ್, ಭವೇತ್, ಹಿ, ರಾಹೋಃ, ಇವ, ದುಃಖರೂಪಮ್ ॥

**ಅರ್ಥ** :- **ಸುರಾಣಾಂ** ದೇವತೆಗಳಿಗೆ, **ಮೋಕ್ಷಃ** ಮೋಕ್ಷವು, **ನಿಯತಂ** ನಿಶ್ಚಯವಾಗಿಯೂ, **ಭವೇತ್ ಹಿ** ಆಗುತ್ತದೆಯಷ್ಟೇ, **ಅಸುರಾಣಾಂ** ದೈತ್ಯರಿಗೆ, **ಸಃ** ಆ ಮೋಕ್ಷವು, **ಕಥಂಚನ** ಯಾವ ಪ್ರಕಾರದಿಂದಲೂ, **ನ ಏವ ಸ್ಯಾತ್** ಆಗುವುದೇ ಇಲ್ಲ, **ರಾಹೋಃ** ರಾಹುವಿಗೆ, **ದುಃಖರೂಪಮ್ ಇವ** ದುಃಖಸ್ವರೂಪವು ಹೇಗೋ ಹಾಗೆ, **ಉತ್ಸಾಹಯುಕ್ತಸ್ಯ** (ಯೋಗ್ಯತೆ ಇಲ್ಲದಿದ್ದರೂ) ಉತ್ಸಾಹದಿಂದ ಕೂಡಿದವನಿಗೆ, **ತತ್** ಯೋಗ್ಯತೆಗೆ ಮೀರಿದ ಫಲವು, **ಪ್ರತೀಪಂ** ವಿರುದ್ಧವಾದುದು, **ಭವೇತ್ ಹಿ** ಆಗುತ್ತದೆಯಷ್ಟೆ

**ತಾತ್ಪರ್ಯ** :- ದೇವತೆಗಳಿಗೆ ಮೋಕ್ಷ ನಿಶ್ಚಿತ. ದೈತ್ಯರಿಗೆ ಯಾವತ್ತೂ ಮೋಕ್ಷ ಸಿಗಲಾರದು. ಯೋಗ್ಯತೆ ಇಲ್ಲದಿದ್ದರೂ ಉತ್ಸಾಹದಿಂದ ಪ್ರಯತ್ನಪಟ್ಟರೂ ರಾಹುವಿನ ಸ್ಥಿತಿಯಂತೆ ದುಃಖವೇ ಲಭಿಸುತ್ತದೆ.

### ಕಲಿಪೀಡೆ ಪರಿಹಾರ ಪ್ರಾರ್ಥನೆ

ಕಲಿಸ್ತ್ವಯಂ ಬ್ರಹ್ಮವರಾದಿದಾನೀಂ
ವಿಬಾಧತೇಽಸ್ಮಾನ್ ಸಕಲಾನ್ ಪ್ರಜಾಶ್ಚ ।
ಅಜ್ಞಾನಮಿಥ್ಯಾಮತಿರೂಪತೋಽಸೌ
ಪ್ರವಿಶ್ಯ ಸಜ್ಞಾನ ವಿರುದ್ಧ ರೂಪಃ ॥ ೩೪ ॥

ಪದಚ್ಛೇದ :ಕಲಿಃ, ತು, ಅಯಂ, ಬ್ರಹ್ಮವರಾತ್, ಇದಾನೀಮ್, ವಿಬಾಧತೇ, ಅಸ್ಮಾನ್, ಸಕಲಾನ್, ಪ್ರಜಾಃ, ಚ, ಅಜ್ಞಾನಮಿಥ್ಯಾಮತಿರೂಪತಃ, ಅಸೌ, ಪ್ರವಿಶ್ಯ, ಸಜ್ಞಾನವಿರುದ್ಧ ರೂಪಃ ॥

**ಅರ್ಥ** :- ಸಜ್ಞಾನವಿರುದ್ಧರೂಪಃ ಯಥಾರ್ಥ ಜ್ಞಾನಕ್ಕೆ ವಿರುದ್ಧವಾದ ಅಯಥಾರ್ಥಜ್ಞಾನ ರೂಪನಾದ **ಅಯಂ, ಕಲಿಃ ತು** ಈ ಕಲಿಯಾದರೂ, **ಇದಾನೀಮ್** ಈಗ, **ಬ್ರಹ್ಮವರಾತ್** ಬ್ರಹ್ಮದೇವರ ವರದಿಂದ, **ಸಕಲಾನ್** ಎಲ್ಲಾ, **ಅಸ್ಮಾನ್** ನಮ್ಮನ್ನು (ದೇವತೆಗಳನ್ನು), **ಚ** ಮತ್ತು, **ಪ್ರಜಾಃ** ಎಲ್ಲ ಜನರನ್ನೂ, **ಅಜ್ಞಾನ ಮಿಥ್ಯಾಮತಿ ರೂಪತಃ** ಅಜ್ಞಾನ ಮತ್ತು ಮಿಥ್ಯಾಜ್ಞಾನರೂಪದಲ್ಲಿ **ಅಸೌ** ಇಂದ್ರಿಯ ಸಮೂಹದಲ್ಲಿ, **ಪ್ರವಿಶ್ಯ** ಪ್ರವೇಶಿಸಿ, **ವಿಬಾಧತೇ** ಪೀಡಿಸುತ್ತಿದ್ದಾನೆ.

**ತಾತ್ಪರ್ಯ** :- ಕಲಿಯು ಬ್ರಹ್ಮದೇವರ ವರದಿಂದಾಗಿ ಅಜೇಯನಾಗಿದ್ದಾನೆ. ಅವನು ಈಗ ಎಲ್ಲ ದೇವತೆಗಳನ್ನು ಮತ್ತು ಮನುಷ್ಯರನ್ನು ಪ್ರವೇಶಿಸಿದ್ದಾನೆ. ಅವನ್ನು ಸರಿಯಾದ ಜ್ಞಾನಕ್ಕೆ ವಿರುದ್ಧವಾದ ಅಯಥಾರ್ಥ ಜ್ಞಾನರೂಪನು. ಈಗ ಅಜ್ಞಾನ ಮತ್ತು ಮಿಥ್ಯಾಜ್ಞಾನ ರೂಪದಿಂದ ಎಲ್ಲರ ಇಂದ್ರಿಯಗಳನ್ನು ಪ್ರವೇಶಿಸಿ ಅವರಿಗೆ ತಪ್ಪು ತಿಳುವಳಿಕೆಯನ್ನು ಉಂಟು ಮಾಡುವ ಮೂಲಕ ಪೀಡಿಸುತ್ತಿದ್ದಾನೆ.

**ತ್ವದಾಜ್ಞಯಾ ತಸ್ಯ ವರೋಽಬ್ಜಜೇನ ದತ್ತಃ ಸ ಆವಿಶ್ಯ ಶಿವಂ ಚಕಾರ ।**
**ಕದಾಗಮಾಂಸ್ತಸ್ಯ ಕುಯುಕ್ತಿ ಬಾಧಾನ್ ನಹಿ ತ್ವದನ್ಯಶ್ಚರಿತುಂ ಸಮರ್ಥಃ**
**॥ ೩೫ ॥**

ಪದಚ್ಛೇದ :ತ್ವದಾಜ್ಞಯಾ, ತಸ್ಯ, ವರಃ ಅಬ್ಜಜೇನ, ದತ್ತಃ, ಸಃ, ಆವಿಶ್ಯ, ವರಮ್, ಚಕಾರ, ಕದಾಗಮಾನ್, ತಸ್ಯ, ಕುಯುಕ್ತಿಬಾಧಾನ್, ನ, ಹಿ, ತ್ವದನ್ಯಃ, ಚರಿತುಮ್, ಸಮರ್ಥಃ।

**ಅರ್ಥ** :- **ತ್ವದಾಜ್ಞಯಾ** ನಿನ್ನ ಆಜ್ಞೆಯಿಂದ, **ತಸ್ಯ** ಆ ಕಲಿಗೆ, **ವರಃ** ವರವು, **ಅಬ್ಜಜೇನ** ಕಮಲ ಸಂಭವನಾದ ಬ್ರಹ್ಮದೇವನಿಂದ, **ದತ್ತಃ** ಕೊಡಲ್ಪಟ್ಟಿತು, **ಸಃ** ಆ ಕಲಿಯು, **ಶಿವಂ** ರುದ್ರದೇವರನ್ನು **ಆವಿಶ್ಯ** ಪ್ರವೇಶಿಸಿ, **ಕದಾಗಮಾನ್** ದುಷ್ಟ ಮೋಹಕ ಶಾಸ್ತ್ರಗಳನ್ನು **ಚಕಾರ** ಮಾಡಿದನು, **ತಸ್ಯ** ಆ ಕಲಿಯ, **ಕುಯುಕ್ತಿಬಾಧಾನ್** ಕೆಟ್ಟ ಯುಕ್ತಿಗಳಿಂದ ಕೂಡಿದ ಆ ಶಾಸ್ತ್ರಗಳ ದೂಷಣೆಗಳನ್ನು **ತ್ವದನ್ಯಃ** ನಿನ್ನನ್ನು ಬಿಟ್ಟು ಬೇರೆಯವರು, **ಚರಿತುಂ** ಮಾಡಲು, **ನ ಹಿ ಸಮರ್ಥಃ** ಸಮರ್ಥರಿಲ್ಲವಷ್ಟೆ

**ತಾತ್ಪರ್ಯ** :- ಬ್ರಹ್ಮದೇವರು ಕಲಿಗೆ ನಿನ್ನ ಆಜ್ಞೆಯಿಂದಲೇ ವರವನ್ನು ಕೊಟ್ಟಿದ್ದು. ಅಂತಹ ಅಜೇಯನಾದ ಕಲಿ ರುದ್ರದೇವರಲ್ಲಿ ಪ್ರವೇಶಿಸಿದ. ಆದುದರಿಂದ ರುದ್ರದೇವರು ಭಗವಂತನ ವ್ಯಕ್ತಿತ್ವವನ್ನು ಮರೆಮಾಚುವ ಮೋಹಕ ಶಾಸ್ತ್ರ ರಚನೆ ಮಾಡಿದರು. ಆ ದುರ್ಯುಕ್ತಿಗಳಿಂದ ಕೂಡಿದ ಶಾಸ್ತ್ರದ ವಿಚಾರಗಳನ್ನು ನಿರಾಕರಣೆ ಮಾಡುವ ದೋಷಗಳನ್ನು ನೀನು ಬಿಟ್ಟು ಬೇರೆ ಯಾರೂ ಹೇಳಲು ಸಾಧ್ಯವಿಲ್ಲ. ನೀನೇ ಸಮರ್ಥ.

**ವೇದಾಶ್ಚ ಸರ್ವೇ ಸಹಶಾಸ್ತ್ರಸಂಘಾ**
**ಉತ್ಸಾದಿತಾಸ್ತೇನ ನ ಸಂತಿ ತೇಽದ್ಯ ।**
**ತತ್ ಸಾಧು ಭೂಮಾವವತೀರ್ಯ**
**ವೇದಾನುದ್ಧೃತ್ಯ ಶಾಸ್ತ್ರಾಣಿ ಕುರುಷ್ವ ಸಮ್ಯಕ್ ॥ ೩೬ ॥**

ಪದಚ್ಛೇದ :ವೇದಾಃ, ಚ, ಸರ್ವೇ, ಸಹಶಾಸ್ತ್ರ ಸಂಘಾಃ, ಉತ್ಸಾದಿತಾಃ, ತೇನ, ನ, ಸಂತಿ, ತೇ, ಅದ್ಯ, ತತ್, ಸಾಧು, ಭೂಮೌ, ಅವತೀರ್ಯ, ವೇದಾನ್, ಉದ್ಧೃತ್ಯ, ಶಾಸ್ತ್ರಾಣಿ, ಕುರುಷ್ವ ಸಮ್ಯಕ್ ॥

**ಅರ್ಥ** :- **ತೇನ** ಆ ಕಲಿಯಿಂದ, **ಸಹಶಾಸ್ತ್ರಸಂಘಾಃ** ಶಾಸ್ತ್ರಗಳ ಸಮೂಹದಿಂದ ಕೂಡಿದ, **ಸರ್ವೇ** ಎಲ್ಲಾ, **ವೇದಾಃ** ವೇದಗಳು, **ಉತ್ಸಾದಿತಾಃ ಚ** ನಾಶಪಡಿಸಲ್ಪಟ್ಟವೆಯು ಕೂಡ, **ತೇ** ಆ ವೇದಗಳು, **ಅದ್ಯ** ಈಗ, **ನ ಸಂತಿ**

ಇಲ್ಲ, **ತತ್** ಆದುದರಿಂದ, **ಭೂಮೌ** ಭೂಮಿಯಲ್ಲಿ, **ಸಾಧು** ಪೂರ್ಣಾಂಶ ರೂಪದಿಂದ ಚೆನ್ನಾಗಿ, **ಅವತೀರ್ಯ** ಅವತರಿಸಿ, **ವೇದಾನ್** ವೇದಗಳನ್ನು, **ಉದ್ಧೃತ್ಯ** ಉದ್ಧರಿಸಿ, **ಶಾಸ್ತ್ರಾಣಿ** ಈಗಿರುವ ಶಾಸ್ತ್ರಗಳನ್ನು **ಸಮ್ಯಕ್ ಕುರುಷ್ವ** ಸಂಸ್ಕರಿಸು, **ಸಮ್ಯಕ್ ಶಾಸ್ತ್ರಾಣಿ** ಸಚ್ಛಾಸ್ತ್ರಗಳನ್ನು **ಕುರುಷ್ವ** ರಚನೆ ಮಾಡು.

**ತಾತ್ಪರ್ಯ** :- ಆ ಕಲಿ ಎಲ್ಲ ಶಾಸ್ತ್ರಗಳೊಟ್ಟಿಗೆ ವೇದವನ್ನೂ ನಾಶ ಮಾಡಿದ್ದಾನೆ. ಅಂದರೆ ವೇದದ ಸರಿಯಾದ ಅರ್ಥವನ್ನು ಯಾರೂ ತಿಳಿಯದಂತೆ ಆಗಿದೆ. ಆದುದರಿಂದ ನೀನು ಭೂಮಿಯಲ್ಲಿ ಚೆನ್ನಾಗಿ ಅವತರಿಸಬೇಕು. ಅಂದರೆ ಹಿಂದಿನ ದ್ವಾಪರಗಳಂತೆ ಒಂದಂಶದಿಂದ ಅಲ್ಲ, ಪೂರ್ಣಾಂಶದಿಂದ ಅವತರಿಸಿ, ವೇದಗಳನ್ನು ಉದ್ಧರಿಸಬೇಕು. ಈಗಿರುವ ಶಾಸ್ತ್ರಗಳಿಗೆ ಸಂಸ್ಕಾರ ಮಾಡಿ ಸರಿಪಡಿಸಬೇಕು. ಜೊತೆಗೆ ನೂತನವಾಗಿ ಸಚ್ಛಾಸ್ತ್ರಗಳನ್ನು ರಚಿಸಬೇಕು.

**ಅದೃಶ್ಯಮಜ್ಞೇಯಮತರ್ಕ್ಯರೂಪಂ**
**ಕಲಿಂ ವಿಲೀನಂ ಹೃದಯೇಽಖಿಲಸ್ಯ ।**
**ಸಚ್ಛಾಸ್ತ್ರಶಸ್ತ್ರೇಣ ನಿಹತ್ಯ ಶೀಘ್ರಂ**
**ಪದಂ ನಿಜಂ ದೇಹಿ ಮಹಾಜನಸ್ಯ ॥ ೩೭ ॥**

ಪದಚ್ಛೇದ :**ಅದೃಶ್ಯಮ್, ಅಜ್ಞೇಯಮ್, ಅತರ್ಕ್ಯರೂಪಮ್, ಕಲಿಮ್, ವಿಲೀನಮ್, ಹೃದಯೇ, ಅಖಿಲಸ್ಯ, ಸಚ್ಛಾಸ್ತ್ರಶಸ್ತ್ರೇಣ, ನಿಹತ್ಯ, ಶೀಘ್ರಮ್, ಪದಮ್, ನಿಜಮ್, ದೇಹಿ, ಮಹಾಜನಸ್ಯ ॥**

**ಅರ್ಥ** :- **ಅದೃಶ್ಯಂ** ಯಾರ ಕಣ್ಣಿಗೂ ಕಾಣದ, **ಅಜ್ಞೇಯಂ** ಯಾವ ಇಂದ್ರಿಯಗಳಿಂದಲೂ ತಿಳಿಯಲು ಸಾಧ್ಯನಲ್ಲದ, **ಅತರ್ಕ್ಯರೂಪಮ್** ಮನಸ್ಸಿನಿಂದ ಊಹಿಸಲೂ ಸಾಧ್ಯವಾಗದ ಸ್ವರೂಪವುಳ್ಳ, **ಅಖಿಲಸ್ಯ** ಎಲ್ಲರ **ಹೃದಯೇ** ಹೃದಯದಲ್ಲಿ **ವಿಲೀನಮ್** ಅಡಗಿರುವ, **ಕಲಿಂ** ಕಲಿಯನ್ನು **ಸಚ್ಛಾಸ್ತ್ರಶಸ್ತ್ರೇಣ** ಸಚ್ಛಾಸ್ತ್ರಗಳೆಂಬ ಆಯುಧಗಳಿಂದ, **ಶೀಘ್ರಂ** ಕೂಡಲೇ, **ನಿಹತ್ಯ** ಕೊಂದು, **ಮಹಾಜನಸ್ಯ** ಸಜ್ಜನ ಸಮೂಹಕ್ಕೆ, **ನಿಜಂ** ಅವರವರ, **ಪದಂ** ಸ್ಥಾನವನ್ನು **ದೇಹಿ** ಕರುಣಿಸು.

ತಾತ್ಪರ್ಯ :- ಈ ಕಲಿ ಎಲ್ಲರ ಹೃದಯದ ಒಳಗೆ ಅಡಗಿ ಕುಳಿತಿದ್ದಾನೆ. ಆದರೆ, ಅವನನ್ನು ನಮ್ಮ ಕಣ್ಣಿನಿಂದ ಕಾಣಲು ಆಗುವುದಿಲ್ಲ. ಯಾವ ಇಂದ್ರಿಯದಿಂದಲೂ ಅವನನ್ನು ತಿಳಿಯಲು ಸಾಧ್ಯವಿಲ್ಲ. ಅವನ ಸ್ವರೂಪವನ್ನು ತರ್ಕದಿಂದ ಊಹೆ ಮಾಡಲೂ ಬರುವುದಿಲ್ಲ. ಅವನು ಅಜ್ಞಾನ ಮಿಥ್ಯಾಜ್ಞಾನ ರೂಪವಾದುದರಿಂದ ಸಚ್ಛಾಸ್ತ್ರಗಳೆಂಬ ಆಯುಧಗಳಿಂದ ಅವನನ್ನು ಸಂಹಾರ ಮಾಡಿ ನಿನ್ನ ಭಕ್ತರಾದ ಸಜ್ಜನರಿಗೆ ಅವರವರ ಯೋಗ್ಯತೆಗೆ ತಕ್ಕ ಸ್ಥಾನವನ್ನು ಅನುಗ್ರಹಿಸು.

**ಋತೇ ಭವಂತಂ ನಹಿ ತನ್ನಿಹಂತಾ**
**ತ್ವಮೇಕ ಏವಾಖಿಲ ಶಕ್ತಿಪೂರ್ಣಃ ।**
**ತತೋ ಭವಂತಂ ಶರಣಂ ಗತಾ ವಯಂ**
**ತಮೋನಿಹತ್ಯೈ ನಿಜಬೋಧ ವಿಗ್ರಹಮ್ ॥ ೩೮ ॥**

**ಪದಚ್ಛೇದ :ಋತೇ, ಭವಂತಮ್, ನಹಿ, ತನ್ನಿಹಂತಾ, ತ್ವಮ್, ಏಕಃ, ಏವ, ಅಖಿಲಶಕ್ತಿಪೂರ್ಣಃ, ತತಃ, ಭವಂತಮ್, ಶರಣಮ್, ಗತಾಃ, ವಯಮ್, ತಮೋನಿಹತ್ಯೈ, ನಿಜಬೋಧವಿಗ್ರಹಮ್ ॥**

**ಅರ್ಥ** :- **ಭವಂತಂ** ನಿನ್ನನ್ನು **ಋತೇ** ಹೊರತುಪಡಿಸಿ, **ತನ್ನಿಹಂತಾ** ಆ ಕಲಿಯನ್ನು ನಿಗ್ರಹಿಸುವವರು, **ನಹಿ** ಇಲ್ಲವಷ್ಟೆ **ಅಖಿಲಶಕ್ತಿಪೂರ್ಣಃ** ಎಲ್ಲಾ ಶಕ್ತಿಯಿಂದ ಪೂರ್ಣನಾದವನು, **ತ್ವಮ್** ನೀನು, **ಏಕಃ ಏವ** ಒಬ್ಬನೇ, **ತತಃ** ಆದುದರಿಂದ, **ತಮೋನಿಹತ್ಯೈ** ಅಜ್ಞಾನವನ್ನು ಕಳೆದು ಕೊಳ್ಳಲು, **ವಯಂ** ನಾವು, **ನಿಜಬೋಧವಿಗ್ರಹಂ** ಸ್ವರೂಪಭೂತ ನಾದ ಜ್ಞಾನವೇ ಶರೀರವಾಗಿ ಉಳ್ಳ, **ಭವಂತಂ** ನಿನ್ನನ್ನು, **ಶರಣಂ** ರಕ್ಷಕನನ್ನಾಗಿ, **ಗತಾಃ** ಹೊಂದಿರುವೆವು.

ತಾತ್ಪರ್ಯ :- ಭಗವಂತನನ್ನು ಹೊರತು ಪಡಿಸಿ ಕಲಿಯನ್ನು ನಿಗ್ರಹ ಮಾಡುವವರು ಯಾರೂ ಇಲ್ಲ. ಆದುದರಿಂದಲೇ ಎಲ್ಲ ದೇವತೆಗಳು ಭಗವಂತನ ಮೊರೆ ಹೊಂದಿ, ಅಜ್ಞಾನವನ್ನು ಕಳೆದುಕೊಳ್ಳಲು ಬಯಸಿದ್ದಾರೆ. ಅವನು ಜ್ಞಾನ ಸ್ವರೂಪಿಯಾದುದರಿಂದ ದೇವತೆಗಳ ಅಜ್ಞಾನ ಕಳೆದು ಅನುಗ್ರಹಿಸುತ್ತಾನೆ.

ಇತೀರತಸ್ತೈರಭಯಂ ಪ್ರದಾಯ
ಸುರೇಶ್ವರಾಣಾಂ ಪರಮೋಽಪ್ರಮೇಯಃ ।
ಪ್ರಾದುರ್ಬಭೂವಾಮೃತಭೂರಿಳಾಯಾಂ
ವಿಶುದ್ಧ ವಿಜ್ಞಾನಘನಸ್ವರೂಪಃ ॥ ೩೯ ॥

ಪದಚ್ಛೇದ :ಇತಿ, ಈರಿತಃ, ತೈಃ, ಅಭಯಮ್, ಪ್ರದಾಯ, ಸುರೇಶ್ವರಾಣಾಮ್, ಪರಮಃ, ಅಪ್ರಮೇಯಃ, ಪ್ರಾದುರ್ಬಭೂವ, ಅಮೃತಭೂಃ, ಇಳಾಯಾಮ್, ವಿಶುದ್ಧ ವಿಜ್ಞಾನಘನಸ್ವರೂಪಃ ।

**ಅರ್ಥ** :- **ಇತಿ** ಹಿಂದೆ ಹೇಳಿದ ರೀತಿಯಲ್ಲಿ **ತೈಃ** ಆ ದೇವತೆಗಳಿಂದ, **ಈರಿತಃ** ಹೇಳಲ್ಪಟ್ಟ **ಪರಮಃ** ಸರ್ವೋತ್ತಮನಾದ, **ಅಪ್ರಮೇಯಃ** ಪರಿಪೂರ್ಣವಾಗಿ ತಿಳಿಯಲು ಅಶಕ್ಯನಾದ, **ಅಮೃತಭೂಃ** ಮುಕ್ತರಿಗೂ ಆಶ್ರಯನಾದ, ಅಪ್ರಾಕೃತ ದೇಹವುಳ್ಳ, **ವಿಶುದ್ಧವಿಜ್ಞಾನಘನಸ್ವರೂಪಃ** ನಿರ್ಮಲವಾದ ಪರಿಪೂರ್ಣಜ್ಞಾನವೇ ಸ್ವರೂಪವಾಗಿ ಉಳ್ಳ ಪರಮಾತ್ಮನು, **ಸುರೇಶ್ವರಾಣಾಂ** ದೇವತೆಗಳಿಗೆ, **ಅಭಯಂ** ಅಭಯವನ್ನು **ಪ್ರದಾಯ** ಕೊಟ್ಟು **ಇಳಾಯಾಮ್** ಭೂಮಿಯಲ್ಲಿ **ಪ್ರಾದುರ್ಬಭೂವ** ಅವತರಿಸಿದನು.

**ತಾತ್ಪರ್ಯ** :- ಇಲ್ಲಿಯವರೆಗೆ ನಿರೂಪಿಸಿದ ರೀತಿಯಲ್ಲಿ ಸಮುದ್ರಮಥನ, ಅಲ್ಲಿ ಭಗವಂತ ದೇವತೆಗಳಿಗೆ ಮಾಡಿದ ಅನುಗ್ರಹ, ಹಾಗಿದ್ದರೂ ಇಂದು ಲೋಕಕ್ಕೆ ಬಂದೊದಗಿದ ದುಃಸ್ಥಿತಿ, ಇವೆಲ್ಲವನ್ನು ವರ್ಣಿಸಿ, ನೀನೆ ನಮಗೆ ಗತಿ ಎಂದು ಪ್ರಾರ್ಥಿಸಿದಾಗ ಭಗವಂತ ದೇವತೆಗಳಿಗೆ ಅಭಯವನ್ನಿತ್ತ. ತಾನು ಅವತಾರ ಮಾಡುತ್ತೇನೆ ಎಂದು. ಈ ಭಗವಂತ ಸರ್ವೋತ್ತಮ. ಅವನನ್ನು ಪೂರ್ತಿಯಾಗಿ ಯಾರೂ ತಿಳಿಯಲಾರರು. ಅವನು ಮುಕ್ತರಿಗೂ ಆಶ್ರಯ. ಅವತರಿಸಿದರೂ ಅಮೃತನಾಗಿಯೇ ಇರುತ್ತಾನೆ. ಏಕೆಂದರೆ ಅವನು ಅಪ್ರಾಕೃತ ದೇಹವುಳ್ಳವ. ಆದುದರಿಂದಲೇ ಶುದ್ಧವಾದ ಪೂರ್ಣವಾದ ಜ್ಞಾನರೂಪಿ. ಅವನು ಭೂಮಿಯಲ್ಲಿ ಅವತರಿಸಿದ.

### ವ್ಯಾಸರ ಪೂರ್ವಜರು

ವಸಿಷ್ಠನಾಮಾ ಕಮಲೋದ್ಭವಾತ್ಮಜಃ
ಸುತೋಽಸ್ಯ ಶಕ್ತಿಸ್ತನಯಃ ಪರಾಶರಃ ।

ತಸ್ಯೋತ್ತಮಂ ಸೋಽಪಿ ತಪೋಽಚರದ್ಧರಿಃ
ಸುತೋ ಮಮ ಸ್ಯಾದಿತಿ ತದ್ಧರಿರ್ದದೌ ॥ ೪೦ ॥

ಪದಚ್ಛೇದ :ವಸಿಷ್ಠನಾಮಾ, ಕಮಲೋದ್ಭವಾತ್ಮಜಃ, ಸುತಃ ಅಸ್ಯ, ಶಕ್ತಿಃ, ತನಯಃ, ಪರಾಶರಃ, ತಸ್ಯ, ಉತ್ತಮಮ್, ಸಃ, ಅಪಿ, ತಪಃ, ಅಚರತ್, ಹರಿಃ, ಸುತಃ ಮಮ, ಸ್ಯಾತ್, ಇತಿ, ತತ್, ಹರಿಃ ದದೌ ॥

**ಅರ್ಥ** :- **ವಸಿಷ್ಠನಾಮಾ** ವಸಿಷ್ಠ ಎಂದು ಹೆಸರುಳ್ಳ ಋಷಿಯು, **ಕಮಲೋದ್ಭವಾತ್ಮಜಃ** ಕಮಲ ಸಂಭವನಾದ ಚತುರ್ಮುಖಬ್ರಹ್ಮನ ಮಗ, **ಅಸ್ಯ** ಇವನಿಗೆ, **ಶಕ್ತಿಃ** ಶಕ್ತಿ ಎಂಬ ಋಷಿಯು, **ಸುತಃ** ಮಗನು, **ತಸ್ಯ** ಆ ಶಕ್ತಿಯ **ತನಯಃ** ಮಗನು, **ಪರಾಶರಃ** ಪರಾಶರರು. **ಸಃ ಅಪಿ**, ಆ ಪರಾಶರರೂ, ಕೂಡ, **ಹರಿಃ** ಭಗವಂತನು, **ಮಮ** ನನ್ನ **ಸುತಃ** ಮಗನು, **ಸ್ಯಾತ್** ಆಗಲಿ, **ಇತಿ** ಎಂದು, **ಉತ್ತಮಂ** ಉತ್ತಮವಾದ, **ತಪಃ** ತಪಸ್ಸನ್ನು **ಅಚರತ್** ಆಚರಿಸಿದರು, **ತತ್** ಅವನ ಅಭೀಷ್ಟವನ್ನು **ಹರಿಃ** ಭಗವಂತನು, **ದದೌ** ಕೊಟ್ಟನು.

**ತಾತ್ಪರ್ಯ** :- ಬ್ರಹ್ಮದೇವರ ಮಗ ವಸಿಷ್ಠ ಋಷಿಗಳು. ಅವರ ಮಗ ಶಕ್ತಿ ಎಂಬ ಋಷಿ. ಅವರ ಮಗ ಪರಾಶರರು. ಈ ಪರಾಶರರು ಭಗವಂತನೇ ತನ್ನ ಮಗನಾಗ ಬೇಕೆಂದು ತಪಸ್ಸನ್ನು ಮಾಡಿದಾಗ ಭಗವಂತ ಅವರ ಆಸೆಯನ್ನು ಈಡೇರಿಸಿದ.

### ವಸುವಿನ ಅವಸ್ಥೆ

ಉವಾಚ ಚೈನಂ ಭಗವಾನ್ ಸುತೋಷಿತೋ
ವಸೋರ್ಮದೀಯಸ್ಯ ಸುತಾಸ್ತಿ ಶೋಭನಾ ।
ವನೇ ಮೃಗಾರ್ಥಂ ಚರತೋಽಸ್ಯ ವೀರ್ಯಂ
ಪಪಾತ ಭಾರ್ಯಾಂ ಮನಸಾ ಗತಸ್ಯ ॥ ೪೧ ॥

ಪದಚ್ಛೇದ :ಉವಾಚ, ಚ, ಏನಮ್, ಭಗವಾನ್, ಸುತೋಷಿತಃ, ವಸೋಃ, ಮದೀಯಸ್ಯ, ಸುತಾ, ಅಸ್ತಿ, ಶೋಭನಾ, ವನೇ, ಮೃಗಾರ್ಥಮ್, ಚರತಃ , ಅಸ್ಯ, ವೀರ್ಯಮ್, ಪಪಾತ, ಭಾರ್ಯಾಮ್, ಮನಸಾ, ಗತಸ್ಯ ॥

**ಅರ್ಥ** :- **ಸುತೋಷಿತಃ** ತಪಸ್ಸಿನಿಂದ ಸಂತೋಷ ಗೊಳಿಸಲ್ಪಟ್ಟ, **ಭಗವಾನ್** ಪರಮಾತ್ಮನು, **ಏನಂ** ಈ ಪರಾಶರ ಮುನಿಗಳನ್ನು ಕುರಿತು,

**ಉವಾಚ ಚ** ಹೇಳಿದನೂ ಕೂಡ, **ಮದೀಯಸ್ಯ** ನನ್ನ ಭಕ್ತನಾದ, **ವಸೋಃ** ಉಪರಿಚರ ವಸುವಿನ, **ಸುತಾ** ಮಗಳು, **ಶೋಭನಾ** ರೂಪಯೌವನ ಗಳಿಂದ ಶೋಭಿತಳಾಗಿದ್ದಾಳೆ, **ಭಾರ್ಯಾಂ** ಹೆಂಡತಿಯಾದ ಅಚ್ಛೋದೆಯನ್ನು, **ಮನಸಾ** ಮನಸ್ಸಿನಿಂದ, **ಗತಸ್ಯ** ಹೊಂದಿರುವ (ಚಿಂತಿಸುತ್ತಿರುವ), **ವನೇ** ಕಾಡಿನಲ್ಲಿ, **ಮೃಗಾರ್ಥಂ** ಬೇಟೆಗೋಸ್ಕರ, **ಚರತಃ** ಸಂಚರಿಸುತ್ತಿರುವ, **ಅಸ್ಯ** ಈ ಉಪರಿಚರ ವಸುವಿನ, **ವೀರ್ಯಮ್** ವೀರ್ಯವು, **ಪಪಾತ** ಸ್ಖಲಿಸಿತು.

**ತಾತ್ಪರ್ಯ** :- ಪರಾಶರರ ತಪಸ್ಸಿಗೆ ಭಗವಂತ ಪ್ರೀತನಾದ. ಅವನನ್ನು ಕುರಿತು ಮುಂದೆ ಹೇಳುವ ಮಾತನ್ನು ಹೇಳುತ್ತಾನೆ. ನನ್ನ ಭಕ್ತ ಉಪರಿಚರವಸು. ಅವನ ಮಡದಿ ಅಚ್ಛೋದೆ ಇವರಿಗೆ ಒಬ್ಬಳು ಮಗಳು. ಅವಳು ರೂಪ ಯೌವನಗಳಿಂದ ಕೂಡಿದವಳು. ಈ ಮಗಳು ಹುಟ್ಟಿದ ವೃತ್ತಾಂತವನ್ನು ಹೇಳುತ್ತಿದ್ದಾನೆ, ಶ್ರೀಹರಿ. ಈ ವಸು ಒಮ್ಮೆ ಕಾಡಿಗೆ ಬೇಟೆಗೆ ಹೋಗಿದ್ದ. ಮನಸ್ಸಿನಲ್ಲಿ ಹೆಂಡತಿಯದ್ದೇ ಸ್ಮರಣೆ. ಹೀಗಾಗಿ ಅವನಿಗೆ ವೀರ್ಯಸ್ಖಲನ ವಾಯಿತು.

**ತಚ್ಛ್ಯೇನ ಹಸ್ತೇ ಪ್ರದದೌ ಸ ತಸ್ಯೈ**
**ದಾತುಂ ತದನ್ಯೇನ ತು ಯುಧ್ಯತೋಽಪತತ್ ।**
**ಜಗ್ರಾಸ ತನ್ಮತ್ಸ್ಯವಧೂರ್ಯಮಸ್ವಸುರ್ಜಲಸ್ಥ-**
**ಮೇನಾಂ ಜಗೃಹುಶ್ಚ ದಾಶಾಃ ॥ ೪೨ ॥**

ಪದಚ್ಛೇದ :ತತ್, ಶ್ಯೇನಹಸ್ತೇ, ಪ್ರದದೌ, ಸಃ, ತಸ್ಯೈ, ದಾತುಮ್, ತತ್, ಅನ್ಯೇನ, ತು, ಯುಧ್ಯತಃ, ಅಪತತ್, ಜಗ್ರಾಸ, ತತ್, ಮತ್ಸ್ಯವಧೂಃ, ಯಮಸ್ವಸುಃ, ಜಲಸ್ಥಮ್, ಏನಾಮ್, ಜಗೃಹುಃ, ಚ, ದಾಶಾಃ ॥

**ಅರ್ಥ** :- **ಸಃ** ಆ ವಸು ಚಕ್ರವರ್ತಿಯು, **ತತ್** ಆ ವೀರ್ಯವನ್ನು, **ತಸ್ಯೈ** ತನ್ನ ಹೆಂಡತಿಗೆ, **ದಾತುಂ** ಕೊಡಲು, **ಶ್ಯೇನಹಸ್ತೇ** ಗಿಡುಗಪಕ್ಷಿಯ ವಶಕ್ಕೆ, **ಪ್ರದದೌ** ಕೊಟ್ಟನು, **ತತ್** ಆ ವೀರ್ಯವು, **ಅನ್ಯೇನ** ಮತ್ತೊಂದು ಗಿಡುಗದೊಂದಿಗೆ, **ಯುಧ್ಯತಃ** ಯುದ್ಧ ಮಾಡುತ್ತಿರುವಾಗ, ಈ ಗಿಡುಗನಿಂದ, **ಅಪತತ್** ಜಾರಿ ಬಿದ್ದಿತು, **ಯಮಸ್ವಸುಃ** ಯಮುನೆಯ, **ಜಲಸ್ಥಮ್** ನೀರಿನಲ್ಲಿ ಬಿದ್ದಿರುವ, **ತತ್** ಆ ವೀರ್ಯವನ್ನು, **ಮತ್ಸ್ಯವಧೂಃ** ಹೆಣ್ಣುಮೀನು, **ಜಗ್ರಾಸ** ನುಂಗಿತು, **ಏನಾಂ ಚ** ಈ ಹೆಣ್ಣು ಮೀನನ್ನಾದರೂ, **ದಾಶಾಃ** ಬೆಸ್ತರು, **ಜಗೃಹುಃ** ಹಿಡಿದರು.

**ತಾತ್ಪರ್ಯ** :- ಹೊರ ಬಂದ ವೀರ್ಯ ವ್ಯರ್ಥವಾಗಬಾರದೆಂದು ಆ ವಸು ಎಲೆಯಲ್ಲಿ ವೀರ್ಯವನ್ನು ಸಂಗ್ರಹಿಸಿದ. ತನ್ನ ಹೆಂಡತಿಗೆ ತಲುಪಿಸಲು ಗಿಡುಗ ಪಕ್ಷಿಯ ವಶಕ್ಕೆ ಒಪ್ಪಿಸಿದ. ಆದರೆ, ಮತ್ತೊಂದು ಪಕ್ಷಿ ಮಾಂಸ ಹಿಡಿದಿದೆ ಎಂಬ ಭ್ರಮೆಯಿಂದ ಯುದ್ಧಕ್ಕೆ ಬಂದಿತು. ಆಗ ಈ ವೀರ್ಯ ಕೆಳಗೆ ಬಿದ್ದಿತು. ಕೆಳಗೆ ಯಮುನೆ ಹರಿಯುತ್ತಿದೆ. ಆ ನೀರಿಗೆ ಬಿದ್ದ ವೀರ್ಯವನ್ನು ಒಂದು ಹೆಣ್ಣು ಮೀನು ನುಂಗಿತು. ಆ ಮೀನನ್ನು ಮೀನುಗಾರರು ಹಿಡಿದಿದ್ದಾರೆ.

**ವಿರಾಟನ ಉತ್ಪತ್ತಿ**

**ತದ್ಗರ್ಭತೋಽಭೂನ್ಮಿಥುನಂ ಸ್ವರಾಜ್ಞೇ ನ್ಯವೇದಯನ್**
**ಸೋಽಪಿ ವಸೋಃ ಸಮರ್ಪಯತ್ ।**
**ಪುತ್ರಂ ಸಮಾದಾಯ ಸುತಾಂ ಸ**
**ತಸ್ಮೈ ದದೌ ಸುತೋಽಭೂದಥ ಮತ್ಸ್ಯರಾಜಃ ॥ ೪೩ ॥**

ಪದಚ್ಛೇದ :ತದ್ಗರ್ಭತಃ, ಅಭೂತ್, ಮಿಥುನಮ್, ಸ್ವರಾಜ್ಞೇ, ನ್ಯವೇದಯನ್, ಸಃ, ಅಪಿ, ವಸೋಃ, ಸಮರ್ಪಯತ್, ಪುತ್ರಮ್, ಸಮುದಾಯ, ಸುತಾಮ್, ಸಃ, ತಸ್ಮೈ, ದದೌ, ಸುತಃ, ಅಭೂತ್, ಅಥ, ಮತ್ಸ್ಯರಾಜಃ ॥

**ಅರ್ಥ** :- **ತದ್ಗರ್ಭತಃ** ಆ ಮೀನಿನ ಗರ್ಭದಲ್ಲಿ, **ಮಿಥುನಂ** ಒಂದು ಗಂಡು, ಮತ್ತು ಒಂದು ಹೆಣ್ಣು ಜೋಡಿ, **ಅಭೂತ್** ಹುಟ್ಟಿತು, (ಅದನ್ನು) **ಸ್ವರಾಜ್ಞೇ** ತಮ್ಮ ರಾಜನಾದ ದಾಶರಾಜನಿಗೆ, **ನ್ಯವೇದಯನ್** ಅರ್ಪಿಸಿದರು, **ಸಃ ಅಪಿ** ಆ ದಾಶರಾಜನೂ ಕೂಡ, **ವಸೋಃ** ವಸುಚಕ್ರವರ್ತಿಗೆ, **ಸಮರ್ಪಯತ್** ಅರ್ಪಿಸಿದನು, **ಸಃ** ಆ ವಸು ಚಕ್ರವರ್ತಿಯು, **ಪುತ್ರಂ** ಮಗನನ್ನು, **ಸಮಾದಾಯ** ಸ್ವೀಕರಿಸಿ, **ಸುತಾಂ** ಮಗಳನ್ನು, **ತಸ್ಮೈ** ಆ ದಾಶರಾಜನಿಗೆ, **ದದೌ** ಕೊಟ್ಟನು, **ಅಥ** ಅನಂತರ, **ಸುತಃ** ಮಗನು, **ಮತ್ಸ್ಯರಾಜಃ** ಮತ್ಸ್ಯರಾಜನು, **ಅಭೂತ್** ಆದನು.

**ತಾತ್ಪರ್ಯ** :- ಹೆಣ್ಣುಮೀನು ನುಂಗಿದ ವಸುವಿನ ವೀರ್ಯದಿಂದ ಅದರ ಗರ್ಭದಲ್ಲಿ ಎರಡು ಮಕ್ಕಳು ಹುಟ್ಟಿದವು. ಒಂದು ಗಂಡು ಒಂದು ಹೆಣ್ಣು. ಮೀನುಗಾರರು ಆ ಮಕ್ಕಳನ್ನು ತಮ್ಮ ರಾಜನಾದ ದಾಶರಾಜನಿಗೆ ಒಪ್ಪಿಸಿದರು. ಆ ದಾಶರಾಜನು ತನಗೂ ಒಡೆಯನಾದ ವಸುಚಕ್ರವರ್ತಿಗೆ ಸಮರ್ಪಿಸಿದ. ಆಗ ವಸುಚಕ್ರವರ್ತಿ ಮಗನನ್ನು ಸ್ವೀಕರಿಸಿ, ಮಗಳನ್ನು ದಾಶರಾಜನಿಗೆ

ಒಪ್ಪಿಸಿದ. ಈ ಮಗನೇ ಮುಂದೆ ಮತ್ಸ್ಯರಾಜ ಎಂದು ಪ್ರಸಿದ್ಧನಾದ. ಅವನೇ ವಿರಾಟ. ಅವನ ದೇಶ ಮತ್ಸ್ಯದೇಶವೆಂದೇ ಪ್ರಸಿದ್ಧಿ ಪಡೆಯಿತು.

**ಸತ್ಯವತೀ ಸೌಂದರ್ಯ**

**ಕನ್ಯಾತು ಸಾ ದಾಶರಾಜಸ್ಯ ಸದ್ಮನ್ಯವರ್ಧ-**
**ತಾತೀವ ಸುರೂಪಯುಕ್ತಾ ।**
**ನಾಮ್ನಾ ಚ ಸಾ ಸತ್ಯವತೀತಿ ತಸ್ಯಾಂ ತವಾತ್ಮ-**
**ಜೋऽಹಂ ಭವಿತಾಸ್ಮ್ಯಜೋऽಪಿ ॥ ೪೪ ॥**

ಪದಚ್ಛೇದ :ಕನ್ಯಾ, ತು, ಸಾ, ದಾಶರಾಜಸ್ಯ, ಸದ್ಮನಿ, ಅವರ್ಧತ, ಅತಿ, ಇವ, ಸುರೂಪಯುಕ್ತಾ, ನಾಮ್ನಾ, ಚ, ಸಾ, ಸತ್ಯವತೀ, ಇತಿ, ತಸ್ಯಾಮ್, ತವ, ಆತ್ಮಜಃ, ಅಹಮ್, ಭವಿತಾಸ್ಮಿ, ಅಜಃ, ಅಪಿ ॥

**ಅರ್ಥ** :- **ಅತಿ ಇವ** ಎಲ್ಲಾ ಸ್ತ್ರೀಯರಿಗಿಂತಲೂ ಹೆಚ್ಚೋ ಎಂಬಂತೆ, **ಸುರೂಪಯುಕ್ತಾ** ಸೌಂದರ್ಯದಿಂದ ಕೂಡಿದ, **ಸಾ ಕನ್ಯಾತು** ಆ ಕನ್ಯೆಯಾದರೂ, **ದಾಶರಾಜಸ್ಯ** ದಾಶರಾಜನ, **ಸದ್ಮನಿ** ಮನೆಯಲ್ಲಿ **ಅವರ್ಧತ** ಬೆಳೆದಳು, **ಸಾ ಚ** ಆ ಕನ್ಯೆಯಾದರೂ, **ನಾಮ್ನಾ** ಹೆಸರಿನಿಂದ, **ಸತ್ಯವತೀ ಇತಿ** ಸತ್ಯವತೀ ಎಂಬುದಾಗಿ, **ಅಹಂ** ನಾನು (ಭಗವಂತನು), **ಅಜಃ ಅಪಿ** ಹುಟ್ಟು ಇಲ್ಲದವನಾದರೂ, **ತಸ್ಯಾಂ** ಆ ಸತ್ಯವತಿಯಲ್ಲಿ **ತವ** ನಿನ್ನ **ಆತ್ಮಜಃ** ಮಗನಾಗಿ, **ಭವಿತಾಸ್ಮಿ** ಹುಟ್ಟುತ್ತೇನೆ.

**ತಾತ್ಪರ್ಯ** :- ಆ ಹೆಣ್ಣು ಮಗಳು ದಾಶರಾಜನ ಮನೆಯಲ್ಲಿ ಬೆಳೆದಳು. ಅವಳ ಸೌಂದರ್ಯ ಎಲ್ಲ ಮನುಷ್ಯ ಸ್ತ್ರೀಯರಿಗಿಂತ ಹೆಚ್ಚು. ದೇವತಾ ಸ್ತ್ರೀಯರಿಗಿಂತ ಸ್ವಲ್ಪ ಕಡಿಮೆ. ಅವಳ ಹೆಸರು ಸತ್ಯವತಿ. ಭಗವಂತನಿಗೆ ಜನನ-ಮರಣಗಳು ಇಲ್ಲ. ಆದರೂ ಸತ್ಯವತಿಯಲ್ಲಿ ಪರಾಶರರಿಂದ ತಾನು ಅವತರಿಸುತ್ತೇನೆ ಎಂದು ಪರಾಶರರಿಗೆ ಹೇಳಿದ.

**ವೇದವ್ಯಾಸ ಅವತಾರ :**

**ಇತೀರಿತಶ್ಚಕ್ರಧರೇಣ ತಾಂ ಮುನಿರ್ಜಗಾಮ**
**ಮಾರ್ತಾಂಡಸುತಾಂ ಸಮುದ್ರಗಾಮ್ ।**
**ಉತ್ತಾರಯಂತೀಮಥ ತತ್ರ ವಿಷ್ಣುಃ**
**ಪ್ರಾದುರ್ಬಭೂವಾಶು ವಿಶುದ್ಧಚಿದ್ಘನಃ ॥ ೪೫ ॥**

ಪದಚ್ಛೇದ :ಇತಿ, ಈರಿತಃ, ಚಕ್ರಧರೇಣ, ತಾಂ, ಮುನಿಃ, ಜಗಾಮ, ಮಾರ್ತಾಂಡಸುತಾಮ್, ಸಮುದ್ರಗಾಮ್, ಉತ್ತಾರಯಂತೀಮ್, ಅಥ, ತತ್ರ, ವಿಷ್ಣುಃ, ಪ್ರಾದುರ್ಬಭೂವ, ಆಶು, ವಿಶುದ್ಧಚಿದ್ಘನಃ ॥

**ಅರ್ಥ** :- **ಚಕ್ರಧರೇಣ** ಚಕ್ರಧಾರಿಯಾದ ಪರಮಾತ್ಮನಿಂದ, **ಇತಿ** ಈ ರೀತಿಯಾಗಿ, **ಈರಿತಃ** ಹೇಳಲ್ಪಟ್ಟ **ಮುನಿಃ** ಪರಾಶರ ಮುನಿಗಳು, **ಸಮುದ್ರಗಾಂ** ಸಮುದ್ರವನ್ನು ಸೇರುವ, **ಮಾರ್ತಾಂಡಸುತಾಂ** ಸೂರ್ಯ ಪುತ್ರಿಯಾದ ಯಮುನೆಯನ್ನು, **ಉತ್ತಾರಯಂತೀಂ** ದಾಟಿಸುತ್ತಿರುವ, **ತಾಂ** ಆ ಸತ್ಯವತಿಯನ್ನು, **ಜಗಾಮ** ಸೇರಿದರು, **ಅಥ** ಅನಂತರ, **ತತ್ರ** ಆ ಸತ್ಯವತಿಯಲ್ಲಿ, **ಆಶು** ಆ ಕ್ಷಣದಲ್ಲಿಯೇ, **ವಿಶುದ್ಧಚಿದ್ಘನಃ** ನಿರ್ಮಲವಾದ ಜ್ಞಾನವೇ ಸ್ವರೂಪವಾಗಿ ಉಳ್ಳ, **ವಿಷ್ಣುಃ** ಪರಮಾತ್ಮನು, **ಪ್ರಾದುರ್ಬಭೂವ** ಅವತರಿಸಿದನು.

**ತಾತ್ಪರ್ಯ** :- ಈ ರೀತಿ ಭಗವಂತನ ಹೇಳಿದಾಗ ಪರಾಶರ ಮುನಿಗಳು ಯಮುನಾದಡಕ್ಕೆ ಬಂದರು. ಅಲ್ಲಿ ಯಮುನೆಯನ್ನು ದೋಣಿಯಲ್ಲಿ ದಾಟಿಸುವ ಕೆಲಸ ಸತ್ಯವತಿಯದ್ದು. ಹೀಗೆ ದಾಟುತ್ತಿರುವಾಗ ಪರಾಶರರು ಸತ್ಯವತಿಯ ಜೊತೆ ಸೇರಿದರು. ಸಮಾಗಮದ ಕ್ಷಣದಲ್ಲಿಯೇ ಜ್ಞಾನರೂಪಿಯಾದ ಭಗವಂತ, ಅಲ್ಲಿ ಅವತರಿಸಿದ.

ಭಗವಂತನಿಗೆ ಗರ್ಭವಾಸಾದಿದೋಷವಿಲ್ಲ.

**ವಿದೋಷವಿಜ್ಞಾನ ಸುಖೈಕರೂಪೋಽ-**
**ಪ್ಯಜೋ ಜನಾನ್ ಮೋಹಯಿತುಂ ಮೃಷೈವ ।**
**ಯೋಷಿತ್ಸು ಪುಂಸೋ ಹ್ಯಜನೀವ ದೃಶ್ಯತೇ**
**ನ ಜಾಯತೇ ಕ್ವಾಪಿ ಬಲಾದಿವಿಗ್ರಹಃ ॥ ೪೬ ॥**

ಪದಚ್ಛೇದ :ವಿದೋಷವಿಜ್ಞಾನಸುಖೈಕರೂಪಃ, ಅಪಿ, ಅಜಃ, ಜನಾನ್, ಮೋಹಯಿತುಮ್, ಮೃಷಾ, ಏವ, ಯೋಷಿತ್ಸು ಪುಂಸಃ, ಹಿ, ಅಜನಿ, ಇವ, ದೃಶ್ಯತೇ, ನ, ಜಾಯತೇ, ಕ್ವ ಅಪಿ, ಬಲಾದಿವಿಗ್ರಹಃ ॥

**ಅರ್ಥ** :- **ವಿದೋಷವಿಜ್ಞಾನಸುಖೈಕರೂಪಃ** ದೋಷರಹಿತಜ್ಞಾನ, ಸುಖ, ಇವೇ ಸ್ವರೂಪವಾಗಿ ಉಳ್ಳ, **ಬಲಾದಿವಿಗ್ರಹಃ** ಶಕ್ತಿಯೇ ಮೊದಲಾದವುಗಳು

ಶರೀರವಾಗಿಯುಳ್ಳ ಪರಮಾತ್ಮನು, **ಅಜಃ ಅಪಿ** ಹುಟ್ಟಿಲ್ಲದವನಾದರೂ, **ಜನಾನ್** ಅಧಮಜನರನ್ನು, **ಮೋಹಯಿತುಂ** ಮೋಹಗೊಳಿಸಲು, **ಮೃಷಾ ಏವ** ಸುಮ್ಮಸುಮ್ಮನೆ, **ಪುಂಸಃ** ಪುರುಷರಿಂದ, **ಯೋಷಿತ್ಸು** ಹೆಂಗಸರಲ್ಲಿ, **ಅಜನಿ ಇವ** ಹುಟ್ಟಿದವನಂತೆ, **ದೃಶ್ಯತೇ ಹಿ** ಕಾಣಲ್ಪಡುತ್ತಾನಷ್ಟೆ **ಕ್ವ ಅಪಿ** ಎಲ್ಲಿಯೂ ಕೂಡ, **ನ ಜಾಯತೇ** ಹುಟ್ಟುವುದಿಲ್ಲ.

**ತಾತ್ಪರ್ಯ** :- ಪರಮಾತ್ಮನು ನಿರ್ದುಷ್ಟವಾದ ಸುಖ, ಮತ್ತು ಜ್ಞಾನ ರೂಪನು. ಅವನು ಶಕ್ತಿಸ್ವರೂಪ. ಅವನು ಜನನ ರಹಿತ. ಹಾಗಿದ್ದರೂ ಗಂಡಿನಿಂದ ಹೆಣ್ಣಿನಲ್ಲಿ ಹುಟ್ಟುವವನಂತೆ ತನ್ನನ್ನು ತೋರಿಸಿ ಕೊಳ್ಳುತ್ತಾನೆ. ಯಾವ ಅವತಾರದಲ್ಲಿಯೂ ಅವನು ಹುಟ್ಟಿಲ್ಲ.

**ಯಥಾ ನೃಸಿಂಹಾಕೃತಿರಾವಿರಾಸೀತ್**
**ಸ್ತಂಭಾತ್ತಥಾ ನಿತ್ಯತನುತ್ವತೋ ವಿಭುಃ ।**
**ಆವಿರ್ಭವೇತ್ ಯೋಷಿತಿ ನೋ ಮಲೋತ್ಥ-**
**ಸ್ತಥಾಪಿ ಮೋಹಾಯ ನಿದರ್ಶಯೇತ್ತಥಾ ॥ ೪೭ ॥**

ಪದಚ್ಛೇದ :ಯಥಾ, ನೃಸಿಂಹಾಕೃತಿಃ, ಆವಿರಾಸೀತ್, ಸ್ತಂಭಾತ್, ತಥಾ, ನಿತ್ಯತನುತ್ವತಃ, ವಿಭುಃ, ಆವಿರ್ಭವೇತ್, ಯೋಷಿತಿ, ನೋ, ಮಲೋತ್ಥಃ, ತಥಾ, ಅಪಿ, ಮೋಹಾಯ, ನಿದರ್ಶಯೇತ್, ತಥಾ ॥

**ಅರ್ಥ** :- **ಯಥಾ** ಯಾವ ರೀತಿ, **ಸ್ತಂಭಾತ್** ಕಂಭದಿಂದ, **ನೃಸಿಂಹಾಕೃತಿಃ** ನರಸಿಂಹ ಸ್ವರೂಪವು, **ಆವಿರಾಸೀತ್** ಆವಿರ್ಭವಿಸಿತೋ, **ತಥಾ** ಹಾಗೆ, **ವಿಭುಃ** ಸರ್ವವ್ಯಾಪಿಯಾದ ಭಗವಂತನು, **ನಿತ್ಯತನುತ್ವತಃ** ನಿತ್ಯಸ್ವರೂಪನಾದುದರಿಂದ, **ಯೋಷಿತಿ** ಹೆಣ್ಣಿನಲ್ಲಿ, **ಆವಿರ್ಭವೇತ್** ಆವಿರ್ಭವಿಸುತ್ತಾನೆ, **ನೋ ಮಲೋತ್ಥಃ** ಶುಕ್ರ ಶೋಣಿತರೂಪವಾದ ಮಲದಿಂದ ಹುಟ್ಟಿದವನಲ್ಲ, **ತಥಾಪಿ** ಹಾಗಿದ್ದರೂ, **ತಥಾ** ಹಾಗೆ, **ಮೋಹಾಯ** ಮೋಹಕ್ಕಾಗಿ, **ನಿದರ್ಶಯೇತ್** ತೋರಿಸುತ್ತಾನೆ.

**ತಾತ್ಪರ್ಯ** :- ಭಗವಂತ ಯಾವತ್ತೂ ಸ್ತ್ರೀ ಪುರುಷ ಸಮಾಗಮದಿಂದ, ವೀರ್ಯ ರಕ್ತಗಳ ಮಿಶ್ರಣದಿಂದ ಹುಟ್ಟುವವನಲ್ಲ. ಅವನ ಸ್ವರೂಪ ನಿತ್ಯ, ಅವನು ಸರ್ವತ್ರ ವ್ಯಾಪ್ತ. ಇದಕ್ಕೆ ಉದಾಹರಣೆ ನರಸಿಂಹ ಅವತಾರ. ಆಗ ಭಗವಂತ

ಕಂಭದಿಂದ ಉದಿಸಿದ. ಆಗ ರಕ್ತ-ವೀರ್ಯಗಳ ಸಂಬಂಧವಿರಲಿಲ್ಲ. ಅದರಂತೆ ಹೆಣ್ಣಿನಲ್ಲಿಯೂ ಆವಿರ್ಭವಿಸುವುದಷ್ಟೆ. ಆದರೆ ಕೆಲವೊಮ್ಮೆ ಹುಟ್ಟಿದವನಂತೆ ತೋರುತ್ತಾನೆ. ಏಕೆಂದರೆ ದುರ್ಜನರ ಮೋಹಕ್ಕಾಗಿ.

### ಭಗವಂತನ ಹುಟ್ಟು ಅಸುರ ಮೋಹಕ

**ಸ್ತ್ರೀಪುಂ ಪ್ರಸಂಗಾತ್ ಪರತೋ ಯತೋ ಹರಿಃ**
**ಪ್ರಾದುರ್ಭವತ್ಯೇಷ ವಿಮೋಹಯನ್ ಜನಮ್ ।**
**ಅತೋ ಮಲೋತ್ಥೋಽಯಮಿತಿ ಸ್ಮ ಮನ್ಯತೇ**
**ಜನೋಽಶುಭಃ ಪೂರ್ಣ ಗುಣೈಕವಿಗ್ರಹಮ್ ॥ ೪೮ ॥**

ಪದಚ್ಛೇದ :ಸ್ತ್ರೀಪುಂಪ್ರಸಂಗಾತ್, ಪರತಃ, ಯತಃ, ಹರಿಃ, ಪ್ರಾದುರ್ಭವತಿ, ಏಷಃ, ವಿಮೋಹಯನ್, ಜನಮ್, ಅತಃ, ಮಲೋತ್ಥಃ, ಅಯಮ್, ಇತಿ, ಸ್ಮ, ಮನ್ಯತೇ, ಜನಃ, ಅಶುಭಃ, ಪೂರ್ಣಗುಣೈಕವಿಗ್ರಹಮ್ ॥

**ಅರ್ಥ** :- **ಯತಃ** ಯಾವ ಕಾರಣದಿಂದ, **ಏಷಃ** ಈ, **ಹರಿಃ** ಪರಮಾತ್ಮನು, **ಸ್ತ್ರೀಪುಂ ಪ್ರಸಂಗತಃ** ಸ್ತ್ರೀ ಪುರುಷರ ಸಮಾಗಮದ, **ಪರತಃ** ನಂತರ, **ಜನಂ** ಜನರನ್ನು **ವಿಮೋಹಯನ್** ಮೋಹಗೊಳಿಸುತ್ತಾ, **ಪ್ರಾದುರ್ಭವತಿ** ಆವಿರ್ಭವಿಸುತ್ತಾನೋ, **ಅತಃ** ಆದುದರಿಂದ, **ಪೂರ್ಣ ಗುಣೈಕ ವಿಗ್ರಹಂ** ಪರಿಪೂರ್ಣವಾದ ಗುಣವೇ ಶರೀರವಾಗಿವುಳ್ಳ ಪರಮಾತ್ಮ ನನ್ನು **ಅಶುಭಃ ಜನಃ** ದುಷ್ಟ ಜನರು, **ಅಯಂ** ಇವನು, **ಮಲೋತ್ಥಃ** ಶುಕ್ರ-ಶೋಣಿತದ ಸಂಬಂಧದಿಂದ ಹುಟ್ಟಿದವನು, **ಇತಿ** ಎಂದು, **ಮನ್ಯತೇ ಸ್ಮ** ತಿಳಿಯುತ್ತಾರಷ್ಟೆ.

ತಾತ್ಪರ್ಯ :- ಈ ಭಗವಂತ ಸ್ತ್ರೀ ಪುರುಷರ ಸಮಾಗಮದಿಂದ ದೂರ ಇರುವವನು. ಅಂದರೆ ಸಮಾಗಮವು ಇಲ್ಲದೇ ಹುಟ್ಟುವವನು. ಆದರೂ ಜನರ ಮೋಹಕ್ಕಾಗಿ ಸ್ತ್ರೀ ಪುರುಷರ ಸಮಾಗಮದಿಂದ ಹುಟ್ಟಿದವನಂತೆ ತೋರಿಸುತ್ತಾ ಅವತಾರ ಮಾಡುತ್ತಾನೆ. ಇಂತಹ ಗುಣ ಪರಿಪೂರ್ಣನಾದ ಭಗವಂತನನ್ನು ದುಷ್ಟ ಜನರು "ಇವನು ಕೂಡ ಸಾಮಾನ್ಯ ಜನರಂತೆ ಹೆಣ್ಣು ಗಂಡುಗಳ ಮಿಲನದಿಂದ ವೀರ್ಯರಕ್ತಗಳ ಸಂಬಂಧವಾಗಿ ಹುಟ್ಟಿದವ" ಎಂದು ತಿಳಿಯುತ್ತಾರೆ.

### ವೇದವ್ಯಾಸರ ವರ್ಣನೆ

**ದ್ವೀಪೇ ಭಗಿನ್ಯಾಃ ಸ ಯಮಸ್ಯ ವಿಶ್ವಕೃತ್ ಪ್ರಕಾಶತೇ ಜ್ಞಾನಮರೀಚಿಮಂಡಲಃ ।**
**ಪ್ರಭಾಸಯನ್ನಂಡಬಹಿಸ್ತಥಾಂತಃ ಸಹಸ್ರಲಕ್ಷಾಮಿತಸೂರ್ಯದೀಧಿತಿಃ ॥ ೪೯ ॥**

**ಅಗಣ್ಯದಿವ್ಯೋರುಗುಣಾರ್ಣವಃ ಪ್ರಭುಃ ಸಮಸ್ತ ವಿದ್ಯಾಧಿಪತಿರ್ಜಗದ್ಗುರುಃ ।**
**ಅನಂತಶಕ್ತಿರ್ಜಗದೀಶ್ವರೇಶ್ವರಃ ಸಮಸ್ತದೋಷಾತಿವಿದೂರವಿಗ್ರಹಃ ॥ ೫೦ ॥**

ಪದಚ್ಛೇದ :ದ್ವೀಪೇ, ಭಗಿನ್ಯಾಃ, ಸಃ, ಯಮಸ್ಯ, ವಿಶ್ವಕೃತ್, ಪ್ರಕಾಶತೇ, ಜ್ಞಾನಮರೀಚಿ ಮಂಡಲಃ, ಪ್ರಭಾಸಯನ್, ಅಂಡಬಹಿಃ, ತಥಾ, ಅಂತಃ, ಸಹಸ್ರಲಕ್ಷಾಮಿತಸೂರ್ಯದೀಧಿತಿಃ, ಅಗಣ್ಯದಿವ್ಯೋರುಗುಣಾರ್ಣವಃ, ಪ್ರಭುಃ, ಸಮಸ್ತವಿದ್ಯಾಧಿಪತಿಃ, ಜಗದ್ಗುರುಃ, ಅನಂತಶಕ್ತಿಃ, ಜಗದೀಶ್ವರೇಶ್ವರಃ, ಸಮಸ್ತದೋಷಾತಿವಿದೂರವಿಗ್ರಹಃ ।

**ಅರ್ಥ :-** **ವಿಶ್ವಕೃತ್** ಸಮಸ್ತ ಜಗತ್ತಿನ ಸೃಷ್ಟಿಕರ್ತನಾದ, **ಜ್ಞಾನಮರೀಚಿ ಮಂಡಲಃ** ಜ್ಞಾನ ಕಿರಣಗಳ ಸಮೂಹವುಳ್ಳ, **ಅಂಡಬಹಿಃ** ಬ್ರಹ್ಮಾಂಡದ ಹೊರಗೆ, **ತಥಾ** ಹಾಗೆಯೇ, **ಅಂತಃ** ಒಳಗೂ ಕೂಡ, **ಪ್ರಭಾಸಯನ್** ಪ್ರಕಾಶಿಸುತ್ತಿರುವ, **ಸಹಸ್ರಲಕ್ಷಾಮಿತಸೂರ್ಯದೀಧಿತಿಃ** ಸಾವಿರ, ಲಕ್ಷ, ಸಾವಿರಲಕ್ಷ, ಅಮಿತ ಸೂರ್ಯಕಾಂತಿಯುಳ್ಳ, **ಅಗಣ್ಯ ದಿವ್ಯೋರುಗುಣಾರ್ಣವಃ** ಲೆಕ್ಕವಿಲ್ಲದಷ್ಟು ಅಲೌಕಿಕವಾದ ಉತ್ಕೃಷ್ಟ ವಾದ, ಗುಣಗಳಿಂದ ಸಮುದ್ರ ದಂತಿರುವ, **ಪ್ರಭುಃ** ಸರ್ವ ಸಮರ್ಥನಾದ, **ಸಮಸ್ತವಿದ್ಯಾಧಿಪತಿಃ** ಸಕಲ ವಿದ್ಯೆಗಳಿಗೆ ಅಧಿಪತಿಯಾದ, **ಜಗದ್ಗುರುಃ** ಬ್ರಹ್ಮಾದಿ ಸಕಲ ಪ್ರಪಂಚಕ್ಕೆ ಗುರುವಾದ, **ಅನಂತಶಕ್ತಿಃ** ಅಪರಿಮಿತ ಶಕ್ತಿಯುಳ್ಳ, **ಜಗದೀಶ್ವರೇಶ್ವರಃ** ಜಗತ್ತಿಗೆ ಒಡೆಯರಾದ, ಬ್ರಹ್ಮರುದ್ರಾದಿಗಳಿಗೆ ಒಡೆಯನಾದ, **ಸಮಸ್ತದೋಷಾತಿ ವಿದೂರವಿಗ್ರಹಃ** ಎಲ್ಲ ದೋಷಗಳಿಂದ ರಹಿತವಾದ ಶರೀರವುಳ್ಳ, **ಸಃ** ಆ ವೇದವ್ಯಾಸರು, **ಯಮಸ್ಯ** ಯಮನ **ಭಗಿನ್ಯಾಃ** ತಂಗಿಯಾದ ಯಮುನೆಯ, **ದ್ವೀಪೇ** ದ್ವೀಪದಲ್ಲಿ **ಪ್ರಕಾಶತೇ** ವಿರಾಜಮಾನರಾಗಿದ್ದಾರೆ.

**ತಾತ್ಪರ್ಯ :-** ಭಗವಂತ ವ್ಯಾಸರಾಗಿ ಅವತಾರ ಮಾಡಿದ್ದಾನೆ. ಅವನ ಸ್ವರೂಪವನ್ನು ಈ ಮುಂದಿನ ಐದು ಶ್ಲೋಕಗಳಲ್ಲಿ ವರ್ಣನೆ ಮಾಡಿದ್ದಾರೆ. ಇಲ್ಲಿ ಎರಡು ಮೂರು ಶ್ಲೋಕಗಳಿಗೆ ಒಟ್ಟಿಗೆ ಅನ್ವಯ. ಹೀಗಾಗಿ ಇವುಗಳಿಗೆ ಯುಗ್ಮ ಕುಲಕ, ಮುಂತಾದ ಹೆಸರು. ಈ ಭಗವಂತ ಸಕಲ ವಿಶ್ವದ ಉತ್ಪತ್ತಿಗೆ ಕಾರಣನಾಗಿದ್ದಾನೆ. ಇವನ ಪ್ರಕಾಶ ಬ್ರಹ್ಮಾಂಡದ ಒಳಗೂ ಹೊರಗೂ ವ್ಯಾಪ್ತ.

ಅವನ ಪ್ರಭೆ ಅವರವರ ಯೋಗ್ಯತೆಗೆ ಅನುಗುಣವಾಗಿ ಕೆಲವರಿಗೆ ಸಾವಿರ ಸೂರ್ಯ ಪ್ರಭೆಯಂತೆ, ಕೆಲವರಿಗೆ ಲಕ್ಷಸೂರ್ಯರ ಪ್ರಭೆಯಂತೆ, ಮತ್ತೆ ಕೆಲವರಿಗೆ ಸಾವಿರಲಕ್ಷ ಸೂರ್ಯಪ್ರಭೆಯಂತೆ, ಇನ್ನೂ ಕೆಲವರಿಗೆ ಅಮಿತ ಸೂರ್ಯರ ಪ್ರಭೆಯಂತೆ. ಇವನ ಗುಣಗಳು ಲೆಕ್ಕವಿಲ್ಲದಷ್ಟು ದಿವ್ಯವಾಗಿವೆ. ಮತ್ತು ಉತ್ಕೃಷ್ಟವಾಗಿವೆ. ಸರ್ವಸಮರ್ಥನೀತ. ಸಕಲ ವಿದ್ಯೆಗಳಿಗೆ ಅಧಿಪತಿ. ಆದುದರಿಂದಲೇ ಬ್ರಹ್ಮಾದಿ ಸಕಲರಿಗೆ ಗುರು ಇವನು. ಇವನ ಶಕ್ತಿ ಅಪಾರ. ಜಗತ್ತನ್ನು ನಿಯಮಿಸುವ ಬ್ರಹ್ಮಾದಿಗಳಿಗೂ ನಿಯಾಮಕನಾಗಿದ್ದಾನೆ. ಯಾವ ರೀತಿಯ ದೋಷದ ಲೇಶವೂ ಇವನಿಗೆ ಇಲ್ಲ. ಇಂತಹ ಭಗವಂತ ಯಮುನಾ ದ್ವೀಪದಲ್ಲಿ ವಿರಾಜಿಸಿದ್ದಾನೆ. ಆದುದರಿಂದ ಇವನಿಗೆ ದ್ವೈಪಾಯನ ಎಂಬ ಹೆಸರು.

ಶುಭಮರತಕವರ್ಣೋ ರಕ್ತಪಾದಾಬ್ಜನೇತ್ರಾ-
ಧರಕರನಖರಸನಾಗ್ರಶ್ಚಕ್ರ ಶಂಖಾಬ್ಜನೇತ್ರಃ ।
ರವಿಕರವರಗೌರಂ ಚರ್ಮ ಚೈಣಂ ವಸಾನಸ್ತಟಿದ-
ಮಲಜಟಾಸಂದೀಪ್ತಜೂಟಂ ದಧಾನಃ ॥
ವಿಸ್ತೀರ್ಣವಕ್ಷಾಃ ಕಮಲಾಯತಾಕ್ಷೋ
ಬೃಹದ್ಭುಜಃ ಕಂಬುಸಮಾನಕಂಠಃ ।
ಸಮಸ್ತವೇದಾನ್ ಮುಖತಃ ಸಮುದ್ಗಿ
ರನ್ನನಂತಚಂದ್ರಾಧಿಕಕಾಂತಸನ್ಮುಖಃ ।
ಪ್ರಬೋಧಮುದ್ರಾಭಯದೋರ್ದ್ವಯಾನ್ವಿತೋ
ಯಜ್ಞೋಪವೀತಾಜಿನ ಮೇಖಲೋಲ್ಲಸನ್ ।
ದೃಶಾ ಮಹಾಜ್ಞಾನಭುಜಂಗದಷ್ಟ-
ಮುಜ್ಜೀವಯಾನೋ ಜಗದತ್ಯರೋಚತ ॥ ೫೧-೫೩ ॥

ಪದಚ್ಛೇದ :ಶುಭಮರತಕವರ್ಣಃ ರಕ್ತಪಾದಾಬ್ಜನೇತ್ರಾಧರಕರನಖರಸನಾಗ್ರಃ, ಚಕ್ರ ಶಂಖಾಬ್ಜರೇಖಃ, ರವಿಕರವರಗೌರಮ್, ಚರ್ಮ, ಚ, ಏಣಮ್, ವಸಾನಃ, ತಟಿದಮಲಜಟಾಸಂದೀಪ್ತಜೂಟಮ್, ದಧಾನಃ, ವಿಸ್ತೀರ್ಣವಕ್ಷಾಃ, ಕಮಲಾಯತಾಕ್ಷಃ, ಬೃಹದ್ಭುಜಃ, ಕಂಬುಸಮಾನಕಂಠಃ, ಸಮಸ್ತವೇದಾನ್, ಮುಖತಃ, ಸಮುದ್ಗಿರನ್, ಅನಂತಚಂದ್ರಾಧಿಕಕಾಂತಸನ್ಮುಖಃ, ಪ್ರಬೋಧಮುದ್ರಾಭಯ ದೋರ್ದ್ವಯಾನ್ವಿತಃ, ಯಜ್ಞೋಪವೀತಾಜಿನ ಮೇಖಲೋಲ್ಲಸನ್, ದೃಶಾ, ಮಹಾಜ್ಞಾನಭುಜಂಗದಷ್ಟಮ್, ಉಜ್ಜೀವಯಾನಃ, ಜಗತ್, ಅತ್ಯರೋಚತ ॥

**ಅರ್ಥ :- ಶುಭಮರತಕವರ್ಣಃ** ಮನೋನಯನಾನಂದಕಾರಿಯಾದ ಇಂದ್ರನೀಲ ಪ್ರಭೆಯಂತೆ ವರ್ಣವುಳ್ಳ, **ರಕ್ತಪಾದಾಬ್ಜನೇತ್ರಾಧರ ಕರನಖರಸನಾಗ್ರಃ** ಕೆಂಪಾದ ಪಾದಕಮಲಗಳು, ಕಮಲದಂತಿರುವ ಕಣ್ಣುಗಳು, ತುಟಿ, ಅಂಗೈ, ಕೈಕಾಲುಗಳ ಉಗುರುಗಳು ಮತ್ತು ನಾಲಿಗೆ ತುದಿಯುಳ್ಳ, **ಚಕ್ರಶಂಖಾಬ್ಜರೇಖಃ** ಅಂಗೈ ಅಂಗಾಲುಗಳಲ್ಲಿ ಚಕ್ರ, ಶಂಖ ಮತ್ತು ಪದ್ಮಗಳ ಚಿಹ್ನೆಯುಳ್ಳ, **ರವಿಕರವರಗೌರಮ್** ಸೂರ್ಯನ ಕಿರಣದಂತೆ ಪರಿಶುದ್ಧವಾದ ಶ್ರೇಷ್ಠವಾದ, **ಏಣಂ** ಜಿಂಕೆಯ, **ಚರ್ಮ** ಚರ್ಮವನ್ನು **ವಸಾನಃ** ಧರಿಸಿರುವ, **ತಟಿದಮಲಜಟಾಸಂದೀಪ್ತಜೂಟಂ** ಮಿಂಚಿನಂತೆ ನಿರ್ಮಲವಾದ ಜಡೆಗಳಿಂದ ಪ್ರಕಾಶಿತವಾದ ಜುಟ್ಟನ್ನು **ದಧಾನಃ** ಧರಿಸಿರುವ, **ವಿಸ್ತೀರ್ಣವಕ್ಷಾಃ** ಅಗಲವಾದ ಎದೆ ಭಾಗವುಳ್ಳ, **ಕಮಲಾಯತಾಕ್ಷಃ** ಕಮಲದಳದಂತೆ ವಿಸ್ತಾರವಾದ ಕಣ್ಣುಗಳುಳ್ಳ, **ಬೃಹಭುಜಃ** ದೀರ್ಘವಾದ ಬಾಹುಗಳುಳ್ಳ, **ಕಂಬುಸಮಾನ ಕಂಠಃ** ಶಂಖದಂತೆ ಕಂಠವುಳ್ಳ, **ಸಮಸ್ತವೇದಾನ್** ಸಕಲವೇದಗಳನ್ನು **ಮುಖತಃ** ಬಾಯಿಯಿಂದ, **ಸಮುದ್ಗಿರನ್** ಉಚ್ಚರಿಸುತ್ತಿರುವ, **ಅನಂತಚಂದ್ರಾಧಿಕಕಾಂತಸನ್ಮುಖಃ** ಅನಂತ ಚಂದ್ರರಿಗಿಂತಲೂ ಹೆಚ್ಚಾಗಿ ಪ್ರಕಾಶಿಸುವ ಉತ್ತಮ ಮುಖವುಳ್ಳ, **ಪ್ರಬೋಧಮುದ್ರಾಭಯದೋರ್ದ್ವಯಾನ್ವಿತಃ** ಜ್ಞಾನ ಮತ್ತು ಅಭಯಮುದ್ರೆಗಳುಳ್ಳ ಎರಡು ಕೈಗಳಿಂದ ಕೂಡಿರುವ, **ಯಜ್ಞೋಪವೀತಾಜಿನಮೇಖಲೋಲ್ಲಸನ್** ಯಜ್ಞೋಪವೀತ, ಅಜಿನ, ಮತ್ತು ಮೇಖಲೆಗಳಿಂದ ಶೋಭಿಸುತ್ತಿರುವ, **ದೃಶಾ** ಕಣ್ಣಿನಿಂದ, **ಮಹಾಜ್ಞಾನಭುಜಂಗದಷ್ಟಂ** ಇತರರಿಂದ ಪರಿಹಾರ ಮಾಡಲು ಅಸಾಧ್ಯವಾದ ಅಜ್ಞಾನವೆಂಬ ಹಾವಿನಿಂದ ಕಚ್ಚಲ್ಪಟ್ಟವರನ್ನು, **ಉಜ್ಜೀವಯಾನಃ** ಬದುಕಿಸುತ್ತಿರುವ ವೇದವ್ಯಾಸರು, **ಜಗತ್** ಜಗತ್ತನ್ನು **ಅತ್ಯರೋಚತ** ಚನ್ನಾಗಿ ಪ್ರಕಾಶಿಸಿದರು, ಸಂತೋಷಪಡಿಸಿದರು.

**ತಾತ್ಪರ್ಯ :-** ವೇದವ್ಯಾಸರನ್ನು ಈ ಶ್ಲೋಕಗಳಲ್ಲಿ ವರ್ಣಿಸಲಾಗಿದೆ. ವೇದವ್ಯಾಸರ ಬಣ್ಣ ಇಂದ್ರನೀಲಮಣಿಯಂತೆ ನೀಲ. ಅದು ಮನಸ್ಸಿಗೆ, ಕಣ್ಣಿಗೂ ಆಹ್ಲಾದಕರ ವಾಗಿದೆ. ಭಗವಂತನ ಪಾದ, ಕಣ್ಣಂಚು, ಉಗುರು, ಅಂಗೈ, ತುಟಿ, ಮತ್ತು ನಾಲಿಗೆಗಳು ಕೆಂಪಾಗಿವೆ. ಕೈ ಕಾಲುಗಳಲ್ಲಿ ಚಕ್ರ ಶಂಖ, ಪದ್ಮಗಳ ಚಿಹ್ನೆ ಇವೆ. ವೇದವ್ಯಾಸರು ಶ್ರೇಷ್ಠವಾದ ಜಿಂಕೆಯ ಚರ್ಮವನ್ನು ಧರಿಸಿದ್ದಾರೆ. ಮತ್ತು ಆಸನವನ್ನಾಗಿಸಿದ್ದಾರೆ. ಅವರ ಜಟೆ ಮಿಂಚಿನಂತೆ ಕಾಂತಿಯುಳ್ಳದ್ದು. ಅಂತಹ ಜಡೆಗಳಿಂದ ಕೂಡಿದ ಜುಟ್ಟು ಅವರದ್ದು.

ವಿಸ್ತೀರ್ಣವಾದ ಎದೆ, ಕಮಲದಂತೆ ಕಣ್ಣುಗಳು, ಎತ್ತರವಾದ ಭುಜ, ದೀರ್ಘ ಕೈಗಳು, ಶಂಖದಂತಿರುವ ಕಂಠ. ಬಾಯಲ್ಲಿ ಸದಾ ಸಮಸ್ತ ವೇದೋಚ್ಚಾರಣೆ. ಅವರ ಮುಖದ ಕಾಂತಿ ಅನಂತ ಚಂದ್ರರ ಕಾಂತಿಗೂ ಮಿಗಿಲು. ಒಂದು ಕೈಯಲ್ಲಿ ಜ್ಞಾನ ಮುದ್ರೆ. ಮತ್ತೊಂದು ಕೈಯಲ್ಲಿ ಅಭಯ ಮುದ್ರೆ. ಜನಿವಾರ, ಅಜಿನ, ಮೇಖಲೆಗಳಿಂದ ಶೋಭಿತರಿವರು. ಅಜ್ಞಾನದಿಂದ ಕಂಗೆಟ್ಟ ಜನರಿಗೆ ಕಣ್ಣುಗಳಿಂದಲೇ ಪರಿಹಾರ. ಇಂತಹ ವ್ಯಾಸರು ಜಗತ್ತನ್ನು ಮತ್ತಷ್ಟು ಪ್ರಕಾಶಿಸಿದರು. ಜಗತ್ತಿಗೆ ಅತ್ಯಂತ ಆನಂದವನ್ನುಂಟು ಮಾಡಿದರು.

### ವೇದವ್ಯಾಸರ ಉಪನಯನ

**ಸ ಲೋಕ ಧರ್ಮಾಭಿರಿರಕ್ಷಯಾ ಪಿತುರ್ದ್ವಿಜತ್ವ**
**ಮಪ್ಯಾಶು ಪಿತುರ್ದದೌ ನಿಜಮ್ ।**
**ಜ್ಞಾನಂ ತಯೋಃ ಸಂಸ್ಮೃತಿ ಮಾತ್ರತಃ ಸದಾ**
**ಪ್ರತ್ಯಕ್ಷಭಾವಂ ಪರಮಾತ್ಮನೋ ದದೌ ॥ ೫೪ ॥**

ಪದಚ್ಛೇದ :ಸಃ, ಲೋಕಧರ್ಮಾಭಿರಿರಕ್ಷಯಾ, ಪಿತುಃ, ದ್ವಿಜತ್ವಮ್, ಆಪ್ಯ, ಆಶು, ಪಿತುಃ, ದದೌ, ನಿಜಮ್, ಜ್ಞಾನಮ್, ತಯೋಃ, ಸಂಸ್ಮೃತಿಮಾತ್ರತಃ, ಸದಾ, ಪ್ರತ್ಯಕ್ಷಭಾವಮ್, ಪರಮ್, ಆತ್ಮನಃ, ದದೌ ॥

**ಅರ್ಥ** :- **ಸಃ** ಆ ವ್ಯಾಸರು, **ಲೋಕಧರ್ಮಾಭಿರಿರಕ್ಷಯಾ** ಲೋಕಧರ್ಮಗಳನ್ನು ಎಲ್ಲಾ ರೀತಿಯಲ್ಲಿಯೂ ರಕ್ಷಿಸುವ ಇಚ್ಛೆಯಿಂದ, **ಪಿತುಃ** ತಂದೆಯಾದ ಪರಾಶರರಿಂದ, **ಆಶು** ಅವತರಿಸಿದ ಕೂಡಲೇ, **ದ್ವಿಜತ್ವಂ** ದ್ವಿಜತ್ವವನ್ನು, **ಆಪ್ಯ** ಹೊಂದಿ (ಉಪನಯನ ಮಾಡಿಸಿಕೊಂಡು), **ಪಿತುಃ** ತಂದೆಗೆ, **ನಿಜಂ** ತನ್ನ, **ಜ್ಞಾನಂ** ಜ್ಞಾನವನ್ನು, **ದದೌ** ಕೊಟ್ಟರು, **ತಯೋಃ** ತಂದೆ ತಾಯಿ ಇಬ್ಬರಿಗೆ, **ಸಂಸ್ಮೃತಿಮಾತ್ರತಃ** ಸ್ಮರಣೆ ಮಾತ್ರದಿಂದ, **ಸದಾ** ಯಾವಾಗಲೂ, **ಆತ್ಮನಃ** ತನ್ನ **ಪರಂ** ಅತ್ಯುತ್ಕೃಷ್ಟವಾದ, **ಪ್ರತ್ಯಕ್ಷಭಾವಂ** ಪ್ರತ್ಯಕ್ಷನಾಗುವಿಕೆಯನ್ನು, **ದದೌ** ಕೊಟ್ಟರು.

**ತಾತ್ಪರ್ಯ** :- ವ್ಯಾಸರು ಅವತರಿಸಿದ ಕ್ಷಣದಲ್ಲಿಯೇ ಉಪನಯನ ಮಾಡಿಸಿಕೊಂಡರು. ಉಪನಯನದಲ್ಲಿ ತಂದೆ ಉಪದೇಶ ಕೊಟ್ಟರೆ, ಇಲ್ಲಿ

ತಂದೆಯಾದ ಪರಾಶರರಿಗೆ ತಾವೇ ಉಪದೇಶ ಮಾಡಿದರು. ನಂತರ ಯಾವಾಗ ಸ್ಮರಣೆ ಮಾಡಿದರೂ ತಾನು ಪ್ರತ್ಯಕ್ಷನಾಗುವೆನೆಂದು ಭಗವಂತ ಅವರಿಗೆ ತಿಳಿಸಿದ.

### ಸರ್ವಶಾಸ್ತ್ರರಚನೆ

**ದ್ವೈಪಾಯನಃ ಸೋಽಥ ಜಗಾಮ ಮೇರುಂ**
**ಚತುರ್ಮುಖಾದ್ಯೈರನುಗಮ್ಯಮಾನಃ ।**
**ಉದ್ಧೃತ್ಯ ವೇದಾನಖಿಲಾನ್ ಸುರೇಭ್ಯೋ**
**ದದೌ ಮುನಿಭ್ಯಶ್ಚ ಯಥಾದಿಸೃಷ್ಟೌ ।**
**ಸರ್ವಾಣಿ ಶಾಸ್ತ್ರಾಣಿ ತಥೈವ ಕೃತ್ವಾ**
**ವಿನಿರ್ಣಯಂ ಬ್ರಹ್ಮಸೂತ್ರಂ ಚಕಾರ ॥ ೫೫ ॥**

ಪದಚ್ಛೇದ :ದ್ವೈಪಾಯನಃ, ಸಃ, ಅಥ, ಜಗಾಮ, ಮೇರುಮ್, ಚತುರ್ಮುಖಾದ್ಯೈಃ, ಅನುಗಮ್ಯಮಾನಃ, ಉದ್ಧೃತ್ಯ, ವೇದಾನ್, ಅಖಿಲಾನ್, ಸುರೇಭ್ಯಃ, ದದೌ, ಮುನಿಭ್ಯಃ, ಚ, ಯಥಾ, ಆದಿಸೃಷ್ಟೌ ಸರ್ವಾಣಿ, ಶಾಸ್ತ್ರಾಣಿ, ತಥಾ, ಏವ, ಕೃತ್ವಾ ವಿನಿರ್ಣಯಮ್, ಬ್ರಹ್ಮಸೂತ್ರಮ್, ಚಕಾರ.

**ಅರ್ಥ** :- **ಅಥ** ಉಪನಯನದ ನಂತರ, **ಸಃ** ಆ, **ದ್ವೈಪಾಯನಃ** ವೇದವ್ಯಾಸರು, **ಚತುರ್ಮುಖಾದ್ಯೈಃ** ಬ್ರಹ್ಮಾದಿದೇವತೆಗಳಿಂದ **ಅನುಗಮ್ಯಮಾನಃ** ಅನುಸರಿಸಲ್ಪಟ್ಟವರಾಗಿ, **ಮೇರುಂ** ಮೇರು ಪರ್ವತವನ್ನು ಕುರಿತು, **ಜಗಾಮ** ಹೋದರು, **ಅಖಿಲಾನ್** ಎಲ್ಲಾ, **ವೇದಾನ್** ವೇದಗಳನ್ನು **ಉದ್ಧೃತ್ಯ** ಉದ್ಧರಿಸಿ, **ಸುರೇಭ್ಯಃ** ದೇವತೆಗಳಿಗೆ, **ಚ** ಮತ್ತು, **ಮುನಿಭ್ಯಃ** ಋಷಿಗಳಿಗೆ, **ದದೌ** ಕೊಟ್ಟರು, **ಆದಿಸೃಷ್ಟೌ** ಸ್ವಾಯಂಭುವ ಮನ್ವಂತರದ ಆದಿಯಲ್ಲಿ **ಯಥಾ** ಹೇಗೋ, **ತಥಾ ಏವ** ಹಾಗೆಯೇ, **ಸರ್ವಾಣಿ** ಎಲ್ಲಾ, **ಶಾಸ್ತ್ರಾಣಿ** ವೇದಾಂಗಗಳಾದ ನಿರುಕ್ತ ಮೊದಲಾದವುಗಳನ್ನು **ಕೃತ್ವಾ** ಮಾಡಿ, **ವಿನಿರ್ಣಯಂ** ವೇದಾರ್ಥನಿರ್ಣಾಯಕವಾದ, **ಬ್ರಹ್ಮಸೂತ್ರಂ** ಬ್ರಹ್ಮಸೂತ್ರವನ್ನು **ಚಕಾರ** ಮಾಡಿದರು.

**ತಾತ್ಪರ್ಯ** :- ಉಪನಯನವಾದ ನಂತರ ವ್ಯಾಸರು ಮೇರು ಪರ್ವತಕ್ಕೆ ಹೋದರು. ಬ್ರಹ್ಮಾದಿ ದೇವತೆಗಳು ಅವರನ್ನು ಹಿಂಬಾಲಿಸಿದರು. ವೇದವನ್ನು

ಸರಿಯಾಗಿ ವಿಭಾಗ ಮಾಡಿ ದೇವತೆಗಳಿಗೆ ಮತ್ತು ಮುನಿಗಳಿಗೆ ಉಪದೇಶಿಸಿದರು. ಸ್ವಾಯಂಭುವ ಮನ್ವಂತರದ ಆದಿಯಲ್ಲಿ ಹೇಗೋ ಹಾಗೆ ಈಗಲೂ ವೇದಾಂಗಗಳನ್ನು ರಚಿಸಿದರು. ವೇದದ ಅರ್ಥವನ್ನು ನಿರ್ಣಯ ಮಾಡುವ ಬ್ರಹ್ಮಸೂತ್ರಗಳನ್ನು ರಚನೆ ಮಾಡಿದರು.

### ಬ್ರಹ್ಮಾದಿಗಳಿಗೆ ಬ್ರಹ್ಮಸೂತ್ರ ಉಪದೇಶ

**ತಚ್ಛುಶ್ರುವುರ್ಬ್ರಹ್ಮಗಿರೀಶಮುಖ್ಯಾಃ ಸುರಾ**
**ಮುನೀನಾಂ ಪ್ರವರಾಶ್ಚ ತಸ್ಮಾತ್ ॥ ೫೬ ॥**

ಪದಚ್ಛೇದ :ತತ್, ಶುಶ್ರುವುಃ, ಬ್ರಹ್ಮಗಿರೀಶಮುಖ್ಯಾಃ, ಸುರಾಃ, ಮುನೀನಾಮ್, ಪ್ರವರಾಃ, ಚ, ತಸ್ಮಾತ್ ॥

**ಅರ್ಥ :-** **ತತ್** ಆ ಬ್ರಹ್ಮಸೂತ್ರವನ್ನು, **ಬ್ರಹ್ಮಗಿರೀಶಮುಖ್ಯಾಃ** ಬ್ರಹ್ಮರುದ್ರರೇ ಮೊದಲಾದ, **ಸುರಾಃ** ದೇವತೆಗಳು, **ಚ** ಮತ್ತು, **ಮುನೀನಾಂ** ಮುನಿಗಳ ಮಧ್ಯದಲ್ಲಿ, **ಪ್ರವರಾಃ** ಶ್ರೇಷ್ಠರಾದವರು, **ತಸ್ಮಾತ್** ಆ ವೇದವ್ಯಾಸ ದೇವರಿಂದ, **ಶುಶ್ರುವುಃ** ಕೇಳಿದರು.

**ತಾತ್ಪರ್ಯ :-** ಆ ಬ್ರಹ್ಮಸೂತ್ರಗಳನ್ನು ವೇದವ್ಯಾಸದೇವರು ಬ್ರಹ್ಮ ರುದ್ರಾದಿದೇವತೆಗಳಿಗೆ ಮತ್ತು ಮುನಿಶ್ರೇಷ್ಠರಿಗೆ ಉಪದೇಶ ಮಾಡಿದರು.

### ಮಹಾಭಾರತ ರಚನೆ

**ಸಮಸ್ತಶಾಸ್ತ್ರಾರ್ಥನಿದರ್ಶನಾತ್ಮಕಂ ಚಕ್ರೇ ಮಹಾಭಾರತನಾಮಧೇಯಮ್ ।**
**ವೇದೋತ್ತಮಂ ತಚ್ಚ ವಿಧಾತೃಶಂಕರಪ್ರಧಾನಕೈಸ್ತನ್ಮುಖತಃ ಸುರೈಃ ಶ್ರುತಮ್ ॥**
**॥ ೫೭ ॥**

ಪದಚ್ಛೇದ :ಸಮಸ್ತಶಾಸ್ತ್ರಾರ್ಥನಿದರ್ಶನಾತ್ಮಕಮ್, ಚಕ್ರೇ, ಮಹಾಭಾರತ ನಾಮಧೇಯಮ್, ವೇದೋತ್ತಮಮ್, ತತ್, ಚ, ವಿಧಾತೃಶಂಕರಪ್ರಧಾನಕೈಃ, ತನ್ಮುಖತಃ, ಸುರೈಃ, ಶ್ರುತಮ್ ॥

**ಅರ್ಥ :-** **ವಿಧಾತೃಶಂಕರಪ್ರಧಾನಕೈಃ**, ಬ್ರಹ್ಮ-ರುದ್ರರೇ ಮೊದಲಾದ, **ಸುರೈಃ** ದೇವತೆಗಳಿಂದ, **ತನ್ಮುಖತಃ** ವೇದವ್ಯಾಸರ ಬಾಯಿಂದ, **ಶ್ರುತಂ**

ಕೇಳಲ್ಪಟ್ಟ, **ತತ್** ಪ್ರಸಿದ್ಧವಾದ, **ವೇದೋತ್ತಮಂ** ವೇದಕ್ಕಿಂತ ಶ್ರೇಷ್ಠವಾದ, **ಸಮಸ್ತಶಾಸ್ತ್ರಾರ್ಥನಿದರ್ಶನಾತ್ಮಕಮ್** ಸಕಲ ಶಾಸ್ತ್ರ ಪ್ರಮೇಯಗಳನ್ನು ದೃಷ್ಟಾಂತದಿಂದ ಸಮರ್ಥಿಸುವ, **ಮಹಾಭಾರತನಾಮಧೇಯಂ** ಮಹಾಭಾರತ ವೆಂದು ಹೆಸರುಳ್ಳ ಗ್ರಂಥವನ್ನು **ಚಕ್ರೇ** ರಚಿಸಿದರು.

**ತಾತ್ಪರ್ಯ** :- ವೇದವ್ಯಾಸರು ರಚಿಸಿದ ಮತ್ತೊಂದು ಮೇರುಕೃತಿ ಮಹಾಭಾರತ. ಇದು ಎಲ್ಲಾ ಶಾಸ್ತ್ರದ ಪ್ರಮೇಯಗಳನ್ನು ದೃಷ್ಟಾಂತ ಕತೆಗಳಿಂದ ಸಮರ್ಥಿಸುವ ಗ್ರಂಥ. ವೇದಕ್ಕಿಂತಲೂ ಉತ್ತಮ. ಇದನ್ನು ಬ್ರಹ್ಮ-ರುದ್ರ ಮೊದಲಾದ ದೇವತೆಗಳು ಭಗವಂತನಿಂದ ಶ್ರವಣ ಮಾಡಿದರು.

**ದೇವತೆಗಳಲ್ಲಿ ಕಲಿನಿಗ್ರಹ**

**ಅಥೋ ಗಿರೀಶಾದಿಮನೋನುಶಾಯೀ**
**ಕಲಿರ್ಮಮಾರಾಶು ಸುವಾಙ್ಮಯೈಃ ಶರೈಃ ।**
**ನಿಕೃತ್ತಶೀರ್ಷೋ ಭಗವನ್ಮುಖೇರಿತೈಃ**
**ಸುರಾಶ್ಚ ಸಜ್ಞಾನ ಸುಧಾರಸಂ ಪಪುಃ ॥ ೫೮ ॥**

ಪದಚ್ಛೇದ :ಅಥಃ, ಗಿರೀಶಾದಿಮನೋನುಶಾಯೀ, ಕಲಿಃ, ಮಮಾರ, ಆಶು, ಸುವಾಙ್ಮಯೈಃ, ಶರೈಃ, ನಿಕೃತ್ತಶೀರ್ಷಃ, ಭಗವನ್ಮುಖೇರಿತೈಃ, ಸುರಾಃ, ಚ, ಸಜ್ಜ್ಞಾನಸುಧಾರಸಮ್, ಪಪುಃ ॥

**ಅರ್ಥ** :- **ಅಥಃ** ಮಹಾಭಾರತ ಶ್ರವಣ ಮಾಡಿದ ನಂತರ, **ಭಗವನ್ಮುಖೇರಿತೈಃ** ಪರಮಾತ್ಮನ ಮುಖದಿಂದ ಹೊರಹೊಮ್ಮಿದ, **ಸುವಾಙ್ಮಯೈಃ** ಒಳ್ಳೆಯ ಮಾತುಗಳೆಂಬ, **ಶರೈಃ** ಬಾಣಗಳಿಂದ, **ಗಿರೀಶಾದಿಮನೋನುಶಾಯೀ** ರುದ್ರದೇವರೇ ಮೊದಲಾದವರ ಮನಸ್ಸಿನಲ್ಲಿ ನೆಲೆ ನಿಂತಂತಹ, **ಕಲಿಃ** ಕಲಿಯು, **ನಿಕೃತ್ತಶೀರ್ಷಃ** ತಲೆ ಕತ್ತರಿಸಲ್ಪಟ್ಟವನಾಗಿ, **ಆಶು** ಕೂಡಲೇ, **ಮಮಾರ** ಸತ್ತನು, **ಚ** ಮತ್ತು, **ಸುರಾಃ** ದೇವತೆಗಳು, **ಸಜ್ಞಾನಸುಧಾರಸಂ** ಯಥಾರ್ಥಜ್ಞಾನವೆಂಬ ಅಮೃತ ರಸವನ್ನು, **ಪಪುಃ** ಕುಡಿದರು.

**ತಾತ್ಪರ್ಯ** :- ಹೀಗೆ ಭಗವಂತ ಮಹಾಭಾರತವನ್ನು ಶ್ರವಣ ಮಾಡಿಸಿದ. ಇಂತಹ ಸಚ್ಛಾಸ್ತ್ರಗಳೇ ಕಲಿಯನ್ನು ನಿಗ್ರಹಿಸುವ ಬಾಣಗಳು. ಇವುಗಳಿಂದ ರುದ್ರದೇವರೇ ಮೊದಲಾದವರಲ್ಲಿ ಮನೆ ಮಾಡಿದ್ದ ಕಲಿ ಸಾಯುತ್ತಾನೆ.

ದೇವತೆಗಳಿಗೆ ಯಥಾರ್ಥಜ್ಞಾನ ಎಂಬ ಅಮೃತ ಸಿಕ್ಕಿತು. ಅದನ್ನು ಎಲ್ಲ ದೇವತೆಗಳು ಪಾನ ಮಾಡಿದರು.

ಸಜ್ಜನರಲ್ಲಿರುವ ಕಲಿಯ ನಿಗ್ರಹದ ಇಚ್ಛೆ

**ಅಥೋ ಮನುಷ್ಯೇಷು ತಥಾಸುರೇಷು**
**ರೂಪಾಂತರೈಃ ಕಲಿರೇವಾವಶಿಷ್ಟಃ ।**
**ತತೋ ಮನುಷ್ಯೇಷು ಚ ಸತ್ಸು ಸಂಸ್ಥಿತೋ**
**ವಿನಾಶ್ಯ ಇತ್ಯೇಷ ಹರಿರ್ವ್ಯಚಿಂತಯತ್ ॥ ೫೯ ॥**

ಪದಚ್ಛೇದ :ಅಥಃ, ಮನುಷ್ಯೇಷು, ತಥಾ, ಅಸುರೇಷು, ರೂಪಾಂತರೈಃ, ಕಲಿಃ, ಏವ, ಅವಶಿಷ್ಟಃ, ತತಃ, ಮನುಷ್ಯೇಷು, ಚ, ಸತ್ಸು, ಸಂಸ್ಥಿತಃ, ವಿನಾಶ್ಯಃ, ಇತಿ, ಏಷಃ, ಹರಿಃ, ವ್ಯಚಿಂತಯತ್ ॥

**ಅರ್ಥ** :- **ಅಥಃ** ದೇವತೆಗಳ ಮನಸ್ಸಿನಲ್ಲಿ ನೆಲೆ ನಿಂತಿದ್ದ ಕಲಿಯ ನಿಗ್ರಹವಾದರೂ ಕೂಡ, **ಕಲಿಃ** ಕಲಿಯು, **ರೂಪಾಂತರೈಃ** ಬೇರೆ ರೂಪಗಳಿಂದ, **ಮನುಷ್ಯೇಷು** ಮನುಷ್ಯರಲ್ಲಿ, **ತಥಾ** ಹಾಗೆಯೇ **ಅಸುರೇಷು** ಅಸುರರಲ್ಲಿ, **ಅವಶಿಷ್ಟಃ** ಏವ ಉಳಿದೇ ಬಿಟ್ಟ. **ತತಃ** ಈ ಮನುಷ್ಯರು ಮತ್ತು ಅಸುರರ ಮಧ್ಯದಲ್ಲಿ, **ಸತ್ಸು** ಸಜ್ಜನರಾದ, **ಮನುಷ್ಯೇಷು** ಮನುಷ್ಯರಲ್ಲಿ, **ಸಂಸ್ಥಿತಃ** ನೆಲೆ ನಿಂತ ಕಲಿಯು, **ವಿನಾಶ್ಯಃ** ನಾಶಗೊಳ್ಳಬೇಕು, **ಇತಿ** ಎಂದು, **ಏಷಃ** ಈ, **ಹರಿಃ** ಕಲಿಯನ್ನು ಪರಿಹರಿಸುವ ಶಕ್ತಿಯುಳ್ಳ ವೇದವ್ಯಾಸರು, **ವ್ಯಚಿಂತಯತ್** ತಮ್ಮ ಅವತಾರ ಕಾರ್ಯವನ್ನಾಗಿ ಚಿಂತಿಸಿದರು.

**ತಾತ್ಪರ್ಯ** :- ಜ್ಞಾನೋಪದೇಶದಿಂದ ದೇವತೆಗಳ ಮನಸ್ಸಿನಲ್ಲಿದ್ದ ಕಲಿ ದೂರ ಹೋದ. ಆದರೆ, ಮನುಷ್ಯರ ಮತ್ತು ಅಸುರರಲ್ಲಿ ಮನೆ ಮಾಡಿದ. ಇವರಲ್ಲಿ ಸಜ್ಜನ ಮನುಷ್ಯರಲ್ಲಿರುವ ಕಲಿಯನ್ನು ಹೊಡೆದೋಡಿಸುವ ಸಂಕಲ್ಪವನ್ನು ಭಗವಂತ ಮಾಡಿದ. ಇದೇ ವ್ಯಾಸಾವತಾರದ ಕಾರ್ಯ.

ವೇದ ವಿಭಾಗ, ಪುರಾಣಗಳ ರಚನೆ

**ತತೋ ನೃಣಾಂ ಕಾಲಬಲಾತ್ ಸುಮಂದ-**
**ಮಾಯುರ್ಮತಿಂ ಕರ್ಮ ಚ ವೀಕ್ಷ್ಯ ಕೃಷ್ಣಃ ।**
**ವಿವ್ಯಾಸ ವೇದಾನ್ ಸ ವಿಭುಶ್ಚತುರ್ಧಾ**
**ಚಕ್ರೇ ತಥಾ ಭಾಗವತಂ ಪುರಾಣಮ್ ॥ ೬೦ ॥**

ಪದಚ್ಛೇದ :ತತಃ, ನೃಣಾಮ್, ಕಾಲಬಲಾತ್, ಸುಮಂದಮ್, ಆಯುಃ, ಮತಿಮ್, ಕರ್ಮ, ಚ, ವೀಕ್ಷ್ಯ, ಕೃಷ್ಣಃ, ವಿವ್ಯಾಸ, ವೇದಾನ್, ಸಃ, ವಿಭುಃ, ಚತುರ್ಧಾ, ಚಕ್ರೇ, ತಥಾ, ಭಾಗವತಮ್, ಪುರಾಣಮ್ ॥

**ಅರ್ಥ** :- **ತತಃ** ಅನಂತರ, **ಕಾಲಬಲಾತ್** ಯುಗಧರ್ಮಕ್ಕೆ ಅನುಗುಣವಾಗಿ, **ನೃಣಾಂ** ಮನುಷ್ಯರ, **ಸುಮಂದಂ** ಅತ್ಯಲ್ಪವಾದ ಮತ್ತು ಪ್ರತಿದಿನವೂ ಕ್ಷೀಣಿಸುತ್ತಿರುವ, **ಆಯುಃ** ಆಯುಷ್ಯವನ್ನು, **ಮತಿಂ** ಬುದ್ಧಿಯನ್ನು, **ಚ** ಮತ್ತು, **ಕರ್ಮ** ಕರ್ಮಗಳನ್ನು **ವೀಕ್ಷ್ಯ** ನೋಡಿ, **ಕೃಷ್ಣಃ** ಕೃಷ್ಣನೆಂದು ಹೆಸರುಳ್ಳ, **ಸಃ** ಆ ವೇದವ್ಯಾಸರು, **ವೇದಾನ್** ವೇದಗಳನ್ನು **ಚತುರ್ಧಾ** ನಾಲ್ಕಾಗಿ, **ವಿವ್ಯಾಸ** ವಿಭಾಗ ಮಾಡಿದರು, **ತಥಾ** ಹಾಗೆಯೇ, **ಭಾಗವತಂ** ಭಗವಂತನನ್ನೇ ಪ್ರತಿಪಾದಿಸುವ ಹದಿನೆಂಟು ಪುರಾಣಗಳನ್ನು, **ಚಕ್ರೇ** ಮಾಡಿದರು.

**ತಾತ್ಪರ್ಯ** :- ಯುಗಧರ್ಮಕ್ಕೆ ಅನುಗುಣ ಜನರ ಆಯುಷ್ಯ, ಬುದ್ಧಿಶಕ್ತಿ, ಮತ್ತು ಕರ್ಮಾನುಷ್ಠಾನ ದಿನದಿನಕ್ಕೂ ಕಡಿಮೆ ಆಗುತ್ತಿದೆ. ಹೀಗಾಗಿ ಜನರು ಅಜ್ಞಾನದಲ್ಲಿ ಮುಳುಗಿದ್ದಾರೆ. ಅವರ ಅಜ್ಞಾನ ಪರಿಹಾರ ಮಾಡಲು ವೇದಾದಿಶಾಸ್ತ್ರಗಳ ಅಗತ್ಯ ಇದೆ. ಆದರೆ, ಸಮಗ್ರ ವೇದರಾಶಿಯನ್ನು ಅಧ್ಯಯನ ಮಾಡುವಷ್ಟು ಆಯುಷ್ಯವಾಗಲೀ, ಬುದ್ಧಿಶಕ್ತಿಯಾಗಲೀ, ಜನರಲ್ಲಿ ಇಲ್ಲ. ಆದುದರಿಂದ ವ್ಯಾಸರು ವೇದವನ್ನು ಆಯಾಯಾ ಗುಂಪಿನಿಂದ ಅಷ್ಟಷ್ಟು ಭಾಗವನ್ನು ತೆಗೆದು, ಋಗ್ವೇದ, ಯಜುರ್ವೇದ ಮುಂತಾಗಿ ವಿಭಾಗ ವಿಭಾಗ ಮಾಡಿದರು. ನಂತರ ಭಗವಂತನನ್ನು ಸರಿಯಾಗಿ ತಿಳಿಯುವುದಕ್ಕಾಗಿ ಭಾಗವತವೇ ಮೊದಲಾದ ಹದಿನೆಂಟು ಪುರಾಣಗಳನ್ನು ರಚಿಸಿದರು.

### ಕೀಟದಿಂದ ರಾಜ್ಯಭಾರ

**ಯೇ ಯೇ ಚ ಸಂತಮಸಾನುವಿಷ್ಟಾಸ್ತಾಂಸ್ತಾನ್**
**ಸುವಾಕ್ಯೈಸ್ತಮಸೋ ವಿಮುಂಚನ್ ।**
**ಸ ಪಥಿ ಪ್ರಯಾಂತಂ ಕೀಟಂ**
**ವ್ಯಪಶ್ಯತ್ ತಮುವಾಚ ಕೃಷ್ಣಃ ॥ ೬೧ ॥**

**ಭವಸ್ವ ರಾಜಾ ಕುಶರೀರಮೇತತ್**
**ತ್ಯಕ್ತ್ವೇತಿ ನೈಚ್ಛತ್ ತದಸೌ ತತಸ್ತಮ್ ।**
**ಅತ್ಯಕ್ತದೇಹಂ ನೃಪತಿಂ ಚಕಾರ**
**ಪುರಾ ಸ್ವಭಕ್ತಂ ವೃಷಲಂ ಸುಲುಬ್ಧಮ್ ॥ ೬೨ ॥**

ಪದಚ್ಛೇದ :ಯೇಯೇ, ಚ, ಸಂತಮಸಾನುವಿಷ್ಟಾಃ, ತಾನ್ ತಾನ್, ಸುವಾಕ್ಯೈಃ, ತಮಸಃ, ವಿಮುಂಚನ್, ಚಚರಾ, ಲೋಕಾನ್, ಸಃ, ಪಥಿ ಪ್ರಯಾಂತಮ್, ಕೀಟಮ್, ವ್ಯಪಶ್ಯತ್, ತಮ್, ಉವಾಚ, ಕೃಷ್ಣಃ ॥

ಭವಸ್ವ, ರಾಜಾ, ಕುಶರೀರಮ್, ಏತತ್, ತ್ಯಕ್ತ್ವಾ ಇತಿ, ನ, ಐಚ್ಛತ್, ತತ್, ಅಸೌ, ತತಃ, ತಮ್, ಅತ್ಯಕ್ತದೇಹಮ್, ನೃಪತಿಮ್, ಚಕಾರ, ಪುರಾ, ಸ್ವಭಕ್ತಮ್, ವೃಷಲಮ್, ಸುಲುಬ್ಧಮ್, ॥

**ಅರ್ಥ :-** **ಯೇ ಯೇ** ಯಾರು ಯಾರು, **ಸಂತಮಸಾನುವಿಷ್ಟಾಃ** ಅಜ್ಞಾನ ದಲ್ಲಿ ಮುಳುಗಿದ್ದಾರೋ, **ತಾನ್ ತಾನ್** ಆ ಎಲ್ಲರನ್ನೂ, **ಸುವಾಕ್ಯೈಃ** ಒಳ್ಳೆಯ ಮಾತುಗಳಿಂದ, **ತಮಸಾ** ಅಜ್ಞಾನದಿಂದ, **ವಿಮುಂಚನ್** ಮುಕ್ತಿಗೊಳಿಸುತ್ತಾ, **ಲೋಕಾನ್** ಲೋಕಗಳನ್ನು **ಚಚಾರ** ಸಂಚರಿಸಿದರು, **ಸಃ** ಆ ವೇದವ್ಯಾಸರು, **ಪಥಿ** ದಾರಿಯಲ್ಲಿ **ಪ್ರಯಾಂತಂ** ಹೋಗುತ್ತಿರುವ, **ಕೀಟಮ್** ಕೀಟವನ್ನು **ವ್ಯಪಶ್ಯತ್** ಕರುಣಾ ದೃಷ್ಟಿಯಿಂದ ನೋಡಿದರು, **ಕೃಷ್ಣಃ** ವೇದವ್ಯಾಸದೇವರು **ತಂ** ಆ ಕೀಟವನ್ನು ಕುರಿತು, **ಏತತ್** ಈ, **ಕುಶರೀರಂ** ಕೆಟ್ಟ ಶರೀರವನ್ನು **ತ್ಯಕ್ತ್ವಾ** ಬಿಟ್ಟು **ರಾಜಾ** ರಾಜನು, **ಭವಸ್ವ** ಆಗು, **ಇತಿ** ಎಂದು, **ಉವಾಚ** ಹೇಳಿದರು, **ಅಸೌ** ಈ ಕೀಟವು, **ತತ್** ಅದನ್ನು **ನೈಚ್ಛತ್** ಬಯಸಲಿಲ್ಲ, **ಪುರಾ** ಹಿಂದಿನ ಜನ್ಮದಲ್ಲಿ **ವೃಷಲಂ** ಶೂದ್ರನಾಗಿದ್ದ **ಸುಲುಬ್ಧಮ್** ಅತ್ಯಂತ ಲೋಭಿಯಾಗಿದ್ದ **ಸ್ವಭಕ್ತಂ** ತನ್ನ ಭಕ್ತನಾಗಿದ್ದ **ಅತ್ಯಕ್ತದೇಹಂ** ಕೀಟದ ದೇಹವನ್ನು ಬಿಡದಿರುವ, **ತಮ್** ಆ ಕೀಟವನ್ನು **ತತಃ** ಅನಂತರ, **ನೃಪತಿಂ** ರಾಜನನ್ನಾಗಿ, **ಚಕಾರ** ಮಾಡಿದರು.

**ತಾತ್ಪರ್ಯ :-** ಲೋಕದಲ್ಲಿ ಅಜ್ಞಾನದಿಂದ ಕಂಗೆಟ್ಟವರನ್ನು ಉದ್ಧರಿಸುವುದಕ್ಕಾಗಿ ಲೋಕದಲ್ಲಿ ಸಂಚರಿಸಿದರು. ಲೋಕದ ಹಿತಕ್ಕಾಗಿ ಲೋಕ ಸಂಚಾರಿಯಾಗಿದ್ದ ವೇದವ್ಯಾಸರು ದಾರಿಯಲ್ಲಿ ಒಂದು ಕೀಟವನ್ನು ಕಂಡರು. ಅದು ಗಾಡಿಯ ದಾರಿಯಲ್ಲಿ ಓಡುತ್ತಿತ್ತು. ಅದನ್ನು ಕುರಿತು ವ್ಯಾಸರು ಭಯಗೊಂಡಿರುವೆ, ಓಡುತ್ತಾ ಇದ್ದಿ ಏಕೆ ಹೆದರಿಕೆ ಎಂದು ಪ್ರಶ್ನಿಸಿದರು. ಆಗ ಕೀಟ ಹೇಳಿತು 'ಗಾಡಿಯ ಶಬ್ದ ಕೇಳುತ್ತಿದೆ. ಆ ಧ್ವನಿ ಭಯಂಕರವಾಗಿದೆ. ಪ್ರಾಣಿಗಳಿಗೆ ಮರಣ ಅತ್ಯಂತ ದುಃಖಕರವಾದುದು. ಜೀವನ ಅತ್ಯಂತ ದುರ್ಲಭವಾದುದು. ಅದಕ್ಕೋಸ್ಕರ ಬದುಕಬೇಕೆಂದು ಓಡುತ್ತಿರುವೆ ಎಂದು.

ಆಗ ವ್ಯಾಸರು ಕೇಳುತ್ತಾರೆ. 'ನೀನು ಕೀಟಶರೀರವನ್ನು ಪಡೆದಿರುವೆ. ನಿನಗೆಲ್ಲಿಯ ಸುಖ. ಮರಣವೇ ಸುಖವಲ್ಲವೇ?' ಎಂದು. ಕೀಟ ಹೇಳುತ್ತಿದೆ 'ಆಯಾಯಾ ಜನ್ಮ ಬಂದಾಗ ಅದದೇ ಸುಖ. ನನಗೆ ಕೀಟ ಶರೀರವೇ ಸುಖ. ಆದುದರಿಂದ ನಾನು ಬದುಕಲು ಬಯಸಿದ್ದೇನೆ' ಎಂದು ಹೇಳಿ ತನ್ನ ಹಿಂದಿನ ಜನ್ಮ ವೃತ್ತಾಂತವನ್ನು ಹೇಳುತ್ತಿದೆ. ಈ ಕೀಟ ಹಿಂದಿನ ಜನ್ಮದಲ್ಲಿ ಶೂದ್ರಜಾತಿಯಲ್ಲಿ ಹುಟ್ಟಿತು. ಅವನು ಬಹಳ ಹಣವಂತನಾಗಿದ್ದ. ಕ್ರೂರತನ, ಕೆಟ್ಟ ಸ್ವಭಾವವೂ ಸೇರಿತ್ತು. ಯಾರಿಗೂ ಏನನ್ನೂ ಕೊಡುತ್ತಿರಲಿಲ್ಲ. ಹೀಗಾಗಿ ಈ ಕೀಟ ಜನ್ಮ ಬಂದಿದೆ ಎಂದು. ಆಗ ವ್ಯಾಸರು ಹೇಳಿದರು ನನಗೆಲ್ಲ ತಿಳಿದಿದೆ ಆದರೆ ನೀನು ಕೀಟಶರೀರದಲ್ಲಿಯೂ ಹಿಂದಿನ ಜನ್ಮವನ್ನು ಮರೆತಿಲ್ಲ. ಅದು ನಿನ್ನ ಶುಭಕರ್ಮದ ಫಲ. ಈಗ ನಾನು ನಿನ್ನನ್ನು ಮನುಷ್ಯನನ್ನಾಗಿ ಮಾಡಿದರೆ, ಅಲ್ಲಿ ನೀನು ಪುಣ್ಯಕರ್ಮಗಳನ್ನು ಮಾಡಿ, ನನ್ನ ಜ್ಞಾನವನ್ನು ಪಡೆದು ಮುಕ್ತನಾಗಬಹುದು. ಈ ಕೀಟಶರೀರವನ್ನು ಬಿಡು ಎಂದು. ಆದರೆ, ಕೀಟ ಈ ಶರೀರವನ್ನು ಬಿಡಲು ಒಪ್ಪಲಿಲ್ಲ. ಆಗ ವ್ಯಾಸರು, ಕೀಟ ಶರೀರದಲ್ಲಿಯೇ ಚಕ್ರವರ್ತಿಯನ್ನಾಗಿ ಮಾಡಿದರು.

**ಲೋಭಾತ್ ಸ ಕೀಟತ್ವಮುಪೇತ್ಯ ಕೃಷ್ಣಪ್ರಸಾದತಶ್ಚಾಶು ಬಭೂವ ರಾಜಾ ।**
**ತದೈವ ತಂ ಸರ್ವನೃಪಾಃ ಪ್ರಣೇಮುರ್ದದುಃ ಕರಂ ಚಾಸ್ಯ ಯಥೈವ ವೈಶ್ಯಾಃ**
**॥ ೬೩ ॥**

ಪದಚ್ಛೇದ :**ಲೋಭಾತ್, ಸಃ, ಕೀಟತ್ವಮ್, ಉಪೇತ್ಯ, ಕೃಷ್ಣ ಪ್ರಸಾದತಃ, ಚ, ಆಶು, ಬಭೂವ, ರಾಜಾ, ತದಾ, ಏವ, ತಮ್, ಸರ್ವನೃಪಾಃ, ಪ್ರಣೇಮುಃ, ದದುಃ, ಕರಮ್, ಚ, ಅಸ್ಯ, ಯಥಾ, ಏವ, ವೈಶ್ಯಾಃ ॥**

**ಅರ್ಥ** :- **ಸಃ** ಆ ಶೂದ್ರನು, **ಲೋಭಾತ್** ಲೋಭತನದಿಂದಾಗಿ, **ಕೀಟತ್ವಮ್** ಕೀಟಜನ್ಮವನ್ನು **ಉಪೇತ್ಯ** ಹೊಂದಿ, **ಕೃಷ್ಣಪ್ರಸಾದತಃ** ವೇದವ್ಯಾಸರ ಅನುಗ್ರಹದಿಂದ, **ಆಶು** ಕೂಡಲೇ, **ರಾಜಾ ಚ** ರಾಜನೂ ಕೂಡ, **ಬಭೂವ** ಆದನು, **ತದಾ ಏವ** ಆಗಲೇ, **ಸರ್ವನೃಪಾಃ** ಎಲ್ಲಾ ರಾಜರೂ, **ತಂ** ಆ ರಾಜನಾದ ಕೀಟವನ್ನು, **ಪ್ರಣೇಮುಃ** ನಮಸ್ಕರಿಸಿದರು, **ಚ** ಮತ್ತು, **ಅಸ್ಯ** ಈ ಕೀಟ ರೂಪದ ರಾಜನಿಗೆ, **ಯಥಾ ಏವ** ಬೇರೆ ಮನುಷ್ಯರಾಜರಿಗೆ ಹೇಗೋ ಹಾಗೆಯೇ, **ವೈಶ್ಯಾಃ** ಜನರು, **ಕರಂ** ತೆರಿಗೆಯನ್ನು, **ದದುಃ** ಕೊಟ್ಟರು.

**ತಾತ್ಪರ್ಯ** :- ಹಿಂದಿನ ಜನ್ಮದ ಲೋಭಬುದ್ಧಿಯಿಂದ ಈಗ ಕೀಟ ಶರೀರ ಬಂದಿದೆ. ಆದರೆ ವೇದವ್ಯಾಸರ ಅನುಗ್ರಹದಿಂದ ರಾಜನಾಗಿದ್ದಾನೆ. ಆಗ ಎಲ್ಲಾ ರಾಜರು ನಮಸ್ಕಾರ ಮಾಡಿದರು. ಮನುಷ್ಯನಾದ ರಾಜರಿಗೆ ಕರ (ತೆರಿಗೆ) ಕೊಡುವಂತೆ ಈ ಕೀಟ ಶರೀರದ ರಾಜನಿಗೂ ತೆರಿಗೆಯನ್ನು ಎಲ್ಲ ಮನುಷ್ಯರು, ಹೆಚ್ಚಾಗಿ ವ್ಯಾಪಾರಿಗಳು ಸಲ್ಲಿಸಿದರು.

**ಉವಾಚ ತಂ ಭಗವಾನ್ ಮುಕ್ತಿಮಸ್ಮಿಂ-**
**ಸ್ತವ ಕ್ಷಣೇ ದಾತುಮಹಂ ಸಮರ್ಥಃ ।**
**ತಥಾಪಿ ಸೀಮಾರ್ಥಮವಾಪ್ಯ ವಿಪ್ರತನುಂ**
**ವಿಮುಕ್ತೋ ಭವ ಮತ್ಪ್ರಸಾದಾತ್ ॥ ೬೪ ॥**

**ಪದಚ್ಛೇದ** :**ಉವಾಚ, ತಮ್, ಭಗವಾನ್, ಮುಕ್ತಿಮ್, ಅಸ್ಮಿನ್, ತವ, ಕ್ಷಣೇ, ದಾತುಮ್, ಅಹಮ್, ಸಮರ್ಥಃ, ತಥಾಪಿ, ಸೀಮಾರ್ಥಮ್, ಅವಾಪ್ಯ, ವಿಪ್ರತನುಮ್, ವಿಮುಕ್ತಃ, ಭವ, ಮತ್ಪ್ರಸಾದಾತ್ ॥**

**ಅರ್ಥ** :- **ಅಸ್ಮಿನ್** ಈ ಕೀಟಜನ್ಮದಲ್ಲಿಯೇ, **ತವ** ನಿನಗೆ, **ಮುಕ್ತಿಂ** ಮೋಕ್ಷವನ್ನು **ಕ್ಷಣೇ** ಈ ಕ್ಷಣದಲ್ಲಿ **ದಾತುಂ** ಕೊಡಲು, **ಅಹಂ** ನಾನು, **ಸಮರ್ಥಃ**ಸಮರ್ಥನು, **ತಥಾಪಿ** ಹಾಗಿದ್ದರೂ, **ಸೀಮಾರ್ಥಂ** ಪ್ರಾರಬ್ಧಕರ್ಮ ಮುಗಿದ ಮೇಲೆಯೇ ಮುಕ್ತಿ ಎಂಬ ಅವಧಿಯನ್ನು ಪಾಲಿಸಲು, **ವಿಪ್ರತನುಂ** ಬ್ರಾಹ್ಮಣ ಜನ್ಮವನ್ನು **ಅವಾಪ್ಯ** ಪಡೆದು, **ಮತ್ಪ್ರಸಾದಾತ್** ನನ್ನ ಅನುಗ್ರಹದಿಂದ, **ಮುಕ್ತಃ** ಮುಕ್ತನು, **ಭವ** ಆಗು (ಎಂದು), **ತಂ** ಈ ಕೀಟವನ್ನು ಕುರಿತು, **ಭಗವಾನ್** ವೇದವ್ಯಾಸರು, **ಉವಾಚ** ಹೇಳಿದರು.

**ತಾತ್ಪರ್ಯ** :- ಭಗವಂತನು ಕೀಟವನ್ನು ಕುರಿತು ಹೇಳುತ್ತಾನೆ 'ನಾನು ನಿನಗೆ ಈ ಶರೀರದಲ್ಲಿಯೇ ಈ ಕೂಡಲೇ ಮೋಕ್ಷವನ್ನು ಕೊಡಬಲ್ಲೆ. ಆದರೆ ಮುಕ್ತಿಗೆ ಒಂದು ನಿಯಮವಿದೆ. ಪ್ರಾರಬ್ಧ ಕರ್ಮ ಮುಗಿದ ಮೇಲೆಯೇ ಮುಕ್ತಿ ಎಂದು. ಆದುದರಿಂದ ನೀನೂ ಕೂಡ ಮುಂದೆ ಬ್ರಾಹ್ಮಣ ಜನ್ಮವನ್ನ ಪಡೆದು ನನ್ನ ಅನುಗ್ರಹ ಪಡೆದು ಮುಕ್ತನಾಗು'' ಎಂದು.

### ಕೀಟ-ಉದ್ಧಾರ

ಜ್ಞಾನಂ ಚ ತಸ್ಮೈ ವಿಮಲಂ ದದೌ ಸ
ಮಹೀಂ ಚ ಸರ್ವಾಂ ಬುಭುಜೇ ತದಂತೇ ।
ತ್ಯಕ್ತ್ವಾ ತನುಂ ವಿಪ್ರವರತ್ವಮೇತ್ಯ
ಪದಂ ಹರೇರಾಪ ಸುತತ್ವವೇದೀ ॥ ೬೫ ॥

ಪದಚ್ಛೇದ :ಜ್ಞಾನಮ್, ಚ, ತಸ್ಮೈ, ವಿಮಲಮ್, ದದೌ, ಸಃ, ಮಹೀಮ್, ಚ, ಬುಭುಜೇ, ತದಂತೇ, ತ್ಯಕ್ತ್ವಾ ತನುಮ್, ವಿಪ್ರವರತ್ವಮ್, ಏತ್ಯ, ಪದಮ್, ಹರೇಃ, ಆಪ, ಸುತತ್ವವೇದೀ ॥

ಅರ್ಥ :- ತಸ್ಮೈ ಆ ಕೀಟಕ್ಕೆ ವಿಮಲಂ ನಿರ್ಮಲವಾದ, ಜ್ಞಾನಂ ಚ ಜ್ಞಾನವನ್ನೂ ಕೂಡ, ದದೌ ಕೊಟ್ಟನು, ಸಃ ಆ ಕೀಟವು, ಮಹೀಂ ಭೂಮಿಯನ್ನು ಬುಭುಜೇ ಚ ಆಳಿತೂ ಕೂಡ, ತದಂತೇ ಪ್ರಾರಬ್ಧಕರ್ಮ ಮುಗಿದ ಮೇಲೆ, ತನುಂ ಕೀಟಶರೀರವನ್ನು ತ್ಯಕ್ತ್ವಾ ಬಿಟ್ಟು ವಿಪ್ರವರತ್ವಮ್ ಶ್ರೇಷ್ಠ ಬ್ರಾಹ್ಮಣಶರೀರವನ್ನು ಏತ್ಯ ಹೊಂದಿ, ಸುತತ್ವವೇದೀ ಒಳ್ಳೆಯ ಭಗವತ್ತತ್ವವನ್ನು ತಿಳಿದವನಾಗಿ, ಹರೇಃ ಭಗವಂತನ, ಪದಂ ಸ್ಥಾನವನ್ನು ಆಪ ಹೊಂದಿದನು.

ತಾತ್ಪರ್ಯ :- ವೇದವ್ಯಾಸದೇವರು ಆ ಕೀಟಕ್ಕೆ ನಿರ್ಮಲಜ್ಞಾನವನ್ನೂ ದಯಪಾಲಿಸಿದರು. ಆ ಕೀಟ ರಾಜ್ಯ ಭಾರವನ್ನು ಮಾಡಿತು. ಪ್ರಾರಬ್ಧ ಕರ್ಮವನ್ನು ಸವೆಸಿದ ನಂತರ ಕೊನೆಯ ಜನ್ಮವಾಗಿ ಉತ್ತಮವಾದ ಬ್ರಾಹ್ಮಣ ಜನ್ಮ ಬಂದಿತು. ಆ ಜನ್ಮದಲ್ಲಿ ಅವನು ಭಗವತ್ತತ್ವವನ್ನು ಇತರ ತತ್ವಗಳನ್ನು ಚನ್ನಾಗಿ ತಿಳಿದು ಮುಕ್ತನಾದ.

### ವ್ಯಾಸರ ಅವತಾರ ಕಾರ್ಯ

ಏವಂ ಬಹೂನ್ ಸಂಸೃತಿ ಬಂಧತಃ ಸ
ವ್ಯಮೋಚಯದ್ ವ್ಯಾಸತನುರ್ಜನಾರ್ದನಃ ।
ಬಹೂನ್ಯಚಿಂತ್ಯಾನಿ ಚ ತಸ್ಯ ಕರ್ಮಾಣ್ಯ-
ಶೇಷದೇವೇಶಸದೋದಿತಾನಿ ॥ ೬೬ ॥

ಪದಚ್ಛೇದ :ಏವಮ್, ಬಹೂನ್, ಸಂಸೃತಿಬಂಧತಃ, ಸಃ, ವ್ಯಮೋಚಯತ್, ವ್ಯಾಸತನುಃ, ಜನಾರ್ದನಃ, ಬಹೂನಿ, ಅಚಿಂತ್ಯಾನಿ, ಚ, ತಸ್ಯ, ಕರ್ಮಾಣಿ, ಅಶೇಷದೇವೇಶ ಸದೋದಿತಾನಿ ॥

**ಅರ್ಥ** :- **ಸಃ** ಆ, **ವ್ಯಾಸತನುಃ** ವ್ಯಾಸರೂಪಿಯಾದ, **ಜನಾರ್ದನಃ** ಸಂಸಾರ ಮೋಚಕನಾದ ಪರಮಾತ್ಮನು, **ಏವಂ** ಈ ರೀತಿಯಾಗಿ, **ಬಹೂನ್** ಬಹಳ ಜನರನ್ನು, **ಸಂಸೃತಿ ಬಂಧತಃ** ಸಂಸಾರಬಂಧನದಿಂದ, **ವ್ಯಮೋಚಯತ್** ಬಿಡುಗಡೆಗೊಳಿಸಿದನು, **ಅಶೇಷದೇವೇಶ ಸದೋದಿತಾನಿ** ಎಲ್ಲ ದೇವತೆಗಳಿಂದ ಸರ್ವಕಾಲದಲ್ಲಿಯೂ ವರ್ಣಿಸಲ್ಪಡುವ, **ಬಹೂನಿ** ಅನಂತವಾದ, **ತಸ್ಯ** ಆ ವೇದವ್ಯಾಸ ದೇವರ, **ಕರ್ಮಾಣಿ** ಕರ್ಮಗಳು, **ಅಚಿಂತ್ಯಾನಿ** ಮನಸ್ಸಿನಲ್ಲಿ ಆಲೋಚಿಸಲೂ ಅಶಕ್ಯವಾದವುಗಳು.

**ತಾತ್ಪರ್ಯ** :- ಕೀಟವನ್ನು ಸಂಸಾರದಿಂದ ಬಿಡುಗಡೆ ಗೊಳಿಸಿದಂತೆ ಅನೇಕ ಜನರನ್ನು ವೇದವ್ಯಾಸ ದೇವರು ಬಿಡುಗಡೆ ಮಾಡಿದರು. ಹೀಗೆ ವೇದವ್ಯಾಸ ದೇವರ ಕಾರ್ಯಗಳು ಅನಂತ, ಅಚಿಂತ್ಯ, ದೇವತೆಗಳು ಸದಾ ಹೊಗಳುವಂತಹವುಗಳು.

### ಮಗನಿಗಾಗಿ ತಪಸ್ಸಿನ ನಾಟಕ

**ಅಥಾಸ್ಯ ಪುತ್ರತ್ವಮವಾಪ್ತುಮಿಚ್ಛಂಶ್ಚಚಾರ**
**ರುದ್ರಃ ಸುತಪಸ್ತದೀಯಮ್ ।**
**ದದೌ ಚ ತಸ್ಮೈ ಭಗವಾನ್ ವರಂ ತಂ**
**ಸ್ವಯಂ ಚ ತಪ್ತ್ವೈವ ತಪೋ ವಿಮೋಹಯನ್ ॥ ೬೭ ॥**

ಪದಚ್ಛೇದ :ಅಥ, ಅಸ್ಯ, ಪುತ್ರತ್ವಮ್, ಅವಾಪ್ತುಮ್, ಇಚ್ಛನ್, ಚಚಾರ, ರುದ್ರಃ, ಸುತಪಃ, ತದೀಯಮ್, ದದೌ, ಚ, ತಸ್ಮೈ, ಭಗವಾನ್, ವರಮ್, ತಮ್, ಸ್ವಯಮ್, ಚ, ತಪ್ತ್ವಾ ಏವ, ತಪಃ, ವಿಮೋಹಯನ್ ॥

**ಅರ್ಥ** :- **ಅಥ** ಅನಂತರ, **ಅಸ್ಯ** ಈ ವೇದವ್ಯಾಸದೇವರ, **ಪುತ್ರತ್ವಂ** ಮಗನಾಗುವಿಕೆಯನ್ನು, **ಅವಾಪ್ತುಂ** ಹೊಂದಲು, **ಇಚ್ಛನ್** ಬಯಸಿದವನಾಗಿ, **ರುದ್ರಃ** ಶಿವನು, **ತದೀಯಂ** ಭಗವಂತನನ್ನು ಕುರಿತಾದ, **ಸುತಪಃ** ಶ್ರೇಷ್ಠ ತಪಸ್ಸನ್ನು **ಚಚಾರ** ಮಾಡಿದನು, **ಚ** ಮತ್ತು, **ಭಗವಾನ್** ವೇದವ್ಯಾಸದೇವರು,

**ಸ್ವಯಂ ಚ** ತಾವೂ ಕೂಡ, **ತಪಃ** ತಪಸ್ಸನ್ನು, **ತಪ್ತ್ವಾ ಏವ** ಆಚರಿಸಿಯೇ, **ವಿಮೋಹಯನ್** ಮೋಹಗೊಳಿಸುತ್ತಾ, **ತಮ್** ಆ, **ವರಂ** ವರವನ್ನು **ತಸ್ಮೈ** ಆ ರುದ್ರದೇವರಿಗೆ, **ದದೌ** ಕೊಟ್ಟರು.

**ತಾತ್ಪರ್ಯ** :- ವೇದವ್ಯಾಸದೇವರ ಮಗನಾಗಿ ಹುಟ್ಟಬೇಕೆಂದು ರುದ್ರದೇವರು ಕಠಿಣವಾದ ತಪಸ್ಸನ್ನು ಮಾಡಿದರು. ಆದರೆ ವ್ಯಾಸರೇ, ತಪಸ್ಸು ಮಾಡಿ ರುದ್ರ ದೇವರನ್ನು ಮಗನನ್ನಾಗಿ ಪಡೆದಂತೆ ನಟಿಸಿ, ದುರ್ಜನರನ್ನು ಮೋಹಗೊಳಿಸಿದರು.

**ಭಗವಂತ ದೋಷರಹಿತ**

**ವಿಮೋಹನಾಯಾಸುರಸರ್ಗಿಣಾಂ ಪ್ರಭುಃ**
**ಸ್ವಯಂ ಕರೋತೀವ ತಪಃ ಪ್ರದರ್ಶಯೇತ್ ।**
**ಕಾಮಾದಿದೋಷಾಂಶ್ಚ ಮೃಷೈವ ದರ್ಶ-**
**ಯೇತ್ ನ ತಾವತಾ ತಸ್ಯ ಹಿ ಸಂತಿ ಕುತ್ರಚಿತ್ ॥ ೬೮ ॥**

ಪದಚ್ಛೇದ :ವಿಮೋಹನಾಯ, ಅಸುರಸರ್ಗಿಣಾಮ್, ಪ್ರಭುಃ, ಸ್ವಯಮ್, ಕರೋತಿ, ಇವ, ತಪಃ, ಪ್ರದರ್ಶಯೇತ್, ಕಾಮಾದಿದೋಷಾನ್, ಚ, ಮೃಷಾ, ಏವ, ದರ್ಶಯೇತ್, ನ, ತಾವತಾ, ತಸ್ಯ, ಹಿ, ಸಂತಿ, ಕುತ್ರಚಿತ್ ॥

**ಅರ್ಥ** :- **ಪ್ರಭುಃ** ಸಮರ್ಥರಾದ ವೇದವ್ಯಾಸರು, **ಅಸುರಸರ್ಗಿಣಾಂ** ಅಸುರ ಜಾತಿಯಲ್ಲಿ ಹುಟ್ಟಿದವರ, **ವಿಮೋಹನಾಯ** ವ್ಯಾಸರು ರುದ್ರದೇವರ ಅನುಗ್ರಹದಿಂದ ಮಗನನ್ನು ಪಡೆದಿದ್ದಾರೆ ಎಂದು ಮೋಹಕ್ಕೋಸ್ಕರ, **ಸ್ವಯಂ** ತಾವು, **ತಪಃ** ತಪಸ್ಸನ್ನು, **ಕರೋತಿ ಇವ** ಮಾಡುತ್ತಿರುವರೋ ಎಂಬಂತೆ, **ಪ್ರದರ್ಶಯೇತ್** ನಾಟಕವಾಡುತ್ತಾರೆ, **ಚ** ಮತ್ತು, **ಕಾಮಾದಿದೋಷಾನ್** ಕಾಮವೇ ಮೊದಲಾದ ದೋಷ ಗಳನ್ನು **ಮೃಷಾ ಏವ** ಸುಳ್ಳು ಸುಳ್ಳೆ, **ದರ್ಶಯೇತ್** ತೋರಿಸುತ್ತಾರೆ, **ತಾವತಾ** ಅಷ್ಟು ಮಾತ್ರದಿಂದ, **ಅಸ್ಯ** ಈ ವ್ಯಾಸರಿಗೆ, **ತೇ** ಆ ದೋಷಗಳು, **ಕುತ್ರಚಿತ್** ಎಲ್ಲಿಯೂ, **ನ ಸಂತಿ** ಇರುವುದಿಲ್ಲ, **ಹಿ** ಇದು, ಶೃತಿ ಪ್ರಸಿದ್ಧವು.

**ತಾತ್ಪರ್ಯ** :- ವೇದವ್ಯಾಸರು ತಾವೇ ತಪಸ್ಸು ಮಾಡಿ ರುದ್ರದೇವರ ಅನುಗ್ರಹದಿಂದ ಮಗನನ್ನು ಪಡೆದಂತೆ ನಟನೆ ಮಾಡುತ್ತಾರೆ. ಹಾಗೆಯೇ

ಕಾಮ, ಕ್ರೋಧ, ಮೊದಲಾದ ದೋಷಗಳನ್ನೂ ತೋರಿಸುತ್ತಾರೆ. ಇವೆಲ್ಲ ಕೇವಲ ತೋರಿಕೆಗೆ ಮಾತ್ರ, ನಿಜವಾಗಿ ಭಗವಂತನಲ್ಲಿ ಈ ದೋಷಗಳು ಇರುವುದಿಲ್ಲ. ಈ ನಟನೆ ಅಸುರರ ಮೋಹಕ್ಕಾಗಿ. ಇದು ವೇದದಲ್ಲಿ ಪ್ರಸಿದ್ಧವಾಗಿದೆ.

**ಶುಕೋತ್ಪತ್ತಿ**

**ತತಸ್ತ್ವರಣ್ಯಾ ಸ್ಮ ಬಭೂವ ಪುತ್ರಕಃ**
**ಶಿವೋಽಸ್ಯ ಸೋಽಭೂಚ್ಛುಕನಾಮಧೇಯಃ ।**
**ಶುಕೀ ಹಿ ಭೂತ್ವಾ ಭ್ಯಗಮದ್ ಘೃತಾಚೀ**
**ವ್ಯಾಸಂ ವಿಮಥ್ನಂತಮುತಾರಣೀ ತಮ್ ॥ ೬೯ ॥**

ಪದಚ್ಛೇದ :ತತಃ, ತು, ಅರಣ್ಯಾ, ಸ್ಮ, ಬಭೂವ, ಪುತ್ರಕಃ, ಶಿವಃ, ಅಸ್ಯ, ಸಃ, ಅಭೂತ್, ಶುಕನಾಮಧೇಯಃ, ಶುಕೀ, ಹಿ, ಭೂತ್ವಾ, ಅಭ್ಯಗಮತ್, ಘೃತಾಚೀ, ವ್ಯಾಸಮ್, ವಿಮಥ್ನಂತಮ್, ಉತ, ಅರಣೀ, ತಮ್ ॥

**ಅರ್ಥ** :- **ತತಃ** ರುದ್ರದೇವರ ಮತ್ತು ವ್ಯಾಸರ ತಪಸ್ಸಿನ ಅನಂತರ, **ಸಃ** ಆ, **ಶಿವಃ** ರುದ್ರದೇವರು, **ಅಸ್ಯ** ಈ ವೇದವ್ಯಾಸರ, **ಪುತ್ರಕಃ** ಪ್ರೀತಿಯ ಮಗನಾಗಿ, **ಶುಕನಾಮಧೇಯಃ** ಶುಕ ಎಂದು ಹೆಸರುಳ್ಳವರಾಗಿ, **ಅರಣ್ಯಾ** ಅರಣಿಯಿಂದ, **ಬಭೂವ ಸ್ಮ** ಹುಟ್ಟಿದರಷ್ಟೆ **ಹಿ** ಅದು ಯುಕ್ತವು, **ಅರಣೀ** ಅರಣಿಯನ್ನು, **ವಿಮಥ್ನಂತಮ್** ಮಥಿಸುತ್ತಿರುವ, **ತಮ್ ಉತ** ಆ ವ್ಯಾಸರನ್ನೇ, **ಘೃತಾಚೀ** ಘೃತಾಚಿಯು, **ಶುಕೀ** ಹೆಣ್ಣು ಗಿಳಿಯು, **ಭೂತ್ವಾ** ಆಗಿ, **ಅಭ್ಯಗಮತ್** ಸಂಗಮದ ಇಚ್ಛೆಯಿಂದ ಬಂದಿದ್ದಳು.

**ತಾತ್ಪರ್ಯ** :- ರುದ್ರದೇವರು ವ್ಯಾಸರ ಮಗನಾಗಿ ಹುಟ್ಟಬೇಕೆಂದು ತಪಸ್ಸು ಮಾಡಿದರೆ, ವ್ಯಾಸರು ದುರ್ಜನಮೋಹಕ್ಕಾಗಿ ತಪಸ್ಸು ಮಾಡಿದರು. ತದನಂತರ, ವ್ಯಾಸರು ಅರಣಿ ಮಥನ ಮಾಡುತ್ತಿರುವಾಗ ವ್ಯಾಸರ ಸಮಾಗಮವನ್ನು ಬಯಸಿ, ಘೃತಾಚಿಯು ಹೆಣ್ಣು ಗಿಳಿ ರೂಪದಿಂದ ಬಂದಳು. ಅವಳಲ್ಲಿ ವ್ಯಾಸರಿಂದ ರುದ್ರದೇವರು ಮಗನಾಗಿ ಹುಟ್ಟಿದರು. ಅವರ ಹೆಸರು ಶುಕ.

**ಅಕಾಮಯನ್ ಕಾಮುಕವತ್ ಸ ಭೂತ್ವಾ**
**ತಯಾರ್ಥಿತಸ್ತಂ ಶುಕನಾಮಧೇಯಮ್ ।**
**ಚಕ್ರೇ ಹ್ಯರಣ್ಯೋಸ್ತನಯಂ ಚ ಸೃಷ್ಟ್ವಾ**
**ವಿಮೋಹಯಂಸ್ತತ್ರ ಮಾರ್ಗೇಷ್ವಯೋಗ್ಯಾನ್ ॥ ೭೦ ॥**

ಪದಚ್ಛೇದ :ಅಕಾಮಯನ್, ಕಾಮುಕವತ್, ಸಃ, ಭೂತ್ವಾ, ತಯಾ, ಅರ್ಥಿತಃ, ತಮ್, ಶುಕನಾಮಧೇಯಮ್, ಚಕ್ರೇ, ಹಿ, ಅರಣ್ಯೋಃ, ತನಯಮ್, ಚ, ಸೃಷ್ಟ್ವಾ ವಿಮೋಹಯನ್, ತತ್ತ್ವಮಾರ್ಗೇಷು, ಅಯೋಗ್ಯಾನ್ ॥

**ಅರ್ಥ :- ಅಕಾಮಯನ್** ಕಾಮರಹಿತರಾದ, **ಸಃ** ವೇದವ್ಯಾಸರು, **ಕಾಮುಕವತ್** ಕಾಮುಕರಂತೆ, **ಭೂತ್ವಾ** ಆಗಿ, **ತಯಾ** ಆ ಘೃತಾಚಿಯಿಂದ **ಅರ್ಥಿತಃ** ಬಯಸಲ್ಪಟ್ಟವರಾಗಿ, **ತತ್ತ್ವ ಮಾರ್ಗೇಷು** ತತ್ತ್ವ ಮಾರ್ಗದಲ್ಲಿ **ಅಯೋಗ್ಯಾನ್** ಅಯೋಗ್ಯರಾದ ದುಷ್ಟಜನರನ್ನು, **ವಿಮೋಹಯನ್** ಮೋಹ ಗೊಳಿಸುತ್ತಾ, **ಅರಣ್ಯೋಃ** ಅರಣಿಗಳ ಮಧ್ಯದಲ್ಲಿ, **ತನಯಂ** ಮಗನನ್ನು **ಸೃಷ್ಟ್ವಾ** ಸೃಷ್ಟಿಮಾಡಿ, **ಚ** ಮತ್ತು, **ತಮ್** ಅವನನ್ನು, **ಶುಕನಾಮಧೇಯಂ** ಶುಕ ಎಂದು ಹೆಸರುಳ್ಳವನನ್ನಾಗಿ, **ಚಕ್ರೇ** ಮಾಡಿದರು.

**ತಾತ್ಪರ್ಯ :-** ವಸ್ತುತಃ ವ್ಯಾಸರಿಗೆ ಕಾಮ ಮುಂತಾದ ದೋಷಗಳಿಲ್ಲ. ಆದರೂ ಘೃತಾಚೀ ಕಾಮಿಸಿದಾಗ ತಾವೂ ಅವಳನ್ನು ಕಾಮಿಸಿದವರಂತೆ ನಟಿಸಿ ದುಷ್ಟರನ್ನು ಮೋಹಗೊಳಿಸುತ್ತಾರೆ. ಹೀಗೆ ಅವಳಲ್ಲಿ ಅರಣಿಗಳ ಮಧ್ಯದಲ್ಲಿ ಮಗನನ್ನು ಪಡೆದು ಅವನಿಗೆ ಶುಕ ಎಂದು ನಾಮಕರಣ ಮಾಡಿದರು.

ವಾಯುದೇವರಿಂದ ಆವಿಷ್ಟರಾದ ಶುಕರಿಗೆ ಸಕಲಶಾಸ್ತ್ರೋಪದೇಶ

**ಶುಕಂ ತಮಾಶು ಪ್ರವಿವೇಶ ವಾಯು-**
**ರ್ವ್ಯಾಸಸ್ಯ ಸೇವಾರ್ಥಮಥಾಸ್ಯ ಸರ್ವಮ್ ।**
**ಜ್ಞಾನಂ ದದೌ ಭಗವಾನ್ ಸರ್ವವೇದಾನ್**
**ಸಭಾರತಂ ಭಾಗವತಂ ಪುರಾಣಮ್ ॥ ೭೦ ॥**

ಪದಚ್ಛೇದ :ಶುಕಮ್, ತಮ್, ಆಶು, ಪ್ರವಿವೇಶ, ವಾಯುಃ, ವ್ಯಾಸಸ್ಯ, ಸೇವಾರ್ಥಮ್, ಅಥ, ಅಸ್ಯ, ಸರ್ವಮ್, ಜ್ಞಾನಮ್, ದದೌ, ಭಗವಾನ್, ಸರ್ವವೇದಾನ್, ಸಭಾರತಮ್, ಭಾಗವತಮ್, ಪುರಾಣಮ್ ॥

**ಅರ್ಥ :- ತಮ್** ಆ, **ಶುಕಮ್** ಶುಕಾಚಾರ್ಯರನ್ನು, **ವಾಯುಃ** ವಾಯುದೇವರು, **ವ್ಯಾಸಸ್ಯ** ವ್ಯಾಸರ, **ಸೇವಾರ್ಥಂ** ಸೇವೆಗೋಸ್ಕರ, **ಆಶು** ಕೂಡಲೇ, **ಪ್ರವಿವೇಶ** ಪ್ರವೇಶಿಸಿದರು, **ಅಥ** ವಾಯುದೇವರ ಪ್ರವೇಶದ ನಂತರ, **ಅಸ್ಯ** ಈ ಶುಕಾಚಾರ್ಯರಿಗೆ, **ಭಗವಾನ್** ವೇದವ್ಯಾಸರು, **ಸರ್ವಂ**

ಎಲ್ಲಾ, **ಜ್ಞಾನಂ** ಜ್ಞಾನವನ್ನು, **ಸರ್ವವೇದಾನ್** ಎಲ್ಲಾ ವೇದಗಳನ್ನು **ಸಭಾರತಂ** ಮಹಾಭಾರತದಿಂದ ಕೂಡಿದ, **ಭಾಗವತಂ ಪುರಾಣಂ** ಭಗವತ್ಪರ ವಾದ ಭಾಗವತವೇ ಮೊದಲಾದ ಪುರಾಣಗಳನ್ನು, **ದದೌ** ಕೊಟ್ಟರು.

**ತಾತ್ಪರ್ಯ** :- ಶುಕಾಚಾರ್ಯರ ಜನನವಾದ ತಕ್ಷಣ, ವ್ಯಾಸರ ಸೇವೆಗೋಸ್ಕರ ಶುಕರನ್ನು ವಾಯುದೇವರು ಪ್ರವೇಶಿಸಿದರು. ನಂತರ ವ್ಯಾಸರು ಅವರಿಗೆ ಸರ್ವಜ್ಞಾನವನ್ನು ಕೊಟ್ಟರು. ಸಕಲ ವೇದಗಳನ್ನು ಮಹಾಭಾರತವನ್ನು ಶ್ರೀಮದ್ಭಾಗವತವೇ ಮೊದಲಾದ ೧೮ ಪುರಾಣಗಳನ್ನು ಉಪದೇಶಿಸಿದರು.

**ಪೈಲಾದಿಗಳಲ್ಲಿ ಶೇಷಾದಿ ದೇವತೆಗಳ ಆವೇಶ.**

**ಶೇಷೋಽಥ ಪೈಲಂ ಮುನಿಮಾವಿಶತ್ತದಾ**
**ವೀಶಃ ಸುಮಂತುಮಪಿ ವಾರುಣಿಂ ಮುನಿಮ್ ।**
**ಬ್ರಹ್ಮಾವಿಶತ್ತಮುತ ವೈಶಪಾಯನಂ**
**ಶಕ್ರಶ್ಚ ಜೈಮಿನಿಮಥಾವಿಶದ್ವಿಭುಃ ॥ ೭೨ ॥**

ಪದಚ್ಛೇದ :-ಶೇಷಃ, ಅಥ, ಪೈಲಮ್, ಮುನಿಮ್, ಆವಿಶತ್, ತದಾ, ವೀಶಃ, ಸುಮಂತುಮ್, ಅಪಿ, ವಾರುಣಿಮ್, ಮುನಿಮ್, ಬ್ರಹ್ಮಾ, ಆವಿಶತ್, ತಮ್, ಉತ, ವೈಶಪಾಯನಮ್, ಶಕ್ರಃ, ಚ, ಜೈಮಿನಿಮ್, ಅಥ, ಆವಿಶತ್, ವಿಭುಃ ॥

**ಅರ್ಥ** :- **ಅಥ** ಅನಂತರ, **ಪೈಲಂ ಮುನಿಂ** ಪೈಲ ಮುನಿಗಳನ್ನು, **ಶೇಷಃ** ಶೇಷನು, **ಆವಿಶತ್** ಪ್ರವೇಶಿಸಿದನು, **ತದಾ** ಆಗ, **ವಾರುಣಿಂ** ವರುಣನ ಮಗನಾದ, **ಸುಮಂತುಂ ಮುನಿಂ ಅಪಿ** ಸುಮಂತು ಎಂಬ ಮುನಿಯನ್ನೂ ಕೂಡ, **ವೀಶಃ** ಗರುಡನು, **ಆವಿಶತ್** ಪ್ರವೇಶಿಸಿದನು, **ಉತ** ಮತ್ತು, **ತಂ** ಆ, **ವೈಶಪಾಯನಂ** ವೈಶಂಪಾಯನರನ್ನು, **ಬ್ರಹ್ಮಾ** ಬ್ರಹ್ಮದೇವರು, **ಆವಿಶತ್** ಪ್ರವೇಶಿಸಿದರು, **ಅಥ** ಅನಂತರ, **ಜೈಮಿನಿಂ** ಜೈಮಿನಿಯನ್ನು **ವಿಭುಃ** ಸಮರ್ಥನಾದ, **ಶಕ್ರಃ** ಇಂದ್ರನು, **ಆವಿಶತ್** ಪ್ರವೇಶಿಸಿದನು.

**ತಾತ್ಪರ್ಯ** :- ವಾಯುದೇವರು ಶುಕರಲ್ಲಿ ಪ್ರವೇಶಿಸಿದಂತೆ ಇತರ ದೇವತೆಗಳು ಬೇರೆ ಬೇರೆ ಮುನಿಗಳಲ್ಲಿ ಪ್ರವೇಶಿಸಿದ್ದಾರೆ. ಬ್ರಹ್ಮದೇವರು ವೈಶಂ ಪಾಯನರಲ್ಲಿ, ಶೇಷದೇವರು ಪೈಲರಲ್ಲಿ, ಗರುಡನು ವರುಣನ ಮಗನಾದ ಸುಮಂತುವಿನಲ್ಲಿ ಮತ್ತು ಇಂದ್ರನು ಜೈಮಿನಿಗಳಲ್ಲಿ ಪ್ರವೇಶಿಸಿದ್ದಾರೆ.

ಕೃಷ್ಣಸ್ಯ ಪಾದ ಪರಿಸೇವನೋತ್ಸುಕಾಃ ಸುರೇಶ್ವರಾ
ವಿವಿಶುರಾಶು ತಾನ್ ಮುನೀನ್ ।
ಸಮಸ್ತವಿದ್ಯಾಃ ಪ್ರತಿಪಾದ್ಯ ತೇಷ್ವಸೌ
ಪ್ರವರ್ತಕಾಂಸ್ತಾನ್ ವಿದಧೇ ಹರಿಃ ಪುನಃ ॥ ೭೩ ॥

ಪದಚ್ಛೇದ :ಕೃಷ್ಣಸ್ಯ, ಪಾದಪರಿಸೇವನೋತ್ಸುಕಾಃ, ಸುರೇಶ್ವರಾಃ, ವಿವಿಶುಃ, ಆಶು, ತಾನ್, ಮುನೀನ್, ಸಮಸ್ತವಿದ್ಯಾಃ, ಪ್ರತಿಪಾದ್ಯ, ತೇಷು, ಅಸೌ, ಪ್ರವರ್ತಕಾನ್, ತಾನ್, ವಿದಧೇ, ಹರಿಃ, ಪುನಃ ॥

**ಅರ್ಥ** :- **ಸುರೇಶ್ವರಾಃ** ದೇವಶ್ರೇಷ್ಠರುಗಳು, **ಕೃಷ್ಣಸ್ಯ** ವೇದವ್ಯಾಸ ದೇವರ, **ಪಾದಪರಿಸೇವನೋತ್ಸುಕಾಃ** ಪಾದ ಸೇವೆಯಲ್ಲಿ ಆಸಕ್ತರಾದವರಾಗಿ, **ತಾನ್** ಆ, **ಮುನೀನ್** ಮುನಿಗಳನ್ನು **ಆಶು** ಕೂಡಲೇ, **ವಿವಿಶುಃ** ಪ್ರವೇಶಿಸಿದರು, **ಅಸೌ ಹರಿಃ** ಈ ವೇದವ್ಯಾಸರು, **ತೇಷು** ಆ ಮುನಿಗಳಲ್ಲಿ **ಸಮಸ್ತವಿದ್ಯಾಃ** ಎಲ್ಲಾ ವಿದ್ಯೆಗಳನ್ನು, **ಪ್ರತಿಪಾದ್ಯ** ಉಪದೇಶಿಸಿ, **ತಾನ್** ಆ ಪೈಲ ಮೊದಲಾದ ಮುನಿಗಳನ್ನು **ಪುನಃ** ಮತ್ತು, **ಪ್ರವರ್ತಕಾನ್** ಪ್ರವರ್ತಕರನ್ನಾಗಿ, **ವಿದಧೇ** ಮಾಡಿದರು.

**ತಾತ್ಪರ್ಯ** :- ಬ್ರಹ್ಮಾದಿ ದೇವತೆಗಳು ಆಯಾಯ ಮುನಿಗಳನ್ನು ಪ್ರವೇಶ ಮಾಡಿದ್ದು ವೇದವ್ಯಾಸರ ಪಾದ ಸೇವೆಗಾಗಿ, ಆಗ ವೇದವ್ಯಾಸರು ಪೈಲ ಮೊದಲಾದ ಮುನಿಗಳಿಗೆ ಸಮಸ್ತ ಶಾಸ್ತ್ರವನ್ನು ಉಪದೇಶ ಮಾಡಿ, ಮುಂದೆ ತಿಳಿಸುವ ರೀತಿಯಲ್ಲಿ ಆಯಾಯಾ ಶಾಸ್ತ್ರಗಳಿಗೆ ಆಯಾಯಾ ಮುನಿಗಳನ್ನು ಪ್ರವರ್ತಕರನ್ನಾಗಿ ಮಾಡಿದರು.

### ಶಾಸ್ತ್ರಪ್ರವರ್ತಕರಾಗಿ ಪೈಲಾದಿ ಮುನಿಗಳು

ಋಚಾಂ ಪ್ರವರ್ತಕಂ ಪೈಲಂ ಯಜುಷಾಂ ಚ ಪ್ರವರ್ತಕಮ್ ।
ವೈಶಂಪಾಯನಮೇವೈಕಂ ದ್ವಿತೀಯಂ ಸೂರ್ಯಮೇವ ಚ ।
ಚಕ್ರೇಽಥ ಜೈಮಿನಿಂ ಸಾಮ್ನಾಮಥರ್ವಾಂಗಿರಸಾಮಪಿ ॥ ೭೪ ॥

ಸುಮಂತುಮ್..............................।

ಪದಚ್ಛೇದ :ಋಚಾಮ್, ಪ್ರವರ್ತಕಮ್, ಪೈಲಮ್, ಯಜುಷಾಮ್, ಚ, ಪ್ರವರ್ತಕಮ್, ವೈಶಂಪಾಯನಮ್, ಏವ, ಏಕಮ್, ದ್ವಿತೀಯಮ್, ಸೂರ್ಯಮ್, ಏವ, ಚ, ಚಕ್ರೇ, ಅಥ, ಜೈಮಿನಿಮ್, ಸಾಮ್ನಾಮ್, ಅಥರ್ವಾಂಗಿರಸಾಮ್, ಅಪಿ, ಸುಮಂತುಮ್ ॥

**ಅರ್ಥ :-** **ಋಚಾಂ** ಋಕ್ಕುಗಳ (ಋಗ್ವೇದದ), **ಪ್ರವರ್ತಕಂ** ಪ್ರವರ್ತಕನನ್ನಾಗಿ, **ಪೈಲಂ** ಪೈಲರನ್ನು **ಚ** ಮತ್ತು, **ಯಜುಷಾಂ** ಯಜುರ್ವೇದದ, **ಏಕಂ** ಒಂದು, **ಪ್ರವರ್ತಕಂ** ಪ್ರವರ್ತಕನನ್ನಾಗಿ, **ವೈಶಂಪಾಯನಂ** ವೈಶಂಪಾಯನರನ್ನು **ಚ** ಮತ್ತು, **ದ್ವಿತೀಯಂ** ಎರಡನೆಯ, **ಪ್ರವರ್ತಕಂ** ಪ್ರವರ್ತಕನನ್ನಾಗಿ, **ಸೂರ್ಯಮ್ ಏವ** ಸೂರ್ಯನನ್ನೂ ಕೂಡ, **ಅಥ** ಅನಂತರ, **ಸಾಮ್ನಾಂ** ಸಾಮಶಾಖೆಗಳ, **ಪ್ರವರ್ತಕಂ** ಪ್ರವರ್ತಕನನ್ನಾಗಿ, **ಜೈಮಿನಿಂ** ಜೈಮಿನಿಯನ್ನು **ಅಪಿ** ಮತ್ತು, **ಅಥರ್ವಾಂಗಿರಸಾಂ** ಅಥರ್ವಶಾಖೆಗಳಿಗೆ, **ಸುಮಂತುಂ** ಸುಮಂತುವನ್ನು , **ಪ್ರವರ್ತಕಂ** ಪ್ರವರ್ತಕನನ್ನಾಗಿ, **ಚಕ್ರೇ** ಮಾಡಿದರು.

**ತಾತ್ಪರ್ಯ :-** ಯಾರು ಯಾರು ಯಾವ ಯಾವ ಶಾಸ್ತ್ರಗಳಿಗೆ ಪ್ರವರ್ತಕರು ಎಂದು ಇಲ್ಲಿ ತಿಳಿಸಲಾಗಿದೆ. ಋಗ್ವೇದಕ್ಕೆ ಪೈಲರು, ಯಜುರ್ವೇದಕ್ಕೆ ಸೂರ್ಯ, ಮತ್ತು ವೈಶಂಪಾಯನರು, ಶುಕ್ಲ ಯಜುರ್ವೇದಕ್ಕೆ ಸೂರ್ಯ, ಕೃಷ್ಣ ಯಜುರ್ವೇದಕ್ಕೆ ವೈಶಂಪಾಯನರು, ಸಾಮವೇದಕ್ಕೆ ಜೈಮಿನಿ, ಮತ್ತು ಅಥರ್ವ ವೇದಕ್ಕೆ ಸುಮಂತು ಪ್ರವರ್ತಕರು.

### ಮಹಾಭಾರತದ ಪ್ರಸಾರ ವ್ಯವಸ್ಥೆ

**.................... ಭಾರತಸ್ಯಾಪಿ ವೈಶಂಪಾಯನ ಮಾದಿಶತ್ ।**
**ಪ್ರವರ್ತನೇ ಮಾನುಷೇಷು ಗಂಧರ್ವಾದಿಷು ಚಾತ್ಮಜಮ್ ।**
**ನಾರದಂ ಪಾಠಯಿತ್ವಾ ಚ ದೇವಲೋಕ ಪ್ರವೃತ್ತಯೇ ॥ ೭೫ ॥**

**ಆದಿಶತ್ .........................।**

ಪದಚ್ಛೇದ :ಭಾರತಸ್ಯ, ಅಪಿ, ವೈಶಂಪಾಯನಮ್ ಆದಿಶತ್, ಪ್ರವರ್ತನೇ, ಮಾನುಷೇಷು, ಗಂಧರ್ವಾದಿಷು, ಚ, ಆತ್ಮಜಮ್, ನಾರದಮ್, ಪಾಠಯಿತ್ವಾ ಚ, ದೇವಲೋಕ ಪ್ರವೃತ್ತಯೇ, ಆದಿಶತ್ ।

**ಅರ್ಥ** :- **ಪಾಠಯಿತ್ವಾ** ತಾವೇ ಪಾಠಮಾಡಿ, **ಮಾನುಷೇಷು** ಮನುಷ್ಯರಲ್ಲಿ, **ಭಾರತಸ್ಯ** ಮಹಾಭಾರತದ, **ಪ್ರವರ್ತನೇ ಅಪಿ** ಪ್ರವೃತ್ತಿ ಮಾಡುವಿಕೆಯಲ್ಲಿಯೂ, **ವೈಶಂಪಾಯನಂ** ವೈಶಂಪಾಯನರನ್ನು **ಆದಿಶತ್** ಆಜ್ಞೆ ಮಾಡಿದರು, **ಚ** ಮತ್ತು, **ಗಂಧರ್ವಾದಿಷು** ಗಂಧರ್ವರು ಋಷಿಗಳು ಇವರಲ್ಲಿ (ಪ್ರವೃತ್ತಿ ಮಾಡಲು), **ಆತ್ಮಜಂ** ಮಗನಾದ ಶುಕನನ್ನು, **ಚ** ಮತ್ತು, **ದೇವಲೋಕ ಪ್ರವೃತ್ತಯೇ** ಇಂದ್ರನಿಂದಾರಂಭಿಸಿ ಪುಷ್ಕರ ಪರ್ಯಂತ ದೇವತೆಗಳಲ್ಲಿ ಪ್ರವರ್ತಕನನ್ನಾಗಿ, **ನಾರದಂ** ನಾರದರನ್ನು, **ಆದಿಶತ್** ಅಪ್ಪಣೆ ಮಾಡಿದರು.

**ತಾತ್ಪರ್ಯ** :- ಮಹಾಭಾರತದ ಪ್ರಸಾರಕ್ಕೆ ಮನುಷ್ಯಲೋಕದಲ್ಲಿ ವೈಶಂಪಾಯನರಿಗೆ, ಗಂಧರ್ವ ಲೋಕದಲ್ಲಿ ಶುಕರಿಗೆ ಮತ್ತು ದೇವಲೋಕದಲ್ಲಿ ನಾರದರಿಗೆ ಆಜ್ಞೆ ಮಾಡಿದರು. ಈ ಎಲ್ಲರಿಗೂ ಸ್ವಯಂ ತಾವೇ ಪಾಠ ಮಾಡಿದರು ಶ್ರೀ ವೇದವ್ಯಾಸ ದೇವರು.

**ರೋಮಹರ್ಷಣರ ಸೃಷ್ಟಿ ಅವರ ಕರ್ತವ್ಯ**

**...........ಸಸೃಜೇ ಸೋಽಥ ರೋಮಾಂಚಾತ್ ರೋಮಹರ್ಷಣಮ್ ।**
**ತಂ ಭಾರತ ಪುರಾಣಾನಾಂ ಮಹಾರಾಮಾಯಣಸ್ಯ ಚ ।**
**ಪಂಚರಾತ್ರಸ್ಯ ಕೃತ್ಸ್ನಸ್ಯ ಪ್ರವೃತ್ತ್ಯರ್ಥಮಥಾದಿಶತ್ ॥ ೭೬ ॥**

ಪದಚ್ಛೇದ :ಸಸೃಜೇ, ಸಃ, ಅಥ, ರೋಮಾಂಚಾತ್, ರೋಮಹರ್ಷಣಮ್, ತಮ್, ಭಾರತಪುರಾಣಾನಾಮ್, ಮಹಾರಾಮಾಯಣಸ್ಯ, ಚ, ಪಂಚರಾತ್ರಸ್ಯ, ಕೃತ್ಸ್ನಸ್ಯ, ಪ್ರವೃತ್ತ್ಯರ್ಥಮ್, ಅಥ, ಆದಿಶತ್ ॥

**ಅರ್ಥ** :- **ಸಃ** ಆ ವೇದವ್ಯಾಸರು, **ಅಥ** ಅನಂತರ, **ರೋಮಾಂಚಾತ್** ರೋಮಾಂಚನದಿಂದ, **ರೋಮಹರ್ಷಣಮ್** ರೋಮಹರ್ಷಣನನ್ನು **ಸಸೃಜೇ** ಸೃಷ್ಟಿ ಮಾಡಿದರು, **ಅಥ** ಅನಂತರ, **ಭಾರತಪುರಾಣಾನಾಮ್** ಮಹಾಭಾರತ ಮತ್ತು ಹದಿನೆಂಟು ಪುರಾಣಗಳ, **ಮಹಾರಾಮಾಯಣಸ್ಯ** ಮೂಲ ರಾಮಾಯಣದ, **ಚ** ಮತ್ತು, **ಕೃತ್ಸ್ನಸ್ಯ** ಎಲ್ಲ, **ಪಂಚರಾತ್ರಸ್ಯ** ಪಂಚರಾತ್ರಾಗಮಗಳ, **ಪ್ರವೃತ್ತ್ಯರ್ಥಂ** ಪ್ರಸಾರ ಕ್ಕಾಗಿ, **ತಂ** ಆ ರೋಮಹರ್ಷಣರಿಗೆ, **ಆದಿಶತ್** ಅಪ್ಪಣೆ ಮಾಡಿದರು.

ತಾತ್ಪರ್ಯ :- ವೇದವ್ಯಾಸ ದೇವರ ರೋಮಾಂಚನದಿಂದ ಹುಟ್ಟಿದವ ರೋಮಹರ್ಷಣ. ಅವನನ್ನು ಮಹಾಭಾರತ, ಮೂಲರಾಮಾಯಣ, ಅಷ್ಟಾದಶ ಪುರಾಣಗಳು, ಸಕಲ ಪಂಚರಾತ್ರಾಗಮಗಳು, ಇವುಗಳ ಪ್ರಸಾರಕ್ಕೆ ವೇದವ್ಯಾಸರು ಆಜ್ಞೆ ಮಾಡಿ ನಿಯೋಜಿಸಿದರು.

### ರೋಮಹರ್ಷಣರಿಗೆ ಸರ್ವಜ್ಞಾನ ಉಪದೇಶ

**ತಮಾವಿಶತ್ ಕಾಮದೇವಃ ಕೃಷ್ಣಸೇವಾಸಮುತ್ಸುಕಃ ।**
**ಸ ತಸ್ಮೈ ಜ್ಞಾನಮಖಿಲಂ ದದೌ ದ್ವೈಪಾಯನಃ ಪ್ರಭುಃ ॥ ೭೭ ॥**

ಪದಚ್ಛೇದ :ತಮ್, ಆವಿಶತ್, ಕಾಮದೇವಃ, ಕೃಷ್ಣಸೇವಾಸಮುತ್ಸುಕಃ, ಸಃ, ತಸ್ಮೈ, ಜ್ಞಾನಮ್, ಅಖಿಲಮ್, ದದೌ, ದ್ವೈಪಾಯನಃ, ಪ್ರಭುಃ ॥

ಅರ್ಥ :- **ಕೃಷ್ಣಸೇವಾಸಮುತ್ಸುಕಃ** ವೇದವ್ಯಾಸರ ಸೇವೆಯಲ್ಲಿ ಆಸಕ್ತನಾದ, **ಕಾಮದೇವಃ** ಮನ್ಮಥನು, **ತಂ** ಆ ರೋಮಹರ್ಷಣರನ್ನು **ಆವಿಶತ್** ಪ್ರವೇಶಿಸಿದನು, **ಪ್ರಭುಃ** ಸಮರ್ಥರಾದ, **ಸಃ** ಆ, **ದ್ವೈಪಾಯನಃ** ವೇದವ್ಯಾಸರು, **ತಸ್ಮೈ** ಆ ರೋಮಹರ್ಷಣನಿಗೆ, **ಅಖಿಲಂ** ಮಹಾಭಾರತಾದಿ ಎಲ್ಲಾ ಶಾಸ್ತ್ರಗಳ, **ಜ್ಞಾನಂ** ಜ್ಞಾನವನ್ನು, **ದದೌ** ಕೊಟ್ಟರು.

ತಾತ್ಪರ್ಯ :- ವೇದವ್ಯಾಸರ ಸೇವೆಗಾಗಿ ಮನ್ಮಥನು ರೋಮಹರ್ಷಣರಲ್ಲಿ ಪ್ರವೇಶಿಸಿದ. ಆಗ ವೇದವ್ಯಾಸರು ಅವನಿಗೆ ಸಕಲಶಾಸ್ತ್ರಗಳನ್ನು ಉಪದೇಶ ಮಾಡುವ ಮೂಲಕ ಎಲ್ಲ ಜ್ಞಾನವನ್ನು ಕೊಟ್ಟರು.

### ಯೋಗಾದಿ ಶಾಸ್ತ್ರಪ್ರವರ್ತಕರು

**ಸನತ್ಕುಮಾರ ಪ್ರಮುಖಾಂಶ್ಚಕ್ರೇ ಯೋಗಪ್ರವರ್ತಕಾನ್ ।**
**ಭೃಗ್ವಾದೀನ್ ಕರ್ಮಯೋಗಸ್ಯ ಜ್ಞಾನಂ ದತ್ವಾಮಲಂ ಶುಭಮ್ ॥ ೭೮ ॥**

ಪದಚ್ಛೇದ :ಸನತ್ಕುಮಾರಪ್ರಮುಖಾನ್, ಚಕ್ರೇ, ಯೋಗಪ್ರವರ್ತಕಾನ್, ಭೃಗ್ವಾದೀನ್, ಕರ್ಮಯೋಗಸ್ಯ, ಜ್ಞಾನಮ್, ದತ್ವಾ ಅಮಲಮ್, ಶುಭಮ್ ॥

ಅರ್ಥ :- **ಅಮಲಂ** ನಿರ್ಮಲವಾದ, **ಶುಭಂ** ಪರಿಶುದ್ಧವಾದ, **ಜ್ಞಾನಂ** ತತ್ವಜ್ಞಾನವನ್ನು, **ದತ್ವಾ** ಕೊಟ್ಟು **ಸನತ್ಕುಮಾರಪ್ರಮುಖಾನ್** ಸನತ್ಕುಮಾರನೇ ಮೊದಲಾದ ಋಷಿಗಳನ್ನು, **ಯೋಗ ಪ್ರವರ್ತಕಾನ್** ಜ್ಞಾನ ಯೋಗದ

ಪ್ರವರ್ತಕರನ್ನಾಗಿ, **ಭೃಗ್ವಾದೀನ್**-ಭೃಗುವೇ ಮೊದಲಾದವರನ್ನು, **ಕರ್ಮ ಯೋಗಸ್ಯ** ಕರ್ಮಯೋಗದ ಪ್ರವರ್ತಕರನ್ನಾಗಿ, **ಚಕ್ರೇ** ಮಾಡಿದರು.

**ತಾತ್ಪರ್ಯ** :- ಜ್ಞಾನಯೋಗಕ್ಕೆ ಪ್ರಸಾರಕರನ್ನಾಗಿ ಸನತ್ಕುಮಾರಾದಿ ಋಷಿಗಳನ್ನು ಮತ್ತು ಕರ್ಮಯೋಗಕ್ಕೆ ಭೃಗು ಮೊದಲಾದವರನ್ನು ಪ್ರಸಾರಕರನ್ನಾಗಿ ಮಾಡಿದನು. ಅವರಿಗೆ ಮೋಕ್ಷ ಸಾಧಕವಾದ ನಿರ್ಮಲವಾದ ತತ್ವಜ್ಞಾನವನ್ನು ಕೊಟ್ಟು ಅನುಗ್ರಹಿಸಿದನು.

ಮೀಮಾಂಸಾ ಶಾಸ್ತ್ರಗಳ ರಚನೆ

**ಜೈಮಿನಿಂ ಕರ್ಮಮೀಮಾಂಸಾಕರ್ತಾರಮಕರೋತ್ ಪ್ರಭುಃ ।**
**ದೇವಮೀಮಾಂಸಿಕಾದ್ಯಂತಂ ಕೃತ್ವಾ ಪೈಲಮಥಾದಿಶತ್ ।**
**ಶೇಷಂ ಚ ಮಧ್ಯಕರಣೇ ಪುರಾಣಾನ್ಯಥ ಚಾಕರೋತ್ ॥ ೭೯ ॥**

ಪದಚ್ಛೇದ :ಜೈಮಿನಿಮ್, ಕರ್ಮಮೀಮಾಂಸಾಕರ್ತಾರಮ್, ಅಕರೋತ್, ಪ್ರಭುಃ, ದೇವಮೀಮಾಂಸಿಕಾದ್ಯಂತಮ್, ಕೃತ್ವಾ, ಪೈಲಮ್, ಅಥ, ಆದಿಶತ್, ಶೇಷಮ್, ಚ, ಮಧ್ಯಕರಣೇ, ಪುರಾಣಾನಿ, ಅಥ, ಚ, ಅಕರೋತ್ ॥

**ಅರ್ಥ** :- **ಪ್ರಭುಃ** ಸಮರ್ಥರಾದ ವೇದವ್ಯಾಸರು, **ಜೈಮಿನಿಂ** ಜೈಮಿನಿ ಮುನಿಗಳನ್ನು **ಕರ್ಮಮೀಮಾಂಸಾಕರ್ತಾರಂ** ಕರ್ಮ ಮೀಮಾಂಸಾ ಗ್ರಂಥದ ಕರ್ತೃವನ್ನಾಗಿ, **ಅಕರೋತ್** ಮಾಡಿದರು, **ಅಥ** ಅನಂತರ, **ದೇವಮೀಮಾಂಸಿಕಾದ್ಯಂತಂ** ದೇವಮೀಮಾಂಸಾಶಾಸ್ತ್ರದ ಮೊದಲ ಮತ್ತು ಕೊನೆ ಭಾಗವನ್ನು **ಕೃತ್ವಾ** ರಚಿಸಿ, **ಮಧ್ಯಕರಣೇ** ಮಧ್ಯಭಾಗವನ್ನು ರಚಿಸಲು, **ಪೈಲಂ** ಪೈಲರನ್ನು **ಚ** ಮತ್ತು, **ಶೇಷಂ** ಅವರ ಒಳಗೆ ಪ್ರವೇಶಿಸಿದ ಶೇಷದೇವರನ್ನು **ಆದಿಶತ್** ಅಪ್ಪಣೆ ಮಾಡಿದರು, **ಅಥ** ಅನಂತರ, **ಪುರಾಣಾನಿ ಚ** ಪುರಾಣಗಳನ್ನೂ ಕೂಡ **ಅಕರೋತ್** ರಚಿಸಿದರು.

**ತಾತ್ಪರ್ಯ** :- ವೇದವ್ಯಾಸರ ಆದೇಶದಿಂದ 'ಕರ್ಮಮೀಮಾಂಸಾ'ವನ್ನು ಜೈಮಿನಿಗಳು ರಚಿಸಿದರು. ದೇವ ಮೀಮಾಂಸಾದ ಮೊದಲ ಸೂತ್ರ 'ಅಥಾತೋ ದೈವೀ ಮೀಮಾಂಸಾ' ಮತ್ತು ಕೊನೆಯ ಎರಡು ಸೂತ್ರಗಳು 'ವಿಷ್ಣುರೇವ ಹಿ ತಚ್ಛ್ರುತೇಃ' 'ತಂ ಬ್ರಹ್ಮೇತ್ಯಾಚಕ್ಷತೇ'. ಈ ಭಾಗಗಳನ್ನು ಸ್ವಯಂ ವ್ಯಾಸರೇ ರಚಿಸಿ, ಮಧ್ಯಭಾಗವನ್ನು ಪೈಲರಿಗೂ ಮತ್ತು ಅವರ ಒಳಗೆ

ಆವಿಷ್ಟನಾದ ಶೇಷರಿಗೂ ರಚಿಸಲು ಆದೇಶ ಮಾಡಿದರು. ಮತ್ತು ತಾವೇ ಹದಿನೆಂಟು ಪುರಾಣಗಳನ್ನು ರಚಿಸಿದರು.

**ಪುರಾಣಗಳ ಸ್ವರೂಪ**

**ಶೈವಾನ್ ಪಾಶುಪತಾಚ್ಚಕ್ರೇ ಸಂಶಯಾರ್ಥಂ ಸುರದ್ವಿಷಾಮ್ ।**
**ವೈಷ್ಣವಾನ್ ಪಂಚರಾತ್ರಾಚ್ಚ ಯಥಾರ್ಥಜ್ಞಾನಸಿದ್ಧಯೇ ।**
**ಬ್ರಾಹ್ಮಾಂಶ್ಚ ವೇದತಶ್ಚಕ್ರೇ ಪುರಾಣ ಗ್ರಂಥ ಸಂಗ್ರಹಾನ್ ॥ ೮೦ ॥**

ಪದಚ್ಛೇದ :ಶೈವಾನ್, ಪಾಶುಪತಾತ್, ಚಕ್ರೇ, ಸಂಶಯಾರ್ಥಮ್, ಸುರದ್ವಿಷಾಮ್, ವೈಷ್ಣವಾನ್, ಪಂಚರಾತ್ರಾತ್, ಚ, ಯಥಾರ್ಥಜ್ಞಾನಸಿದ್ಧಯೇ, ಬ್ರಾಹ್ಮಾನ್, ಚ, ವೇದತಃ, ಚಕ್ರೇ, ಪುರಾಣಗ್ರಂಥಸಂಗ್ರಹಾನ್ ॥

**ಅರ್ಥ** :- **ಸುರದ್ವಿಷಾಂ** ದೇವತೆಗಳನ್ನು ದ್ವೇಷಿಸುವ ತಾಮಸರಿಗೆ, **ಸಂಶಯಾರ್ಥಂ** ಸಂಶಯ ನಿವೃತ್ತಿಯಾಗಿ, ಭ್ರಮೆ ಸ್ಥಿರವಾಗುವುದಕ್ಕಾಗಿ, **ಸುರದ್ವಿಷಾಂ** ದೇವತೆಗಳನ್ನು ಆದರಿಸುವ ರಾಜಸರಿಗೆ, **ಸಂಶಯಾರ್ಥಂ** ಸಂಶಯಕ್ಕೋಸ್ಕರ, **ಪಾಶುಪತಾತ್** ಪಾಶುಪತಮತಾನುಸಾರಿಯಾದ ದರ್ಶನ ಭಾಷೆಯಿಂದ, **ಶೈವಾನ್ ಪುರಾಣಗ್ರಂಥ ಸಂಗ್ರಹಾನ್** ಶೈವ ಪುರಾಣಗಳನ್ನು, **ಚಕ್ರೇ** ಮಾಡಿದರು, **ಪಂಚರಾತ್ರಾತ್** ಪಂಚರಾತ್ರ ವನ್ನನುಸರಿಸಿ, **ವೈಷ್ಣವಾನ್** ವೈಷ್ಣವ ಪುರಾಣಗಳನ್ನು **ಯಥಾರ್ಥ ಜ್ಞಾನಸಿದ್ಧಯೇ** ಸರಿಯಾದ ಜ್ಞಾನಸಿದ್ಧಿಗಾಗಿ, **ಚ** ಮತ್ತು, **ವೇದತಃ** ವೇದದ ಮೇಲ್ನೋಟಕ್ಕೆ ಅನುಗುಣ ವಾಗಿ, **ಬ್ರಹ್ಮಾನ್** ಬ್ರಾಹ್ಮ ಪುರಾಣಗಳನ್ನು (ಸಂಶಯ ಮತ್ತು ಯಥಾರ್ಥಜ್ಞಾನ ಸಿದ್ಧಿ ಎರಡೂ ಪ್ರಯೋಜನಕ್ಕಾಗಿ) **ಚಕ್ರೇ** ಮಾಡಿದರು.

**ತಾತ್ಪರ್ಯ** :- ಪುರಾಣಗಳು ವೈಷ್ಣವ, ಶೈವ ಮತ್ತು ಬ್ರಾಹ್ಮ ಎಂದು ಮೂರು ವಿಧ. ಶೈವ ಪುರಾಣಗಳು ತಾಮಸರಿಗೆ ಭ್ರಮೆಯನ್ನು ಮತ್ತು ರಾಜಸರಿಗೆ ಸಂಶಯವನ್ನು ಉಂಟು ಮಾಡುತ್ತವೆ. ಅದಕ್ಕಾಗಿ ಪಾಶುಪತ ಮತವನ್ನು ಅನುಸರಿಸಿ ದರ್ಶನ ಭಾಷೆಯಿಂದ ಇವುಗಳನ್ನು ರಚಿಸಿದರು. ವೈಷ್ಣವ ಪುರಾಣಗಳು ಯಥಾರ್ಥಜ್ಞಾನಕ್ಕೆ ಕಾರಣ. ಇವುಗಳನ್ನು ಪಂಚರಾತ್ರಕ್ಕೆ ಅನುಗುಣವಾಗಿ ರಚಿಸಿದರು. ಬ್ರಾಹ್ಮಪುರಾಣಗಳು ಮೇಲ್ನೋಟಕ್ಕೆ ತೋರುವ ಅರ್ಥವನ್ನು ಅನುಸರಿಸಿ ಆಯಾಯ ದೇವತೆಗಳಿಗೆ ಬ್ರಹ್ಮತ್ವವನ್ನು ಹೇಳುತ್ತಿವೆ. ಇವುಗಳನ್ನು ವೇದಗಳ ಮೇಲ್ನೋಟದ ಅರ್ಥಕ್ಕೆ ಅನುಗುಣವಾಗಿ ರಚಿಸಿದರು.

ದೇವತೆಗಳ ತೃಪ್ತಿ

ಏವಂ ಜ್ಞಾನಂ ಪುನಃ ಪ್ರಾಪುರ್ದೇವಾಶ್ಚ ಋಷಯಸ್ತಥಾ ।
ಸನತ್ಕುಮಾರಪ್ರಮುಖಾ ಯೋಗಿನೋ ಮಾನುಷಾಸ್ತಥಾ ।
ಕೃಷ್ಣದ್ವೈಪಾಯನಾದ್ ಪ್ರಾಪ್ಯ ಜ್ಞಾನಂ ತೇ ಮುಮುದುಃ ಸುರಾಃ ॥ ೮೧ ॥

ಪದಚ್ಛೇದ :ಏವಮ್, ಜ್ಞಾನಮ್, ಪುನಃ, ಪ್ರಾಪುಃ, ದೇವಾಃ, ಚ, ಋಷಯಃ, ತಥಾ, ಸನತ್ಕುಮಾರ ಪ್ರಮುಖಾಃ, ಯೋಗಿನಃ, ಮಾನುಷಾಃ, ತಥಾ, ಕೃಷ್ಣದ್ವೈಪಾಯನಾತ್, ಪ್ರಾಪ್ಯ, ಜ್ಞಾನಮ್, ತೇ, ಮುಮುದುಃ, ಸುರಾಃ ॥

**ಅರ್ಥ** :- **ಏವಂ** ಈ ರೀತಿಯಾಗಿ, **ದೇವಾಃ** ದೇವತೆಗಳು, **ಪುನಃ** ಮತ್ತೊಮ್ಮೆ, **ಜ್ಞಾನಂ** ಜ್ಞಾನವನ್ನು, **ಪ್ರಾಪುಃ** ಪಡೆದರು, **ತಥಾ** ಹಾಗೆಯೇ, **ಸನತ್ಕುಮಾರ ಪ್ರಮುಖಾಃ** ಸನತ್ಕುಮಾರರೇ ಮೊದಲಾದ **ಋಷಯಃ** ಜ್ಞಾನಯೋಗಿಗಳು, **ತಥಾ** ಹಾಗೆಯೇ, **ಯೋಗಿನಃ** ಕರ್ಮಯೋಗಿಗಳಾದ, **ಮಾನುಷಾಃ** ಮನುಷ್ಯರು, **ಜ್ಞಾನಂ** ಜ್ಞಾನವನ್ನು, **ಪ್ರಾಪುಃ** ಪಡೆದರು, **ಕೃಷ್ಣದ್ವೈಪಾಯನಾತ್** ವೇದವ್ಯಾಸರಿಂದ, **ಜ್ಞಾನಂ** ಜ್ಞಾನವನ್ನು, **ಪ್ರಾಪ್ಯ** ಪಡೆದು, **ತೇ** ಆ, **ಸುರಾಃ** ದೇವತೆಗಳು, **ಮುಮುದುಃ** ಸಂತೋಷಪಟ್ಟರು.

**ತಾತ್ಪರ್ಯ** :- ವೇದವ್ಯಾಸರ ಉಪದೇಶದಿಂದ ದೇವತೆಗಳ ಜ್ಞಾನ ಮತ್ತಷ್ಟು ಹೆಚ್ಚಾಯಿತು. ಜ್ಞಾನಯೋಗಿಗಳಾದ ಸನತ್ಕುಮಾರನೇ ಮೊದಲಾದ ಋಷಿಗಳು ಕರ್ಮಯೋಗಿ ಮನುಷ್ಯೋತ್ತಮರು, ಜ್ಞಾನವನ್ನು ಪಡೆದರು. ಹೀಗೆ ಕಲಿ ನಿಗ್ರಹದಿಂದ ಎಲ್ಲೆಡೆ ಜ್ಞಾನ ಹರಡುವಿಕೆಯಿಂದ ದೇವತೆಗಳಿಗೆ ಸಂತೋಷವಾಯಿತು.

ವ್ಯಾಸರ ಮಹಿಮೆ

ಸಮಸ್ತವಿಜ್ಞಾನಗಭಸ್ತಿಚಕ್ರಂ ವಿತಾಯ
ವಿಜ್ಞಾನಮಹಾದಿವಾಕರಃ ।
ನಿಪೀಯ ಚಾಜ್ಞಾನ ತಮೋ ಜಗತ್ತತಂ
ಪ್ರಭಾಸತೇ ಭಾನುರಿವಾವಭಾಸಯನ್ ॥ ೮೨ ॥

ಪದಚ್ಛೇದ :ಸಮಸ್ತವಿಜ್ಞಾನಗಭಸ್ತಿಚಕ್ರಂ, ವಿತಾಯ, ವಿಜ್ಞಾನಮಹಾದಿವಾಕರಃ, ನಿಪೀಯ, ಚ, ಅಜ್ಞಾನತಮಃ, ಜಗತ್ತತಮ್, ಪ್ರಭಾಸತೇ, ಭಾನುಃ, ಇವ, ಅವಭಾಸಯನ್ ॥

**ಅರ್ಥ :- ವಿಜ್ಞಾನಮಹಾದಿವಾಕರಃ** ಜ್ಞಾನಸೂರ್ಯರಾದ ವೇದವ್ಯಾಸರು, **ಸಮಸ್ತವಿಜ್ಞಾನಗಭಸ್ತಿಚಕ್ರಂ** ಎಲ್ಲ ವಿಧದ ಜ್ಞಾನವೆಂಬ ಕಿರಣಗಳ ಸಮೂಹವನ್ನು, **ವಿತಾಯ** ಎಲ್ಲೆಡೆ ಹರಡಿ, **ಜಗತ್ತತಂ** ಜಗತ್ತಿನಲ್ಲಿ ವ್ಯಾಪಿಸಿದ, **ಅಜ್ಞಾನತಮಃ** ಅಜ್ಞಾನವೆಂಬ ತಮಸ್ಸನ್ನು **ನಿಪೀಯ** ಕುಡಿದು (ನಾಶ ಮಾಡಿ), **ಭಾನುಃ ಇವ** ಸೂರ್ಯನಂತೆ, **ಅವಭಾಸಯನ್** ಜಗತ್ತನ್ನು ಪ್ರಕಾಶಿಸುತ್ತಾ, **ಪ್ರಭಾಸತೇ** ಪ್ರಕಾಶಿಸುತ್ತಿದ್ದಾರೆ.

**ತಾತ್ಪರ್ಯ :-** ವೇದವ್ಯಾಸರು ಒಂದು ಸೂರ್ಯ. ಸೂರ್ಯನು ತನ್ನ ಕಿರಣಗಳನ್ನು ಎಲ್ಲೆಡೆ ಹರಡಿ, ಎಲ್ಲೆಡೆ ವ್ಯಾಪಿಸಿದ ಕತ್ತಲೆಯನ್ನು ನಾಶ ಮಾಡುತ್ತಾನೆ. ಅದರಂತೆ ಜ್ಞಾನ ರಶ್ಮಿಯನ್ನು ಎಲ್ಲ ಕಡೆ ಹರಡಿಸಿ ಅಜ್ಞಾನವನ್ನು ವ್ಯಾಸರು ನಾಶಮಾಡುತ್ತಾ, ಜಗತ್ತನ್ನು ಬೆಳಗಿ ತಾವೂ ವಿರಾಜಿಸುತ್ತಾರೆ.

**ಚತುರ್ಮುಖೇಶಾನಸುರೇಂದ್ರ ಪೂರ್ವಕೈಃ**
**ಸದಾ ಸುರೈಃ ಸೇವಿತಪಾದಪಲ್ಲವಃ ।**
**ಪ್ರಕಾಶಯಂಸ್ತೇಷು ಸದಾತ್ಮಗುಹ್ಯಂ ಮುಮೋದ**
**ಮೇರೌ ಚ ತಥಾ ಬದರ್ಯಾಮ್ ॥ ೮೩ ॥**

ಪದಚ್ಛೇದ :ಚತುರ್ಮುಖೇಶಾನಸುರೇಂದ್ರಪೂರ್ವಕೈಃ, ಸದಾ, ಸುರೈಃ, ಸೇವಿತಪಾದಪಲ್ಲವಃ, ಪ್ರಕಾಶಯನ್, ತೇಷು, ಸದಾತ್ಮಗುಹ್ಯಮ್, ಮುಮೋದ, ಮೇರೌ, ಚ, ತಥಾ, ಬದರ್ಯಾಮ್ ॥

**ಅರ್ಥ :- ಚತುರ್ಮುಖೇಶಾನಸುರೇಂದ್ರಪೂರ್ವಕೈಃ** ಬ್ರಹ್ಮರುದ್ರ ಇಂದ್ರನೇ ಮೊದಲಾದ, **ಸುರೈಃ** ದೇವತೆಗಳಿಂದ, **ಸದಾ** ಯಾವಾಗಲೂ, **ಸೇವಿತಪಾದಪಲ್ಲವಃ** ಆರಾಧಿಸಲ್ಪಟ್ಟ ಪಾದಗಳುಳ್ಳ ವೇದವ್ಯಾಸರು, **ತೇಷು** ಆ ಬ್ರಹ್ಮಾದಿದೇವತೆಗಳಲ್ಲಿ **ಸದಾತ್ಮಗುಹ್ಯಂ** ನಿರ್ದುಷ್ಟವಾದ ಆತ್ಮತತ್ವವನ್ನು, **ಪ್ರಕಾಶಯನ್** ಪ್ರಕಾಶಪಡಿಸುತ್ತಾ, **ಮೇರೌ** ಮೇರುಪರ್ವತದಲ್ಲಿ, **ಚ** ಮತ್ತು, **ತಥಾ** ಹಾಗೆ, **ಬದರ್ಯಾಂ** ಬದರಿ ಕ್ಷೇತ್ರದಲ್ಲಿ, **ಮುಮೋದ** ಸಂತೋಷಗೊಂಡರು.

**ತಾತ್ಪರ್ಯ** :- ವೇದವ್ಯಾಸರನ್ನು ಬ್ರಹ್ಮಾದಿ ದೇವತೆಗಳು ಸದಾಕಾಲ ಉಪಾಸನೆ ಮಾಡುತ್ತಾರೆ. ಅವರು ಬ್ರಹ್ಮಾದಿಗಳಲ್ಲಿ ತನ್ನ ಸ್ವರೂಪವನ್ನು ಯಾವಾಗಲೂ ಪ್ರಕಾಶಿಸುವಂತೆ ಮಾಡುತ್ತಾರೆ. ಇಂತಹ ವ್ಯಾಸರು ಬದರೀ ಕ್ಷೇತ್ರದಲ್ಲಿ ಮತ್ತು ಮೇರು ಪರ್ವತದಲ್ಲಿ ಸಂತೋಷಪಡುತ್ತಾ ಇದ್ದಾರೆ.

**ಇಲ್ಲಿಗೆ ಮಹಾಭಾರತ ತಾತ್ಪರ್ಯ ನಿರ್ಣಯದ**
**'ವ್ಯಾಸಾವತಾರ ವರ್ಣನೆ' ಎಂಬ ಹತ್ತನೆ**
**ಅಧ್ಯಾಯವ ಕನ್ನಡ ಅರ್ಥ ಮತ್ತು**
**ವಿವರಣೆ ಮುಗಿಯಿತು.**

# ಅಧ್ಯಾಯ - 11

## ಭಗವದವತಾರಪ್ರತಿಜ್ಞಾವರ್ಣನಮ್

(ಪ್ರತಿಪದಾರ್ಥ-ಭಾವಾರ್ಥ ಸಹಿತ)

**ಶಶಾಂಕಪುತ್ರಾದಭವತ್ ಪುರೂರವಾ-**
**ಸ್ತಸ್ಯಾಽಯುರಾಯೋರ್ನಹುಷೋ ಯಯಾತಿಃ ।**
**ತಸ್ಯಾಽಸ ಪತ್ನೀಯುಗಲಂ ಸುತಾಶ್ಚ**
**ಪಂಚಾಽಭವನ್ ವಿಷ್ಣುಪದೈಕಭಕ್ತಾಃ ॥ ೧ ॥**

**ಪದಚ್ಛೇದ:- ಶಶಾಂಕಪುತ್ರಾತ್, ಅಭವತ್, ಪುರೂರವಾಃ, ತಸ್ಯ, ಆಯುಃ, ಆಯೋಃ, ನಹುಷಃ, ಯಯಾತಿಃ, ತಸ್ಯ, ಆಸ, ಪತ್ನೀಯುಗಲಂ, ಸುತಾಃ, ಚ, ಪಂಚ, ಅಭವನ್, ವಿಷ್ಣುಪದೈಕಭಕ್ತಾಃ**

**ಅರ್ಥ** :- **ಶಶಾಂಕಪುತ್ರಾತ್** ಚಂದ್ರನಮಗನಾದ ಬುಧನಿಂದ **ಪುರೂರವಾಃ** ಪುರೂರವಸ್ ಎಂಬುವವನು **ಅಭವತ್** ಹುಟ್ಟಿದನು. **ತಸ್ಯ** ಅವನಿಗೆ **ಆಯುಃ** ಆಯು ಎಂಬ ಮಗನು **ಅಭವತ್** ಹುಟ್ಟಿದನು **ಆಯೋಃ** ಆ ಅಯುವಿಗೆ **ನಹುಷಃ** ನಹುಷನೆಂಬ ಮಗನು **ಅಭವತ್** ಹುಟ್ಟಿದನು **ತಸ್ಯ** ಆ ನಹುಷನಿಗೆ **ಯಯಾತಿಃ** ಯಯಾತಿಯೆಂಬ ಪುತ್ರನು **ಅಭವತ್** ಹುಟ್ಟಿದನು **ತಸ್ಯ** ಆ ಯಯಾತಿಗೆ **ಪತ್ನೀಯುಗಲಂ** ಇಬ್ಬರು ಪತ್ನಿಯರು **ಆಸ** ಇದ್ದರು. **ತಸ್ಯ** ಆ ಯಯಾತಿಗೆ **ವಿಷ್ಣುಪದೈಕಭಕ್ತಾಃ** ವಿಷ್ಣುವಿನ ಪಾದದಲ್ಲಿ ಮುಖ್ಯವಾದ ಭಕ್ತಿಯುಳ್ಳ **ಪಂಚ** ಐದು ಮಂದಿ ಮಕ್ಕಳು **ಅಭವನ್** ಹುಟ್ಟಿದರು.

**ತಾತ್ಪರ್ಯ** :- ಚಂದ್ರನ ಮಗನಾದ ಬುಧನಿಂದ ಪುರೂರವಸ್ ಜನಿಸಿದನು. ಅವನಿಗೆ ಆಯು, ಆಯುಗೆ ನಹುಷನು, ನಹುಷನಿಗೆ ಯಯಾತಿಯು ಮಕ್ಕಳಾಗಿ ಹುಟ್ಟಿದರು. ಯಯಾತಿಗೆ ಇಬ್ಬರು ಹೆಂಡತಿಯರು. ಆ ಪತ್ನಿಯರಲ್ಲಿ ವಿಷ್ಣುವಿನಲ್ಲಿ ವಿಶೇಷ ಭಕ್ತಿಯುಳ್ಳ ಐದು ಮಕ್ಕಳು ಹುಟ್ಟಿದರು.

**ಯದುಂ ಚ ತುರ್ವಸುಂ ಚೈವ ದೇವಯಾನೀ ವ್ಯಜಾಯತ ।**
**ದ್ರುಹ್ಯುಂ ಚಾನುಂ ಚ ಪೂರುಂ ಚ ಶರ್ಮಿಷ್ಠಾ ವಾರ್ಷಪರ್ವಣೀ ॥ ೨ ॥**

ಪದಚ್ಛೇದ :- ಯದುಂ, ಚ, ತುರ್ವಸುಂ, ಚ, ಏವ, ದೇವಯಾನೀ, ವ್ಯಜಾಯತ. ದ್ರುಹ್ಯುಂ, ಚ, ಅನುಂ, ಚ, ಪೂರುಂ, ಚ, ಶರ್ಮಿಷ್ಠಾ, ವಾರ್ಷಪರ್ವಣೀ.

**ಅರ್ಥ :- ಯದುಂ** ಯದುವನ್ನು **ತುರ್ವಸುಂ ಚ** ತುರ್ವಸುವನ್ನೂ **ದೇವಯಾನೀ** ದೇವಯಾನಿಯು **ವ್ಯಜಾಯತ** ಹಡೆದಳು. **ದ್ರುಹ್ಯುಂ** ದ್ರುಹ್ಯುನನ್ನು **ಚ** ಮತ್ತು **ಅನುಂ** ಅನುವನ್ನು **ಪೂರುಂ** ಪೂರುವನ್ನು **ವಾರ್ಷಪರ್ವಣೀ** ವೃಷಪರ್ವರಾಜನ ಮಗಳಾದ **ಶರ್ಮಿಷ್ಠೆಯು ವ್ಯಜಾಯತ** ಹಡೆದಳು.

**ತಾತ್ಪರ್ಯ :-** ಯದುವನ್ನು ತುರ್ವಸುವನ್ನು ದೇವಯಾನಿ ಹಡೆದಳು. ದ್ರುಹ್ಯು, ಅನು, ಪೂರು ಈ ಮೂವರನ್ನು ವೃಷಪರ್ವರಾಜನ ಮಗಳಾದ ಶರ್ಮಿಷ್ಠೆಯು ಹಡೆದಳು.

**ಯದೋರ್ವಂಶೇ ಚಕ್ರವರ್ತೀ ಕಾರ್ತವೀರ್ಯಾರ್ಜುನೋಽಭವತ್ ।**
**ವಿಷ್ಣೋರ್ದತ್ತಾತ್ರೇಯನಾಮ್ನಃ ಪ್ರಸಾದಾದ್ಯೋಗವೀರ್ಯವಾನ್ ॥ ೩॥**

ಪದಚ್ಛೇದ :- ಯದೋಃ, ವಂಶೇ, ಚಕ್ರವರ್ತೀ, ಕಾರ್ತವೀರ್ಯಾರ್ಜುನಃ, ಅಭವತ್. ವಿಷ್ಣೋಃ, ದತ್ತಾತ್ರೇಯನಾಮ್ನಃ, ಪ್ರಸಾದಾತ್, ಯೋಗವೀರ್ಯವಾನ್.

**ಅರ್ಥ :- ಯದೋಃ** ಯದುವಿನ **ವಂಶೇ** ವಂಶದಲ್ಲಿ **ಕಾರ್ತವೀರ್ಯಾರ್ಜುನಃ** ಕಾರ್ತವೀರ್ಯಾರ್ಜುನನೆಂಬ **ಚಕ್ರವರ್ತೀ** ಚಕ್ರವರ್ತಿಯು **ಅಭವತ್** ಹುಟ್ಟಿದನು. **ದತ್ತಾತ್ರೇಯನಾಮ್ನಃ** ದತ್ತಾತ್ರೇಯನಾಮಕನಾದ **ವಿಷ್ಣೋಃ** ವಿಷ್ಣುವಿನ **ಪ್ರಸಾದಾತ್** ಅನುಗ್ರಹದಿಂದ **ಯೋಗವೀರ್ಯವಾನ್** ಅಣಿಮಾದಿ ಅಷ್ಟಯೋಗಬಲವುಳ್ಳವನು **ಅಭವತ್** ಆಗಿದ್ದನು.

**ತಾತ್ಪರ್ಯ :-** ಯದುವಿನ ವಂಶದಲ್ಲಿ ಚಕ್ರವರ್ತಿಯಾದ ಕಾರ್ತವೀರ್ಯಾರ್ಜುನನು ಜನಿಸಿದನು. ಅವನು ದತ್ತಾತ್ರೇಯನಾಮಕನಾದ ವಿಷ್ಣುವಿನ ಅನುಗ್ರಹದಿಂದ ಅಣಿಮಾದಿ ಅಷ್ಟಯೋಗದ ಬಲವುಳ್ಳವನಾಗಿದ್ದನು.

ತಸ್ಯಾನ್ವವಾಯೇ ಯದವೋ ಬಭೂವುರ್ವಿಷ್ಣುಸಂಶ್ರಯಾಃ ।
ಪೂರೋರ್ವಂಶೇ ತು ಭರತಶ್ಚಕ್ರವರ್ತೀ ಹರಿಪ್ರಿಯಃ ॥ ೪ ॥

ಪದಚ್ಛೇದ :- ತಸ್ಯ, ಅನ್ವವಾಯೇ, ಯದವಃ, ಬಭೂವುಃ, ವಿಷ್ಣುಸಂಶ್ರಯಾಃ. ಪೂರೋಃ, ವಂಶೇ, ತು, ಭರತಃ, ಚಕ್ರವರ್ತೀ, ಹರಿಪ್ರಿಯಃ.

**ಅರ್ಥ** :- **ತಸ್ಯ** ಆ ಕಾರ್ತವೀರ್ಯಾರ್ಜುನನ **ಅನ್ವವಾಯೇ** ವಂಶದಲ್ಲಿ **ವಿಷ್ಣುಸಂಶ್ರಯಾಃ** ವಿಷ್ಣುವನ್ನು ಆಶ್ರಯಿಸಿದ **ಯದವಃ** ಯಾದವರು **ಬಭೂವುಃ** ಹುಟ್ಟಿದರು. **ಪೂರೋಃ** ಪೂರುವಿನ **ವಂಶೇ ತು** ವಂಶದಲ್ಲಿ ಯಾದರೂ **ಹರಿಪ್ರಿಯಃ** ಪರಮಾತ್ಮನಿಗೆ ಪ್ರಿಯನಾದ **ಚಕ್ರವರ್ತೀ** ಚಕ್ರವರ್ತಿ ಯಾದ **ಭರತಃ** ಭರತನು (**ಬಭೂವ**) ಹುಟ್ಟಿದನು.

**ತಾತ್ಪರ್ಯ** :- ಕಾರ್ತವೀರ್ಯಾರ್ಜುನನ ವಂಶದಲ್ಲಿ ವಿಷ್ಣುಭಕ್ತರಾದ ಯಾದವರು ಜನಿಸಿದರು. ಪೂರುವಿನ ವಂಶದಲ್ಲಿ ಹರಿಪ್ರಿಯನಾದ ಭರತ ಚಕ್ರವರ್ತಿಯು ಜನಿಸಿದನು.

ತದ್ವಂಶಜಃ ಕುರುರ್ನಾಮ ಪ್ರತೀಪೋಽಭೂತ್ ತದನ್ವಯೇ ।
ಪ್ರತೀಪಸ್ಯಾಭವನ್ ಪುತ್ರಾಸ್ತ್ರಯಸ್ತ್ರೇತಾಗ್ನಿವರ್ಚಸಃ ॥ ೫ ॥

ಪದಚ್ಛೇದ :- ತದ್ವಂಶಜಃ, ಕುರುಃ, ನಾಮ, ಪ್ರತೀಪಃ, ಅಭೂತ್, ತದನ್ವಯೇ, ಪ್ರತೀಪಸ್ಯ, ಅಭವನ್, ಪುತ್ರಾಃ, ತ್ರಯಃ, ತ್ರೇತಾಗ್ನಿವರ್ಚಸಃ.

**ಅರ್ಥ** :- **ಕುರುಃ ನಾಮ** ಕುರು ಎಂದು ಪ್ರಸಿದ್ಧನಾದವನು **ತದ್ವಂಶಜಃ** ಆ ಭರತನ ವಂಶದಲ್ಲಿ **ತದನ್ವಯೇ** ಅವನ ವಂಶದಲ್ಲಿ **ಪ್ರತೀಪಃ** ಪ್ರತೀಪನೆಂಬುವನು **ಅಭೂತ್** ಹುಟ್ಟಿದನು. **ಪ್ರತೀಪಸ್ಯ** ಪ್ರತೀಪನಿಗೆ **ತ್ರೇತಾಗ್ನಿ ವರ್ಚಸಃ** ಮೂರು ಅಗ್ನಿಗಳಂತೆ ವರ್ಚಸ್ಸುಳ್ಳ **ತ್ರಯಃ** ಮೂರು ಮಂದಿ **ಪುತ್ರಾಃ** ಮಕ್ಕಳು **ಅಭವನ್** ಹುಟ್ಟಿದರು.

**ತಾತ್ಪರ್ಯ** :- ಭರತನ ವಂಶದಲ್ಲಿ ಕುರು ಹುಟ್ಟಿದನು. ಅವನ ವಂಶದಲ್ಲಿ ಪ್ರತೀಪನು ಜನಿಸಿದನು. ಅವನಿಗೆ ಮೂರು ಅಗ್ನಿಗಳಂತೆ ವರ್ಚಸ್ಸುಳ್ಳ ಮೂರು ಮಕ್ಕಳು ಹುಟ್ಟಿದರು.

**ದೇವಾಪಿರಥ ಬಾಹ್ಲೀಕೋ ಗುಣಜ್ಯೇಷ್ಠಶ್ಚ ಶಂತನುಃ ।**
**ತ್ವಗ್ದೋಷಯುಕ್ತೋ ದೇವಾಪಿರ್ಜಗಾಮ ತಪಸೇ ವನಮ್ ॥ ೬ ॥**

ಪದಚ್ಛೇದ :- ದೇವಾಪಿಃ, ಅಥ, ಬಾಹ್ಲೀಕಃ, ಗುಣಜ್ಯೇಷ್ಠಃ, ಚ, ಶಂತನುಃ, ತ್ವಗ್ದೋಷಯುಕ್ತಃ, ದೇವಾಪಿಃ, ಜಗಾಮ, ತಪಸೇ, ವನಮ್.

**ಅರ್ಥ :- ದೇವಾಪಿಃ** ದೇವಾಪಿಯು **ಬಾಹ್ಲೀಕಃ** ಬಾಹ್ಲೀಕನು **ಚ** ಮತ್ತು **ಗುಣಜ್ಯೇಷ್ಠಃ** ಗುಣದಲ್ಲಿ ಜ್ಯೇಷ್ಠನಾದ **ಶಂತನುಃ** ಶಂತನುವು ಇವರೇ **(ತ್ರಯಃ ಪುತ್ರಾಃ)** ಆ ಮೂರು ಮಕ್ಕಳು, **ಅಭವನ್** ಆಗಿದ್ದರು. **ಅಥ** ಅನಂತರ **ತ್ವಗ್ದೋಷಯುಕ್ತಃ** ಚರ್ಮರೋಗಯುಕ್ತನಾದ **ದೇವಾಪಿಃ** ದೇವಾಪಿಯು **ತಪಸೇ** ತಪಸ್ಸಿಗಾಗಿ **ವನಂ** ಕಾಡನ್ನು ಕುರಿತು **ಜಗಾಮ** ಹೋದನು.

**ತಾತ್ಪರ್ಯ :-** ಪ್ರತೀಪನ ಮೂರು ಮಕ್ಕಳಲ್ಲಿ ದೇವಾಪಿಯು ಹಿರಿಯನು. ಬಾಹ್ಲೀಕ, ಶಂತನು ಅನಂತರದವರು. ಆದರೆ ಗುಣಗಳಲ್ಲಿ ಮಾತ್ರ ವರುಣನ ಅವತಾರನಾಗಿದ್ದ ಶಂತನುವೇ ಮಿಗಿಲೆನ್ನಿಸಿದ್ದನು. ದೇವಾಪಿಯು ಚರ್ಮರೋಗದಿಂದ ಪೀಡಿತನಾದ್ದರಿಂದ ರಾಜನಾಗಲು ಅನರ್ಹನಾಗಿದ್ದನು. ಆದ್ದರಿಂದ ಆ ರೋಗದ ನಿವೃತ್ತಿಗಾಗಿ ತಪಸ್ಸನ್ನಾಚರಿಸಲು ಕಾಡಿಗೆ ಹೋದನು.

**ವಿಷ್ಣೋಃ ಪ್ರಸಾದಾತ್ ಸ ಕೃತೇ ಯುಗೇ ರಾಜಾ ಭವಿಷ್ಯತಿ ।**
**ಪುತ್ರಿಕಾಪುತ್ರತಾಂ ಯಾತೋ ಬಾಹ್ಲೀಕೋ ರಾಜಸತ್ತಮಃ ॥ ೭ ॥**

ಪದಚ್ಛೇದ :- ವಿಷ್ಣೋಃ, ಪ್ರಸಾದಾತ್, ಸಃ, ಕೃತೇ, ಯುಗೇ, ರಾಜಾ, ಭವಿಷ್ಯತಿ. ಪುತ್ರಿಕಾಪುತ್ರತಾಂ, ಯಾತಃ, ಬಾಹ್ಲೀಕಃ, ರಾಜಸತ್ತಮಃ.

**ಅರ್ಥ :- ಸಃ** ಆ ದೇವಾಪಿಯು **ವಿಷ್ಣೋಃ** ವಿಷ್ಣುವಿನ **ಪ್ರಸಾದಾತ್** ಅನುಗ್ರಹದಿಂದ **ಕೃತೇ ಯುಗೇ** ಮುಂದೆ ಕೃತಯುಗದಲ್ಲಿ **ರಾಜಾ** ರಾಜನು **ಭವಿಷ್ಯತಿ** ಆಗಲಿದ್ದಾನೆ. **ರಾಜಸತ್ತಮಃ** ರಾಜರಲ್ಲಿ ಶ್ರೇಷ್ಠನೆನಿಸಿದ **ಬಾಹ್ಲೀಕಃ** ಬಾಹ್ಲೀಕನು **ಪುತ್ರಿಕಾಪುತ್ರತಾಂ** ತನ್ನ ಮಗಳ ಪುತ್ರತ್ವವನ್ನು **ಯಾತಃ** ಹೊಂದಿದನು.

**ತಾತ್ಪರ್ಯ :-** ತಪಸ್ಸಿಗೆ ತೆರಳಿದ ದೇವಾಪಿಯು ವಿಷ್ಣುವಿನ ಅನುಗ್ರಹ ದಿಂದ ತನ್ನ ಚರ್ಮರೋಗವನ್ನು ಪರಿಹರಿಸಿಕೊಂಡು ಮುಂದೆ ಕೃತಯುಗದಲ್ಲಿ

ರಾಜನೆನಿಸಿ ಚಂದ್ರವಂಶವನ್ನು ಮುಂದುವರೆಸುವನು. ರಾಜಶ್ರೇಷ್ಠನಾದ ಬಾಹ್ಲೀಕನೂ ಕೂಡ ಕುರುವಂಶದ ರಾಜನಾಗಲಿಲ್ಲ. ಅದಕ್ಕೆ ಅವನು ಪುತ್ರಿಕಾ ಪುತ್ರಧರ್ಮದಿಂದ ಜನಿಸಿದ್ದು ಕಾರಣವಾಯಿತು. ಅಂದರೆ ಅವನ ತಾಯಿಯು ಬಾಹ್ಲೀಕ ದೇಶದವಳಾದ್ದರಿಂದ ಅವನು ಬಾಹ್ಲೀಕ ದೇಶಕ್ಕೇ ಸೇರಿದ. ಅಲ್ಲಿಯೇ ರಾಜನೆನಿಸಿದ.

**ಹಿರಣ್ಯಕಶಿಪೋಃ ಪುತ್ರಃ ಪ್ರಹ್ಲಾದೋ ಭಗವತ್ಪ್ರಿಯಃ ।**
**ವಾಯುನಾ ಚ ಸಮಾವಿಷ್ಟೋ ಮಹಾಬಲಸಮನ್ವಿತಃ ॥ ೮ ॥**

ಪದಚ್ಛೇದ :- ಹಿರಣ್ಯಕಶಿಪೋಃ, ಪುತ್ರಃ, ಪ್ರಹ್ಲಾದಃ, ಭಗವತ್ಪ್ರಿಯಃ, ವಾಯುನಾ, ಚ, ಸಮಾವಿಷ್ಟಃ, ಮಹಾಬಲಸಮನ್ವಿತಃ.

**ಅರ್ಥ** :- ಸಃ ಚ ಆ ಬಾಹ್ಲೀಕನಾದರೂ **ಹಿರಣ್ಯಕಶಿಪೋಃ** ಹಿರಣ್ಯ ಕಶಿಪುವಿನ **ಪುತ್ರಃ** ಮಗನಾದ **ಪ್ರಹ್ಲಾದಃ** ಪ್ರಹ್ಲಾದನು **ಅಭೂತ್** ಆಗಿದ್ದನು. **ಚ** ಮತ್ತು **ಭಗವತ್ಪ್ರಿಯಃ** ಭಗವಂತನಿಗೆ ಪ್ರಿಯನೂ **ವಾಯುನಾ** ಪ್ರಾಣದೇವರಿಂದ **ಸಮಾವಿಷ್ಟಃ** ಆವೇಶದಿಂದ ಕೂಡಿದವನೂ **ಮಹಾಬಲಸಮನ್ವಿತಃ** ಮಹಾಬಲ ದಿಂದ ಕೂಡಿದವನೂ **ಅಭೂತ್** ಆಗಿದ್ದನು.

**ತಾತ್ಪರ್ಯ** :- ಹಿರಣ್ಯಕಶಿಪುವಿನ ಪುತ್ರನಾಗಿ ಜನಿಸಿದ್ದ ಪ್ರಹ್ಲಾದನೇ ಈಗ ಬಾಹ್ಲೀಕನಾಗಿ ಜನಿಸಿದ್ದನು. ಪ್ರಹ್ಲಾದನಲ್ಲಿ ವಿಶೇಷವಾಗಿ ವಾಯುದೇವರ ಆವೇಶವಿತ್ತು. ಮತ್ತು ಮಹಾ ಬಲಶಾಲಿಯಾಗಿದ್ದನು.

**ಯೇನೈವ ಜಾಯಮಾನೇನ ತರಸಾ ಭೂರ್ವಿದಾರಿತಾ ।**
**ಭೂಭಾರಕ್ಷಪಣೇ ವಿಷ್ಣೋರಂಗತಾಮಾಪ್ತುಮೇವ ಸಃ ॥ ೯ ॥**

**ಪ್ರತೀಪಪುತ್ರತಾಮಾಪ್ಯ ಬಾಹ್ಲೀಕೇಷ್ವಭವತ್ ಪತಿಃ ।**
**ರುದ್ರೇಷು ಪತ್ರತಾಪಾಖ್ಯಃ ಸೋಮದತ್ತೋಽಸ್ಯ ಚಾತ್ಮಜಃ ॥ ೧೦ ॥**

ಪದಚ್ಛೇದ :- ಯೇನ, ಏವ, ಜಾಯಮಾನೇನ, ತರಸಾ, ಭೂಃ, ವಿದಾರಿತಾ, ಭೂಭಾರಕ್ಷಪಣೇ, ವಿಷ್ಣೋಃ, ಅಂಗತಾಂ, ಆಪ್ತುಂ, ಏವ, ಸಃ., ಪ್ರತೀಪಪುತ್ರತಾಂ, ಆಪ್ಯ, ಬಾಹ್ಲೀಕೇಷು, ಅಭವತ್, ಪತಿಃ, ರುದ್ರೇಷು, ಪತ್ರತಾಪಾಖ್ಯಃ, ಸೋಮದತ್ತಃ, ಅಸ್ಯ, ಚ, ಆತ್ಮಜಃ.

**ಅರ್ಥ** :- **ಯೇನ** ಯಾವ ಬಾಹ್ಲೀಕನು **ಜಾಯಮಾನೇನ ಏವ** ಹುಟ್ಟುತ್ತಿದ್ದಂತೆಯೇ **ತರಸಾ** ಕೂಡಲೇ **ಭೂಃ** ಭೂಮಿಯು **ವಿದಾರಿತಾ** ಸೀಳಲ್ಪಟ್ಟಿತ್ತೋ **ಸಃ** ಅಂತಹ ಬಾಹ್ಲೀಕನು **ಭೂಭಾರಕ್ಷಪಣೇ** ಭೂಭಾರ ಕಳೆಯುವುದರಲ್ಲಿ **ವಿಷ್ಣೋಃ** ವಿಷ್ಣುವಿಗೆ **ಅಂಗತಾಂ** ಸೇವೆಯನ್ನು **ಆಪ್ತುಂ ಏವ** ಮಾಡಲಿಕ್ಕಾಗಿಯೇ **ಪ್ರತೀಪಪುತ್ರತಾಂ** ಪ್ರತೀಪನ ಪುತ್ರಭಾವವನ್ನು (ಪ್ರತೀಪನ ಮಗನಾಗಿ) **ಆಪ್ಯ** ಹೊಂದಿ **ಬಾಹ್ಲೀಕೇಷು** ಬಾಹ್ಲೀಕ ದೇಶದಲ್ಲಿ **ಪತಿಃ** ರಾಜನು **ಅಭವತ್** ಆದನು. **ರುದ್ರೇಷು** ರುದ್ರರಲ್ಲಿ ಒಬ್ಬನಾದ **ಪತ್ರತಾಪಾಖ್ಯಃ** ಪತ್ರತಾಪನೆಂಬುವನು **ಅಸ್ಯ** ಇವನಿಗೆ **ಸೋಮದತ್ತಃ** ಸೋಮದತ್ತನೆಂಬ **ಆತ್ಮಜಃ** ಮಗನಾಗಿ **ಅಭವತ್** ಹುಟ್ಟಿದನು.

**ತಾತ್ಪರ್ಯ** :- ಬಾಹ್ಲೀಕನು ಹುಟ್ಟುತ್ತಿದ್ದಂತೆಯೇ ಭೂಮಿಯು ಬಲವಾಗಿ ಬಿರಿಯುವಂತೆ ಮಾಡಿದ್ದ. ಅಂತಹ ಇವನು ಭೂಭಾರಹರಣ ಮಾಡುವಲ್ಲಿ ಶ್ರೀಕೃಷ್ಣನ ಸೇವೆಯನ್ನು ಮಾಡಲು ಪ್ರತೀಪನ ಮಗನಾಗಿ ಹುಟ್ಟಿ ಬಾಹ್ಲೀಕದೇಶದ ರಾಜನಾದನು. ಏಕಾದಶ ರುದ್ರರಲ್ಲಿ ಒಬ್ಬನಾದ ಪತ್ರತಾಪ ನೆಂಬುವನು ಸೋಮದತ್ತನೆಂಬ ಹೆಸರಿನಿಂದ ಇವನ ಮಗನಾಗಿ ಜನಿಸಿದನು.

**ಅಜೈಕಪಾದಹಿರ್ಬುಧ್ನಿರ್ವಿರೂಪಾಕ್ಷ ಇತಿ ತ್ರಯಃ ।**
**ರುದ್ರಾಣಾಂ ಸೋಮದತ್ತಸ್ಯ ಬಭೂವುಃ ಪ್ರಥಿತಾಃ ಸುತಾಃ ॥ ೧೧ ॥**

**ವಿಷ್ಣೋರೇವಾಂಗತಾಮಾಪ್ತುಂ ಭೂರಿರ್ಭೂರಿಶ್ರವಾಃ ಶಲಃ ।**
**ಶಿವಾದಿಸರ್ವರುದ್ರಾಣಾಮಾವೇಶಾದ್ ವರತಸ್ತಥಾ ॥ ೧೨ ॥**

**ಭೂರಿಶ್ರವಾ ಅತಿಬಲಸ್ತತ್ರಾಽಸೀತ್ ಪರಮಾಸ್ತ್ರವಿತ್ ।**
**ತದರ್ಥಂ ಹಿ ತಪಶ್ಚೀರ್ಣಂ ಸೋಮದತ್ತೇನ ಶಂಭವೇ ॥ ೧೩ ॥**

ಪದಚ್ಛೇದ :- ಅಜೈಕಪಾತ್, ಅಹಿರ್ಬುಧ್ನಿಃ, ವಿರೂಪಾಕ್ಷಃ, ಇತಿ, ತ್ರಯಃ, ರುದ್ರಾಣಾಂ, ಸೋಮದತ್ತಸ್ಯ, ಬಭೂವುಃ, ಪ್ರಥಿತಾಃ, ಸುತಾಃ.
ವಿಷ್ಣೋಃ, ಏವ, ಅಂಗತಾಂ, ಆಪ್ತುಂ, ಭೂರಿಃ, ಭೂರಿಶ್ರವಾಃ, ಶಲಃ, ಶಿವಾದಿಸರ್ವರುದ್ರಾಣಾಂ, ಆವೇಶಾತ್, ವರತಃ, ತಥಾ,
ಭೂರಿಶ್ರವಾಃ, ಅತಿಬಲಃ, ತತ್ರ, ಆಸೀತ್, ಪರಮಾಸ್ತ್ರವಿತ್, ತದರ್ಥಂ, ಹಿ, ತಪಃ, ಚೀರ್ಣಂ, ಸೋಮದತ್ತೇನ, ಶಂಭವೇ.

**ಅರ್ಥ** :- **ರುದ್ರಾಣಾಂ** ರುದ್ರರಲ್ಲಿ **ಪ್ರಥಿತಾಃ** ಪ್ರಸಿದ್ಧರಾದ **ಅಜೈಕಪಾತ್, ಅಹಿರ್ಬುಧ್ನಿಃ, ವಿರೂಪಕ್ಷಃ** ಅಜೈಕಪಾತ್, ಅಹಿರ್ಬುಧ್ನಿ ವಿರೂಪಾಕ್ಷ **ಇತಿ** ಈ ರೀತಿ **ತ್ರಯಃ** ಮೂವರು **ವಿಷ್ಣೋಃ** ವಿಷ್ಣುವಿಗೆ **ಅಂಗತಾಮೇವ** ಸೇವೆಯನ್ನು ಮಾಡಲೆಂದೇ **ಭೂರಿಃ, ಭೂರಿಶ್ರವಾಃ, ಶಲಃ** ಭೂರಿ, ಭೂರಿಶ್ರವಸ್, ಶಲ ಎಂದು **ಸುತಾಃ** ಮಕ್ಕಳಾಗಿ **ಸೋಮದತ್ತಸ್ಯ** ಸೋಮದತ್ತನಿಗೆ **ಬಭೂವುಃ** ಜನಿಸಿದರು. **ತೇಷು** ಅವರಲ್ಲಿ **ಭೂರಿಶ್ರವಾಃ** ಭೂರಿಶ್ರವಸನು **ಶಿವಾದಿಸರ್ವರುದ್ರಾಣಾಂ** ಶಿವ ಮುಂತಾದ ಎಲ್ಲ ರುದ್ರರ **ಆವೇಶಾತ್** ಆವೇಶದಿಂದಲೂ **ವರತಃ** ವರದಿಂದಲೂ **ಅತಿಬಲಃ** ಅತ್ಯಂತ ಬಲಿಷ್ಠನಾಗಿದ್ದನು **ಚ** ಮತ್ತು **ಪರಮಾಸ್ತ್ರವಿತ್** ಮಹಾನ್ ಅಸ್ತ್ರಜ್ಞಾನಿಯಾಗಿದ್ದನು. **ತದರ್ಥಂ ಹಿ** ಮಗನು ಅತಿಬಲಶಾಲಿಯಾಗಬೇಕೆನ್ನುವುದಕ್ಕಾಗಿ **ಶಂಭವೇ** ರುದ್ರನನ್ನು ಕುರಿತು **ಸೋಮದತ್ತೇನ** ಸೋಮದತ್ತನಿಂದ **ತಪಃ** ತಪಸ್ಸು **ಚೀರ್ಣಮ್** ಮಾಡಲ್ಪಟ್ಟಿತು.

**ತಾತ್ಪರ್ಯ** :- ರುದ್ರರಲ್ಲಿ ಪ್ರಸಿದ್ಧರಾದ ಅಜೈಕಪಾತ್, ಅಹಿರ್ಬುಧ್ನಿ, ವಿರೂಪಕ್ಷ ಎಂಬ ಮೂವರು ಸೋಮದತ್ತನಿಂದ ಪ್ರಾರ್ಥಿಸಲ್ಪಟ್ಟವರಾಗಿ ಭೂರಿ, ಭೂರಿಶ್ರವಸ್ ಮತ್ತು ಶಲ ಎಂದು ಸೋಮದತ್ತನಿಗೆ ಮಕ್ಕಳಾಗಿ ಪರಮಾತ್ಮನ ಸೇವೆಗೆಂದೇ ಜನಿಸಿದರು. ಈ ಮೂವರಲ್ಲಿ ಭೂರಿಶ್ರವಸನು ಶಿವ ಮೊದಲಾದ ಸಕಲರುದ್ರರ ಆವೇಶದಿಂದ ಕೂಡಿದವನಾಗಿದ್ದನು ಮತ್ತು ಶಿವನ ವರವನ್ನು ಪಡೆದಿದ್ದನು. ಆದ್ದರಿಂದಲೇ ಅತ್ಯಂತ ಬಲಿಷ್ಠನೂ, ಮಹಾನ್ ಅಸ್ತ್ರಜ್ಞನೂ ಆಗಿದ್ದನು. ಸೋಮದತ್ತನು ಅದಕ್ಕಾಗಿಯೇ ಶಿವನನ್ನು ಕುರಿತು ತಪಸ್ಸನ್ನು ಮಾಡಿದ್ದನು.

**ದತ್ತೋ ವರಶ್ಚ ತೇನಾಸ್ಯ ತ್ವತ್ತ್ರೀಪಾಭಿಭೂತಿಕೃತ್ ।**
**ಬಲವೀರ್ಯಗುಣೋಪೇತೋ ನಾಮ್ನಾ ಭೂರಿಶ್ರವಾಃ ಸುತಃ ॥೧೪॥**

**ಭವಿಷ್ಯತಿ ಮಯಾಽಽವಿಷ್ಟೋ ಯಜ್ಞಶೀಲ ಇತಿ ಸ್ಮ ಹ ।**
**ತೇನ ಭೂರಿಶ್ರವಾ ಜಾತಃ ಸೋಮದತ್ತಸುತೋ ಬಲೀ ॥ ೧೫ ॥**

ಪದಚ್ಛೇದ :- ದತ್ತಃ, ವರಃ, ಚ, ತೇನ, ಅಸ್ಯ, ತ್ವತ್ತ್ರೀಪಾಭಿಭೂತಿಕೃತ್, ಬಲವೀರ್ಯಗುಣೋಪೇತಃ, ನಾಮ್ನಾ, ಭೂರಿಶ್ರವಾಃ, ಸುತಃ. ಭವಿಷ್ಯತಿ, ಮಯಾ, ಆವಿಷ್ಟಃ, ಯಜ್ಞಶೀಲಃ, ಇತಿ, ಸ್ಮ, ಹ, ತೇನ, ಭೂರಿಶ್ರವಾಃ, ಜಾತಃ, ಸೋಮದತ್ತಸುತಃ, ಬಲೀ.

**ಅರ್ಥ** :- **ತ್ವತ್ಪ್ರತೀಪಾಭಿಭೂತಿಕೃತ್ ತ್ವತ್** ನಿನ್ನ ಪ್ರತೀಪ ಶತ್ರುಗಳನ್ನು **ಅಭಿಭೂತಿಕೃತ್** ಪರಾಭವಗೊಳಿಸುವಂತಹ **ಬಲವೀರ್ಯಗುಣೋಪೇತಃ** ಬಲ ವೀರ್ಯ ಗುಣಗಳಿಂದ ಕೂಡಿದ **ಯಜ್ಞಶೀಲಃ** ಯಜ್ಞವನ್ನು ಮಾಡುವುದೇ ಸ್ವಭಾವವಾಗಿ ಉಳ್ಳ **ಮಯಾವಿಷ್ಟಃ** ನನ್ನ ಆವೇಶವನ್ನು ಹೊಂದಿರುವ **ನಾಮ್ನಾ** ಹೆಸರಿನಿಂದ **ಭೂರಿಶ್ರವಾಃ** ಭೂರಿಶ್ರವಸ್ ಎಂದು ಪ್ರಸಿದ್ಧನಾದ **ಸುತಃ** ಮಗನು **ಭವಿಷ್ಯತಿ** ಹುಟ್ಟುವನು **ಇತಿ** ಎಂದು **ತೇನ** ಆ ಶಿವನಿಂದ **ಅಸ್ಯ** ಈ ಸೋಮದತ್ತನಿಗೆ **ವರಃ** ವರವು **ದತ್ತಃ ಸ್ಮ** ಕೊಡಲ್ಪಟ್ಟಿತ್ತು. **ಹ** ಆಶ್ಚರ್ಯವು. **ತೇನ** ಆದ್ದರಿಂದ **ಸೋಮದತ್ತಸುತಃ** ಸೋಮದತ್ತನ ಮಗನಾಗಿ **ಬಲೀ** ಬಲಿಷ್ಠನಾದ **ಭೂರಿಶ್ರವಾಃ** ಭೂರಿಶ್ರವಸನು **ಜಾತಃ** ಹುಟ್ಟಿದನು.

**ತಾತ್ಪರ್ಯ** :- ನಿನ್ನ ವೈರಿಗಳನ್ನು ಪರಾಭವಗೊಳಿಸುವಂತಹ, ಬಲ ವೀರ್ಯ ಗುಣಗಳಿಂದ ಕೂಡಿದ, ಯಜ್ಞಶೀಲನಾದ, ನನ್ನ ಆವೇಶವನ್ನು ಹೊಂದಿರುವ, ಭೂರಿಶ್ರವಸ್ ಎಂಬ ಮಗನು ನಿನಗೆ ಜನಿಸುವನು ಎಂದು ಶಿವನು ಸೋಮದತ್ತನಿಗೆ ವರವನ್ನು ಕೊಟ್ಟಿದ್ದನು. ಆದರಂತೆಯೇ ಸೋಮ ದತ್ತನಿಗೆ ಪರಾಕ್ರಮಿಯಾದ ಭೂರಿಶ್ರವಸನು ಮಗನಾಗಿ ಹುಟ್ಟಿದನು.

**ಪೂರ್ವೋದಧೇಸ್ತೀರಗತೇಽಬ್ಜಸಂಭವೇ**
**ಗಂಗಾಯುತಃ ಪರ್ವಣಿ ಘೂರ್ಣಿತೋಽಬ್ಧಿಃ ।**
**ಅವಾಕ್ಷಿಪತ್ ತಸ್ಯ ತನೌ ನಿಜೋದಬಿಂದುಂ**
**ಶಶಾಪೈನಮಥಾಽಬ್ಜಯೋನಿಃ ॥ ೧೬ ॥**

ಪದಚ್ಛೇದ :– ಪೂರ್ವೋದಧೇಃ, ತೀರಗತೇ, ಅಬ್ಜಸಂಭವೇ, ಗಂಗಾಯುತಃ, ಪರ್ವಣಿ, ಘೂರ್ಣಿತಃ, ಅಬ್ಧಿಃ, ಅವಾಕ್ಷಿಪತ್, ತಸ್ಯ, ತನೌ, ನಿಜೋದಬಿಂದುಂ, ಶಶಾಪ, ಏನಂ, ಅಥ, ಅಬ್ಜಯೋನಿಃ.

**ಅರ್ಥ** :- **ಅಥ** ಒಮ್ಮೆ **ಪರ್ವಣಿ** ಒಂದು ಹುಣ್ಣಿಮೆಯ ದಿನದಲ್ಲಿ **ಅಬ್ಜಸಂಭವೇ** ಬ್ರಹ್ಮದೇವರು **ಪೂರ್ವೋದಧೇಃ** ಪೂರ್ವಸಮುದ್ರದ **ತೀರಗತೇ (ಸತಿ)** ತೀರದಲ್ಲಿದ್ದಾಗ **ಗಂಗಾಯುತಃ** ಗಂಗಾಸಹಿತನಾದ **ಅಬ್ಧಿಃ** ಸಮುದ್ರರಾಜನು **ಘೂರ್ಣಿತಃ (ಸನ್)** ಉಕ್ಕಿ ಹರಿದವನಾಗಿ **ತಸ್ಯ** ಆ ಬ್ರಹ್ಮದೇವರ **ತನೌ** ಶರೀರದಲ್ಲಿ **ನಿಜೋದಬಿಂದುಂ** ತನ್ನ ನೀರಿನ ಹನಿಯನ್ನು

**ಅವಾಕ್ಷಿಪತ್** ಎರಚಿದನು. **(ತದಾ)** ಆಗ **ಅಬ್ಜಯೋನಿಃ** ಬ್ರಹ್ಮದೇವರು **ಏನಂ** ಈ ಸಮುದ್ರರಾಜನನ್ನು **ಶಶಾಪ** ಶಪಿಸಿದರು.

**ತಾತ್ಪರ್ಯ** :- ಒಮ್ಮೆ ಒಂದು ಹುಣ್ಣಿಮೆಯ ದಿನದಂದು ಚತುರ್ಮುಖಬ್ರಹ್ಮದೇವರು ಪೂರ್ವ ಸಮುದ್ರದ ತೀರದಲ್ಲಿದ್ದಾಗ ಗಂಗಾ ಸಹಿತನಾದ ಸಮುದ್ರರಾಜನು ಉಕ್ಕೇರಿದನು. ಆದರಿಂದ ಬ್ರಹ್ಮದೇವರಮೇಲೆ ತನ್ನ ನೀರ ಹನಿಗಳನ್ನು ಎರಚಿದನು. ಆಗ ಬ್ರಹ್ಮದೇವರು ಶಾಂತನಾಗೆಂದು ಸಮುದ್ರನನ್ನು ಶಪಿಸಿದರು.

**ಮಹಾಭಿಷಙ್ ನಾಮ ನರೇಶ್ವರಸ್ತ್ವಂ ಭೂತ್ವಾ ಪುನಃ ಶಂತನುನಾಮಧೇಯಃ ।**
**ಜನಿಷ್ಯಸೇ ವಿಷ್ಣುಪದೀ ತಥೈಷಾ ತತ್ರಾಪಿ ಭಾರ್ಯಾ ಭವತೋ ಭವಿಷ್ಯತಿ ॥ ೧೭ ॥**

**ಪದಚ್ಛೇದ** :- ಮಹಾಭಿಷಙ್, ನಾಮ, ನರೇಶ್ವರಃ, ತ್ವಂ, ಭೂತ್ವಾ, ಪುನಃ, ಶಂತನುನಾಮಧೇಯಃ, ಜನಿಷ್ಯಸೇ, ವಿಷ್ಣುಪದೀ, ತಥಾ, ಏಷಾ, ತತ್ರ, ಅಪಿ, ಭಾರ್ಯಾ, ಭವತಃ, ಭವಿಷ್ಯತಿ.

**ಅರ್ಥ** :- **ತ್ವಂ** ನೀನು (ವರುಣನು) **ಮಹಾಭಿಷಙ್ ನಾಮ** ಮಹಭಿಷಕ್ ಎಂಬ **ನರೇಶ್ವರಃ** ರಾಜನಾಗಿ **ಭೂತ್ವಾ** ಹುಟ್ಟಿ **ಪುನಃ** ಮತ್ತೆ **ಶಂತನುನಾಮಧೇಯಃ** ಶಂತನು ಎಂಬ ಹೆಸರುಳ್ಳವನಾಗಿ **ಜನಿಷ್ಯಸೇ** ಜನಿಸುವಿ. **ತಥಾ** ಹಾಗೆಯೇ **ತತ್ರಾಪಿ** ಆ ಶಂತನು ಜನ್ಮದಲ್ಲಿಯೂ **ವಿಷ್ಣುಪದೀ** ವಿಷ್ಣುವಿನ ಪಾದದಲಿ ಹುಟ್ಟಿದ **ಏಷಾ** ಈ ಗಂಗೆಯು **ಭವತಃ** ನಿನಗೆ **ಭಾರ್ಯಾ** ಹೆಂಡತಿಯು **ಭವಿಷ್ಯತಿ** ಆಗುವಳು.

ತಾತ್ಪರ್ಯ :- ನೀನು ಮಹಾಭಿಷಕ್ ಎಂಬ ರಾಜನಾಗಿ ಹುಟ್ಟಿ ಅನಂತರ ಶಂತನು ನಾಮಕನಾಗಿ ಜನಿಸುವಿ. ಹಾಗೆಯೇ ಈ ಗಂಗೆಯು ಆ ಜನ್ಮದಲ್ಲೂ ನಿನಗೆ ಹೆಂಡತಿಯಾಗುವಳು.

**ಶಾಂತೋ ಭವೇತ್ಯೇವ ಮಯೋದಿತಸ್ತ್ವಂ**
**ತನುತ್ವಮಾಪ್ನೋಷಿ ತತಶ್ಚ ಶಂತನುಃ ।**
**ಇತೀರಿತಃ ಸೋಽಥ ನೃಪೋ ಬಭೂವ**
**ಮಹಾಭಿಷಙ್ ನಾಮ ಹರೇಃ ಪದಾಶ್ರಯಃ ॥ ೧೮ ॥**

ಪದಚ್ಛೇದ :- ಶಾಂತಃ, ಭವ, ಇತಿ, ಏವ, ಮಯಾ, ಉದಿತಃ, ತ್ವಂ, ತನುತ್ವಂ, ಆಪ್ನೋಷಿ, ತತಃ, ಚ, ಶಂತನುಃ, ಇತಿ, ಈರಿತಃ, ಸಃ, ಅಥ, ನೃಪಃ, ಬಭೂವ, ಮಹಾಭಿಷಜ್, ನಾಮ, ಹರೇಃ, ಪದಾಶ್ರಯಃ.

**ಅರ್ಥ** :- **ಅಥ** ಆ ನಂತರ **ಶಾಂತಃ** ಶಾಂತನು **ಭವ** ಆಗು **ಇತಿ ಏವ** ಈ ರೀತಿಯಾಗಿಯೇ **ಮಯಾ** ನನ್ನಿಂದ **ಉದಿತಃ** ಹೇಳಲ್ಪಟ್ಟ **ತ್ವಂ** ನೀನು **ತನುತ್ವಂ** ಕುಗ್ಗುವಿಕೆಯನ್ನು (ಶಾಂತತೆಯನ್ನು) **ಆಪ್ನೋಷಿ** ಹೊಂದುತ್ತೀಯ. **ತತಃ ಚ** ಆದ್ದರಿಂದಲೇ **ಶಂತನುಃ** ಶಂತನು ಎಂದು ಪ್ರಸಿದ್ಧನಾಗುವಿ. **ಇತಿ** ಈ ರೀತಿಯಾಗಿ **ಈರಿತಃ** ಹೇಳಲ್ಪಟ್ಟ **ಸಃ** ಆ ವರುಣನು **ಅಥ** ಆ ನಂತರ **ಹರೇಃ** ಪರಮಾತ್ಮನ **ಪದಾಶ್ರಯಃ** ಪಾದವನ್ನು ಆಶ್ರಯಿಸಿರುವ **ಮಹಾಭಿಷಜ್** ಮಹಾಭಿಷಕ್ ಎಂದು **ನಾಮ** ಪ್ರಸಿದ್ಧನಾದ **ನೃಪಃ** ರಾಜನು **ಬಭೂವ** ಆದನು.

**ತಾತ್ಪರ್ಯ** :- ಶಾಂತನಾಗು ಎಂದು ನನ್ನಿಂದ ಹೇಳಲ್ಪಟ್ಟ ನೀನು ಕುಗ್ಗಿ ಶಾಂತನಾದ್ದರಿಂದ ಶಂತನು ಎಂದೇ ಮುಂದೆ ಪ್ರಸಿದ್ಧನಾಗುವಿ. ಹೀಗೆ ಬ್ರಹ್ಮನಿಂದ ಹೇಳಲ್ಪಟ್ಟ ವರುಣನು ಮೊದಲಿಗೆ ಪರಮಾತ್ಮನ ಪಾದಗಳನ್ನೇ ಆಶ್ರಯಿಸಿದ ಮಹಾಭಿಷಕ್ ಎಂಬ ರಾಜನಾಗಿ ಹುಟ್ಟಿದನು.

**ಸ ತತ್ರ ಭುಕ್ತ್ವಾ ಚಿರಕಾಲಮುರ್ವೀಂ**
**ತನುಂ ವಿಹಾಯಾಽಪ ಸದೋ ವಿಧಾತುಃ ।**
**ತತ್ರಾಪಿ ತಿಷ್ಠನ್ ಸುರವೃಂದಸನ್ನಿಧೌ**
**ದದರ್ಶ ಗಂಗಾಂ ಶ್ಲಥಿತಾಂಬರಾಂ ಸ್ವಕಾಮ್ ॥ ೧೯ ॥**

ಪದಚ್ಛೇದ :- ಸಃ, ತತ್ರ, ಭುಕ್ತ್ವಾ, ಚಿರಕಾಲಂ, ಉರ್ವೀಂ, ತನುಂ, ವಿಹಾಯ, ಆಪ, ಸದಃ, ವಿಧಾತುಃ, ತತ್ರ, ಅಪಿ, ತಿಷ್ಠನ್, ಸುರವೃಂದಸನ್ನಿಧೌ, ದದರ್ಶ, ಗಂಗಾಂ, ಶ್ಲಥಿತಾಂಬರಾಂ, ಸ್ವಕಾಮ್.

**ಅರ್ಥ** :- **ಸಃ** ಆ ಮಹಾಭಿಷಕ್ ಎಂಬ ರಾಜನು **ತತ್ರ** ಆ ಜನ್ಮದಲ್ಲಿ **ಚಿರಕಾಲಂ** ಬಹುಕಾಲ **ಉರ್ವೀಂ** ಭೂಮಿಯನ್ನು **ಭುಕ್ತ್ವಾ** ಪಾಲಿಸಿ **ತನುಂ** ಶರೀರವನ್ನು **ವಿಹಾಯ** ಬಿಟ್ಟು **ವಿಧಾತುಃ** ಬ್ರಹ್ಮದೇವರ **ಸದಃ** ಸಭೆಯನ್ನು **ಆಪ** ಹೊಂದಿದನು. **ತತ್ರ ಅಪಿ** ಆ ಸಭೆಯಲ್ಲಿಯೂ **ಸಃ** ಅವನು **ಸುರವೃಂದಸನ್ನಿಧೌ** ದೇವತೆಗಳ ಸಮೂಹದ ಸಮಕ್ಷಮದಲ್ಲಿ **ಸ್ವಕಾಂ** ತನ್ನ

ಹೆಂಡತಿಯಾದ **ಶ್ಲಥಿತಾಂಬರಾಂ** ಜಾರಿದ ಬಟ್ಟೆಯುಳ್ಳ **ಗಂಗಾಂ** ಗಂಗೆಯನ್ನು **ದದರ್ಶ** ನೋಡಿದನು.

**ತಾತ್ಪರ್ಯ** :- ಮಹಾಭಿಷಕ್ ಆ ಜನ್ಮದಲಿ ಭೂಮಿಯನ್ನು ಬಹುಕಾಲ ಆಳಿ ತನ್ನ ಶರೀರವನ್ನು ತ್ಯಜಿಸಿದನು. ನಂತರ ಬ್ರಹ್ಮದೇವರ ಸಭೆಯನ್ನು ಸೇರಿದನು. ಆ ಸಭೆಯಲ್ಲಿ ದೇವತೆಗಳೊಂದಿಗಿರುವಾಗ ತನ್ನ ಪತ್ನಿಯಾದ ಗಂಗೆಯನ್ನು ಗಾಳಿಗೆ ಅವಳ ಬಟ್ಟೆಯು ಜಾರಿದಾಗ ನೋಡಿದನು.

**ಅವಾಙ್ಮುಖೇಷು ದ್ಯುಸದಸ್ಸು ಗಂಗಾಂ**
**ನಿರೀಕ್ಷಮಾಣಂ ಪುನರಾತ್ಮಸಂಭವಃ ।**
**ಉವಾಚ ಭೂಮೌ ನೃಪತಿರ್ಭವಾಶು**
**ಶಪ್ತೋ ಯಥಾ ತ್ವಂ ಹಿ ಪುರಾ ಮಯೈವ ॥ ೨೦ ॥**

**ಪದಚ್ಛೇದ** :- ಅವಾಙ್ಮುಖೇಷು, ದ್ಯುಸದಸ್ಸು, ಗಂಗಾಂ, ನಿರೀಕ್ಷಮಾಣಂ, ಪುನಃ ಆತ್ಮಸಂಭವಃ, ಉವಾಚ, ಭೂಮೌ, ನೃಪತಿಃ, ಭವ, ಆಶು, ಶಪ್ತಃ, ಯಥಾ, ತ್ವಂ, ಹಿ, ಪುರಾ, ಮಯಾ, ಏವ.

**ಅರ್ಥ** :- **ದ್ಯುಸದಸ್ಸು** ದೇವಲೋಕದ ಸಭೆಯಲ್ಲಿದ್ದವರು **ಅವಾಙ್ಮುಖೇಷು (ಸತ್ಸು)** ಮುಖವನ್ನು ಕೆಳಗೆ ಮಾಡಿರಲು **ಗಂಗಾಂ** ಗಂಗೆಯನ್ನು **ನಿರೀಕ್ಷಮಾಣಂ (ಪ್ರತಿ)** ನೋಡುತ್ತಿರುವ ವರುಣನನ್ನು ಕುರಿತು **ಆತ್ಮಸಂಭವಃ** ಬ್ರಹ್ಮದೇವರು **ತ್ವಂ** ನೀನು **ಯಥಾ** ಹೇಗೆ **ಪುರಾ** ಹಿಂದೆ **ಮಯಾ ಏವ** ನನ್ನಿಂದಲೇ **ಶಪ್ತಃ ಹಿ** ಶಪಿಸಲ್ಪಟ್ಟವನಾಗಿದ್ದೆಯೋ **(ತಥಾ)** ಹಾಗೆ **ಭೂಮೌ** ಭೂಮಿಯಲ್ಲಿ **ಆಶು** ಕೂಡಲೇ **ನೃಪತಿಃ** ರಾಜನು **ಭವ** ಆಗು **ಇತಿ** ಎಂದು **ಉವಾಚ** ಹೇಳಿದರು.

**ತಾತ್ಪರ್ಯ** :- ದೇವತೆಗಳೆಲ್ಲರೂ ನಗ್ನಸ್ತ್ರೀಯನ್ನು ನೋಡಬಾರದೆಂದು ಮುಖವನ್ನು ತಗ್ಗಿಸಿ ಕುಳಿತಿದ್ದಾಗ ವರುಣನು ತನ್ನ ಪತ್ನಿ ಎಂದು ಅನುರಾಗದಿಂದ ಪುನಃ ಪುನಃ ನೋಡಿದನು. ಆಗ ಬ್ರಹ್ಮದೇವರು ಹೇಳಿದರು :- ಹಿಂದೆ ನಾನು ನಿನಗೆ ಶಾಪವನ್ನು ಕೊಟ್ಟಂತೆಯೇ ಶೀಘ್ರವಾಗಿಯೇ ಭೂಮಿಯಲ್ಲಿ ರಾಜನಾಗಿ ಜನಿಸು, ಎಂದು.

ಇತೀರಿತಸ್ತತ್‌ಕ್ಷಣತಃ ಪ್ರತೀಪಾತ್
ಬಭೂವ ನಾಮ್ನಾ ನೃಪತಿಶ್ಚ ಶಂತನುಃ ।
ಅವಾಪ್ಯ ಗಂಗಾಂ ದಯಿತಾಂ ಸ್ವಕೀಯಾಂ
ತಯಾ ಮುಮೋದಾಬ್ದಗಣಾನ್ ಬಹೂಂಶ್ಚ ॥ ೨೧ ॥

ಪದಚ್ಛೇದ :- ಇತಿ, ಈರಿತಃ, ತತ್ಕ್ಷಣತಃ, ಪ್ರತೀಪಾತ್, ಬಭೂವ, ನಾಮ್ನಾ, ನೃಪತಿಃ, ಚ, ಶಂತನುಃ, ಅವಾಪ್ಯ, ಗಂಗಾಂ, ದಯಿತಾಂ, ಸ್ವಕೀಯಾಂ, ತಯಾ, ಮುಮೋದ, ಅಬ್ದಗಣಾನ್, ಬಹೂನ್, ಚ.

**ಅರ್ಥ** :- **ಇತಿ** ಹೀಗೆ **ಈರಿತಃ** ಶಪಿಸಲ್ಪಟ್ಟ **(ಸಃ)** ಆ ವರುಣನು **ತತ್ಕ್ಷಣತಃ** ಆ ಕ್ಷಣದಲ್ಲಿಯೇ **ಪ್ರತೀಪಾತ್** ಪ್ರತೀಪನಿಂದ **ನಾಮ್ನಾ** ಹೆಸರಿನಿಂದ **ಶಂತನುಃ** ಶಂತನು ಎಂದು ಪ್ರಸಿದ್ಧನಾದ **ನೃಪತಿಃ** ರಾಜನಾಗಿ **ಬಭೂವ** ಹುಟ್ಟಿದನು. **ಚ** ಮತ್ತು **ಸ್ವಕೀಯಾಂ** ತನ್ನ **ದಯಿತಾಂ** ಹೆಂಡತಿಯಾದ **ಗಂಗಾಂ** ಗಂಗೆಯನ್ನು **ಅವಾಪ್ಯ** ಹೊಂದಿ **ತಯಾ** ಆ ಗಂಗೆಯೊಂದಿಗೆ **ಬಹೂನ್** ಬಹಳ **ಅಬ್ದಗಣಾನ್** ವರ್ಷಗಳ ಕಾಲ **ಮುಮೋದ** ಸುಖಿಸಿದನು.

**ತಾತ್ಪರ್ಯ** :- ಬ್ರಹ್ಮನಿಂದ ಶಪಿಸಲ್ಪಟ್ಟ ಆ ವರುಣನು ಆ ಕ್ಷಣದಲ್ಲಿಯೇ ಪ್ರತೀಪನಿಂದ ಶಂತನುನಾಮಕನಾಗಿ ಹುಟ್ಟಿದನು. ತನ್ನ ಮಡದಿಯಾದ ಗಂಗೆಯನ್ನೇ ಆ ಜನ್ಮದಲ್ಲಿಯೂ ಹೆಂಡತಿಯನ್ನಾಗಿ ಪಡೆದು ಬಹು ವರ್ಷಗಳ ಕಾಲ ಅವಳೊಂದಿಗೆ ಸುಖಿಸಿದನು.

ಅಥಾಷ್ಟಮೋ ವಸುರಾಸೀದ್ ದ್ಯುನಾಮಾ
ವರಾಂಗಿನಾಮ್ನ್ಯಸ್ಯ ಬಭೂವ ಭಾರ್ಯಾ ।
ಬಭೂವ ತಸ್ಯಾಶ್ಚ ಸಖೀ ನೃಪಸ್ಯ
ಸುವಿಂದನಾಮ್ನೋ ದಯಿತಾ ಸನಾಮ್ನೀ ॥ ೨೨ ॥

ಪದಚ್ಛೇದ :- ಅಥ, ಅಷ್ಟಮಃ, ವಸುಃ, ಆಸೀತ್, ದ್ಯುನಾಮಾ, ವರಾಂಗಿನಾಮ್ನೀ, ಅಸ್ಯ, ಬಭೂವ, ಭಾರ್ಯಾ, ಬಭೂವ, ತಸ್ಯಾಃ, ಚ, ಸಖೀ, ನೃಪಸ್ಯ, ಸುವಿಂದನಾಮ್ನಃ, ದಯಿತಾ, ಸನಾಮ್ನೀ.

**ಅರ್ಥ** :- **ಅಥ** ಒಮ್ಮೆ **ದ್ಯುನಾಮಾ** ದ್ಯು ಎಂಬ ಹೆಸರುಳ್ಳ **ಅಷ್ಟಮಃ** ಎಂಟನೆಯ **ವಸುಃ** ವಸುವು **ಅಭೂತ್** ಇದ್ದನು. **ಅಸ್ಯ** ಇವನಿಗೆ

**ವರಾಂಗಿನಾಮ್ನೀ** ವರಾಂಗಿ ಎಂಬ ಹೆಸರಿನ **ಭಾರ್ಯಾ** ಹೆಂಡತಿಯು **ಬಭೂವ** ಇದ್ದಳು. **ತಸ್ಯಾಃ** ಆ ವರಾಂಗಿಗೆ **ಸನಾಮ್ನೀ** ತನ್ನ ಹೆಸರಿನವಳೇ ಆದ **ಸಖೀ** ಗೆಳತಿಯು **ಬಭೂವ** ಇದ್ದಳು. **(ಸಾ)** ಆ ಗೆಳತಿಯಾದರೂ **ಸುವಿಂದನಾಮ್ನಃ** ಸುವಿಂದನೆಂಬ ಹೆಸರಿನ **ನೃಪಸ್ಯ** ರಾಜನ **ದಯಿತಾ** ಹೆಂಡತಿಯು **ಆಸೀತ್** ಆಗಿದ್ದಳು.

**ತಾತ್ಪರ್ಯ** :- ದ್ಯು ಎಂಬ ಹೆಸರಿನ ಎಂಟನೆಯ ವಸುವಿದ್ದನು. ಅವನಿಗೆ ವರಾಂಗಿ ಎಂಬ ಹೆಸರಿನ ಹೆಂಡತಿಯಿದ್ದಳು. ಅವಳಿಗೆ ಅವಳ ಹೆಸರಿನವಳೇ ಆದ ಗೆಳತಿಯೊಬ್ಬಳಿದ್ದಳು. ಆ ಗೆಳತಿಯು ಸುವಿಂದನೆಂಬ ರಾಜನ ಹೆಂಡತಿಯು.

**ತಸ್ಯಾ ಜರಾಮೃತಿವಿಧ್ವಂಸಹೇತೋಃ**
**ವಸಿಷ್ಠಧೇನುಂ ಸ್ವಮೃತಂ ಕ್ಷರಂತೀಮ್ ।**
**ಜರಾಪಹಾಂ ನಂದಿನಿನಾಮಧೇಯಾಂ**
**ಬದ್ಧುಂ ಪತಿಂ ಚೋದಯಾಮಾಸ ದೇವೀ ॥ ೨೩ ॥**

ಪದಚ್ಛೇದ :- ತಸ್ಯಾಃ, ಜರಾಮೃತಿವಿಧ್ವಂಸಹೇತೋಃ ವಸಿಷ್ಠಧೇನುಂ, ಸ್ವಮೃತಂ, ಕ್ಷರಂತೀಂ, ಜರಾಪಹಾಂ ನಂದಿನಿನಾಮಧೇಯಾಂ, ಬದ್ಧುಂ, ಪತಿಂ, ಚೋದಯಾಮಾಸ, ದೇವೀ.

**ಅರ್ಥ** :- **ದೇವೀ** ವಸುವಿನ ಹೆಂಡತಿಯು **ತಸ್ಯಾಃ** ಅವಳ ಗೆಳತಿಯ **ಜರಾಮೃತಿವಿಧ್ವಂಸಹೇತೋಃ** ಮುಪ್ಪು ಮತ್ತು ಸಾವಿನ ಪರಿಹಾರಕ್ಕಾಗಿ **ಸ್ವಮೃತಂ** ಉತ್ತಮ ಅಮೃತವನ್ನು **ಕ್ಷರಂತೀಂ** ಸುರಿಸುವ **ಜರಾಪಹಾಂ** ಮುಪ್ಪನ್ನು ಪರಿಹರಿಸುವ **ನಂದಿನಿನಾಮಧೇಯಾಂ** ನಂದಿನಿ ಎಂಬ ಹೆಸರಿನ **ವಸಿಷ್ಠಧೇನುಂ** ವಸಿಷ್ಠ ಋಷಿಗಳ ಹಸುವನ್ನು **ಬದ್ಧುಂ** ಹಿಡಿದು ತರಲು **ಪತಿಂ** ಗಂಡನಾದ ದ್ಯುನಾಮಕ ವಸುವನ್ನು **ಚೋದಯಾಮಾಸ** ಪ್ರೇರೇಪಿಸಿದಳು.

**ತಾತ್ಪರ್ಯ** :- ದ್ಯುವಸುವಿನ ಹೆಂಡತಿಯಾದ ವರಾಂಗಿಯು ತನ್ನ ಗೆಳತಿಯ ಮುಪ್ಪು ಮತ್ತು ಮರಣದ ಪರಿಹಾರಕ್ಕಾಗಿ ಉತ್ತಮ ಅಮೃತವನ್ನು ಸುರಿಸುವ ನಂದಿನೀ ಎಂಬ ಹೆಸರಿನ ವಸಿಷ್ಠರ ಹಸುವನ್ನು ಹಿಡಿದು ತರಲು ತನ್ನ ಪತಿಯನ್ನು ಪ್ರೇರೇಪಿಸಿದಳು.

ತಯಾ ದ್ಯುನಾಮಾ ಸ ವಸುಃ ಪ್ರಚೋದಿತೋ
ಭ್ರಾತೃಸ್ನೇಹಾತ್ ಸಪ್ತಭಿರನ್ವಿತೋऽಪರೈಃ ।
ಬಬಂಧ ತಾಂ ಗಾಮಥ ತಾಂ ಶಶಾಪ
ವಸಿಷ್ಠಸಂಸ್ಥಃ ಕಮಲೋದ್ಭವಃ ಪ್ರಭುಃ ॥ ೨೪ ॥

ಪದಚ್ಛೇದ :- ತಯಾ, ದ್ಯುನಾಮಾ, ಸಃ, ವಸುಃ, ಪ್ರಚೋದಿತಃ, ಭ್ರಾತೃಸ್ನೇಹಾತ್, ಸಪ್ತಭಿಃ, ಅನ್ವಿತಃ, ಅಪರೈಃ, ಬಬಂಧ, ತಾಂ, ಗಾಂ, ಅಥ, ತಾನ್, ಶಶಾಪ, ವಸಿಷ್ಠಸಂಸ್ಥಃ, ಕಮಲೊದ್ಭವಃ, ಪ್ರಭುಃ.

**ಅರ್ಥ** :- **ತಯಾ** ಆ ವರಾಂಗಿಯಿಂದ **ಪ್ರಚೋದಿತಃ** ಪ್ರೇರಿತನಾದ **ದ್ಯುನಾಮಾ** ದ್ಯುನಾಮಕನಾದ **ಸಃ** ಆ **ವಸುಃ** ವಸುವು **ಭ್ರಾತೃಸ್ನೇಹಾತ್** ಸಹೋದರನಲ್ಲಿರುವ ಸ್ನೇಹದಿಂದ ಬಂದ **ಅಪರೈಃ** ಬೇರೆ **ಸಪ್ತಭಿಃ** ಏಳು ಸಹೋದರರಿಂದ **ಅನ್ವಿತಃ (ಸನ್)** ಕೂಡುಕೊಂಡು **ತಾಂ** ವಸಿಷ್ಠರ **ಗಾಂ** ಹಸುವಾದ ನಂದಿನಿಯನ್ನು **ಬಬಂಧ** ಬಂಧಿಸಿದನು. **ಅಥ** ಆ ನಂತರ **ಕಮಲೋದ್ಭವಃ** ಪರಮಾತ್ಮನ ನಾಭಿ ಕಮಲದಲ್ಲಿ ಹುಟ್ಟಿದ **ಪ್ರಭುಃ** ಸ್ವಾಮಿಯಾದ ಬ್ರಹ್ಮದೇವರು **ವಸಿಷ್ಠಸಂಸ್ಥಃ (ಸನ್)** ವಸಿಷ್ಠರಲ್ಲಿದ್ದು **ತಾನ್** ಆ ವಸುಗಳನ್ನು **ಶಶಾಪ** ಶಪಿಸಿದರು.

**ತಾತ್ಪರ್ಯ** :- ತನ್ನ ಹೆಂಡತಿಯಾದ ವರಾಂಗಿಯಿಂದ ಪ್ರೇರಿತನಾದ ದ್ಯುನಾಮಕ ವಸು ಸೋದರಸ್ನೇಹದಿಂದ ತನ್ನೊಂದಿಗೆ ಬಂದ ಇತರ ಏಳು ಜನ ವಸುಗಳಿಂದ ಕೂಡಿಕೊಂಡು ಆ ಹಸುವನ್ನು ಅಪಹರಿಸಿದನು. ಬಳಿಕ ವಸಿಷ್ಠ ರಲ್ಲಿದ್ದುಕೊಂಡು ಕಮಲಸಂಭವರಾದ ಬ್ರಹ್ಮ ದೇವರು ಅವರನ್ನು ಶಪಿಸಿದರು.

ಅಧರ್ಮವೃತ್ತಾಃ ಪ್ರತಿಯಾತ ಮಾನುಷೀಂ
ಯೋನಿಂ ದ್ರುತಂ ಯತ್ಕೃತೇ ಸರ್ವ ಏವ ।
ಧರ್ಮಚ್ಯುತಾಃ ಸ ತಥಾऽಷ್ಟಾಯುರಾಪ್ಯತಾಮನ್ಯೇ
ಪುನಃ ಕ್ಷಿಪ್ರಮತೋ ವಿಮೋಕ್ಷ್ಯಥ ॥ ೨೫ ॥

ಪದಚ್ಛೇದ :- ಅಧರ್ಮವೃತ್ತಾಃ, ಪ್ರತಿಯಾತ, ಮನುಷೀಂ, ಯೋನಿಂ, ದ್ರುತಂ, ಯತ್ಕೃತೇ, ಸರ್ವೇ, ಏವ, ಧರ್ಮಚ್ಯುತಾಃ, ಸಃ, ತಥಾ, ಅಷ್ಟಾಯುಃ, ಆಪ್ಯತಾಂ, ಅನ್ಯೇ, ಪುನಃ, ಕ್ಷಿಪ್ರಂ, ಅತಃ, ವಿಮೋಕ್ಷ್ಯಥ.

**ಅರ್ಥ** :- **ಅಧರ್ಮವೃತ್ತಾಃ** ಅಧರ್ಮಕಾರ್ಯದಲ್ಲಿ ಪ್ರವೃತ್ತರಾದ **ಸರ್ವೇ ಏವ** ನೀವೆಲ್ಲ **ದ್ರುತಂ** ಶೀಘ್ರವಾಗಿ **ಮಾನುಷೀಂ** ಮನುಷ್ಯಸಂಬಂಧಿ ಯಾದ **ಯೋನಿಂ** ಜನ್ಮವನ್ನು **ಪ್ರತಿಯಾತ** ಹೊಂದಿರಿ. **ಯತ್ಕೃತೇ** ಯಾರಿಗೋಸ್ಕರವಾಗಿ **ಧರ್ಮಚ್ಯುತಾಃ** ಧರ್ಮ ತಪ್ಪಿರುವರೋ **ಸಃ** ಆ ದ್ಯುನಾಮಕ ವಸುವು **ತಥಾ** ಹಾಗೆ **ಅಷ್ಟಾಯುಃ** ಎಂಟು ಜನರ ಆಯುಸ್ಸನ್ನು **ಆಪ್ನುತಾಂ** ಹೊಂದಲಿ. **ಅನ್ಯೇ ಪುನಃ** ಬೇರೆಯವರಾದರೂ **ಅತಃ** ಆ ಮಾನುಷಜನ್ಮದಿಂದ **ಕ್ಷಿಪ್ರಂ** ಶೀಘ್ರವಾಗಿ **ವಿಮೋಕ್ಷ್ಯಥ** ಮೋಕ್ಷವನ್ನು ಹೊಂದಲಿ.

**ತಾತ್ಪರ್ಯ** :- ವಸಿಷ್ಠರಲ್ಲಿದ್ದ ಬ್ರಹ್ಮದೇವರು ಈ ರೀತಿಯಾಗಿ ಶಾಪವನ್ನಿತ್ತರು ಅಧರ್ಮಕಾರ್ಯದಲ್ಲಿ ತೊಡಗಿದ ನೀವೆಲ್ಲರೂ ಮಾನುಷ ಜನ್ಮವನ್ನು ಪಡೆಯಿರಿ. ಯಾವ ದ್ಯುನಾಮಕ ವಸುವಿಗಾಗಿ ಉಳಿದ ಏಳು ವಸುಗಳು ಧರ್ಮಚ್ಯುತರಾದಿರೋ ಆ ದ್ಯುನಾಮಕ ವಸುವು ಎಂಟು ಜನರ ಆಯಸ್ಸನ್ನೂ ಹೊಂದಲಿ ಉಳಿದ ಏಳು ಜನರು ಶೀಘ್ರವಾಗಿಯೇ ಮಾನುಷ ಜನ್ಮದಿಂದ ಮೋಕ್ಷವನ್ನು ಪಡೆಯಿರಿ.

**ಪ್ರಚೋದಯಾಮಾಸ ಚ ಯಾ ಕುಮಾರ್ಗೇ**
**ಪತಿಂ ಹಿ ಸಾಂಬೇತಿ ನರೇಷು ಜಾತಾ ।**
**ಅಭರ್ತೃಕಾ ಪುಂಸ್ತ್ವಸಮಾಶ್ರಯೇಣ**
**ಪತ್ಯುರ್ಮೃತೌ ಕಾರಣತ್ವಂ ವ್ರಜೇತ ॥ ೨೬ ॥**

ಪದಚ್ಛೇದ :- ಪ್ರಚೋದಯಾಮಾಸ, ಚ, ಯಾ, ಕುಮಾರ್ಗೇ, ಪತಿಂ, ಹಿ, ಸಾ, ಅಂಬಾ, ಇತಿ, ನರೇಷು, ಜಾತಾ, ಅಭರ್ತೃಕಾ, ಪುಂಸ್ತ್ವಸಮಾಶ್ರಯೇಣ, ಪತ್ಯುಃ, ಮೃತೌ, ಕಾರಣತ್ವಂ, ವ್ರಜೇತ.

**ಅರ್ಥ** :- **ಯಾ** ಯಾವ ವರಾಂಗಿಯು **ಪತಿಂ** ಗಂಡನನ್ನು **ಕುಮಾರ್ಗೇ** ದುರ್ಮಾರ್ಗದಲ್ಲಿ **ಪ್ರಚೋದಯಾಮಾಸ ಹಿ** ಪ್ರೇರಿಸಿದಳೋ **ಸಾ** ಅಂತಹ ವರಾಂಗಿಯು **ನರೇಷು** ಮನುಷ್ಯರಲ್ಲಿ **ಅಂಬಾ ಇತಿ** ಅಂಬಾ ಎಂಬ ಹೆಸರಿನಿಂದ **ಜಾತಾ** ಹುಟ್ಟಲಿ. **ಅಭರ್ತೃಕಾ** ಪತಿರಹಿತಳಾಗಿ **ಪುಂಸ್ತ್ವಸಮಾಶ್ರಯೇಣ** ಪುರುಷತ್ವವನ್ನು ಆಶ್ರಯಿಸುವ ಮೂಲಕ **ಪತ್ಯುಃ** ಗಂಡನ **ಮೃತೌ** ಮರಣದ ವಿಷಯದಲ್ಲಿ **ಕಾರಣತ್ವಂ** ಕಾರಣಭಾವವನ್ನು (ಹೇತುತ್ವವನ್ನು) **ವ್ರಜೇತ** ಹೊಂದಲಿ.

**ತಾತ್ಪರ್ಯ** :- ಯಾವಳು ತನ್ನ ಗಂಡನನ್ನು ಕೆಟ್ಟ ಮಾರ್ಗಕ್ಕೆ ತೊಡಗಿಸಿದಳೋ ಅಂತಹ ವರಾಂಗಿಯು ಅಂಬೆ ಎಂಬ ಹೆಸರಿನಿಂದ ಮನುಷ್ಯರಲ್ಲಿ ಜನಿಸಲಿ. ಪತಿಯನ್ನು ಹೊಂದದೆ ಪುರುಷತ್ವವನ್ನು ಆಶ್ರಯಿಸಿ, ಆ ಮೂಲಕ ತನ್ನ ಗಂಡನ ಮರಣಕ್ಕೆ ನಿಮಿತ್ತಳಾಗಲಿ.

**ಭವತ್ವಸೌ ಬ್ರಹ್ಮಚರ್ಯೈಕನಿಷ್ಠೋ ಮಹಾನ್ ವಿರೋಧಶ್ಚ ತಯೋರ್ಭವೇತ ।**
**ಸ ಗರ್ಭವಾಸಾಷ್ಟಕದುಃಖಮೇವ ಸಮಾಪ್ನುತಾಂ ಶರತಲ್ಪೇ ಶಯಾನಃ ॥ ೨೭ ॥**

ಪದಚ್ಛೇದ :- ಭವತು, ಅಸೌ, ಬ್ರಹ್ಮಚರ್ಯೈಕನಿಷ್ಠಃ, ಮಹಾನ್, ವಿರೋಧಃ, ಚ, ತಯೋಃ, ಭವೇತ. ಸಃ, ಗರ್ಭವಾಸಾಷ್ಟಕದುಃಖಂ, ಏವ, ಸಮಾಪ್ನುತಾಂ, ಶರತಲ್ಪೇ, ಶಯಾನಃ

**ಅರ್ಥ** :- **ಅಸೌ** ಈ ದ್ಯುನಾಮಕ ವಸುವು **ಬ್ರಹ್ಮಚರ್ಯೈಕನಿಷ್ಠಃ** ಬ್ರಹ್ಮಚರ್ಯದಲ್ಲಿಯೇ ಇರುವಂತೆ **ಭವತು** ಆಗಲಿ **ತಯೋಃ** ಪತಿ-ಪತ್ನಿಯರಿಬ್ಬರಿಗೆ **ಮಹಾನ್** ದೊಡ್ಡದಾದ **ವಿರೋಧಃ** ವಿರೋಧವು **ಭವೇತ** ಉಂಟಾಗಲಿ **ಚ** ಮತ್ತು **ಸಃ** ಆ ವಸು **ಶರತಲ್ಪೇ** ಬಾಣಗಳ ಮಂಚದಲ್ಲಿ **ಶಯಾನಃ (ಸನ್)** ಮಲಗಿದವನಾಗಿ **ಗರ್ಭವಾಸಾಷ್ಟಕದುಃಖಮೇವ** ಎಂಟು ಗರ್ಭವಾಸದ ದುಃಖವನ್ನು **ಸಮಾಪ್ನುತಾಂ** ಹೊಂದಲಿ.

**ತಾತ್ಪರ್ಯ** :- ಈ ದ್ಯುನಾಮಕ ವಸುವು ನೈಷ್ಠಿಕ-ಬ್ರಹ್ಮಚಾರಿಯಾಗಿಯೇ ಇರಲಿ. ಇವರಿಬ್ಬರಿಗೂ ಮಹಾನ್ ವಿರೋಧವುಂಟಾಗಲಿ. ಮತ್ತು ಶರತಲ್ಪದಲ್ಲಿ ಮಲಗಿದವನಾಗಿ ಎಂಟು ಗರ್ಭವಾಸದ ದುಃಖವನ್ನು ಅನುಭವಿಸಲಿ.

**ಮೃತ್ಯಷ್ಟಕೋತ್ಥಾಮಪಿ ವೇದನಾಂ ಸಃ**
**ಪ್ರಾಪ್ನೋತು ಶಸ್ತ್ರೈರ್ಬಹುಧಾ ನಿಕೃತ್ತಃ ।**
**ಇತೀರಿತಾಸ್ತೇ ಕಮಲೋದ್ಭವಂ ತಂ**
**ಜ್ಞಾತ್ವಾ ಸಮುತ್ಸೃಜ್ಯ ಚ ಗಾಂ ಪ್ರಣೇಮುಃ ॥ ೨೮ ॥**

ಪದಚ್ಛೇದ :- ಮೃತ್ಯಷ್ಟಕೋತ್ಥಾಂ, ಅಪಿ, ವೇದನಾಂ, ಸಃ, ಪ್ರಾಪ್ನೋತು, ಶಸ್ತ್ರೈಃ, ಬಹುಧಾ, ನಿಕೃತ್ತಃ, ಇತಿ, ಈರಿತಾಃ, ತೇ, ಕಮಲೋದ್ಭವಂ, ತಂ, ಜ್ಞಾತ್ವಾ ಸಮುತ್ಸೃಜ್ಯ, ಚ, ಗಾಂ, ಪ್ರಣೇಮುಃ.

**ಅರ್ಥ** :- **ಸಃ** ಆ ದ್ಯುನಾಮಕ ವಸುವು **ಶಸ್ತ್ರೈಃ** ಶಸ್ತ್ರಗಳಿಂದ **ಬಹುಧಾ** ನಾನಾ ಬಗೆಯಲಿ **ನಿಕೃತ್ತಃ (ಸನ್)** ಛಿನ್ನನಾಗುತ್ತಾ **ಮೃತ್ಯಷ್ಟಕೋತ್ಥಾಂ** ಎಂಟು ಮರಣಗಳಿಂದ ಹುಟ್ಟುವ **ವೇದನಾಂ ಅಪಿ** ದುಃಖವನ್ನೂ ಸಹ **ಪ್ರಾಪ್ನೋತು** ಹೊಂದಲಿ. **ಇತಿ** ಹೀಗೆ **ಈರಿತಾಃ** ಹೇಳಲ್ಪಟ್ಟ **ತೇ** ಆ ವಸುಗಳು **ತಂ** ಆ **ಕಮಲೋದ್ಭವಂ** ಚತುರ್ಮುಖಬ್ರಹ್ಮನನ್ನು **ಜ್ಞಾತ್ವಾ** ತಿಳಿದು **ಚ** ಮತ್ತು **ಗಾಂ** ನಂದಿನಿಯನ್ನು **ಸಮುತ್ಸೃಜ್ಯ** ಬಿಟ್ಟು **ಪ್ರಣೇಮುಃ** ನಮಸ್ಕರಿಸಿದರು.

**ತಾತ್ಪರ್ಯ** :- ಎಂಟು ಮರಣಗಳಿಂದಾಗಬಹುದಾದ ವೇದನೆಯನ್ನು ಈ ದ್ಯುನಾಮಕ ವಸು ಶಸ್ತ್ರಗಳಿಂದ ನಾನಾ ಬಗೆಯಲ್ಲಿ ಛಿನ್ನ ವಿಚ್ಛಿನ್ನನಾಗುತ್ತಾ ಅನುಭವಿಸಲಿ ಹೀಗೆ ಶಪ್ತರಾದ ವಸುಗಳು ಶಾಪಕೊಟ್ಟವರು ಬ್ರಹ್ಮದೇವರೇ ಎಂದು ತಿಳಿದು ಗೋವನ್ನು ಬಿಟ್ಟು ಕೊಟ್ಟು ತಲೆಬಾಗಿದರು.

**ನ ಮಾನುಷಂ ಗರ್ಭಮವಾಪ್ನುಮೋ**
**ವಯಂ ಭವತ್ವಯಂ ಸರ್ವವಿತ್ ಕೀರ್ತಿಮಾಂಶ್ಚ ।**
**ಮಹಾಸ್ತ್ರವೇತ್ತಾ ಭವದಂಶಯುಕ್ತಸ್ತಥಾ**
**ಬಲಂ ನೋಽಖಿಲಾನಾಮುಪೈತು ॥ ೨೯ ॥**

ಪದಚ್ಛೇದ :- ನ, ಮಾನುಷಂ, ಗರ್ಭಂ, ಅವಾಪ್ನುಮಃ, ವಯಂ, ಭವತು, ಅಯಂ, ಸರ್ವವಿತ್, ಕೀರ್ತಿಮಾನ್, ಚ, ಮಹಾಸ್ತ್ರವೇತ್ತಾ, ಭವದಂಶಯುಕ್ತಃ, ತಥಾ, ಬಲಂ, ನಃ, ಅಖಿಲಾನಾಂ, ಉಪೈತು.

**ಅರ್ಥ** :- **ವಯಂ** ನಾವು (ಉಳಿದ ಏಳು ವಸುಗಳು) **ಮಾನುಷಂ** ಮನುಷ್ಯಸ್ತ್ರೀಗೆ ಸಂಬಂಧಿಸಿದ **ಗರ್ಭಂ** ಗರ್ಭವನ್ನು **ನ ಅವಾಪ್ನುಮಃ** ಪ್ರವೇಶಿಸ ದಂತಾಗಲಿ **ಚ** ಮತ್ತು **ಅಯಂ** ಈ ದ್ಯುನಾಮಕ ವಸುವು **ಸರ್ವವಿತ್** ಸರ್ವಜ್ಞನೂ **ಕೀರ್ತಿಮಾನ್** ಕೀರ್ತಿವಂತನೂ **ಮಹಾಸ್ತ್ರವೇತ್ತಾ** ಮಹಾನ್ ಅಸ್ತ್ರಜ್ಞನೂ **ಭವದಂಶಯುಕ್ತಃ** ನಿಮ್ಮ ಅಂಶದೊಂದಿಗೆ ಕೂಡಿದವನೂ **ಭವತು** ಆಗಲಿ. **ಚ** ಮತ್ತು **ಅಖಿಲಾನಾಂ ನಃ** ನಮ್ಮೆಲ್ಲರ **ಬಲಂ** ಬಲವನ್ನು **ಉಪೈತು** ಹೊಂದಲಿ.

**ತಾತ್ಪರ್ಯ** :- ಉಳಿದ ಏಳು ವಸುಗಳು ಪ್ರಾರ್ಥಿಸುತಾರೆ:- ನಾವು ಮನುಷ್ಯಸ್ತ್ರೀಯ ಗರ್ಭವನ್ನು ಹೊಂದದಂತಾಗಲಿ ಇವನು ನಿಮ್ಮ

ಅಂಶದೊಂದಿಗೆ ಕೂಡಿ, ಸರ್ವಜ್ಞನಾಗಲಿ ಕೀರ್ತಿವಂತನಾಗಲಿ ಮಹಾನ್ ಅಸ್ತ್ರಜ್ಞನಾಗಲಿ. ನಮ್ಮೆಲ್ಲರ ಬಲವನ್ನು ಪಡೆಯಲಿ.

**ಇತೀರಿತೇಽಸ್ತ್ವಿತ್ಯುದಿತಾಃ ಸ್ವಯಂಭುವಾ**
**ವಸಿಷ್ಠಸಂಸ್ಥೇನ ಸುರಾಪಗಾಂ ಯಯುಃ ।**
**ಊಚುಸ್ತಥೈನಾಮುದರೇ ವಯಂ ತೇ**
**ಜಾಯೇಮಹಿ ಕ್ಷಿಪ್ರಮಸ್ಮಾನ್ ಹನ ತ್ವಮ್ ॥ ೩೦ ॥**

ಪದಚ್ಛೇದ :- ಇತಿ, ಈರಿತೇ, ಅಸ್ತು, ಇತಿ, ಉದಿತಾಃ, ಸ್ವಯಂಭುವಾ, ವಸಿಷ್ಠಸಂಸ್ಥೇನ, ಸುರಾಪಗಾಂ, ಯಯುಃ. ಊಚುಃ, ತಥಾ, ಏನಾಂ, ಉದರೇ, ವಯಂ, ತೇ, ಜಾಯೇಮಹಿ, ಕ್ಷಿಪ್ರಂ, ಅಸ್ಮಾನ್, ಹನ, ತ್ವಂ.

**ಅರ್ಥ** :- **ಇತಿ** ಹೀಗೆಂದು **ಈರಿತೇ** (ಸತಿ) ಹೇಳುತ್ತಿರಲು **ಅಸ್ತು** ಆಗಲಿ **ಇತಿ** ಎಂದು **ವಸಿಷ್ಠಸಂಸ್ಥೇನ** ವಸಿಷ್ಠರಲ್ಲಿದ್ದ **ಸ್ವಯಂಭುವಾ** ಬ್ರಹ್ಮದೇವರಿಂದ **ಉದಿತಾಃ** ಹೇಳಲ್ಪಟ್ಟ (ತೇ) ಆ ವಸುಗಳು **ಸುರಾಪಗಾಂ** (ಪ್ರತಿ) ದೇವನದಿಯಾದ ಗಂಗೆಯನ್ನು ಕುರಿತು **ಯಯುಃ** ಹೋದರು. **ತಥಾ** ಹಾಗೆಯೇ **ಏನಾಂ** (ಪ್ರತಿ) ಈ ಗಂಗೆಯನ್ನು ಕುರಿತು **ಊಚುಃ** ಹೇಳಿದರು. **ವಯಂ** ನಾವು **ತೇ** ನಿನ್ನ **ಉದರೇ** ಗರ್ಭದಲ್ಲಿ **ಜಾಯೇಮಹಿ** ಜನಿಸುವೆವು (ತದಾ) ಆಗ **ತ್ವಂ** ನೀನು **ಅಸ್ಮಾನ್** ನಮ್ಮನ್ನು **ಕ್ಷಿಪ್ರಂ** ಶೀಘ್ರವಾಗಿ **ಹನ** ಕೊಲ್ಲು **ಇತಿ** ಎಂದು.

**ತಾತ್ಪರ್ಯ** :- ಹೀಗೆ ವಸುಗಳು ಪ್ರಾರ್ಥಿಸಿದಾಗ ವಸಿಷ್ಠರಲ್ಲಿದ್ದ ಬ್ರಹ್ಮದೇವರು ಹಾಗೆಯೇ ಆಗಲಿ ಎಂದರು. ನಂತರ ಆ ವಸುಗಳು ಸುರನದಿಯಾದ ಗಂಗೆಯ ಬಳಿ ಹೋಗಿ ಹೇಳಿದರು. ನಾವು ನಿನ್ನ ಗರ್ಭದಲ್ಲಿ ಜನಿಸುವೆವು. ಆಗ ನೀನು ಬೇಗನೇ ನಮ್ಮನ್ನು ಕೊಲ್ಲಬೇಕು ಎಂದು.

**ಇತೀರಿತಾ ಸಾ ವರಮಾಶು ವವ್ರೇ**
**ತೇಭ್ಯೋಽಪ್ಯಪಾಪತ್ವಮಥ ಪ್ರಿಯತ್ವಮ್ ।**
**ತೇಷಾಂ ತಥೈವಾತ್ಮನ ಏಕಮೇಷಾಂ**
**ದೀರ್ಘಾಯುಷಂ ತಾನ್ ಸುಷುವೇಽಥ ಶಂತನೋಃ ॥ ೩೧ ॥**

ಪದಚ್ಛೇದ :– ಇತಿ, ಈರಿತಾ, ಸಾ, ವರಂ, ಆಶು, ವವ್ರೇ, ತೇಭ್ಯಃ, ಅಪಿ, ಅಪಾಪತ್ವಂ, ಅಥ, ಪ್ರಿಯತ್ವಂ, ತೇಷಾಂ, ತಥಾ, ಏವ, ಆತ್ಮನಃ, ಏಕಂ, ಏಷಾಂ, ದೀರ್ಘಾಯುಷಂ, ತಾನ್, ಸುಷುವೇ, ಅಥ, ಶಂತನೋಃ.

**ಅರ್ಥ** :- **ಇತಿ** ಹೀಗೆಂದು **ಈರಿತಾಃ** ವಸುಗಳಿಂದ ಹೇಳಲ್ಪಟ್ಟ **ಸಾ** ಆ ಗಂಗೆಯು **ಆಶು** ಕೂಡಲೇ **ವರಂ** ವರವನ್ನು **ವವ್ರೇ** ಬೇಡಿದಳು. **ತೇಭ್ಯಃ** ಆ ಮಕ್ಕಳನ್ನು ಕೊಲ್ಲುವುದರಿಂದ **ಆತ್ಮನಃ** ತನಗೆ **ಅಪಾಪತ್ವಂ** ಪಾಪವುಂಟಾಗದಿರುವುದು **ಸ್ಯಾತ್** ಆಗಲಿ. **ಅಥ** ಅಷ್ಟೇ ಅಲ್ಲದೆ **ತೇಷಾಂ** ಅವರಿಗೆ **ತಥಾ ಏವ** ಹಾಗೆಯೇ **ಆತ್ಮನಃ** ತನಗೆ (ಪರಸ್ಪರವಾಗಿ) **ಪ್ರಿಯತ್ವಂ** ಪ್ರೀತಿಯು **ಸ್ಯಾತ್** ಉಂಟಾಗಲಿ **ಅಥ** ಅನಂತರ **ಏಷಾಂ** ಇವರಲ್ಲಿ **ಏಕಂ** ಒಬ್ಬನನ್ನು **ದೀರ್ಘಾಯುಷಂ** ದೀರ್ಘಾಯುಷ್ಯವುಳ್ಳವನನ್ನಾಗಿ **ವರಂ** ವರವನ್ನು **ವವ್ರೇ** ಪಡೆದಳು. **ಅಥ** ಈ ಮೂರು ವರಗಳನ್ನು ಪಡೆದ ಬಳಿಕ **ಶಂತನೋಃ** ಶಂತನುವಿನ ದೆಸೆಯಿಂದ **ತಾನ್** ಆ ಎಂಟು ವಸುಗಳನ್ನು **ಸುಷುವೇ** ಹಡೆದಳು.

**ತಾತ್ಪರ್ಯ** :- ವಸುಗಳು ಹೀಗೆ ಹೇಳಿದಾಗ ಗಂಗೆಯು ಶೀಘ್ರವಾಗಿಯೇ ವರವನ್ನು ಬೇಡಿದಳು. ಮಕ್ಕಳನ್ನು ಕೊಂದರೂ ನನಗೆ ಪಾಪ ಬರಬಾರದು. ಕೊಂದರೂ ನಾನು ಅವರಿಗೆ ಪ್ರಿಯಳಾಗಬೇಕು. ಅವರಲ್ಲಿ ಒಬ್ಬನಿಗೆ ದೀರ್ಘಾಯುಷ್ಯವು ಬರಬೇಕು. ಹೀಗೆ ಮೂರು ವರವನ್ನು ಕೇಳಿದ ನಂತರ ಶಂತನುವಿನಿಂದ ಮಕ್ಕಳನ್ನು ಪಡೆದಳು.

**ಅವಿಘ್ನತಸ್ತಾನ್ ವಿನಿಹಂತುಮೇವ**
**ಪುರಾ ಪ್ರತೀಪಸ್ಯ ಹಿ ದಕ್ಷಿಣೋರುಮ್ ।**
**ಸಮಾಶ್ರಿತಾ ಕಾಮಿನೀವತ್ ತ್ವಕಾಮಾ**
**ತತ್ಪುತ್ರಭಾರ್ಯಾ ಭವಿತುಂ ವಿಡಂಬಾತ್ ॥ ೩೨ ॥**

ಪದಚ್ಛೇದ :– ಅವಿಘ್ನತಃ, ತಾನ್, ವಿನಿಹಂತುಂ, ಏವ, ಪುರಾ, ಪ್ರತೀಪಸ್ಯ, ಹಿ, ದಕ್ಷಿಣೋರುಂ, ಸಮಾಶ್ರಿತಾ, ಕಾಮಿನೀವತ್, ತು, ಅಕಾಮಾ, ತತ್ಪುತ್ರಭಾರ್ಯಾ, ಭವಿತುಂ, ವಿಡಂಬಾತ್.

**ಅರ್ಥ** :- **ಪುರಾ** ಶಂತನು ದರ್ಶನಕ್ಕಿಂತ ಮೊದಲು **ಅವಿಘ್ನತಃ** ನಿರ್ವಿಘ್ನವಾಗಿ **ತಾನ್** ಆ ಮಕ್ಕಳನ್ನು **ಹಂತುಂ ಏವ** ಕೊಲ್ಲಲೆಂದೇ **ಅಕಾಮಾ**

**ತು** ಪ್ರತೀಪನನ್ನು ಕಾಮಿಸದಿದ್ದರೂ **ಕಾಮಿನೀವತ್** ಕಾಮಿಸಿದವಳಂತೆ **ತತ್ಪುತ್ರಭಾರ್ಯಾ** ಆ ಪ್ರತೀಪನ ಮಗನ ಹೆಂಡತಿಯು **ಭವಿತುಂ** ಆಗಲು **ವಿಡಂಬಾತ್** ನಾಟಕದಿಂದ **ಪ್ರತೀಪಸ್ಯ** ಪ್ರತೀಪರಾಜನ **ದಕ್ಷಿಣೋರುಂ** ಬಲತೊಡೆಯನ್ನು **ಸಮಾಶ್ರಿತಾ ಹಿ** ಆಶ್ರಯಿಸಿದಳಷ್ಟೇ.

**ತಾತ್ಪರ್ಯ** :- ಮಕ್ಕಳನ್ನು ಕೊಲ್ಲಲು ವಿಘ್ನವಾಗದಿರಲೆಂದು ಗಂಗೆಯು ಮೊದಲು ಪ್ರತೀಪನನ್ನು ಭೇಟಿಯಾಗುತ್ತಾಳೆ. ಪ್ರತೀಪನನ್ನು ಕಾಮಿಸದಿದ್ದರೂ ಅವನ ಮಗನನ್ನು ಮದುವೆಯಾಗುವ ಉದ್ದೇಶದಿಂದ ಅವನನ್ನು ಕಾಮಿಸಿದವಳಂತೆ ನಟಿಸುತ್ತಾ ಅವನ ಬಲ ತೊಡೆಯ ಮೇಲೆ ಕೂರುತ್ತಾಳೆ.

**ತೇನೈವ ಚೋಕ್ತಾ ಭವ ಮೇ ಸುತಸ್ಯ**
**ಭಾರ್ಯಾ ಯತೋ ದಕ್ಷಿಣೋರುಸ್ಥಿತಾಸಿ ।**
**ಭಾಗೋ ಹಿ ದಕ್ಷೋ ದುಹಿತುಃ ಸ್ನುಷಾಯಾ**
**ಭಾರ್ಯಾಭಾಗೋ ವಾಮ ಇತಿ ಪ್ರಸಿದ್ಧಃ ॥ ೩೩ ॥**

ಪದಚ್ಛೇದ :- ತೇನ, ಏವ, ಚ, ಉಕ್ತಾ, ಭವ, ಮೇ, ಸುತಸ್ಯ, ಭಾರ್ಯಾ, ಯತಃ, ದಕ್ಷಿಣೋರುಸ್ಥಿತಾ, ಅಸಿ, ಭಾಗಃ, ಹಿ, ದಕ್ಷಃ, ದುಹಿತುಃ, ಸ್ನುಷಾಯಾಃ, ಭಾರ್ಯಾಭಾಗಃ, ವಾಮಃ, ಇತಿ, ಪ್ರಸಿದ್ಧಃ.

**ಅರ್ಥ** :- **(ಹೇ ಗಂಗೇ)** ಎಲೈ ಗಂಗೆಯೇ **ಯತಃ** ಯಾವ ಕಾರಣದಿಂದ **ಮೇ** ನನ್ನ **ದಕ್ಷಿಣೋರುಸ್ಥಿತಾ** ಬಲ ತೊಡೆಯ ಮೇಲೆ ಕುಳಿತವಳು **ಅಸಿ** ಆಗಿದ್ದೀಯೋ **(ಅತಃ)** ಆದ್ದರಿಂದಲೇ **ಮೇ** ನನ್ನ **ಸುತಸ್ಯ** ಮಗನ **ಭಾರ್ಯಾ** ಹೆಂಡತಿಯು **ಭವ** ಆಗು. **ಇತಿ** ಈ ರೀತಿಯಾಗಿ **ತೇನ ಏವ** ಆ ಪ್ರತೀಪನಿಂದಲೇ **ಉಕ್ತಾ** ಹೇಳಲ್ಪಟ್ಟಳು. **ಹಿ** ಏಕೆಂದರೆ **ದಕ್ಷಃ** ದಕ್ಷಿಣದ **ಭಾಗಃ** ಭಾಗವು **ದುಹಿತುಃ** ಮಗಳಿಗೆ **(ವಾ)** ಅಥವಾ **ಸ್ನುಷಾಯಾಃ** ಸೊಸೆಗೆ ಸಂಬಂಧಿಸಿದ್ದು **ವಾಮಃ** ಎಡಗಡೆಯದ್ದು **ಭಾರ್ಯಾಭಾಗಃ** ಹೆಂಡತಿಯ ಭಾಗವು **ಇತಿ** ಎಂದು **ಪ್ರಸಿದ್ಧಃ** ಪ್ರಸಿದ್ಧವಾಗಿದೆಯಷ್ಟೇ.

**ತಾತ್ಪರ್ಯ** :- ತನ್ನ ಬಲತೊಡೆಯ ಮೇಲೆ ಬಂದು ಕುಳಿತ ಗಂಗೆಗೆ ಪ್ರತೀಪನು ಹೇಳುತ್ತಾನೆ- 'ಎಲೈ ಗಂಗೆಯೇ ನೀನು ನನ್ನ ಬಲತೊಡೆಯ ಮೇಲೆ ಕುಳಿತಿರುವೆಯಾದ್ದರಿಂದ ನನ್ನ ಮಗನಿಗೆ ಹೆಂಡತಿಯಾಗು' ಎಂದು

ಏಕೆಂದರೆ ಬಲಭಾಗವು ಮಗಳ ಅಥವಾ ಸೊಸೆಯ ಸ್ಥಾನ. ಎಡಭಾಗವು ಹೆಂಡತಿಯ ಸ್ಥಾನ ಎಂಬ ವಿಚಾರವು ಪ್ರಸಿದ್ಧವಾದದ್ದಷ್ಟೇ.

**ಉವಾಚ ಸಾ ತಂ ನ ತು ಮಾಂ ಸುತಸ್ತೇ**
**ಕಾऽಸೀತಿ ಪೃಚ್ಛೇನ್ನ ತು ಮಾಂ ನಿವಾರಯೇತ್ ।**
**ಅಯೋಗ್ಯಕರ್ತ್ರೀಮಪಿ ಕಾರಣಂ ಚ**
**ಮತ್ಕರ್ಮಣೋ ನೈವ ಪೃಚ್ಛೇತ್ ಕದಾಚಿತ್ ॥ ೩೪ ॥**

ಪದಚ್ಛೇದ :- ಉವಾಚ, ಸಾ, ತಂ, ನ, ತು, ಮಾಂ, ಸುತಃ, ತೇ, ಕಾ, ಅಸಿ, ಇತಿ, ಪೃಚ್ಛೇತ್, ನ, ತು, ಮಾಂ, ನಿವಾರಯೇತ್, ಅಯೋಗ್ಯಕರ್ತ್ರೀಂ, ಅಪಿ, ಕಾರಣಂ, ಚ, ಮತ್ಕರ್ಮಣಃ, ನ, ಏವ, ಪೃಚ್ಛೇತ್, ಕದಾಚಿತ್.

**ಅರ್ಥ** :- **ಸಾ ತು** ಆ ಗಂಗೆಯಾದರೂ **ತಂ** ಆ ಪ್ರತೀಪನನ್ನು ಕುರಿತು **ಉವಾಚ** ಹೇಳಿದಳು. **ತೇ** ನಿನ್ನ **ಸುತಃ** ಮಗನು **ಮಾಂ** ನನ್ನನ್ನು **ಕಾ** ಯಾರು **ಅಸಿ** ಆಗಿದ್ದೀಯ **ಇತಿ** ಎಂದು **ನ ಪೃಚ್ಛೇತ್** ಪ್ರಶ್ನಿಸಬಾರದು **ಮಾಂ ತು** ನನ್ನನ್ನಾದರೂ **ಅಯೋಗ್ಯಕರ್ತ್ರೀಂ ಅಪಿ** ಅಯೋಗ್ಯ ಕೆಲಸಮಾಡುವವಳಾದರೂ **ನ ನಿವಾರಯೇತ್** ತಡೆಯಬಾರದು **ಕದಾಚಿತ್** ಯಾವಾಗಲೂ **ಮತ್ಕರ್ಮಣಃ ಚ** ನನ್ನ ಕೆಲಸಕ್ಕೆ ಕೂಡ **ಕಾರಣಂ** ಕಾರಣವನ್ನು **ನ ಪೃಚ್ಛೇತ್ ಏವ** ಕೇಳಲೇ ಬಾರದು.

**ತಾತ್ಪರ್ಯ** :- ಶಂತನುವು ಹೇಳಿದ ನಂತರ ಆ ಶಂತನುವಿಗೆ ಗಂಗೆಯು ಹೇಳುತ್ತಾಳೆ- 'ನಾನು ನಿನ್ನ ಮಗನನ್ನು ಮದುವೆಯಾಗುತ್ತೇನೆ. ಆದರೆ ಅವನು ನನ್ನನ್ನು ನೀನು ಯಾರೆಂದು ಕೇಳಬಾರದು ನಾನು ಅಯೋಗ್ಯ ಕೆಲಸಗಳನ್ನು ಮಾಡುತ್ತಿದ್ದರೂ ನನ್ನನ್ನು ಅದರಿಂದ ನಿವಾರಿಸಬಾರದು, ಎಂದಿಗೂ ನನ್ನ ಕೆಲಸಗಳಿಗೆ ಕಾರಣವನ್ನು ಕೇಳಬಾರದು'.

**ಯದಾ ತ್ರಯಾಣಾಮಪಿ ಚೈಕಮೇಷಃ ಕರೋತಿ ಗಚ್ಛೇಯಮಹಂ ವಿಸೃಜ್ಯ ।**
**ತದಾ ತ್ವದೀಯಂ ಸುತಮಿತ್ಯುದೀರಿತೇ ತಥೇತಿ ರಾಜಾऽಪ್ಯವದತ್ ಪ್ರತೀಪಃ**
**॥ ೩೫ ॥**

ಪದಚ್ಛೇದ :-ಯದಾ ತ್ರಯಾಣಾಂ, ಅಪಿ, ಚ, ಏಕಂ, ಏಷಃ, ಕರೋತಿ, ಗಚ್ಛೇಯಂ, ಅಹಂ, ವಿಸೃಜ್ಯ, ತದಾ, ತ್ವದೀಯಂ, ಸುತಂ, ಇತಿ, ಉದೀರಿತೇ, ತಥಾ, ಇತಿ, ರಾಜಾ, ಅಪಿ, ಅವದತ್, ಪ್ರತೀಪಃ.

**ತು** ಪ್ರತೀಪನನ್ನು ಕಾಮಿಸದಿದ್ದರೂ **ಕಾಮಿನೀವತ್** ಕಾಮಿಸಿದವಳಂತೆ **ತತ್ಪುತ್ರಭಾರ್ಯಾ** ಆ ಪ್ರತೀಪನ ಮಗನ ಹೆಂಡತಿಯು **ಭವಿತುಂ** ಆಗಲು **ವಿಡಂಬಾತ್** ನಾಟಕದಿಂದ **ಪ್ರತೀಪಸ್ಯ** ಪ್ರತೀಪರಾಜನ **ದಕ್ಷಿಣೋರುಂ** ಬಲತೊಡೆಯನ್ನು **ಸಮಾಶ್ರಿತಾ ಹಿ** ಆಶ್ರಯಿಸಿದಳಷ್ಟೇ.

**ತಾತ್ಪರ್ಯ** :- ಮಕ್ಕಳನ್ನು ಕೊಲ್ಲಲು ವಿಘ್ನವಾಗದಿರಲೆಂದು ಗಂಗೆಯು ಮೊದಲು ಪ್ರತೀಪನನ್ನು ಭೇಟಿಯಾಗುತ್ತಾಳೆ. ಪ್ರತೀಪನನ್ನು ಕಾಮಿಸದಿದ್ದರೂ ಅವನ ಮಗನನ್ನು ಮದುವೆಯಾಗುವ ಉದ್ದೇಶದಿಂದ ಅವನನ್ನು ಕಾಮಿಸಿದವ ಳಂತೆ ನಟಿಸುತ್ತಾ ಅವನ ಬಲ ತೊಡೆಯ ಮೇಲೆ ಕೂರುತ್ತಾಳೆ.

**ತೇನೈವ ಚೋಕ್ತಾ ಭವ ಮೇ ಸುತಸ್ಯ**
**ಭಾರ್ಯಾ ಯತೋ ದಕ್ಷಿಣೋರುಸ್ಥಿತಾಸಿ ।**
**ಭಾಗೋ ಹಿ ದಕ್ಷೋ ದುಹಿತುಃ ಸ್ನುಷಾಯಾ**
**ಭಾರ್ಯಾಭಾಗೋ ವಾಮ ಇತಿ ಪ್ರಸಿದ್ಧಃ ॥ ೩೩ ॥**

ಪದಚ್ಛೇದ :– ತೇನ, ಏವ, ಚ, ಉಕ್ತಾ, ಭವ, ಮೇ, ಸುತಸ್ಯ, ಭಾರ್ಯಾ, ಯತಃ, ದಕ್ಷಿಣೋರುಸ್ಥಿತಾ, ಅಸಿ, ಭಾಗಃ, ಹಿ, ದಕ್ಷಃ, ದುಹಿತುಃ, ಸ್ನುಷಾಯಾಃ, ಭಾರ್ಯಾಭಾಗಃ, ವಾಮಃ, ಇತಿ, ಪ್ರಸಿದ್ಧಃ.

**ಅರ್ಥ** :- **(ಹೇ ಗಂಗೇ)** ಎಲೈ ಗಂಗೆಯೇ **ಯತಃ** ಯಾವ ಕಾರಣದಿಂದ **ಮೇ** ನನ್ನ **ದಕ್ಷಿಣೋರುಸ್ಥಿತಾ** ಬಲ ತೊಡೆಯ ಮೇಲೆ ಕುಳಿತವಳು **ಅಸಿ** ಆಗಿದ್ದೀಯೋ **(ಅತಃ)** ಆದ್ದರಿಂದಲೇ **ಮೇ** ನನ್ನ **ಸುತಸ್ಯ** ಮಗನ **ಭಾರ್ಯಾ** ಹೆಂಡತಿಯು **ಭವ** ಆಗು. **ಇತಿ** ಈ ರೀತಿಯಾಗಿ **ತೇನ ಏವ** ಆ ಪ್ರತೀಪನಿಂದಲೇ **ಉಕ್ತಾ** ಹೇಳಲ್ಪಟ್ಟಳು. **ಹಿ** ಏಕೆಂದರೆ **ದಕ್ಷಃ** ದಕ್ಷಿಣದ **ಭಾಗಃ** ಭಾಗವು **ದುಹಿತುಃ** ಮಗಳಿಗೆ **(ವಾ)** ಅಥವಾ **ಸ್ನುಷಾಯಾಃ** ಸೊಸೆಗೆ ಸಂಬಂಧಿಸಿದ್ದು **ವಾಮಃ** ಎಡಗಡೆಯದ್ದು **ಭಾರ್ಯಾಭಾಗಃ** ಹೆಂಡತಿಯ ಭಾಗವು **ಇತಿ** ಎಂದು **ಪ್ರಸಿದ್ಧಃ** ಪ್ರಸಿದ್ಧವಾಗಿದೆಯಷ್ಟೇ.

**ತಾತ್ಪರ್ಯ** :- ತನ್ನ ಬಲತೊಡೆಯ ಮೇಲೆ ಬಂದು ಕುಳಿತ ಗಂಗೆಗೆ ಪ್ರತೀಪನು ಹೇಳುತ್ತಾನೆ– 'ಎಲೈ ಗಂಗೆಯೇ ನೀನು ನನ್ನ ಬಲತೊಡೆಯ ಮೇಲೆ ಕುಳಿತಿರುವೆಯಾದ್ದರಿಂದ ನನ್ನ ಮಗನಿಗೆ ಹೆಂಡತಿಯಾಗು' ಎಂದು

ಏಕೆಂದರೆ ಬಲಭಾಗವು ಮಗಳ ಅಥವಾ ಸೊಸೆಯ ಸ್ಥಾನ. ಎಡಭಾಗವು ಹೆಂಡತಿಯ ಸ್ಥಾನ ಎಂಬ ವಿಚಾರವು ಪ್ರಸಿದ್ಧವಾದದ್ದಷ್ಟೇ.

**ಉವಾಚ ಸಾ ತಂ ನ ತು ಮಾಂ ಸುತಸ್ತೇ**
**ಕಾಽಸೀತಿ ಪೃಚ್ಛೇನ್ನ ತು ಮಾಂ ನಿವಾರಯೇತ್ ।**
**ಅಯೋಗ್ಯಕರ್ತ್ರೀಮಪಿ ಕಾರಣಂ ಚ**
**ಮತ್ಕರ್ಮಣೋ ನೈವ ಪೃಚ್ಛೇತ್ ಕದಾಚಿತ್ ॥ ೩೪ ॥**

ಪದಚ್ಛೇದ :- ಉವಾಚ, ಸಾ, ತಂ, ನ, ತು, ಮಾಂ, ಸುತಃ, ತೇ, ಕಾ, ಅಸಿ, ಇತಿ, ಪೃಚ್ಛೇತ್, ನ, ತು, ಮಾಂ, ನಿವಾರಯೇತ್, ಅಯೋಗ್ಯಕರ್ತ್ರೀಂ, ಅಪಿ, ಕಾರಣಂ, ಚ, ಮತ್ಕರ್ಮಣಃ, ನ, ಏವ, ಪೃಚ್ಛೇತ್, ಕದಾಚಿತ್.

**ಅರ್ಥ** :- **ಸಾ ತು** ಆ ಗಂಗೆಯಾದರೂ **ತಂ** ಆ ಪ್ರತೀಪನನ್ನು ಕುರಿತು **ಉವಾಚ** ಹೇಳಿದಳು. **ತೇ** ನಿನ್ನ **ಸುತಃ** ಮಗನು **ಮಾಂ** ನನ್ನನ್ನು **ಕಾ** ಯಾರು **ಅಸಿ** ಆಗಿದ್ದೀಯ **ಇತಿ** ಎಂದು **ನ ಪೃಚ್ಛೇತ್** ಪ್ರಶ್ನಿಸಬಾರದು **ಮಾಂ ತು** ನನ್ನನ್ನಾದರೂ **ಅಯೋಗ್ಯಕರ್ತ್ರೀಂ ಅಪಿ** ಅಯೋಗ್ಯ ಕೆಲಸಮಾಡುವ ವಳಾದರೂ **ನ ನಿವಾರಯೇತ್** ತಡೆಯಬಾರದು **ಕದಾಚಿತ್** ಯಾವಾಗಲೂ **ಮತ್ಕರ್ಮಣಃ ಚ** ನನ್ನ ಕೆಲಸಕ್ಕೆ ಕೂಡ **ಕಾರಣಂ** ಕಾರಣವನ್ನು **ನ ಪೃಚ್ಛೇತ್ ಏವ** ಕೇಳಲೇ ಬಾರದು.

**ತಾತ್ಪರ್ಯ** :- ಶಂತನುವು ಹೇಳಿದ ನಂತರ ಆ ಶಂತನುವಿಗೆ ಗಂಗೆಯು ಹೇಳುತ್ತಾಳೆ- 'ನಾನು ನಿನ್ನ ಮಗನನ್ನು ಮದುವೆಯಾಗುತ್ತೇನೆ. ಆದರೆ ಅವನು ನನ್ನನ್ನು ನೀನು ಯಾರೆಂದು ಕೇಳಬಾರದು ನಾನು ಅಯೋಗ್ಯ ಕೆಲಸಗಳನ್ನು ಮಾಡುತ್ತಿದ್ದರೂ ನನ್ನನ್ನು ಅದರಿಂದ ನಿವಾರಿಸಬಾರದು, ಎಂದಿಗೂ ನನ್ನ ಕೆಲಸಗಳಿಗೆ ಕಾರಣವನ್ನು ಕೇಳಬಾರದು'.

**ಯದಾ ತ್ರಯಾಣಾಮಪಿ ಚೈಕಮೇಷಃ ಕರೋತಿ ಗಚ್ಛೇಯಮಹಂ ವಿಸೃಜ್ಯ ।**
**ತದಾ ತ್ವದೀಯಂ ಸುತಮಿತ್ಯುದೀರಿತೇ ತಥೇತಿ ರಾಜಾಽಪ್ಯವದತ್ ಪ್ರತೀಪಃ ॥ ೩೫ ॥**

ಪದಚ್ಛೇದ :- ಯದಾ ತ್ರಯಾಣಾಂ, ಅಪಿ, ಚ, ಏಕಂ, ಏಷಃ, ಕರೋತಿ, ಗಚ್ಛೇಯಂ, ಅಹಂ, ವಿಸೃಜ್ಯ, ತದಾ, ತ್ವದೀಯಂ, ಸುತಂ, ಇತಿ, ಉದೀರಿತೇ, ತಥಾ, ಇತಿ, ರಾಜಾ, ಅಪಿ, ಅವದತ್, ಪ್ರತೀಪಃ.

**ಅರ್ಥ** :- **ಯದಾ** ಯಾವಾಗ **ತ್ರಯಾಣಾಂ** ಈ ಮೂರರಲ್ಲಿ **ಏಕಂ ಅಪಿ** ಒಂದನ್ನಾದರೂ **ಏಷಃ** ಈ ಶಂತನುವು, **ಕರೋತಿ** ಮಾಡುತ್ತಾನೋ **ತದಾ** ಆಗ **ಅಹಂ** ನಾನು **ತ್ವದೀಯಂ** ನಿನ್ನವನಾದ **ಸುತಂ** ಮಗನನ್ನು **ವಿಸೃಜ್ಯ** ತ್ಯಜಿಸಿ **ಗಚ್ಛೇಯಂ** ಹೋಗುತ್ತೇನೆ **ಇತಿ** ಎಂದು **ಉದೀರಿತೇ** ಗಂಗೆಯು ಹೇಳುತ್ತಿರಲು **ರಾಜಾ** ರಾಜನಾದ **ಪ್ರತೀಪಃ ಅಪಿ** ಪ್ರತೀಪನೂ ಕೂಡ **ತಥಾ** ಹಾಗೆಯೇ ಆಗಲಿ **ಇತಿ** ಎಂದು **ಅವದತ್** ಹೇಳಿದನು.

**ತಾತ್ಪರ್ಯ** :- 'ಯಾವಾಗ ನಿನ್ನ ಮಗನು ಈ ಮೂರರಲ್ಲಿ ಒಂದನ್ನಾದರೂ ಮಾಡುತ್ತಾನೋ ಆಗಲೇ ಅವನನ್ನು ಬಿಟ್ಟು ನಾನು ಹೊರಟು ಹೋಗುತ್ತೇನೆ' ಎಂದು ಗಂಗೆಯು ಹೇಳಿದಾಗ ಪ್ರತೀಪರಾಜನೂ ಕೂಡ ಹಾಗೆಯೇ ಆಗಲಿ ಎಂದು ಹೇಳಿದನು.

**ತಥೈವ ಪುತ್ರಾಯ ಚ ತೇನ ತದ್ ವಚೋ**
**ವಧೂಕ್ತಮುಕ್ತಂ ವಚನಾದ್ ದ್ಯುನದ್ಯಾಃ ।**
**ಕನೀಯಸೇ ಸಾ ಹ್ಯವದತ್ ಸುತಸ್ತೇ**
**ನಾನ್ಯಃ ಪತಿಃ ಶಂತನುರೇವ ಮೇ ವೃತಃ ॥ ೩೬ ॥**

ಪದಚ್ಛೇದ :– ತಥಾ, ಏವ, ಪುತ್ರಾಯ, ಚ, ತೇನ, ತತ್, ವಚಃ, ವಧೂಕ್ತಂ, ಉಕ್ತಂ, ವಚನಾತ್, ದ್ಯುನದ್ಯಾಃ, ಕನೀಯಸೇ, ಸಾ, ಹಿ, ಅವದತ್, ಸುತಃ, ತೇ, ನ, ಅನ್ಯಃ, ಪತಿಃ, ಶಂತನುಃ, ಏವ, ಮೇ, ವೃತಃ.

**ಅರ್ಥ** :- **ದ್ಯುನದ್ಯಾಃ** ದೇವನದಿಯಾದ ಗಂಗೆಯ **ವಚನಾತ್** ಮಾತಿನಿಂದ **ತೇನ** ಆ ಪ್ರತೀಪನಿಂದ **ವಧೂಕ್ತಂ** ವಧುವಾದ ಗಂಗೆಯಿಂದ ಹೇಳಲ್ಪಟ್ಟ ವಿಷಯವು **ಕನೀಯಸೇ** ಚಿಕ್ಕವನಾದ **ಪುತ್ರಾಯ** ಮಗನಾದ ಶಂತನುವಿಗೆ **ತತ್ ವಚಃ** ಆ ಮಾತುಗಳು **ತಥಾ ಏವ** ಹೇಗೆ ಹೇಳಿದ್ದಳೋ ಹಾಗೆಯೇ **ಉಕ್ತಂ ಚ** ಹೇಳಲ್ಪಟ್ಟಿತು ಕೂಡ. **ಸಾ ಹಿ** ಆ ಗಂಗೆಯಾದರೂ **ತೇ** ನಿನ್ನ **ಸುತಃ** ಮಗನಾದ **ಶಂತನುಃ ಏವ** ಶಂತನುವೇ **ಪತಿಃ** ಗಂಡನಾಗಿ **ಮೇ** ನನ್ನಿಂದ **ವೃತಃ** ಆರಿಸಲ್ಪಟ್ಟಿದ್ದಾನೆ **ನ ಅನ್ಯಃ** ಬೇರೆಯವನಲ್ಲ **ಇತಿ** ಎಂದು **ಅವದತ್** ಹೇಳಿದ್ದಳು.

**ತಾತ್ಪರ್ಯ** :- ದೇವನದಿಯಾದ ಗಂಗೆಯು ಶಂತನುವಿಗೆ ಈ ವಿಷಯವನ್ನು ತಿಳಿಸುವಂತೆ ಪ್ರತೀಪನಿಗೆ ಹೇಳಿದಳು. ಪ್ರತೀಪನು ಅವಳು ಹೇಗೆ ಹೇಳಿದಳೋ ಅದರಂತೆಯೇ ಎಲ್ಲವನ್ನೂ ಚಿಕ್ಕ ಮಗನಾದ ಶಂತನುವಿಗೆ ಹೇಳಿದನು. ಚಿಕ್ಕವನಾದ ಶಂತನುವಿಗೇ ಹೇಳಲು ಕಾರಣವೇನೆಂದರೆ ಗಂಗೆಯು ಶಂತನು ವನ್ನೇ ಗಂಡನನ್ನಾಗಿ ನಾನು ವರಿಸಿದ್ದೇನೆ ಬೇರೆಯವರನ್ನಲ್ಲ ಎಂದು ಹೇಳಿದ್ದಳು.

**ತತಸ್ತು ಸಾ ಶಂತನುತೋಽಷ್ಟಪುತ್ರಾನ್**
**ಅವಾಪ್ಯ ಸಪ್ತ ನ್ಯಹನತ್ ತಥಾಽಷ್ಟಮಮ್ ।**
**ಗಂತುಂ ತತೋ ಮತಿಮಾಧಾಯ ಹಂತುಮ್**
**ಇವೋದ್ಯೋಗಂ ಸಾ ಹಿ ಮೃಷಾ ಚಕಾರ ॥ ೩೭ ॥**

ಪದಚ್ಛೇದ :- ತತಃ, ತು, ಸಾ, ಶಂತನುತಃ **ಅಷ್ಟಪುತ್ರಾನ್**, **ಅವಾಪ್ಯ**, **ಸಪ್ತ**, **ನ್ಯಹನತ್**, **ತಥಾ**, **ಅಷ್ಟಮಂ**, **ಗಂತುಂ**, **ತತಃ**, **ಮತಿಂ**, **ಆಧಾಯ**, **ಹಂತುಂ**, **ಇವ**, **ಉದ್ಯೋಗಂ**, ಸಾ, ಹಿ, ಮೃಷಾ, ಚಕಾರ.

**ಅರ್ಥ** :- **ತತಃ ತು** ಆ ನಂತರವಾದರೂ **ಸಾ** ಆ ಗಂಗೆಯು **ಶಂತನುತಃ** ಶಂತನುವಿನಿಂದ **ಅಷ್ಟಪುತ್ರಾನ್** ಎಂಟು ಮಂದಿ ಮಕಳನ್ನು **ಅವಾಪ್ಯ** ಪಡೆದು **ಸಪ್ತ** ಏಳು ಮಕ್ಕಳನ್ನು **ನ್ಯಹನತ್** ಕೊಂದಳು. **ತಥಾ** ಹಾಗೆಯೇ **ತತಃ** ಅಲ್ಲಿಂದ **ಗಂತುಂ** ಹೊರಡಲು **ಮತಿಂ** ನಿಶ್ಚಯವನ್ನು **ಆಧಾಯ** ಮಾಡಿ **ಸಾ** ಆ ಗಂಗೆಯು **ಅಷ್ಟಮಂ** ಎಂಟನೆಯ ಮಗುವನ್ನು **ಹಂತುಂ** ಕೊಲ್ಲಲು **ಉದ್ಯೋಗಂ** **ಇವ** ಯತ್ನಮಾಡಿದವಳಂತೆ **ಮೃಷಾ ಹಿ** ಸುಮ್ಮನೇ **ಚಕಾರ** ಮಾಡಿದಳು.

**ತಾತ್ಪರ್ಯ** :- ಆ ನಂತರ ಗಂಗೆಯು ಶಂತನುವಿನಿಂದ ಎಂಟು ಮಕ್ಕಳನ್ನು ಪಡೆದಳು. ಮೊದಲ ಏಳು ಮಕ್ಕಳನ್ನೂ ಅವಳು ಕೊಂದಳು. ನಂತರ ಅಲ್ಲಿಂದ ಹೊರಡಲು ನಿಶ್ಚಯಿಸಿ ಎಂಟನೆಯ ಮಗುವನ್ನೂ ಕೊಲ್ಲಲು ಹೊರಟವಳಂತೆ ಸುಮ್ಮನೆ ಯತ್ನಿಸಿದಳು.

**ಅವಸ್ಥಿತಿರ್ನಾತಿಸುಖಾಯ ಮಾನುಷೇ**
**ಯತಃ ಸುರಾಣಾಮತ ಏವ ಗಂತುಮ್ ।**
**ಐಚ್ಛನ್ನ ತಸ್ಯಾ ಹಿ ಬಭೂವ ಮಾನುಷೋ**
**ದೇಹೋ ನರೋತ್ಥೋ ಹಿ ತಥಾಽಸ ಶಂತನೋಃ ॥ ೩೮ ॥**

ಪದಚ್ಛೇದ :- ಅವಸ್ಥಿತಿಃ, ನ, ಅತಿಸುಖಾಯ, ಮಾನುಷೇ, ಯತಃ, ಸುರಾಣಾಂ, ಅತಃ, ಏವ, ಗಂತುಂ, ಐಚ್ಛತ್, ನ, ತಸ್ಯಾಃ, ಹಿ, ಬಭೂವ, ಮಾನುಷಃ, ದೇಹಃ, ನರೋತ್ಥಃ, ಹಿ, ತಥಾ, ಆಸ, ಶಂತನೋಃ.

**ಅರ್ಥ** :- **ಯತಃ** ಯಾವ ಕಾರಣದಿಂದ **ಮಾನುಷೇ** ಮನುಷ್ಯರ ಲೋಕದಲ್ಲಿ ಅಥವಾ ಮನುಷ್ಯರ ಸಹವಾಸದಲ್ಲಿ **ಅವಸ್ಥಿತಿಃ** ಇರುವುದು **ಸುರಾಣಾಂ** ದೇವತೆಗಳಿಗೆ ನ **ಅತಿಸುಖಾಯ (ಭವತಿ)** ಹೆಚ್ಚು ಸುಖಕ್ಕಾಗುವುದಿಲ್ಲ. **ಅತಃ ಏವ** ಆದ್ದರಿಂದಲೇ ಸಾ ಆ ಗಂಗೆಯು **ಗಂತುಂ** ದೇವಲೋಕವನ್ನು ಕುರಿತು ಹೋಗಲು **ಐಚ್ಛತ್** ಇಚ್ಛಿಸಿದಳು. **ತಸ್ಯಾಃ** ಅವಳಿಗೆ **ಮಾನುಷಃ** ಮನುಷ್ಯರಿಗೆ ಸಂಬಂಧಿಸಿದ **ದೇಹಃ** ಶರೀರವು **ನ ಹಿ ಬಭೂವ** ಇರಲಿಲ್ಲವಷ್ಟೇ. **ತಥಾ** ಹಾಗೆಯೇ **ಶಂತನೋಃ ತು** ಶಂತನುವಿಗಾದರೂ **ನರೋತ್ಥಃ** ಮನುಷ್ಯವೀರ್ಯದಿಂದ ಹುಟ್ಟಿದ ದೇಹವು **ಆಸ** ಇದ್ದಿತು.

**ತಾತ್ಪರ್ಯ** :- ದೇವತೆಗಳಿಗೆ ಮನುಷ್ಯ ಒಡನಾಟದಲ್ಲಿರುವುದು ಹೆಚ್ಚು ಸುಖಕರವಲ್ಲ. ಆದ್ದರಿಂದಲೇ ಗಂಗೆಯೂ ದೇವಲೋಕಕ್ಕೆ ಹೊರಡಲು ಬಯಸಿದಳು. ಗಂಗೆಗೆ ಮನುಷ್ಯರ ದೇಹವಿರಲಿಲ್ಲ. ಆದರೆ ಶಂತನುವಿಗೆ ಮನುಷ್ಯವೀರ್ಯದಿಂದ ಹುಟ್ಟಿದ ದೇಹವಿತ್ತು.

**ತಾಂ ಪುತ್ರನಿಧನೋದ್ಯುಕ್ತಾಂ ನ್ಯವಾರಯತ ಶಂತನುಃ ।**
**ಕಾऽಸಿ ತ್ವಂ ಹೇತುನಾ ಕೇನ ಹಂಸಿ ಪುತ್ರಾನ್ ನೃಶಂಸವತ್ ॥ ೩೯ ॥**

ಪದಚ್ಛೇದ :- ತಾಂ, ಪುತ್ರನಿಧನೋದ್ಯುಕ್ತಾಂ, ನ್ಯವಾರಯತ, ಶಂತನುಃ, ಕಾ, ಅಸಿ, ತ್ವಂ, ಹೇತುನಾ, ಕೇನ, ಹಂಸಿ, ಪುತ್ರಾನ್, ನೃಶಂಸವತ್.

**ಅರ್ಥ** :- **ಪುತ್ರನಿಧನೋದ್ಯುಕ್ತಾಂ ಪುತ್ರ** ಎಂಟನೆಯಮಗನ, **ನಿಧನೇ** ಸಂಹಾರದಲ್ಲಿ, **ಉದ್ಯುಕ್ತಾಂ** ಪ್ರವೃತ್ತಳಾದ **ತಾಂ** ಆ ಗಂಗೆಯನ್ನು **ಶಂತನುಃ** ಶಂತನುವು **ನ್ಯವಾರಯತ** ತಡೆದನು. **ತ್ವಂ** ನೀನು **ಕಾ** ಯಾರು **ಅಸಿ** ಆಗಿರುವೆ **ಕೇನ** ಯಾವ **ಹೇತುನಾ** ಕಾರಣದಿಂದ **ನೃಶಂಸವತ್** ರಾಕ್ಷಸಿಯಂತೆ **ಪುತ್ರಾನ್** ಮಕ್ಕಳನ್ನು **ಹಂಸಿ** ಕೊಲ್ಲುವೆ.

**ತಾತ್ಪರ್ಯ** :- ಎಂಟನೆಯ ಮಗುವನ್ನೂ ಕೊಲ್ಲಲು ಹೊರಟ ಗಂಗೆಯನ್ನು ಶಂತನುವು ತಡೆದು ಕೇಳುತ್ತಾನೆ- 'ನೀನು ಯಾರು? ಯಾವ ಕಾರಣದಿಂದ ಹೀಗೆ ರಾಕ್ಷಸಿಯಂತೆ ಮಕ್ಕಳನ್ನು ಕೊಲ್ಲುತ್ತಿರುವೆ'.

ರೂಪಂ ಸುರವರಸ್ತ್ರೀಣಾಂ ತವ ತೇನ ನ ಪಾತಕಮ್ ।
ಭವೇತ್ ಕರ್ಮ ತ್ವದೀಯಂ ತನ್ಮಹತ್ ಕಾರಣಮತ್ರ ಹಿ ॥ ೪೦ ॥

ಪದಚ್ಛೇದ :- ರೂಪಂ, ಸುರವರಸ್ತ್ರೀಣಾಂ, ತವ, ತೇನ, ನ, ಪಾತಕಂ, ಭವೇತ್, ಕರ್ಮ, ತ್ವದೀಯಂ, ತತ್, ಮಹತ್, ಕಾರಣಂ, ಅತ್ರ, ಹಿ.

**ಅರ್ಥ** :- **ತವ** ನಿನ್ನದು **ಸುರವರಸ್ತ್ರೀಣಾಂ** ಶ್ರೇಷ್ಠ ದೇವತಾಸ್ತ್ರೀಯರ **ರೂಪಂ** ರೂಪವಾಗಿದೆ. **ತೇನ** ನೀನು ದೇವತೆಯಂತಿರುವುದರಿಂದ **ತ್ವದೀಯಂ** ಪುತ್ರವಧಾರೂಪವಾದ ನಿನ್ನ **ಕರ್ಮ** ಕರ್ಮವು **ಪಾತಕಮ್** ಪಾಪಕರವಾದದ್ದು **ನ ಭವೇತ್ ಹಿ** ಆಗುವುದಿಲ್ಲವಷ್ಟೇ. **ತತ್** ಆದ್ದರಿಂದ **ಅತ್ರ** ಈ ವಿಷಯದಲ್ಲಿ **ಮಹತ್** ದೊಡ್ಡದಾದ **ಕಾರಣಂ** ಕಾರಣವು **(ಅಸ್ತಿ)** ಇದೆ.

**ತಾತ್ಪರ್ಯ** :- ಉತ್ತಮಳಾದ ದೇವತೆಯಂತೆ ನಿನ್ನ ರೂಪವಿದೆ. ಹೀಗೆ ದೇವತೆಯಂತಿರುವ ನೀನು ಮಾಡುತ್ತಿರುವ ಪುತ್ರವಧಾರೂಪವಾದ ಕಾರ್ಯವು ಪಾಪಕರವಾಗಲು ಸಾಧ್ಯವಿಲ್ಲ. ಆದ್ದರಿಂದ ಈ ವಿಷಯದಲ್ಲಿ ದೊಡ್ಡದಾದ ಕಾರಣವೇ ಇರಬೇಕು.

ತತ್ ಕಾರಣಂ ವದ ಶುಭೇ ಯದಿ ಮಚ್ಛ್ರೋತ್ರಮರ್ಹತಿ ।
ಇತೀರಿತಾಽವದತ್ ಸರ್ವಂ ಪ್ರಯಯೌ ಚ ಸುರಾಪಗಾ ॥ ೪೧ ॥

ಪದಚ್ಛೇದ :- ತತ್, ಕಾರಣಂ, ವದ, ಶುಭೇ, ಯದಿ, ಮಚ್ಛ್ರೋತುಂ, ಅರ್ಹತಿ, ಇತಿ, ಈರಿತಾ, ಅವದತ್, ಸರ್ವಂ, ಪ್ರಯಯೌ, ಚ, ಸುರಾಪಗಾ.

**ಅರ್ಥ** :- **ಶುಭೇ** ಮಂಗಳಸ್ವರೂಪಳೇ **ಯದಿ** ಒಂದು ವೇಳೆ **ಮಚ್ಛ್ರೋತ್ರಂ** ನನ್ನ ಕಿವಿಯು **ಅರ್ಹತಿ** ಕೇಳಲು ಅರ್ಹವಾಗಿದ್ದರೆ **ತತ್** ಆ **ಕಾರಣಂ** ಕಾರಣವನ್ನು **ವದ** ಹೇಳು. **ಇತಿ** ಈ ರೀತಿಯಾಗಿ **ಈರಿತಾ** ಹೇಳಲ್ಪಟ್ಟ **ಸುರಾಪಗಾ** ದೇವನದಿಯಾದ ಗಂಗೆಯು **ಸರ್ವಂ** ಎಲ್ಲವನ್ನೂ **ಅವದತ್** ಹೇಳಿದಳು **ಚ** ಮತ್ತು **ಪ್ರಯಯೌ** ದೇವಲೋಕಕ್ಕೆ ಹೊರಟಳು.

**ತಾತ್ಪರ್ಯ** :- 'ಮಂಗಳಸ್ವರೂಪಳೇ! ಒಂದು ವೇಳೆ ನನ್ನ ಕಿವಿಗಳು ಆ ಕಾರಣವನ್ನು ಕೇಳಲು ಯೋಗ್ಯವಾಗಿದ್ದರೆ ನನಗೆ ಆ ಕಾರಣವನ್ನು ಹೇಳು'. ಈ ರೀತಿಯಾಗಿ ಶಂತನುವು ಗಂಗೆಗೆ ಹೇಳಿದ. ನಂತರ ಗಂಗೆಯು ತಾನು ಗಂಗೆ,

ತನ್ನ ಮಕ್ಕಳು ವಸುಗಳು, ಅವರಿಗೆ ಶಾಪವಿತ್ತು ಇತ್ಯಾದಿ ಎಲ್ಲವನ್ನೂ ಹೇಳಿ ದೇವಲೋಕಕ್ಕೆ ಹೋದಳು.

**ನ ಧರ್ಮೋ ದೇವತಾನಾಂ ಹಿ ಜ್ಞಾತವಾಸಶ್ಚಿರಂ ನೃಷು ।**
**ಕಾರಣಾದೇವ ಹಿ ಸುರಾ ನೃಷು ವಾಸಂ ಪ್ರಕುರ್ವತೇ ॥**
**ಕಾರಣಾಪಗಮೇ ಯಾಂತಿ ಧರ್ಮೋಽಪ್ಯೇಷಾಂ ತಥಾವಿಧಃ ॥ ೪೨ ॥**

ಪದಚ್ಛೇದ :– ನ, ಧರ್ಮಃ, ದೇವತಾನಾಂ, ಹಿ, ಜ್ಞಾತವಾಸಃ, ಚಿರಂ, ನೃಷು, ಕಾರಣಾತ್, ಏವ, ಹಿ, ಸುರಾಃ, ನೃಷು, ವಾಸಂ, ಪ್ರಕುರ್ವತೇ. ಕಾರಣಾಪಗಮೇ, ಯಾಂತಿ, ಧರ್ಮಃ, ಅಪಿ, ಏಷಾಂ, ತಥಾವಿಧಃ.

**ಅರ್ಥ** :- **ನೃಷು** ಮನುಷ್ಯರ ಮಧ್ಯದಲ್ಲಿ **ಚಿರಂ** ಬಹುಕಾಲ **ಜ್ಞಾತವಾಸಃ** ತಮ್ಮ ಸ್ವರೂಪವು ಜಗತ್ತಿಗೆ ತಿಳಿದಾಗ ವಾಸವು **ದೇವತಾನಾಂ** ದೇವತೆಗಳ **ಧರ್ಮಃ** ಧರ್ಮವು **ನ ಹಿ** ಅಲ್ಲವಷ್ಟೇ. **ಕಾರಣಾದೇವ ಹಿ** ಕಾರಣವಿದ್ದಾಗ ಮಾತ್ರ **ಸುರಾಃ** ದೇವತೆಗಳು **ನೃಷು** ಮನುಷ್ಯರಲ್ಲಿ **ವಾಸಂ** ವಾಸವನ್ನು **ಪ್ರಕುರ್ವತೇ** ಮಾಡುತ್ತಾರೆ **ಕಾರಣಾಪಗಮೇ** ಆ ಕಾರಣವು ಮುಗಿದಾಗ **ಯಾಂತಿ** ಹೊರಟು ಹೋಗುತ್ತಾರೆ **ತಥಾವಿಧಃ ಅಪಿ** ಆ ರೀತಿಯಾದದ್ದೂ ಕೂಡ **ಏಷಾಂ** ಈ ದೇವತೆಗಳ **ಧರ್ಮಃ** ಧರ್ಮವು.

**ತಾತ್ಪರ್ಯ** :- ದೇವತೆಗಳು ತಮ್ಮ ಸ್ವರೂಪವು ಜಗತ್ತಿಗೆ ತಿಳಿದಾಗ ಹೆಚ್ಚುಕಾಲ ಮನುಷ್ಯರೊಂದಿಗೆ ಇರುವುದಿಲ್ಲ. ಇದು ದೇವತೆಗಳ ಧರ್ಮವಾಗಿದೆ. ಯಾವುದೋ ಒಂದು ಕಾರಣದಿಂದ ಅವರು ಮನುಷ್ಯ ರೊಂದಿಗೆ ವಾಸಿಸುತ್ತಾರೆ. ಆ ಕಾರಣವು ಪೂರ್ಣವಾದಾಗ ದೇವಲೋಕಕ್ಕೆ ಹೊರಟು ಹೋಗುತ್ತಾರೆ. ಇದೂ ಕೂಡ ದೇವತೆಗಳ ಧರ್ಮವೇ ಆಗಿದೆ.

**ಅದೃಶ್ಯತ್ವಮಸಂಸ್ಪರ್ಶೋ ಹ್ಯಸಂಭಾಷಣಮೇವ ಚ ।**
**ಸುರೈರಪಿ ನೃಜಾತೈಸ್ತು ಗುಹ್ಯಧರ್ಮೋ ದಿವೌಕಸಾಮ್ ॥ ೪೩ ॥**

ಪದಚ್ಛೇದ :– ಅದೃಶ್ಯತ್ವಂ, ಅಸಂಸ್ಪರ್ಶಃ, ಹಿ, ಅಸಂಭಾಷಣಂ, ಏವ, ಚ, ಸುರೈಃ, ಅಪಿ, ನೃಜಾತೈಃ, ತು, ಗುಹ್ಯಧರ್ಮಃ, ದಿವೌಕಸಾಮ್.

**ಅರ್ಥ** :- **ನೃಜಾತೈಃ** ಮನುಷ್ಯರಲ್ಲಿ ಹುಟ್ಟಿದ **ಸುರೈಃ ಅಪಿ** ದೇವತೆ ಗಳಿಂದಲೂ ಕೂಡ **ಅದೃಶ್ಯತ್ವಂ** ಕಣ್ಣಿಗೆ ಕಾಣಿಸಿಕೊಳ್ಳಲ್ಪಡದಿರುವುದು

**ಅಸಂಸ್ಪರ್ಶಃ** ಮುಟ್ಟಲು ಸಿಗದಿರುವುದು **ಅಸಂಭಾಷಣಂ ಏವ ಚ** ಮಾತಿಗೆ ಸಿಗದಿರುವುದೂ ಕೂಡ **ದಿವೌಕಸಾಂ ತು** ದೇವತೆಗಳ **ಗುಹ್ಯಧರ್ಮಃ ಹಿ** ರಹಸ್ಯ ಧರ್ಮವಷ್ಟೇ.

**ತಾತ್ಪರ್ಯ :-** ಮನುಷ್ಯರಾಗಿ ಹುಟ್ಟಿದವರು ದೇವತೆಗಳಾದರೂ ಅವರು ಮನುಷ್ಯರೊಂದಿಗೆ ಇರುವುದರಿಂದ ಇತರ ದೇವತೆಗಳು ಇವರ ಕಣ್ಣಿಗೆ ಕಾಣುವುದಿಲ್ಲ ಇವರಿಂದ ಮುಟ್ಟಿಸಿಕೊಳ್ಳುವುದಿಲ್ಲ ಮತ್ತು ಇವರೊಂದಿಗೆ ಸಂಭಾಷಣೆಯನ್ನೂ ಮಾಡುವುದಿಲ್ಲ, ಇದುವೇ ದೇವತೆಗಳ ರಹಸ್ಯ ಧರ್ಮವಾಗಿದೆ.

**ಅತಃ ಸಾ ವರುಣಂ ದೇವಂ ಪೂರ್ವಭರ್ತಾರಮಪ್ಯಮುಮ್ ।**
**ನೃಜಾತಂ ಶಂತನುಂ ತ್ಯಕ್ತ್ವಾ ಪ್ರಯಯೌ ವರುಣಾಲಯಮ್ ॥ ೪೪ ॥**

**ಸುತಮಷ್ಟಮಮಾದಾಯ ಭರ್ತುರೇವಾಭ್ಯನುಜ್ಞಯಾ ।**
**ವಧೋದ್ಯೋಗಾನ್ನಿವೃತ್ತಾ ಸಾ ದದೌ ಪುತ್ರಂ ಬೃಹಸ್ಪತೌ ॥ ೪೫ ॥**

**ಪದಚ್ಛೇದ :-** ಅತಃ, ಸಾ, ವರುಣಂ, ದೇವಂ, ಪೂರ್ವಭರ್ತಾರಂ, ಅಪಿ, ಅಮುಂ, ನೃಜಾತಂ, ಶಂತನುಂ, ತ್ಯಕ್ತ್ವಾ ಪ್ರಯಯೌ, ವರುಣಾಲಯಮ್, ಸುತಂ, ಅಷ್ಟಮಂ, ಆದಾಯ, ಭರ್ತುಃ, ಏವ, ಅಭ್ಯನುಜ್ಞಯಾ, ವಧೋದ್ಯೋಗಾತ್, ನಿವೃತ್ತಾ, ಸಾ, ದದೌ, ಪುತ್ರಂ, ಬೃಹಸ್ಪತೌ.

**ಅರ್ಥ :- ಅತಃ** ಆದ್ದರಿಂದ **ಸಾ** ಆ ಗಂಗೆಯು **ದೇವಂ** ದೇವತೆಯಾದ **ನೃಜಾತಂ** ಮನುಷ್ಯರಲ್ಲಿ ಹುಟ್ಟಿದ **ಅಮುಂ** ಈ **ವರುಣಂ** ವರುಣಾವತಾರ ನಾದ **ಶಂತನುಂ** ಶಂತನುವನ್ನು **ಪೂರ್ವಭರ್ತಾರಂ ಅಪಿ** ಹಿಂದೆ ತನ್ನ ಗಂಡ ನಾಗಿದ್ದವನನ್ನೂ ಕೂಡ **ತ್ಯಕ್ತ್ವಾ** ಬಿಟ್ಟು **ಭರ್ತುಃ** ಗಂಡನ **ಅಭ್ಯನುಜ್ಞಯಾ ಏವ** ಅನುಮತಿಯಿಂದಲೇನೇ **ಅಷ್ಟಮಂ** ಎಂಟನೆಯ **ಸುತಂ** ಮಗನನ್ನು **ಆದಾಯ** ತೆಗೆದುಕೊಂಡು **ವಧೋದ್ಯೋಗಾತ್** ಸಂಹರಿಸುವ ಕೆಲಸದಿಂದ **ನಿವೃತ್ತಾ (ಸತೀ)** ನಿವೃತ್ತಳಾಗಿ **ವರುಣಾಲಯಂ** ವರುಣಲೋಕವನ್ನು ಕುರಿತು **ಪ್ರಯಯೌ** ಹೋದಳು. **ಸಾ** ಆ ಗಂಗೆಯು **ಬೃಹಸ್ಪತೌ** ಬೃಹಸ್ಪತಿಯಲ್ಲಿ **ಪುತ್ರಂ** ಮಗನನ್ನು **ದದೌ** ಕೊಟ್ಟಳು.

**ತಾತ್ಪರ್ಯ** :- ದೇವತೆಗಳ ಧರ್ಮವು ಈ ರೀತಿಯಾಗಿ ಇರುವದರಿಂದಲೇ ಗಂಗೆಯೂ ಕೂಡ ವರುಣಾವತಾರನಾದ ಶಂತನುವು ಹಿಂದೆ ತನ್ನ ಗಂಡನಾಗಿದ್ದರೂ ಈಗ ಮನುಷ್ಯರಲ್ಲಿ ಹುಟ್ಟಿದ್ದಾನಾದ್ದರಿಂದ ಅವನನ್ನು ಬಿಟ್ಟು ವರುಣಲೋಕಕ್ಕೆ ಹೋದಳು. ಹೋಗುವಾಗ ಗಂಡನ ಅನುಮತಿಯಿಂದಲೇ ಮಕ್ಕಳನ್ನು ಸಂಹರಿಸುವ ತನ್ನ ಕೆಲಸವನ್ನು ನಿಲ್ಲಿಸಿ ಎಂಟನೆಯ ಮಗುವನ್ನು ತನ್ನೊಂದಿಗೆ ಕರೆದುಕೊಂಡು ಹೋದಳು ಆ ಮಗುವನ್ನು ಬೃಹಸ್ಪತಿಯ ಬಳಿ ಬಿಟ್ಟಳು.

**ದೇವವ್ರತೋಽಸಾವನುಶಾಸನಾಯ ಮಾತ್ರಾ**
**ದತ್ತೋ ದೇವಗುರೌ ಶತಾರ್ಧಮ್ ।**
**ಸಂವತ್ಸರಾಣಾಮಖಿಲಾಂಶ್ಚ ವೇದಾನ್**
**ಸಮಭ್ಯಸತ್ ತದ್ವಶಗಾಂತರಾತ್ಮಾ ॥ ೪೬ ॥**

ಪದಚ್ಛೇದ :- ದೇವವ್ರತಃ, ಅಸೌ, ಅನುಶಾಸನಾಯ, ಮಾತ್ರಾ, ದತ್ತಃ, ದೇವಗುರೌ, ಶತಾರ್ಧಂ, ಸಂವತ್ಸರಾಣಾಂ, ಅಖಿಲಾನ್, ಚ, ವೇದಾನ್, ಸಮಭ್ಯಸತ್, ತದ್ವಶಗಾಂತರಾತ್ಮಾ

**ಅರ್ಥ** :- **ದೇವವ್ರತಃ** ದೇವವ್ರತನೆಂಬ ಹೆಸರಿನ **ಅಸೌ** ಈ ಎಂಟನೆಯ ಮಗನು **ಅನುಶಾಸನಾಯ** ವಿದ್ಯಾಭ್ಯಾಸಕ್ಕಾಗಿ **ಮಾತ್ರಾ** ತಾಯಿಯಾದ ಗಂಗೆಯಿಂದ **ದೇವಗುರೌ** ದೇವತೆಗಳ ಗುರುಗಳಾದ ಬೃಹಸ್ಪತಿಯಲ್ಲಿ **ದತ್ತಃ** ಬಿಡಲ್ಪಟ್ಟನು. **ಸಂವತ್ಸರಾಣಾಂ ಶತಾರ್ಧಂ** ಐವತ್ತು ವರ್ಷಗಳ ಕಾಲ **ತದ್ವಶಗಾಂತರಾತ್ಮಾ** (**ತತ್** ಆ ಗುರುಗಳ, **ವಶಗ** ವಶದಲ್ಲಿಡಲ್ಪಟ್ಟ **ಅಂತರಾತ್ಮಾ** ಮನುಸ್ಸುಳ್ಳವನಾಗಿ) ಆ ಗುರುಗಳವಶದಲ್ಲಿ ತನ್ನ ಮನಸ್ಸನ್ನಿಟ್ಟು **ಅಖಿಲಾನ್ ಚ** ಸಮಗ್ರವಾದ **ವೇದಾನ್** ವೇದಗಳನ್ನು **ಸಮಭ್ಯಸತ್** ಅಭ್ಯಾಸಮಾಡಿದನು.

**ತಾತ್ಪರ್ಯ** :- ಗಂಗೆಯು ತನ್ನೊಂದಿಗೆ ಕರೆತಂದ ಮಗುವನ್ನು ಬೃಹಸ್ಪತ್ಯಾಚಾರ್ಯರಲ್ಲಿ ಅಧ್ಯಯನಕ್ಕೆಂದು ಬಿಟ್ಟಳು. ದೇವವ್ರತನೆಂಬ ಹೆಸರಿನ ಆ ಮಗುವು ತನ್ನ ಮನಸ್ಸನ್ನು ಗುರುಗಳ ವಶಕ್ಕೆ ಒಪ್ಪಿಸಿ ಐವತ್ತು ವರ್ಷಗಳ ಕಾಲ ಸಮಗ್ರ ವೇದಗಳನ್ನು ಅಧ್ಯಯನ ಮಾಡಿದನು.

ತತಶ್ಚ ಮಾತ್ರಾ ಜಗತಾಂ ಗರೀಯಸ್ಯ-
ನಂತಪಾರೇऽಖಿಲಸದ್ಗುಣಾರ್ಣವೇ ।
ರಾಮೇ ಭೃಗೂಣಾಮಧಿಪೇ ಪ್ರದತ್ತಃ
ಶುಶ್ರಾವ ತತ್ತ್ವಂ ಚ ಶತಾರ್ಧವರ್ಷಮ್ ॥೪೭॥

ಪದಚ್ಛೇದ :- ತತಃ, ಚ, ಮಾತ್ರಾ, ಜಗತಾಂ, ಗರೀಯಸಿ, ಅನಂತಪಾರೇ, ಅಖಿಲಸದ್ಗುಣಾರ್ಣವೇ, ರಾಮೇ, ಭೃಗೂಣಾಂ, ಅಧಿಪೇ, ಪ್ರದತ್ತಃ, ಶುಶ್ರಾವ, ತತ್ತ್ವಂ, ಚ, ಶತಾರ್ಧವರ್ಷಮ್.

**ಅರ್ಥ** :- **ತತಃ ಚ** ವೇದಾಧ್ಯಯನದ ನಂತರವಾದರೂ **ಮಾತ್ರಾ** ತಾಯಿಯಿಂದ **ಜಗತಾಂ** ಜಗತ್ತಿನಲ್ಲಿ **ಗರೀಯಸಿ** ಶ್ರೇಷ್ಠನಾದ **ಅನಂತಪಾರೇ** ಅನಂತವಾದ ಅವಧಿಯುಳ್ಳ (ಅಪರಿಮಿತ ಗುಣಪೂರ್ಣನಾದ) **ಅಖಿಲಸದ್ಗುಣಾರ್ಣವೇ** ಸಮಸ್ತ ಸದ್ಗುಣಗಳಿಂದ ಸಮುದ್ರನಂತಿರುವ **ಭೃಗೂಣಾಂ** ಭೃಗುವಂಶದವರಿಗೆ **ಅಧಿಪೇ** ನಿಯಾಮಕನಾದ **ರಾಮೇ** ಪರಶುರಾಮನಲ್ಲಿ **ಪ್ರದತ್ತಃ** ಬಿಡಲ್ಪಟ್ಟ (**ಅಸೌ**) ಈ ದೇವವ್ರತನು **ಶತಾರ್ಧ ವರ್ಷಂ** ಐವತ್ತು ವರ್ಷಗಳಕಾಲ **ತತ್ತ್ವಂ ಚ** ಶಾಸ್ತ್ರದ ತತ್ತ್ವವಿಚಾರಗಳನ್ನೂ **ಶುಶ್ರಾವ** ಕೇಳಿದನು.

**ತಾತ್ಪರ್ಯ** :- ಬೃಹಸ್ಪತ್ಯಾಚಾರ್ಯರಲ್ಲಿ ವೇದಾಧ್ಯಯನವಾದ ನಂತರ ಗಂಗೆಯು ತನ್ನ ಮಗನಾದ ದೇವವ್ರತನನ್ನು ಸರ್ವೋತ್ತಮನಾದ, ಸಮಸ್ತ ಗುಣಪೂರ್ಣನಾದ ಭೃಗುವಂಶಕ್ಕೆ ಸ್ವಾಮಿಯಾದ ಪರಶುರಾಮನಲ್ಲಿ ಅಧ್ಯಯನಕ್ಕಾಗಿ ಬಿಟ್ಟಳು. ಆ ದೇವವ್ರತನು ಪರಶುರಾಮನಲ್ಲಿ ಐವತ್ತು ವರ್ಷಗಳ ಕಾಲ ಶಾಸ್ತ್ರದ ತತ್ತ್ವವಿಚಾರಗಳನ್ನು ಅಭ್ಯಾಸ ಮಾಡಿದನು.

ಸ ಪಂಚವಿಂಶತ್ ಪುನರಬ್ದಕಾನಾಮ್
ಅಸ್ತ್ರಾಣಿ ಚಾऽಭ್ಯಸ್ಯ ಪತೇರ್ಭೃಗೂಣಾಮ್ ।
ಮಾತ್ರಾ ಸಮಾನೀಯ ನಿಜೇ ತಟೇ ತು
ಸಂಸ್ಥಾಪಿತಃ ಪ್ರಾರ್ಪಯಿತುಂ ಸ್ವಪಿತ್ರೇ ॥ ೪೮ ॥

ಪದಚ್ಛೇದ :- ಸಃ, ಪಂಚವಿಂಶತ್, ಪುನಃ, ಅಬ್ದಕಾನಾಂ, ಅಸ್ತ್ರಾಣಿ, ಚ, ಅಭ್ಯಸ್ಯ, ಪತೇಃ, ಭೃಗೂಣಾಂ, ಮಾತ್ರಾ, ಸಮಾನೀಯ, ನಿಜೇ, ತಟೇ, ತು, ಸಂಸ್ಥಾಪಿತಃ, ಪ್ರಾರ್ಪಯಿತುಂ, ಸ್ವಪಿತ್ರೇ.

**ಅರ್ಥ** :- **ಸಃ** ಆ ದೇವವ್ರತನು **ಪುನಃ** ಮತ್ತೆ **ಅಬ್ದಕಾನಾಂ ಪಂಚವಿಂಶತ್** ಇಪ್ಪತ್ತೈದು ವರ್ಷಗಳ ಕಾಲ **ಭೃಗೂಣಾಂ** ಭೃಗುವಂಶದವರ **ಪತೇಃ** ಸ್ವಾಮಿಯಾದ ಪರಶುರಾಮನಿಂದ **ಅಸ್ತ್ರಾಣಿ ಚ** ಅಸ್ತ್ರಗಳನ್ನೂ ಕೂಡ **ಅಭ್ಯಸ್ಯ** ಅಭ್ಯಾಸಮಾಡಿ **ಮಾತ್ರಾ** ತಾಯಿಯಾದ ಗಂಗೆಯಿಂದ **ಸಮಾನೀಯ** ಕರೆತರಲ್ಪಟ್ಟವನಾಗಿ **ನಿಜೇ** ತನ್ನ(ಗಂಗೆಯ) **ತಟೇ ತು** ದಡದಲ್ಲಿಯಾದರೂ **ಸ್ವಪಿತ್ರೇ** ತನ್ನ ತಂದೆಗೆ **ಪ್ರಾರ್ಪಯಿತುಂ** ಒಪ್ಪಿಸಲು **ಸಂಸ್ಥಾಪಿತಃ** ಇಡಲ್ಪಟ್ಟನು.

**ತಾತ್ಪರ್ಯ** :- ದೇವವ್ರತನು ತತ್ತ್ವಗಳನ್ನು ಅಧ್ಯಯನ ಮಾಡಿದ ನಂತರ ಭೃಗುಕುಲಸ್ವಾಮಿಯಾದ ಪರಶುರಾಮನಲ್ಲಿಯೇ ಮತ್ತೆ ಇಪ್ಪತ್ತೈದು ವರ್ಷಗಳ ಕಾಲ ಅಸ್ತ್ರವಿದ್ಯೆಯನ್ನು ಕಲಿತನು. ನಂತರ ತಾಯಿಯಾದ ಗಂಗೆಯು ಅವನನ್ನು ಕರೆತಂದು ಅವನ ತಂದೆಯಾದ ಶಂತನುವಿಗೆ ಒಪ್ಪಿಸಲು ತನ್ನ ದಡದಲ್ಲಿ ನಿಲ್ಲಿಸಿದಳು.

**ಸ ತತ್ರ ಬಧ್ವಾ ಶರಪಂಜರೇಣ**
**ಗಂಗಾಂ ವಿಜಹ್ರೇಽಸ್ಯ ಪಿತಾ ತದೈವ ।**
**ವ್ರಜನ್ ಮೃಗಾರ್ಥೀ ತೃಷಿತೋ ವಿಲೋಕಯನ್**
**ಗಂಗಾಮತೋಯಾಮಭವತ್ ಸುವಿಸ್ಮಿತಃ ॥ ೪೯ ॥**

ಪದಚ್ಛೇದ :- ಸಃ, ತತ್ರ, ಬಧ್ವಾ, ಶರಪಂಜರೇಣ, ಗಂಗಾಂ, ವಿಜಹ್ರೇ, ಅಸ್ಯ, ಪಿತಾ, ತದಾ, ಏವ, ವ್ರಜನ್, ಮೃಗಾರ್ಥೀ, ತೃಷಿತಃ, ವಿಲೋಕಯನ್, ಗಂಗಾಂ, ಅತೋಯಾಂ, ಅಭವತ್, ಸುವಿಸ್ಮಿತಃ.

**ಅರ್ಥ** :- **ಸಃ** ಆ ದೇವವ್ರತನು **ತತ್ರ** ಆ ನದೀತೀರದಲ್ಲಿ **ಶರಪಂಜರೇಣ** ಬಾಣಗಳ ಪಂಜರದಿಂದ **ಗಂಗಾಂ** ಗಂಗಾ ನದಿಯನ್ನು **ಬದ್ಧ್ವಾ** ಕಟ್ಟಿಹಾಕಿ **ವಿಜಹ್ರೇ** ಆಟವಾಡಿದನು. **ತದಾ ಏವ** ಅದೇ ಸಂದರ್ಭದಲ್ಲೇ **ಅಸ್ಯ** ಈ ದೇವವ್ರತನ **ಪಿತಾ** ತಂದೆಯಾದ ಶಂತನುವು **ಮೃಗಾರ್ಥೀ** ಬೇಟೆಗಾಗಿ ಬಂದವನು **ತೃಷಿತಃ (ಸನ್)** ಬಾಯಾರಿದವನಾಗಿ **ವ್ರಜನ್** ಗಂಗೆಯ ಬಳಿಗೆ ಹೋಗಿ **ಅತೋಯಾಂ** ನೀರಿಲ್ಲದಿರುವ **ಗಂಗಾಂ** ಗಂಗೆಯನ್ನು **ವಿಲೋಕಯನ್ (ಸನ್)** ನೋಡಿದವನಾಗಿ **ಸುವಿಸ್ಮಿತಃ** ಬಹಳ ಆಶ್ಚರ್ಯವುಳ್ಳವನು **ಅಭವತ್** ಆದನು.

**ತಾತ್ಪರ್ಯ** :- ಗಂಗೆಯ ದಡದಲ್ಲಿದ್ದ ದೇವವ್ರತನು ತನ್ನ ಬಾಣಗಳಿಂದ ಪಂಜರವನ್ನು ನಿರ್ಮಿಸಿ ಗಂಗಾನದಿಯನ್ನು ಕಟ್ಟಿ ಹಾಕಿದನು. ಬೇಟೆಯಾಡುತ್ತಾ ಬಾಯಾರಿ ಅಲ್ಲಿಗೆ ಬಂದ ಶಂತನುವು ನದಿಯಲ್ಲಿ ನೀರಿಲ್ಲದಿರುವುದನ್ನು ಕಂಡು ಬಹಳ ಆಶ್ಚರ್ಯ ಪಟ್ಟನು.

**ಸ ಮಾರ್ಗಯಾಮಾಸ ತತೋಽಸ್ಯ ಹೇತುಂ**
**ಜ್ಞಪ್ತ್ಯೈ ತದಾ ಸ್ವಂ ಚ ದದರ್ಶ ಸೂನುಮ್ ।**
**ಕ್ರೀಡಂತಮಸ್ತ್ರೇಣ ಬಭೂವ ಸೋಽಪಿ**
**ಕ್ಷಣಾದದೃಶ್ಯಃ ಪಿತೃದರ್ಶನಾದನು ॥ ೫೦ ॥**

**ಪದಚ್ಛೇದ** :- ಸಃ, ಮಾರ್ಗಯಾಮಾಸ, ತತಃ, ಅಸ್ಯ, ಹೇತುಂ, ಜ್ಞಪ್ತ್ಯೈ, ತದಾ, ಸ್ವಂ, ಚ, ದದರ್ಶ, ಸೂನುಂ, ಕ್ರೀಡಂತಂ, ಅಸ್ತ್ರೇಣ, ಬಭೂವ, ಸಃ, ಅಪಿ, ಕ್ಷಣಾತ್, ಅದೃಶ್ಯಃ, ಪಿತೃದರ್ಶನಾತ್, ಅನು.

**ಅರ್ಥ** :- **ತತಃ** ಅನಂತರ **ಸಃ** ಆ ಶಂತನುವು **ಅಸ್ಯ** ಇದಕ್ಕೆ (ನೀರಿಲ್ಲದಿರುವುದಕ್ಕೆ) **ಹೇತುಂ** ಕಾರಣವನ್ನು **ಜ್ಞಪ್ತ್ಯೈ** ತಿಳಿಯಲು **ಮಾರ್ಗಯಾಮಾಸ** ಅನ್ವೇಷಣೆ ಮಾಡಿದನು. **ತದಾ ಚ** ಆಗಲಾದರೂ **ಅಸ್ತ್ರೇಣ** ಅಸ್ತ್ರದಿಂದ **ಕ್ರೀಡಂತಂ** ಆಟವಾಡುತ್ತಿರುವ **ಸ್ವಂ** ತನ್ನ **ಸೂನುಂ** ಮಗನನ್ನು **ದದರ್ಶ** ನೋಡಿದನು. **ಸಃ ಅಪಿ** ಆ ದೇವವ್ರತನೂ ಕೂಡ **ಪಿತೃದರ್ಶನಾತ್** ತಂದೆಯನ್ನು ನೋಡಿದ **ಅನು** ನಂತರ **ಕ್ಷಣಾತ್** ಆ ಕ್ಷಣದಲ್ಲಿಯೇ **ಅದೃಶ್ಯಃ** ಅದೃಶ್ಯನು **ಬಭೂವ** ಆದನು.

**ತಾತ್ಪರ್ಯ** :- ಅನಂತರ ಶಂತನುವು ಹೀಗೆ ನೀರಿಲ್ಲದಿರುವುದಕ್ಕೆ ಕಾರಣವನ್ನು ತಿಳಿಯಲು ಹುಡುಕಾಡತೊಡಗಿದನು. ಆಗ ಅಲ್ಲಿ ಅಸ್ತ್ರದೊಂದಿಗೆ ಆಡುತ್ತಿದ್ದ ತನ್ನ ಮಗನನ್ನು ಕಂಡನು. ಆ ದೇವವ್ರತನೂ ಕೂಡ ತಂದೆಯನ್ನು ಕಂಡ ಕೂಡಲೇ ಅದೃಶ್ಯನಾದನು.

**ಮೀಮಾಂಸಮಾನಂ ತಮವಾಪ ಗಂಗಾ -**
**ಸುತಂ ಸಮಾದಾಯ ಪತಿಂ ಜಗಾದ ।**
**ಅಯಂ ಸುತಸ್ತೇ ಪರಮಾಸ್ತ್ರವೇತ್ತಾ**
**ಸಮರ್ಪಿತೋ ವೀರ್ಯಬಲೋಪಪನ್ನಃ ॥ ೫೧ ॥**

ಪದಚ್ಛೇದ :- ಮೀಮಾಂಸಮಾನಂ, ತಂ, ಅವಾಪ, ಗಂಗಾ, ಸುತಂ, ಸಮಾದಾಯ, ಪತಿಂ, ಜಗಾದ, ಅಯಂ, ಸುತಃ, ತೇ, ಪರಮಾಸ್ತ್ರವೇತ್ತಾ, ಸಮರ್ಪಿತಃ, ವೀರ್ಯಬಲೋಪಪನ್ನಃ

**ಅರ್ಥ** :- **ಮೀಮಾಂಸಮಾನಂ** ವಿಚಾರಮಡುತ್ತಿರುವ **ತಂ** ಆ ಶಂತನುವನ್ನು **ಗಂಗಾ** ಗಂಗೆಯು **ಸುತಂ** ಮಗನನ್ನು **ಸಮಾದಾಯ** ಕರೆದು ಕೊಂಡು **ಅವಾಪ** ಹೊಂದಿದಳು. **ಪತಿಂ** (ಪ್ರತಿ) ಗಂಡನಾದ ಶಂತನುವನ್ನು ಕುರಿತು **ಜಗಾದ ಚ** ಹೇಳಿದಳೂ ಕೂಡ. **ಪರಮಾಸ್ತ್ರವೇತ್ತಾ** ಶ್ರೇಷ್ಠ ಅಸ್ತ್ರಜ್ಞ ನಾದ **ವೀರ್ಯಬಲೋಪಪನ್ನಃ** ಶಕ್ತಿ ಪರಾಕ್ರಮಗಳಿಂದ ಕೂಡಿದ **ಅಯಂ** ಈ **ಸುತಃ** ಮಗನು **ತೇ** ನಿನಗೆ **ಸಮರ್ಪಿತಃ** ಒಪ್ಪಿಸಲ್ಪಟ್ಟಿದ್ದಾನೆ.

**ತಾತ್ಪರ್ಯ** :- ದೇವವ್ರತನು ಶಂತನುವನ್ನು ನೋಡಿ ಅದೃಶ್ಯನಾದ ನಂತರ ಶಂತನು ಯಾರಿವನು? ಎಲ್ಲಿ ಹೋದನು? ಎಂದು ವಿಚಾರ ಮಾಡುತ್ತಿದ್ದನು. ಆಗ ಮಗನೊಂದಿಗೆ ಗಂಗೆಯು ಅಲ್ಲಿಗೆ ಬಂದು ಗಂಡನಾದ ಶಂತನುವಿಗೆ ಹೇಳುತ್ತಾಳೆ- ಇವನು ನಿನ್ನ ಮಗನು. ಶ್ರೇಷ್ಠವಾದ ಅಸ್ತ್ರಗಳನ್ನು ತಿಳಿದ, ಶಕ್ತಿ-ಪರಾಕ್ರಮಗಳಿಂದ ಕೂಡಿದ ಇವನನ್ನು ನಿನಗೆ ಒಪ್ಪಿಸುತ್ತಿದ್ದೇನೆ.

**ಅಸ್ಯಾಗ್ರಜಾಃ ಸ್ವಾಂ ಸ್ಥಿತಿಮೇವ ಯಾತಾ**
**ಹರೇಃ ಪದಾಂಭೋಜಸುಪಾವಿತೇ ಜಲೇ ।**
**ತನೂರ್ಮದೀಯೇ ಪ್ರಣಿಧಾಯ ತಸ್ಮಾತ್**
**ತನ್ಮಾ ಶುಚೋऽನೇನ ಚ ಮೋದಮಾನಃ ॥ ೫೨ ॥**

ಪದಚ್ಛೇದ :- ಅಸ್ಯ, ಅಗ್ರಜಾಃ, ಸ್ವಾಂ, ಸ್ಥಿತಿಂ, ಏವ, ಯಾತಾಃ, ಹರೇಃ, ಪದಾಂಭೋಜಸುಪಾವಿತೇ, ಜಲೇ, ತನೂಃ, ಮದೀಯೇ, ಪ್ರಣಿಧಾಯ, ತಸ್ಮಾತ್, ತತ್, ಮಾ, ಶುಚಃ, ಅನೇನ, ಚ, ಮೋದಮಾನಃ.

**ಅರ್ಥ** :- **ಅಸ್ಯ** ಈ ದೇವವ್ರತನ **ಅಗ್ರಜಾಃ** ಅಣ್ಣಂದಿರು **ಹರೇಃ** ಪರಮಾತ್ಮನ **ಪದಾಂಭೋಜಸುಪಾವಿತೇ ಪದಾಂಭೋಜ** ಪಾದಕಮಲದಿಂದ, **ಸುಪಾವಿತೇ** ಪವಿತ್ರಗೊಂಡ **ಮದೀಯೇ** ನನ್ನ **ಜಲೇ** ನೀರಿನಲ್ಲಿ **ತನೂಃ** ಶರೀರಗಳನ್ನು **ಪ್ರಣಿಧಾಯ** ಬಿಟ್ಟು **ಸ್ವಾಂ** ತಮ್ಮ **ಸ್ಥಿತಿಂ** ಸ್ಥಾನವನ್ನು **ಯಾತಾಃ** ಹೊಂದಿದರು. **ತಸ್ಮಾತ್** ಆದ್ದರಿಂದ **ಅನೇನ** ಈ ದೇವವ್ರತನಿಂದ ಕೂಡಿ

**ಮೋದಮಾನಃ** (ಸನ್)ಸಂತೋಷಗೊಂಡವನಾಗಿ **ತತ್ ಮಾ ಶುಚಃ** ಅವರಿಗಾಗಿ ದುಃಖಿಸಬೇಡ.

**ತಾತ್ಪರ್ಯ** :- ಗಂಗೆಯು ಹೇಳುತ್ತಿದ್ದಾಳೆ- 'ಈ ದೇವವ್ರತನ ಅಣ್ಣಂದಿರು ಪರಮಾತ್ಮನ ಪಾದಕಮಲದ ಸಂಪರ್ಕದಿಂದ ಪವಿತ್ರಗೊಂಡ ನನ್ನ ನೀರಿನಲ್ಲಿ ತಮ್ಮ ಶರೀರವನ್ನು ಬಿಟ್ಟು ತಮ್ಮ ತಮ್ಮ ಸ್ಥಾನವನ್ನು ಹೊಂದಿದ್ದಾರೆ. ಆದ್ದರಿಂದ ಅವರಿಗಾಗಿ ದುಃಖಿಸಬೇಡ. ಈ ದೇವವ್ರತನೊಂದಿಗೆ ಸಂತೋಷ ಪಡು' ಎಂದು.

**ಇತಿ ಪ್ರದಾಯಾಮುಮದೃಶ್ಯತಾಮಗಾದ್**
**ಗಂಗಾ ತಮಾದಾಯ ಯಯೌ ಗೃಹಂ ಸ್ವಕಮ್ ।**
**ರಾಜಾऽಭಿಷಿಚ್ಯಾಥ ಚ ಯೌವರಾಜ್ಯೇ**
**ಮುಮೋದ ತತ್ಸದ್ಗುಣತರ್ಪಿತೋ ಭೃಶಮ್ ॥ ೫೩ ॥**

ಪದಚ್ಛೇದ :- **ಇತಿ, ಪ್ರದಾಯ, ಅಮುಂ, ಅದೃಶ್ಯತಾಂ, ಅಗಾತ್, ಗಂಗಾ, ತಂ, ಆದಾಯ, ಯಯೌ, ಗೃಹಂ, ಸ್ವಕಂ, ರಾಜಾ, ಅಭಿಷಿಚ್ಯ, ಅಥ, ಚ, ಯೌವರಾಜ್ಯೇ, ಮುಮೋದ, ತತ್ಸದ್ಗುಣತರ್ಪಿತಃ, ಭೃಶಮ್.**

**ಅರ್ಥ** :- **ಗಂಗಾ** ಗಂಗೆಯು **ಇತಿ** ಈ ರೀತಿಯಾಗಿ **ಅಮುಂ** ಈ ಮಗನನ್ನು **ಪ್ರದಾಯ** ಕೊಟ್ಟು **ಅದೃಶ್ಯತಾಂ** ಕಣ್ಮರೆಯನ್ನು **ಅಗಾತ್** ಹೊಂದಿದಳು. **ರಾಜಾ** ರಾಜನಾದ ಶಂತನುವು **ತಂ** ಆ ದೇವವ್ರತನನ್ನು **ಆದಾಯ** ಕರೆದುಕೊಂಡು **ಸ್ವಕಂ** ತನ್ನ **ಗೃಹಂ** ಮನೆಯನ್ನು ಕುರಿತು **ಯಯೌ** ಹೋದನು. **ಅಥ** ಆ ನಂತರ **ಯೌವರಾಜ್ಯೇ** ಯುವರಾಜಪದವಿಯಲ್ಲಿ (ತಂ) ಆ ದೇವವ್ರತನನ್ನು **ಅಭಿಷಿಚ್ಯ** ಅಭಿಷೇಕ ಮಾಡಿ **ತತ್ಸದ್ಗುಣತರ್ಪಿತಃ** ಆ ಮಗನ ಸದ್ಗುಣಗಳಿಂದ ತೃಪ್ತಿ ಹೊಂದಿದವನಾಗಿ **ಭೃಶಂ** ಬಹಳ **ಮುಮೋದ ಚ** ಸಂತೋಷಪಟ್ಟನೂ ಕೂಡ.

**ತಾತ್ಪರ್ಯ** :- ಹೀಗೆ ಹೇಳಿ ಗಂಗೆಯು ಮಗನನ್ನು ಶಂತನುವಿಗೆ ಒಪ್ಪಿಸಿ ಕಣ್ಮರೆಯಾದಳು. ಅನಂತರ ರಾಜನಾದ ಶಂತನುವು ಅವನೊಂದಿಗೆ ಮನೆಗೆ ಹೋದನು. ನಂತರ ಮಗನನ್ನು ಯುವರಾಜ ಪದವಿಯಲ್ಲಿ ಪಟ್ಟಾಭಿಷೇಕ ಮಾಡಿದನು. ಮಗನ ಸದ್ಗುಣಗಳಿಂದ ತೃಪ್ತನಾದ ಅವನು ಸಂತೋಷ ಗೊಂಡನು.

ಪುನಃ ಸ ಪಿತ್ರಾऽನುಮತೋ ಬೃಹಸ್ಪತೇಃ
ಅವಾಪ ವೇದಾನ್ ಪುರುಷಾಯುಷೋऽರ್ಧತಃ ।
ರಾಮಾತ್ ತಥಾऽಸ್ತ್ರಾಣಿ ಪುನಸ್ತ್ವವಾಪ
ತಾವದ್ಭಿರಬ್ದೈಸ್ತ್ರಿಶತೈಶ್ಚ ತತ್ತ್ವಮ್ ॥ ೫೪ ॥

ಪದಚ್ಛೇದ :- ಪುನಃ, ಸಃ, ಪಿತ್ರಾ, ಅನುಮತಃ, ಬೃಹಸ್ಪತೇಃ, ಅವಾಪ, ವೇದಾನ್, ಪುರುಷಾಯುಷಃ, ಅರ್ಧತಃ, ರಾಮಾತ್, ತಥಾ, ಅಸ್ತ್ರಾಣಿ, ಪುನಃ, ತು, ಅವಾಪ, ತಾವದ್ಭಿಃ, ಅಬ್ದೈಃ, ತ್ರಿಶತೈಃ, ಚ, ತತ್ತ್ವಮ್.

**ಅರ್ಥ** :- **ಸಃ** ಆ ದೇವವ್ರತನು **ಪಿತ್ರಾ** ತಂದೆಯಾದ ಶಂತನುವಿನಿಂದ **ಅನುಮತಃ** ಅನುಜ್ಞೆಯನ್ನು ಪಡೆದವನಾಗಿ **ಪುನಃ** ಮತ್ತೆ **ಬೃಹಸ್ಪತೇಃ** ಬೃಹಸ್ಪತ್ಯಾಚಾರ್ಯರಿಂದ **ಪುರುಷಾಯುಷಃ** ಮನುಷ್ಯರ ಆಯುಷ್ಯದ **ಅರ್ಧತಃ** ಅರ್ಧದಷ್ಟು (ಐವತ್ತು ವರ್ಷ) ಕಾಲದಲ್ಲಿ **ವೇದಾನ್** ವೇದಗಳನ್ನು **ಅವಾಪ** ಪಡೆದನು. **ತಥಾ** ಹಾಗೆಯೇ **ತಾವದ್ಭಿಃ** ಅಷ್ಟೇ(ಐವತ್ತು ವರ್ಷ) **ಅಬ್ದೈಃ** ವರ್ಷಗಳಲ್ಲಿ **ರಾಮಾತ್ ತು** ಪರಶುರಾಮನಿಂದಲೂ **ಪುನಃ** ಮತ್ತೆ **ಅಸ್ತ್ರಾಣಿ** ಅಸ್ತ್ರಗಳನ್ನು **ಅವಾಪ** ಪಡೆದನು. **ತ್ರಿಶತೈಃ** ಮುನ್ನೂರು **ಅಬ್ದೈಃ** ವರ್ಷಗಳಲ್ಲಿ **ತತ್ತ್ವಂ ಚ** ತತ್ತ್ವವನ್ನೂ **ಅವಾಪ** ಹೊಂದಿದನು.

**ತಾತ್ಪರ್ಯ** :- ದೇವವ್ರತನು ಯುವರಾಜನಾದ ನಂತರ ತಂದೆಯ ಅಪ್ಪಣೆಯನ್ನು ಪಡೆದು ಪುನಃ ಬೃಹಸ್ಪತ್ಯಾಚಾರ್ಯರಲ್ಲಿ ಐವತ್ತು ವರ್ಷಗಳ ಕಾಲ ವೇದಾಧ್ಯಯನವನ್ನು ಮಾಡುತ್ತಾನೆ. ಮತ್ತು ಪರಶುರಾಮನಲ್ಲಿ ಐವತ್ತು ವರ್ಷಗಳ ಕಾಲ ಅಸ್ತ್ರಗಳನ್ನು ಕಲಿಯುತ್ತಾನೆ. ನಂತರ ಮುನ್ನೂರು ವರ್ಷಗಳ ಕಾಲ ತತ್ತ್ವವನ್ನು ತಿಳಿಯುತ್ತಾನೆ.

ಸ ಸರ್ವವಿತ್ತ್ವಂ ಸಮವಾಪ್ಯ ರಾಮಾತ್
ಸಮಸ್ತವಿದ್ಯಾಧಿಪತೇರ್ಗುಣಾರ್ಣವಾತ್ ।
ಪಿತುಃ ಸಮೀಪಂ ಸಮವಾಪ್ಯ ತಂ ಚ
ಶುಶ್ರೂಷಮಾಣಃ ಪ್ರಮುಮೋದ ವೀರಃ ॥ ೫೫ ॥

ಪದಚ್ಛೇದ :- ಸಃ, ಸರ್ವವಿತ್ತ್ವಂ, ಸಮವಾಪ್ಯ, ರಾಮಾತ್, ಸಮಸ್ತವಿದ್ಯಾಧಿಪತೇಃ, ಗುಣಾರ್ಣವಾತ್, ಪಿತುಃ, ಸಮೀಪಂ, ಸಮವಾಪ್ಯ, ತಂ, ಚ, ಶುಶ್ರೂಷಮಾಣಃ, ಪ್ರಮುಮೋದ, ವೀರಃ.

**ಅರ್ಥ** :- **ವೀರಃ** ಪರಾಕ್ರಮಿಯಾದ **ಸಃ** ಆ ದೇವವ್ರತನು **ಸಮಸ್ತವಿದ್ಯಾಧಿಪತೇಃ** ಎಲ್ಲಾ ವಿದ್ಯೆಗಳಿಗೂ ಒಡೆಯನಾದ **ಗುಣಾರ್ಣವಾತ್** ಗುಣ ಸಮುದ್ರನಾದ **ರಾಮಾತ್** ಪರಶುರಾಮನಿಂದ **ಸರ್ವವಿತ್ತ್ವಂ** ಸರ್ವಜ್ಞತ್ವವನ್ನು **ಸಮವಾಪ್ಯ** ಪಡೆದು **ಪಿತುಃ** ತಂದೆಯ **ಸಮೀಪಂ** ಸಮೀಪಕ್ಕೆ **ಸಮವಾಪ್ಯ** ಬಂದು **ತಂ ಚ** ಆ ತಂದೆಯಾದ ಶಂತನುವನ್ನೂ **ಶುಶ್ರೂಷಮಾಣಃ** (ಸನ್) ಸೇವಿಸುವವನಾಗಿ **ಪ್ರಮುಮೋದ** ಆನಂದಿಸಿದನು.

**ತಾತ್ಪರ್ಯ** :- ಹೀಗೆ ದೇವವ್ರತನು ಎಲ್ಲಾ ವಿದ್ಯೆಗಳಿಗೂ ಸ್ವಾಮಿಯಾದ ಮತ್ತು ಗುಣಪೂರ್ಣನಾದ ಪರಶುರಾಮನಿಂದ ಸರ್ವಜ್ಞತ್ವವನ್ನು ಪಡೆದು ತಂದೆಯ ಬಳಿ ಬರುತ್ತಾನೆ. ನಂತರ ತಂದೆಯ ಸೇವೆಯನ್ನು ಮಾಡುತ್ತಾ ಸಂತೋಷವನ್ನು ಪಡುತ್ತಾನೆ.

**ಯದೈವ ಗಂಗಾ ಸುಷುವೇಽಷ್ಟಮಂ ಸುತಂ**
**ತದೈವ ಯಾತೋ ಮೃಗಯಾಂ ಸ ಶಂತನುಃ ।**
**ಶರದ್ವತೋ ಜಾತಮಪಶ್ಯದುತ್ತಮಂ**
**ವನೇ ವಿಸೃಷ್ಟಂ ಮಿಥುನಂ ತ್ವಯೋನಿಜಮ್ ॥ ೫೬ ॥**

**ಪದಚ್ಛೇದ** :- **ಯದಾ, ಏವ, ಗಂಗಾ, ಸುಷುವೇ, ಅಷ್ಟಮಂ, ಸುತಂ, ತದಾ, ಏವ, ಯಾತಃ, ಮೃಗಯಾಂ, ಸಃ, ಶಂತನುಃ, ಶರದ್ವತಃ, ಜಾತಂ, ಅಪಶ್ಯತ್, ಉತ್ತಮಂ, ವನೇ, ವಿಸೃಷ್ಟಂ, ಮಿಥುನಂ, ತು, ಅಯೋನಿಜಮ್.**

**ಅರ್ಥ** :- **ಯದಾ ಏವ** ಯಾವಾಗಲೇ **ಗಂಗಾ** ಗಂಗೆಯು **ಅಷ್ಟಮಂ** ಎಂಟನೆಯ **ಸುತಂ** ಮಗನನ್ನು **ಸುಷುವೇ** ಹಡೆದಳೋ **ತದಾ ಏವ** ಆಗಲೇ **ಸಃ** ಆ **ಶಂತನುಃ** ಶಂತನುವು **ಮೃಗಯಾಂ** ಬೇಟೆಗಾಗಿ **ಯಾತಃ** ಹೊರಟನು **ಶರದ್ವತಃ** ಶರದ್ವಾನ್ ಎಂಬ ಋಷಿಯಿಂದ **ಜಾತಂ** ಹುಟ್ಟಿದ **ಅಯೋನಿಜಂ** ಮಾತೃ ಯೋನಿಯಿಂದ ಹುಟ್ಟದ **ಉತ್ತಮಂ** ಶ್ರೇಷ್ಠವಾದ **ವನೇ ತು** ಕಾಡಿನಲ್ಲಿಯೇ **ವಿಸೃಷ್ಟಂ** ತ್ಯಜಿಸಲ್ಪಟ್ಟ **ಮಿಥುನಂ** (ಒಂದು ಗಂಡು ಒಂದು ಹೆಣ್ಣುಗಳನ್ನೊಳಗೊಂಡ) ಅವಳಿ ಮಕ್ಕಳನ್ನು **ಅಪಶ್ಯತ್** ನೋಡಿದನು.

**ತಾತ್ಪರ್ಯ** :- ಗಂಗೆಯು ಯಾವಾಗ ಎಂಟನೆಯ ಮಗುವನ್ನು ಹಡೆದಳೋ ಆಗಲೇ ಶಂತನುವು ಬೇಟೆಯಾಡಲೆಂದು ಕಾಡಿಗೆ ಹೋದನು.

ಅಲ್ಲಿ ಶರದ್ವಾನ್ ಎಂಬ ಋಷಿಯಿಂದ ಹುಟ್ಟಿದ ಮಾತೃ ಯೋನಿಯಿಂದ ಹುಟ್ಟದ ಉತ್ತಮವಾದ ಗಂಡು ಹೆಣ್ಣುಗಳನ್ನೊಳಗೊಂಡ ಅವಳಿ ಮಕ್ಕಳನ್ನು ನೋಡಿದನು.

**ಶರದ್ವಾಂಸ್ತು ತಪಃ ಕುರ್ವನ್ ದದರ್ಶ ಸಹಸೋರ್ವಶೀಮ್ ।**
**ಚಸ್ಕಂದ ರೇತಸ್ತಸ್ಯಾऽಥ ಶರಸ್ತಂಬೇ ತತೋऽಭವತ್ ॥ ೫೭ ॥**

**ವಿಷ್ಕಂಭೋ ನಾಮ ರುದ್ರಾಣಾಂ ಭೂಭಾರಹರಣೇಂऽಗತಾಮ್ ।**
**ಹರೇಃ ಪ್ರಾಪ್ತುಂ ತಥಾ ತಾರಾ ಭಾರ್ಯಾ ಯಾ ಹಿ ಬೃಹಸ್ಪತೇಃ ॥ ೫೮ ॥**

**ಪದಚ್ಛೇದ :- ಶರದ್ವಾನ್, ತು, ತಪಃ, ಕುರ್ವನ್, ದದರ್ಶ, ಸಹಸಾ, ಉರ್ವಶೀಂ, ಚಸ್ಕಂದ, ರೇತಃ, ತಸ್ಯ, ಅಥ, ಶರಸ್ತಂಬೇ, ತತಃ, ಅಭವತ್,**

**ವಿಷ್ಕಂಭಃ, ನಾಮ, ರುದ್ರಾಣಾಂ, ಭೂಭಾರಹರಣೇ, ಅಂಗತಾಂ, ಹರೇಃ, ಪ್ರಾಪ್ತುಂ, ತಥಾ, ತಾರಾ, ಭಾರ್ಯಾ, ಯಾ, ಹಿ, ಬೃಹಸ್ಪತೇಃ**

**ಅರ್ಥ :- ಶರದ್ವಾನ್ ತು** ಶರದ್ವಾನನೆಂಬ ಋಷಿಯಾದರೂ **ತಪಃ** ತಪಸ್ಸನ್ನು **ಕುರ್ವನ್ (ಸನ್)** ಮಾಡುವಾಗ **ಸಹಸಾ** ಆಕಸ್ಮಿಕವಾಗಿ **ಉರ್ವಶೀಂ** ಊರ್ವಶಿಯನ್ನು **ದದರ್ಶ** ನೋಡಿದನು. **ಅಥ** ಅನಂತರ **ತಸ್ಯ** ಆ ಶರದ್ವಾನನ **ರೇತಃ** ವೀರ್ಯವು **ಶರಸ್ತಂಬೇ** ಜೊಂಡಿನ ಪೊದೆಯಲ್ಲಿ **ಚಸ್ಕಂದ** ಬಿದ್ದಿತು **ತತಃ** ಆ ರೇತಸ್ಸಿನಿಂದ **ರುದ್ರಾಣಾಂ** ರುದ್ರರ ಮಧ್ಯದಲ್ಲಿ **ವಿಷ್ಕಂಭಃ ನಾಮ** ವಿಷ್ಕಂಭನೆಂದು ಪ್ರಸಿದ್ಧನಾದವನು **ಭೂಭಾರಹರಣೇ** ಭೂಮಿಗೆ ಭಾರರಾದ ದೈತ್ಯರ ಸಂಹಾರದಲ್ಲಿ **ಹರೇಃ** ಪರಮಾತ್ಮನಿಗೆ **ಅಂಗತಾಂ** ಭಾಗವನ್ನು **ಪ್ರಾಪ್ತುಂ** ಹೊಂದಲು **ಅಭವತ್** ಹುಟ್ಟಿದನು. **ತಥಾ** ಹಾಗೆಯೇ **ಯಾ** ಯಾವಳು **ಬೃಹಸ್ಪತೇಃ** ಬೃಹಸ್ಪತ್ಯಾಚಾರ್ಯರ **ಭಾರ್ಯಾ** ಹೆಂಡತಿಯೋ **(ಸಾ)** ಅಂತಹ **ತಾರಾ ಹಿ** ತಾರಾ ಕೂಡ **ಅಭವತ್** ಹುಟ್ಟಿದಳು.

**ತಾತ್ಪರ್ಯ :-** ಶರದ್ವಾನನೆಂಬ ಋಷಿಯು ಕಾಡಿನಲ್ಲಿ ತಪಸ್ಸು ಮಾಡುತ್ತಿದ್ದನು. ಆಗ ಒಮ್ಮೆ ಆಕಸ್ಮಿಕವಾಗಿ ಉರ್ವಶಿಯನ್ನು ನೋಡುತ್ತಾನೆ. ಆಗ ಅವನಿಗೆ ವೀರ್ಯವು ಸ್ಖಲನವಾಗಿ ಜೊಂಡು ಹುಲ್ಲಿನ ಪೊದೆಯ ಮೇಲೆ

ಬೀಳುತ್ತದೆ. ಆ ವೀರ್ಯದಿಂದ ರುದ್ರರಲ್ಲಿ ವಿಷ್ಕಂಭನೆಂದು ಪ್ರಸಿದ್ಧನಾದವನು ಮತ್ತು ಬೃಹಸ್ಪತ್ಯಾಚಾರ್ಯರ ಹೆಂಡತಿಯಾದ ತಾರೆಯು ಹುಟ್ಟುತ್ತಾರೆ.

**ತಾವುಭೌ ಶಂತನುರ್ದೃಷ್ಟ್ವಾ ಕೃಪಾವಿಷ್ಟಃ ಸ್ವಕಂ ಗೃಹಮ್ ।**
**ನಿನಾಯ ನಾಮ ಚಕ್ರೇಽಥ ಕೃಪಾಯಾ ವಿಷಯೌ ಯತಃ ।**
**ಕೃಪಃ ಕೃಪೀತಿ ಸ ಕೃಪಸ್ತಪೋ ವಿಷ್ಣೋಶ್ಚಕಾರ ಹ ॥ ೫೯ ॥**

ಪದಚ್ಛೇದ :- ತೌ, ಉಭೌ, ಶಂತನುಃ, ದೃಷ್ಟ್ವಾ, ಕೃಪಾವಿಷ್ಟಃ, ಸ್ವಕಂ, ಗೃಹಂ, ನಿನಾಯ, ನಾಮ, ಚಕ್ರೇ, ಅಥ, ಕೃಪಾಯಾಃ, ವಿಷಯೌ, ಯತಃ, ಕೃಪಃ, ಕೃಪೀ, ಇತಿ, ಸಃ, ಕೃಪಃ, ತಪಃ, ವಿಷ್ಣೋಃ, ಚಕಾರ, ಹ.

**ಅರ್ಥ** :- **ಶಂತನುಃ** ಶಂತನುವು **ತೌ** ಆ **ಉಭೌ** ಇಬ್ಬರು ಮಕ್ಕಳನ್ನು **ದೃಷ್ಟ್ವಾ**ನೋಡಿ **ಕೃಪಾವಿಷ್ಟಃ (ಸನ್)** ಕರುಣೆಯಿಂದ ಕೂಡಿದವನಾಗಿ **ಸ್ವಕಂ** ತನ್ನ **ಗೃಹಂ** ಮನೆಗೆ **ನಿನಾಯ** ಒಯ್ದನು. **ಅಥ** ಆ ನಂತರ **ಯತಃ** ಯಾವ ಕಾರಣದಿಂದ **(ತೌ)** ಆ ಇಬ್ಬರು ಮಕ್ಕಳು **ಕೃಪಾಯಾಃ** ದಯೆಗೆ **ವಿಷಯೌ** ವಿಷಯರಾದರೋ **(ತಸ್ಮಾತ್)** ಆದ್ದರಿಂದಲೇ **ಕೃಪಃ** ಕೃಪ **ಕೃಪೀ** ಕೃಪಿ **ಇತಿ** ಎಂದು **ನಾಮ** ನಾಮಕರಣವನ್ನು **ಚಕ್ರೇ** ಮಾಡಿದನು. **ಸಃ** ಆ **ಕೃಪಃ** ಕೃಪನು **ವಿಷ್ಣೋಃ** ವಿಷ್ಣುವಿಗೆ ಸಂಬಂಧಿಸಿದ **ತಪಃ** ತಪಸ್ಸನ್ನು **ಚಕಾರ** ಮಾಡಿದನು **ಹ** ಆಶ್ಚರ್ಯವು.

**ತಾತ್ಪರ್ಯ** :- ಶಂತನುವು ಆ ಎರಡು ಮಕ್ಕಳನ್ನೂ ನೋಡುತ್ತಾನೆ. ಅವುಗಳಲ್ಲಿ ದಯೆಯುಂಟಾಗಿ ಆ ಮಕ್ಕಳನ್ನು ಮನೆಗೆ ತರುತ್ತಾನೆ. ತನ್ನ ಕೃಪೆಗೆ ಪಾತ್ರರಾಗಿದ್ದರಿಂದ ಆ ಮಕ್ಕಳಿಗೆ ಕೃಪ ಮತ್ತು ಕೃಪೀ ಎಂದು ನಾಮಕರಣ ಮಾಡುತ್ತಾನೆ. ಅವುಗಳಲ್ಲಿ ಕೃಪನು ವಿಷ್ಣುವನ್ನುದ್ದೇಶಿಸಿ ತಪಸ್ಸನ್ನು ಮಾಡುತ್ತಾನೆ.

**ತಸ್ಯ ಪ್ರೀತಸ್ತದಾ ವಿಷ್ಣುಃ ಸರ್ವಲೋಕೇಶ್ವರೇಶ್ವರಃ ।**
**ಪ್ರಾದಾದೇಷ್ಯತ್ಸಪ್ತರ್ಷಿತ್ವಮಾಯುಃ ಕಲ್ಪಾಂತಮೇವ ಚ ।**
**ಸ ಶಂತನುಗೃಹೇ ತಿಷ್ಠನ್ ದೇವವ್ರತಸಖಾಽಭವತ್ ॥ ೬೦ ॥**

ಪದಚ್ಛೇದ :- ತಸ್ಯ, ಪ್ರೀತಃ, ತದಾ, ವಿಷ್ಣುಃ, ಸರ್ವಲೋಕೇಶ್ವರೇಶ್ವರಃ, ಪ್ರಾದಾತ್, ಏಷ್ಯತ್ಸಪ್ತರ್ಷಿತ್ವಂ, ಆಯುಃ, ಕಲ್ಪಾಂತಂ, ಏವ, ಚ, ಸಃ, ಶಂತನುಗೃಹೇ, ತಿಷ್ಠನ್, ದೇವವ್ರತಸಖಾ, ಅಭವತ್.

**ಅರ್ಥ** :- **ತದಾ** ಆಗ **ಸರ್ವಲೋಕೇಶ್ವರೇಶ್ವರಃ** ಎಲ್ಲ ಲೋಕಗಳಿಗೆ ಅಧಿಪತಿಗಳಾದ ದೇವತೆಗಳಿಗೆ ಒಡೆಯನಾದ **ವಿಷ್ಣುಃ** ಪರಮಾತ್ಮನು **ಪ್ರೀತಃ (ಸನ್)** ಸಂತುಷ್ಟನಾಗಿ **ತಸ್ಯ** ಆ ಕೃಪನಿಗೆ **ಏಷ್ಯತ್‌ಸಪ್ತರ್ಷಿತ್ವಂ** ಮುಂದೆ ಸಪ್ತ ಋಷಿಗಳಲ್ಲಿ ಒಬ್ಬನಾಗುವ ವರವನ್ನು **ಚ** ಮತ್ತು **ಕಲ್ಪಾಂತಂ** ಏವ ಒಂದು ಮನ್ವಂತರದವರೆಗೂ **ಆಯುಃ** ಆಯಸ್ಸನ್ನು **ಪ್ರಾದಾತ್** ಕೊಟ್ಟನು. **ಸಃ** ಆ ಕೃಪನು **ಶಂತನುಗೃಹೇ** ಶಂತನುವಿನ ಮನೆಯಲ್ಲಿ **ತಿಷ್ಠನ್** ಇದ್ದು **ದೇವವ್ರತಸಖಾ** ದೇವವ್ರತನ ಸ್ನೇಹಿತನು **ಅಭವತ್** ಆದನು.

**ತಾತ್ಪರ್ಯ** :- ಕೃಪನು ಮಾಡಿದ ತಪಸ್ಸಿಗೆ ಭಗವಂತನು ಮೆಚ್ಚಿದನು. ಸಮಸ್ತ ಲೋಕಾಧಿಪತಿಗಳಾದ ದೇವತೆಗಳಿಗೇ ಸ್ವಾಮಿಯಾದ ಆ ಭಗವಂತನು ಕೃಪನಿಗೆ ಮುಂದೆ ಸಪ್ತರ್ಷಿಗಳಲ್ಲಿ ಒಬ್ಬನಾಗುವಂತೆ ಮತ್ತು ಈ ವೈವಸ್ವತ ಮನುವಿನ ಕಲ್ಪವು ಮುಗಿಯುವವರೆಗೂ ಆಯುಸ್ಸನ್ನು ವರವಾಗಿ ಕೊಟ್ಟನು. ಆ ಕೃಪನು ಶಂತನು ರಾಜನ ಮನೆಯಲ್ಲೇ ವಾಸಮಾಡಿದನು. ದೇವವ್ರತನ ಸ್ನೇಹಿತನೂ ಆದನು.

**ಪುತ್ರವಚ್ಛಂತನೋಶ್ಚಾಸೀತ್ ಸ ಚ ಪುತ್ರವದೇವ ತತ್ ।**
**ಮಿಥುನಂ ಪಾಲಯಾಮಾಸ ಕೃಪೋऽಪ್ಯಸ್ತ್ರಾಣ್ಯವಾಪ ಚ ॥ ೬೧ ॥**

ಪದಚ್ಛೇದ :- ಪುತ್ರವತ್, ಶಂತನೋಃ, ಚ, ಆಸೀತ್, ಸಃ, ಚ, ಪುತ್ರವತ್, ಏವ, ತತ್, ಮಿಥುನಂ, ಪಾಲಯಾಮಾಸ, ಕೃಪಃ, ಅಪಿ, ಅಸ್ತ್ರಾಣಿ, ಅವಾಪ, ಚ.

**ಅರ್ಥ** :- **(ಸಃ)** ಆ ಕೃಪನು **ಶಂತನೋಃ** ಶಂತನುವಿನ **ಪುತ್ರವತ್ ಚ** ಮಗನಂತೆಯೇ **ಆಸೀತ್** ಇದ್ದನು **ಸಃ ಚ** ಆ ಶಂತನುವಾದರೂ **ಪುತ್ರವದೇವ** ತನ್ನ ಮಗನಂತೆಯೇ **ತತ್** ಆ **ಮಿಥುನಂ** ಕೃಪ-ಕೃಪಿಯರನ್ನು **ಪಾಲಯಾಮಾಸ** ಪಾಲಿಸಿದನು. **ಕೃಪಃ ಅಪಿ** ಕೃಪನೂ ಕೂಡ **ಅಸ್ತ್ರಾಣಿ ಚ** ಅಸ್ತ್ರಗಳನ್ನೂ **ಅವಾಪ** ಪಡೆದನು.

**ತಾತ್ಪರ್ಯ** :- ಶಂತನುವಿನ ಪುತ್ರನಂತೆಯೇ ಕೃಪನು ಇದ್ದನು. ಶಂತನುವೂ ಕೂಡ ತನ್ನ ಮಗನಂತೆಯೇ ಆ ಇಬ್ಬರು ಮಕ್ಕಳಾದ ಕೃಪ-ಕೃಪಿಯರನ್ನು ನೋಡಿಕೊಂಡನು. ಕೃಪನು ಅಸ್ತ್ರವಿದ್ಯೆಯನ್ನೂ ಕಲಿತನು.

**ಸರ್ವವೇದಾನಧಿಜಗೌ ಸರ್ವಶಾಸ್ತ್ರಾಣಿ ಕೌಶಿಕಾತ್ ।**
**ತತ್ವಜ್ಞಾನಂ ತಥಾ ವ್ಯಾಸಾದಾಪ್ಯ ಸರ್ವಜ್ಞತಾಂ ಗತಃ ॥ ೬೨ ॥**

ಪದಚ್ಛೇದ :- ಸರ್ವವೇದಾನ್, ಅಧಿಜಗೌ, ಸರ್ವಶಾಸ್ತ್ರಾಣಿ, ಕೌಶಿಕಾತ್, ತತ್ತ್ವಜ್ಞಾನಂ, ತಥಾ, ವ್ಯಾಸಾತ್, ಆಪ್ಯ, ಸರ್ವಜ್ಞತಾಂ, ಗತಃ.

**ಅರ್ಥ** :- (**ಸಃ**) ಆ ಕೃಪನು **ಕೌಶಿಕಾತ್** ವಿಶ್ವಾಮಿತ್ರನಿಂದ **ಸರ್ವಶಾಸ್ತ್ರಾಣಿ** ಎಲ್ಲ ಶಾಸ್ತ್ರಗಳನ್ನೂ **ಸರ್ವವೇದಾನ್** ಎಲ್ಲ ವೇದಗಳನ್ನೂ **ಅಧಿಜಗೌ** ಅಧ್ಯಯನ ಮಾಡಿದನು. **ತಥಾ** ಹಾಗೆಯೇ **ವ್ಯಾಸಾತ್** ವೇದವ್ಯಾಸರಿಂದ **ತತ್ತ್ವಜ್ಞಾನಂ** ತತ್ತ್ವಜ್ಞಾನವನ್ನು **ಅವಾಪ್ಯ** ಪಡೆದು **ಸರ್ವಜ್ಞತಾಂ** ಸರ್ವಜ್ಞತ್ವವನ್ನು **ಗತಃ** ಹೊಂದಿದನು.

**ತಾತ್ಪರ್ಯ** :- ಆ ಕೃಪನು ವಿಶ್ವಾಮಿತ್ರರಿಂದ ಎಲ್ಲ ವೇದಗಳನ್ನು, ಎಲ್ಲ ಶಾಸ್ತ್ರಗಳನ್ನು ಕಲಿತನು. ವ್ಯಾಸರಿಂದ ತತ್ವಜ್ಞಾನವನ್ನು ಪಡೆದು ಸರ್ವಜ್ಞನಾದನು.

**ಯದಾ ಹಿ ಜಾತಃ ಸ ಕೃಪಸ್ತದೈವ**
**ಬೃಹಸ್ಪತೇಃ ಸೂನುರಗಾಚ್ಚ ಗಂಗಾಮ್ ।**
**ಸ್ನಾತುಂ ಘೃತಾಚೀಂ ಸ ದದರ್ಶ ತತ್ರ**
**ಶ್ಲಥದ್ದುಕೂಲಾಂ ಸುರವರ್ಯಕಾಮಿನೀಮ್ ॥ ೬೩ ॥**

ಪದಚ್ಛೇದ :- ಯದಾ, ಹಿ, ಜಾತಃ, ಸಃ, ಕೃಪಃ, ತದಾ, ಏವ, ಬೃಹಸ್ಪತೇಃ, ಸೂನುಃ, ಅಗಾತ್, ಚ, ಗಂಗಾಂ, ಸ್ನಾತುಂ, ಘೃತಾಚೀಂ, ಸಃ, ದದರ್ಶ, ತತ್ರ, ಶ್ಲಥದ್ದುಕೂಲಾಂ, ಸುರವರ್ಯಕಾಮಿನೀಂ.

**ಅರ್ಥ** :- **ಯದಾ** ಯಾವಾಗ **ಕೃಪಃ**ಕೃಪನು **ಜಾತಃ** ಹಿಹುಟ್ಟಿದನೋ **ತದಾ ಏವ** ಆಗಲೇ **ಬೃಹಸ್ಪತೇಃ** ಬೃಹಸ್ಪತಿಯ **ಸೂನುಃ** ಮಗನಾದ ಭರದ್ವಾಜನು **ಸ್ನಾತುಂ**ಸ್ನಾನಮಾಡಲು **ಗಂಗಾಂ** ಗಂಗೆಯನ್ನು ಕುರಿತು **ಅಗಾತ್**ಹೋದನು. **ಸಃ** ಆ ಭರಧ್ವಾಜನು **ತತ್ರ** ಅಲ್ಲಿ **ಸುರವರ್ಯಕಾಮಿನೀಂ** ದೇವತೆಗಳ ಭೋಗಸ್ತ್ರೀಯಾದ **ಶ್ಲಥದ್ದುಕೂಲಾಂ** ಜಾರಲ್ಪಟ್ಟ ಬಟ್ಟೆಯುಳ್ಳ **ಘೃತಾಚೀಂ**ಘೃತಾಚಿಯನ್ನು **ದದರ್ಶ** ನೋಡಿದನು.

**ತಾತ್ಪರ್ಯ** :- ಯಾವಾಗ ಕೃಪನು ಹುಟ್ಟಿದನೋ ಅದೇ ಸಮಯದಲ್ಲಿ ಬೃಹಸ್ಪತ್ಯಾಚಾರ್ಯರ ಮಗನಾದ ಭರಧ್ವಾಜ ಮುನಿಯು ಸ್ನಾನಕ್ಕಾಗಿ ಗಂಗೆಗೆ ಹೋದನು. ಅಲ್ಲಿ ದೇವತೆಗಳ ಭೋಗಸ್ತ್ರೀಯಾದ ಘೃತಾಚಿಯನ್ನು ಮೇಲುಬಟ್ಟೆ ಜಾರಿದಾಗ ನೋಡಿದನು.

**ತದ್ದರ್ಶನಾತ್ ಸ್ಕನ್ನಮಥೇಂದ್ರಿಯಂ ಸ**
**ದ್ರೋಣೇ ದಧಾರಾಽಶು ತತೋಽಭವತ್ಸ್ವಯಮ್ ।**
**ಅಂಭೋಜಜಾವೇಶಯುತೋ ಬೃಹಸ್ಪತಿಃ**
**ಕರ್ತುಂ ಹರೇಃ ಕರ್ಮ ಭುವೋ ಭರೋಧೃತೌ ॥ ೬೪ ॥**

ಪದಚ್ಛೇದ :- ತದ್ದರ್ಶನಾತ್, ಸ್ಕನ್ನಮ್, ಅಥ, ಇಂದ್ರಿಯಮ್, ಸಃ, ದ್ರೋಣೇ, ದಧಾರ, ಆಶು, ತತಃ, ಅಭವತ್, ಸ್ವಯಮ್, ಅಂಭೋಜಜಾವೇಶಯುತಃ, ಬೃಹಸ್ಪತಿಃ, ಕರ್ತುಂ, ಹರೇಃ, ಕರ್ಮ, ಭುವಃ, ಭರೋಧೃತೌ.

**ಅರ್ಥ** :- **ಅಥ** ಅನಂತರ **ಸಃ** ಆ ಭರಧ್ವಾಜ ಮಹರ್ಷಿಯು **ತದ್ದರ್ಶನಾತ್** ಘೃತಾಚಿಯನ್ನು ನೋಡಿದ್ದರಿಂದ **ಸ್ಕನ್ನಂ** ಹೊರಬಿದ್ದಂತ **ಇಂದ್ರಿಯಂ** ರೇತಸ್ಸನ್ನು **ಆಶು** ಶೀಘ್ರವಾಗಿ **ದ್ರೋಣೇ** ದೊನ್ನೆಯಲ್ಲಿ(ಅಥವಾ ದಾರುಮಯ ಪಾತ್ರೆಯಲ್ಲಿ) **ದಧಾರ** ಇಟ್ಟನು. **ತತಃ** ಆ ರೇತಸ್ಸಿನಿಂದ **ಬೃಹಸ್ಪತಿಃ** ಬೃಹಸ್ಪತಿಯು **ಅಂಭೋಜಜಾವೇಶಯುತಃ (ಸನ್)** ಕಮಲದಲ್ಲಿ ಹುಟ್ಟಿದ ಚತುರ್ಮುಖಬ್ರಹ್ಮನ ಆವೇಶದಿಂದ ಕೂಡಿದವನಾಗಿ **ಭುವಃ** ಭೂಮಿಗೆ **ಭರೋದ್ಧೃತೌ** ಭಾರಭೂತರಾದ ಅಸುರರ ಸಂಹಾರದಲ್ಲಿ **ಹರೇಃ** ಭಗವಂತನ **ಕರ್ಮ** ಕೆಲಸವನ್ನು **ಕರ್ತುಂ** ಮಾಡಲು **ಸ್ವಯಂ** ತಾನೇ **ಅಭವತ್** ಹುಟ್ಟಿದನು.

**ತಾತ್ಪರ್ಯ** :- ಆ ಘೃತಾಚಿಯನ್ನು ನೋಡಿದಾಗ ಭರದ್ವಾಜರಿಗೆ ವೀರ್ಯಸ್ಖಲನವಾಯಿತು. ತತ್‌ಕ್ಷಣ ಆ ವೀರ್ಯವನ್ನು ಒಂದು ದೊನ್ನೆಯಲ್ಲಿ ಇಡುತ್ತಾರೆ. ದ್ರೋಣಪಾತ್ರೆಯಲ್ಲಿದ್ದ ಆ ವೀರ್ಯದಿಂದ ಬೃಹಸ್ಪತಿಗಳು ಶ್ರೀಹರಿಯ ಸೇವಾರೂಪ ಕಾರ್ಯವಾದ ಭೂಮಿಗೆ ಭಾರರಾದ ಅಸುರರ ಸಂಹಾರವನ್ನು ಮಾಡಲು ಚತುರ್ಮುಖ ಬ್ರಹ್ಮದೇವರ ಆವೇಶದಿಂದ ಕೂಡಿದವರಾಗಿ ತಾವೇ ಹುಟ್ಟಿಬರುತ್ತಾರೆ.

ದ್ರೋಣೇತಿ ನಾಮಾಸ್ಯ ಚಕಾರ ತಾತೋ
ಮುನಿರ್ಭರಧ್ವಾಜ ಉತಾಸ್ಯ ವೇದಾನ್ ।
ಅಧ್ಯಾಪಯಾಮಾಸ ಸಶಾಸ್ತ್ರಸಂಘಾನ್
ಸರ್ವಜ್ಞತಾಮಾಪ ಚ ಸೋಽಚಿರೇಣ ॥ ೬೫ ॥

ಪದಚ್ಛೇದ :- ದ್ರೋಣಃ, ಇತಿ, ನಾಮ, ಅಸ್ಯ, ಚಕಾರ, ತಾತಃ, ಮುನಿಃ, ಭರಧ್ವಾಜಃ, ಉತ, ಅಸ್ಯ, ವೇದಾನ್, ಅಧ್ಯಾಪಯಾಮಾಸ, ಸಶಾಸ್ತ್ರಸಂಘಾನ್, ಸರ್ವಜ್ಞತಾಮ್, ಆಪ, ಚ, ಸಃ, ಅಚಿರೇಣ.

**ಅರ್ಥ** :- **ತಾತಃ** ತಂದೆಯಾದ **ಮುನಿಃ** ಋಷಿಯಾದ **ಭರದ್ವಾಜಃ** ಭರದ್ವಾಜರು **ಅಸ್ಯ** ಹುಟ್ಟಿದ ಈ ಮಗನಿಗೆ **ದ್ರೋಣಃ ಇತಿ** ದ್ರೋಣನೆಂದು **ನಾಮ** ನಾಮಕರಣವನ್ನು **ಚಕಾರ** ಮಾಡಿದರು. **ಉತ** ಉಪನಯನಾದಿ ಸಂಸ್ಕಾರವಾದ ನಂತರ **ಅಸ್ಯ** ಈ ದ್ರೋಣನಿಗೆ **ಸಶಾಸ್ತ್ರಸಂಘಾನ್** ಪೌರುಷೇಯಶಾಸ್ತ್ರಗಳಿಂದ ಸಹಿತವಾದ **ವೇದಾನ್** ಅಪೌರುಷೇವಾದ ವೇದಗಳನ್ನು **ಅಧ್ಯಾಪಯಾಮಾಸ** ಪಾಠಮಾಡಿದರು. **ಸಃ ಚ** ಆ ದ್ರೋಣನಾದರೂ **ಅಚಿರೇಣ** ಶೀಘ್ರವಾಗಿಯೇ **ಸರ್ವಜ್ಞತಾಂ** ಸರ್ವಜ್ಞತ್ವವನ್ನು **ಆಪ** ಪಡೆದನು.

**ತಾತ್ಪರ್ಯ** :- ತಂದೆಯಾದ ಭರದ್ವಾಜಮಹರ್ಷಿಯು ದ್ರೋಣದಲ್ಲಿ ಹುಟ್ಟಿದ ಕಾರಣ ಮಗುವಿಗೆ ದ್ರೋಣ ಎಂದೇ ಹೆಸರನ್ನು ಇಟ್ಟರು. ನಂತರ (ಉಪನಯನಾದಿ ಸಂಸ್ಕಾರವಾದ ನಂತರ) ಮಗನಾದ ದ್ರೋಣನಿಗೆ ಅಪೌರುಷೇಯವಾದ ವೇದಗಳನ್ನು ಮತ್ತು ಪೌರುಷೇವಾದ ಶಾಸ್ತ್ರಗಳನ್ನು ಪಾಠ ಮಾಡಿದರು. ಆ ದ್ರೋಣನು ಶೀಘ್ರವಾಗಿಯೇ ಎಲ್ಲವನ್ನೂ ತಿಳಿದುಕೊಂಡನು.

ಕಾಲೇ ಚ ತಸ್ಮಿನ್ ಪೃಷತೋಽನಪತ್ಯೋ ವನೇಷು ಪಾಂಚಾಲಪತಿಶ್ಚಚಾರ ।
ತಪೋ ಮಹತ್ತಸ್ಯ ತಥಾ ವರಾಪ್ಸರಾವಲೋಕನಾತ್ ಸ್ಕಂದಿತಮಾಶು ರೇತಃ ॥ ೬೬ ॥

ಪದಚ್ಛೇದ :- ಕಾಲೇ, ಚ, ತಸ್ಮಿನ್, ಪೃಷತಃ, ಅನಪತ್ಯಃ, ವನೇಷು, ಪಾಂಚಾಲಪತಿಃ, ಚಚಾರ. ತಪಃ, ಮಹತ್, ತಸ್ಯ, ತಥಾ, ವರಾಪ್ಸರಾವಲೋಕನಾತ್, ಸ್ಕಂದಿತಂ, ಆಶು, ರೇತಃ

**ಅರ್ಥ** :- **ತಸ್ಮಿನ್ ಚ** ದ್ರೋಣನು ಹುಟ್ಟಿದ ಅದೇ **ಕಾಲೇ** ಕಾಲದಲ್ಲಿ **ಅನಪತ್ಯಃ** ಮಕ್ಕಳಿಲ್ಲದ **ಪಾಂಚಾಲಪತಿಃ** ಪಾಂಚಾಲ ದೇಶದ ರಾಜನಾದ

**ಪೃಷತಃ** ಪೃಷತನು **ವನೇಷು** ಕಾಡುಗಳಲ್ಲಿ **ಮಹತ್** ದೊಡ್ಡದಾದ **ತಪಃ** ತಪಸ್ಸನ್ನು **ಚಚಾರ** ಮಾಡಿದನು. **ತಥಾ** ಹಾಗೆಯೇ **ವರಾಪ್ಸರಾವಲೋಕನಾತ್** ಶ್ರೇಷ್ಠ ಅಪ್ಸರಸೆಯಾದ ಮೇನಕೆಯನ್ನು ನೋಡಿದುದರಿಂದ **ಆಶು** ಶೀಘ್ರವಾಗಿ **ತಸ್ಯ** ಅವನ **ರೇತಃ** ವೀರ್ಯವು **ಸ್ಕಂದಿತಂ** ಹೊರಬಂದಿತು.

**ತಾತ್ಪರ್ಯ** :- ದ್ರೋಣನು ಹುಟ್ಟಿದ ಅದೇ ಕಾಲದಲ್ಲಿ ಪಾಂಚಾಲ ದೇಶಕ್ಕೆ ಅಧಿಪತಿಯಾದ ಪೃಷತನೆಂಬ ರಾಜನಿದ್ದನು. ಅವನು ತನಗೆ ಮಕ್ಕಳಿಲ್ಲದ ಕಾರಣ ಮಕ್ಕಳಾಗಲೆಂದು ಕಾಡಿನಲ್ಲಿ ದೊಡ್ಡ ತಪಸ್ಸನ್ನು ಆಚರಿಸಿದನು. ಅಲ್ಲಿಗೆ ಬಂದ ಅಪ್ಸರಶ್ರೇಷ್ಠಳಾದ ಮೇನಕೆಯನ್ನು ನೋಡಿ ರಾಜನಿಗೆ ವೀರ್ಯಸ್ಖಲನವಾಯಿತು.

**ಸ ತದ್ವಿಲಜ್ಜಾವಶತಃ ಪದೇನ**
**ಸಮಾಕ್ರಮತ್ತಸ್ಯ ಬಭೂವ ಸೂನುಃ ।**
**ಹೂಹೂ ತು ನಾಮ್ನಾ ಸ ವಿರಿಂಚಗಾಯಕೋ**
**ನಾಮ್ನಾSವಹೋ ಯೋ ಮರುತಾಂ ತದಂಶಯುಕ್ ॥ ೬೭ ॥**

ಪದಚ್ಛೇದ :- ಸಃ, ತತ್, ವಿಲಜ್ಜಾವಶತಃ, ಪದೇನ, ಸಮಾಕ್ರಮತ್. ತಸ್ಯ, ಬಭೂವ, ಸೂನುಃ, ಹೂಹೂ, ತು, ನಾಮ್ನಾ, ಸಃ, ವಿರಿಂಚಗಾಯಕಃ, ನಾಮ್ನಾ, ಆವಹಃ, ಯಃ, ಮರುತಾಂ, ತದಂಶಯುಕ್.

**ಅರ್ಥ** :- **ಸಃ** ಆ ಪೃಷತ ರಾಜನು **ವಿಲಜ್ಜಾವಶತಃ** ನಾಚಿಕೆಯಿಂದ **ತತ್** ಆ ರೇತಸ್ಸನ್ನು **ಪದೇನ** ಕಾಲಿನಿಂದ **ಸಮಾಕ್ರಮತ್** ಮುಚ್ಚಿದನು. **ತಸ್ಯ** ಆ ರೇತಸ್ಸಿನ ದೆಸೆಯಿಂದ **ಸೂನುಃ** ಮಗನು **ಬಭೂವ** ಹುಟ್ಟಿದನು. **ಸಃ** ಹುಟ್ಟಿದ ಆ ಮಗನು **ನಾಮ್ನಾ ತು** ಹೆಸರಿನಿಂದ **ಹೂಹೂ (ಇತಿ ಪ್ರಸಿದ್ಧಃ)** ಹೂಹೂ ಎಂದು ಪ್ರಸಿದ್ಧನಾದ **ವಿರಿಂಚಗಾಯಕಃ** ಚತುರ್ಮುಖಬ್ರಹ್ಮನ ಗಾಯಕನು **ಮರುತಾಂ** ಮರುತರಲ್ಲಿ **ಯಃ** ಯಾವನು **ನಾಮ್ನಾ** ಹೆಸರಿನಿಂದ **ಆವಹಃ (ಇತಿ ಪ್ರಸಿದ್ಧಃ)** ಆವಹನೆಂದು ಪ್ರಸಿದ್ಧನಾಗಿದ್ದಾನೋ **ತದಂಶಯುಕ್** ಅವನ ಆವೇಶದಿಂದ ಕೂಡಿದವನು.

**ತಾತ್ಪರ್ಯ** :- ಹೊರಬಂದ ರೇತಸ್ಸನ್ನು ನೋಡಿ ಪೃಷತರಾಜನಿಗೆ ನಾಚಿಕೆಯಾಯಿತು. ಅದು ಯಾರಿಗೂ ಕಾಣದಿರಲಿ ಎಂದು ಕಾಲಿನಿಂದ

ಮುಚ್ಚುತ್ತಾನೆ. ಆ ರೇತಸ್ಸಿನಿಂದ ಒಬ್ಬ ಮಗನು ಹುಟ್ಟುತ್ತಾನೆ. ಅವನು ಬ್ರಹ್ಮ ಲೋಕದಲ್ಲಿ ಗಾಯಕನಾದ ಹೂಹೂ ಎಂಬ ಗಂಧರ್ವ. ಮರುತ್‌ಗಣದಲ್ಲಿ ಒಬ್ಬನಾದ ಆವಹನೆಂಬ ಮರುತನ ಅವೇಶದಿಂದ ಕೂಡಿಕೊಂಡು ಹುಟ್ಟುತ್ತಾನೆ.

**ಸ ದ್ರೋಣತಾತಾತ್ ಸಮವಾಪ ವೇದಾನ್**
**ಅಸ್ತ್ರಾಣಿ ವಿದ್ಯಾಶ್ಚ ತಥಾ ಸಮಸ್ತಾಃ ।**
**ದ್ರೋಣೇನ ಯುಕ್ತಃ ಸ ತದಾ ಗುರೋಃ ಸುತಂ**
**ಸಹೈವ ನೌ ರಾಜ್ಯಮಿತಿ ಹ್ಯವಾದೀತ್ ॥ ೬೮ ॥**

ಪದಚ್ಛೇದ :- **ಸಃ, ದ್ರೋಣತಾತಾತ್, ಸಮವಾಪ, ವೇದಾನ್, ಅಸ್ತ್ರಾಣಿ, ವಿದ್ಯಾಃ, ಚ, ತಥಾ, ಸಮಸ್ತಾಃ, ದ್ರೋಣೇನ, ಯುಕ್ತಃ, ಸಃ, ತದಾ, ಗುರೋಃ, ಸುತಂ, ಸಹ, ಏವ, ನೌ, ರಾಜ್ಯಮ್. ಇತಿ, ಅವಾದೀತ್.**

**ಅರ್ಥ** :- **ಸಃ** ಆ ಪೃಷತನ ಮಗನು **ದ್ರೋಣೇನ** ದ್ರೋಣನಿಂದ **ಯುಕ್ತಃ (ಸನ್)** ಕೂಡಿದವನಾಗಿ **ದ್ರೋಣತಾತಾತ್** ದ್ರೋಣನ ತಂದೆಯಾದ ಭರಧ್ವಾಜರಿಂದ **ವೇದಾನ್** ವೇದಗಳನ್ನು **ಅಸ್ತ್ರಾಣಿ** ಅಸ್ತ್ರಗಳನ್ನು **ತಥಾ** ಹಾಗೆಯೇ **ಸಮಸ್ತಾಃ** ಎಲ್ಲಾ **ವಿದ್ಯಾಶ್ಚ** ವಿದ್ಯೆಗಳನ್ನೂ ಕೂಡ **ಸಮವಾಪ** ಪಡೆದನು. **ತದಾ** ವಿದ್ಯಾಭ್ಯಾಸಮಾಡುವ ಕಾಲದಲ್ಲಿ **ಸಃ** ಆ ಪೃಷತನ ಮಗನು **ಗುರೋಃ** ಗುರುಗಳಾದ ಭರಧ್ವಾಜರ **ಸುತಂ (ಪ್ರತಿ)** ಮನಗಾದ ದ್ರೋಣನನ್ನು ಕುರಿತು **ನೌ** ನಮ್ಮಿಬ್ಬರಿಗೆ **ಸಹೈವ** ಸೇರಿಯೇ **ರಾಜ್ಯಂ** ರಾಜ್ಯವು **ಇತಿ** ಎಂದು **ಅವಾದೀತ್ ಹಿ** ಹೇಳಿದನಷ್ಟೆ

**ತಾತ್ಪರ್ಯ** :- ಪೃಷತನ ಮಗನು ಭರಧ್ವಾಜ ಮಹರ್ಷಿಗಳಿಂದ ಅವರ ಮಗನಾದ ದ್ರೋಣನೊಂದಿಗೆ ಕೂಡಿಕೊಂಡು ವೇದಾದಿ ಶಾಸ್ತ್ರಗಳು ಹಾಗು ಅಸ್ತ್ರಗಳು, ಹೀಗೆ ಎಲ್ಲ ವಿದ್ಯೆಗಳನ್ನೂ ಕಲಿತನು. ವಿದ್ಯಾಭ್ಯಾಸ ಮಾಡುವ ಕಾಲದಲ್ಲೇ ಪೃಷತನ ಮಗನು ದ್ರೋಣನಿಗೆ 'ನನ್ನ ತಂದೆಯು ನನ್ನನ್ನು ಯುವ ರಾಜನನ್ನಾಗಿ ಪಟ್ಟಾಭಿಷೇಕ ಮಾಡಿದಾಗ ಆ ರಾಜ್ಯವು ಇಬ್ಬರಿಗೂ ಸೇರಿದ್ದಾಗಿರುತ್ತದೆ. ನಿನಗಿಂತಲೂ ರಾಜ್ಯವು ನನಗೆ ಪ್ರಿಯವಾದುದಲ್ಲ' ಎಂದು ಹೇಳುತ್ತಾನೆ.

ಪದೇ ದ್ರುತತ್ವಾತ್ ದ್ರುಪದಾಭಿಧೇಯಃ
ಸ ರಾಜ್ಯಮಾಪಾऽಥ ನಿಜಾಂ ಕೃಪೀಂ ಸಃ ।
ದ್ರೋಣೋऽಪಿ ಭಾರ್ಯಾಂ ಸಮವಾಪ್ಯ ಸರ್ವ-
ಪ್ರತಿಗ್ರಹೋಜ್ಝಶ್ಚ ಪುರೇऽವಸತ್ಸುಖೀ ॥ ೬೯ ॥

ಪದಚ್ಛೇದ :- ಪದೇ, ದ್ರುತತ್ವಾತ್, ದ್ರುಪದಾಭಿಧೇಯಃ, ಸಃ, ರಾಜ್ಯಂ, ಆಪ, ಅಥ, ನಿಜಾಂ, ಕೃಪೀಂ, ಸಃ, ದ್ರೋಣಃ, ಅಪಿ, ಭಾರ್ಯಾಂ, ಸಮವಾಪ್ಯ, ಸರ್ವಪ್ರತಿಗ್ರಹೋಜ್ಝಃ, ಚ, ಪುರೇ, ಅವಸತ್, ಸುಖೀ.

**ಅರ್ಥ** :- **ಪದೇ** ಕಾಲಿನಿಂದ **ದ್ರುತತ್ವಾತ್** ಮುಚ್ಚಲ್ಪಟ್ಟದ್ದರಿಂದ **ದ್ರುಪದಾಭಿಧೇಯಃ** ದ್ರುಪದನೆಂಬ ಹೆಸರಿನಿಂದ ಪ್ರಸಿದ್ಧನಾದ **ಸಃ** ಆ ಪೃಷತನ ಮಗನು **ರಾಜ್ಯಂ** ರಾಜ್ಯವನ್ನು **ಆಪ** ಪಡೆದನು. **ಅಥ** ಆ ನಂತರ **ದ್ರೋಣಃ ಅಪಿ** ದ್ರೋಣನೂ ಕೂಡ **ನಿಜಾಂ** ಮೂಲರೂಪದಲ್ಲೂ ತನ್ನವಳೇ ಆದ **ಕೃಪೀಂ**ಕೃಪಿಯನ್ನು **ಭಾರ್ಯಾಂ** (ಈ ಜನ್ಮದಲ್ಲೂ) ಹೆಂಡತಿಯನ್ನಾಗಿ **ಸಮವಾಪ್ಯ** ಪಡೆದು **ಸರ್ವಪ್ರತಿಗ್ರಹೋಜ್ಝಃ ಚ** ಎಲ್ಲವಿಧವಾದ ಪ್ರತಿಗ್ರಹಗಳಿಂದಲೂ ರಹಿತನಾಗಿ **ಸುಖೀ (ಸನ್)** ಸುಖಿಯಾಗಿ **ಪುರೇ** ಹಸ್ತಿನಪುರದಲ್ಲಿ **ಅವಸತ್** ವಾಸಮಾಡಿದನು.

**ತಾತ್ಪರ್ಯ** :- ಪೃಷತನು ಕಾಲಿನಿಂದ ಮುಚ್ಚಿದ ರೇತಸ್ಸಿನಿಂದ ಹುಟ್ಟಿದವನಾದ್ದರಿಂದ ದ್ರುಪದನೆಂಬ ಹೆಸರಿನಿಂದಲೇ ಪ್ರಸಿದ್ಧನಾದನು. ನಂತರ ಆ ದ್ರುಪದನು ರಾಜ್ಯವನ್ನು ಪಡೆದು ರಾಜನಾದನು. ಹಾಗೆಯೇ ದ್ರೋಣನೂ ಕೂಡ ಮೂಲರೂಪದಲ್ಲಿಯೂ ತನ್ನ ಹೆಂಡತಿಯೇ ಆಗಿದ್ದ ಕೃಪಿಯನ್ನು ಈ ಜನ್ಮದಲ್ಲೂ ಹೆಂಡತಿಯಾಗಿ ಪಡೆದನು. ದ್ರುಪದನ ರಾಜ್ಯದ ಅರ್ಧಭಾಗದಷ್ಟು ಅಕಾರವಿದ್ದರೂ ದ್ರೋಣನು ಯಾವುದೇ ರೀತಿಯ ಪ್ರತಿಗ್ರಹವನ್ನು ಮಾಡದೇ ಸುಖವಾಗಿ ಹಸ್ತಿನಾಪುರದಲ್ಲಿ ವಾಸಿಸುತ್ತಿದ್ದನು.

ಶಿಲೋಞ್ಛವೃತ್ತ್ಯೈವ ಹಿ ವರ್ತಯನ್ ಸ
ಧರ್ಮಂ ಮಹಾಂತಂ ವಿರಜಂ ಜುಷಾಣಃ ।
ಉವಾಸ ನಾಗಾಖ್ಯಪುರೇ ಸಖಾ ಸ
ದೇವವ್ರತಸ್ಯಾऽಥ ಕೃಪಸ್ಯ ಚೈವ ॥ ೭೦ ॥

ಪದಚ್ಛೇದ :- ಶಿಲೋಞ್ಛವೃತ್ತ್ಯಾ, ಏವ, ಹಿ, ವರ್ತಯನ್, ಸಃ, ಧರ್ಮಂ, ಮಹಾಂತಂ, ವಿರಜಂ, ಜುಷಾಣಃ, ಉವಾಸ, ನಾಗಾಖ್ಯಪುರೇ, ಸಖಾ, ಸಃ, ದೇವವ್ರತಸ್ಯ, ಅಥ, ಕೃಪಸ್ಯ, ಚ, ಏವ.

**ಅರ್ಥ** :- **ಶಿಲೋಞ್ಛವೃತ್ತ್ಯಾ** ಏವ ಶಿಲ ಮತ್ತು ಉಂಛವೆಂಬ ವೃತ್ತಿಯಿಂದಲೇ **ವರ್ತಯನ್** ಬದುಕುತ್ತಿದ್ದ **ಮಹಾಂತಂ** ದೊಡ್ಡದಾದ **ವಿರಜಂ** ದೋಷರಹಿತವಾದ **ಧರ್ಮಂ** ಧರ್ಮವನ್ನು **ಜುಷಾಣಃ** ಮಾಡುತ್ತಿದ್ದ **ಸಃ** ಹಿಆ ದ್ರೋಣನಾದರೂ **ನಾಗಾಖ್ಯಪುರೇ** ಹಸ್ತಿನಾಪಟ್ಟಣದಲ್ಲಿ **ಉವಾಸ** ವಾಸಿಸಿದನು **ಸಃ** ಆ ದ್ರೋಣನು **ದೇವವ್ರತಸ್ಯ** ದೇವವ್ರತನ **ಅಥ** ಹಾಗೆಯೇ **ಕೃಪಸ್ಯ ಚ** ಕೃಪನ **ಸಖಾ ಏವ** ಸ್ನೇಹಿತನಾಗಿದ್ದನು.

**ತಾತ್ಪರ್ಯ** :- ಶಿಲ ಮತ್ತು ಉಂಛವೆಂಬ ಕಷ್ಟಕರವಾದ ವೃತ್ತಿಯಿಂದ ದ್ರೋಣನು ಬದುಕುತ್ತಿದ್ದನು ದೊಡ್ಡದಾದ ನಿರ್ದುಷ್ಟವಾದ ಈ ವ್ರತಗಳನ್ನು ಮಾಡುತ್ತಾ ಹಸ್ತಿನಾಪಟ್ಟಣದಲ್ಲೇ ವಾಸವಾಗಿದ್ದನು. ಅವನು ಭೀಷ್ಮ ಮತ್ತು ಕೃಪರ ಸ್ನೇಹಿತನಾಗಿದ್ದನು.

**ತೇಷಾಂ ಸಮಾನೋ ವಯಸಾ ವಿರಾಟ-**
**ಸ್ತ್ವಭೂದ್ಧಹಾನಾಮ ವಿಧಾತೃಗಾಯಕಃ ।**
**ಮರುತ್ಸು ಯೋ ವಿವಹೋ ನಾಮ ತಸ್ಯಾ-**
**ಪ್ಯಂಶೇನ ಯುಕ್ತೋ ನಿಜಧರ್ಮವರ್ತೀ ॥ ೭೦ ॥**

ಪದಚ್ಛೇದ :- ತೇಷಾಂ, ಸಮಾನಃ, ವಯಸಾ, ವಿರಾಟಃ, ತು, ಅಭೂತ್, ಹಹಾನಾಮ, ವಿಧಾತೃಗಾಯಕಃ, ಮರುತ್ಸು ಯಃ, ವಿವಹಃ, ನಾಮ, ತಸ್ಯ, ಅಪಿ, ಅಂಶೇನ, ಯುಕ್ತಃ, ನಿಜಧರ್ಮವರ್ತೀ.

**ಅರ್ಥ** :- **ವಯಸಾ** ವಯಸ್ಸಿನಿಂದ **ತೇಷಾಂ** ದ್ರುಪದ, ದ್ರೋಣ, ಕೃಪ, ದೇವವ್ರತರಿಗೆ **ಸಮಾನಃ** ಸಮಾನನಾದ. **ಹಹಾನಾಮ** ಹಹಾ ಎಂಬ ಹೆಸರಿನಿಂದ ಪ್ರಸಿದ್ಧನಾದ **ವಿಧಾತೃಗಾಯಕಃ** ಚತುರ್ಮುಖಬ್ರಹ್ಮನ ಗಾಯಕನಾದ **ಮರುತ್ಸು** ಮರುತರಲ್ಲಿ **ಯಃ** ಯಾವನು **ವಿವಹಃ ನಾಮ** ವಿವಹನೆಂದು ಪ್ರಸಿದ್ಧನಾಗಿದ್ದಾನೋ **ತಸ್ಯ** ಅವನ **ಅಂಶೇನ ಅಪಿ** ಅಂಶದಿಂದಲೂ ಕೂಡ **ಯುಕ್ತಃ** ಕೂಡಿದ **ನಿಜಧರ್ಮವರ್ತೀ** ಸ್ವವರ್ಣಾಶ್ರಮೋಚಿತವಾದ ಧರ್ಮದಲ್ಲಿರುವ **ವಿರಾಟಃ** ವಿರಾಟರಾಜನು **ಅಭೂತ್** ಹುಟ್ಟಿದನು.

**ತಾತ್ಪರ್ಯ** :- ವಯಸ್ಸಿನಲ್ಲಿ ದ್ರುಪದ-ದ್ರೋಣ-ಕೃಪ-ದೇವವ್ರತರಿಗೆ ಸಮಾನನಾಗಿದ್ದ ವಿರಾಟರಾಜನೂ ಹುಟ್ಟಿದನು. ಇವನು ಚತುರ್ಮುಖಬ್ರಹ್ಮ ದೇವರ ಲೋಕದಲ್ಲಿ ಗಾಯಕನಾದ ಹಹಾ ಎಂಬ ಹೆಸರಿನ ಗಂಧರ್ವ. ಮರುದ್ಗಣದಲ್ಲಿ ವಿವಹನೆಂದು ಪ್ರಸಿದ್ಧನಾದ ಮರುತ್ತಿನ ಆವೇಶದಿಂದಲೂ ಕೂಡಿದ್ದನು. ತನ್ನ ವರ್ಣ ಮತ್ತು ಆಶ್ರಮಕ್ಕೆ ವಿಹಿತವಾದ ಕರ್ಮಗಳನ್ನು ಮಾಡುತ್ತಿದ್ದನು.

**ತತಃ ಕದಾಚಿನ್ಮೃಗಯಾಂ ಗತಃ ಸ**
**ದದರ್ಶ ಕನ್ಯಾಪ್ರವರಾಂ ತು ಶಂತನುಃ ।**
**ಯಾ ಪೂರ್ವಸರ್ಗೇ ಪಿತೃಪುತ್ರಿಕಾ ಸತೀ**
**ಚಚಾರ ವಿಷ್ಣೋಸ್ತಪ ಉತ್ತಮಂ ಚಿರಮ್ ॥ ೭೨ ॥**

ಪದಚ್ಛೇದ :- ತತಃ, ಕದಾಚಿತ್, ಮೃಗಯಾಂ, ಗತಃ, ಸಃ, ದದರ್ಶ, ಕನ್ಯಾಪ್ರವರಾಂ, ತು, ಶಂತನುಃ. ಯಾ, ಪೂರ್ವಸರ್ಗೇ, ಪಿತೃಪುತ್ರಿಕಾ, ಸತೀ, ಚಚಾರ, ವಿಷ್ಣೋಃ, ತಪಃ ಉತ್ತಮಂ, ಚಿರಮ್.

**ಅರ್ಥ** :- **ತತಃ** ಆ ನಂತರ **ಸಃ** ಆ **ಶಂತನುಃ** ಶಂತನು ರಾಜನು **ಕದಾಚಿತ್** ಯಾವಗಲೋ ಒಮ್ಮೆ **ಮೃಗಯಾಂ** ಬೇಟೆಯಾಡಲು **ಗತಃ (ಸನ್)** ಹೋದವನಾಗಿ **ಯಾ** ಯಾವಳು **ಪೂರ್ವಸರ್ಗೇ** ಹಿಂದಿನ ಜನ್ಮದಲ್ಲಿ **ಪಿತೃಪುತ್ರಿಕಾ ಸತೀ** ಪಿತೃದೇವತೆಗಳ ಮಗಳಾಗಿ **ವಿಷ್ಣೋಃ** ವಿಷ್ಣುವಿಗೆ ಸಂಬಂಧಿಸಿದ **ತಪಃ** ತಪಸ್ಸನು **ಚಿರಂ** ಬಹುಕಾಲ **ಚಚಾರ** ಆಚರಿಸಿದಳೋ **(ತಾಂ)** ಅಂತಹ **ಕನ್ಯಾಪ್ರವರಾಂ** ಶ್ರೇಷ್ಠಕನ್ಯೆಯನ್ನು **ದದರ್ಶ** ನೋಡಿದನು.

**ತಾತ್ಪರ್ಯ** :- ಶಂತನು ಮಹಾರಾಜನು ಒಮ್ಮೆ ಬೇಟೆಯಾಡಲು ಕಾಡಿಗೆ ಹೋಗುತ್ತಾನೆ. ಅಲ್ಲಿ ಶ್ರೇಷ್ಠಳಾದ ಕನ್ಯೆಯೊಬ್ಬಳನ್ನು ನೋಡುತ್ತಾನೆ. ಆ ಕನ್ಯೆಯು ಹಿಂದಿನ ಜನ್ಮದಲ್ಲಿ ಅಗ್ನಿಷ್ವಾತ್ತರೆಂಬ ಪಿತೃದೇವತೆಗಳ ಮಾನಸ ಪುತ್ರಿಯಾದ ಅಚ್ಛೋದಾ ಎಂಬ ಹೆಸರಿನ ನದಿಯಾಗಿರುತ್ತಾಳೆ. ತಂದೆಯರ ಶಾಪದ ನಂತರ ಭಗವಂತನಾದ ವಿಷ್ಣುವನ್ನು ಕುರಿತು ಬಹು ಕಾಲ ತಪಸ್ಸನ್ನು ಆಚರಿಸುತ್ತಾಳೆ.

ಯಸ್ಯೈ ವರಂ ವಿಷ್ಣುರದಾತ್ ಪುರಾऽಹಂ
ಸುತಸ್ತವ ಸ್ಯಾಮಿತಿ ಯಾ ವಸೋಃ ಸುತಾ ।
ಜಾತಾ ಪುನರ್ದಾಶಗೃಹೇ ವಿವರ್ಧಿತಾ
ವ್ಯಾಸಾತ್ಮನಾ ವಿಷ್ಣುರಭೂಚ್ಚ ಯಸ್ಯಾಮ್ ॥ ೭೩ ॥

ತದ್ದರ್ಶನಾನ್ನೃಪತಿರ್ಜಾತಹೃಚ್ಛಯೋ
ವವ್ರೇ ಪ್ರದಾನಾಯ ಚ ದಾಶರಾಜಮ್ ।
ಋತೇ ಸ ತಸ್ಯಾಸ್ತನಯಸ್ಯ ರಾಜ್ಯಂ
ನೈಚ್ಛದ್ ದಾತುಂ ತಾಮಥಾऽಯಾತ್ ಗೃಹಂ ಸ್ವಮ್ ॥ ೭೪ ॥

ಪದಚ್ಛೇದ :- ಯಸ್ಯೈ, ವರಂ, ವಿಷ್ಣುಃ, ಅದಾತ್, ಪುರಾ, ಅಹಂ, ಸುತಃ, ತವ, ಸ್ಯಾಂ, ಇತಿ, ಯಾ, ವಸೋಃ, ಸುತಾ, ಜಾತಾ, ಪುನಃ, ದಾಶಗೃಹೇ, ವಿವರ್ಧಿತಾ, ವ್ಯಾಸಾತ್ಮನಾ, ವಿಷ್ಣುಃ, ಅಭೂತ್, ಚ, ಯಸ್ಯಾಮ್. ತದ್ದರ್ಶನಾತ್, ನೃಪತಿಃ, ಜಾತ ಹೃಚ್ಛಯಃ, ವವ್ರೇ, ಪ್ರದಾನಾಯ, ಚ, ದಾಶರಾಜಂ, ಋತೇ, ಸಃ, ತಸ್ಯಾಃ, ತನಯಸ್ಯ, ರಾಜ್ಯಂ, ನ, ಐಚ್ಛತ್, ದಾತುಂ, ತಾಂ, ಅಥ, ಆಯಾತ್, ಗೃಹಂ, ಸ್ವಮ್.

**ಅರ್ಥ** :- **ಯಸ್ಯೈ** ಯಾವಳಿಗೆ **ಪುರಾ**ಪಿತೃದೇವತೆಗಳ ಮಗಳಾಗಿದ್ದ ಹಿಂದಿನ ಜನ್ಮದಲ್ಲಿ **ವಿಷ್ಣುಃ** ಪರಮಾತ್ಮನು **ಅಹಂ** ನಾನು **ತವ** ನಿನ್ನ **ಸುತಃ ಸ್ಯಾಂ** ಮಗನಾಗುತ್ತೇನೆ **ಇತಿ** ಎಂದು **ವರಂ** ವರವನ್ನು **ಅದಾತ್** ಕೊಟ್ಟನೋ **ಯಾ** ಯಾವಳು **ವಸೋಃ** ವಸುರಾಜನಿಗೆ **ಸುತಾ** ಮಗಳಾಗಿ **ಜಾತಾ** ಹುಟ್ಟಿದಳೋ **ಪುನಃ** ಮತ್ತೆ **ದಾಶಗೃಹೇ** ದಾಶರಾಜನ ಮನೆಯಲ್ಲಿ **ವಿವರ್ಧಿತಾ** ಬೆಳೆದಳೋ **ಯಸ್ಯಾಂ** ಯಾವಳಲ್ಲಿ **ವಿಷ್ಣುಃ**ಪರಮಾತ್ಮನು **ವ್ಯಾಸಾತ್ಮನಾ** ವೇದವ್ಯಾಸ ರೂಪದಿಂದ **ಅಭೂತ್ ಚ** ಅವತರಿಸಿದನೋ. **ತದ್ದರ್ಶನಾತ್** ಅಂತಹ ಶ್ರೇಷ್ಠಕನ್ಯೆಯನ್ನು ನೋಡಿದ್ದರಿಂದ **ಜಾತಹೃಚ್ಛಯಃ** ಮನಸ್ಸಿನಲ್ಲುಂಟಾದ ಕಾಮವುಳ್ಳ **ನೃಪತಿಃ** ಚರಾಜನಾದ ಶಂತನುವಾದರೂ **ಪ್ರದಾನಾಯ** ಆ ಕನ್ಯೆಯನ್ನು ತನಗೆ ನೀಡಲು **ದಾಶರಾಜಂ** ದಾಶರಾಜನನ್ನು **ವವ್ರೇ** ಪ್ರಾರ್ಥಿಸಿದನು. **ಸಃ** ಆ ದಾಶರಾಜನು **ತಸ್ಯಾಃ** ಆ ಕನ್ಯೆಯ **ತನಯಸ್ಯ** ಮಗನಿಗೆ **ರಾಜ್ಯಂ** ವಿನಾ ರಾಜ್ಯವಿಲ್ಲದೇ **ತಾಂ**ಆ ಕನ್ಯೆಯನ್ನು **ದಾತುಂ** ಕೊಡಲು **ನ ಐಚ್ಛತ್** ಬಯಸಲಿಲ್ಲ. **ಅಥ** ಆ ನಂತರ (**ಸಃ**) ಆ ಶಂತನುವು **ಸ್ವಂ** ತನ್ನ **ಗೃಹಂ** (**ಪ್ರತಿ**) ಮನೆಯನ್ನು ಕುರಿತು **ಆಯಾತ್** ಬಂದನು.

**ತಾತ್ಪರ್ಯ :-** ಪಿತೃಗಳ ಶಾಪದ ನಂತರ ಅವರ ನಿರ್ದೇಶದಂತೆ ಅಚ್ಛೋದಾ ಭಗವಂತನನ್ನು ಕುರಿತು ತಪಸ್ಸನ್ನಾಚರಿಸುತ್ತಾಳೆ. ಭಗವಂತನು ತಾನೇ ಅವಳ ಮಗನಾಗಿ ಅವತರಿಸುವುದಾಗಿ ವರವನ್ನು ನೀಡುತ್ತಾನೆ. ಅವಳೇ ಮುಂದೆ ವಸುರಾಜನ ಮಗಳಾಗಿ ಹುಟ್ಟುತ್ತಾಳೆ. ನಂತರ ನಾವಿಕರ ನಾಯಕನ ಮನೆಯಲ್ಲಿ ಬೆಳೆಯುತ್ತಾಳೆ. ಅವಳಲ್ಲಿಯೇ ಪರಮಾತ್ಮನು ತಾನು ವರವನ್ನು ಕೊಟ್ಟಂತೆ ವೇದವ್ಯಾಸರೂಪದಿಂದ ಅವತರಿಸುತ್ತಾನೆ. ಬೇಟೆಯಾಡಲು ಬಂದ ಶಂತನು ರಾಜನು ಆ ಕನ್ಯೆಯನ್ನು ನೋಡುತ್ತಾನೆ. ಅದರಿಂದ ಮನಸ್ಸಿನಲ್ಲಿ ಕಾಮನೆಯುಂಟಾಗಿ ದಾಶರಾಜನ ಬಳಿ ಅವಳನ್ನು ತನಗಾಗಿ ಕೊಡಬೇಕೆಂದು ಕೇಳುತ್ತಾನೆ. ದಾಶರಾಜನಾದರೂ ಇವಳಲ್ಲಿ ಹುಟ್ಟಿದ ಮಗನಿಗೇ ರಾಜ್ಯವನ್ನು ಕೊಡುವುದಾದರೆ ಮಾತ್ರ ಅವಳನ್ನು ನಿನಗೆ ಕೊಡುತ್ತೇನೆ, ಇಲ್ಲವಾದರೆ ಇಲ್ಲ ಎಂದು ಹೇಳುತ್ತಾನೆ. ನಂತರ ರಾಜನು ತನ್ನ ಮನೆಗೆ ಬರುತ್ತಾನೆ.

**ತಚ್ಚಿಂತಯಾ ಮ್ಲಾನಮುಖಂ ಜನಿತ್ರಂ ದೃಷ್ಟ್ವೈವ ದೇವವ್ರತ ಆಶ್ವಪೃಚ್ಛತ್ ।**
**ತತ್ಕಾರಣಂ ಸಾರಥಿಮಸ್ಯ ತಸ್ಮಾಚ್ಛ್ರುತ್ವಾSಖಿಲಂ ದಾಶಗೃಹಂ ಜಗಾಮ**
**॥ ೭೫ ॥**

ಪದಚ್ಛೇದ :- ತಚ್ಚಿಂತಯಾ, ಮ್ಲಾನಮುಖಂ, ಜನಿತ್ರಂ, ದೃಷ್ಟ್ವಾ ಏವ, ದೇವವ್ರತಃ, ಆಶು, ಅಪೃಚ್ಛತ್. ತತ್ಕಾರಣಂ, ಸಾರಥಿಂ, ಅಸ್ಯ, ತಸ್ಮಾತ್, ಶ್ರುತ್ವಾ ಅಖಿಲಂ, ದಾಶಗೃಹಂ, ಜಗಾಮ.

**ಅರ್ಥ :-** **ದೇವವ್ರತಃ** ದೇವವ್ರತನು **ತಚ್ಚಿಂತಯಾ** ಆ ಕನ್ಯೆಯ ಚಿಂತೆಯಿಂದ **ಮ್ಲಾನಮುಖಂ** ಬಾಡಿದ ಮುಖವುಳ್ಳ **ಜನಿತ್ರಂ** ತಂದೆಯನ್ನು **ದೃಷ್ಟ್ವಾ ಏವ**ನೋಡಿಯೇ **ಆಶು** ಶೀಘ್ರವಾಗಿ **ಅಸ್ಯ** ಈ ಶಂತನು ರಾಜನ **ಸಾರಥಿಂ** ರಥದ ಸಾರಥಿಯನ್ನು **ತತ್ಕಾರಣಂ** ತಂದೆಯ ಮುಖವು ಬಾಡಿರುವುದಕ್ಕೆ ಕಾರಣವನ್ನು **ಅಪೃಚ್ಛತ್** ಕೇಳಿದನು. **ತಸ್ಮಾತ್** ಆ ಸಾರಥಿಯಿಂದ **ಅಖಿಲಂ** ನಡೆದದ್ದೆಲ್ಲವನ್ನೂ **ಶ್ರುತ್ವಾ** ಕೇಳಿ **ದಾಶಗೃಹಂ (ಪ್ರತಿ)** ದಾಶರಾಜನ ಮನೆಯನ್ನು ಕುರಿತು **ಜಗಾಮ**ಹೋದನು.

**ತಾತ್ಪರ್ಯ :-** ಮನೆಗೆ ಬಂದ ಶಂತನುವಿನ ಬಾಡಿದ ಮುಖವನ್ನು ಅವನ ಮಗನಾದ ದೇವವ್ರತನು ನೋಡುತ್ತಾನೆ. ನಂತರ ತಂದೆಯ ರಥದ ಸಾರಥಿಯ ಬಳಿ ತಂದೆಯ ದುಃಖಕ್ಕೆ ಕಾರಣವನ್ನು ಕೇಳುತ್ತಾನೆ. ಆಗ ಸಾರಥಿಯಿಂದ

ತಂದೆಗೂ ದಾಶರಾಜನಿಗೂ ನಡೆದ ಸಂವಾದವೆಲ್ಲವನ್ನೂ ಕೇಳಿ ದಾಶರಾಜನ ಮನೆಗೆ ಹೊರಡುತ್ತಾನೆ.

**ಸ ತಸ್ಯ ವಿಶ್ವಾಸಕೃತೇ ಪ್ರತಿಜ್ಞಾಂ**
**ಚಕಾರ ನಾಽಹಂ ಕರವಾಣಿ ರಾಜ್ಯಮ್ ।**
**ತಥೈವ ಮೇ ಸಂತತಿತೋ ಭಯಂ ತೇ**
**ವ್ಯೇತೂರ್ಧ್ವರೇತಾಃ ಸತತಂ ಭವಾನಿ ॥ ೭೬ ॥**

**ಪದಚ್ಛೇದ :–** ಸಃ, ತಸ್ಯ, ವಿಶ್ವಾಸಕೃತೇ, ಪ್ರತಿಜ್ಞಾಂ, ಚಕಾರ, ನ, ಅಹಂ, ಕರವಾಣಿ, ರಾಜ್ಯಮ್. ತಥಾ, ಏವ, ಮೇ, ಸಂತತಿತಃ, ಭಯಂ, ತೇ, ವ್ಯೇತು. ಊರ್ಧ್ವರೇತಾಃ, ಸತತಂ, ಭವಾನಿ.

**ಅರ್ಥ :–** ಸಃ ಆ ದೇವವ್ರತನು **ತಸ್ಯ** ಆ ದಾಶರಾಜನಿಗೆ **ವಿಶ್ವಾಸಕೃತೇ** ವಿಶ್ವಾಸವನ್ನುಂಟು ಮಾಡುವುದಕ್ಕೋಸ್ಕರ **ಪ್ರತಿಜ್ಞಾಂ** ಪ್ರತಿಜ್ಞೆಯನ್ನು **ಚಕಾರ** ಮಾಡಿದನು. **ಅಹಂ** ನಾನು **ರಾಜ್ಯಂ** ರಾಜ್ಯವನ್ನು **ನ ಕರವಾಣಿ** ಆಳುವುದಿಲ್ಲ. **ತಥೈವ** ಹಾಗೆಯೇ **ಮೇ** ನನ್ನ **ಸಂತತಿತಃ** ಸಂತತಿಯಿಂದಲೂ **ತೇ** ನಿನಗೆ **ಭಯಂ** ಭಯವು **ವ್ಯೇತು** ದೂರವಾಗಲಿ. **(ಯತಃ)** ಯಾವ ಕಾರಣದಿಂದ **ಸತತಂ** ಯಾವಗಲೂ **ಊರ್ಧ್ವರೇತಾಃ** ಊರ್ಧ್ವರೇತಸ್ಕನಾದವನು (ಬ್ರಹ್ಮ ಚಾರಿಯು) **ಭವಾನಿ** ಆಗಿರುತ್ತೇನೆ. **(ಇತಿ)** ಎಂದು.

**ತಾತ್ಪರ್ಯ :–** ತಂದೆಯ ದುಃಖಕ್ಕೆ ಕಾರಣವನ್ನು ತಿಳಿದು ದಾಶರಾಜನ ಮನೆಗೆ ಹೋದ ದೇವವ್ರತನು ಆ ದಾಶರಾಜನಿಗೆ ವಿಶ್ವಾಸವನ್ನುಂಟುಮಾಡಲು ಪ್ರತಿಜ್ಞೆಯನ್ನು ಮಾಡುತ್ತಾನೆ. ನಾನು ಯಾವುದೇ ಕಾರಣಕ್ಕೂ ರಾಜ್ಯವನ್ನು ನಡೆಸುವುದಿಲ್ಲ, ಹಾಗಾಗಿ ನನ್ನಿಂದ ನಿನಗೆ ಭಯವಿಲ್ಲ. ಅಷ್ಟೇ ಅಲ್ಲದೆ ಮುಂದೆ ನನ್ನ ಸಂತತಿಯಿಂದಲೂ ನಿನಗೆ ಭಯವಿಲ್ಲ. ಏಕೆಂದರೆ ನಾನು ಜೀವವಿರುವ ವರೆಗೂ ಊರ್ಧ್ವರೇತಸ್ಕನಾದ ಬ್ರಹ್ಮಚಾರಿಯಾಗಿಯೇ ಇರುತ್ತೇನೆ ಎಂದು.

**ಭೀಮವ್ರತತ್ವಾದ್ಧಿ ತದಾಽಸ್ಯ ನಾಮ**
**ಕೃತ್ವಾ ದೇವಾ ಭೀಷ್ಮ ಇತಿ ಹ್ಯಚೀಕ್ಲೃಪನ್ ।**
**ಪ್ರಸೂನವೃಷ್ಟಿಂ ಸ ಚ ದಾಶದತ್ತಾಂ**
**ಕಾಲೀಂ ಸಮಾದಾಯ ಪಿತುಃ ಸಮರ್ಪಯತ್ ॥ ೭೭ ॥**

**ತಾತ್ಪರ್ಯ** :- ಪಿತೃಗಳ ಶಾಪದ ನಂತರ ಅವರ ನಿರ್ದೇಶದಂತೆ ಅಚ್ಛೋದಾ ಭಗವಂತನನ್ನು ಕುರಿತು ತಪಸ್ಸನ್ನಾಚರಿಸುತ್ತಾಳೆ. ಭಗವಂತನು ತಾನೇ ಅವಳ ಮಗನಾಗಿ ಅವತರಿಸುವುದಾಗಿ ವರವನ್ನು ನೀಡುತ್ತಾನೆ. ಅವಳೇ ಮುಂದೆ ವಸುರಾಜನ ಮಗಳಾಗಿ ಹುಟ್ಟುತ್ತಾಳೆ. ನಂತರ ನಾವಿಕರ ನಾಯಕನ ಮನೆಯಲ್ಲಿ ಬೆಳೆಯುತ್ತಾಳೆ. ಅವಳಲ್ಲಿಯೇ ಪರಮಾತ್ಮನು ತಾನು ವರವನ್ನು ಕೊಟ್ಟಂತೆ ವೇದವ್ಯಾಸರೂಪದಿಂದ ಅವತರಿಸುತ್ತಾನೆ. ಬೇಟೆಯಾಡಲು ಬಂದ ಶಂತನು ರಾಜನು ಆ ಕನ್ಯೆಯನ್ನು ನೋಡುತ್ತಾನೆ. ಆದರಿಂದ ಮನಸ್ಸಿನಲ್ಲಿ ಕಾಮನೆಯುಂಟಾಗಿ ದಾಶರಾಜನ ಬಳಿ ಅವಳನ್ನು ತನಗಾಗಿ ಕೊಡಬೇಕೆಂದು ಕೇಳುತ್ತಾನೆ. ದಾಶರಾಜನಾದರೂ ಇವಳಲ್ಲಿ ಹುಟ್ಟಿದ ಮಗನಿಗೇ ರಾಜ್ಯವನ್ನು ಕೊಡುವುದಾದರೆ ಮಾತ್ರ ಅವಳನ್ನು ನಿನಗೆ ಕೊಡುತ್ತೇನೆ, ಇಲ್ಲವಾದರೆ ಇಲ್ಲ ಎಂದು ಹೇಳುತ್ತಾನೆ. ನಂತರ ರಾಜನು ತನ್ನ ಮನೆಗೆ ಬರುತ್ತಾನೆ.

**ತಚ್ಚಿಂತಯಾ ಮ್ಲಾನಮುಖಂ ಜನಿತ್ರಂ ದೃಷ್ಟ್ವೈವ ದೇವವ್ರತ ಆಶ್ವಪೃಚ್ಛತ್ ।**
**ತತ್ಕಾರಣಂ ಸಾರಥಿಮಸ್ಯ ತಸ್ಮಾಚ್ಛ್ರುತ್ವಾಽಖಿಲಂ ದಾಶಗೃಹಂ ಜಗಾಮ**
**॥ ೭೫ ॥**

ಪದಚ್ಛೇದ :- ತಚ್ಚಿಂತಯಾ, ಮ್ಲಾನಮುಖಂ, ಜನಿತ್ರಂ, ದೃಷ್ಟ್ವಾ, ಏವ, ದೇವವ್ರತಃ, ಆಶು, ಅಪೃಚ್ಛತ್. ತತ್ಕಾರಣಂ, ಸಾರಥಿಂ, ಅಸ್ಯ, ತಸ್ಮಾತ್, ಶ್ರುತ್ವಾ ಅಖಿಲಂ, ದಾಶಗೃಹಂ, ಜಗಾಮ.

**ಅರ್ಥ** :- **ದೇವವ್ರತಃ** ದೇವವ್ರತನು **ತಚ್ಚಿಂತಯಾ** ಆ ಕನ್ಯೆಯ ಚಿಂತೆಯಿಂದ **ಮ್ಲಾನಮುಖಂ** ಬಾಡಿದ ಮುಖವುಳ್ಳ **ಜನಿತ್ರಂ** ತಂದೆಯನ್ನು **ದೃಷ್ಟ್ವಾ** ಏವನೋಡಿಯೇ **ಆಶು** ಶೀಘ್ರವಾಗಿ **ಅಸ್ಯ** ಈ ಶಂತನು ರಾಜನ **ಸಾರಥಿಂ** ರಥದ ಸಾರಥಿಯನ್ನು **ತತ್ಕಾರಣಂ** ತಂದೆಯ ಮುಖವು ಬಾಡಿರುವುದಕ್ಕೆ ಕಾರಣವನ್ನು **ಅಪೃಚ್ಛತ್** ಕೇಳಿದನು. **ತಸ್ಮಾತ್** ಆ ಸಾರಥಿಯಿಂದ **ಅಖಿಲಂ** ನಡೆದದ್ದೆಲ್ಲವನ್ನೂ **ಶ್ರುತ್ವಾ** ಕೇಳಿ **ದಾಶಗೃಹಂ (ಪ್ರತಿ)** ದಾಶರಾಜನ ಮನೆಯನ್ನು ಕುರಿತು **ಜಗಾಮ**ಹೋದನು.

**ತಾತ್ಪರ್ಯ** :- ಮನೆಗೆ ಬಂದ ಶಂತನುವಿನ ಬಾಡಿದ ಮುಖವನ್ನು ಅವನ ಮಗನಾದ ದೇವವ್ರತನು ನೋಡುತ್ತಾನೆ. ನಂತರ ತಂದೆಯ ರಥದ ಸಾರಥಿಯ ಬಳಿ ತಂದೆಯ ದುಃಖಕ್ಕೆ ಕಾರಣವನ್ನು ಕೇಳುತ್ತಾನೆ. ಆಗ ಸಾರಥಿಯಿಂದ

ತಂದೆಗೂ ದಾಶರಾಜನಿಗೂ ನಡೆದ ಸಂವಾದವೆಲ್ಲವನ್ನೂ ಕೇಳಿ ದಾಶರಾಜನ ಮನೆಗೆ ಹೊರಡುತ್ತಾನೆ.

**ಸ ತಸ್ಯ ವಿಶ್ವಾಸಕೃತೇ ಪ್ರತಿಜ್ಞಾಂ**
**ಚಕಾರ ನಾಽಹಂ ಕರವಾಣಿ ರಾಜ್ಯಮ್ ।**
**ತಥೈವ ಮೇ ಸಂತತಿತೋ ಭಯಂ ತೇ**
**ವ್ಯೇತೂರ್ಧ್ವರೇತಾಃ ಸತತಂ ಭವಾನಿ ॥ ೭೬ ॥**

ಪದಚ್ಛೇದ :- ಸಃ, ತಸ್ಯ, ವಿಶ್ವಾಸಕೃತೇ, ಪ್ರತಿಜ್ಞಾಂ, ಚಕಾರ, ನ, ಅಹಂ, ಕರವಾಣಿ, ರಾಜ್ಯಮ್. ತಥಾ, ಏವ, ಮೇ, ಸಂತತಿತಃ, ಭಯಂ, ತೇ, ವ್ಯೇತು. ಊರ್ಧ್ವರೇತಾಃ, ಸತತಂ, ಭವಾನಿ.

**ಅರ್ಥ** :- **ಸಃ** ಆ ದೇವವ್ರತನು **ತಸ್ಯ** ಆ ದಾಶರಾಜನಿಗೆ **ವಿಶ್ವಾಸಕೃತೇ** ವಿಶ್ವಾಸವನ್ನುಂಟು ಮಾಡುವುದಕ್ಕೋಸ್ಕರ **ಪ್ರತಿಜ್ಞಾಂ** ಪ್ರತಿಜ್ಞೆಯನ್ನು **ಚಕಾರ** ಮಾಡಿದನು. **ಅಹಂ** ನಾನು **ರಾಜ್ಯಂ** ರಾಜ್ಯವನ್ನು **ನ ಕರವಾಣಿ** ಆಳುವುದಿಲ್ಲ. **ತಥೈವ** ಹಾಗೆಯೇ **ಮೇ** ನನ್ನ **ಸಂತತಿತಃ** ಸಂತತಿಯಿಂದಲೂ **ತೇ** ನಿನಗೆ **ಭಯಂ** ಭಯವು **ವ್ಯೇತು** ದೂರವಾಗಲಿ. **(ಯತಃ)** ಯಾವ ಕಾರಣದಿಂದ **ಸತತಂ** ಯಾವಗಲೂ **ಊರ್ಧ್ವರೇತಾಃ** ಊರ್ಧ್ವರೇತಸ್ಕನಾದವನು (ಬ್ರಹ್ಮ ಚಾರಿಯು) **ಭವಾನಿ** ಆಗಿರುತ್ತೇನೆ. **(ಇತಿ)** ಎಂದು.

**ತಾತ್ಪರ್ಯ** :- ತಂದೆಯ ದುಃಖಕ್ಕೆ ಕಾರಣವನ್ನು ತಿಳಿದು ದಾಶರಾಜನ ಮನೆಗೆ ಹೋದ ದೇವವ್ರತನು ಆ ದಾಶರಾಜನಿಗೆ ವಿಶ್ವಾಸವನ್ನುಂಟುಮಾಡಲು ಪ್ರತಿಜ್ಞೆಯನ್ನು ಮಾಡುತ್ತಾನೆ. ನಾನು ಯಾವುದೇ ಕಾರಣಕ್ಕೂ ರಾಜ್ಯವನ್ನು ನಡೆಸುವುದಿಲ್ಲ. ಹಾಗಾಗಿ ನನ್ನಿಂದ ನಿನಗೆ ಭಯವಿಲ್ಲ. ಅಷ್ಟೇ ಅಲ್ಲದೆ ಮುಂದೆ ನನ್ನ ಸಂತತಿಯಿಂದಲೂ ನಿನಗೆ ಭಯವಿಲ್ಲ. ಏಕೆಂದರೆ ನಾನು ಜೀವವಿರುವ ವರೆಗೂ ಊರ್ಧ್ವರೇತಸ್ಕನಾದ ಬ್ರಹ್ಮಚಾರಿಯಾಗಿಯೇ ಇರುತ್ತೇನೆ ಎಂದು.

**ಭೀಮವ್ರತತ್ವಾದ್ಧಿ ತದಾಽಸ್ಯ ನಾಮ**
**ಕೃತ್ವಾ ದೇವಾ ಭೀಷ್ಮ ಇತಿ ಹ್ಯಚೀಕ್ಲೃಪನ್ ।**
**ಪ್ರಸೂನವೃಷ್ಟಿಂ ಸ ಚ ದಾಶದತ್ತಾಂ**
**ಕಾಲೀಂ ಸಮಾದಾಯ ಪಿತುಃ ಸಮರ್ಪಯತ್ ॥ ೭೭ ॥**

ಪದಚ್ಛೇದ :- ಭೀಮವ್ರತತ್ವಾತ್, ಹಿ, ತದಾ, ಅಸ್ಯ, ನಾಮ, ಕೃತ್ವಾ ಭೀಷ್ಮ ಇತಿ, ಹಿ, ಅಚೀಕ್ಲೃಪನ್, ಪ್ರಸೂನವೃಷ್ಟಿಂ, ಸಃ, ಚ, ದಾಶದತ್ತಾಂ, ಕಾಲೀಂ, ಸಮಾದಾಯ, ಪಿತುಃ, ಸಮರ್ಪಯತ್.

**ಅರ್ಥ** :- **ತದಾ** ಆಗ **ದೇವಾಃ** ದೇವತೆಗಳು **ಭೀಮವ್ರತತ್ವಾತ್ ಹಿ** ಭಯಂಕರವಾದ ವ್ರತವುಳ್ಳವನಾದ್ದರಿಂದಲೇ **ಅಸ್ಯ** ಈ ದೇವವ್ರತನಿಗೆ **ಭೀಷ್ಮಃ ಇತಿ**ಭೀಷ್ಮನೆಂದು **ನಾಮ** ನಾಮಕರಣವನ್ನು **ಕೃತ್ವಾ** ಮಾಡಿ **ಪ್ರಸೂನವೃಷ್ಟಿಂ** ಪುಷ್ಪವೃಷ್ಟಿಯನ್ನು **ಅಚೀಕ್ಲೃಪನ್ ಹಿ** ಮಾಡಿದರಷ್ಟೆ **ಸಃ ಚ** ಭೀಷ್ಮನೆಂಬ ಹೆಸರನ್ನು ಪಡೆದ ಆ ದೇವವ್ರತನಾದರೂ **ದಾಶದತ್ತಾಂ** ದಾಶರಾಜನಿಂದ ಕೊಡಲ್ಪಟ್ಟ **ಕಾಲೀಂ** ಕಾಲೀ ಎಂಬ ಹೆಸರಿನ ಆ ಕನ್ಯೆಯನ್ನು **ಸಮಾದಾಯ** ಸ್ವೀಕರಿಸಿ **ಪಿತುಃ** ತಂದೆಯಾದ ಶಂತನುವಿಗೆ **ಸಮರ್ಪಯತ್** ಸಮರ್ಪಿಸಿದನು.

**ತಾತ್ಪರ್ಯ** :- ದೇವವ್ರತನ ಪ್ರತಿಜ್ಞೆಯನ್ನು ನೋಡಿದ ದೇವತೆಗಳು ಭಯಂಕರವಾದ ವ್ರತವುಳ್ಳವನಾದ್ದರಿಂದ ಇವನು ಭೀಷ್ಮನೆಂದೇ ಪ್ರಸಿದ್ಧನಾಗಲಿ ಎಂದು ವರವಿತ್ತರು. ಮತ್ತು ಭೀಷ್ಮನೆಂಬ ಹೆಸರು ಪಡೆದ ದೇವವ್ರತನ ಮೇಲೆ ಪುಷ್ಪವೃಷ್ಟಿಯನ್ನು ಮಾಡುತ್ತಾರೆ. ನಂತರ ದಾಶರಾಜನು ಒಪ್ಪಿಸಿದ ಕಾಲೀ ಎಂಬ ಕನ್ಯೆಯನ್ನು ಕರೆತಂದು ತಂದೆಯಾದ ಶಂತನುವಿಗೆ ಸಮರ್ಪಿಸುತ್ತಾನೆ.

**ಜ್ಞಾತ್ವಾ ತು ತಾಂ ರಾಜಪುತ್ರೀಂ ಗುಣಾಢ್ಯಾಂ**
**ಸತ್ಯಸ್ಯ ವಿಷ್ಣೋರ್ಮಾತರಂ ನಾಮತಸ್ತತ್ ।**
**ಲೋಕೇ ಪ್ರಸಿದ್ಧಾಂ ಸತ್ಯವತೀತ್ಯುದಾರಾಂ**
**ವಿವಾಹಯಾಮಾಸ ಪಿತುಃ ಸ ಭೀಷ್ಮಃ ॥ ೭೮ ॥**

ಪದಚ್ಛೇದ :- ಜ್ಞಾತ್ವಾ ತು, ತಾಂ, ರಾಜಪುತ್ರೀಂ, ಗುಣಾಢ್ಯಾಂ, ಸತ್ಯಸ್ಯ, ವಿಷ್ಣೋಃ, ಮಾತರಂ, ನಾಮತಃ, ತತ್, ಲೋಕೇ, ಪ್ರಸಿದ್ಧಾಂ, ಸತ್ಯವತೀ, ಇತಿ, ಉದಾರಾಂ, ವಿವಾಹಯಾಮಾಸ, ಪಿತುಃ, ಸಃ, ಭೀಷ್ಮಃ.

**ಅರ್ಥ** :- **ಸಃ** ಆ **ಭೀಷ್ಮಃ** ಭೀಷ್ಮನು **ಗುಣಾಢ್ಯಾಂ** ಸದ್ಗುಣಗಳಿಂದ ಕೂಡಿದ **ಸತ್ಯಸ್ಯ** ಸತ್ಯನಾದ **ವಿಷ್ಣೋಃ** ಭಗವಂತನ **ಮಾತರಂ** ತಾಯಿಯಾದ **ತತ್** ಆದ್ದರಿಂದಲೇ **ಲೋಕೇ** ಜಗತ್ತಿನಲ್ಲಿ **ನಾಮತಃ** ಹೆಸರಿನಿಂದ **ಸತ್ಯವತೀ ಇತಿ** ಸತ್ಯವತೀ ಎಂದು **ಪ್ರಸಿದ್ಧಾಂ** ಪ್ರಸಿದ್ಧಳಾದ **ಉದಾರಾಂ** ಶ್ರೇಷ್ಠಳಾದ

ರಾಜಪುತ್ರೀಂಉಪರಿಚರವಸುರಾಜನ ಮಗಳಾದ ತಾಂ ದಾಶರಾಜನಿಂದ ಕೊಡಲ್ಪಟ್ಟ ಆ ಕನ್ಯೆಯನ್ನು ಜ್ಞಾತ್ವಾ ತು ತಿಳಿದೂ ಕೂಡ ಪಿತುಃ ತಂದೆಯೊಂದಿಗೆ ವಿವಾಹಯಾಮಾಸ ಮದುವೆ ಮಾಡಿಸಿದನು.

ತಾತ್ಪರ್ಯ :- ಭೀಷ್ಮನು ಕಾಲಿಯ ಪೂರ್ವವೃತ್ತಾಂತವನ್ನು ತಿಳಿದಿದ್ದನು. ಆವಳು ಉಪರಿಚರವಸುರಾಜನ ಮಗಳು ನಂತರ ದಾಶರಾಜನ ಮನೆಯಲ್ಲಿ ಬೆಳೆದಳು ಪರಾಶರರಿಂದ ಸತ್ಯನಾದ ಭಗವಂತನನ್ನು ಪಡೆದಿದ್ದಳು ಹೀಗೆ ಸತ್ಯನಾದ ಪರಮಾತ್ಮನ ತಾಯಿಯಾದ್ದರಿಂದಲೇ ಸತ್ಯವತೀ ಎಂದೇ ಜಗತ್ತಿನಲ್ಲಿ ಪ್ರಸಿದ್ಧಳಾಗಿದ್ದಳು. ಇವೆಲ್ಲವೂ ತಿಳಿದಿದ್ದರೂ ಭೀಷ್ಮನು ಸದ್ಗುಣಗಳಿಂದ ಕೂಡಿದ ಆ ಕನ್ಯೆಗೆ ತನ್ನ ತಂದೆಯೊಂದಿಗೆ ಮದುವೆಯನ್ನು ಮಾಡಿಸುತ್ತಾನೆ.

ಪ್ರಾಯಃ ಸತಾಂ ನ ಮನಃ ಪಾಪಮಾರ್ಗೇ
ಗಚ್ಛೇದಿತಿ ಹ್ಯಾತ್ಮಮನಶ್ಚ ಸಕ್ತಮ್ ।
ಜ್ಞಾತ್ವಾಽಪಿ ತಾಂ ದಾಶಗೃಹೇ ವಿವರ್ಧಿತಾಂ
ಜಗ್ರಾಹ ಸದ್ಧರ್ಮರತಶ್ಚ ಶಂತನುಃ ॥ ೭೯ ॥

ಪದಚ್ಛೇದ :- ಪ್ರಾಯಃ, ಸತಾಂ, ನ, ಮನಃ, ಪಾಪಮಾರ್ಗೇ, ಗಚ್ಛೇತ್, ಇತಿ, ಹಿ, ಆತ್ಮಮನಃ, ಚ, ಸಕ್ತಂ, ಜ್ಞಾತ್ವಾ ಅಪಿ, ತಾಂ, ದಾಶಗೃಹೇ, ವಿವರ್ಧಿತಾಂ, ಜಗ್ರಾಹ, ಸದ್ಧರ್ಮರತಃ, ಚ, ಶಂತನುಃ.

ಅರ್ಥ :- ಪ್ರಾಯಃ ಹೆಚ್ಚಾಗಿ ಸತಾಂ ಸಜ್ಜನರ ಮನಃ ಮನಸ್ಸು ಪಾಪಮಾರ್ಗೇ ಪಾಪಕರವಾದ ದಾರಿಯಲ್ಲಿ ನ ಗಚ್ಛೇತ್ ಹಿಹೋಗುವುದಿಲ್ಲ ವಷ್ಟೇ ಆತ್ಮಮನಃ ಚ ತನ್ನ ಮನಸ್ಸಾದರೂ (ತಸ್ಯಾಂ) ಆ ಸತ್ಯವತೀಯಲ್ಲಿ ಸಕ್ತಂ ಆಸಕ್ತವಾಗಿದೆ ಇತಿ ಆದ್ದರಿಂದ ಸದ್ಧರ್ಮರತಃ ಚ ಸದ್ಧರ್ಮ ಮಾಡುವುದರಲ್ಲಿ ಆಸಕ್ತನಾದರೂ ಶಂತನುಃಶಂತನುವು ತಾಂ ಆ ಕನ್ಯೆಯನ್ನು ದಾಶ ಗೃಹೇ ದಾಶರಾಜನ ಮನೆಯಲ್ಲಿ ವಿವರ್ಧಿತಾಂ ಬೆಳೆದವಳೆಂದು ಜ್ಞಾತ್ವಾ ಅಪಿ ತಿಳಿದೂ ಕೂಡ, ಜಗ್ರಾಹ ಸ್ವೀಕರಿಸಿದನು.

ತಾತ್ಪರ್ಯ :- ಹೆಚ್ಚಾಗಿ ಸಜ್ಜನರ ಮನಸ್ಸು ಫಾಪವನ್ನುಂಟುಮಾಡುವ ಹಾದಿಯನ್ನು ಹಿಡಿಯುವುದಿಲ್ಲ. ಸ್ವತಃ ನಾನು ಸತ್ಕರ್ಮಾಚರಣೆಯಲ್ಲಿ ಆಸಕ್ತಿಯುಳ್ಳವನು. ಆದರೂ ತನ್ನ ಮನಸ್ಸು ಈ ಕನ್ಯೆಯಲ್ಲಿ ಆಸಕ್ತಿಯನ್ನು

ಹೊಂದಿದೆ. ಆದ್ದರಿಂದ ಇದು ಅಧರ್ಮವಾಗಲಾರದು ಎಂದು ಶಂತನು ರಾಜನು ಇವಳು ದಾಶ ರಾಜನ ಮನೆಯಲ್ಲಿ ಬೆಳೆದವಳೆಂದು ತಿಳಿದರೂ ಮದುವೆಯಾದನು.

**ಸ್ವಚ್ಛಂದಮೃತ್ಯುತ್ವವರಂ ಪ್ರದಾಯ**
**ತಥಾಽಪ್ಯಜೇಯತ್ವಮಧೃಷ್ಯತಾಂ ಚ ।**
**ಯುದ್ಧೇಷು ಭೀಷ್ಮಸ್ಯ ನೃಪೋತ್ತಮೋಽಸೌ**
**ರೇಮೇ ತಯೈವಾಬ್ದಗಣಾನ್ ಬಹೂಂಶ್ಚ ॥ ೮೦ ॥**

ಪದಚ್ಛೇದ :- ಸ್ವಚ್ಛಂದಮೃತ್ಯುತ್ವವರಂ, ಪ್ರದಾಯ, ತಥಾ, ಅಪಿ, ಅಜೇಯತ್ವಂ, ಅಧೃಷ್ಯತಾಂ, ಚ, ಯುದ್ಧೇಷು, ಭೀಷ್ಮಸ್ಯ, ನೃಪೋತ್ತಮಃ, ಅಸೌ, ರೇಮೇ, ತಯಾ, ಏವ, ಅಬ್ದಗಣಾನ್, ಬಹೂನ್, ಚ.

**ಅರ್ಥ** :- **ನೃಪೋತ್ತಮಃ** ರಾಜಶ್ರೇಷ್ಠನಾದ **ಅಸೌ** ಈ ಶಂತನುವು **ಭೀಷ್ಮಸ್ಯ** ಭೀಷ್ಮನಿಗೆ **ಸ್ವಚ್ಛಂದಮೃತ್ಯುತ್ವವರಂ** ತನ್ನ ಇಚ್ಛೆಯಿಂದಲೇ ಮರಣ ಉಂಟಾಗುವಂತೆ ವರವನ್ನು **ತಥಾ** ಹಾಗೆಯೇ **ಯುದ್ಧೇಷು** ಯುದ್ಧಗಳಲ್ಲಿ **ಅಜೇಯತ್ವಂ** ಅಪಿಸೋಲಾಗದಿರಲೆಂಬ ವರವನ್ನೂ **ಅಧೃಷ್ಯತಾಂ** ಯಾರಿಂದಲೂ ನಿಗ್ರಹಿಸಲಾಗದಿರಲೆಂಬ ವರವನ್ನೂ **ಪ್ರದಾಯ** ಕೊಟ್ಟು **ತಯಾ ಏವ** ಆ ಸತ್ಯವತಿಯೊಂದಿಗೇ **ಬಹೂನ್ ಚ** ಬಹಳವಾದ **ಅಬ್ದಗಣಾನ್** ವರ್ಷಗಳ ಸಮೂಹಗಳ ಕಾಲ **ರೇಮೇ** ಕ್ರೀಡಿಸಿದನು.

**ತಾತ್ಪರ್ಯ** :- ಮಗನ ಕಾರ್ಯದಿಂದ ಸಂತೋಷಗೊಂಡ ಶಂತನು ರಾಜನು ಭೀಷ್ಮನಿಗೆ ನಿನ್ನ ಇಚ್ಛೆಯಿಂದಲೇ ನಿನಗೆ ಮರಣವುಂಟಾಗಲಿ, ಯುದ್ಧದಲ್ಲಿ ಶತ್ರುಗಳು ನಿನ್ನನ್ನು ನಿಗ್ರಹಿಸಲು ಸಾಧ್ಯವಿಲ್ಲದಂತಾಗಿ ನಿನಗೆ ಸೋಲೇ ಇಲ್ಲದಾಗಲಿ ಎಂದು ವರವನ್ನು ಕೊಟ್ಟನು. ನಂತರ ಅನೇಕ ವರ್ಷಗಳಷ್ಟು ಕಾಲ ಆ ಸತ್ಯವತಿಯೊಂದಿಗೆ ವಿಹರಿಸಿದನು.

**ಲೇಭೇ ಸ ಚಿತ್ರಾಂಗದಮತ್ರ ಪುತ್ರಂ**
**ತಥಾ ದ್ವಿತೀಯಂ ಚ ವಿಚಿತ್ರವೀರ್ಯಮ್ ।**
**ತಯೋಶ್ಚ ಬಾಲ್ಯೇ ವ್ಯಸೃಜಚ್ಛರೀರಂ**
**ಜೀರ್ಣೇನ ದೇಹೇನ ಹಿ ಕಿಂ ಮಮೇತಿ ॥ ೮೧ ॥**

ಪದಚ್ಛೇದ :– ಲೇಭೇ, ಸಃ, ಚಿತ್ರಾಂಗದಂ, ಅತ್ರ, ಪುತ್ರಂ, ತಥಾ, ದ್ವಿತೀಯಂ, ಚ, ವಿಚಿತ್ರವೀರ್ಯಂ. ತಯೋಃ, ಚ, ಬಾಲ್ಯೇ, ವ್ಯಸೃಜತ್, ಶರೀರಂ, ಜೀರ್ಣೇನ, ದೇಹೇನ, ಕಿಂ, ಮಮ, ಇತಿ.

**ಅರ್ಥ** :- **ಸಃ** ಆ ಶಂತನು ರಾಜನು **ಅತ್ರ** ಈ ಸತ್ಯವತಿಯಲ್ಲಿ **ಚಿತ್ರಾಂಗದಂ** ಚಿತ್ರಾಂಗದನನ್ನು **ಪುತ್ರಂ** ಮಗನನ್ನಾಗಿ **ಲೇಭೇ** ಪಡೆದನು. **ತಥಾ** ಹಾಗೆಯೇ **ದ್ವಿತೀಯಂ ಚ** ಎರಡನೆಯವನನ್ನಾಗಿ **ವಿಚಿತ್ರವೀರ್ಯಂ** ವಿಚಿತ್ರ ವೀರ್ಯನನ್ನು **ಲೇಭೇ** ಪಡೆದನು. **ತಯೋಃ** ಆ ಮಕ್ಕಳಿಬ್ಬರ **ಬಾಲ್ಯೇ** ಬಾಲ್ಯಾವಸ್ಥೆಯಲ್ಲಿಯೇ **ಜೀರ್ಣೇನ** ಜೀರ್ಣವಾದ **ದೇಹೇನ** ದೇಹದಿಂದ **ಮಮ** ನನಗೆ **ಕಿಂ ಹಿ** ಏನು ಪ್ರಯೋಜನವಾದೀತು **ಇತಿ** ಎಂದು **ಶರೀರಂ** ಶರೀರವನ್ನು **ವ್ಯಸೃಜತ್**ಬಿಟ್ಟನು.

**ತಾತ್ಪರ್ಯ** :- ಆ ಶಂತನು ರಾಜನು ಸತ್ಯವತಿಯಲ್ಲಿ ಚಿತ್ರಾಂಗದ ಮತ್ತು ವಿಚಿತ್ರವೀರ್ಯ ಎಂಬ ಎರಡು ಮಕ್ಕಳನ್ನು ಪಡೆದನು. ಆ ಮಕ್ಕಳಿಬ್ಬರೂ ಬಾಲ್ಯಾವಸ್ಥೆಯಲ್ಲಿರುವಾಗಲೇ ಶಂತನುವು ತನ್ನ ಶರೀರವು ಜೀರ್ಣವಾದದ್ದನು ನೋಡಿ ಇನ್ನು ಈ ಶರೀರದಿಂದ ಸಾಧನೆಯಾಗುವುದಿಲ್ಲವೆಂದು ನಿಶ್ಚಯಿಸಿ ಶರೀರವನ್ನು ತ್ಯಜಿಸುತ್ತಾನೆ.

**ಸ್ವೇಚ್ಛಯಾ ವರುಣತ್ವಂ ಸ ಪ್ರಾಪ ನಾನಿಚ್ಛಯಾ ತನುಃ ।**
**ತಸ್ಮಿನ್ ಕಾಲೇ ತ್ಯಜ್ಯತೇ ಹಿ ಬಲವದ್ಭಿರ್ವಧಂ ವಿನಾ ॥ ೮೨ ॥**

ಪದಚ್ಛೇದ :– ಸ್ವೇಚ್ಛಯಾ, ವರುಣತ್ವಂ, ಸಃ, ಪ್ರಾಪ, ನ, ಅನಿಚ್ಛಯಾ, ತನುಃ, ತಸ್ಮಿನ್, ಕಾಲೇ, ತ್ಯಜ್ಯತೇ, ಹಿ, ಬಲವದ್ಭಿಃ, ವಧಂ, ವಿನಾ.

**ಅರ್ಥ** :- **ಸಃ** ಆ ಶಂತನುವು **ಸ್ವೇಚ್ಛಯಾ** ತನ್ನ ಇಚ್ಛೆಯಿಂದಲೇ **ವರುಣತ್ವಂ** ಮೂಲರೂಪವಾದ ವರುಣಭಾವವನ್ನು **ಪ್ರಾಪ** ಹೊಂದಿದನು. **ತಸ್ಮಿನ್** ದ್ವಾಪರಯುಗದ ಆ **ಕಾಲೇ** ಕಾಲದಲ್ಲಿ **ಬಲವದ್ಭಿಃ** ಅಧಿಕಬಲವುಳ್ಳವ ರಿಂದ **ವಧಂ ವಿನಾ** ಸಂಹಾರವಾಗದೇ **ಅನಿಚ್ಛಯಾ** ತಮ್ಮ ಇಚ್ಛೆಯಿಲ್ಲದೇ **ತನುಃ** ಶರೀರವು **ನ ತ್ಯಜ್ಯತೇ ಹಿ** ತ್ಯಜಿಸಲ್ಪಡುತ್ತಿರಲಿಲ್ಲವಷ್ಟೇ.

**ತಾತ್ಪರ್ಯ** :- ಆ ಶಂತನು ರಾಜನು ತನ್ನ ಇಚ್ಛೆಯಿಂದಲೇ ದೇಹವನ್ನು ತ್ಯಜಿಸಿ ತನ್ನ ಮೂಲರೂಪವಾದ ವರುಣರೂಪವನ್ನು ಪಡೆದನು. ದ್ವಾಪರ

ಯುಗದ ಆ ಕಾಲದಲ್ಲಿ ತಪೋನಿಷ್ಠರಾದವರು ತಮಗಿಂತ ಬಲಿಷ್ಠರಾದವರಿಂದ ವಧೆಯಾಗುವುದನ್ನು ಬಿಟ್ಟು ತಮ್ಮ ಇಚ್ಛೆಯಿಲ್ಲದೆಯೇ ದೇಹತ್ಯಾಗವನ್ನು ಮಾಡುತ್ತಿರಲಿಲ್ಲ. ತಮ್ಮ ಇಚ್ಛೆಯಂತೆಯೇ ದೇಹತ್ಯಾಗ ಮಾಡುತ್ತಿದ್ದರು. ಶಂತನುವೂ ಹಾಗೆಯೇ ತನ್ನ ಇಚ್ಛೆಯಿಂದಲೇ ದೇಹವನ್ನು ತ್ಯಜಿಸುತ್ತಾನೆ.

**ಅತಿಸಕ್ತಾಸ್ತಪೋಹೀನಾಃ ಕಥಂಚಿನ್ಮೃತಿಮಾಪ್ನುಯುಃ ।**
**ಅನಿಚ್ಛಯಾಽಪಿ ಹಿ ಯಥಾ ಮೃತಶ್ಚಿತ್ರಾಂಗದಾನುಜಃ ॥ ೮೩ ॥**

ಪದಚ್ಛೇದ :- **ಅತಿಸಕ್ತಾಃ, ತಪೋಹೀನಾಃ, ಕಥಂಚಿತ್, ಮೃತಿಂ, ಆಪ್ನುಯುಃ, ಅನಿಚ್ಛಯಾ, ಅಪಿ, ಹಿ, ಯಥಾ, ಮೃತಃ, ಚಿತ್ರಾಂಗದಾನುಜಃ.**

**ಅರ್ಥ** :- **ಅತಿಸಕ್ತಾಃ** ವಿಷಯಗಳಲ್ಲಿ ತುಂಬ ಆಸಕ್ತರಾದವರು **ತಪೋಹೀನಾಃ** ತಪೋಬಲವಿಲ್ಲದವರು (**ಬಲವದ್ಭಿಃ ವಧಂ ವಿನಾ**) ತನಗಿಂತ ಬಲಿಷ್ಠರಾದವರಿಂದ ಸಂಹಾರವಾಗದಿದ್ದರೂ **ಅನಿಚ್ಛಯಾ ಅಪಿ** ಇಚ್ಛೆ ಯಿಲ್ಲದೆಯೂ ಕೂಡ **ಕಥಂಚಿತ್** ರೋಗವೇ ಮೊದಲಾದ ಯಾವುದೋ ಒಂದು ಕಾರಣದಿಂದ **ಮೃತಿಂ** ಮರಣವನ್ನು **ಆಪ್ನುಯುಃ** ಹೊಂದುವರು. **ಯಥಾ** ಹಿಹೇಗೆ **ಚಿತ್ರಾಂಗದಾನುಜಃ**ಚಿತ್ರಾಂಗದನ ತಮ್ಮನಾದ ವಿಚಿತ್ರ ವೀರ್ಯನು **ಮೃತಃ**ರೋಗದಿಂದ ಮೃತನಾದನೋ (ತಥಾ) ಹಾಗೆ.

**ತಾತ್ಪರ್ಯ** :- ಬಲಿಷ್ಠರಿಂದ ಸಂಹರಿಸಲ್ಪಡದಿದ್ದರೆ ತಮ್ಮ ಇಚ್ಛೆಯಿಂದಲೇ ಮರಣವನ್ನು ಹೊಂದುತ್ತಿದ್ದರು. ಆದರೆ ಅದಕ್ಕೂ ಅಪವಾದವಿದೆ. ವಿಷಯ ಗಳಲ್ಲಿ ಅತ್ಯಂತ ಆಸಕ್ತರಾದವರು, ತಪೋಬಲವಿಲ್ಲದವರು ಬಲಿಷ್ಠರಿಂದ ಸಂಹರಿಸಲ್ಪಡದಿದ್ದರೂ ರೋಗ ಮೊದಲಾದ ಕಾರಣಗಳಿಂದ ತಮ್ಮ ಇಚ್ಛೆ ಯಿಲ್ಲದೇ ಮರಣವನ್ನು ಹೊಂದುತ್ತಿದ್ದರು. ಉದಾಹರಣೆಗೆ:- ಚಿತ್ರಾಂಗದನ ತಮ್ಮನಾದ ವಿಚಿತ್ರವೀರ್ಯ. ವಿಚಿತ್ರವೀರ್ಯನು ಬಲಿಷ್ಠರಿಂದ ವಧಿಸಲ್ಪಡ ದಿದ್ದರೂ ಕ್ಷಯರೋಗಕ್ಕೆ ತುತ್ತಾಗಿ ತನ್ನ ಇಚ್ಛೆಯಿಲ್ಲದೇ ಮರಣವನ್ನು ಹೊಂದಿದನು.

**ಅಥೌರ್ಧ್ವದೈಹಿಕಂ ಕೃತ್ವಾ ಪಿತುರ್ಭೀಷ್ಮೋಽಭ್ಯಷೇಚಯತ್ ।**
**ರಾಜ್ಯೇ ಚಿತ್ರಾಂಗದಂ ವೀರಂ ಯೌವರಾಜ್ಯೇಽಸ್ಯ ಚಾನುಜಮ್ ॥ ೮೪ ॥**

ಪದಚ್ಛೇದ :- ಅಥ, ಔರ್ಧ್ವದೈಹಿಕಂ, ಕೃತ್ವಾ, ಪಿತುಃ, ಭೀಷ್ಮಃ, ಅಭ್ಯಷೇಚಯತ್, ರಾಜ್ಯೇ, ಚಿತ್ರಾಂಗದಂ, ವೀರಂ, ಯೌವರಾಜ್ಯೇ, ಅಸ್ಯ, ಚ, ಅನುಜಮ್.

**ಅರ್ಥ** :- **ಅಥ** ಶಂತನುವಿನ ಮರಣದ ನಂತರ **ಭೀಷ್ಮಃ** ಭೀಷ್ಮನು **ಔರ್ಧ್ವದೈಹಿಕಂ** ಮರಣದ ನಂತರ ಮಾಡುವ ಸಂಸ್ಕಾರಗಳನ್ನು **ಕೃತ್ವಾ** ಮಾಡಿಸಿ **ಪಿತುಃ** ತಂದೆಯಾದ ಶಂತನುವಿನ **ರಾಜ್ಯೇ** ರಾಜ್ಯದಲ್ಲಿ ರಾಜನನ್ನಾಗಿ **ವೀರಂ** ಪರಾಕ್ರಮಿಯಾದ **ಚಿತ್ರಾಂಗದಂ** ಚಿತ್ರಾಂಗದನನ್ನು **ಚ** ಮತ್ತು **ಯೌವರಾಜ್ಯೇ** ಯುವರಾಜನ ಸ್ಥಾನದಲ್ಲಿ **ಅಸ್ಯ** ಈ ಚಿತ್ರಾಂಗದನ **ಅನುಜಂ** ತಮ್ಮನಾದ ವಿಚಿತ್ರವೀರ್ಯನನ್ನು **ಅಭ್ಯಷೇಚಯತ್** ಪಟ್ಟಾಭಿಷೇಕ ಮಾಡಿಸಿದನು.

**ತಾತ್ಪರ್ಯ** :- ಶಂತನುವಿನ ಮರಣದ ನಂತರ ಭೀಷ್ಮನು ಮರಣದ ನಂತರ ಮಾಡುವ ಪ್ರೇತಸಂಸ್ಕಾರ ಮೊದಲಾದವುಗಳನ್ನು ಮಾಡಿಸಿ ನಂತರ ತಂದೆಯ ರಾಜ್ಯದಲ್ಲಿ ಚಿತ್ರಾಂಗದನನ್ನು ರಾಜನನ್ನಾಗಿ ಮತ್ತು ಅವನ ತಮ್ಮನಾದ ವಿಚಿತ್ರವೀರ್ಯನನ್ನು ಯುವರಾಜನನ್ನಾಗಿ ಪಟ್ಟಾಭಿಷೇಕ ಮಾಡಿಸಿದನು.

**ಚಿತ್ರಾಂಗದೇನ ನಿಹತೋ ನಾಮ ಸ್ವಂ ತ್ವಪರಿತ್ಯಜನ್ ।**
**ಚಿತ್ರಾಂಗದೋಽಕೃತೋದ್ವಾಹೋ ಗಂಧರ್ವೇಣ ಮಹಾರಣೇ ॥ ೮೫ ॥**

ಪದಚ್ಛೇದ :- ಚಿತ್ರಾಂಗದೇನ, ನಿಹತಃ, ನಾಮ, ಸ್ವಂ, ತು, ಅಪರಿತ್ಯಜನ್, ಚಿತ್ರಾಂಗದಃ, ಅಕೃತೋದ್ವಾಹಃ, ಗಂಧರ್ವೇಣ, ಮಹಾರಣೇ.

**ಅರ್ಥ** :- **ಕೃತೋದ್ವಾಹಃ** ಇನ್ನೂ ಮದುವೆಯಾಗದ **ಚಿತ್ರಾಂಗದಃ** ಚಿತ್ರಾಂಗದನು **ಸ್ವಂ** ತನ್ನ **ನಾಮ ತು** ಹೆಸರನ್ನಾದರೂ **ಅಪರಿತ್ಯಜನ್ (ಸನ್)** ಬಿಡದವನಾಗಿ **ಚಿತ್ರಾಂಗದೇನ** ಚಿತ್ರಾಂಗದನೆಂಬ **ಗಂಧರ್ವೇಣ** ಗಂಧರ್ವನಿಂದ **ಮಹಾರಣೇ** ದೊಡ್ಡ ಯುದ್ಧದಲ್ಲಿ **ನಿಹತಃ** ಕೊಲ್ಲಲ್ಪಟ್ಟನು.

**ತಾತ್ಪರ್ಯ** :- ಚಿತ್ರಾಂಗದನೆಂಬ ಗಂಧರ್ವನು ಶಂತನುಪುತ್ರನಾದ ಚಿತ್ರಾಂಗದನಿಗೆ ಚಿತ್ರಾಂಗದನೆಂಬ ನನ್ನ ಹೆಸರು ನಿನಗೆ ಯೋಗ್ಯವಲ್ಲ ಆದ ಕಾರಣ ಆ ಹೆಸರನ್ನು ನೀನು ತ್ಯಜಿಸು ಎಂದು ಹೇಳಿದನು. ಆದಕ್ಕೆ ಶಂತನು ಪುತ್ರನಾದ ಚಿತ್ರಾಂಗದನು ಒಪ್ಪಿಕೊಳ್ಳದಿದ್ದಾಗ ಅವರಿಬ್ಬರ ನಡುವೆ ಘೋರ

ಯುದ್ಧವು ನಡೆಯಿತು. ಅದರಲ್ಲಿ ಗಂಧರ್ವನಿಂದ ಇನ್ನೂ ಮದುವೆಯೂ ಆಗದಿದ್ದ ಶಂತನುಪುತ್ರನಾದ ಚಿತ್ರಾಂಗದನು ಅಸುನೀಗಿದನು. ಆ ನಂತರ ಭೀಷ್ಮನು ವಿಚಿತ್ರವೀರ್ಯನಿಗೆ ರಾಜನನ್ನಾಗಿ ಪಟ್ಟಾಭಿಷೇಕ ಮಾಡಿಸಿ ದೇಶವನ್ನು ಪಾಲಿಸತೊಡಗಿದನು.

**ವಿಚಿತ್ರವೀರ್ಯಂ ರಾಜಾನಂ ಕೃತ್ವಾ ಭೀಷ್ಮೋಽನ್ವಪಾಲಯತ್ ।**
**ಅಥ ಕಾಶಿಸುತಾಸ್ತಿಸ್ರಸ್ತದರ್ಥಂ ಭೀಷ್ಮ ಆಹರತ್ ॥ ೮೬ ॥**

ಪದಚ್ಛೇದ :– ವಿಚಿತ್ರವೀರ್ಯಂ, ರಾಜಾನಂ, ಕೃತ್ವಾ, ಭೀಷ್ಮಃ, ಅನು, ಅಪಾಲಯತ್, ಅಥ, ಕಾಶಿಸುತಾಃ, ತಿಸ್ರಃ, ತದರ್ಥಂ, ಭೀಷ್ಮಃ, ಆಹರತ್.

**ಅರ್ಥ** :- **ಅನು** ಆ ನಂತರ **ಭೀಷ್ಮಃ** ಭೀಷ್ಮನು **ವಿಚಿತ್ರವೀರ್ಯಂ** ವಿಚಿತ್ರವೀರ್ಯನನ್ನು **ರಾಜಾನಂ** ರಾಜನನ್ನಾಗಿ **ಕೃತ್ವಾ** ಮಾಡಿ **ಅಪಾಲಯತ್** ದೇಶವನ್ನು ರಕ್ಷಿಸಿದನು. **ಅಥ** ಆ ನಂತರ **ಭೀಷ್ಮಃ** ಭೀಷ್ಮನು **ತದರ್ಥಂ** ಆ ವಿಚಿತ್ರವೀರ್ಯನಿಗಾಗಿ **ತಿಸ್ರಃ** ಮೂರು ಜನರಾದ **ಕಾಶಿಸುತಾಃ** ಕಾಶಿರಾಜನ ಹೆಣ್ಣುಮಕ್ಕಳನ್ನು **ಆಹರತ್** ಅಪಹರಿಸಿದನು.

**ತಾತ್ಪರ್ಯ** :- ಬಳಿಕ ಭೀಷ್ಮನು ವಿಚಿತ್ರವೀರ್ಯನನ್ನು ರಾಜನನ್ನಾಗಿ ಮಾಡಿ ದೇಶವನ್ನು ರಕ್ಷಿಸಿದನು. ಅನಂತರ ಭೀಷ್ಮನು ವಿಚಿತ್ರವೀರ್ಯನಿಗಾಗಿ ಕಾಶಿರಾಜನ ಮಕ್ಕಳನ್ನು ಅಪಹರಿಸಿದನು.

**ಅಂಬಾಮಪ್ಯಂಬಿಕಾನಾಮ್ನೀಂ ತಥೈವಾಂಬಾಲಿಕಾಂ ಪರಾಮ್ ।**
**ಪಾಣಿಗ್ರಹಣಕಾಲೇ ತು ಬ್ರಹ್ಮದತ್ತಸ್ಯ ವೀರ್ಯವಾನ್ ।**
**ವಿಜಿತ್ಯ ತಂ ಸಾಲ್ವರಾಜಂ ಸಮೇತಾನ್ ಕ್ಷತ್ರಿಯಾನಪಿ ॥ ೮೭ ॥**

ಪದಚ್ಛೇದ :– ಅಂಬಾಂ, ಅಪಿ, ಅಂಬಿಕಾನಾಮ್ನೀಂ, ತಥಾ, ಏವ, ಅಂಬಾಲಿಕಾಂ, ಪರಾಂ, ಪಾಣಿಗ್ರಹಣಕಾಲೇ, ತು, ಬ್ರಹ್ಮದತ್ತಸ್ಯ, ವೀರ್ಯವಾನ್, ವಿಜಿತ್ಯ, ತಂ, ಸಾಲ್ವರಾಜಂ, ಸಮೇತಾನ್, ಕ್ಷತ್ರಿಯಾನ್, ಅಪಿ.

**ಅರ್ಥ** :- **ವೀರ್ಯವಾನ್** ಪರಾಕ್ರಮಿಯಾದ ಭೀಷ್ಮನು **ಬ್ರಹ್ಮದತ್ತಸ್ಯ** ಬ್ರಹ್ಮದತ್ತನ **ಪಾಣಿಗ್ರಹಣಕಾಲೇ ತು** ಪಾಣಿಗ್ರಹಣಕಾಲದಲ್ಲಿಯೇ **ತಂ** ಆ **ಸಾಲ್ವರಾಜಂ** ಸಾಲ್ವದೇಶದ ರಾಜನಾದ ಬ್ರಹ್ಮದತ್ತನನ್ನು **ಸಮೇತಾನ್** ಅಲ್ಲಿ

ನೆರೆದಿದ್ದ **ಕ್ಷತ್ರಿಯಾನ್ ಅಪಿ** ಇತರ ಕ್ಷತ್ರಿಯರನ್ನೂ ಕೂಡ **ವಿಜಿತ್ಯ** ಗೆದ್ದು **ಅಂಬಿಕಾನಾಮ್ನೀಂ** ಅಂಬಿಕೆಯೆಂಬ ಹೆಸರುಳ್ಳವಳನ್ನು **ತಥೈವ** ಹಾಗೆಯೇ **ಪರಾಂ** ಮತ್ತೊಬ್ಬಳಾದ **ಅಂಬಾಲಿಕಾಂ** ಅಂಬಾಲಿಕೆಯನ್ನು **ಅಂಬಾಮಪಿ** ಅಂಬೆಯನ್ನೂ ಕೂಡ **(ಆಹರತ್)** ಅಪಹರಿಸಿದನು.

**ತಾತ್ಪರ್ಯ** :- ಭೀಷ್ಮನು ವಿಚಿತ್ರವೀರ್ಯನಿಗಾಗಿ ಹೆಣ್ಣನ್ನು ತರಲು ಕಾಶಿರಾಜನ ದೇಶಕ್ಕೆ ಹೋಗುತ್ತಾನೆ. ಅಲ್ಲಿ ಕಾಶಿರಾಜನ ಮಗಳಾದ ಅಂಬೆಗೂ ಸಾಲ್ವದೇಶರಾಜನಾದ ಬ್ರಹ್ಮದತ್ತನಿಗೂ ಮದುವೆಯು ನಡೆಯುತ್ತಿರಿತ್ತದೆ. ಆ ಸಮಯದಲ್ಲಿ ಭೀಷ್ಮನು ಹೋಗಿ ಸಾಲ್ವ ಮತ್ತು ಇತರ ಕ್ಷತ್ರಿಯರೊಂದಿಗೆ ಹೋರಾಡಿ ಅವರನ್ನು ಯುದ್ಧದಲ್ಲಿ ಸೋಲಿಸಿ ವಿವಾಹಕ್ಕೆ ಅನರ್ಹಳಾದ ಅಂಬೆ ಯನ್ನು ಮತ್ತು ಉಳಿದ ಕನ್ಯೆಯರಾದ ಅಂಬಿಕಾ ಮತ್ತು ಅಂಬಾಲಿಕೆಯನ್ನೂ ಕೂಡ ಅಪಹರಿಸಿಕೊಂಡು ಬರುತ್ತಾನೆ.

**ಅಂಬಿಕಾಂಬಾಲಿಕೇ ತತ್ರ ಸಂವಾದಂ ಚಕ್ರತುಃ ಶುಭೇ ।**
**ಅಂಬಾ ಸಾ ಭೀಷ್ಮಭಾರ್ಯೈವ ಪೂರ್ವದೇಹೇ ತು ನೈಚ್ಛತ ॥ ೮೮ ॥**

**ಶಾಪಾದ್ಧಿರಣ್ಯಗರ್ಭಸ್ಯ ಸಾಲ್ವಕಾಮಾಽಹಮಿತ್ಯಪಿ ।**
**ಉವಾಚ ತಾಂ ಸ ತತ್ಯಾಜ ಸಾಽಗಮತ್ ಸಾಲ್ವಮೇವ ಚ ॥ ೮೯ ॥**

ಪದಚ್ಛೇದ :- **ಅಂಬಿಕಾಂಬಾಲಿಕೇ, ತತ್ರ, ಸಂವಾದಂ, ಚಕ್ರತುಃ, ಶುಭೇ, ಅಂಬಾ, ಸಾ, ಭೀಷ್ಮಭಾರ್ಯಾ, ಏವ, ಪೂರ್ವದೇಹೇ, ತು, ನ, ಐಚ್ಛತ. ಶಾಪಾತ್, ಹಿರಣ್ಯಗರ್ಭಸ್ಯ, ಸಾಲ್ವಕಾಮಾ, ಅಹಂ, ಇತಿ, ಅಪಿ, ಉವಾಚ. ತಾಂ, ಸಃ, ತತ್ಯಾಜ, ಸಾ, ಅಗಮತ್, ಸಾಲ್ವಂ, ಏವ, ಚ.**

**ಅರ್ಥ** :- **ತತ್ರ** ಅಪಹರಿಸಲ್ಪಟ್ಟ ಆ ಮೂವರು ಕನ್ಯೆಯರಲ್ಲಿ **ಶುಭೇ** ಮಂಗಳಕರರಾದ **ಅಂಬಿಕಾಂಬಾಲಿಕೇ** ಅಂಬಿಕಾ ಮತ್ತು ಅಂಬಾಲಿಕಾ ಇಬ್ಬರೂ **ಸಂವಾದಂ** ವಿಚಿತ್ರವೀರ್ಯನೊಂದಿಗೆ ಮದುವೆಯಾಗಲು ಸಮ್ಮತಿಯನ್ನು **ಚಕ್ರತುಃ**ಕೊಟ್ಟರು. **ಪೂರ್ವದೇಹೇ** ಹಿಂದಿನ ಜನ್ಮದಲ್ಲಿ **ಭೀಷ್ಮಭಾರ್ಯೈವ** ಭೀಷ್ಮನ ಹೆಂಡತಿಯೇ ಆಗಿದ್ದ **ಸಾ** ಆ **ಅಂಬಾ ತು** ಅಂಬೆಯಾದರೂ **ಹಿರಣ್ಯಗರ್ಭಸ್ಯ** ಚತುರ್ಮುಖಬ್ರಹ್ಮನ **ಶಾಪಾತ್** ಶಾಪದ ದೆಸೆಯಿಂದ **ನ ಐಚ್ಛತ** ವಿಚಿತ್ರವೀರ್ಯನೊಂದಿಗೆ ಮದುವೆಯಾಗಲು

ಒಪ್ಪಲಿಲ್ಲ. **ಅಹಂ** ನಾನು **ಸಾಲ್ವಕಾಮಾ** ಸಾಲ್ವರಾಜನನ್ನೇ ಬಯಸುತ್ತೇನೆ **ಇತಿ ಅಪಿ** ಈ ರೀತಿಯಾಗಿ ಕೂಡ **ಉವಾಚ** ಹೇಳಿದಳು. **ಸಃ ಚ** ಆ ಭೀಷ್ಮನಾದರೂ **ತಾಂ** ಆ ಅಂಬೆಯನ್ನು **ತತ್ಯಾಜ** ಬಿಟ್ಟನು. **ಸಾ** ಆ ಅಂಬೆಯು **ಸಾಲ್ವಮೇವ** ಸಾಲ್ವನ ಬಳಿಯೇ **ಅಗಮತ್** ಹೋದಳು.

**ತಾತ್ಪರ್ಯ** :- ಹೀಗೆ ಮೂವರನ್ನೂ ಭೀಷ್ಮನು ಅಪಹರಿಸಿ ತಂದ ನಂತರ ಆ ಮೂವರಲ್ಲಿ ಅಂಬಿಕೆ ಮತ್ತು ಅಂಬಾಲಿಕೆಯರು ವಿಚಿತ್ರವೀರ್ಯನನ್ನು ಮದುವೆಯಾಗಲು ಒಪ್ಪಿದರು. ಆದರೆ ಅಂಬೆಯು ಒಪ್ಪುವುದಿಲ್ಲ. ಏಕೆಂದರೆ ಹಿಂದಿನ ಜನ್ಮದಲ್ಲಿ ಇವಳು ಭೀಷ್ಮನ ಹೆಂಡತಿಯೇ ಆಗಿದ್ದಳು. ಭೀಷ್ಮನು ಹಿಂದೆ ದ್ಯು ಎಂಬ ಹೆಸರಿನ ವಸುವಾಗಿದ್ದನು. ಆಗ ಅಂಬೆಯು ವರಾಂಗಿ ಎಂಬ ಹೆಸರಿನಿಂದ ಇವನ ಹೆಂಡತಿಯಾಗಿದ್ದಳು. ಆಗ ಬ್ರಹ್ಮದೇವರು ವರಾಂಗಿಗೆ ನೀನು ಗಂಡನಿಲ್ಲದವಳಾಗಿ ಗಂಡನ ಮೃತ್ಯುವಿಗೇ ಕಾರಣಳಾಗು ಎಂಬ ಶಾಪವನ್ನಿತ್ತಿದ್ದರು. ಆದ್ದರಿಂದ ಈ ಜನ್ಮದಲ್ಲಿ ವಿಚಿತ್ರವೀರ್ಯನನ್ನು ಮದುವೆ ಯಾಗಲು ಒಪ್ಪಲಿಲ್ಲ. ಮತ್ತು ಭೀಷ್ಮನ ಬಳಿ ನಾನು ಸಾಲ್ವನೊಂದಿಗೆ ಮದುವೆಯಾಗುವುದನ್ನೇ ಬಯಸುತ್ತೇನೆ ಎಂದೂ ಹೇಳಿದಳು. ಆದನ್ನು ಕೇಳಿದ ಭೀಷ್ಮನು ಅವಳನ್ನು ಬಿಡುತ್ತಾನೆ. ಆಗ ಆ ಅಂಬೆಯು ಸಾಲ್ವನ ಬಳಿ ಹೋಗುತ್ತಾಳೆ.

**ತೇನಾಪಿ ಸಂಪರಿತ್ಯಕ್ತಾ ಪರಾಮೃಷ್ಟೇತಿ ಸಾ ಪುನಃ ।**
**ಭೀಷ್ಮಮಾಪ ಸ ನೋಽಗೃಹ್ಣಾತ್ ಪ್ರಯಯೌ ಸಾಽಪಿ ಭಾರ್ಗವಮ್ ॥ ೯೦ ॥**

ಪದಚ್ಛೇದ :- ತೇನ, ಅಪಿ, ಸಂಪರಿತ್ಯಕ್ತಾ, ಪರಾಮೃಷ್ಟಾ, ಇತಿ, ಸಾ, ಪುನಃ, ಭೀಷ್ಮಂ, ಆಪ, ಸಃ, ನೋ, ಅಗೃಹ್ಣಾತ್, ಪ್ರಯಯೌ, ಸಾ, ಅಪಿ, ಭಾರ್ಗವಮ್.

**ಅರ್ಥ** :- **ಪರಾಮೃಷ್ಟಾ** ಬೇರೊಬ್ಬನಿಂದ ಮುಟ್ಟಲ್ಪಟ್ಟಿದ್ದಾಳೆ **ಇತಿ** ಎಂದು **ತೇನ ಅಪಿ** ಆ ಸಾಲ್ವನಿಂದಲೂ **ಸಂಪರಿತ್ಯಕ್ತಾ** ತಿರಸ್ಕರಿಸಲ್ಪಟ್ಟ **ಸಾ** ಆ ಅಂಬೆಯು **ಪುನಃ** ಮತ್ತೆ **ಭೀಷ್ಮಂ** ಭೀಷ್ಮನನ್ನು **ಆಪ** ಹೊಂದಿದಳು. **ಸಃ** ಆ ಭೀಷ್ಮನು **ನೋ ಅಗೃಹ್ಣಾತ್** ಅವಳನ್ನು ಸ್ವೀಕರಿಸಲಿಲ್ಲ. **ಸಾ ಅಪಿ** ಆ ಅಂಬೆಯಾದರೂ **ಭಾರ್ಗವಂ (ಪ್ರತಿ)** ಪರಶುರಾಮನನ್ನು ಕುರಿತು **ಪ್ರಯಯೌ** ಹೋದಳು.

ತಾತ್ಪರ್ಯ :- ಸಾಲ್ವನ ಬಳಿ ಹೋದ ಅಂಬೆಯು ತನ್ನನ್ನು ಮದುವೆಯಾಗಲು ಕೇಳಿದಾಗ ಆ ಸಾಲ್ವನು ಅಂಬೆಯು ಪರಪುರುಷನಿಂದ ಮುಟ್ಟಲ್ಪಟ್ಟಿದ್ದಾಳೆಂಬ ಕಾರಣದಿಂದ ಅವಳನ್ನು ಪರಿಗ್ರಹಿಸಲಿಲ್ಲ. ಪುನಃ ಭೀಷ್ಮನ ಬಳಿ ಬಂದ ಅಂಬೆಯು ಭೀಷ್ಮನನ್ನೇ ಮದುವೆಯಾಗೆಂದು ಕೇಳಿದಾಗ ಅವನೂ ಒಪ್ಪಲಿಲ್ಲ. ನಂತರ ಅಂಬೆಯು ನ್ಯಾಯ ಪಡೆಯಲೆಂದು ಪರಶುರಾಮನ ಬಳಿ ಹೋಗುತ್ತಾಳೆ.

**ಭ್ರಾತುರ್ವಿವಾಹಯಾಮಾಸ ಸೋಽಂಬಿಕಾಂಬಾಲಿಕೇ ತತಃ ।**
**ಭೀಷ್ಮಾಯ ತು ಯಶೋ ದಾತುಂ ಯುಯುಧೇ ತೇನ ಭಾರ್ಗವಃ ॥ ೯೦ ॥**

**ಪದಚ್ಛೇದ :- ಭ್ರಾತುಃ, ವಿವಾಹಯಾಮಾಸ, ಸಃ, ಅಂಬಿಕಾಂಬಾಲಿಕೇ, ತತಃ, ಭೀಷ್ಮಾಯ, ತು, ಯಶಃ, ದಾತುಂ, ಯುಯುಧೇ, ತೇನ, ಭಾರ್ಗವಃ.**

**ಅರ್ಥ :- ತತಃ** ಅಂಬೆಯು ಪರಶುರಾಮನ ಬಳಿ ಹೋದ ನಂತರ **ಸಃ** ಆ ಭೀಷ್ಮನು **ಅಂಬಿಕಾಂಬಾಲಿಕೇ** ಅಂಬಿಕಾ ಮತ್ತು ಅಂಬಾಲಿಕಾರನ್ನು **ಭ್ರಾತುಃ** ತಮ್ಮನಾದ ವಿಚಿತ್ರವೀರ್ಯನಿಗೆ ಕೊಟ್ಟು **ವಿವಾಹಯಾಮಾಸ** ಮದುವೆ ಮಾಡಿಸಿದನು. **ಭಾರ್ಗವಃ ತು** ಪರಶುರಾಮನಾದರೂ **ಭೀಷ್ಮಾಯ** ಭೀಷ್ಮನಿಗೆ **ಯಶಃ** ಕೀರ್ತಿಯನ್ನು **ದಾತುಂ** ಉಂಟುಮಾಡಲು **ಯುಯುಧೇ** ಯುದ್ಧ ಮಾಡಿದನು.

ತಾತ್ಪರ್ಯ :- ಅಂಬೆಯು ಪರಶುರಾಮನ ಬಳಿಗೆ ಹೋದ ನಂತರ ಭೀಷ್ಮನು ತನ್ನ ತಮ್ಮನಾದ ವಿಚಿತ್ರವೀರ್ಯನಿಗೆ ಅಂಬಿಕಾ ಮತ್ತು ಅಂಬಾಲಿಕಾರೊಂದಿಗೆ ಮದುವೆ ಮಾಡಿಸುತ್ತಾನೆ. ಭೀಷ್ಮನ ಗುರುವಾದ ಪರಶುರಾಮನಲ್ಲಿಗೆ ಹೋದ ಅಂಬೆಯು ಭೀಷ್ಮನು ತನ್ನನ್ನು ಸ್ವೀಕರಿಸುವಂತೆ ಮಾಡಬೇಕು ಅಥವಾ ಅವನನ್ನು ವಧಿಸಬೇಕೆಂದು ಪ್ರಾರ್ಥಿಸುತ್ತಾಳೆ. ಪರಶುರಾಮನು ತನ್ನ ಶಿಷ್ಯನು ತನ್ನ ಪ್ರತಿಜ್ಞೆಯನ್ನು ಬಿಡುವುದಿಲ್ಲವೆಂದು ಜಗತ್ತಿಗೆ ತೋರಿಸಿ ಅವನಿಗೆ ಯಶಸ್ಸನ್ನು ತಂದು ಕೊಡಲು ಅವನೊಂದಿಗೆ ಯುದ್ಧವನ್ನು ಮಾಡುತ್ತಾನೆ.

**ಅನಂತಶಕ್ತಿರಪಿ ಸನ್ ನ ಭೀಷ್ಮಂ ನಿಜಘಾನ ಹ ।**
**ನ ಚಾಂಬಾಂ ಗ್ರಾಹಯಾಮಾಸ ಭೀಷ್ಮಕಾರುಣ್ಯಯಂತ್ರಿತಃ ॥ ೯೨ ॥**

ಪದಚ್ಛೇದ :- ಅನಂತಶಕ್ತಿಃ, ಅಪಿ, ಸನ್, ನ ಭೀಷ್ಮಂ, ನಿಜಘಾನ, ಹ. ನ, ಚ, ಅಂಬಾಂ, ಗ್ರಾಹಯಾಮಾಸ, ಭೀಷ್ಮಕಾರುಣ್ಯಯಂತ್ರಿತಃ.

**ಅರ್ಥ** :- **(ಸಃ)**ಆ ಪರಶುರಾಮನು **ಅನಂತಶಕ್ತಿಃ ಸನ್ ಅಪಿ**ಅನಂತ ಶಕ್ತಿಯುಳ್ಳವ ನಾಗಿದ್ದರೂ **ಭೀಷ್ಮಂ** ಭೀಷ್ಮನನ್ನು ನ ನಿಜಘಾನ ಸಂಹರಿಸಲಿಲ್ಲ ಹ ಆಶ್ಚರ್ಯವು. **ಚ** ಮತ್ತು **ಭೀಷ್ಮಕಾರುಣ್ಯಯಂತ್ರಿತಃ** (ಸನ್) ಭೀಷ್ಮನ ಮೇಲೆ ತನಗಿರುವ ಕೃಪೆಯಿಂದ ಬದ್ಧನಾಗಿ **(ಭೀಷ್ಮೇಣ)** ಭೀಷ್ಮನಿಂದ **ಅಂಬಾಂ** ಅಂಬೆಯನ್ನು ನ **ಗ್ರಾಹಯಾಮಾಸ** ಸ್ವೀಕರಿಸುವಂತೆ ಮಾಡಲಿಲ್ಲ.

**ತಾತ್ಪರ್ಯ** :- ಸಾಕ್ಷಾತ್ ಪರಮಾತ್ಮನೇ ಆದ ಭಾರ್ಗವ ರಾಮನು ಅನಂತ ಶಕ್ತಿಯುಳ್ಳವನು. ಅವನಿಗೆ ಭೀಷ್ಮನ ನಿಗ್ರಹವು ಅಸಾಧ್ಯವಾದುದಲ್ಲ. ಆದರೂ ಅವನನ್ನು ಸಂಹರಿಸಲಿಲ್ಲ. ಅಷ್ಟೇ ಅಲ್ಲದೆ, ತನಗೆ ಭೀಷ್ಮನ ಮೇಲೆ ಬಹಳ ಕಾರುಣ್ಯವಿದ್ದುದರಿಂದ ಆ ಕರುಣ್ಯದಿಂದ ಬದ್ಧನಾಗಿ ಭೀಷ್ಮನು ಅಂಬೆಯನ್ನು ಸ್ವೀಕರಿಸುವಂತೆಯೂ ಮಾಡಲಿಲ್ಲ.

**ಅನಂತಶಕ್ತಿಃ ಸಕಲಾಂತರಾತ್ಮಾ ಯಃ ಸರ್ವವಿತ್ ಸರ್ವವಶೀ ಚ ಸರ್ವಜಿತ್ ।**
**ನ ಯತ್ಸಮೋಽನ್ಯೋಽಸ್ತಿ ಕಥಂ ಚ ಕುತ್ರಚಿತ್ ಕಥಂ ಹ್ಯಶಕ್ತಿಃ ಪರಮಸ್ಯ ತಸ್ಯ**
**॥ ೯೩ ॥**

ಪದಚ್ಛೇದ :- ಅನಂತಶಕ್ತಿಃ, ಸಕಲಾಂತರಾತ್ಮಾ, ಯಃ, ಸರ್ವವಿತ್, ಸರ್ವವಶೀ, ಚ, ಸರ್ವಜಿತ್, ನ, ಯತ್ಸಮಃ, ಅನ್ಯಃ, ಅಸ್ತಿ, ಕಥಂ ಚ, ಕುತ್ರಚಿತ್, ಕಥಂ, ಹಿ, ಅಶಕ್ತಿಃ, ಪರಮಸ್ಯ, ತಸ್ಯ.

**ಅರ್ಥ** :- **ಯಃ**ಯಾವನು **ಅನಂತಶಕ್ತಿಃ**ಅನಂತವಾದ ಶಕ್ತಿಯುಳ್ಳವ ನಾಗಿದ್ದಾನೋ **ಸಕಲಾಂತರಾತ್ಮಾ** ಎಲ್ಲರಲ್ಲೂ ಅಂತರ್ಯಾಮಿಯಾಗಿದ್ದಾನೋ **ಸರ್ವವಿತ್**ಸರ್ವಜ್ಞನಾಗಿದ್ದಾನೋ **ಸರ್ವವಶೀ**ಎಲ್ಲವನ್ನೂ ತನ್ನ ಅಧೀನದಲ್ಲಿಟ್ಟು ಕೊಂಡಿದ್ದಾನೋ **ಸರ್ವಜಿತ್** ಎಲ್ಲರನ್ನೂ ಗೆದ್ದವನೋ **ಯತ್ಸಮಃ** ಯಾರಿಗೆ ಸಮನಾದವನು **ಅನ್ಯಃ** ಮತ್ತೊಬ್ಬನು **ನ ಅಸ್ತಿ** ಇಲ್ಲವೋ **ತಸ್ಯ** ಅಂತಹ **ಪರಮಸ್ಯ** ಸರ್ವೋತ್ತಮನಾದ ರಾಮನಿಗೆ **ಕಥಂ ಚ** ಯಾವರೀತಿ ಯಿಂದಾಗಲೀ **ಕುತ್ರಚಿತ್** ಯಾವ ದೇಶದಲ್ಲಾಗಲೀ ಯಾವ ಕಾಲದಲ್ಲಾಗಲೀ **ಅಶಕ್ತಿಃ** ಅಸಾಮರ್ಥ್ಯವು **ಕಥಂ ಹಿ** ಹೇಗೆ ತಾನೇ ಬಂದೀತು.

**ತಾತ್ಪರ್ಯ** :- ಪರಶುರಾಮನಿಗೆ ಸಾಮರ್ಥ್ಯವಿಲ್ಲವಾದ್ದರಿಂದಲೇ ಭೀಷ್ಮನನ್ನು ಸಂಹರಿಸಲಿಲ್ಲ ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಪರಮಾತ್ಮನು ಕೊನೆಯಿಲ್ಲದಷ್ಟು ಶಕ್ತಿಯುಳ್ಳವನು ಎಲ್ಲರಲ್ಲೂ ಅಂತರ್ಯಾಮಿಯಾಗಿ ಇರುವವನು ಎಲ್ಲವನ್ನೂ ತಿಳಿದವನು ಎಲ್ಲರನ್ನೂ ತನ್ನ ಅಧೀನದಲ್ಲಿಟ್ಟು ಕೊಂಡಿರುವನು ಎಲ್ಲರನ್ನೂ ಗೆದ್ದವನು ಅವನಿಗೆ ಸಮನಾದವರೇ ಬೇರೆ ಯಾರೂ ಇಲ್ಲ. ಅಂತಹ ಪರಮಾತ್ಮನಿಗೆ ವರ ಮೊದಲಾದ ಯಾವ ಕಾರಣದಿಂದಲೂ ಎಲ್ಲಿಯೂ ಯಾವಾಗಲೂ ಅಸಾಮರ್ಥ್ಯವು ಬರಲು ಸಾಧ್ಯವಿಲ್ಲ.

**ಭೀಷ್ಮಂ ಸ್ವಭಕ್ತಂ ಯಶಸಾಽಭಿಪೂರಯನ್**
**ವಿಮೋಹಯನ್ನಸುರಾಂಶ್ಚೈವ ರಾಮಃ ।**
**ಜಿತ್ವೈವ ಭೀಷ್ಮಂ ನ ಜಘಾನ ದೇವೋ**
**ವಾಚಂ ಚ ಸತ್ಯಾಮಕರೋತ್ಸ ತಸ್ಯ ॥ ೯೪ ॥**

**ಪದಚ್ಛೇದ :– ಭೀಷ್ಮಂ, ಸ್ವಭಕ್ತಂ, ಯಶಸಾ, ಅಭಿಪೂರಯನ್, ವಿಮೋಹಯನ್, ಅಸುರಾನ್, ಚ, ಏವ, ರಾಮಃ, ಜಿತ್ವಾ, ಏವ, ಭೀಷ್ಮಂ, ನ, ಜಘಾನ, ದೇವಃ, ವಾಚಂ, ಚ, ಸತ್ಯಾಂ, ಅಕರೋತ್, ಸಃ, ತಸ್ಯ.**

**ಅರ್ಥ** :- **ದೇವಃ** ಕ್ರೀಡಾದಿಗುಣವಿಶಿಷ್ಟನಾದ **ರಾಮಃ** ಪರಶುರಾಮನು **ಸ್ವಭಕ್ತಂ** ತನ್ನ ಭಕ್ತನಾದ **ಭೀಷ್ಮಂ** ಭೀಷ್ಮನನ್ನು **ಯಶಸಾ** ಕೀರ್ತಿಯಿಂದ **ಅಭಿಪೂರಯನ್** ತುಂಬಿಸುತ್ತಾ **ಚ** ಮತ್ತು, **ಅಸುರಾನ್** ಅಸುರರನ್ನು **ವಿಮೋಹಯನ್** **ಏವ** ಮೋಹಗೊಳಿಸುತ್ತಲೇ **ಭೀಷ್ಮಂ** ಭೀಷ್ಮನನ್ನು **ಜಿತ್ವಾ ಏವ** ಗೆದ್ದೂ **ನ ಜಘಾನ** ಸಂಹರಿಸಲಿಲ್ಲ. **ಸಃ** ಆ ಪರಶುರಾಮನು **ತಸ್ಯ** ಆ ಭೀಷ್ಮನ **ವಾಚಂ** ಪ್ರತಿಜ್ಞೆಯನ್ನು **ಸತ್ಯಾಂ** **ಚ** ಸತ್ಯವನ್ನಾಗಿಯೂ **ಅಕರೋತ್** ಮಾಡಿದನು.

**ತಾತ್ಪರ್ಯ** :- ಪರಶುರಾಮನು ಯುದ್ಧದಲ್ಲಿ ಭೀಷ್ಮನನ್ನು ಗೆದ್ದನು. ಆದರೆ ಸಂಹರಿಸಲಿಲ್ಲ. ಏಕೆಂದರೆ ಎಂತಹ ಸಂದರ್ಭದಲ್ಲೂ ಅಂಬೆಯನ್ನು ಮದುವೆಯಾಗಲಿಲ್ಲವೆಂಬ ಕೀರ್ತಿಯನ್ನು ತನ್ನ ಭಕ್ತನಿಗೆ ತಂದುಕೊಡಬೇಕು. ಮತ್ತು ಪರಶುರಾಮನು ಶಿಷ್ಯನಿಂದಲೇ ಪರಾಜಿತನಾದನು ಎಂದು

ಅಸುರಜನರಿಗೆ ಮೋಹವನ್ನುಂಟುಮಾಡಬೇಕು. ಈ ಕಾರಣದಿಂದ ಪರಶುರಾಮನು ಭೀಷ್ಮನನ್ನು ಗೆದ್ದರೂ ಅವನನ್ನು ಸಂಹರಿಸಲಿಲ್ಲ. ಈ ರೀತಿಯಾಗಿ ಬ್ರಹ್ಮಚಾರಿಯಾಗಿಯೇ ಇರುತ್ತೇನೆಂಬ ಭೀಷ್ಮನ ಪ್ರತಿಜ್ಞೆಯನ್ನು ಸತ್ಯವನ್ನಾಗಿಸಿದನು.

**ವಿದ್ಧವನ್ಮುಗ್ಧವಚ್ಚೈವ ಕೇಶವೋ ವೇದನಾರ್ತವತ್ ।**
**ದರ್ಶಯನ್ನಪಿ ಮೋಹಾಯ ನೈವ ವಿಷ್ಣುಸ್ತಥಾ ಭವೇತ್ ॥**
**ಏವಮಾದಿಪುರಾಣೋತ್ಥವಾಕ್ಯಾದ್ ರಾಮಃ ಸದಾ ಜಯೀ ॥ ೯೫ ॥**

ಪದಚ್ಛೇದ :- ವಿದ್ಧವತ್, ಮುಗ್ಧವತ್, ಚ, ಏವ, ಕೇಶವಃ, ವೇದನಾರ್ತವತ್, ದರ್ಶಯನ್, ಅಪಿ, ಮೋಹಾಯ, ನ, ಏವ, ವಿಷ್ಣುಃ, ತಥಾ, ಭವೇತ್. ಏವಮಾದಿಪುರಾಣೋತ್ಥವಾಕ್ಯಾತ್, ರಾಮಃ, ಸದಾ, ಜಯೀ.

**ಅರ್ಥ** :- **ಕೇಶವಃ** ಪರಮಾತ್ಮನು **ವಿದ್ಧವತ್** ಬಾಣದಿಂದ ಹೊಡೆಸಿಕೊಂಡವನಂತೆ **ಮುಗ್ಧವತ್** ಅಜ್ಞನಂತೆ **ವೇದನಾರ್ತವತ್ ಚೈವ** ವ್ಯಥೆಯಿಂದ ಪೀಡಿತನಾದವನಂತೆಯೂ **ಮೋಹಾಯ** ಅಸುರರ ಮೋಹಕ್ಕೋಸ್ಕರ **ದರ್ಶಯನ್ ಅಪಿ** ತನ್ನನ್ನು ತೋರಿಸಿಕೊಂಡರೂ **ವಿಷ್ಣುಃ** ಪರಮಾತ್ಮನು **ತಥಾ** ಹಾಗೆ ಅಜ್ಞ ಮೊದಲಾದಂತೆ **ನೈವ ಭವೇತ್** ಇರುವುದೇ ಇಲ್ಲ. **ಏವಮಾದಿ ಪುರಾಣೊತ್ಥವಾಕ್ಯಾತ್** ಇವೇ ಮೊದಲಾದ ಪುರಾಣದ ವಾಕ್ಯದಿಂದ **ರಾಮಃ** ಪರಶುರಾಮನು **ಸದಾ** ಯಾವಾಗಲೂ **ಜಯೀ** ಜಯವುಳ್ಳವನಾಗಿದ್ದಾನೆ.

**ತಾತ್ಪರ್ಯ** :- ಪುರಾಣವಾಕ್ಯವು ಭಗವಂತನ ಬಗ್ಗೆ ಹೀಗೆ ಹೇಳುತ್ತದೆ. ಭಗವಂತನು ತಾನು ಬಾಣದಿಂದ ಹೊಡೆಸಿಕೊಂಡಂತೆ, ತನಗೆ ಅಜ್ಞಾನವಿರುವಂತೆ, ದುಃಖದಿಂದ ಪೀಡಿತನಾದವನಂತೆ ತೋರಿಸಿಕೊಳ್ಳುತ್ತಾನೆ. ಇದು ಕೇವಲ ಅಸುರಜನರ ಮೋಹಕ್ಕೋಸ್ಕರ ಎಂದು. ಇದೇ ಮೊದಲಾದ ಪುರಾಣ ವಾಕ್ಯಗಳಿಂದ ಭಗವಂತನ ಅವತಾರನಾದ ಪರಶುರಾಮನೂ ಅಸುರಜನರ ಮೋಹಕ್ಕೋಸ್ಕರವಷ್ಟೇ ತಾನು ಸೋತಂತೆ ತೋರಿಸಿದನು, ಅವನು ಯಾವಾಗಲೂ ಜಯವುಳ್ಳವನೇ ಎಂದು ಸಿದ್ಧವಾಗುತ್ತದೆ.

**ಯಶೋ ಭೀಷ್ಮಸ್ಯ ದತ್ವಾ ತು ಸೋಽಂಬಾಂ ಚ ಶರಣಾಗತಾಮ್ ।**
**ಉನ್ಮುಚ್ಯ ಭರ್ತೃದ್ವೇಷೋತ್ಥಪಾಪಾತ್ ತೇನಾಽಽಶ್ವಯೋಜಯತ್ ॥ ೯೬ ॥**

**ಅನಂತರಂ ಶಿಖಂಡಿತ್ವಾತ್ ತದಾ ಸಾ ಶಾಂಕರಂ ತಪಃ ।**
**ಭೀಷ್ಮಸ್ಯ ನಿಧನಾರ್ಥಾಯ ಪುಂಸ್ತ್ವಾರ್ಥಂ ಚ ಚಕಾರ ಹ ॥ ೯೭ ॥**

ಪದಚ್ಛೇದ :- ಯಶಃ, ಭೀಷ್ಮಸ್ಯ, ದತ್ವಾ ತು, ಸಃ, ಅಂಬಾಂ, ಚ, ಶರಣಾಗತಾಂ, ಉನ್ಮುಚ್ಯ, ಭರ್ತೃದ್ವೇಷೋತ್ಥಪಾಪಾತ್, ತೇನ, ಆಶು, ಅಯೋಜಯತ್, ಅನಂತರಂ, ಶಿಖಂಡಿತ್ವಾತ್. ತದಾ, ಸಾ, ಶಾಂಕರಂ, ತಪಃ, ಭೀಷ್ಮಸ್ಯ, ನಿಧನಾರ್ಥಾಯ, ಪುಂಸ್ತ್ವಾರ್ಥಂ, ಚ, ಚಕಾರ, ಹ.

**ಅರ್ಥ** :- **ಸಃ** ಆ ಪರಶುರಾಮನು **ಭೀಷ್ಮಸ್ಯ ತು** ಭೀಷ್ಮನಿಗಾದರೂ **ಯಶಃ** ಕೀರ್ತಿಯನ್ನು **ದತ್ವಾ** ಕೊಟ್ಟು **ಶರಣಾಗತಾಂ** ತನ್ನನ್ನು ಶರಣುಹೊಂದಿ ಬಂದಂಥ **ಅಂಬಾಂ ಚ** ಅಂಬೆಯನ್ನೂ ಕೂಡ **ಭರ್ತೃದ್ವೇಷೋತ್ಥಪಾಪಾತ್** ಗಂಡನ ದ್ವೇಷದ ಕಾರಣ ಹುಟ್ಟಿದ ಪಾಪದಿಂದ **ಉನ್ಮುಚ್ಯ** ಬಿಡುಗಡೆಗೊಳಿಸಿ **ಶಿಖಂಡಿತ್ವಾತ್** ಶಿಖಂಡಿತ್ವಜನ್ಮದ **ಅನಂತರಂ** ನಂತರ **ಆಶು** **ಶೀಘ್ರವಾಗಿ** **ತೇನ** ಆ ಭೀಷ್ಮನೊಂದಿಗೆ **ಯೋಜಯಾಮಾಸ** ಸೇರಿಸಿದನು. **ತದಾ** ಆಗ **ಸಾ** ಆ ಅಂಬೆಯು **ಭೀಷ್ಮಸ್ಯ** ಭೀಷ್ಮನ **ನಿಧನಾರ್ಥಾಯ** ಸಂಹಾರಕ್ಕೋಸ್ಕರ **ಚ** ಮತ್ತು **ಪುಂಸ್ತ್ವಾರ್ಥಂ** ತನಗೆ ಪುರುಷತ್ವ ಪ್ರಾಪ್ತಿಗೋಸ್ಕರ **ಶಾಂಕರಂ** ರುದ್ರದೇವರನ್ನು ಕುರಿತು **ತಪಃ** ತಪಸ್ಸನ್ನು **ಚಕಾರ** ಮಾಡಿದಳು **ಹ** ವಿಸ್ಮಯವು.

**ತಾತ್ಪರ್ಯ** :- ಪರಶುರಾಮನು ಭೀಷ್ಮನ ಪ್ರತಿಜ್ಞೆಯನ್ನು ರಕ್ಷಿಸಿ ಅವನಿಗೆ ಕೀರ್ತಿಯನ್ನು ತಂದರೂ ನಿನ್ನನ್ನು ಭೀಷ್ಮನೊಂದಿಗೆ ಸೇರಿಸುತ್ತೇನೆ ಎಂದು ಅಂಬೆಗೆ ತಾನು ಕೊಟ್ಟ ಮಾತು ಸುಳ್ಳಾಯಿತ್ತಲ್ಲವೇ ಎಂಬ ಪ್ರಶ್ನೆಗೆ ಉತ್ತರಿಸುತ್ತಾರೆ. ಪರಶುರಾಮನು ಭೀಷ್ಮನಿಗೆ ಕೀರ್ತಿಯನ್ನು ತಂದು ಕೊಟ್ಟನು. ಹಾಗೆಯೇ ತನ್ನ ಗಂಡನನ್ನು ದ್ವೇಷಿಸಿದ್ದರಿಂದ ಅಂಬೆಗೆ ಪಾಪವುಂಟಾಗಿತ್ತು. ಆದರಿಂದ ಅವಳನ್ನು ಮುಕ್ತಿಗೊಳಿಸಿ ಅವಳಿಗೆ ಶಿಖಂಡಿಯ ಜನ್ಮ ಬರುವಂತೆ ಮಾಡಿದನು. ಶಿಖಂಡಿಯ ಜನ್ಮದ ನಂತರ ಮುಂದಿನ ಜನ್ಮದಲ್ಲಿ ಅಂಬೆಯನ್ನು ಶೀಘ್ರವಾಗಿಯೇ ಭೀಷ್ಮನೊಂದಿಗೆ ಸೇರಿಸಿದನು. ಆದ್ದರಿಂದ ಪರಶುರಾಮನ ಪ್ರತಿಜ್ಞೆಯು ಸುಳ್ಳಾಗಲಿಲ್ಲ. ಪರಶುರಾಮನು ಸೋತಂತೆ ನಟಿಸಿದ ನಂತರ ಅಂಬೆಯು ಭೀಷ್ಮನ ಸಂಹಾರಕ್ಕಾಗಿ ಮತ್ತು ತನಗೆ ಪುರುಷತ್ವಪ್ರಾಪ್ತಿಗಾಗಿ ರುದ್ರದೇವರನ್ನು ಕುರಿತು ತಪಸ್ಸನ್ನು ಮಾಡಿದಳು.

**ಭೀಷ್ಮೋ ಯಥಾ ತ್ವಾಂ ಗೃಹ್ಣೀಯಾತ್ ತಥಾ ಕುರ್ಯಾಮಿತೀರಿತಮ್ ।**
**ರಾಮೇಣ ಸತ್ಯಂ ತಚ್ಚಕ್ರೇ ಭೀಷ್ಮೇ ದೇಹಾಂತರಂ ಗತೇ ॥ ೯೮ ॥**

ಪದಚ್ಛೇದ :- ಭೀಷ್ಮಃ, ಯಥಾ, ತ್ವಾಂ, ಗೃಹ್ಣೀಯಾತ್, ತಥಾ, ಕುರ್ಯಾಂ, ಇತಿ, ಈರಿತಂ, ರಾಮೇಣ, ಸತ್ಯಂ, ತತ್, ಚಕ್ರೇ, ಭೀಷ್ಮೇ, ದೇಹಾಂತರೇ, ಗತೇ.

**ಅರ್ಥ** :- **ಭೀಷ್ಮಃ** ಭೀಷ್ಮನು **ಯಥಾ** ಹೇಗೆ **ತ್ವಾಂ** ನಿನ್ನನ್ನು **ಗೃಹ್ಣೀಯಾತ್** ಸ್ವೀಕರಿಸುತ್ತಾನೋ **ತಥಾ** ಹಾಗೆ **ಕುರ್ಯಾಂ** ಮಾಡುತ್ತೇನೆ **ಇತಿ** ಎಂದು **ರಾಮೇಣ** ಪರಶುರಾಮನಿಂದ **ಈರಿತಂ** ಹೇಳಲ್ಪಟ್ಟ ಮಾತನ್ನು **(ಸಃ)** ಆ ರಾಮನು **ಭೀಷ್ಮೇ** ಭೀಷ್ಮನು **ದೇಹಾಂತರೇ** ಬೇರೊಂದು ದೇಹವನ್ನು **ಗತೇ (ಸತಿ)** ಸೇರುತ್ತಿರಲು **ಸತ್ಯಂ** ಸತ್ಯವಾಗಿ **ಚಕ್ರೇ** ಮಾಡಿದನು.

**ತಾತ್ಪರ್ಯ** :- ಹೇಗೆ ಮಾಡಿದರೆ ಭೀಷ್ಮನು ನಿನ್ನನ್ನು ಸ್ವೀಕರಿಸುವನೋ ಹಾಗೆ ಮಾಡುವೆನು ಎಂದು ಪರಶುರಾಮನು ಅಂಬೆಗೆ ಮಾತನ್ನು ಕೊಟ್ಟಿದ್ದನು. ಭೀಷ್ಮನು ಈ ದೇಹವನ್ನು ತ್ಯಜಿಸಿ ಮುಂದಿನ ಜನ್ಮಕ್ಕೆ ಹೋದಾಗ ಅವಳನ್ನು ಭೀಷ್ಮನೊಂದಿಗೆ ಸೇರಿಸಿ ತನ್ನ ಮಾತನ್ನು ಸತ್ಯವನ್ನಾಗಿ ಮಾಡಿದ.

**ರುದ್ರಸ್ತು ತಸ್ಯಾಸ್ತಪಸಾ ತುಷ್ಟಃ ಪ್ರಾದಾದ್ ವರಂ ತದಾ ।**
**ಭೀಷ್ಮಸ್ಯ ಮೃತಿಹೇತುತ್ವಂ ಕಾಲಾತ್ ಪುಂದೇಹಸಂಭವಮ್ ॥ ೯೯ ॥**

ಪದಚ್ಛೇದ :- ರುದ್ರಃ, ತು, ತಸ್ಯಾಃ, ತಪಸಾ, ತುಷ್ಟಃ, ಪ್ರಾದಾತ್, ವರಂ, ತದಾ, ಭೀಷ್ಮಸ್ಯ, ಮೃತಿಹೇತುತ್ವಂ, ಕಾಲಾತ್, ಪುಂದೇಹಸಂಭವಮ್.

**ಅರ್ಥ** :- **ತಸ್ಯಾಃ** ಆ ಅಂಬೆಯ **ತಪಸಾ** ತಪಸ್ಸಿನಿಂದ **ತುಷ್ಟಃ** ಸಂತೋಷ ಗೊಂಡ **ರುದ್ರಃ ತು** ರುದ್ರನಾದರೂ **ತದಾ** ಆಗ **ವರಂ** ವರವನ್ನು **ಪ್ರಾದಾತ್** ಕೊಟ್ಟನು. **ಭೀಷ್ಮಸ್ಯ** ಭೀಷ್ಮನ **ಮೃತಿಹೇತುತ್ವಂ** ಮರಣಕ್ಕೆ ಕಾರಣಳಾಗು **ಕಾಲಾತ್** ಮುಂದೆ **ಪುಂದೇಹಸಂಭವಂ** ಪುರುಷದೇಹವು ಬರಲಿ

**ತಾತ್ಪರ್ಯ** :- ಅಂಬೆಯ ತಪಸ್ಸಿನಿಂದ ತುಷ್ಟನಾದ ರುದ್ರನು ವರವನ್ನು ಕೊಟ್ಟನು– 'ಭೀಷ್ಮನ ಮರಣಕ್ಕೆ ನೀನು ಕಾರಣಳಾಗು. ಮುಂದೆ ನಿನಗೆ ಪುರುಷದೇಹವು ಲಭಿಸಲಿ'.

**ಮಾಲಾಂ ಚ ಯ ಇಮಾಂ ಮಾಲಾಂ ಗೃಹ್ಣೀಯಾತ್ ಸ ಹನಿಷ್ಯತಿ ।**
**ಭೀಷ್ಮಮಿತ್ಯೇವ ತಾಂ ಮಲಾಂ ಗೃಹೀತ್ವಾ ಸಾ ನೃಪಾನ್ ಯಯೌ**
**॥ ೧೦೦ ॥**

ಪದಚ್ಛೇದ :- ಮಾಲಾಂ, ಚ, ಯಃ, ಇಮಾಂ, ಮಾಲಾಂ, ಗೃಹ್ಣೀಯಾತ್, ಸಃ, ಹನಿಷ್ಯತಿ, ಭೀಷ್ಮಂ, ಇತಿ, ಏವ, ತಾಂ, ಮಾಲಾಂ, ಗೃಹೀತ್ವಾ ಸಾ, ನೃಪಾನ್, ಯಯೌ.

**ಅರ್ಥ** :- **ಮಲಾಂ ಚ** ಮಾಲೆಯನ್ನೂ **(ಪ್ರಾದಾತ್)** ಕೊಟ್ಟನು **ಯಃ** ಯಾವನು **ಇಮಾಂ** ಈ **ಮಾಲಾಂ** ಮಾಲೆಯನ್ನು **ಗೃಹ್ಣೀಯಾತ್** ಧರಿಸುತ್ತಾನೋ **ಸಃ** ಅವನು **ಭೀಷ್ಮಂ** ಭೀಷ್ಮನನ್ನು **ಹನಿಷ್ಯತಿ ಏವ** ಖಂಡಿತವಾಗಿ ಸಂಹರಿಸುತ್ತಾನೆ **ಇತಿ** ಎಂದು. **ಸಾ** ಆ ಅಂಬೆಯು **ತಾಂ** ಆ **ಮಾಲಾಂ** ಮಾಲೆಯನ್ನು **ಗೃಹೀತ್ವಾ** ಸ್ವೀಕರಿಸಿ **ನೃಪಾನ್** ರಾಜರನ್ನು ಕುರಿತು **ಯಯೌ** ಹೋದಳು.

**ತಾತ್ಪರ್ಯ** :- ಮಾಲೆಯನ್ನು ಕೊಟ್ಟು ರುದ್ರನು ಹೇಳುತ್ತಾನೆ- 'ಯಾರು ಈ ಮಾಲೆಯನ್ನು ಧರಿಸುತ್ತಾರೋ ಅವರು ನಿಶ್ಚಯವಾಗಿ ಭೀಷ್ಮನನ್ನು ಸಂಹರಿಸುತ್ತಾರೆ' ಎಂದು. ಅದನ್ನು ಸ್ವೀಕರಿಸಿದ ಅಂಬೆ ಎಲ್ಲ ರಾಜರ ಬಳಿ ಹೋಗಿ ಕೇಳುತ್ತಾಳೆ ಇದನ್ನು ಧರಿಸಿ ಭೀಷ್ಮನನ್ನು ಸಂಹರಿಸಿ ಎಂದು.

**ತಾಂ ನ ಭೀಷ್ಮಭಯಾತ್ ಕೇಽಪಿ ಜಗೃಹುಸ್ತಾಂ ಹಿ ಸಾ ತತಃ ।**
**ದ್ರುಪದಸ್ಯ ಗೃಹದ್ವಾರಿ ನ್ಯಸ್ಯ ಯೋಗಾತ್ ತನುಂ ಜಹೌ ॥ ೧೦೧ ॥**

ಪದಚ್ಛೇದ :- ತಾಂ, ನ, ಭೀಷ್ಮಭಯಾತ್, ಕೇ, ಅಪಿ, ಜಗೃಹುಃ, ಹಿ, ಸಾ, ತತಃ, ದ್ರುಪದಸ್ಯ, ಗೃಹದ್ವಾರಿ, ನ್ಯಸ್ಯ, ಯೋಗಾತ್, ತನುಂ, ಜಹೌ.

**ಅರ್ಥ** :- **ತಾಂ** ಆ ಮಾಲೆಯನ್ನು **ಭೀಷ್ಮಭಯಾತ್** ಭೀಷ್ಮನ ಭಯದಿಂದ **ಕೇ ಅಪಿ** ಯಾರೂ ಕೂಡ **ನ ಜಗೃಹುಃ** ಸ್ವೀಕರಿಸಲಿಲ್ಲ **ತತಃ** ಆ ನಂತರ **ಸಾ ಹಿ** ಆ ಅಂಬೆಯಾದರೂ **ದ್ರುಪದಸ್ಯ** ದ್ರುಪದನ **ಗೃಹದ್ವಾರಿ** ಮನೆಯ ಬಾಗಿಲಲ್ಲಿ **ನ್ಯಸ್ಯ** ಇಟ್ಟು **ಯೋಗಾತ್** ಯೋಗಶಕ್ತಿಯಿಂದ **ತನುಂ** ಶರೀರವನ್ನು **ಜಹೌ** ಬಿಟ್ಟಳು.

ತಾತ್ಪರ್ಯ :- ಆ ಮಾಲೆಯನ್ನು ಯಾವ ರಾಜನೂ ಸ್ವೀಕರಿಸಲಿಲ್ಲ. ಎಲ್ಲರಿಗೂ ಭೀಷ್ಮನ ಭಯವಿತ್ತು. ನಂತರ ಅಂಬೆಯು ಆ ಮಾಲೆಯನ್ನು ದ್ರುಪದನ ಮನೆಯ ಬಾಗಿಲಲ್ಲಿ ಇಟ್ಟು ಯೋಗಶಕ್ತಿಯಿಂದ ತನ್ನ ಶರೀರವನ್ನು ತ್ಯಜಿಸಿದಳು.

**ಏತಸ್ಮಿನ್ನೇವ ಕಾಲೇ ತು ಸುತಾರ್ಥಂ ದ್ರುಪದಸ್ತಪಃ ।**
**ಚಕಾರ ಶಂಭವೇ ಚೈನಂ ಸೋಽಬ್ರವೀತ್ ಕನ್ಯಕಾ ತವ ॥ ೧೦೨ ॥**

**ಭೂತ್ವಾ ಭವಿಷ್ಯತಿ ಪುಮಾನಿತಿ ಸಾಂಬಾ ತತೋಽಜನಿ ।**
**ನಾಮ್ನಾ ಶಿಖಂಡಿನೀ ತಸ್ಯಾಃ ಪುಂವತ್ ಕರ್ಮಾಣಿ ಚಾಕರೋತ್ ॥ ೧೦೩ ॥**

ಪದಚ್ಛೇದ :- **ಏತಸ್ಮಿನ್, ಏವ, ಕಾಲೇ, ತು, ಸುತಾರ್ಥಂ, ದ್ರುಪದಃ, ತಪಃ, ಚಕಾರ, ಶಂಭವೇ, ಚ, ಏನಂ, ಸಃ, ಅಬ್ರವೀತ್, ಕನ್ಯಕಾ, ತವ,**

**ಭೂತ್ವಾ, ಭವಿಷ್ಯತಿ, ಪುಮಾನ್, ಇತಿ, ಸಾ, ಅಂಬಾ, ತತಃ, ಅಜನಿ, ನಾಮ್ನಾ ಶಿಖಂಡಿನೀ, ತಸ್ಯಾಃ, ಪುಂವತ್, ಕರ್ಮಾಣಿ, ಚ, ಅಕರೋತ್.**

ಅರ್ಥ :- **ಏತಸ್ಮಿನ್ ಏವ** ಅದೇ **ಕಾಲೇ** ಸಮಯದಲ್ಲಿ **ಸುತಾರ್ಥಂ** ಮಕ್ಕಳಿಗಾಗಿ **ದ್ರುಪದಃ** ದ್ರುಪದನು **ಶಂಭವೇ** ಶಿವನನ್ನುದ್ದೇಶಿಸಿ **ತಪಃ** ತಪಸ್ಸನ್ನು **ಚಕ್ರೇ** ಮಾಡಿದನು. **ಸಃ ಚ** ಆ ಶಿವನಾದರೂ **ಏನಂ** ಈ ದ್ರುಪದನಿಗೆ **ಅಬ್ರವೀತ್** ಹೇಳಿದನು **ತವ** ನಿನಗೆ **ಕನ್ಯಕಾ** ಹೆಣ್ಣು ಮಗುವು **ಭೂತ್ವಾ** ಹುಟ್ಟಿ **ಪುಮಾನ್** ಗಂಡು **ಭವಿಷ್ಯತಿ** ಆಗುತ್ತದೆ **ಇತಿ** ಎಂದು. **ತತಃ** ಆ ನಂತರ **ಸಾ** ಆ **ಅಂಬಾ** ಅಂಬೆಯು **ನಾಮ್ನಾ** ಹೆಸರಿನಿಂದ **ಶಿಖಂಡಿನೀ** ಶಿಖಂಡಿನಿಯೆಂದು ಪ್ರಸಿದ್ಧಳಾಗಿ **ಅಜನಿ** ಹುಟ್ಟಿದಳು. **ತಸ್ಯಾಃ ಚ** ಆ ಶಿಖಂಡಿನಿಗಾದರೂ **ಪುಂವತ್** ಪುರುಷರಿಗೆ ಮಾಡುವಂತೆ **ಕರ್ಮಾಣಿ** ಸಂಸ್ಕಾರಗಳನ್ನು **ಅಕರೋತ್** ಮಾಡಿದರು.

ತಾತ್ಪರ್ಯ :- ಅಂಬೆಯು ದೇಹ ತ್ಯಜಿಸಿದ ಅದೇ ಸಮಯದಲ್ಲಿ ದ್ರುಪದನು ಮಕ್ಕಳಿಗಾಗಿ ಶಿವನನ್ನು ಕುರಿತು ತಪಸ್ಸು ಮಾಡಿದನು. ಶಿವನು ದ್ರುಪದನಿಗೆ 'ನಿನಗೆ ಒಂದು ಹೆಣ್ಣು ಮಗುವಾಗುತ್ತದೆ ನಂತರ ಅದು ಗಂಡಾಗುತ್ತದೆ' ಎಂದು ಹೇಳಿದನು. ಅದರಂತೆಯೇ ಅಂಬೆಯು ಶಿಖಂಡಿನಿ ಎಂಬ ಹೆಸರಿನಿಂದ ದ್ರುಪದನ ಮಗಳಾಗಿ ಜನಿಸಿದಳು. ಆ ಶಿಖಂಡಿನಿಗೆ ಗಂಡು ಮಗುವಿಗೆ ಮಾಡುವಂತೆ ಸಂಸ್ಕಾರಗಳನ್ನು ದ್ರುಪದನು ಮಾಡಿದನು.

**ತಸ್ಯೈ ಪಾಂಚಾಲರಾಜಃ ಸ ದಶಾರ್ಣಾಧಿಪತೇಃ ಸುತಾಮ್ ।**
**ಉದ್ವಾಹಯಾಮಾಸ ಸಾ ತಾಂ ಪುಂವೇಷೇಣೈವ ಗೂಹಿತಾಮ್ ।**
**ಅನ್ಯತ್ರ ಮಾತಾಪಿತ್ರೋಃಸ್ತು ನ ವಿಜ್ಞಾತಾಂ ಬುಬೋಧ ಹ ॥ ೧೦೪ ॥**

ಪದಚ್ಛೇದ :- ತಸ್ಯೈ, ಪಾಂಚಾಲರಾಜಃ, ಸಃ, ದಶಾರ್ಣಾಧಿಪತೇಃ, ಸುತಾಂ, ಉದ್ವಾಹಯಾಮಾಸ, ಸಾ, ತಾಂ, ಪುಂವೇಷೇಣ, ಏವ, ಗೂಹಿತಾಂ, ಅನ್ಯತ್ರ, ಮಾತಾಪಿತ್ರೋಃ, ತು, ನ, ವಿಜ್ಞಾತಾಂ, ಬುಬೋಧ ಹ.

**ಅರ್ಥ** :- **ಸಃ** ಆ **ಪಾಂಚಾಲರಾಜಃ** ಪಾಂಚಾಲದೇಶದ ರಾಜನಾದ ದ್ರುಪದನು **ತಸ್ಯೈ** ಆ ಶಿಖಂಡಿನಿಗೆ **ದಶಾರ್ಣಾಧಿಪತೇಃ** ದಶಾರ್ಣದೇಶದ ರಾಜನ **ಸುತಾಂ**ಮಗಳೊಂದಿಗೆ **ಉದ್ವಾಹಯಾಮಾಸ** ಮದುವೆ ಮಾಡಿಸಿದನು. **ಸಾ** ದಶಾರ್ಣರಾಜನ ಮಗಳಾದರೂ **ಪುಂವೇಷೇಣ ಏವ** ಪುರುಷ ವೇಶದಿಂದಲೇ **ಗೂಹಿತಾಂ** ಮುಚ್ಚಲ್ಪಟ್ಟ **ಮಾತಾಪಿತ್ರೋಃ** ತಂದೆ ತಾಯಿಯನ್ನು ಬಿಟ್ಟು **ಅನ್ಯತ್ರ ತು** ಬೇರೆಯವರಿಗೆ **ನ ವಿಜ್ಞಾತಾಂ** ತಿಳಿಯದಿದ್ದ **ತಾಂ** ಆ ಶಿಖಂಡಿನಿಯನ್ನು **ಬುಬೋಧ ಹ** ತಿಳಿದಳಷ್ಟೇ.

**ತಾತ್ಪರ್ಯ** :- ಪಾಂಚಾಲಾಧಿಪತಿಯಾದ ದ್ರುಪದನು ದಶಾರ್ಣದೇಶದ ರಾಜನಾದ ಹಿರಣ್ಯವರ್ಮನ ಮಗಳೊಂದಿಗೆ ಶಿಖಂಡಿನಿಗೆ ಮದುವೆ ಮಾಡಿಸಿದನು. ಶಿಖಂಡಿನಿಯು ಸ್ತ್ರೀ ಎಂದು ತಂದೆ ತಾಯಿಯನ್ನು ಬಿಟ್ಟು ಬೇರೆಯವರಿಗೆ ತಿಳಿದಿರಲಿಲ್ಲ. ಶಿಖಂಡಿನಿಯನ್ನು ಪುರುಷವೇಶದಿಂದ ಮುಚ್ಚಲಾಗಿತ್ತು. ಆದರೆ ಹಿರಣ್ಯವರ್ಮನ ಮಗಳಿಗೆ ಶಿಖಂಡಿನಿಯು ಪುರುಷನಲ್ಲವೆಂದು ತಿಳಿದುಹೋಯಿತು.

**ಧಾತ್ರ್ಯೈ ನ್ಯವೇದಯತ್ ಸಾಽಥ ತತ್ಪಿತ್ರೇ ಸಾ ನ್ಯವೇದಯತ್ ।**
**ಸ ಕ್ರುದ್ಧಃ ಪ್ರೇಷಯಾಮಾಸ ನಿಹನ್ಮಿ ತ್ವಾಂ ಸಬಾಂಧವಮ್ ।**
**ಇತಿ ಪಾಂಚಾಲರಾಜಾಯ ನಿರ್ಜಗಾಮ ಚ ಸೇನಯಾ ॥ ೧೦೫ ॥**

ಪದಚ್ಛೇದ :- ಧಾತ್ರ್ಯೈ, ನ್ಯವೇದಯತ್, ಸಾ, ಅಥ, ತತ್ಪಿತ್ರೇ, ಸಾ, ನ್ಯವೇದಯತ್, ಸಃ, ಕ್ರುದ್ಧಃ, ಪ್ರೇಷಯಾಮಾಸ, ನಿಹನ್ಮಿ, ತ್ವಾಂ, ಸಬಾಂಧವಂ, ಇತಿ, ಪಾಂಚಾಲರಾಜಾಯ, ನಿರ್ಜಗಾಮ, ಚ, ಸೇನಯಾ.

**ಅರ್ಥ** :- **ಅಥ** ಅನಂತರ **ಸಾ** ಆ ಶಿಖಂಡಿನಿಯ ಹೆಂಡತಿಯು **ಧಾತ್ರ್ಯೈ** ತನ್ನ ಮತ್ತೊಬ್ಬ ತಾಯಿಗೆ **ನ್ಯವೇದಯತ್** ತಿಳಿಸಿದಳು **ಸಾ** ಆ ಮತ್ತೊಬ್ಬ ತಾಯಿಯು **ತತ್ಪಿತ್ರೇ** ಕನ್ಯೆಯ ತಂದೆ ಹಿರಣ್ಯವರ್ಮನಿಗೆ **ನ್ಯವೇದಯತ್** ಹೇಳಿದಳು. **ಕ್ರುದ್ಧಃ** ಕೋಪಗೊಂಡ **ಸಃ** ಆ ಹಿರಣ್ಯವರ್ಮನು **ಪಾಂಚಾಲರಾಜಾಯ** ದ್ರುಪದನಿಗೆ **(ದೂತಂ)** ದೂತನನ್ನು **ಪ್ರೇಷಯಾಮಾಸ** ಕಳಿಸಿದನು **ಸಬಾಂಧವಂ** ಬಂಧುಗಳಿಂದ ಸಹಿತನಾದ **ತ್ವಾಂ** ನಿನ್ನನ್ನು **ನಿಹನ್ಮಿ** ಕೊಲ್ಲುತ್ತೇನೆ **ಇತಿ** ಎಂದು. **ಸೇನಯಾ** ಸೇನೆಯೊಂದಿಗೆ **ನಿರ್ಜಗಾಮ ಚ** ತಾನೂ ಹೊರಟನು.

**ತಾತ್ಪರ್ಯ** :- ಹಿರಣ್ಯವರ್ಮನ ಮಗಳು ತನ್ನ ಚಿಕ್ಕ ತಾಯಿಗೆ ಎಲ್ಲವನ್ನೂ ತಿಳಿಸಿದಳು. ಅವಳು ಹಿರಣ್ಯವರ್ಮನಿಗೆ ಎಲ್ಲವನ್ನೂ ತಿಳಿಸಿದಳು. ಕೋಪಗೊಂಡ ಹಿರಣ್ಯವರ್ಮನು ನಿನ್ನನ್ನು ಬಂಧುಗಳಿಂದ ಸಹಿತನಾಗಿ ಕೊಲ್ಲುತ್ತೇನೆ ಎಂದು ತಿಳಿಸಿ ದೂತನನ್ನು ಕಳಿಸಿದನು. ನಂತರ ಸೇನೆಯೊಂದಿಗೆ ತಾನೂ ಹೋದನು.

**ವಿಶ್ವಸ್ಯ ವಾಕ್ಯಂ ರುದ್ರಸ್ಯ ಪುಮಾನೇವೇತಿ ಪಾರ್ಷತಃ ।**
**ಪ್ರೇಷಯಾಮಾಸ ಧಿಗ್ ಬುದ್ಧಿರ್ಭಿನ್ನಾ ತೇ ಬಾಲವಾಕ್ಯತಃ।**
**ಅಪರೀಕ್ಷಕಸ್ಯ ತೇ ರಾಷ್ಟ್ರಂ ಕಥಮಿತ್ಯೇವ ನರ್ಮಕೃತ್ ॥ ೧೦೬ ॥**

ಪದಚ್ಛೇದ :- ವಿಶ್ವಸ್ಯ, ವಾಕ್ಯಂ, ರುದ್ರಸ್ಯ, ಪುಮಾನ್, ಏವ, ಇತಿ, ಪಾರ್ಷತಃ, ಪ್ರೇಷಯಾಮಾಸ, ಧಿಕ್, ಬುದ್ಧಿಃ, ಭಿನ್ನಾ, ತೇ, ಬಾಲವಾಕ್ಯತಃ, ಅಪರೀಕ್ಷಕಸ್ಯ, ತೇ, ರಾಷ್ಟ್ರಂ, ಕಥಂ, ಇತಿ, ಏವ, ನರ್ಮಕೃತ್.

**ಅರ್ಥ** :- **ಪಾರ್ಷತಃ** ಪೃಷತನ ಮಗನಾದ ದ್ರುಪದನು **ರುದ್ರಸ್ಯ** ರುದ್ರದೇವರ **ವಾಕ್ಯಂ** ಮಾತನ್ನು **ವಿಶ್ವಸ್ಯ** ನಂಬಿ **ಪುಮಾನ್ ಏವ** ಗಂಡೇ **ತೇ** ನಿನ್ನ **ಬುದ್ಧಿಃ** ಬುದ್ಧಿಯು **ಬಾಲವಾಕ್ಯತಃ** ಮಕ್ಕಳ ಮಾತಿನಿಂದ **ಭಿನ್ನಾ** ನಷ್ಟವಾಗಿದೆ **ಅಪರೀಕ್ಷಕಸ್ಯ** ಪರೀಕ್ಷಿಸದ **ತೇ** ನಿನಗೆ **ಕಥಂ** ಹೇಗೆ ತಾನೇ **ರಾಷ್ಟ್ರಂ** ರಾಷ್ಟ್ರವು ನಡೆಸಲು ಯೋಗ್ಯವು? **ಇತಿ** ಎಂದು **ನರ್ಮಕೃತ್** ಅಪಹಾಸ್ಯ ಮಾಡಿದವನಾಗಿ **(ದೂತಂ)** ದೂತನನ್ನು **ಪ್ರೇಷಯಾಮಾಸ** ಕಳುಹಿಸಿದನು.

**ತಾತ್ಪರ್ಯ** :- ದ್ರುಪದನೂ ಕೂಡ ರುದ್ರದೇವರ ಮಾತಿನ ಮೇಲೆ ವಿಶ್ವಾಸವಿಟ್ಟು 'ಮಕ್ಕಳ ಮಾತನ್ನು ನಂಬುವ ನಿನ್ನ ಬುದ್ಧಿಯು ಹಾಳಾಗಿದೆ ಪರೀಕ್ಷೆ ಮಾಡದ ನಿನಗೆ ರಾಜ್ಯವನ್ನು ನಡೆಸುವ ಯೋಗ್ಯತೆಯು ಇದೆಯೇ?' ಎಂದು ಅಪಹಾಸ್ಯ ಮಾಡಿ ಹಿರಣ್ಯವರ್ಮನ ಬಳಿ ದೂತನನ್ನು ಕಳಿಸುತ್ತಾನೆ.

**ಅಥ ಭಾರ್ಯಾಸಮೇತಂ ತಂ ಪಿತರಂ ಚಿಂತಯಾಕುಲಮ್ ।**
**ದೃಷ್ಟ್ವಾ ಶಿಖಂಡಿನೀ ದುಃಖಾನ್ಮನ್ನಿಮಿತ್ತಾನ್ನ ನಶ್ಯತು ॥ ೧೦೭ ॥**

**ಇತಿ ಮತ್ವಾ ವನಾಯೈವ ಯಯೌ ಯತ್ರ ಚ ತುಂಬುರುಃ ।**
**ಸ್ಥೂಣಾಕರ್ಣಾಭಿಧೇಯಸ್ತಾಮಪಶ್ಯದ್ ದೃಢಕರ್ಣತಃ ॥ ೧೦೮ ॥**

**ಪದಚ್ಛೇದ** :- ಅಥ, ಭಾರ್ಯಾಸಮೇತಂ, ತಂ, ಪಿತರಂ, ಚಿಂತಯಾಕುಲಂ, ದೃಷ್ಟ್ವಾ ಶಿಖಂಡಿನೀ, ದುಃಖಾತ್, ಮನ್ನಿಮಿತ್ತಾತ್, ನ, ನಶ್ಯತು,

ಇತಿ, ಮತ್ವಾ, ವನಾಯ, ಏವ, ಯಯೌ, ಯತ್ರ, ಚ, ತುಂಬುರುಃ, ಸ್ಥೂಣಕರ್ಣಾಭಿಧೇಯಃ, ತಾಂ, ಅಪಶ್ಯತ್, ದೃಢಕರ್ಣತಃ.

**ಅರ್ಥ** :- **ಅಥ** ಅನಂತರ **ಶಿಖಂಡಿನೀ** ಶಿಖಂಡಿನಿಯು **ಭಾರ್ಯಾ ಸಮೇತಂ** ಹೆಂಡತಿಯೊಂದಿಗೆ **ಚಿಂತಾಕುಲಂ** ಚಿಂತಿಸುತ್ತಿರುವ **ತಂ** ಆ **ಪಿತರಂ** ತಂದೆಯನ್ನು **ದೃಷ್ಟ್ವಾ** ನೋಡಿ **ದುಃಖಾತ್** ದುಃಖದಿಂದ **ಮನ್ನಿಮಿತ್ತಾತ್** ನನ್ನ ಕಾರಣದಿಂದ **ನ ನಶ್ಯತು** ಇವರು ನಾಶವಾಗದಿರಲಿ **ಇತಿ** ಎಂದು **ಯತ್ರ ಚ** ಎಲ್ಲಿ **ತುಂಬುರುಃ** ತುಂಬುರುವಿದ್ದನೋ (**ತತ್ರ**) ಅಲ್ಲಿಗೆ **ಯಯೌ** ಹೋದಳು **ದೃಢಕರ್ಣತಃ** ದೊಡ್ಡ ಕಿವಿಗಳಿದ್ದುದರಿಂದ **ಸ್ಥೂಣಕರ್ಣಾಭಿಧೇಯಃ** ಸ್ಥೂಣ ಕರ್ಣನೆಂಬ ಹೆಸರು ಪಡೆದಿದ್ದ ಅವನು **ತಾಂ** ಆ ಶಿಖಂಡಿನಿಯನ್ನು **ಅಪಶ್ಯತ್** ನೋಡಿದನು.

**ತಾತ್ಪರ್ಯ** :- ಚಿಂತೆಯಿಂದಿರುವ ತನ್ನ ತಂದೆ-ತಾಯಂದಿರನ್ನು ನೋಡಿದ ಶಿಖಂಡಿನಿಯು ನನ್ನಿಂದ ಇವರು ನಾಶವಾಗದಿರಲಿ ಎಂದು ಕಾಡಿಗೆ ಹೋಗುತ್ತಾಳೆ. ಆ ಕಾಡಿನಲ್ಲಿ ತುಂಬುರು ಇರುತ್ತಾನೆ. ದೊಡ್ಡ ಕಿವಿಯಿದ್ದದ್ದ ರಿಂದ ಅವನಿಗೆ ಸ್ಥೂಣಕರ್ಣನೆಂಬ ಹೆಸರೇ ಇರುತ್ತದೆ. ಅವನು ಈ ಶಿಖಂಡಿನಿಯನ್ನು ನೋಡಿದನು.

ಸ ತಸ್ಯಾ ಅಖಿಲಂ ಶ್ರುತ್ವಾ ಕೃಪಾಂ ಚಕ್ರೇ ಮಹಾಮನಾಃ ।
ಸ ತಸ್ಯೈ ಸ್ವಂ ವಪುಃ ಪ್ರಾದಾತ್ ತದೀಯಂ ಜಗೃಹೇ ತಥಾ ।
ಅಂಶೇನ ಪುಂಸ್ತ್ವಭಾವಾರ್ಥಂ ಪೂರ್ವದೇಹೇ ಸಮಾಸ್ಥಿತಃ ॥ ೧೦೯ ॥

ಪದಚ್ಛೇದ :- ಸಃ, ತಸ್ಯಾಃ, ಅಖಿಲಂ, ಶ್ರುತ್ವಾ ಕೃಪಾಂ, ಚಕ್ರೇ, ಮಹಾಮನಾಃ, ಸಃ, ತಸ್ಯೈ, ಸ್ವಂ, ವಪುಃ, ಪ್ರಾದಾತ್, ತದೀಯಂ, ಜಗೃಹೇ, ತಥಾ, ಅಂಶೇನ, ಪುಂಸ್ತ್ವಭಾವಾರ್ಥಂ, ಪೂರ್ವದೇಹೇ, ಸಮಾಸ್ಥಿತಃ.

**ಅರ್ಥ** :- **ಮಹಾಮನಾಃ** ದೊಡ್ಡಮನಸ್ಸಿನ **ಸಃ** ಆ ತುಂಬುರುವು **ತಸ್ಯಾಃ** ಆ ಶಿಖಂಡಿನಿಯ **ಅಖಿಲಂ** ಎಲ್ಲ ವಿಷಯವನ್ನೂ **ಶ್ರುತ್ವಾ** ಕೇಳಿ **ಕೃಪಾಂ** ದಯೆಯನ್ನು **ಚಕ್ರೇ** ಮಾಡಿದನು. **ಸಃ** ಆ ತುಂಬುರುವು **ತಸ್ಯೈ** ಆ ಶಿಖಂಡಿನಿಗೆ **ಸ್ವಂ** ತನ್ನ **ವಪುಃ** ಶರೀರವನ್ನು **ಪ್ರಾದಾತ್** ಕೊಟ್ಟನು **ತಥಾ** ಹಾಗೆಯೇ **ತದೀಯಂ** ಅವಳ ಶರೀರವನ್ನು **ಜಗೃಹೇ** ಸ್ವೀಕರಿಸಿದನು. **ಪುಂಸ್ತ್ವಭಾವಾರ್ಥಂ** ಪುರುಷತ್ವಸ್ವಭಾವಕ್ಕೋಸ್ಕರ **ಪೂರ್ವದೇಹೇ** ಅವಳಿಗೆ ಕೊಟ್ಟ ದೇಹದಲ್ಲೇ **ಅಂಶೇನ** ಒಂದು ಅಂಶದಿಂದ **ಸಮಾಸ್ಥಿತಃ** ಇದ್ದನು.

**ತಾತ್ಪರ್ಯ** :- ದೊಡ್ಡಮನಸ್ಸಿನ ತುಂಬುರುವು ಅವಳಿಂದ ಎಲ್ಲ ವಿಚಾರಗಳನ್ನು ಕೇಳಿ ತಿಳಿದ. ಅವಳಲ್ಲಿ ಕರುಣೆಯುಂಟಾಗಿ ತನ್ನ ಶರೀರವನ್ನು ಅವಳಿಗೆ ಕೊಟ್ಟೂ ಅವಳ ಶರೀರವನ್ನು ತಾನು ಸ್ವೀಕರಿಸಿದನು. ಆದರೂ ತನಗೆ ಪುರುಷಸ್ವಭಾವವಿರಬೇಕೆಂದು ಅವಳಿಗೆ ಕೊಟ್ಟ ತನ್ನ ಶರೀರದಲ್ಲಿ ಒಂದು ಅಂಶದಿಂದ ಇದ್ದನು.

ಪುಂಸಾಂ ಸ್ತ್ರೀತ್ವಂ ಭವೇತ್ ಕ್ವಾಽಪಿ ತಥಾಽಪ್ಯಂತೇ ಪುಮಾನ್ ಭವೇತ್ ।
ಸ್ತ್ರೀಣಾಂ ನೈವ ಹಿ ಪುಂಸ್ತ್ವಂ ಸ್ಯಾದ್ ಬಲವತ್ಕಾರಣೈರಪಿ ॥ ೧೧೦ ॥

ಪದಚ್ಛೇದ :- ಪುಂಸಾಂ, ಸ್ತ್ರೀತ್ವಂ, ಭವೇತ್, ಕ್ವ ಅಪಿ, ತಥಾ, ಅಪಿ, ಅಂತೇ, ಪುಮಾನ್, ಭವೇತ್, ಸ್ತ್ರೀಣಾಂ, ನ, ಏವ, ಹಿ, ಪುಂಸ್ತ್ವಂ, ಸ್ಯಾತ್, ಬಲವತ್ಕಾರಣೈಃ, ಅಪಿ.

**ಅರ್ಥ** :- **ಪುಂಸಾಂ** ಪುರುಷರಿಗೆ **ಕ್ವ ಅಪಿ** ಯಾವುದೋ ಒಂದು ಕಾರಣದಿಂದ **ಸ್ತ್ರೀತ್ವಂ** ಸ್ತ್ರೀತ್ವವು **ಭವೇತ್** ಬರಬಹುದು **ತಥಾ ಅಪಿ** ಆದರೂ ಕೂಡ **ಅಂತೇ** ಆ ಕಾರಣವು ಮುಗಿದ ನಂತರ **ಪುಮಾನ್** ಗಂಡಸೇ **ಭವೇತ್**

ಆಗುತ್ತಾನೆ. **ಸ್ತ್ರೀಣಾಂ ಹಿ** ಹೆಂಗಸರಿಗಾದರೆ **ಬಲವತ್ಕಾರಣೈಃ ಅಪಿ** ಪ್ರಬಲವಾದ ಕಾರಣಗಳಿದ್ದರೂ **ಪುಂಸ್ತ್ವಂ** ಪುರುಷತ್ವವು **ನ ಸ್ಯಾತ್ ಏವ** ಬರುವುದೇ ಇಲ್ಲ.

**ತಾತ್ಪರ್ಯ :-** ತುಂಬುರುವು ಒಂದು ಅಂಶದಿಂದ ತನ್ನ ದೇಹದಲ್ಲೇ ಇರಲು ಕಾರಣವನ್ನು ಹೇಳುತ್ತಿದ್ದಾರೆ. ಪುರುಷರಿಗೆ ವರ, ಶಾಪ ಮೊದಲಾದ ಕಾರಣಗಳಿಂದ ಸ್ತ್ರೀ ದೇಹವು ಬರಬಹುದು. ಆ ಕಾರಣವು ಮುಗಿದ ನಂತರ ಪುನಃ ಪುರುಷತ್ವವೇ ಬರುತ್ತದೆ. ಆದರೆ ಸ್ತ್ರೀಯರಿಗೆ ಪ್ರಬಲವಾದ ಯಾವ ಕಾರಣವಿದ್ದರೂ ಪುರುಷತ್ವವು ಬರುವುದಿಲ್ಲ. ಆದ್ದರಿಂದ ತುಂಬುರುವು ತನ್ನ ಹಿಂದಿನ ಶರೀರದಲ್ಲಿ ಒಂದು ಅಂಶದಿಂದ ಇದ್ದನು.

**ಅತಃ ಶಿವವರೇಽಪ್ಯೇಷಾ ಜಜ್ಞೇ ಯೋಷೈವ ನಾನ್ಯಥಾ ।**
**ಪಶ್ಚಾಚ್ಚ ಪುಂತನುಂ ಸೈಷಾ ಪ್ರವಿವೇಶೈವ ಪುಂಯುತಾಮ್ ॥ ೧೧೧ ॥**

**ಪದಚ್ಛೇದ :- ಅತಃ, ಶಿವವರೇ, ಅಪಿ, ಏಷಾ, ಜಜ್ಞೇ, ಯೋಷಾ, ಏವ, ನ, ಅನ್ಯಥಾ, ಪಶ್ಚಾತ್, ಚ, ಪುಂತನುಂ, ಸಾ, ಏಷಾ, ಪ್ರವಿವೇಶ, ಏವ, ಪುಂಯುತಾಂ**

**ಅರ್ಥ :- ಅತಃ** ಆದ್ದರಿಂದಲೇ **ಶಿವವರೇ ಅಪಿ** ಗಂಡಾಗಿ ಹುಟ್ಟು ಎಂದು ಶಿವನ ವರವಿದ್ದರೂ **ಯೋಷಾ ಏವ** ಹೆಣ್ಣಾಗಿಯೇ **ಜಜ್ಞೇ** ಹುಟ್ಟಿದಳು. **ಅನ್ಯಥಾ ನ** ಪುರುಷ ಶರೀರದಿಂದ ಹುಟ್ಟಲಿಲ್ಲ **ಪಶ್ಚಾತ್ ಚ** ಆ ನಂತರವಾದರೂ **ಸಾ ಏಷಾ** ಅಂತಹ ಈ ಶಿಖಂಡಿನಿಯು **ಪುಂಯುತಾಂ** ಗಂಡಸಿನಿಂದ ಕೂಡಿದ **ತನುಂ ಏವ** ಶರೀರವನ್ನೇ **ಪ್ರವಿವೇಶ** ಪ್ರವೇಶಿಸಿದಳು.

**ತಾತ್ಪರ್ಯ :-** ಸ್ತ್ರೀಗೆ ಬಲವತ್ತರ ಕಾರಣವಿದ್ದರೂ ಪುರುಷದೇಹ ಬರುವುದಿಲ್ಲವಾದ್ದರಿಂದಲೇ ಶಿವನ ವರವಿದ್ದರೂ ಮೊದಲು ಸ್ತ್ರೀಶರೀರ ದಿಂದಲೇ ಹುಟ್ಟಿದಳು. ನಂತರವೂ ಪುರುಷನಿಂದ ಕೂಡಿದ ದೇಹವನ್ನೇ ಪಡೆದಳು. ಹೊರತು ಇವಳಿಗಾಗಿಯೇ ಒಂದು ಪುರುಷ ಶರೀರವಿರಲಿಲ್ಲ.

**ನಾಸ್ಯಾ ದೇಹಃ ಪುಂಸ್ತ್ವಮಾಪ ನ ಚ ಪುಂಸಾಽನಧಿಷ್ಠಿತೇ ।**
**ಪುಂದೇಹೇ ನ್ಯವಸತ್ ಸಾಽಥ ಗಂಧರ್ವೇಣ ತ್ವಧಿಷ್ಠಿತಮ್ ।**
**ಗಾಂಧರ್ವಂ ದೇಹಮಾವಿಶ್ಯ ಸ್ವೀಯಂ ಭವನಂ ಯಯೌ ॥**

ಪದಚ್ಛೇದ :- ನ, ಅಸ್ಯಾಃ, ದೇಹಃ, ಪುಂಸ್ತ್ವಂ, ಆಪ, ನ, ಚ, ಪುಂಸಾ, ಅನಧಿಷ್ಠಿತೇ, ಪುಂದೇಹೇ, ನ್ಯವಸತ್, ಸಾ, ಅಥ, ಗಂಧರ್ವೇಣ, ತು, ಅಧಿಷ್ಠಿತಂ, ಗಾಂಧರ್ವಂ, ದೇಹಂ, ಆವಿಶ್ಯ, ಸ್ವಕೀಯಂ, ಭವನಂ, ಯಯೌ.

**ಅರ್ಥ** :- **ಅಸ್ಯಾಃ** ಈ ಶಿಖಂಡಿನಿಯ **ದೇಹಃ ಚ** ಶರೀರವಾದರೂ **ಪುಂಸ್ತ್ವಂ** ಪುರುಷತ್ವವನ್ನು **ನ ಆಪ** ಹೊಂದಲಿಲ್ಲ. **ಪುಂಸಾ** ಪುರುಷನಿಂದ **ಅನಧಿಷ್ಠಿತೇ** ಆಶ್ರಿತವಾಗದ **ಪುಂದೇಹೇ** ಪುರುಷದೇಹದಲ್ಲಿ **ಸಾ** ಅವಳು **ನ ನ್ಯವಸತ್** ವಾಸಿಸಲಿಲ್ಲ. **ಅಥ** ಆನಂತರ **ಸಾ** ಆ ಶಿಖಂಡಿನಿಯು **ಗಂಧರ್ವೇಣ** ಗಂಧರ್ವನಿಂದ **ಅಧಿಷ್ಠಿತಂ ತು** ಆಶ್ರಿತವಾದ **ಗಾಂಧರ್ವಂ** ಗಂಧರ್ವನಿಗೆ ಸಂಬಂಧಿಸಿದ **ದೇಹಂ** ಶರೀರವನ್ನು **ಆವಿಶ್ಯ** ಪ್ರವೇಶಿಸಿ **ಸ್ವಕೀಯಂ** ತನ್ನ **ಭವನಂ** ಮನೆಗೆ **ಯಯೌ** ಹೋದಳು.

**ತಾತ್ಪರ್ಯ** :- ಗಂಧರ್ವನು ಪಡೆದ ಶಿಖಂಡಿನಿಯ ಶರೀರವು ಪುರುಷತ್ವವನ್ನು ಹೊಂದಲಿಲ್ಲ. ಪುರುಷನಿಂದ ಆಶ್ರಿತವಲ್ಲದ ಶರೀರವನ್ನು ಅವಳೂ ಪ್ರವೇಶಿಸಲಿಲ್ಲ. ಒಂದು ಅಂಶದಿಂದ ಗಂಧರ್ವನು ತನ್ನ ದೇಹದಲ್ಲೇ ಇದ್ದನಾದ್ದರಿಂದ ಅದು ಪುರುಷನಿಂದ ಆಶ್ರಿತವಾದದ್ದೇ ಆಗಿತ್ತು. ಅದರಲ್ಲೇ ಶಿಖಂಡಿನಿಯು ಪ್ರವೇಶಿಸಿದಳು. ಹೀಗೆ ಗಂಧರ್ವದೇಹವನ್ನು ಪಡೆದು ತನ್ನ ಮನೆಗೆ ಹೋದಳು.

**ತಸ್ಯಾಸ್ತದ್ದೇಹಸಾದೃಶ್ಯಂ ಗಂಧರ್ವಸ್ಯ ಪ್ರಸಾದತಃ ।**
**ಪ್ರಾಪ ಗಂಧರ್ವದೇಹೋऽಪಿ ತಯಾ ಪಶ್ಚಾದಧಿಷ್ಠಿತಃ ॥ ೧೧೨॥**

ಪದಚ್ಛೇದ :- ತಸ್ಯಾಃ, ತದ್ದೇಹಸಾದೃಶ್ಯಂ, ಗಂಧರ್ವಸ್ಯ, ಪ್ರಸಾದತಃ, ಪ್ರಾಪ, ಗಂಧರ್ವದೇಹಃ, ಅಪಿ, ತಯಾ, ಪಶ್ಚಾತ್, ಅಧಿಷ್ಠಿತಃ.

**ಅರ್ಥ** :- **ಗಂಧರ್ವಸ್ಯ** ಗಂಧರ್ವನ **ಪ್ರಸಾದತಃ** ಅನುಗ್ರಹದಿಂದ **ಗಂಧರ್ವದೇಹಃ ಅಪಿ** ಗಂಧರ್ವನ ಶರೀರವೂ ಕೂಡ **ತಸ್ಯಾಃ** ಆ ಶಿಖಂಡಿನಿಯ **ತದ್ದೇಹಸಾದೃಶ್ಯಂ** ಸ್ತ್ರೀ ಶರೀರದ ಸಾಮ್ಯವನ್ನು **ಪ್ರಾಪ** ಹೊಂದಿತು. **ಪಶ್ಚಾತ್** ಅನಂತರದಲ್ಲಿ **ತಯಾ** ಆ ಶಿಖಂಡಿನಿಯಿಂದ **ಅಧಿಷ್ಠಿತಃ** (ಗಂಧರ್ವನ ದೇಹವು) ಪ್ರವೇಶಿಸಲ್ಪಟ್ಟಿತು.

**ತಾತ್ಪರ್ಯ** :- ಗಂಧರ್ವನ ಶರೀರವು ಗಂಧರ್ವನ ಅನುಗ್ರಹದಿಂದಲೇ ಶಿಖಂಡಿನಿಯ ಸ್ತ್ರೀಶರೀರದ ಹೋಲಿಕೆಯನ್ನು ಪಡೆಯಿತು. ಅನಂತರವೇ ಶಿಖಂಡಿನಿಯು ಗಂಧರ್ವನ ದೇಹವನ್ನು ಪ್ರವೇಶಿಸಿದಳು.

**ಶ್ವೋ ದೇಹಿ ಮಮ ದೇಹಂ ಮೇ ಸ್ವಂ ಚ ದೇಹಂ ಸಮಾವಿಶ ।**
**ಇತ್ಯುಕ್ತ್ವಾ ಸ ತು ಗಂಧರ್ವಃ ಕನ್ಯಾದೇಹಂ ಸಮಾಸ್ಥಿತಃ ॥ ೧೧೩॥**

ಪದಚ್ಛೇದ :- ಶ್ವಃ, ದೇಹಿ, ಮಮ, ದೇಹಂ, ಮೇ, ಸ್ವಂ, ಚ, ದೇಹಂ, ಸಮಾವಿಶ, ಇತಿ, ಉಕ್ತ್ವಾ, ಸಃ, ತು, ಗಂಧರ್ವಃ, ಕನ್ಯಾದೇಹಂ, ಸಮಾಸ್ಥಿತಃ.

**ಅರ್ಥ** :- **ಶ್ವಃ** ನಾಳೆ **ಮಮ** ನನ್ನ **ದೇಹಂ** ಶರೀರವನ್ನು **ಮೇ** ನನಗೆ **ದೇಹಿ** ಕೊಡು **ಸ್ವಂ** ತನ್ನ (ನಿನ್ನ) **ದೇಹಂ ಚ** ದೇಹವನ್ನಾದರೂ **ಸಮಾವಿಶ** ಪ್ರವೇಶಿಸು **ಇತಿ** ಎಂದು **ಉಕ್ತ್ವಾ** ಹೇಳಿ **ಸಃ** ಆ ತುಂಬುರು ಎಂಬ ಗಂಧರ್ವನು **ಕನ್ಯಾದೇಹಂ** ಸ್ತ್ರೀಶರೀರವನ್ನು **ಸಮಾಸ್ಥಿತಃ** ಸ್ವೀಕರಿಸಿದನು.

**ತಾತ್ಪರ್ಯ** :- 'ನಾಳೆ ನನ್ನ ದೇಹವನ್ನು ನನಗೆ ಕೊಡು, ನಿನ್ನ ದೇಹವನ್ನು ನೀನು ಪ್ರವೇಶ ಮಾಡು' ಎಂದು ಗಂಧರ್ವನು ಶಿಖಂಡಿನಿಗೆ ಹೇಳಿ ತಾನು ಅವಳ ದೇಹವನ್ನು ಪ್ರವೇಶಿಸಿದನು.

**ಉವಾಸೈವ ವನೇ ತಸ್ಮಿನ್ ಧನದಸ್ತತ್ರ ಚಾಗಮತ್ ।**
**ಅಪ್ರತ್ಯುತ್ಥಾಯಿನಂ ತಂತುಲೀಯಮಾನಂ ವಿಲಜ್ಜಯಾ ॥ ೧೧೪॥**

**ಶಶಾಪ ಧನದೋ ದೇವಶ್ಚಿರಮಿತ್ಥಂ ಭವೇತಿ ತಮ್ ॥ ೧೧೫॥**

ಪದಚ್ಛೇದ :- ಉವಾಸ, ಏವ, ವನೇ, ತಸ್ಮಿನ್, ಧನದಃ, ತತ್ರ, ಚ, ಅಗಮತ್. ಅಪ್ರತ್ಯುತ್ಥಾಯಿನಂ, ತಂತುಲೀಯಮಾನಂ, ವಿಲಜ್ಜಯಾ, ಶಶಾಪ, ಧನದಃ, ದೇವಃ, ಚಿರಂ, ಇತ್ಥಂ, ಭವ, ಇತಿ, ತಮ್.

**ಅರ್ಥ** :- **ತಸ್ಮಿನ್** ಆ ಯಾವ **ವನೇ ಏವ** ಕಾಡಿನಲ್ಲಿಯೇ **ಉವಾಸ** ವಾಸಮಾಡಿದನು. **ತತ್ರ ಚ** ಅಲ್ಲಿಗೆಯಾದರೂ **ಧನದಃ** ಕುಬೇರನು **ಅಗಮತ್** ಬಂದನು. **ಅಪ್ರತ್ಯುತ್ಥಾಯಿನಂ** ಎದ್ದು ನಿಂತು ಇದಿರುಗೊಳ್ಳದಿರುವ **ವಿಲಜ್ಜಯಾ** ನಾಚಿಕೆಯಿಂದ **ತಂತುಲೀಯಮಾನಂ** ಪೊದೆಗಳಲ್ಲಿ ಅಡಗಿಕೊಳ್ಳುತ್ತಿರುವ **ತಂ** ಆ ತುಂಬುರುವನ್ನು **ದೇವಃ** ಸ್ವಾಮಿಯಾದ **ಧನದಃ** ಕುಬೇರನು

**ಚಿರಂ** ಬಹಳಕಾಲ **ಇತ್ಥಂ** ಇದೇ ರೀತಿ **ಭವ** ಆಗು **ಇತಿ** ಎಂದು **ಶಶಾಪ** ಶಪಿಸಿದನು.

**ತಾತ್ಪರ್ಯ** :- ಶಿಖಂಡಿನಿಯು ಹೋದ ಬಳಿಕ ತುಂಬುರು ಅದೇ ಕಾಡಿನಲ್ಲಿಯೇ ವಾಸ ಮಾಡುತ್ತಿದ್ದ. ಅಲ್ಲಿಗೆ ಕುಬೇರನು ಬಂದನು. ತನ್ನ ಒಡೆಯನಾದ ಕುಬೇರನನ್ನು ಕಂಡ ತುಂಬುರು ಎದ್ದು ನಿಂತು ಬರಮಾಡಿ ಕೊಳ್ಳದೇ ನಾಚಿಕೆಯಿಂದ ಪೊದೆಗಳಲ್ಲಿ ಅಡಗಿ ಕುಳಿತನು. ಅವನಿಗೆ ಕುಬೇರನು 'ನೀನು ಬಹಳ ಕಾಲ ಸ್ತ್ರೀಯಾಗಿಯೇ ಇರು' ಎಂದು ಶಾಪವನ್ನು ಕೊಟ್ಟನು.

**ಯದಾ ಯುದ್ಧೇ ಮೃತಿಂ ಯಾತಿ ಸಾ ಕನ್ಯಾ ಪುಂತನುಸ್ಥಿತಾ ।**
**ತದಾ ಪುಂಸ್ತ್ವಂ ಪುನರ್ಯಾಸಿ ಚಪಲತ್ವಾದಿತೀರಿತಃ ॥ ೧೧೬ ॥**

**ಪದಚ್ಛೇದ** :- ಯದಾ, ಯುದ್ಧೇ, ಮೃತಿಂ, ಯಾತಿ, ಸಾ, ಕನ್ಯಾ, ಪುಂತನುಸ್ಥಿತಾ, ತದಾ, ಪುಂಸ್ತ್ವಂ, ಪುನಃ, ಯಾಸಿ, ಚಪಲತ್ವಾತ್, ಇತಿ, ಈರಿತಃ.

**ಅರ್ಥ** :- **ಯದಾ** ಯಾವಾಗ **ಪುಂತನುಸ್ಥಿತಾ** ಪುರುಷದೇಹದಲ್ಲಿರುವ **ಸಾ** ಆ **ಕನ್ಯಾ** ಹುಡುಗಿಯು **ಯುದ್ಧೇ** ಯುದ್ಧದಲ್ಲಿ **ಮೃತಿಂ** ಮರಣವನ್ನು **ಯಾತಿ** ಹೊಂದುತ್ತಾಳೋ **ತದಾ** ಆಗ **ಚಪಲತ್ವಾತ್** ಚಾಪಲ್ಯದ ಫಲವಾಗಿ (ಅಯೋಗ್ಯಕೆಲಸದ ಫಲವಾಗಿ) **ಪುನಃ** ಮತ್ತೆ **ಪುಂಸ್ತ್ವಂ** ಪುರುಷದೇಹವನ್ನು **ಯಾಸಿ** ಹೊಂದುವಿ **ಇತಿ** ಎಂದು **ಈರಿತಃ** ಹೇಳಲ್ಪಟ್ಟನು.

**ತಾತ್ಪರ್ಯ** :- ಕುಬೇರನು ತುಂಬುರುವಿಗೆ ಹೇಳಿದನು– 'ನಿನ್ನ ಪುರುಷದೇಹದಲ್ಲಿರುವ ಆ ಹುಡುಗಿಯು ಯಾವಾಗ ಯುದ್ಧದಲ್ಲಿ ಮರಣ ವನ್ನು ಪಡೆಯುತ್ತಾಳೋ ಆವಾಗ ನೀನು ಮತ್ತೆ ಪುರುಷನ ದೇಹವನ್ನು ಪಡೆಯುವೆ. ನಿನ್ನ ಪುರುಷದೇಹವನ್ನು ಅವಳಿಗೆ ಕೊಟ್ಟ ಅಯೋಗ್ಯ ಕೆಲಸದ ಫಲವಾಗಿ ಅವಳ ಮರಣ ಪರ್ಯಂತ ಕಾಯಲೇ ಬೇಕು' ಎಂದು.

**ತಥಾಽವಸತ್ ಸ ಗಂಧರ್ವಃ ಕನ್ಯಾ ಪಿತ್ರೋರಶೇಷತಃ ।**
**ಕಥಯಾಮಾಸಾನುಭೂತಂ ತೌ ಭೃಶಂ ಮುದಮಾಪತುಃ ॥ ೧೧೭ ॥**

**ಪದಚ್ಛೇದ** :- ತಥಾ, ಅವಸತ್, ಸಃ, ಗಂಧರ್ವಃ, ಕನ್ಯಾ, ಪಿತ್ರೋಃ, ಅಶೇಷತಃ, ಕಥಯಾಮಾಸ, ಅನುಭೂತಂ, ತೌ, ಭೃಶಂ, ಮುದಂ, ಆಪತುಃ.

**ಅರ್ಥ** :- **ಸಃ** ಆ **ಗಂಧರ್ವಃ** ಗಂಧರ್ವನು **ತಥಾ** ಹಾಗೆಯೇ (ಆ ಸ್ತ್ರೀದೇಹದಲ್ಲಿಯೇ) **ಅವಸತ್** ವಾಸಮಾಡಿದನು. **ಕನ್ಯಾ** ಶಿಖಂಡಿನಿಯು **ಅನುಭೂತಂ** ಅನುಭವಿಸಲ್ಪಟ್ಟಿದ್ದನ್ನು **ಅಶೇಷತಃ** ಸಂಪೂರ್ಣವಾಗಿ **ಪಿತ್ರೋಃ** ತಂದೆ-ತಾಯಂದಿರಿಗೆ **ಕಥಯಾಮಾಸ** ಹೇಳಿದಳು. **ತೌ ತು** ಆ ತಂದೆ ತಾಯಂದಿರಾದರೂ **ಭೃಶಂ** ಬಹಳವಾಗಿ **ಮುದಂ** ಸಂತೋಷವನ್ನು **ಆಪತುಃ** ಹೊಂದಿದರು.

**ತಾತ್ಪರ್ಯ** :- ಅನಂತರ ತುಂಬುರು ಆ ಸ್ತ್ರೀಶರೀರದಲ್ಲಿಯೇ ವಾಸಮಾಡಿದನು. ಶಿಖಂಡಿನಿಯು ನಡೆದದ್ದೆಲ್ಲವನ್ನೂ ತಂದೆ-ತಾಯಿಗಳಿಗೆ ಹೇಳಿದಳು. ಅವರು ಬಹಳ ಸಂತೋಷಪಟ್ಟರು.

**ಪರೀಕ್ಷ್ಯ ತಾಮುಪಾಯೈಸ್ತು ಶ್ವಶುರೋ ಲಜ್ಜಿತೋ ಯಯೌ ।**
**ಶ್ವೋ ಭೂತೇ ಸಾ ತು ಗಂಧರ್ವಂ ಪ್ರಾಪ್ಯ ತದ್ವಚನಾತ್ ಪುನಃ ॥ ೧೧೮ ॥**

**ಯಯೌ ತೇನೈವ ದೇಹೇನ ಪುಂಸ್ತ್ವಮೇವ ಸಮಾಶ್ರಿತಾ ।**
**ಸ ಶಿಖಂಡೀ ನಾಮತೋಽಭೂದಸ್ತ್ರಶಸ್ತ್ರಪ್ರತಾಪವಾನ್ ॥ ೧೧೯ ॥**

ಪದಚ್ಛೇದ :- ಪರೀಕ್ಷ್ಯ, ತಾಂ, ಉಪಾಯೈಃ, ತು, ಶ್ವಶುರಃ, ಲಜ್ಜಿತಃ, ಯಯೌ, ಶ್ವೋಭೂತೇ, ಸಾ, ತು, ಗಂಧರ್ವಂ, ಪ್ರಾಪ್ಯ, ತದ್ವಚನಾತ್, ಪುನಃ,

ಯಯೌ, ತೇನ, ಏವ, ದೇಹೇನ, ಪುಂಸ್ತ್ವಂ, ಏವ, ಸಮಾಶ್ರಿತಾ. ಸಃ, ಶಿಖಂಡೀ, ನಾಮತಃ, ಅಭೂತ್, ಅಸ್ತ್ರಶಸ್ತ್ರಪ್ರತಾಪವಾನ್.

**ಅರ್ಥ** :- **ಶ್ವಶುರಃ ತು** ಮಾವನಾದರೂ **ತಾಂ** ಆ ಶಿಖಂಡಿನಿಯನ್ನು **ಉಪಾಯೈಃ** ಉಪಾಯಗಳಿಂದ **ಪರೀಕ್ಷ್ಯ** ಪರೀಕ್ಷಿಸಿ **ಲಜ್ಜಿತಃ** ನಾಚಿಕೆಗೊಂಡವನಾಗಿ **ಯಯೌ** ಹೊರಟು ಹೋದನು **ಸಾ ತು** ಆ ಶಿಖಂಡಿನಿಯಾದರೂ **ಶ್ವೋಭೂತೇ** ಮಾರನೇ ದಿನದಲ್ಲಿ **ಗಂಧರ್ವಂ** ಗಂಧರ್ವನನ್ನು **ಪ್ರಾಪ್ಯ** ಹೊಂದಿ **ತದ್ವಚನಾತ್** ಅವನ ಮಾತಿನಂತೆ **ತೇನ** ಅದೇ **ದೇಹೇನ ಏವ** ಶರೀರದಿಂದಲೇ **ಪುಂಸ್ತ್ವಂ** ಪುರುಷತ್ವವನ್ನು **ಸಮಾಶ್ರಿತಾ ಏವ** ಹೊಂದಿದವಳಾಗಿಯೇ **ಪುನಃ** ಮತ್ತೆ **ಯಯೌ** ಮನೆಗೆ ಹೋದಳು. **ಸಃ** ಅವನು **ಅಸ್ತ್ರಶಸ್ತ್ರಪ್ರತಾಪವಾನ್** ಅಸ್ತ್ರ ಶಸ್ತ್ರಗಳ ಪರಾಕ್ರಮವುಳ್ಳವನಾಗಿ **ನಾಮತಃ** ಹೆಸರಿನಿಂದ **ಶಿಖಂಡೀ ಇತಿ** ಶಿಖಂಡಿ ಎಂದು **ಅಭೂತ್** ಪ್ರಸಿದ್ಧನಾದನು.

**ತಾತ್ಪರ್ಯ** :- ಶಿಖಂಡಿನಿಯ ಮಾವನು ಶಿಖಂಡಿನಿಯನ್ನು ಅನೇಕ ಉಪಾಯಗಳಿಂದ ಪರೀಕ್ಷೆ ಮಾಡಿ ನಾಚಿಕೆಗೊಂಡು ಹೊರಟು ಹೋದನು. ಮಾರನೆಯ ದಿನ ಶಿಖಂಡಿನಿಯು ಗಂಧರ್ವನ ಬಳಿಗೆ ಬಂದು ಅವನ ಮಾತಿನಂತೆ ಅದೇ ದೇಹದಿಂದಲೇ ಪುರುಷತ್ವವನ್ನು ಹೊಂದಿಯೇ ಮನೆಗೆ ಬಂದಳು. ಅವನೇ ಅಸ್ತ್ರ ಶಸ್ತ್ರಗಳನ್ನು ಬಲ್ಲವನಾಗಿ ಪರಾಕ್ರಮಿಯಾಗಿ ಶಿಖಂಡಿ ಎಂಬ ಹೆಸರಿನಿಂದ ಪ್ರಸಿದ್ಧನಾದನು.

**ವಿಚಿತ್ರವೀರ್ಯಃ ಪ್ರಮದಾದ್ವಯಂ ತತ್**
**ಸಂಪ್ರಾಪ್ಯ ರೇಮೇಽಬ್ದಗಣಾನ್ ಸುಸಕ್ತಃ ।**
**ತತ್ಯಾಜ ದೇಹಂ ಸ ಚ ಯಕ್ಷ್ಮಣಾರ್ದಿತಃ**
**ತತೋಽಸ್ಯ ಮಾತಾಽಸ್ಮರದಾಶು ಕೃಷ್ಣಮ್ ॥ ೧೨೦ ॥**

**ಪದಚ್ಛೇದ** :- **ವಿಚಿತ್ರವೀರ್ಯಃ, ಪ್ರಮದಾದ್ವಯಂ, ತತ್, ಸಂಪ್ರಾಪ್ಯ, ರೇಮೇ, ಅಬ್ದಗಣಾನ್, ಸುಸಕ್ತಃ, ತತ್ಯಾಜ, ದೇಹಂ, ಸಃ, ಚ, ಯಕ್ಷ್ಮಣಾ, ಅರ್ದಿತಃ, ತತಃ, ಅಸ್ಯ, ಮಾತಾ, ಅಸ್ಮರತ್, ಆಶು, ಕೃಷ್ಣಮ್.**

**ಅರ್ಥ** :- **ವಿಚಿತ್ರವೀರ್ಯಃ** ವಿಚಿತ್ರವೀರ್ಯನು **ತತ್** ಆ ಯಾವ **ಪ್ರಮದಾದ್ವಯಂ** ಅಂಬಿಕಾ, ಅಂಬಾಲಿಕಾ ಎಂಬ ಇಬ್ಬರು ಹೆಂಡಂದಿರನ್ನು **ಸಂಪ್ರಾಪ್ಯ** ಹೊಂದಿ **ಸುಸಕ್ತಃ** ತುಂಬಾ ಆಸಕ್ತನಾಗಿ **ಅಬ್ದಗಣಾನ್** ಅನೇಕ ವರ್ಷಗಳವರೆಗೆ **ರೇಮೇ** ಕ್ರೀಡಿಸಿದನು. **ಯಕ್ಷ್ಮಣಾ** ಕ್ಷಯರೋಗದಿಂದ **ಅರ್ದಿತಃ** ಪೀಡೆಗೊಳಗಾದ **ಸಃ ಚ** ಆ ವಿಚಿತ್ರವೀರ್ಯನಾದರೂ **ದೇಹಂ** ಶರೀರವನ್ನು **ತತ್ಯಾಜ** ಬಿಟ್ಟನು. **ತತಃ** ಅನಂತರ **ಅಸ್ಯ** ವಿಚಿತ್ರವೀರ್ಯನ **ಮಾತಾ** ತಾಯಿಯಾದ ಸತ್ಯವತಿಯು **ಆಶು** ಕೂಡಲೇ **ಕೃಷ್ಣಂ** ವೇದವ್ಯಾಸರನ್ನು **ಅಸ್ಮರತ್** ಸ್ಮರಿಸಿದಳು.

**ತಾತ್ಪರ್ಯ** :- ವಿಚಿತ್ರವೀರ್ಯನು ಅಂಬಿಕೆ. ಅಂಬಾಲಿಕೆ ಎಂಬ ಇಬ್ಬರು ಹೆಂಡಂದಿರನ್ನು ಹೊಂದಿ ಅನೇಕ ವರ್ಷಗಳ ವರೆಗೆ ತುಂಬಾ ಆಸಕ್ತನಾಗಿ ಅವರೊಂದಿಗೆ ರಮಿಸಿದನು. ಕ್ಷಯರೋಗದಿಂದ ಪೀಡೆಗೊಳಗಾಗಿ ದೇಹವನ್ನು ಬಿಟ್ಟನು. ಅನಂತರ ವಿಚಿತ್ರವೀರ್ಯನ ತಾಯಿಯಾದ ಸತ್ಯವತಿಯು ವೇದವ್ಯಾಸರನ್ನು ಸ್ಮರಿಸಿದಳು.

ಆವಿರ್ಬಭೂವಾಽಶು ಜಗಜ್ಜನಿತ್ರೋ
ಜನಾರ್ದನೋ ಜನ್ಮಜರಾಭಯಾಪಹಃ ।
ಸಮಸ್ತವಿಜ್ಞಾನತನುಃ ಸುಖಾರ್ಣವಃ
ಸಂಪೂಜಯಾಮಾಸ ಚ ತಂ ಜನಿತ್ರೀ ॥ ೧೨೧ ॥

ಪದಚ್ಛೇದ :- ಆವಿರ್ಬಭೂವ, ಆಶು, ಜಗಜ್ಜನಿತ್ರಃ, ಜನಾರ್ದನಃ, ಜನ್ಮ ಜರಾಭಯಾಪಹಃ, ಸಮಸ್ತವಿಜ್ಞಾನತನುಃ, ಸುಖಾರ್ಣವಃ, ಸಂಪೂಜಯಾಮಾಸ, ಚ, ತಂ, ಜನಿತ್ರೀ.

ಅರ್ಥ :- ಜಗಜ್ಜನಿತ್ರಃ ಪ್ರಪಂಚಕ್ಕೆ ಜನಕನಾದ ಜನ್ಮಜರಾಭಯಾಪಹಃ ಹುಟ್ಟು ಮುಪ್ಪು ಭಯಗಳನ್ನು ಕಳೆಯುವ ಸಮಸ್ತವಿಜ್ಞಾನತನುಃ ಸಂಪೂರ್ಣವಾದ ವಿಶೇಷಜ್ಞಾನವೇ ದೇಹವಾಗಿ ಉಳ್ಳ ಸುಖಾರ್ಣವಃ ಆನಂದದಿಂದ ಸಮುದ್ರದಂತಿರುವ ಜನಾರ್ದನಃ ವೇದವ್ಯಾಸದೇವರು ಆಶು ಕೂಡಲೇ ಆವಿರ್ಬಭೂವ ಪ್ರಕಟರಾದರು ಚ ಮತ್ತು ತಂ ಆ ವೇದವ್ಯಾಸರನ್ನು ಜನಿತ್ರೀ ತಾಯಿಯಾದ ಸತ್ಯವತಿಯು ಸಂಪೂಜಯಾಮಾಸ ಚೆನ್ನಾಗಿ ಉಪಚರಿಸಿದಳು.

ತಾತ್ಪರ್ಯ :- ಸತ್ಯವತಿಯು ಪ್ರಾರ್ಥಿಸಿದ ಕೂಡಲೇ ಪ್ರಪಂಚಕ್ಕೆ ಜನಕನಾದ, ಹುಟ್ಟು ಮುಪ್ಪು ಭಯಗಳನ್ನು ಕಳೆಯುವ, ಸಂಪೂರ್ಣವಿಶೇಷ ಜ್ಞಾನವೇ ದೇಹವಾಗಿವುಳ್ಳ, ಆನಂದದಿಂದ ಸಮುದ್ರದಂತಿರುವ ವೇದವ್ಯಾಸರು ಪ್ರಕಟರಾದರು. ತಾಯಿ ಆ ವೇದವ್ಯಾಸರನ್ನು ಚೆನ್ನಾಗಿ ಉಪಚಾರ ಮಾಡಿ ಪೂಜಿಸಿದಳು.

ತಂ ಭೀಷ್ಮಪೂರ್ವೈಃ ಪರಮಾದರಾರ್ಚಿತಂ
ಸ್ವಭಿಷ್ಟುತಂ ಚಾವದದಸ್ಯ ಮಾತಾ ।
ಪುತ್ರೌ ಮೃತೌ ಮೇ ನ ತು ರಾಜ್ಯಮೈಚ್ಛದ್
ಭೀಷ್ಮೋ ಮಯಾ ನಿತರಾಮರ್ಥಿತೋಽಪಿ ॥ ೧೨೨ ॥

ಪದಚ್ಛೇದ :- ತಂ, ಭೀಷ್ಮಪೂರ್ವೈಃ, ಪರಮಾದರಾರ್ಚಿತಂ, ಸ್ವಭಿಷ್ಟುತಂ, ಚ, ಅವದತ್, ಅಸ್ಯ, ಮಾತಾ, ಪುತ್ರೌ, ಮೃತೌ, ಮೇ, ನ, ತು, ರಾಜ್ಯಂ, ಐಚ್ಛತ್, ಭೀಷ್ಮೋ, ಮಯಾ, ನಿತರಾಂ, ಅರ್ಥಿತಃ, ಅಪಿ.

**ಅರ್ಥ** :- **ಭೀಷ್ಮಪೂರ್ವೈಃ** ಭೀಷ್ಮನೇ ಮೊದಲಾದವರಿಂದ **ಪರಮಾದರಾರ್ಚಿತಂ** ಬಹಳ ಭಕ್ತಿಯಿಂದ ಪೂಜಿಸಲ್ಪಟ್ಟ **ಚ** ಮತ್ತು **ಸ್ವಭಿಷ್ಟುತಂ** ಚೆನ್ನಾಗಿ ಸ್ತೋತ್ರಮಾಡಲ್ಪಟ್ಟ **ತಂ** ಆ ವೇದವ್ಯಾಸರನ್ನು **ಅಸ್ಯ** ಈ ವೇದವ್ಯಾಸರ **ಮಾತಾ** ತಾಯಿಯಾದ ಸತ್ಯವತಿಯು **ಅವದತ್** ಹೇಳಿದಳು. **ಪುತ್ರೌ** ಇಬ್ಬರು ಮಕ್ಕಳು **ಮೃತೌ** ಮೃತರಾದರು **ಭೀಷ್ಮಃ ತು** ಭೀಷ್ಮನಾದರೂ **ಮಯಾ** ನನ್ನಿಂದ **ನಿತರಾಂ** ಬಹಳವಾಗಿ **ಅರ್ಥಿತಃ ಅಪಿ** ಪ್ರಾರ್ಥಿಸಲ್ಪಟ್ಟವನಾದರೂ **ರಾಜ್ಯಂ** ರಾಜ್ಯವನ್ನು **ನ ಐಚ್ಛತ್** ಇಚ್ಛೆಸಲಿಲ್ಲ.

**ತಾತ್ಪರ್ಯ** :- ಭೀಷ್ಮಮೊದಲಾದವರು ವೇದವ್ಯಾಸರನ್ನು ಬಹಳ ಭಕ್ತಿಯಿಂದ ಪೂಜಿಸಿದರು. ಮತ್ತು ಚೆನ್ನಾಗಿ ಸ್ತೋತ್ರ ಮಾಡಿದರು. ವ್ಯಾಸರ ತಾಯಿ ಸತ್ಯವತಿಯು ವ್ಯಾಸರಿಗೆ ಹೇಳಿದಳು 'ನನ್ನ ಇಬ್ಬರು ಮಕ್ಕಳು ಮೃತರಾದರು. ಭೀಷ್ಮನನ್ನು ಎಷ್ಟು ಬೇಡಿಕೊಂಡರೂ ಅವನು ಈ ರಾಜ್ಯವನ್ನು ಬಯಸುತ್ತಿಲ್ಲ.'

**ಕ್ಷೇತ್ರೇ ತತೋ ಭ್ರಾತುರಪತ್ಯಮುತ್ತಮಮ್**
**ಉತ್ಪಾದಯಾಸ್ಮತ್ಪರಮಾದರಾರ್ಚಿತಃ ।**
**ಇತೀರಿತಃ ಪ್ರಣತಶ್ಚಾಪ್ಯಭಿಷ್ಟುತೋ**
**ಭೀಷ್ಮಾದಿಭಿಶ್ಚಾಹ ಜಗದ್ಗುರುರ್ವಚಃ ॥ ೧೨೩ ॥**

ಪದಚ್ಛೇದ :- ಕ್ಷೇತ್ರೇ, ತತಃ, ಭ್ರಾತುಃ, ಅಪತ್ಯಂ, ಉತ್ತಮಂ, ಉತ್ಪಾದಯ, ಅಸ್ಮತ್ಪರಮಾದರಾರ್ಚಿತಃ, ಇತಿ, ಈರಿತಃ, ಪ್ರಣತಃ, ಚ, ಅಭಿಷ್ಟುತಃ, ಭೀಷ್ಮಾದಿಭಿಃ, ಚ, ಆಹ, ಜಗದ್ಗುರುಃ, ವಚಃ.

**ಅರ್ಥ** :- **ಅಸ್ಮತ್ಪರಮಾದರಾರ್ಚಿತಃ** ನಮ್ಮಿಂದ ಬಹಳ ಭಕ್ತಿಯಿಂದ ಬೇಡಲ್ಪಟ್ಟ ನೀನು **ತವ** ನಿನ್ನ **ಭ್ರಾತುಃ** ಸಹೋದರನಾದ ವಿಚಿತ್ರವೀರ್ಯನ **ಕ್ಷೇತ್ರೇ** ಹೆಂಡತಿಯಲ್ಲಿ **ಉತ್ತಮಂ** ಉತ್ತಮವಾದ **ಅಪತ್ಯಂ** ಮಗುವನ್ನು **ಉತ್ಪಾದಯ** ಹುಟ್ಟಿಸು. **ಇತಿ** ಈ ರೀತಿಯಾಗಿ **ಈರಿತಃ** ಹೇಳಲ್ಪಟ್ಟ **ಚ** ಮತ್ತು **ಭೀಷ್ಮಾದಿಭಿಃ** ಭೀಷ್ಮನೇ ಮೊದಲಾದವರಿಂದ **ಪ್ರಣತಃ** ನಮಸ್ಕರಿಸಲ್ಪಟ್ಟ **ಅಭಿಷ್ಟುತಃ ಅಪಿ** ಸ್ತೋತ್ರಮಾಡಲ್ಪಟ್ಟವರೂ ಆದ **ಜಗದ್ಗುರುಃ** ಪ್ರಪಂಚಕ್ಕೆ ಗುರುಗಳಾದ ವೇದವ್ಯಾಸರು **ವಚಃ** ಮಾತನ್ನು **ಆಹ** ಹೇಳಿದರು.

ತಾತ್ಪರ್ಯ :- 'ನಾವು ನಿನ್ನನ್ನು ಬಹಳ ಭಕ್ತಿಯಿಂದ ಬೇಡಿಕೊಳ್ಳುತ್ತಿದ್ದೇವೆ. ನೀನು ನಿನ್ನ ಸಹೋದರನಾದ ವಿಚಿತ್ರವೀರ್ಯನ ಹೆಂಡತಿಯಲ್ಲಿ ಉತ್ತಮವಾದ ಮಗುವನ್ನು ಹುಟ್ಟಿಸು' ಎಂದು ಸತ್ಯವತಿಯು ಹೇಳಿದಳು. ಭೀಷ್ಮಾದಿಗಳು ನಮಸ್ಕಾರವನ್ನು ಮಾಡಿ ಸ್ತೋತ್ರವನ್ನೂ ಮಾಡಿದರು. ಆಗ ಪ್ರಪಂಚಕ್ಕೇ ಗುರುವೆನಿಸಿದ ವ್ಯಾಸರು ಈ ಮಾತನ್ನು ಹೇಳಿದರು.

**ಋತೇ ರಮಾಂ ಜಾತು ಮಮಾಂಗಸಂಗ-**
**ಯೋಗ್ಯಾಂಗನಾ ನೈವ ಸುರಾಲಯೇಽಪಿ ।**
**ತಥಾಪಿ ತೇ ವಾಕ್ಯಮಹಂ ಕರಿಷ್ಯೇ**
**ಸಾಂವತ್ಸರಂ ಸಾ ಚರತು ವ್ರತಂ ಮೇ ॥ ೧೨೪ ॥**

ಪದಚ್ಛೇದ :- ಋತೇ, ರಮಾಂ, ಜಾತು, ಮಮ, ಅಂಗಸಂಗಯೋಗ್ಯಾಂಗನಾ, ನ, ಏವ, ಸುರಾಲಯೇ, ಅಪಿ, ತಥಾ, ಅಪಿ, ತೇ, ವಾಕ್ಯಂ, ಅಹಂ, ಕರಿಷ್ಯೇ, ಸಾಂವತ್ಸರಂ, ಸಾ, ಚರತು, ವ್ರತಂ, ಮೇ.

ಅರ್ಥ :- ರಮಾಂ ಲಕ್ಷ್ಮೀದೇವಿಯನ್ನು **ಋತೇ** ಹೊರತಾಗಿ **ಜಾತು** ಯಾವಾಗಲೂ **ಮಮ** ನನ್ನ **ಅಂಗಸಂಗಯೋಗ್ಯಾಂಗನಾ** ದೇಹದ ಸಂಪರ್ಕವನ್ನು ಹೊಂದಲು ಯೋಗ್ಯಳಾದ ಸ್ತ್ರೀಯು **ಸುರಾಲಯೇ ಅಪಿ** ದೇವಲೋಕದಲ್ಲಿಯೂ **ನ ಏವ** ಇಲ್ಲವೇ ಇಲ್ಲ. **ತಥಾ ಅಪಿ** ಹಾಗಿದ್ದರೂ **ಅಹಂ** ನಾನು **ತವ** ನಿನ್ನ **ವಾಕ್ಯಂ** ಮಾತನ್ನು **ಕರಿಷ್ಯೇ** ಮಾಡುತ್ತೇನೆ. **ಸಾ** ಆ ವಿಚಿತ್ರವೀರ್ಯನ ಹೆಂಡತಿಯು **ಮೇ** ನನಗೆ ಸಂಬಂಧಿಸಿದ **ಸಾಂವತ್ಸರಂ** ಒಂದು ವರ್ಷದ ವರೆಗಿನ **ವ್ರತಂ** ವ್ರತವನ್ನು **ಚರತು** ಮಾಡಲಿ.

ತಾತ್ಪರ್ಯ :- ಲಕ್ಷ್ಮೀದೇವಿಯನ್ನು ಬಿಟ್ಟೂ ನನ್ನ ದೇಹದ ಸಂಪರ್ಕವನ್ನು ಪಡೆಯಲು ಅರ್ಹಳಾದ ಸ್ತ್ರೀ ದೇವಲೋಕದಲ್ಲಿಯೇ ಇಲ್ಲ. ಆದರೂ ನಾನು ನಿನ್ನ ಮಾತನ್ನು ನಡೆಸುತ್ತೇನೆ. ಲಕ್ಷ್ಮೀದೇವಿಯ ಆವೇಶವನ್ನು ಪಡೆಯಲು ಒಂದು ವರ್ಷದ ವರೆಗೆ ವೈಷ್ಣವ ವ್ರತವನ್ನು ಅವಳು ಮಾಡಲಿ.

**ಸಾ ಪೂತದೇಹಾಽಥ ಚ ವೈಷ್ಣವವ್ರತಾನ್ತತಃ**
**ಸಮಾಪ್ನೋತು ಸುತಂ ವರಿಷ್ಠಮ್ ।**
**ಇತೀರಿತೇ ರಾಷ್ಟ್ರಮುಪೈತಿ ನಾಶಮಿತಿ**
**ಬ್ರುವಂತೀಂ ಪುನರಾಹ ವಾಕ್ಯಮ್ ॥ ೧೨೫॥**

ಪದಚ್ಛೇದ :- ಸಾ, ಪೂತದೇಹಾ, ಅಥ, ಚ, ವೈಷ್ಣವವ್ರತಾತ್, ಮತ್ತಃ, ಸಮಾಪ್ನೋತು, ಸುತಂ, ವರಿಷ್ಠಂ, ಇತಿ, ಈರಿತೇ, ರಾಷ್ಟ್ರಂ, ಉಪೈತಿ, ನಾಶಂ, ಇತಿ, ಬ್ರುವಂತೀಂ, ಪುನಃ, ಆಹ, ವಾಕ್ಯಮ್.

**ಅರ್ಥ** :- **ಅಥ** ಆ ನಂತರ **ವೈಷ್ಣವವ್ರತಾತ್** ವೈಷ್ಣವವ್ರತದಿಂದ **ಪೂತದೇಹಾ** ಪವಿತ್ರವಾದ ದೇಹವುಳ್ಳ **ಸಾ** ಆ ವಿಚಿತ್ರವೀರ್ಯನ ಹೆಂಡತಿಯು **ಮತ್ತಃ** ನನ್ನಿಂದ **ವರಿಷ್ಠಂ** ಶ್ರೇಷ್ಠನಾದ **ಸುತಂ** ಮಗನನ್ನು **ಸಮಾಪ್ನೋತು** ಹೊಂದಲಿ **ಇತಿ** ಈ ರೀತಿಯಾಗಿ **ಈರಿತೇ** ಹೇಳಲ್ಪಡುತ್ತಿರಲು **ರಾಷ್ಟ್ರಂ** ದೇಶವು **ನಾಶಂ** ನಾಶವನ್ನು **ಉಪೈತಿ** ಹೊಂದುತ್ತದೆ **ಇತಿ** ಎಂದು **ಬ್ರುವಂತೀಂ** ಹೇಳುತ್ತಿರುವ ತಾಯಿಯನ್ನು ಕುರಿತು **ಪುನಃ** ಮತ್ತೆ **ವಾಕ್ಯಂ** ಮಾತನ್ನು **ಆಹ** ಹೇಳಿದರು.

**ತಾತ್ಪರ್ಯ** :- ವಿಚಿತ್ರವೀರ್ಯನ ಹೆಂಡತಿಯು ವೈಷ್ಣವವ್ರತವನ್ನು ಮಾಡಿ ದೇಹವನ್ನು ಪವಿತ್ರಮಾಡಿಕೊಳ್ಳಲಿ. ಅನಂತರ ನನ್ನಿಂದ ಉತ್ತಮನಾದ ಮಗನನ್ನು ಪಡೆಯುತ್ತಾಳೆ ಎಂದು ವೇದವ್ಯಾಸರು ಹೇಳಿದಾಗ ಸತ್ಯವತಿಯು ಅಷ್ಟರೊಳಗೆ ರಾಜರಿಲ್ಲದೆ ದೇಶವು ನಾಶವಾಗುತ್ತದೆ ಎಂದು ಹೇಳಿದಳು. ಆಕೆಗೆ ವ್ಯಾಸರು ಈ ಮಾತನ್ನು ಹೇಳಿದರು.

**ಸೌಮ್ಯಸ್ವರೂಪೋಽಪ್ಯತಿಭೀಷಣಂ ಮೃಷಾ**
**ತಚ್ಚಕ್ಷುಷೋ ರೂಪಮಹಂ ಪ್ರದರ್ಶಯೇ ।**
**ಸಹೇತ ಸಾ ತದ್ಯದಿ ಪುತ್ರಕೋಽಸ್ಯಾ ಭವೇದ್**
**ಗುಣಾಢ್ಯೋ ಬಲವೀರ್ಯಯುಕ್ತಃ ॥ ೧೨೬ ॥**

ಪದಚ್ಛೇದ :- ಸೌಮ್ಯಸ್ವರೂಪಃ, ಅಪಿ, ಅತಿಭೀಷಣಂ, ಮೃಷಾ, ತಚ್ಚಕ್ಷುಷಃ, ರೂಪಂ, ಅಹಂ, ಪ್ರದರ್ಶಯೇ. ಸಹೇತ, ಸಾ, ತತ್, ಯದಿ, ಪುತ್ರಕಃ, ಅಸ್ಯಾಃ, ಭವೇತ್, ಗುಣಾಢ್ಯಃ, ಬಲವೀರ್ಯಯುಕ್ತಃ.

**ಅರ್ಥ** :- **ಅಹಂ** ನಾನು **ಸೌಮ್ಯಸ್ವರೂಪಃ ಅಪಿ** ಸೌಮ್ಯವಾದ ಸ್ವರೂಪ ಉಳ್ಳವನಾದರೂ **ಮೃಷಾ** ಸುಳ್ಳಾಗಿ (ಸುಮ್ಮನೆ) **ತಚ್ಚಕ್ಷುಷಃ** ಆ ವಿಚಿತ್ರ ವೀರ್ಯನ ಹೆಂಡತಿಯ ಕಣ್ಣಿಗೆ **ಅತಿಭೀಷಣಂ** ಅತ್ಯಂತ ಭಯಂಕರವಾದ **ರೂಪಂ** ರೂಪವನ್ನು **ಪ್ರದರ್ಶಯೇ** ತೋರಿಸುತ್ತೇನೆ. **ಸಾ** ಅವಳು **ತತ್** ಆ

ರೂಪವನ್ನು ಯದಿ ಒಂದು ವೇಳೆ ಸಹೇತ ಸಹಿಸಿಕೊಳ್ಳುತ್ತಾಳಾದರೆ **ಅಸ್ಯಾಃ** ವಿಚಿತ್ರವೀರ್ಯನ ಹೆಂಡತಿಗೆ **ಗುಣಾಢ್ಯಃ** ಗುಣಶಾಲಿಯಾದ **ಬಲವೀರ್ಯ ಯುಕ್ತಃ** ಶಕ್ತಿ, ಪರಾಕ್ರಮಗಳಿಂದ ಕೂಡಿದ **ಪುತ್ರಕಃ** ಮಗನು **ಭವೇತ್** ಹುಟ್ಟುತ್ತಾನೆ.

**ತಾತ್ಪರ್ಯ** :- 'ನಾನು ಸೌಮ್ಯವಾದ ಸ್ವರೂಪದವನಾದರೂ ಆ ವಿಚಿತ್ರವೀರ್ಯನ ಹೆಂಡತಿಯ ಕಣ್ಣಿಗೆ ಅತ್ಯಂತ ಭಯಂಕರವಾದ ರೂಪವನ್ನು ಸುಮ್ಮನೆ ತೋರಿಸುತ್ತೇನೆ. ಅವಳು ಆ ರೂಪವನ್ನು ಸಹಿಸಿಕೊಂಡರೆ ಗುಣಶಾಲಿ ಯಾದ ಶಕ್ತಿಪರಾಕ್ರಮಗಳನ್ನು ಹೊಂದಿದ ಮಗನನ್ನು ಪಡೆಯುತ್ತಾಳೆ.

**ಇತೀರಿತೇಽಸ್ತ್ವಿತ್ಯುದಿತಸ್ತಯಾಽಗಮತ್**
**ಕೃಷ್ಣೋಽಂಬಿಕಾಂ ಸಾ ತು ಭಯಾನ್ನ್ಯಮೀಲಯತ್ ।**
**ಅಭೂಚ್ಚ ತಸ್ಯಾಂ ಧೃತರಾಷ್ಟ್ರನಾಮಕೋ**
**ಗಂಧರ್ವರಾಟ್ ಪವನಾವೇಶಯುಕ್ತಃ ॥ ೧೨೭ ॥**

**ಪದಚ್ಛೇದ** :- ಇತಿ, ಈರಿತೇ, ಅಸ್ತು, ಇತಿ, ಉದಿತಃ, ತಯಾ, ಆಗಮತ್, ಕೃಷ್ಣಃ, ಅಂಬಿಕಾಂ, ಸಾ, ತು, ಭಯಾತ್, ನ್ಯಮೀಲಯತ್, ಅಭೂತ್, ಚ, ತಸ್ಯಾಂ, ಧೃತರಾಷ್ಟ್ರನಾಮಕಃ, ಗಂಧರ್ವರಾಟ್, ಪವನಾವೇಶಯುಕ್ತಃ.

**ಅರ್ಥ** :- **ಇತಿ** ಈ ರೀತಿಯಾಗಿ **ಈರಿತೇ** ಹೇಳಲ್ಪಡುತ್ತಿರಲು **ಅಸ್ತು** ಹಾಗೇ ಆಗಲಿ **ಇತಿ** ಎಂದು **ತಯಾ** ಆ ಸತ್ಯವತಿಯಿಂದ **ಉದಿತಃ** ಹೇಳಲ್ಪಟ್ಟ **ಕೃಷ್ಣಃ** ವೇದವ್ಯಾಸರು **ಅಂಬಿಕಾಂ** ಅಂಬಿಕೆಯನ್ನು **ಅಗಮತ್** ಸೇರಿದರು. **ಸಾ ತು** ಅವಳಾದರೂ **ಭಯಾತ್** ಭಯದಿಂದ **ನ್ಯಮೀಲಯತ್** ಕಣ್ಣು ಮುಚ್ಚಿದಳು **ತಸ್ಯಾಂ ಚ** ಅವಳಲ್ಲಿಯಾದರೂ **ಗಂಧರ್ವರಾಟ್** ಗಂಧರ್ವ ರಾಜನು **ಪವನಾವೇಶಯುಕ್ತಃ** ವಾಯುವಿನ ಆವೇಶದಿಂದ ಕೂಡಿದವನಾಗಿ **ಧೃತರಾಷ್ಟ್ರನಾಮಕಃ** ಧೃತರಾಷ್ಟ್ರನೆಂಬ ಹೆಸರುಳ್ಳವನಾಗಿ **ಅಭೂತ್** ಹುಟ್ಟಿದನು.

**ತಾತ್ಪರ್ಯ** :- ಈ ರೀತಿಯಾಗಿ ಹೇಳಿದಾಗ ಸತ್ಯವತಿಯು ಹಾಗೇ ಆಗಲಿ ಎಂದು ಹೇಳಿದಳು. ಆಗ ವೇದವ್ಯಾಸರು ಅಂಬಿಕೆಯೊಂದಿಗೆ ಸಂಗವನ್ನು ಮಾಡಿದರು. ಅವಳು ಭಯದಿಂದ ಕಣ್ಣು ಮುಚ್ಚಿದಳು. ಅವಳಲ್ಲಿ ಗಂಧರ್ವ ರಾಜನು ವಾಯುದೇವರ ಆವೇಶದಿಂದ ಕೂಡಿದವನಾಗಿ ಧೃತರಾಷ್ಟ್ರ ಎಂಬ ಹೆಸರಿನಿಂದ ಹುಟ್ಟಿದನು.

ಸ ಮಾರುತಾವೇಶಬಲಾದ್ ಬಲಾಕೋ
ಬಭೂವ ರಾಜಾ ಧೃತರಾಷ್ಟ್ರನಾಮಾ ।
ಅದಾದ್ ವರಂ ಚಾಸ್ಯ ಬಲಾಧಿಕತ್ವಂ
ಕೃಷ್ಣೋಽಂಧ ಆಸೀತ್ ಸ ತು ಮಾತೃದೋಷತಃ ॥ ೧೨೮ ॥

ಪದಚ್ಛೇದ :- ಸಃ, ಮಾರುತಾವೇಶಬಲಾತ್, ಬಲಾಕಃ, ಬಭೂವ, ರಾಜಾ, ಧೃತರಾಷ್ಟ್ರನಾಮಾ, ಅದಾತ್, ವರಂ, ಚ, ಅಸ್ಯ, ಬಲಾಧಿಕತ್ವಂ, ಕೃಷ್ಣಃ, ಅಂಧಃ, ಆಸೀತ್, ಸಃ, ತು, ಮಾತೃದೋಷತಃ.

**ಅರ್ಥ** :- **ಸಃ** ಆ ಯಾವ **ಧೃತರಾಷ್ಟ್ರನಾಮಾ** ಧೃತರಾಷ್ಟ್ರನೆಂಬ ಹೆಸರುಳ್ಳ **ರಾಜಾ** ರಾಜನು **ಮಾರುತಾವೇಶಾತ್** ವಾಯುದೇವರ ಆವೇಶದಿಂದ **ಬಲಾಧಿಕಃ** ಅಧಿಕವಾದ ಬಲವುಳ್ಳವನು **ಬಭೂವ** ಆದನು **ಕೃಷ್ಣಃ** ವೇದವ್ಯಾಸರು **ಅಸ್ಯ** ಈ ಧೃತರಾಷ್ಟ್ರನಿಗೆ **ಬಲಾಧಿಕತ್ವಂ** ಅಧಿಕಬಲ ಇರುವಿಕೆಯೆಂಬ **ವರಂ ಚ** ವರವನ್ನೂ ಕೂಡ **ಅದಾತ್** ಕೊಟ್ಟರು. **ತು** ಆದರೆ **ಸಃ** ಅವನು **ಮಾತೃದೋಷತಃ** ತಾಯಿಯ ತಪ್ಪಿನಿಂದ **ಅಂಧಃ** ಕುರುಡನು **ಆಸೀತ್** ಆಗಿದ್ದನು.

**ತಾತ್ಪರ್ಯ** :- ಧೃತರಾಷ್ಟ್ರನೆಂಬ ಹೆಸರಿನ ಆ ರಾಜನು ವಾಯುದೇವರ ಆವೇಶದಿಂದ ಹೆಚ್ಚಿನ ಬಲವುಳ್ಳವನಾದನು. ವೇದವ್ಯಾಸರು ಅವನಿಗೆ ಹೆಚ್ಚಾದ ಬಲವಿರಲಿ ಎಂಬ ವರವನ್ನೂ ಕೊಟ್ಟರು. ಆದರೆ ಅವನು ತಾಯಿಯ ತಪ್ಪಿನಿಂದಾಗಿ ಹುಟ್ಟುವಾಗಲೇ ಕುರುಡನಾದನು.

ಜ್ಞಾತ್ವಾ ತಮಂಧಂ ಪುನರೇವ ಕೃಷ್ಣಂ
ಮಾತಾಽಬ್ರವೀಜ್ಜನಯಾನ್ಯಂ ಗುಣಾಢ್ಯಮ್ ।
ಅಂಬಾಲಿಕಾಯಾಮಿತಿ ತತ್ ತಥಾಽಕರೋದ್
ಭಯಾತ್ತು ಸಾ ಪಾಂಡುರಭೂನ್ಮೃಷಾದೃಕ್ ॥ ೧೨೯ ॥

ಪದಚ್ಛೇದ :- ಜ್ಞಾತ್ವಾ ತಂ, ಅಂಧಂ, ಪುನಃ, ಏವ, ಕೃಷ್ಣಂ, ಮಾತಾ, ಅಬ್ರವೀತ್, ಜನಯ, ಅನ್ಯಂ, ಗುಣಾಢ್ಯಂ, ಅಂಬಾಲಿಕಾಯಾಂ, ಇತಿ, ತತ್, ತಥಾ, ಅಕರೋತ್, ಭಯಾತ್, ತು, ಸಾ,, ಪಾಂಡುಃ, ಅಭೂತ್, ಮೃಷಾದೃಕ್.

**ಅರ್ಥ** :- **ತಂ** ಆ ಧೃತರಾಷ್ಟ್ರನನ್ನು **ಅಂಧಂ** ಕುರುಡನನ್ನಾಗಿ **ಜ್ಞಾತ್ವಾ** ತಿಳಿದು **ಮಾತಾ** ತಾಯಿಯಾದ ಸತ್ಯವತಿಯು **ಪುನಃ ಏವ** ಮತ್ತೊಮ್ಮೆ **ಕೃಷ್ಣಂ** ವೇದವ್ಯಾಸರನ್ನು **ಅಬ್ರವೀತ್** ಹೇಳಿದಳು. **ಅಂಬಾಲಿಕಾಯಾಂ** ಅಂಬಾಲಿಕೆಯಲ್ಲಿ **ಗುಣಾಢ್ಯಂ** ಗುಣಶಾಲಿಯಾದ **ಅನ್ಯಂ** ಮತ್ತೊಬ್ಬ ಮಗನನ್ನು **ಜನಯ** ಹುಟ್ಟಿಸು **ಇತಿ** ಎಂದು. **ತತ್** ತಾಯಿಯ ಮಾತನ್ನು **ತಥಾ** ಹಾಗೆಯೇ **ಅಕರೋತ್ ಚ** ಮಾಡಿದರೂ ಕೂಡ. **ಮೃಷಾದೃಕ್** ಸುಮ್ಮನೆ ತೋರಿದ ರೂಪವನ್ನು ಕಂಡ **ಸಾ** ಆ ಅಂಬಾಲಿಕೆಯು **ಭಯಾತ್** ಭಯದಿಂದ **ಪಾಂಡುಃ** ಬಿಳಿವರ್ಣದವಳು **ಅಭೂತ್** ಆದಳು.

**ತಾತ್ಪರ್ಯ** :- ಧೃತರಾಷ್ಟ್ರನು ಕುರುಡನೆಂದು ತಿಳಿದು ತಾಯಿಯಾದ ಸತ್ಯವತಿಯು ಮತ್ತೊಮ್ಮೆ ವೇದವ್ಯಾಸರಿಗೆ ಹೇಳಿದಳು. ಅಂಬಾಲಿಕೆಯಲ್ಲಿ ಗುಣಶಾಲಿಯಾದ ಮತ್ತೊಬ್ಬ ಮಗನನ್ನು ಹುಟ್ಟಿಸು ಎಂದು. ವೇದವ್ಯಾಸರು ತಾಯಿ ಹೇಳಿದಂತೆ ಮಾಡಿದರು. ವ್ಯಾಸರು ಸುಮ್ಮನೆ ತೋರಿದ ಭಯಂಕರವಾದ ರೂಪವನ್ನು ಕಂಡು ಅಂಬಾಲಿಕೆಯು ಭಯದಿಂದ ಪಾಂಡುವರ್ಣದವಳಾದಳು.

**ಪರಾವಹೋ ನಾಮ ಮರುತ್ ತತೋऽಭವತ್**
**ವರ್ಣೇನ ಪಾಂಡುಃ ಸ ಹಿ ನಾಮತಶ್ಚ ।**
**ಸ ಚಾऽಸ ವೀರ್ಯಾಧಿಕ ಏವ ವಾಯೋ-**
**ರಾವೇಶತಃ ಸರ್ವಶಸ್ತ್ರಾಸ್ತ್ರವೇತ್ತಾ ॥ ೧೩೦ ॥**

ಪದಚ್ಛೇದ :– ಪರಾವಹಃ, ನಾಮ, ಮರುತ್, ತತಃ, ಅಭವತ್, ವರ್ಣೇನ, ಪಾಂಡುಃ, ಸಃ, ಹಿ, ನಾಮತಃ, ಚ, ಸಃ, ಚ, ಆಸ, ವೀರ್ಯಾಧಿಕಃ, ಏವ, ವಾಯೋಃ, ಆವೇಶತಃ, ಸರ್ವಶಸ್ತ್ರಾಸ್ತ್ರವೇತ್ತಾ.

**ಅರ್ಥ** :- **ತತಃ** ಅನಂತರ **ಪರಾವಹಃ ನಾಮ** ಪರಾವಹನೆಂದು ಪ್ರಸಿದ್ಧನಾದ **ಮರುತ್** ಮರುತ್ತು ದೇವತೆಯು **ಅಭವತ್** ಹುಟ್ಟಿದನು. **ಸಃ** ಅವನು **ವರ್ಣೇನ** ಬಣ್ಣದಿಂದ **ಚ** ಮತ್ತು **ನಾಮತಃ** ಹೆಸರಿನಿಂದಲೂ **ಪಾಂಡುಃ** ಪಾಂಡುವೇ **ಅಭವತ್** ಆಗಿದ್ದನು. **ಸಃ ಚ** ಆ ಪಾಂಡುವಾದರೋ **ವಾಯೋಃ** ವಾಯುದೇವರ **ಆವೇಶತಃ** ಆವೇಶದಿಂದ **ವೀರ್ಯಾಧಿಕಃ** ಹೆಚ್ಚಿನ ಪರಾಕ್ರಮವುಳ್ಳವನು **ಸರ್ವಶಸ್ತ್ರಾಸ್ತ್ರವೇತ್ತಾ** ಎಲ್ಲ ಅಸ್ತ್ರಶಸ್ತ್ರಗಳನ್ನು ತಿಳಿದವನು **ಆಸ** ಆಗಿದ್ದನು.

**ತಾತ್ಪರ್ಯ** :- ಪರಾಹವನೆಂಬ ಮರುತ್ತು ದೇವತೆಯು ಬಣ್ಣದಿಂದ ಪಾಂಡುವರ್ಣದವನಾಗಿ ಪಾಂಡುವೆಂಬ ಹೆಸರಿನಿಂದಲೇ ಹುಟ್ಟಿದನು. ವಾಯುದೇವರ ಆವೇಶದಿಂದ ಹೆಚ್ಚಾದ ಪರಾಕ್ರಮವುಳ್ಳವನಾಗಿದ್ದನು. ಬಗೆ ಬಗೆಯ ಶಸ್ತ್ರಾಸ್ತ್ರಗಳನ್ನು ತಿಳಿದವನಾಗಿದ್ದನು.

**ತಸ್ಮೈ ತಥಾ ಬಲವೀರ್ಯಾಧಿಕತ್ವಂ**
**ವರಂ ಪ್ರಾದಾತ್ ಕೃಷ್ಣ ಏವಾಥ ಪಾಂಡುಮ್ ।**
**ವಿಜ್ಞಾಯ ತಂ ಪ್ರಾಹ ಪುನಶ್ಚ ಮಾತಾ**
**ನಿರ್ದೋಷಮನ್ಯಂ ಜನಯೋತ್ತಮಂ ಸುತಮ್ ॥ ೧೩೧ ॥**

**ಪದಚ್ಛೇದ** :- ತಸ್ಮೈ, ತಥಾ, ಬಲವೀರ್ಯಾಧಿಕತ್ವಂ, ವರಂ, ಪ್ರಾದಾತ್, ಕೃಷ್ಣಃ, ಏವ, ಅಥ, ಪಾಂಡುಂ, ವಿಜ್ಞಾಯ, ತಂ, ಪ್ರಾಹ, ಪುನಃ, ಚ, ಮಾತಾ, ನಿರ್ದೋಷಂ, ಅನ್ಯಂ, ಜನಯ, ಉತ್ತಮಂ, ಸುತಮ್.

**ಅರ್ಥ** :- **ತಸ್ಮೈ** ಆ ಪಾಂಡುವಿಗೆ **ತಥಾ** ಹಾಗೆಯೇ **ಕೃಷ್ಣಃ ಏವ** ವೇದವ್ಯಾಸರೇ **ಬಲವೀರ್ಯಾಧಿಕತ್ವಂ** ಅಧಿಕವಾದ ಶಕ್ತಿ ಪರಾಕ್ರಮಗಳ ಇರುವಿಕೆಯೆಂಬ **ವರಂ** ವರವನ್ನು **ಪ್ರಾದಾತ್** ಕೊಟ್ಟರು. **ಅಥ** ಅನಂತರ **ತಂ** ಅವನನ್ನು **ಪಾಂಡುಂ** ಪಾಂಡುವರ್ಣದವನೆಂದು **ವಿಜ್ಞಾಯ** ತಿಳಿದು **ಮಾತಾ** ತಾಯಿಯಾದ ಸತ್ಯವತಿಯು **ಪುನಃ ಚ** ಮತ್ತೊಮ್ಮೆ **ತಂ** ಆ ವೇದವ್ಯಾಸರನ್ನು ಕುರಿತು **ಪ್ರಾಹ** ಹೇಳಿದಳು. **ಅನ್ಯಂ** ಬೇರೆ **ಉತ್ತಮಂ** ಉತ್ತಮನಾದ **ನಿರ್ದೋಷಂ** ದೋಷರಹಿತನಾದ **ಸುತಂ** ಮಗನನ್ನು **ಜನಯ** ಹುಟ್ಟಿಸು ಎಂದು.

**ತಾತ್ಪರ್ಯ** :- ಧೃತರಾಷ್ಟ್ರನಿಗೆ ಕೊಟ್ಟಂತೆ ಪಾಂಡುವಿಗೂ ವೇದವ್ಯಾಸರೇ ಅಧಿಕ ಶಕ್ತಿ ಪರಾಕ್ರಮಗಳಿರಲಿ ಎಂಬ ವರವನ್ನು ಕೊಟ್ಟರು. ಅನಂತರ ತಾಯಿಯಾದ ಸತ್ಯವತಿಯು ಅವನು ಪಾಂಡುವರ್ಣದವನೆಂದು ತಿಳಿದು ಮತ್ತೊಮ್ಮೆ ವೇದವ್ಯಾಸರಿಗೆ ಹೇಳಿದಳು. 'ದೋಷರಹಿತನಾದ ಉತ್ತಮನಾದ ಮತ್ತೊಬ್ಬ ಮಗನನ್ನು ಹುಟ್ಟಿಸು' ಎಂದು.

**ಉಕ್ತ್ವೇತಿ ಕೃಷ್ಣಂ ಪುನರೇವ ಚ ಸ್ನುಷಾಮ್**
**ಆಹ ತ್ವಯಾಽಕ್ಷ್ಣೋರ್ನ ನಿಮೀಲನಂ ಪುರಾ ।**
**ಕೃತಂ ತತಸ್ತೇ ಸುತ ಆಸ ಚಾಂಧಃ**
**ತತಃ ಪುನಃ ಕೃಷ್ಣಮುಪಾಸ್ವ ಭಕ್ತಿತಃ ॥ ೧೩೨ ॥**

ಪದಚ್ಛೇದ :- ಉಕ್ತ್ವಾ ಇತಿ, ಕೃಷ್ಣಂ, ಪುನಃ, ಏವ, ಚ ಸ್ನುಷಾಂ, ಆಹ, ತ್ವಯಾ, ಅಕ್ಷ್ಣೋಃ, ಹಿ, ನಿಮೀಲನಂ, ಪುರಾ, ಕೃತಂ. ತತಃ, ತೇ, ಸುತಃ, ಆಸ, ಚ, ಅಂಧಃ, ತತಃ, ಪುನಃ, ಕೃಷ್ಣಂ, ಉಪಾಸ್ವ ಭಕ್ತಿತಃ.

**ಅರ್ಥ** :- ಇತಿ ಈ ರೀತಿಯಾಗಿ **ಕೃಷ್ಣಂ** ವೇದವ್ಯಾಸರನ್ನು ಕುರಿತು **ಉಕ್ತ್ವಾ** ಹೇಳಿ **ಪುನಃ** ಏವ ಮತ್ತೆ **ಸ್ನುಷಾಂ ಚ** ಸೊಸೆಯನ್ನು ಕುರಿತು **ಆಹ** ಹೇಳಿದಳು. **ತ್ವಯಾ** ನಿನ್ನಿಂದ **ಪುರಾ** ಹಿಂದೆ **ಅಕ್ಷ್ಣೋಃ** ಕಣ್ಣುಗಳ **ನಿಮೀಲನಂ** ಮುಚ್ಚುವಿಕೆಯು **ಕೃತಂ** ಮಾಡಲ್ಪಟ್ಟಿತು. **ತತಃ** ಆದ್ದರಿಂದ **ತೇ** ನಿನ್ನ **ಸುತಃ** ಮಗನು **ಅಂಧಃ** ಕುರುಡನು **ಆಸ** ಆದನು. **ತತಃ** ಆದ್ದರಿಂದ **ಪುನಃ** ಮತ್ತೊಮ್ಮೆ **ಕೃಷ್ಣಂ** ವೇದವ್ಯಾಸರನ್ನು **ಭಕ್ತಿತಃ** ಭಕ್ತಿಯಿಂದ **ಉಪಾಸ್ವ** ಪೂಜಿಸು.

**ತಾತ್ಪರ್ಯ** :- ಸತ್ಯವತಿಯು ಈ ರೀತಿಯಾಗಿ ವೇದವ್ಯಾಸರಿಗೆ ಹೇಳಿ ಮತ್ತೆ ತನ್ನ ಸೊಸೆಗೆ ಹೇಳಿದಳು– 'ನೀನು ಹಿಂದೆ ಕಣ್ಣುಗಳನ್ನು ಮುಚ್ಚಿದ್ದಿ. ಆದ್ದರಿಂದ ನಿನ್ನ ಮಗ ಕುರುಡನಾದ. ಈಗ ಮತ್ತೊಮ್ಮೆ ಭಕ್ತಿಯಿಂದ ವೇದವ್ಯಾಸರನ್ನು ಪೂಜಿಸು' ಎಂದು.

**ಇತೀರಿತಾಽಪ್ಯಸ್ಯ ಹಿ ಮಾಯಯಾ ಸಾ**
**ಭೀತಾ ಭುಜಿಷ್ಯಾಂ ಕುಮತಿರ್ನ್ಯಯೋಜಯತ್ ।**
**ಸಾ ತಂ ಪರಾನಂದತನುಂ ಗುಣಾರ್ಣವಂ**
**ಸಂಪ್ರಾಪ್ಯ ಭಕ್ತ್ಯಾ ಪರಯೈವ ರೇಮೇ ॥ ೧೩೩ ॥**

ಪದಚ್ಛೇದ :- ಇತಿ, ಈರಿತಾ, ಅಪಿ, ಅಸ್ಯ, ಹಿ, ಮಾಯಯಾ, ಸಾ, ಭೀತಾ, ಭುಜಿಷ್ಯಾಂ, ಕುಮತಿಃ, ನ್ಯಯೋಜಯತ್. ಸಾ, ತಂ, ಪರಾನಂದತನುಂ, ಗುಣಾರ್ಣವಂ , ಸಂಪ್ರಾಪ್ಯ, ಭಕ್ತ್ಯಾ, ಪರಯಾ, ಏವ, ರೇಮೇ.

**ಅರ್ಥ** :- ಇತಿ ಈ ರೀತಿಯಾಗಿ **ಈರಿತಾ ಅಪಿ** ಸತ್ಯವತಿಯಿಂದ ಹೇಳಲ್ಪಟ್ಟವಳಾದರೂ **ಅಸ್ಯ** ಈ ವೇದವ್ಯಾಸರ **ಮಾಯಯಾ** ಇಚ್ಛಾಶಕ್ತಿಯಿಂದ **ಭೀತಾ** ಹೆದರಿದ **ಕುಮತಿಃ** ದುರ್ಬುದ್ಧಿಯುಳ್ಳ **ಸಾ** ಆ ಅಂಬಿಕೆಯು **ಭುಜಿಷ್ಯಾಂ** ದಾಸಿಯನ್ನು **ನ್ಯಯೋಜಯತ್** ನಿಯೋಜಿಸಿದಳು. **ಸಾ** ಆ ದಾಸಿಯು **ಪರಾನಂದತನುಂ** ಉತ್ಕೃಷ್ಟವಾದ ಆನಂದವೇ ಶರೀರವಾಗಿ ಉಳ್ಳ **ಗುಣಾರ್ಣವಂ** ಗುಣಗಳಿಂದ ಸಮುದ್ರದಂತಿರುವ **ತಂ** ಆ ವೇದವ್ಯಾಸರನ್ನು

**ಸಂಪ್ರಾಪ್ಯ** ಹೊಂದಿ **ಪರಯಾ** ಉತ್ತಮವಾದ **ಭಕ್ತ್ಯಾ ಏವ** ಭಕ್ತಿಯಿಂದಲೇ **ರೇಮೇ** ಕ್ರೀಡಿಸಿದಳು.

**ತಾತ್ಪರ್ಯ :-** ಸತ್ಯವತಿಯು ಈ ರೀತಿಯಾಗಿ ಹೇಳಿದರೂ ಅಂಬಿಕೆ ವೇದವ್ಯಾಸರ ಇಚ್ಛಾಶಕ್ತಿಯಿಂದ ಹೆದರಿ ಕೆಟ್ಟಬುದ್ಧಿಯನ್ನುಪಯೋಗಿಸಿ ತನ್ನ ದಾಸಿಯನ್ನು ವೇದವ್ಯಾಸರ ಬಳಿ ಕಳುಹಿಸಿದಳು. ಆ ದಾಸಿಯು ಉತ್ಕೃಷ್ಟ ಆನಂದ ಸ್ವರೂಪಿಯಾದ ಗುಣಗಳಿಂದ ಸಮುದ್ರದಂತಿರುವ ವೇದವ್ಯಾಸರನ್ನು ಸಮೀಪಿಸಿ ಉತ್ತಮವಾದ ಭಕ್ತಿಯಿಂದ ಕ್ರೀಡಿಸಿದಳು.

**ತಸ್ಯಾಂ ಸ ದೇವೋಽಜನಿ ಧರ್ಮರಾಜೋ**
**ಮಾಂಡವ್ಯಶಾಪಾತ್ ಯ ಉವಾಹ ಶೂದ್ರತಾಮ್ ।**
**ವಸಿಷ್ಠಸಾಮ್ಯಂ ಸಮಭೀಪ್ಸಮಾನಂ**
**ಪ್ರಚ್ಯಾವಯನ್ನಿಚ್ಛಯಾ ಶಾಪಮಾಪ ॥ ೧೩೪ ॥**

ಪದಚ್ಛೇದ :- **ತಸ್ಯಾಂ, ಸಃ, ದೇವಃ, ಅಜನಿ, ಧರ್ಮರಾಜಃ, ಮಾಂಡವ್ಯಶಾಪಾತ್, ಯಃ, ಉವಾಹ, ಶೂದ್ರತಾಂ, ವಸಿಷ್ಠಸಾಮ್ಯಂ, ಸಮಭೀಪ್ಸಮಾನಂ, ಪ್ರಚ್ಯಾವಯನ್, ಇಚ್ಛಯಾ, ಶಾಪಂ, ಆಪ.**

**ಅರ್ಥ :- ಯಃ** ಯಾವನು **ಮಾಂಡವ್ಯಶಾಪಾತ್** ಮಾಂಡವ್ಯ ಋಷಿಗಳ ಶಾಪದಿಂದ **ಶೂದ್ರತ್ವಂ** ಶೂದ್ರತ್ವವನ್ನು **ಆಪ** ಹೊಂದಿದನೋ **ಸಃ** ಆ ಯಾವ **ದೇವಃ** ದೇವತೆಯಾದ **ಧರ್ಮರಾಜಃ** ಯಮಧರ್ಮರಾಜನು **ತಸ್ಯಾಂ** ಆ ದಾಸಿಯಲ್ಲಿ **ಅಜನಿ** ಹುಟ್ಟಿದನು. **ವಸಿಷ್ಠಸಾಮ್ಯಂ** ವಸಿಷ್ಠಋಷಿಗಳ ಸಾಮ್ಯ ವನ್ನು **ಸಮಭೀಪ್ಸಮಾನಂ** ಹೊಂದಲು ಇಚ್ಛಿಸುತ್ತಿರುವ ಮಾಂಡವ್ಯರನ್ನು **ಪ್ರಚ್ಯಾವಯನ್** ಚ್ಯುತಿಗೊಳಿಸುತ್ತಾ **ಇಚ್ಛಯಾ** ಸ್ವೇಚ್ಛೆಯಿಂದಲೇ **ಶಾಪಂ** ಶಾಪವನ್ನು **ಆಪ** ಹೊಂದಿದ್ದನು.

**ತಾತ್ಪರ್ಯ :-** ಮಾಂಡವ್ಯರ ಶಾಪದಿಂದ ಶೂದ್ರತ್ವವನ್ನು ಹೊಂದಿದ್ದ ಯಮಧರ್ಮರಾಜನೇ ಆ ದಾಸಿಯಲ್ಲಿ ಶೂದ್ರನಾಗಿ ಅವತರಿಸಿದನು. ವಸಿಷ್ಠರ ಸಾಮ್ಯವನ್ನು ಬಯಸಿ ತಪಸ್ಸು ಮಾಡಿ ಸಂಪಾದಿಸಿದ ಪುಣ್ಯದಿಂದ ಮಾಂಡವ್ಯರನ್ನು ಚ್ಯುತಿಗೊಳಿಸುವುದಕ್ಕಾಗಿ ಸ್ವೇಚ್ಛೆಯಿಂದಲೇ ಶಾಪವನ್ನು ಸ್ವೀಕರಿಸಿದನು.

ಅಯೋಗ್ಯಸಂಪ್ರಾಪ್ತಿಕೃತಪ್ರಯತ್ನ
ದೋಷಾತ್ ಸಮಾರೋಪಿತಮೇವ ಶೂಲೇ ।
ಚೋರೈರ್ಹೃತೇಽರ್ಥೇಽಪಿ ತು ಚೋರಬುದ್ಧ್ಯಾ
ಮಕ್ಷೀವಧಾದಿತ್ಯವದದ್ ಯಮಸ್ತಮ್ ॥ ೧೩೫ ॥

ಪದಚ್ಛೇದ :- ಅಯೋಗ್ಯಸಂಪ್ರಾಪ್ತಿಕೃತಪ್ರಯತ್ನದೋಷಾತ್, ಸಮಾರೋಪಿತಂ, ಏವ, ಶೂಲೇ, ಚೋರೈಃ, ಹೃತೇ, ಅರ್ಥೇ, ಅಪಿ, ತು, ಚೋರಬುದ್ಧ್ಯಾ, ಮಕ್ಷೀವಧಾತ್, ಇತಿ, ಅವದತ್, ಯಮಃ, ತಮ್.

**ಅರ್ಥ** :- **ಚೋರೈಃ** ಕಳ್ಳರಿಂದ **ಅರ್ಥೇ** ಹಣವು **ಹೃತೇ ಅಪಿ** ಕದಿಯಲ್ಪಟ್ಟಿದ್ದರೂ **ಚೋರಬುದ್ಧ್ಯಾ** ಮಾಂಡವ್ಯನೇ ಕಳ್ಳನೆಂಬ ತಿಳುವಳಿಕೆಯಿಂದ **ಅಯೋಗ್ಯಸಂಪ್ರಾಪ್ತಿಕೃತಪ್ರಯತ್ನದೋಷಾತ್** ಏವ ಯೋಗ್ಯವಲ್ಲದ ಪದವಿಯನ್ನು ಪಡೆಯುವುದಕ್ಕಾಗಿ ಮಾಡಿದ ತಪಸ್ಸಿನ ಪ್ರಯತ್ನದ ಅಪರಾಧದಿಂದಲೇ **ಶೂಲೇ** ಶೂಲದಲ್ಲಿ **ಸಮಾರೋಪಿತಂ** ಏರಿಸಲ್ಪಟ್ಟ ಆ ಮಾಂಡವ್ಯರನ್ನು ಕುರಿತು **ಮಕ್ಷೀವಧಾತ್** ನೊಣಕ್ಕೆ ನೀಡಿದ ಹಿಂಸೆಯ ಫಲ **ಇತಿ** ಎಂದು **ಅವದತ್** ಹೇಳಿದನು.

**ತಾತ್ಪರ್ಯ** :- ಕಳ್ಳರು ಹಣವನ್ನು ಕದ್ದಿದ್ದರೂ ಮಾಂಡವ್ಯನೇ ಕದ್ದಿರುವನೆಂದು ತಿಳಿದು ಶೂಲಕ್ಕೆ ಏರಿಸಲಾಯಿತು. ವಾಸ್ತವಿಕವಾಗಿ ಇದು ತಮಗೆ ಯೋಗ್ಯವಲ್ಲದ ಪದವಿಯನ್ನು ಬಯಸಿ ತಪಸ್ಸನ್ನು ಮಾಡಲು ಪ್ರಯತ್ನಿಸಿದ ದೋಷದ ಫಲವಾಗಿತ್ತು. ಆದರೆ ಮಾಂಡವ್ಯರು ಯಮನ ಬಳಿ ಕೇಳಿದಾಗ ನೊಣವನ್ನು ಹಿಂಸಿಸಿದ್ದರ ಫಲ ಎಂದು ಯಮನು ಹೇಳಿದನು.

ನಾಸತ್ಯತಾ ತಸ್ಯ ಚ ತತ್ರ ಹೇತುತಃ
ಶಾಪಂ ಗೃಹೀತುಂ ಸ ತಥೈವ ಚೋಕ್ತ್ವಾ ।
ಅವಾಪ ಶೂದ್ರತ್ವಮಥಾಸ್ಯ ನಾಮ
ಚಕ್ರೇ ಕೃಷ್ಣಃ ಸರ್ವವಿತ್ತ್ವಂ ತಥಾಽದಾತ್ ॥ ೧೩೬ ॥

ಪದಚ್ಛೇದ :- ನ, ಅಸತ್ಯತಾ, ತಸ್ಯ, ಚ, ತತ್ರ, ಹೇತುತಃ, ಶಾಪಂ, ಗೃಹೀತುಂ, ಸಃ, ತಥಾ, ಏವ, ಚ, ಉಕ್ತ್ವಾ ಅವಾಪ, ಶೂದ್ರತ್ವಂ, ಅಥ, ಅಸ್ಯ, ನಾಮ, ಚಕ್ರೇ, ಕೃಷ್ಣಃ ಸರ್ವವಿತ್ತ್ವಂ, ತಥಾ, ಅದಾತ್.

**ಅರ್ಥ** :- **ತತ್ರ** ಆ ಶೂಲಾರೋಪಣೆಯಲ್ಲಿ **ತಸ್ಯ** ಆ ನೊಣದ ಹಿಂಸೆಯ **ಹೇತುತಃ** ಕಾರಣವಾಗುವಿಕೆಯಿಂದ **ಅಸತ್ಯತಾ ಚ** ಸುಳ್ಳನ್ನು ನುಡಿದದ್ದೂ **ನ** ಆಗಿರಲಿಲ್ಲ. **ಸಃ** ಆ ಯಮನು **ಶಾಪಂ** ಶಾಪವನ್ನು **ಗೃಹೀತುಂ** ಪಡೆಯಲು **ತಥಾ ಏವ** ಹಾಗೆಯೇ **ಉಕ್ತ್ವಾ** ಹೇಳಿ **ಶೂದ್ರತ್ವಂ** ಶೂದ್ರ ಜನ್ಮವನ್ನು **ಅವಾಪ** ಹೊಂದಿದನು. **ಅಥ** ಅನಂತರದಲ್ಲಿ **ಕೃಷ್ಣಃ** ವೇದವ್ಯಾಸರು **ಅಸ್ಯ** ಇವನಿಗೆ **ನಾಮ** ನಾಮಕರಣವನ್ನು **ಚಕ್ರೇ** ಮಾಡಿದರು. **ತಥಾ** ಹಾಗೆಯೇ **ಸರ್ವವಿತ್ತ್ವಂ** ಸರ್ವಜ್ಞತ್ವವನ್ನೂ **ಅದಾತ್** ಕೊಟ್ಟರು.

**ತಾತ್ಪರ್ಯ** :- ಶೂಲಾರೋಪದಲ್ಲಿ ನೊಣದ ಹಿಂಸೆಯೂ ಕಾರಣ ವಾಗಿತ್ತು. ಆದ್ದರಿಂದ ಸುಳ್ಳನ್ನು ನುಡಿದಂತಾಗಲಿಲ್ಲ. ಆದರೆ ಯಮನು ಮಾಂಡವ್ಯರಿಂದ ಶಾಪವನ್ನು ಪಡೆಯುವುದಕ್ಕಾಗಿಯೇ ಅಮುಖ್ಯವಾದ ಈ ನೊಣದ ಹಿಂಸೆಯ ಕಾರಣವನ್ನು ಹೇಳಿ ಶೂದ್ರನ ಜನ್ಮವನ್ನು ಪಡೆದನು. ವೇದವ್ಯಾಸರು ಅವನಿಗೆ ನಾಮಕರಣವನ್ನು ಮಾಡಿದರು. ಹಾಗೆಯೇ ಸರ್ವಜ್ಞತ್ವವನ್ನೂ ಅನುಗ್ರಹಿಸಿದರು.

**ವಿದ್ಯಾರತೇರ್ವಿದುರೋ ನಾಮ ಚಾಯಂ ಭವಿಷ್ಯತಿ ಜ್ಞಾನಬಲೋಪಪನ್ನಃ ।**
**ಮಹಾಧನುರ್ಬಾಹುಬಲಾಧಿಕಶ್ಚ ಸುನೀತಿಮಾನಿತ್ಯವದತ್ ಸ ಕೃಷ್ಣಃ**
**॥ ೧೩೭ ॥**

ಪದಚ್ಛೇದ :- ವಿದ್ಯಾರತೇಃ, ವಿದುರಃ, ನಾಮ, ಚ, ಅಯಂ, ಭವಿಷ್ಯತಿ, ಜ್ಞಾನಬಲೋಪಪನ್ನಃ, ಮಹಾಧನುಃ ಬಾಹುಬಲಾಧಿಕಃ, ಚ, ಸುನೀತಿಮಾನ್, ಇತಿ, ಅವದತ್, ಸಃ, ಕೃಷ್ಣಃ.

**ಅರ್ಥ** :- **ಅಯಂ** ಇವನು **ವಿದ್ಯಾರತೇಃ** ತತ್ತ್ವಜ್ಞಾನದಲ್ಲಿ ಆಸಕ್ತನಾದ್ದ ರಿಂದ **ವಿದುರಃ ನಾಮ ಚ** ವಿದುರನೆಂದು ಪ್ರಸಿದ್ಧನೂ **ಭವಿಷ್ಯತಿ** ಆಗುತ್ತಾನೆ. **ಚ** ಮತ್ತು **ಜ್ಞಾನಬಲೋಪಪನ್ನಃ** ಜ್ಞಾನ ಮತ್ತು ಬಲಗಳಿಂದ ಕೂಡಿದವನು **ಮಹಾಧನುಃ** ಮಹಾ ಧನ್ವಿಯೂ **ಬಾಹುಬಲಾಧಿಕಃ** ಅಧಿಕವಾದ ಬಾಹುಬಲ ವುಳ್ಳವನೂ **ಸುನೀತಿಮಾನ್** ಒಳ್ಳೆಯ ನೀತಿಯನ್ನು ತಿಳಿದವನೂ **ಭವಿಷ್ಯತಿ** ಆಗುತ್ತಾನೆ **ಇತಿ** ಎಂದು **ಸಃ** ಆ ಯಾವ **ಕೃಷ್ಣಃ** ವೇದವ್ಯಾಸರು **ಅವದತ್** ಹೇಳಿದರು.

ತಾತ್ಪರ್ಯ :- 'ಇವನು ಜ್ಞಾನದಲ್ಲಿ ಆಸಕ್ತನಾದ್ದರಿಂದ ವಿದುರನೆಂದು ಪ್ರಸಿದ್ಧನಾಗುತ್ತಾನೆ. ಜ್ಞಾನಬಲಗಳಿಂದ ಕೂಡಿದವನೂ, ಮಹಾಧನ್ವಿಯೂ, ಅಧಿಕಬಾಹುಬಲವುಳ್ಳವನೂ, ಒಳ್ಳೆಯ ನೀತಿಯನ್ನು ತಿಳಿದವನೂ ಆಗುತ್ತಾನೆ' ಎಂದು ವೇದವ್ಯಾಸರು ಹೇಳಿದರು.

**ಜ್ಞಾತ್ವಾಽಸ್ಯ ಶೂದ್ರತ್ವಮಥಾಸ್ಯ ಮಾತಾ**
**ಪುನಶ್ಚ ಕೃಷ್ಣಂ ಪ್ರಣತಾ ಯಯಾಚೇ ।**
**ಅಂಬಾಲಿಕಾಯಾಂ ಜನಯಾನ್ಯಮಿತ್ಯಥೋ**
**ನೈಚ್ಛತ್ ಸ ಕೃಷ್ಣೋಽಭವದಪ್ಯದೃಶ್ಯಃ ॥ ೧೩೮ ॥**

**ಪದಚ್ಛೇದ :- ಜ್ಞಾತ್ವಾ ಅಸ್ಯ, ಶೂದ್ರತ್ವಂ, ಅಥ, ಅಸ್ಯ, ಮಾತಾ, ಪುನಃ, ಚ, ಕೃಷ್ಣಂ, ಪ್ರಣತಾ, ಯಯಾಚೇ, ಅಂಬಾಲಿಕಾಯಾಂ, ಜನಯ, ಅನ್ಯಂ, ಇತಿ, ಅಥೋ, ನ, ಐಚ್ಛತ್, ಸಃ, ಕೃಷ್ಣಃ, ಅಭವತ್, ಅಪಿ, ಅದೃಶ್ಯಃ.**

**ಅರ್ಥ** :- **ಅಥ** ಅನಂತರದಲ್ಲಿ **ಅಸ್ಯ** ಈ ವೇದವ್ಯಾಸರ **ಮಾತಾ** ತಾಯಿಯಾದ ಸತ್ಯವತಿಯು **ಅಸ್ಯ** ಈ ವಿದುರನ **ಶೂದ್ರತ್ವಂ** ಶೂದ್ರತ್ವವನ್ನು **ಜ್ಞಾತ್ವಾ** ತಿಳಿದು **ಕೃಷ್ಣಂ** ವೇದವ್ಯಾಸರನ್ನು **ಪ್ರಣತಾ** ನಮಸ್ಕರಿಸಿದವಳಾಗಿ **ಪುನಃ ಚ** ಮತ್ತೆ **ಯಯಾಚೇ** ಬೇಡಿದಳು. **ಅಂಬಾಲಿಕಾಯಾಮ್** ಅಂಬಾಲಿಕೆಯಲ್ಲಿ **ಅನ್ಯಂ** ಬೇರೆ ಮಗನನ್ನು **ಜನಯ** ಹುಟ್ಟಿಸು **ಇತಿ** ಎಂದು. **ಸಃ** ಆ ಯಾವ **ಕೃಷ್ಣಃ** ವೇದವ್ಯಾಸರು **ನ ಐಚ್ಛತ್** ಬಯಸಲಿಲ್ಲ. **ಅಥೋ** ಅನಂತರದಲ್ಲಿ **ಅದೃಶ್ಯಃ ಅಪಿ** ಅದೃಶ್ಯರೂ ಕೂಡ **ಅಭವತ್** ಆದರು.

ತಾತ್ಪರ್ಯ :- ಅನಂತರ ಆ ಸತ್ಯವತಿಯು ವಿದುರನು ಶೂದ್ರನಾಗಿದ್ದಾನೆಂದು ತಿಳಿದು ಮತ್ತೆ ವೇದವ್ಯಾಸರನ್ನು ನಮಸ್ಕರಿಸಿ ಬೇಡಿಕೊಂಡಳು– 'ಅಂಬಾಲಿಕೆಯಲ್ಲಿ ಬೇರೆ ಮಗನನ್ನು ಹುಟ್ಟಿಸು' ಎಂದು. ಆದರೆ ವೇದ ವ್ಯಾಸರು ಅದನ್ನು ಬಯಸಲಿಲ್ಲ. ಆನಂತರ ಅದೃಶ್ಯರೂ ಆಗಿಬಿಟ್ಟರು.

**ಯೋಗ್ಯಾನಿ ಕರ್ಮಾಣಿ ತತಸ್ತು ತೇಷಾಂ**
**ಚಕಾರ ಭೀಷ್ಮೋ ಮುನಿಭಿರ್ಯಥಾವತ್ ।**
**ವಿದ್ಯಾಃ ಸಮಸ್ತಾ ಅದದಾಚ್ಚ ಕೃಷ್ಣಃ**
**ತೇಷಾಂ ಪಾಂಡೋರಸ್ತ್ರಶಸ್ತ್ರಾಣಿ ಭೀಷ್ಮಃ ॥ ೧೩೯ ॥**

ಪದಚ್ಛೇದ :- ಯೋಗ್ಯಾನಿ, ಕರ್ಮಾಣಿ, ತತಃ, ತು, ತೇಷಾಂ, ಚಕಾರ, ಭೀಷ್ಮಃ, ಮುನಿಭಿಃ, ಯಥಾವತ್, ವಿದ್ಯಾಃ, ಸಮಸ್ತಾಃ, ಅದದಾತ್, ಚ, ಕೃಷ್ಣಃ, ತೇಷಾಂ, ಪಾಂಡೋಃ, ಅಸ್ತ್ರಶಸ್ತ್ರಾಣಿ, ಭೀಷ್ಮಃ.

ಅರ್ಥ :- **ತತಃ** ಅನಂತರ **ತೇಷಾಂ** ಆ ಮಕ್ಕಳಿಗೆ **ಯೋಗ್ಯಾನಿ** ಯೋಗ್ಯಗಳಾದ **ಕರ್ಮಾಣಿ ತು** ನಾಮಕರಣ ಮೊದಲಾದ ಕರ್ಮಗಳ ನ್ನಾದರೂ **ಭೀಷ್ಮಃ** ಭೀಷ್ಮನು **ಮುನಿಭಿಃ** ಮುನಿಗಳಿಂದ **ಯಥಾವತ್** ಶಾಸ್ತ್ರೋಕ್ತ ವಾಗಿ **ಚಕಾರ** ಮಾಡಿಸಿದನು. **ಕೃಷ್ಣಃ** ವೇದವ್ಯಾಸರು **ತೇಷಾಂ** ಅವರಿಗೆ **ಸಮಸ್ತಾಃ** ಎಲ್ಲಾ **ವಿದ್ಯಾಃ** ವಿದ್ಯೆಗಳನ್ನು **ಅದಾತ್** ಕೊಟ್ಟರು. **ಭೀಷ್ಮಃ** ಭೀಷ್ಮನು **ಪಾಂಡೋಃ** ಪಾಂಡುವಿಗೆ **ಅಸ್ತ್ರಶಸ್ತ್ರಾಣಿ** ಅಸ್ತ್ರ ಶಸ್ತ್ರಗಳನ್ನು **ಅದಾತ್** ಕೊಟ್ಟನು.

**ತಾತ್ಪರ್ಯ** :- ಅನಂತರ ಆ ಮಕ್ಕಳಿಗೆ ಯೋಗ್ಯವಾದ ಜಾತಕರ್ಮ ಮೊದಲಾದ ಕರ್ಮಗಳನ್ನು ಭೀಷ್ಮನು ಮುನಿಗಳಿಂದ ಶಾಸ್ತ್ರೋಕ್ತವಾಗಿ ಮಾಡಿಸಿದನು. ವೇದವ್ಯಾಸರು ಆ ಮಕ್ಕಳಿಗೆ ಎಲ್ಲ ವಿದ್ಯೆಗಳನ್ನು ಉಪದೇಶಿಸಿ ದರು. ಭೀಷ್ಮನು ಪಾಂಡುವಿಗೆ ಅಸ್ತ್ರಶಸ್ತ್ರಗಳನ್ನೂ ಉಪದೇಶಿಸಿದನು.

**ತೇ ಸರ್ವವಿದ್ಯಾಪ್ರವರಾ ಬಭೂವುಃ**
**ವಿಶೇಷತೋ ವಿದುರಃ ಸರ್ವವೇತ್ತಾ ।**
**ಪಾಂಡುಃ ಸಮಸ್ತಾಸ್ತ್ರವಿದೇಕವೀರೋ**
**ಜಿಗಾಯ ಪೃಥ್ವೀಮಖಿಲಾಂ ಧನುರ್ಧರಃ ॥ ೧೪೦ ॥**

ಪದಚ್ಛೇದ :- ತೇ, ಸರ್ವವಿದ್ಯಾಪ್ರವರಾಃ, ಬಭೂವುಃ, ವಿಶೇಷತಃ, ವಿದುರಃ, ಸರ್ವವೇತ್ತಾ, ಪಾಂಡುಃ, ಸಮಸ್ತಾಸ್ತ್ರವಿತ್, ಏಕವೀರಃ, ಜಿಗಾಯ, ಪೃಥ್ವೀಂ, ಅಖಿಲಾಂ, ಧನುರ್ಧರಃ.

ಅರ್ಥ :- **ತೇ** ಆ ಮಕ್ಕಳು **ಸರ್ವವಿದ್ಯಾಪ್ರವರಾಃ** ಎಲ್ಲ ವಿದ್ಯೆ ಗಳಲ್ಲಿಯೂ ಪ್ರವೀಣರು **ಬಭೂವುಃ** ಆದರು. **ವಿಶೇಷತಃ** ವಿಶೇಷವಾಗಿ **ವಿದುರಃ** ವಿದುರನು **ಸರ್ವವೇತ್ತಾ** ಎಲ್ಲವನ್ನೂ ತಿಳಿದವನಾದ. **ಸಮಸ್ತಾಸ್ತ್ರವಿತ್** ಎಲ್ಲ ಅಸ್ತ್ರಗಳನ್ನೂ ತಿಳಿದ **ಏಕವೀರಃ** ಅಸದೃಶವೀರನೆನಿಸಿದ **ಪಾಂಡುಃ** ಪಾಂಡುರಾಜನು **ಧನುರ್ಧರಃ** ಧನುಸ್ಸನ್ನು ಧರಿಸಿದವನಾಗಿ **ಅಖಿಲಾಂ** ಸಮಸ್ತವಾದ **ಪೃಥ್ವೀಂ** ಭೂಮಿಯನ್ನು **ಜಿಗಾಯ** ಗೆದ್ದನು.

**ತಾತ್ಪರ್ಯ** :- ಆ ಮಕ್ಕಳು ಎಲ್ಲ ವಿದ್ಯೆಗಳಲ್ಲಿಯೂ ಪ್ರವೀಣರಾದರು. ವಿಶೇಷವಾಗಿ ವಿದುರನು ಸರ್ವಜ್ಞನೆನಿಸಿದ. ಎಲ್ಲ ಅಸ್ತ್ರಗಳನ್ನು ತಿಳಿದ ಪಾಂಡುರಾಜನು ಅಸದೃಶವೀರನೆನಿಸಿ ಧನುರ್ಧಾರಿಯಾಗಿ ಎಲ್ಲ ಭೂಮಿಯನ್ನು ಗೆದ್ದನು.

**ಗವಲ್ಗಣಾದಾಸ ತಥೈವ ಸೂತಾತ್**
**ಸಮಸ್ತಗಂಧರ್ವಪತಿಃ ಸ ತುಂಬುರುಃ ।**
**ಯ ಉದ್ವಹೋ ನಾಮ ಮರುತ್ ತದಂಶ-**
**ಯುಕ್ತೋ ವಶೀ ಸಂಜಯನಾಮಧೇಯಃ ॥ ೧೪೧ ॥**

**ಪದಚ್ಛೇದ** :- ಗವಲ್ಗಣಾತ್, ಆಸ, ತಥಾ, ಏವ, ಸೂತಾತ್, ಸಮಸ್ತಗಂಧರ್ವಪತಿಃ, ಸಃ, ತುಂಬುರುಃ, ಯಃ, ಉದ್ವಹಃ, ನಾಮ, ಮರುತ್, ತದಂಶಯುಕ್ತಃ, ವಶೀ, ಸಂಜಯನಾಮಧೇಯಃ.

**ಅರ್ಥ** :- **ಯಃ** ಯಾವ **ಉದ್ವಹಃ ನಾಮ** ಉದ್ವಹನೆಂದು ಪ್ರಸಿದ್ಧನಾದ **ಮರುತ್** ಮರುತ್ತು ದೇವತೆಯಿದ್ದಾನೋ **ತದಂಶಯುಕ್ತಃ** ಅವನ ಅಂಶದಿಂದ ಕೂಡಿದ **ಸಃ** ಆ ಯಾವ **ಸಮಸ್ತಗಂಧರ್ವಪತಿಃ** ಎಲ್ಲ ಗಂಧರ್ವರಿಗೂ ಒಡೆಯನಾದ **ತುಂಬುರುಃ** ತುಂಬುರುವು **ಗವಲ್ಗಣಾತ್** ಗವಲ್ಗಣನೆಂಬ ಸೂತನಿಂದ **ಸಂಜಯನಾಮಧೇಯಃ** ಸಂಜಯನೆಂಬ ಹೆಸರುಳ್ಳವನಾಗಿ **ವಶೀ** ಜಿತೇಂದ್ರಿಯನಾಗಿ **ಆಸ** ಹುಟ್ಟಿದನು.

**ತಾತ್ಪರ್ಯ** :- ಉದ್ವಹನೆಂಬ ಮರುತ್ತು ದೇವತೆಯ ಅಂಶದಿಂದ ಕೂಡಿದ ಎಲ್ಲ ಗಂಧರ್ವರಿಗೆ ಒಡೆಯನಾದ ತುಂಬುರುವು ಗವಲ್ಗಣನೆಂಬ ಸೂತನಿಂದ ಸಂಜಯನೆಂಬ ಹೆಸರಿನಿಂದ ಹುಟ್ಟಿದ. ಜಿತೇಂದ್ರಿಯನೂ ಆಗಿದ್ದನು.

**ವಿಚಿತ್ರವೀರ್ಯಸ್ಯ ಸ ಸೂತಪುತ್ರಃ**
**ಸಖಾ ಚ ತೇಷಾಮಭವತ್ ಪ್ರಿಯಶ್ಚ ।**
**ಸಮಸ್ತವಿನ್ನತಿಮಾನ್ ವ್ಯಾಸಶಿಷ್ಯೋ**
**ವಿಶೇಷತೋ ಧೃತರಾಷ್ಟ್ರಾನುವರ್ತೀ ॥ ೧೪೨ ॥**

**ಪದಚ್ಛೇದ** :- ವಿಚಿತ್ರವೀರ್ಯಸ್ಯ, ಸಃ, ಸೂತಪುತ್ರಃ, ಸಖಾ, ಚ, ತೇಷಾಂ, ಅಭವತ್, ಪ್ರಿಯಃ, ಚ, ಸಮಸ್ತವಿತ್, ಮತಿಮಾನ್, ವ್ಯಾಸಶಿಷ್ಯಃ, ವಿಶೇಷತಃ, ಧೃತರಾಷ್ಟ್ರಾನುವರ್ತೀ.

**ಅರ್ಥ** :- **ವಿಚಿತ್ರವೀರ್ಯಸ್ಯ** ವಿಚಿತ್ರವೀರ್ಯನ **ಸೂತಪುತ್ರಃ** ಸಾರಥಿಯಾದ ಗವಲ್ಗಣನ ಮಗನಾದ **ಸಃ** ಆ ಸಂಜಯನು **ತೇಷಾಂ** ಆ ಧೃತರಾಷ್ಟ್ರ, ಪಾಂಡು, ವಿದುರರಿಗೆ **ಪ್ರಿಯಃ** ಪ್ರಿಯನಾದ **ಸಖಃ** ಸ್ನೇಹಿತನು **ಚ** ಮತ್ತು **ಸಮಸ್ತವಿತ್** ಎಲ್ಲವನ್ನೂ ತಿಳಿದವನು **ಮತಿಮಾನ್** ಬುದ್ಧಿವಂತನು **ವ್ಯಾಸಶಿಷ್ಯಃ** ವೇದವ್ಯಾಸರ ಶಿಷ್ಯನು **ವಿಶೇಷತಃ** ವಿಶೇಷವಾಗಿ **ಧೃತರಾಷ್ಟ್ರಾನುವರ್ತೀ** ಧೃತರಾಷ್ಟ್ರನನ್ನು ಅನುಸರಿಸಿಕೊಂಡಿರುವವನು **ಅಭವತ್** ಆದನು.

**ತಾತ್ಪರ್ಯ** :- ವಿಚಿತ್ರವೀರ್ಯನ ಸಾರಥಿಯಾದ ಗವಲ್ಗಣನ ಮಗನಾದ ಸಂಜಯನು ಧೃತರಾಷ್ಟ್ರ, ಪಾಂಡು, ವಿದುರರಿಗೆ ಪ್ರಿಯಸ್ನೇಹಿತನಾಗಿದ್ದನು. ಮತ್ತು ಸಮಸ್ತವನ್ನು ತಿಳಿದವನು. ಬುದ್ಧಿವಂತನು. ವೇದವ್ಯಾಸರ ಶಿಷ್ಯನು. ಎಲ್ಲಕ್ಕಿಂತಲೂ ಹೆಚ್ಚಾಗಿ ಧೃತರಾಷ್ಟ್ರನನ್ನು ಅನುಸರಿಸಿಕೊಂಡಿದ್ದನು.

**ಗಾಂಧಾರರಾಜಸ್ಯ ಸುತಾಮುವಾಹ**
**ಗಾಂಧಾರಿನಾಮ್ನೀಂ ಸುಬಲಸ್ಯ ರಾಜಾ ।**
**ಜ್ಯೇಷ್ಠೋ ಜ್ಯೇಷ್ಠಾಂ ಶಕುನೇರ್ದ್ವಾಪರಸ್ಯ**
**ನಾಸ್ತಿಕ್ಯರೂಪಸ್ಯ ಕುಕರ್ಮಹೇತೋಃ ॥ ೧೪೩ ॥**

**ಪದಚ್ಛೇದ** :- ಗಾಂಧಾರರಾಜಸ್ಯ, ಸುತಾಂ, ಉವಾಹ, ಗಾಂಧಾರಿನಾಮ್ನೀಂ, ಸುಬಲಸ್ಯ, ರಾಜಾ, ಜ್ಯೇಷ್ಠಃ, ಜ್ಯೇಷ್ಠಾಂ, ಶಕುನೇಃ, ದ್ವಾಪರಸ್ಯ, ನಾಸ್ತಿಕ್ಯರೂಪಸ್ಯ, ಕುಕರ್ಮಹೇತೋಃ

**ಅರ್ಥ** :- **ಜ್ಯೇಷ್ಠಃ** ಹಿರಿಯನಾದ **ರಾಜಾ** ರಾಜನಾದ ಧೃತರಾಷ್ಟ್ರನು **ಗಾಂಧಾರರಾಜಸ್ಯ** ಗಾಂಧಾರದೇಶದ ರಾಜನಾದ **ಸುಬಲಸ್ಯ** ಸುಬಲನ **ಸುತಾಂ** ಮಗಳಾದ **ನಾಸ್ತಿಕ್ಯರೂಪಸ್ಯ** ನಾಸ್ತಿಕ್ಯದ ಪ್ರಸಾರಕನಾದ **ಕುಕರ್ಮಹೇತೋಃ** ಕೆಟ್ಟ ಕಾರ್ಯಗಳಿಗೆ ಪ್ರೇರಕನಾದ **ದ್ವಾಪರಸ್ಯ** ದ್ವಾಪರನ ಅವತಾರ ನೆನಿಸಿದ **ಶಕುನೇಃ** ಶಕುನಿಯ **ಜ್ಯೇಷ್ಠಾಂ** ಹಿರಿಯಳಾದ **ಗಾಂಧಾರಿನಾಮ್ನೀಂ** ಗಾಂಧಾರಿ ಎಂಬ ಹೆಸರಿನವಳನ್ನು **ಉವಾಹ** ಮದುವೆಯಾದನು.

ತಾತ್ಪರ್ಯ :- ಹಿರಿಯನು ಮತ್ತು ರಾಜನು ಆದ ಧೃತರಾಷ್ಟ್ರನು ಗಾಂಧಾರದೇಶದ ರಾಜನಾದ ಸುಬಲನ ಮಗಳಾದ ಗಾಂಧಾರಿಯನ್ನು ಮದುವೆಯಾದನು. ಅವಳು ನಾಸ್ತಿಕ್ಯಮತದ ಪ್ರಚಾರಕನಾದ, ಎಲ್ಲ ಕೆಟ್ಟ ಕೆಲಸಗಳಿಗೆ ಪ್ರೇರಕನಾದ ದ್ವಾಪರನೆಂಬ ದೈತ್ಯನ ಅವತಾರನಾದ ಶಕುನಿಗೆ ಹಿರಿಯ ಸೋದರಿಯಾಗಿದ್ದಳು.

**ಶೂರಸ್ಯ ಪುತ್ರೀ ಗುಣಶೀಲರೂಪ-**
**ಯುಕ್ತಾ ದತ್ತಾ ಸಖ್ಯುರೇವ ಸ್ವಪಿತ್ರಾ ।**
**ನಾಮ್ನಾ ಪೃಥಾ ಕುಂತಿಭೋಜಸ್ಯ ತೇನ**
**ಕುಂತೀ ಭಾರ್ಯಾ ಪೂರ್ವದೇಹೇಽಪಿ ಪಾಂಡೋಃ ॥ ೧೪೪ ॥**

ಪದಚ್ಛೇದ :– **ಶೂರಸ್ಯ, ಪುತ್ರೀ, ಗುಣಶೀಲರೂಪಯುಕ್ತಾ, ದತ್ತಾ, ಸಖ್ಯುಃ, ಏವ, ಸ್ವಪಿತ್ರಾ, ನಾಮ್ನಾ, ಪೃಥಾ, ಕುಂತಿಭೋಜಸ್ಯ, ತೇನ, ಕುಂತೀ, ಭಾರ್ಯಾ, ಪೂರ್ವದೇಹೇ, ಅಪಿ, ಪಾಂಡೋಃ.**

**ಅರ್ಥ** :- **ಶೂರಸ್ಯ** ಶೂರರಾಜನ ಮಗಳಾದ **ಗುಣಶೀಲ ರೂಪಯುಕ್ತಾ** ಗುಣ, ನಡತೆ, ಸೌಂದರ್ಯಗಳಿಂದ ಕೂಡಿದ **ನಾಮ್ನಾ** ಹೆಸರಿನಿಂದ **ಪೃಥಾ** ಪೃಥೆಯೆಂದು ಪ್ರಸಿದ್ಧಳಾದ **ಸ್ವಪಿತ್ರಾ** ತನ್ನ ತಂದೆಯಿಂದ **ಸಖ್ಯುಃ** ಸ್ನೇಹಿತನಾದ **ಕುಂತಿಭೋಜಸ್ಯ ಏವ** ಕುಂತಿಭೋಜನಿಗೇ **ದತ್ತಾ** ಕೊಡಲ್ಪಟ್ಟಳು. **ತೇನ** ಅದರಿಂದ **ಕುಂತೀ** ಕುಂತೀ ಎಂದು ಪ್ರಸಿದ್ಧಳಾದ ಅವಳು **ಪೂರ್ವದೇಹೇ ಅಪಿ** ಹಿಂದಿನ ಜನ್ಮದಲ್ಲಿಯೂ **ಪಾಂಡೋಃ** ಪಾಂಡುವಿನ **ಪತ್ನೀ** ಹೆಂಡತಿಯು **(ಬಭೂವ)** ಆಗಿದ್ದಳು

ತಾತ್ಪರ್ಯ :- ಶೂರಸೇನ ರಾಜನ ಮಗಳಾದ ಪೃಥೆಯು ಗುಣ, ನಡತೆ, ಸೌಂದರ್ಯಗಳಿಂದ ಕೂಡಿದ್ದಳು. ಅವಳನ್ನು ತಂದೆಯೇ ತನ್ನ ಸ್ನೇಹಿತನಾದ ಕುಂತಿಭೋಜನಿಗೆ ದತ್ತು ಕೊಟ್ಟನು. ಅದರಿಂದ ಅವಳು ಕುಂತಿ ಎಂದು ಪ್ರಸಿದ್ಧಳಾದಳು. ಹಿಂದಿನ ಜನ್ಮದಲ್ಲಿ ಪಾಂಡುವಿನ ಹೆಂಡತಿಯೇ ಆಗಿದ್ದಳು. ಅಂದರೆ ಪರಾವಹನೆಂಬ ಮರುತ್ತಿನ ಹೆಂಡತಿಯಾಗಿದ್ದಳು

ಕೂರ್ಮಶ್ಚ ನಾಮ್ನಾ ಮರುದೇವ ಕುಂತಿ-
ಭೋಜೋಽಥೈನಾಂ ವರ್ಧಯಾಮಾಸ ಸಮ್ಯಕ್ ।
ತತ್ರಾಽಗಮಚ್ಛಂಕರಾಂಶೋಽತಿಕೋಪೋ
ದುರ್ವಾಸಾಸ್ತಂ ಪ್ರಾಹ ಮಾಂ ವಾಸಯೇತಿ ॥ ೧೪೫ ॥

ಪದಚ್ಛೇದ :- ಕೂರ್ಮಃ, ಚ, ನಾಮ್ನಾ, ಮರುತ್, ಏವ, ಕುಂತಿಭೋಜಃ, ಅಥ, ಏನಾಂ, ವರ್ಧಯಾಮಾಸ, ಸಮ್ಯಕ್, ತತ್ರ, ಆಗಮತ್, ಶಂಕರಾಂಶಃ, ಅತಿಕೋಪಃ, ದುರ್ವಾಸಾಃ, ತಂ, ಪ್ರಾಹ, ಮಾಂ, ವಾಸಯ, ಇತಿ.

**ಅರ್ಥ** :- **ನಾಮ್ನಾ** ಹೆಸರಿನಿಂದ **ಕೂರ್ಮಃ** ಕೂರ್ಮನೆಂಬ **ಮರುತ್** ಏವ ಮರುತ್ತು ದೇವತೆಯೇ ಆದ **ಕುಂತಿಭೋಜಃ ಚ** ಕುಂತಿಭೋಜನಾದರೂ **ಅಥ** ಅನಂತರದಲ್ಲಿ **ಏನಾಂ** ಈ ಕುಂತಿಯನ್ನು **ಸಮ್ಯಕ್** ಚೆನ್ನಾಗಿ **ವರ್ಧಯಾಮಾಸ** ಬೆಳೆಸಿದನು. **ತತ್ರ** ಅಲ್ಲಿಗೆ **ಶಂಕರಾಂಶಃ** ರುದ್ರಾಂಶರಾದ **ಅತಿಕೋಪಃ** ಬಹಳ ಕೋಪಿಷ್ಠರಾದ **ದುರ್ವಾಸಾಃ** ದುರ್ವಾಸರು **ಆಗಮತ್** ಬಂದರು. **ಮಾಂ** ನನ್ನನ್ನು (ನನಗೆ) **ವಾಸಯ** ವಾಸಮಾಡಿಸು (ವಾಸಕ್ಕೆ ಏರ್ಪಾಟು ಮಾಡು) ಇತಿಎಂದು **ಪ್ರಾಹ** ಹೇಳಿದರು.

**ತಾತ್ಪರ್ಯ** :- ಕುಂತಿಭೋಜನು ಕೂರ್ಮನೆಂಬ ಮರುತ್ತು ದೇವತೆಯೇ ಆಗಿದ್ದನು. ಅವನು ನಂತರ ಕುಂತಿಯನ್ನು ಚೆನ್ನಾಗಿ ಬೆಳೆಸಿದನು. ಅಲ್ಲಿಗೆ ತುಂಬಾ ಕೋಪಿಷ್ಠರಾದ, ರುದ್ರಾಂಶರಾದ ದುರ್ವಾಸರು ಆಗಮಿಸಿದರು. ನನ್ನ ವಾಸಕ್ಕೆ ಏರ್ಪಾಟು ಮಾಡು ಎಂದು ಹೇಳಿದರು.

ತಮಾಹ ರಾಜಾ ಯದಿ ಕನ್ಯಕಾಯಾಃ
ಕ್ಷಮಿಷ್ಯಸೇ ಶಕ್ತಿತಃ ಕರ್ಮಕರ್ತ್ರ್ಯಾಃ ।
ಸುಖಂ ವಸೇತ್ಯೋಮಿತಿ ತೇನ ಚೋಕ್ತಃ
ಶುಶ್ರೂಷಣಾಯಾಽದಿಶದಾಶು ಕುಂತೀಮ್ ॥ ೧೪೬ ॥

ಪದಚ್ಛೇದ :- ತಂ, ಆಹ, ರಾಜಾ, ಯದಿ, ಕನ್ಯಕಾಯಾಃ, ಕ್ಷಮಿಷ್ಯಸೇ, ಶಕ್ತಿತಃ, ಕರ್ಮಕರ್ತ್ರ್ಯಾಃ ಸುಖಂ, ವಸ, ಇತಿ, ಓಂ, ಇತಿ, ತೇನ, ಚ, ಉಕ್ತಃ, ಶುಶ್ರೂಷಣಾಯ, ಆದಿಶತ್, ಆಶು, ಕುಂತೀಮ್.

**ಅರ್ಥ** :- **ರಾಜಾ** ರಾಜನಾದ **ಕುಂತಿಭೋಜನು** **ತಂ** ಆ ದುರ್ವಾಸರನ್ನು ಕುರಿತು **ಆಹ** ಹೇಳಿದನು. **ಶಕ್ತಿತಃ** ಶಕ್ತಿಗೆ ಅನುಸಾರವಾಗಿ **ಕರ್ಮಕರ್ತ್ರ್ಯಾಃ** ಸೇವೆಯನ್ನು ಮಾಡುವ **ಕನ್ಯಕಾಯಾಃ** ಮಗಳ (ಅಪರಾಧವನ್ನು) **ಕ್ಷಮಿಷ್ಯಸೇ** ಸಹಿಸುತ್ತಿಯಾದರೆ **ಸುಖಂ** ಸುಖವಾಗಿ **ವಸ** ವಾಸಮಾಡು **ಇತಿ** ಎಂದು. **ತೇನ ಚ** ಆ ದುರ್ವಾಸರಿಂದಲೂ **ಓಂ ಇತಿ** ಹಾಗೆಯೇ ಆಗಲಿ ಎಂದು **ಉಕ್ತಃ** ಹೇಳಲ್ಪಟ್ಟ **(ಸಃ)** ಆ ರಾಜನು **ಆಶು** ಕೂಡಲೇ **ಶುಶ್ರೂಷಣಾಯ** ಸೇವೆ ಮಾಡುವುದಕ್ಕೆ **ಕುಂತೀಂ** ಕುಂತಿಯನ್ನು **ಆದಿಶತ್** ಅಪ್ಪಣೆ ಮಾಡಿದನು.

**ತಾತ್ಪರ್ಯ** :- ರಾಜನಾದ ಕುಂತಿಭೋಜನು ದುರ್ವಾಸರಿಗೆ ಹೇಳಿದ– 'ನನ್ನ ಮಗಳು ನಿನ್ನನ್ನು ಶಕ್ತ್ಯನುಸಾರ ಸೇವಿಸುತ್ತಾಳೆ. ಅವಳ ಅಪರಾಧವನ್ನು ಕ್ಷಮಿಸುತ್ತಿಯೆಂದಾದರೆ ಸುಖವಾಗಿ ವಾಸಮಾಡು' ಎಂದು. ದುರ್ವಾಸರು ಹಾಗೆಯೇ ಆಗಲಿ ಎಂದಾಗ ರಾಜನು ಸೇವೆ ಮಾಡುವುದಕ್ಕೆ ತನ್ನ ಮಗಳಿಗೆ ಅಪ್ಪಣೆ ಮಾಡಿದನು.

**ಚಕಾರ ಕರ್ಮ ಸಾ ಪೃಥಾ ಮುನೇಃ ಸುಕೋಪನಸ್ಯ ಹಿ ।**
**ಯಥಾ ನ ಶಕ್ಯತೇ ಪರೈಃ ಶರೀರವಾಙ್ಮನೋನುಗಾ ॥ ೧೪೭ ॥**

**ಪದಚ್ಛೇದ** :– **ಚಕಾರ, ಕರ್ಮ, ಸಾ, ಪೃಥಾ, ಮುನೇಃ, ಸುಕೋಪನಸ್ಯ, ಹಿ, ಯಥಾ, ನ, ಶಕ್ಯತೇ, ಪರೈಃ, ಶರೀರವಾಙ್ಮನೋನುಗಾ.**

**ಅರ್ಥ** :- **ಸಾ** ಆ ಯಾವ **ಪೃಥಾ** ಕುಂತಿಯು **ಸುಕೋಪನಸ್ಯ** ಬಹಳ ಕೋಪಿಷ್ಠನಾದ **ಮುನೇಃ** ದುರ್ವಾಸಮುನಿಯ **ಕರ್ಮ** ಸೇವೆಯನ್ನು **ಯಥಾ** ಹೇಗೆ **ಪರೈಃ** ಬೇರೆಯವರಿಂದ **ನ ಶಕ್ಯತೇ** ಮಾಡಲು ಸಾಧ್ಯವಾಗುವುದಿಲ್ಲವೋ **ತಥಾ** ಹಾಗೆ **ಶರೀರವಾಙ್ಮನೋನುಗಾ** ಶರೀರ, ಮಾತು, ಮನಸ್ಸುಗಳನ್ನು ಅನುಸರಿಸುವವಳಾಗಿ **ಚಕಾರ** ಮಾಡಿದಳು.

**ತಾತ್ಪರ್ಯ** :- ಕುಂತಿಯು ಬಹಳ ಕೋಪಿಷ್ಠನಾದ ದುರ್ವಾಸಮುನಿಗೆ ಶರೀರ, ಮಾತು, ಮನಸ್ಸುಗಳನ್ನು ಅನುಸರಿಸಿಕೊಂಡು ಬೇರೆಯವರು ಮಾಡಲು ಸಾಧ್ಯವಿಲ್ಲದಂತಹ ಸೇವೆಯನ್ನು ಮಾಡಿದಳು.

**ಸ ವತ್ಸರತ್ರಯೋದಶಂ ತಯಾ ಯಥಾವದರ್ಚಿತಃ ।
ಉಪಾದಿಶತ್ ಪರಂ ಮನುಂ ಸಮಸ್ತದೇವವಶ್ಯದಮ್ ॥ ೧೪೮ ॥**

ಪದಚ್ಛೇದ :- ಸಃ, ವತ್ಸರತ್ರಯೋದಶಂ, ತಯಾ, ಯಥಾವತ್, ಅರ್ಚಿತಃ, ಉಪಾದಿಶತ್, ಪರಂ, ಮನುಂ, ಸಮಸ್ತದೇವವಶ್ಯದಮ್.

**ಅರ್ಥ** :- **ವತ್ಸರತ್ರಯೋದಶಂ** ಹದಿಮೂರುವರ್ಷದವರೆಗೆ **ಯಥಾವತ್** ಕ್ರಮಮೀರದಂತೆ **ತಯಾ** ಆ ಕುಂತಿಯಿಂದ **ಅರ್ಚಿತಃ** ಪೂಜಿಸಲ್ಪಟ್ಟ **ಸಃ** ಆ ದುರ್ವಾಸಮುನಿಯು **ಸಮಸ್ತದೇವವಶ್ಯದಂ** ಎಲ್ಲ ದೇವತೆಗಳನ್ನು ವಶೀಕರಿಸುವ ಶಕ್ತಿಯನ್ನು ಕೊಡುವ **ಪರಂ** ಉತ್ತಮವಾದ **ಮನುಂ** ಮಂತ್ರವನ್ನು **ಉಪಾದಿಶತ್** ಉಪದೇಶಿಸಿದನು.

**ತಾತ್ಪರ್ಯ** :- ಕುಂತಿಯು ಹದಿಮೂರು ವರ್ಷದವರೆಗೆ ಚೆನ್ನಾಗಿ ಸೇವಿಸಿದಳು. ಆದರಿಂದ ಸಂತೋಷಗೊಂಡ ದುರ್ವಾಸ ಮುನಿಯು ಎಲ್ಲ ದೇವತೆಗಳನ್ನು ವಶಪಡಿಸಿಕೊಳ್ಳಬಲ್ಲ ಉತ್ತಮವಾದ ಮಂತ್ರವನ್ನು ಉಪದೇಶಿಸಿದ.

**ಋತೌ ತು ಸಾ ಸಮಾಪ್ಲುತಾ ಪರೀಕ್ಷಣಾಯ ತನ್ಮನೋಃ ।
ಸಮಾಹ್ವಯದ್ದಿವಾಕರಂ ಸ ಚಾಽಜಗಾಮ ತತ್ಕ್ಷಣಾತ್ ॥ ೧೪೯ ॥**

ಪದಚ್ಛೇದ :- ಋತೌ, ತು, ಸಾ, ಸಮಾಪ್ಲುತಾ, ಪರೀಕ್ಷಣಾಯ, ತನ್ಮನೋಃ, ಸಮಾಹ್ವಯತ್, ದಿವಾಕರಂ, ಸಃ, ಚ, ಆಜಗಾಮ, ತತ್ಕ್ಷಣಾತ್.

**ಅರ್ಥ** :- **ಋತೌ** ಋತುಕಾಲದಲ್ಲಿ **ಸಮಾಪ್ಲುತಾ** ಸುಸ್ನಾತಳಾದ **ಸಾ ತು** ಆ ಕುಂತಿಯಾದರೂ **ತನ್ಮನೋಃ** ದುರ್ವಾಸರು ಉಪದೇಶಿಸಿದ ಆ ಮಂತ್ರದ **ಪರೀಕ್ಷಣಾಯ** ಪರೀಕ್ಷೆಗಾಗಿ **ದಿವಾಕರಂ** ಸೂರ್ಯನನ್ನು **ಸಮಾಹ್ವಯತ್** ಕರೆದಳು **ಸಃ ಚ** ಆ ಸೂರ್ಯನಾದರೂ **ತತ್ಕ್ಷಣಾತ್** ಆ ಕ್ಷಣದಲ್ಲಿಯೇ **ಆಜಗಾಮ** ಬಂದನು.

**ತಾತ್ಪರ್ಯ** :- ಕುಂತಿಯು ಋತುಕಾಲದಲ್ಲಿ ಸ್ನಾನವನ್ನು ಮಾಡಿ ದುರ್ವಾಸರು ಉಪದೇಶಿಸಿದ ಮಂತ್ರವನ್ನು ಪರೀಕ್ಷಿಸುವುದಕ್ಕಾಗಿ ಸೂರ್ಯನನ್ನು ಕರೆದಳು. ಕೂಡಲೇ ಸೂರ್ಯನು ಅಲ್ಲಿಗೆ ಬಂದನು.

ತತೋ ನ ಸಾ ವಿಸರ್ಜಿತುಂ ಶಶಾಕ ತಂ ವಿನಾ ರತಿಮ್ ।
ಸುವಾಕ್ಯಯತ್ನತೋಽಪಿ ತಾಮಥಾಽಸಸಾದ ಭಾಸ್ಕರಃ ॥ ೧೫೦ ॥

ಪದಚ್ಛೇದ :- ತತಃ, ನ, ಸಾ, ವಿಸರ್ಜಿತುಂ, ಶಶಾಕ, ತಂ, ವಿನಾ, ರತಿಂ, ಸುವಾಕ್ಯಯತ್ನತಃ, ಅಪಿ, ತಾಂ, ಅಥ, ಆಸಸಾದ, ಭಾಸ್ಕರಃ.

**ಅರ್ಥ** :- **ತತಃ** ಅನಂತರ **ಸಾ** ಆ ಕುಂತಿಯು **ಸುವಾಕ್ಯಯತ್ನತಃ ಅಪಿ** ಒಳ್ಳೆಯ ಮಾತುಗಳಿಂದ ಮಾಡಿದಪ್ರಾರ್ಥನೆಯ ಪ್ರಯತ್ನದಿಂದಲೂ **ರತಿಂ ವಿನಾ** ರತಿಕ್ರೀಡೆಯಿಲ್ಲದೇ **ತಂ** ಆ ಸೂರ್ಯನನ್ನು **ವಿಸರ್ಜಿತುಂ** ಹಿಂದೆ ಕಳಿಸಲು **ನ ಶಶಾಕ** ಸಮರ್ಥಳಾಗಲಿಲ್ಲ **ಅಥ** ಅನಂತರ **ಭಾಸ್ಕರಃ** ಸೂರ್ಯನು **ತಾಂ** ಆ ಕುಂತಿಯನ್ನು **ಆಸಸಾದ** ಕೂಡಿದನು.

**ತಾತ್ಪರ್ಯ** :- ಒಳ್ಳೆ ಮಾತುಗಳಿಂದ ಪ್ರಾರ್ಥಿಸಿ ಪ್ರಯತ್ನಿಸಿದರೂ ಕುಂತಿಯು ಸೂರ್ಯನನ್ನು ರತಿಕ್ರೀಡೆಯಿಲ್ಲದೇ ಹಿಂದೆ ಕಳಿಸಲು ಸಮರ್ಥಳಾಗಲಿಲ್ಲ. ಬಳಿಕ ಸೂರ್ಯನು ಕುಂತಿಯನ್ನು ಕೂಡಿದ.

ಸ ತತ್ರ ಜಜ್ಞಿವಾನ್ ಸ್ವಯಂ ದ್ವಿತೀಯರೂಪಕೋ ವಿಭುಃ ।
ಸವರ್ಮದಿವ್ಯಕುಂಡಲೋ ಜ್ವಲನ್ನಿವ ಸ್ವತೇಜಸಾ ॥ ೧೫೧ ॥

ಪದಚ್ಛೇದ :- ಸಃ, ತತ್ರ, ಜಜ್ಞಿವಾನ್, ಸ್ವಯಂ, ದ್ವಿತೀಯರೂಪಕಃ, ವಿಭುಃ, ಸವರ್ಮದಿವ್ಯಕುಂಡಲಃ, ಜ್ವಲನ್, ಇವ, ಸ್ವತೇಜಸಾ.

**ಅರ್ಥ** :- **ಸವರ್ಮದಿವ್ಯಕುಂಡಲಃ** ಕವಚ ಮತ್ತು ದಿವ್ಯಕುಂಡಲಗಳಿಂದ ಸಹಿತನಾದ **ಸ್ವತೇಜಸಾ** ತನ್ನ ಕಾಂತಿಯಿಂದ **ಜ್ವಲನ್ ಇವ** ಜ್ವಲಿಸುತ್ತಿರುವನೋ ಎಂಬಂತಿರುವ **ವಿಭುಃ** ಸಮರ್ಥನಾದ **ಸಃ** ಆ ಸೂರ್ಯನು **ಸ್ವಯಂ** ತಾನೇ **ದ್ವಿತೀಯರೂಪಕಃ** ಎರಡನೆಯ ರೂಪವುಳ್ಳವನಾಗಿ **ತತ್ರ** ಆ ಕುಂತಿಯಲ್ಲಿ **ಜಜ್ಞಿವಾನ್** ಹುಟ್ಟಿದನು.

**ತಾತ್ಪರ್ಯ** :- ಕವಚ ಮತ್ತು ದಿವ್ಯಕುಂಡಲಗಳನ್ನು ಧರಿಸಿದ, ತನ್ನ ಕಾಂತಿಯಿಂದ ಜ್ವಲಿಸುವಂತಿರುವ ಸಮರ್ಥನಾದ ಸೂರ್ಯನು ಎರಡನೆಯ ರೂಪವನ್ನು ಸ್ವೀಕರಿಸಿ ಆ ಕುಂತಿಯಲ್ಲಿ ಹುಟ್ಟಿದನು.

**ಪುರಾ ಸ ವಾಲಿಮಾರಣಪ್ರಭೂತದೋಷಕಾರಣಾತ್ ।**
**ಸಹಸ್ರವರ್ಮನಾಮಿನಾಽಸುರೇಣ ವೇಷ್ಟಿತೋಽಜನಿ ॥ ೧೫೨ ॥**

ಪದಚ್ಛೇದ :- ಪುರಾ, ಸಃ, ವಾಲಿಮಾರಣಪ್ರಭೂತದೋಷಕಾರಣಾತ್, ಸಹಸ್ರವರ್ಮನಾಮಿನಾ, ಅಸುರೇಣ, ವೇಷ್ಟಿತಃ, ಅಜನಿ.

**ಅರ್ಥ** :- **ಸಃ** ಆ ಸೂರ್ಯನು **ಪುರಾ** ಹಿಂದೆ **ವಾಲಿಮಾರಣ ಪ್ರಭೂತದೋಷಕಾರಣಾತ್** ವಾಲಿಯನ್ನು ಕೊಲ್ಲಿಸಿದ್ದರಿಂದುಂಟಾದ ಬಹಳವಾದ ಪಾಪದ ಕಾರಣದಿಂದ **ಸಹಸ್ರವರ್ಮನಾಮಿನಾ** ಸಹಸ್ರವರ್ಮನೆಂಬ ಹೆಸರುಳ್ಳ **ಅಸುರೇಣ** ದೈತ್ಯನಿಂದ **ವೇಷ್ಟಿತಃ** ಕೂಡಿದವನಾಗಿ **ಅಜನಿ** ಹುಟ್ಟಿದನು.

**ತಾತ್ಪರ್ಯ** :- ಸೂರ್ಯನು ಹಿಂದೆ ಸುಗ್ರೀವನಾಗಿದ್ದಾಗ ವಾಲಿಯನ್ನು ಕೊಲ್ಲಿಸಿದ್ದರಿಂದ ಉಂಟಾದ ಬಹಳ ಪಾಪದಿಂದಾಗಿ ಸಹಸ್ರವರ್ಮನೆಂಬ ದೈತ್ಯನಿಂದ ಆವಿಷ್ಟನಾಗಿ ಹುಟ್ಟಿದನು.

**ಯಥಾ ಗ್ರಹೈರ್ವಿದೂಷ್ಯತೇ ಮತಿರ್ನೃಣಾಂ ತಥೈವ ಹಿ ।**
**ಅಭೂಚ್ಚ ದೈತ್ಯದೂಷಿತಾ ಮತಿರ್ದಿವಾಕರಾತ್ಮನಃ ॥ ೧೫೩ ॥**

ಪದಚ್ಛೇದ :- ಯಥಾ, ಗ್ರಹೈಃ, ವಿದೂಷ್ಯತೇ, ಮತಿಃ, ನೃಣಾಂ, ತಥಾ, ಏವ, ಹಿ, ಅಭೂತ್, ಚ, ದೈತ್ಯದೂಷಿತಾ, ಮತಿಃ, ದಿವಾಕರಾತ್ಮನಃ.

**ಅರ್ಥ** :- **ನೃಣಾಂ** ಮನುಷ್ಯರ **ಮತಿಃ** ಬುದ್ಧಿಯು **ಯಥಾ** ಹೇಗೆ **ಗ್ರಹೈಃ** ಪಿಶಾಚಿಗಳಿಂದ **ವಿದೂಷ್ಯತೇ** ಕೆಡಿಸಲ್ಪಡುತ್ತದೆಯೋ **ತಥಾ ಏವ** ಹಾಗೆಯೇ **ದಿವಾಕರಾತ್ಮನಃ** ಸೂರ್ಯಸ್ವರೂಪನಾದ ಕರ್ಣನ **ಮತಿಃ ಚ** ಬುದ್ಧಿಯೂ ಕೂಡ **ದೈತ್ಯದೂಷಿತಾ** ದೈತ್ಯನಿಂದ ಕೆಡಿಸಲ್ಪಟ್ಟಿದ್ದು **ಅಭೂತ್ ಹಿ** ಆಯಿತಷ್ಟೇ.

**ತಾತ್ಪರ್ಯ** :- ಮನುಷ್ಯರ ಬುದ್ಧಿಯು ಪಿಶಾಚಿಗಳ ಆವೇಶದಿಂದ ಹೇಗೆ ಕೆಡುತ್ತದೆಯೋ ಹಾಗೆಯೇ ಸೂರ್ಯಸ್ವರೂಪನಾದ ಕರ್ಣನ ಬುದ್ಧಿಯು ದೈತ್ಯನಾದ ಸಹಸ್ರವರ್ಮನ ಆವೇಶದಿಂದ ಕೆಟ್ಟಿತು.

**ತಥಾಽಪಿ ರಾಮಸೇವನಾದ್ದಿನೇಶ್ಚ ಸನ್ನಿಧಾನಯುಕ್ ।**
**ಸುದರ್ಶನೀಯಕರ್ಣತಃ ಸ ಕರ್ಣನಾಮಕೋಽಭವತ್ ॥ ೧೫೪ ॥**

ಪದಚ್ಛೇದ :- ತಥಾ, ಅಪಿ, ರಾಮಸೇವನಾತ್, ಹರೇಃ, ಚ, ಸನ್ನಿಧಾನಯುಕ್, ಸುದರ್ಶನೀಯಕರ್ಣತಃ, ಸಃ, ಕರ್ಣನಾಮಕಃ, ಅಭವತ್.

**ಅರ್ಥ** :- **ತಥಾ ಅಪಿ** ಹಾಗಿದ್ದರೂ ಕೂಡ **ರಾಮಸೇವನಾತ್** ಶ್ರೀರಾಮನ ಸೇವೆಯಿಂದ **ಹರೇಃ** ಪರಮಾತ್ಮನ **ಸನ್ನಿಧಾನಯುಕ್** ಸನ್ನಿಧಾನ ದಿಂದ ಕೂಡಿದವನು **ಚ** ಮತ್ತು **ಸುದರ್ಶನೀಯಕರ್ಣತಃ** ಸುಂದರವಾದ ಕಿವಿಗಳಿಂದ **ಕರ್ಣನಾಮಕಃ** ಕರ್ಣನೆಂಬ ಹೆಸರುಳ್ಳವನು **ಅಭವತ್** ಆದನು.

**ತಾತ್ಪರ್ಯ** :- ಸಹಸ್ರವರ್ಮನ ಆವೇಶವಿದ್ದರೂ ಹಿಂದೆ ರಾಮನ ಸೇವೆ ಮಾಡಿದ್ದರಿಂದ ಪರಮಾತ್ಮನ ಸನ್ನಿಧಾನವುಳ್ಳವನಾಗಿದ್ದನು. ಮತ್ತು ಸುಂದರ ವಾದ ಕಿವಿ (ಕರ್ಣ) ಗಳಿಂದ ಕರ್ಣನೆಂಬ ಹೆಸರನ್ನು ಪಡೆದ.

**ಸ ರತ್ನಪೂರ್ಣಮಂಜುಷಾಗತೋ ವಿಸರ್ಜಿತೋ ಜಲೇ ।**
**ಜನಾಪವಾದಭೀತಿತಸ್ತಯಾ ಯಮಸ್ವಸುರ್ದ್ರುತಮ್ ॥ ೧೫೫ ॥**

ಪದಚ್ಛೇದ :- ಸಃ, ರತ್ನಪೂರ್ಣಮಂಜುಷಾಗತಃ, ವಿಸರ್ಜಿತಃ, ಜಲೇ, ಜನಾಪವಾದಭೀತಿತಃ, ತಯಾ, ಯಮಸ್ವಸುಃ, ದ್ರುತಮ್.

**ಅರ್ಥ** :- **ತಯಾ** ಆ ಕುಂತಿಯಿಂದ **ರತ್ನಪೂರ್ಣಮಂಜುಷಾಗತಃ** ರತ್ನಗಳಿಂದ ತುಂಬಿದ ಪೆಟ್ಟಿಗೆಯಲ್ಲಿ ಇಡಲ್ಪಟ್ಟ **ಸಃ** ಆ ಕರ್ಣನು **ಜನಾಪವಾದ ಭೀತಿತಃ** ಜನರ ಅಪವಾದದ ಹೆದರಿಕೆಯಿಂದ **ದ್ರುತಂ** ಕೂಡಲೇ **ಯಮಸ್ವಸುಃ** ಯಮುನೆಯ **ಜಲೇ** ನೀರಿನಲ್ಲಿ **ವಿಸರ್ಜಿತಃ** ಬಿಡಲ್ಪಟ್ಟನು.

**ತಾತ್ಪರ್ಯ** :- ಕುಂತಿಯು ಜನಾಪವಾದದ ಹೆದರಿಕೆಯಿಂದ ಕರ್ಣನನ್ನು ರತ್ನಗಳಿಂದ ಪೂರ್ಣವಾದ ಪೆಟ್ಟಿಗೆಯಲ್ಲಿ ಇಟ್ಟು ಬೇಗನೆ ಯಮುನೆಯ ನೀರಿನಲ್ಲಿ ಬಿಟ್ಟಳು.

**ನದೀಪ್ರವಾಹತೋ ಗತಂ ದದರ್ಶ ಸೂತನಂದನಃ ।**
**ತಮಗ್ರಹೀತ್ ಸರತ್ನಕಂ ಚಕಾರ ಪುತ್ರಕಂ ನಿಜಮ್ ॥ ೧೫೬ ॥**

ಪದಚ್ಛೇದ :- ನದೀಪ್ರವಾಹತಃ, ಗತಂ, ದದರ್ಶ, ಸೂತನಂದನಃ, ತಂ, ಅಗ್ರಹೀತ್, ಸರತ್ನಕಂ, ಚಕಾರ, ಪುತ್ರಕಂ, ನಿಜಮ್.

**ಅರ್ಥ** :- **ನದೀಪ್ರವಾಹತಃ** ನದಿಯ ಪ್ರವಾಹದಿಂದ **ಗತಂ** ಹೋದ **ತಂ** ಆ ಕರ್ಣನನ್ನು **ಸೂತನಂದನಃ** ಸೂತನ ಮಗನಾದ ಅಧಿರಥನು **ದದರ್ಶ** ಕಂಡನು. **ಸರತ್ನಕಂ** ರತ್ನಗಳಿಂದ ಕೂಡಿದ ಅವನನ್ನು **ಅಗ್ರಹೀತ್** ಸ್ವೀಕರಿಸಿದನು **ನಿಜಂ** ತನ್ನ **ಪುತ್ರಕಂ** ಮಗನನ್ನಾಗಿ **ಚಕಾರ** ಮಾಡಿಕೊಂಡನು.

**ತಾತ್ಪರ್ಯ** :- ನದೀಪ್ರವಾಹದಿಂದ ತೇಲಿ ಹೋದ ಕರ್ಣನನ್ನು ಸೂತಪುತ್ರನಾದ ಅಧಿರಥನು ಕಂಡನು. ರತ್ನಗಳಿಂದ ಕೂಡಿದ ಅವನನ್ನು ಎತ್ತಿಕೊಂಡು ತನ್ನ ಮಗನನ್ನಾಗಿ ಮಾಡಿಕೊಂಡನು.

**ಸೂತೇನಾಧಿರಥೇನ ಲಾಲಿತತನುಸ್ತದ್ಭಾರ್ಯಯಾ ರಾಧಯಾ**
**ಸಂವೃದ್ಧೋ ನಿಖಿಲಾಃ ಶ್ರುತೀರಧಿಜಗೌ ಶಾಸ್ತ್ರಾಣಿ ಸರ್ವಾಣಿ ಚ ।**
**ಬಾಲ್ಯಾದೇವ ಮಹಾಬಲೋ ನಿಜಗುಣೈಃ ಸಂಭಾಸಮಾನೋಽವಸನ್-**
**ನಾಮ್ನಾಽಸೌ ವಸುಷೇಣತಾಮಗಮದಸ್ಯಾಽಸೀದ್ಧ್ಯಮಾ ತದ್ ವಸು**
**॥ ೧೫೭ ॥**

**ಪದಚ್ಛೇದ** :- ಸೂತೇನ, ಅಧಿರಥೇನ, ಲಾಲಿತತನುಃ, ತದ್ಭಾರ್ಯಯಾ, ರಾಧಯಾ, ಸಂವೃದ್ಧಃ, ನಿಖಿಲಾಃ, ಶ್ರುತೀಃ, ಅಧಿಜಗೌ, ಶಾಸ್ತ್ರಾಣಿ, ಸರ್ವಾಣಿ, ಚ, ಬಾಲ್ಯಾದೇವ, ಮಹಾಬಲಃ, ನಿಜಗುಣೈಃ, ಸಂಭಾಸಮಾನಃ, ಅವಸತ್, ನಾಮ್ನಾ, ಅಸೌ, ವಸುಷೇಣತಾಂ, ಅಗಮತ್, ಅಸ್ಯ, ಆಸೀತ್, ಹಿ, ಅಮಾ, ತತ್, ವಸು.

**ಅರ್ಥ** :- **ಅಧಿರಥೇನ** ಅಧಿರಥನೆಂಬ **ಸೂತೇನ** ಸೂತನಿಂದ **ಲಾಲಿತತನುಃ** ಲಾಲಿಸಲ್ಪಟ್ಟ ಶರೀರವುಳ್ಳ ಕರ್ಣನು **ತದ್ಭಾರ್ಯಯಾ** ಅವನ ಹೆಂಡತಿಯಾದ **ರಾಧಯಾ** ರಾಧೆಯಿಂದ **ಸಂವೃದ್ಧಃ** ಬೆಳೆಸಲ್ಪಟ್ಟವನಾಗಿ **ನಿಖಿಲಾಃ** ಎಲ್ಲಾ **ಶ್ರುತೀಃ** ವೇದಗಳನ್ನು **ಶಾಸ್ತ್ರಾಣಿ** ಶಾಸ್ತ್ರಗಳನ್ನು **ಅಧಿಜಗೌ** ಕಲಿತುಕೊಂಡನು. **ಬಾಲ್ಯಾತ್** ಏವ ಚಿಕ್ಕ ವಯಸ್ಸಿನಿಂದಲೇ **ಮಹಾಬಲಃ** ತುಂಬ ಬಲಿಷ್ಠನಾದ ಕರ್ಣನು **ನಿಜಗುಣೈಃ** ತನ್ನ ಗುಣಗಳಿಂದ **ಸಂಭಾ ಸಮಾನಃ** ಕಂಗೊಳಿಸುತ್ತಾ **ಅವಸತ್** ವಾಸಮಾಡಿದನು **ಹಿ** ಯಾವ ಕಾರಣ ದಿಂದ **ವಸು** ಸಂಪತ್ತು **ಅಮಾ** ಸಮೀಪದಲ್ಲಿಯೇ **ಆಸೀತ್** ಇತ್ತೋ **ತತ್** ಆ ಕಾರಣದಿಂದ **ಅಸೌ** ಈ ಕರ್ಣನು **ನಾಮ್ನಾ** ಹೆಸರಿನಿಂದ **ವಸುಷೇಣತಾಂ** ವಸುಷೇಣನೆಂಬ ಪ್ರಸಿದ್ಧಿಯನ್ನು **ಅಗಮತ್** ಪಡೆದನು.

ತಾತ್ಪರ್ಯ :- ಸೂತನಾದ ಅಧಿರಥನು ಕರ್ಣನ ದೇಹವನ್ನು ಲಾಲನೆ ಮಾಡಿದ. ಅವನ ಹೆಂಡತಿಯಾದ ರಾಧೆಯು ಕರ್ಣನನ್ನು ಬೆಳೆಸಿದಳು. ಎಲ್ಲ ವೇದಗಳನ್ನು ಅಸ್ತ್ರ-ಶಸ್ತ್ರಗಳನ್ನು ಕಲಿತುಕೊಂಡನು. ಬಾಲ್ಯದಿಂದಲೇ ಮಹಾ ಬಲಿಷ್ಠನಾಗಿ ತನ್ನ ಔದಾರ್ಯ ಮೊದಲಾದ ಗುಣಗಳಿಂದ ಕಂಗೊಳಿಸುತ್ತಾ ವಾಸಮಾಡಿದನು. ಅವನ ಜೊತೆಯಲ್ಲಿಯೇ ಹಣವಿದ್ದಿದ್ದರಿಂದ 'ವಸುಷೇಣ' ಎಂಬ ಹೆಸರು ಪ್ರಸಿದ್ಧವಾಯಿತು.

**ಅಥ ಕುಂತೀ ದತ್ತಾ ಸಾ ಪಾಂಡೋಃ**
**ಸೋऽಪ್ಯೇತಯಾ ಚಿರಂ ರೇಮೇ ।**
**ಶೂರಾಚ್ಛೂದ್ರ್ಯಾಂ ಜಾತಾಂ ವಿದುರೋऽ-**
**ವಹದಾರುಣೇಂ ಗುಣಾಢ್ಯಾಂ ಚ ॥ ೧೫೮ ॥**

ಪದಚ್ಛೇದ :- **ಅಥ, ಕುಂತೀ, ದತ್ತಾ, ಸಾ, ಪಾಂಡೋಃ, ಸಃ, ಅಪಿ, ಏತಯಾ, ಚಿರಂ, ರೇಮೇ, ಶೂರಾತ್, ಶೂದ್ರ್ಯಾಂ, ಜಾತಾಂ, ವಿದುರಃ, ಅವಹತ್, ಆರುಣೇಂ, ಗುಣಾಢ್ಯಾಂ, ಚ.**

ಅರ್ಥ :- **ಅಥ** ಅನಂತರ **ಸಾ** ಆ ಕುಂತಿಯು **ಪಾಂಡೋಃ** ಪಾಂಡುರಾಜನಿಗೆ **ದತ್ತಾ** ಕೊಡಲ್ಪಟ್ಟಳು. **ಸಃ ಅಪಿ** ಆ ಪಾಂಡುವಾದರೂ **ಏತಯಾ** ಈ ಕುಂತಿಯೊಂದಿಗೆ **ಚಿರಂ** ಬಹುಕಾಲ **ರೇಮೇ** ಕ್ರೀಡಿಸಿದನು. **ಸಃ ವಿದುರಃ** ಆ ವಿದುರನು **ಶೂರಾತ್** ಶೂರರಾಜನಿಂದ **ಶೂದ್ರ್ಯಾಂ** ಶೂದ್ರಸ್ತ್ರೀಯಲ್ಲಿ **ಜಾತಾಂ** ಹುಟ್ಟಿದ **ಗುಣಾಢ್ಯಾಂ** ಗುಣಭರಿತಳಾದ **ಆರುಣೇಂ** ಆರುಣೆಯನ್ನು **ಅವಹತ್** ಮದುವೆಯಾದನು.

ತಾತ್ಪರ್ಯ :- ಅನಂತರ ಕುಂತಿಭೋಜನು ಕುಂತಿಯನ್ನು ಪಾಂಡುವಿಗೆ ಕೊಟ್ಟು ಮದುವೆ ಮಾಡಿದನು. ಪಾಂಡುರಾಜನು ಕುಂತಿಯೊಂದಿಗೆ ಬಹುಕಾಲ ರಮಿಸಿದನು. ವಿದುರನು ಶೂರರಾಜನಿಂದ ಶೂದ್ರಸ್ತ್ರೀಯಲ್ಲಿ ಹುಟ್ಟಿದ ಗುಣಭರಿತಳಾದ ಆರುಣೆಯನ್ನು ಮದುವೆಯಾದನು.

**ಅಥ ಚರ್ತಾಯನನಾಮಾ ಮದ್ರೇಶಃ ಶಕ್ರತುಲ್ಯಪುತ್ರಾರ್ಥೀ ।**
**ಕನ್ಯಾರತ್ನಂ ಚಾಪ್ತುಂ ಚಕ್ರೇ ಬ್ರಾಹ್ಮಂ ತಪೋ ವರಂ ಚಾಪ ॥ ೧೫೯ ॥**

ಪದಚ್ಛೇದ :- ಅಥ, ಚ, ಋತಾಯನನಾಮಾ, ಮದ್ರೇಶಃ, ಶಕ್ರತುಲ್ಯಪುತ್ರಾರ್ಥೀ, ಕನ್ಯಾರತ್ನಂ, ಚ, ಆಪ್ತುಂ, ಚಕ್ರೇ, ಬ್ರಾಹ್ಮಂ, ತಪಃ, ವರಂ, ಚ, ಆಪ.

**ಅರ್ಥ** :- **ಅಥ** ಅನಂತರ **ಋತಾಯನನಾಮಾ** ಋತಾಯನನೆಂದು ಹೆಸರುಳ್ಳ **ಮದ್ರೇಶಃ ಚ** ಮದ್ರದೇಶದ ರಾಜನಾದರೂ **ಶಕ್ರತುಲ್ಯಪುತ್ರಾರ್ಥೀ** ಇಂದ್ರನಿಗೆ ಸಮನಾದ ಮಗನನ್ನು ಬಯಸಿದವನಾಗಿ **ಚ** ಮತ್ತು **ಕನ್ಯಾರತ್ನಂ** ಸ್ತ್ರೀರತ್ನವನ್ನು **ಆಪ್ತುಂ** ಪಡೆಯಲು **ಬ್ರಾಹ್ಮಂ** ಬ್ರಹ್ಮದೇವರ ಸಂಬಂಯಾದ **ತಪಃ** ತಪಸ್ಸನ್ನು **ಚಕ್ರೇ** ಮಾಡಿದನು. **ವರಂ ಚ** ವರವನ್ನೂ ಕೂಡ **ಆಪ** ಹೊಂದಿದನು.

**ತಾತ್ಪರ್ಯ** :- ಅನಂತರ ಋತಾಯನನೆಂಬ ಹೆಸರಿನ ಮದ್ರದೇಶದ ರಾಜನು ಇಂದ್ರನಿಗೆ ಸಮಾನನಾದ ಮಗನನ್ನು ಕನ್ಯಾರತ್ನವನ್ನು ಬಯಸಿ ಬ್ರಹ್ಮದೇವರನ್ನು ಕುರಿತು ತಪಸ್ಸು ಮಾಡಿದನು. ಬಯಸಿದ ವರವನ್ನೂ ಪಡೆದನು.

**ಪ್ರಹ್ಲಾದಾವರಜೋ ಯಃ ಸಂ-**
**ಹ್ಲಾದೋ ನಾಮತೋ ಹರೇರ್ಭಕ್ತಃ ।**
**ಸೋಽಭೂದ್ಬ್ರಹ್ಮವರಾಂತೇ ವಾಯೋ-**
**ರಾವೇಶಯುಕ್ ಸುತೋ ರಾಜ್ಞಃ ॥ ೧೬೦ ॥**

ಪದಚ್ಛೇದ :- ಪ್ರಹ್ಲಾದಾವರಜಃ, ಯಃ, ಸಂಹ್ಲಾದಃ, ನಾಮತಃ ಹರೇಃ, ಭಕ್ತಃ, ಸಃ, ಅಭೂತ್, ಬ್ರಹ್ಮವರಾಂತೇ, ವಾಯೋಃ, ಆವೇಶಯುಕ್, ಸುತಃ, ರಾಜ್ಞಃ.

**ಅರ್ಥ** :- **ಪ್ರಹ್ಲಾದಾವರಜಃ** ಪ್ರಹ್ಲಾದನ ತಮ್ಮನಾದ **ಹರೇಃ** ಪರಮಾತ್ಮನ **ಭಕ್ತಃ** ಭಕ್ತನಾದ **ನಾಮತಃ** ಹೆಸರಿನಿಂದ **ಯಃ** ಯಾವನು **ಸಹ್ಲಾದಃ** ಸಹ್ಲಾದನೆಂಬುವನು ಇದ್ದನೋ **ಸಃ** ಅವನು **ಬ್ರಹ್ಮವರಾಂತೇ** ಬ್ರಹ್ಮದೇವರ ವರದ ಸಮಾಪ್ತಿಯಲ್ಲಿ (ಬ್ರಹ್ಮದೇವರಿಂದ ವರವನ್ನು ಹೊಂದಿದ ಮೇಲೆ) **ವಾಯೋಃ** ವಾಯುದೇವರ **ಆವೇಶಯುಕ್** ಆವೇಶದಿಂದ ಕೂಡಿದವನಾಗಿ **ರಾಜ್ಞಃ** ಋತಾಯನ ರಾಜನ **ಸುತಃ** ಮಗನಾಗಿ **ಅಭೂತ್** ಹುಟ್ಟಿದನು.

**ತಾತ್ಪರ್ಯ** :- ಪ್ರಹ್ಲಾದನ ತಮ್ಮನಾದ ಸಹ್ಲಾದನೆಂಬ ವಿಷ್ಣುಭಕ್ತನು ಋತಾಯನನಿಗೆ ಬ್ರಹ್ಮದೇವರು ವರವನ್ನು ಕೊಟ್ಟ ಮೇಲೆ ವಾಯುದೇವರ ಆವೇಶಯುಕ್ತನಾಗಿ ಋತಾಯನನ ಮಗನಾಗಿ ಹುಟ್ಟಿದನು.

ಸ ಮಾರುತಾವೇಶವಶಾತ್ ಪೃಥಿವ್ಯಾಂ
ಬಲಾಧಿಕೋಽಭೂದ್ ವರತಶ್ಚ ಧಾತುಃ ।
ಶಲ್ಯಶ್ಚ ನಾಮ್ನಾಽಖಿಲಶತ್ರುಶಲ್ಯೋ
ಬಭೂವ ಕನ್ಯಾಸ್ಯ ಚ ಮಾದ್ರಿನಾಮ್ನೀ ॥ ೧೬೧ ॥

ಪದಚ್ಛೇದ :- ಸಃ, ಮಾರುತಾವೇಶವಶಾತ್, ಪೃಥಿವ್ಯಾಂ, ಬಲಾಕಃ, ಅಭೂತ್, ವರತಃ, ಚ, ಧಾತುಃ, ಶಲ್ಯಃ, ಚ, ನಾಮ್ನಾ, ಅಖಿಲಶತ್ರುಶಲ್ಯಃ, ಬಭೂವ, ಕನ್ಯಾ, ಅಸ್ಯ, ಚ, ಮಾದ್ರಿನಾಮ್ನೀ

**ಅರ್ಥ** :- **ಸಃ** ಆ ಋತಾಯನರಾಜನ ಮಗನು **ಮಾರುತಾವೇಶಾತ್** ವಾಯುದೇವರ ಆವೇಶದಿಂದ **ಚ** ಮತ್ತು **ಧಾತುಃ** ಬ್ರಹ್ಮದೇವರ **ವರತಃ** ವರದಿಂದ **ಪೃಥಿವ್ಯಾಂ** ಭೂಮಿಯಲ್ಲಿ **ಬಲಾಕಃ** ಅಧಿಕಬಲವುಳ್ಳವನು **ಅಭೂತ್** ಆದನು. **ಅಖಿಲಶತ್ರುಶಲ್ಯಃ** ಎಲ್ಲಾ ಶತ್ರುಗಳಿಗೆ ಈಟಿಯಂತಿರುವ ಅವನು **ನಾಮ್ನಾ ಚ** ಹೆಸರಿನಿಂದಲೂ **ಶಲ್ಯಃ** ಶಲ್ಯನು **ಬಭೂವ** ಆದನು. **ಅಸ್ಯ ಚ** ಈ ಋತಾಯನನಿಗಾದರೂ **ಮಾದ್ರಿನಾಮ್ನೀ** ಮಾದ್ರಿ ಎಂಬ ಹೆಸರಿನ **ಕನ್ಯಾ** ಮಗಳು **ಬಭೂವ** ಹುಟ್ಟಿದಳು.

**ತಾತ್ಪರ್ಯ** :- ಋತಾಯನ ರಾಜನ ಮಗನು ವಾಯುದೇವರ ಆವೇಶದಿಂದ ಮತ್ತು ಬ್ರಹ್ಮದೇವರ ವರದಿಂದ ಭೂಮಿಯಲ್ಲಿ ಅಧಿಕಬಲ ವುಳ್ಳವನಾಗಿದ್ದನು. ಎಲ್ಲ ಶತ್ರುಗಳಿಗೆ ಈಟಿಯಂತಿರುವ ಅವನು ಶಲ್ಯ ಎಂಬ ಹೆಸರನ್ನೇ ಪಡೆದಿದ್ದನು. ಮುಂದೆ ಈ ಋತಾಯನನಿಗೆ ಮಾದ್ರಿ ಎಂಬ ಹೆಸರಿನ ಮಗಳು ಹುಟ್ಟಿದಳು.

ಸಾ ಪಾಂಡುಭಾರ್ಯೈವ ಚ ಪೂರ್ವಜನ್ಮ-
ನ್ಯಭೂತ್ ಪುನಶ್ಚ ಪ್ರತಿಪಾದಿತಾಽಸ್ಮೈ ।
ಶಲ್ಯಶ್ಚ ರಾಜ್ಯಂ ಪಿತೃದತ್ತಮಂಜೋ
ಜುಗೋಪ ಧರ್ಮೇಣ ಸಮಸ್ತಶಾಸ್ತ್ರವಿತ್ ॥ ೧೬೨ ॥

ಪದಚ್ಛೇದ :- ಸಾ, ಪಾಂಡುಭಾರ್ಯಾ, ಏವ, ಚ, ಪೂರ್ವಜನ್ಮನಿ, ಅಭೂತ್, ಪುನಃ, ಚ, ಪ್ರತಿಪಾದಿತಾ, ಅಸ್ಮೈ, ಶಲ್ಯಃ, ಚ, ರಾಜ್ಯಂ, ಪಿತೃದತ್ತಂ, ಅಂಜಃ, ಜುಗೋಪ, ಧರ್ಮೇಣ, ಸಮಸ್ತಶಾಸ್ತ್ರವಿತ್.

**ಅರ್ಥ** :- **ಸಾ ಚ** ಆ ಮಾದ್ರಿಯಾದರೂ **ಪೂರ್ವಜನ್ಮನಿ** ಹಿಂದಿನ ಜನ್ಮದಲ್ಲಿ **ಪಾಂಡುಭಾರ್ಯಾ** ಏವ ಪಾಂಡುರಾಜನ ಹೆಂಡತಿಯೇ **ಅಭೂತ್** ಆಗಿದ್ದಳು. **ಪುನಃ ಚ** ಈ ಅವತಾರದಲ್ಲಿಯೂ **ಅಸ್ಮೈ** ಈ ಪಾಂಡುರಾಜನಿಗೆ **ಪ್ರತಿಪಾದಿತಾ** ಕೊಡಲ್ಪಟ್ಟಳು. **ಶಲ್ಯಃ ಚ** ಶಲ್ಯನಾದರೂ **ಸಮಸ್ತಶಾಸ್ತ್ರವಿತ್** ಎಲ್ಲ ಶಾಸ್ತ್ರಗಳನ್ನು ತಿಳಿದವನಾಗಿ **ಪಿತೃದತ್ತಂ** ತಂದೆಯಿಂದ ಕೊಡಲ್ಪಟ್ಟ **ರಾಜ್ಯಂ** ರಾಜ್ಯವನ್ನು **ಅಂಜಃ** ಚೆನ್ನಾಗಿ **ಧರ್ಮೇಣ** ಧರ್ಮದಿಂದ **ಜುಗೋಪ** ರಕ್ಷಿಸಿದನು.

**ತಾತ್ಪರ್ಯ** :- ಮಾದ್ರಿಯೂ ಹಿಂದಿನ ಜನ್ಮದಲ್ಲಿ ಪಾಂಡುರಾಜನ ಹೆಂಡತಿಯೇ ಆಗಿದ್ದಳು. ಈ ಜನ್ಮದಲ್ಲಿಯೂ ಪಾಂಡುರಾಜನಿಗೇ ಕೊಡಲ್ಪಟ್ಟಳು. ಶಲ್ಯನೂ ಎಲ್ಲ ಶಾಸ್ತ್ರಗಳನ್ನು ತಿಳಿದವನಾಗಿ ತಂದೆಯು ಕೊಟ್ಟ ರಾಜ್ಯವನ್ನು ಚೆನ್ನಾಗಿ ಧರ್ಮಮಾರ್ಗದಿಂದ ರಕ್ಷಿಸಿದನು.

**ಅಥಾಂಗನಾರತ್ನಮವಾಪ್ಯ ತದ್ದ್ವಯಂ**
**ಪಾಂಡುಸ್ತು ಭೋಗಾನ್ ಬುಭುಜೇ ಯಥೇಷ್ಟತಃ ।**
**ಅಪೀಪಲದ್ ಧರ್ಮಸಮಾಶ್ರಯೋ ಮಹೀಂ**
**ಜ್ಯೇಷ್ಠಾಪಚಾಯೀ ವಿದುರೋಕ್ತಮಾರ್ಗತಃ ॥ ೧೬೩ ॥**

ಪದಚ್ಛೇದ :- ಅಥ, ಅಂಗನಾರತ್ನಂ, ಅವಾಪ್ಯ, ತದ್ದ್ವಯಂ, ಪಾಂಡುಃ, ತು, ಭೋಗಾನ್, ಬುಭುಜೇ, ಯಥೇಷ್ಟತಃ, ಅಪೀಪಲತ್, ಧರ್ಮಸಮಾಶ್ರಯಃ, ಮಹೀಂ, ಜ್ಯೇಷ್ಠಾಪಚಾಯೀ, ವಿದುರೋಕ್ತಮಾರ್ಗತಃ

**ಅರ್ಥ** :- **ಅಥ** ಅನಂತರ **ಪಾಂಡುಃ** ಪಾಂಡುರಾಜನು **ತದ್ದ್ವಯಂ** ಆ ಎರಡು **ಅಂಗನಾರತ್ನಂ** ಕುಂತಿ, ಮಾದ್ರಿ ಎಂಬ ಸ್ತ್ರೀರತ್ನವನ್ನು **ಅವಾಪ್ಯ** ಹೊಂದಿ **ಯಥೇಷ್ಟತಃ** ಯಥೇಚ್ಛವಾಗಿ **ಭೋಗಾನ್ ತು** ಭೋಗಗಳನ್ನಾದರೂ **ಬುಭುಜೇ** ಅನುಭವಿಸಿದನು. **ಧರ್ಮಸಮಾಶ್ರಯಃ** ಧರ್ಮವನ್ನು ಆಶ್ರಯಿಸಿ ಕೊಂಡವನಾಗಿ **ಜ್ಯೇಷ್ಠಾಪಚಾಯೀ** ಅಣ್ಣನಾದ ಧೃತರಾಷ್ಟ್ರನಿಗೆ ಸಂಪತ್ತನ್ನು ತಂದು ಕೊಡುತ್ತಾ **ವಿದುರೋಕ್ತಮಾರ್ಗತಃ** ವಿದುರನಿಂದ ಹೇಳಲ್ಪಟ್ಟ ನೀತಿ ಮಾರ್ಗದಂತೆ **ಮಹೀಂ** ಭೂಮಿಯನ್ನು **ಅಪೀಪಲತ್** ರಕ್ಷಿಸಿದನು.

**ತಾತ್ಪರ್ಯ** :- ಅನಂತರ ಪಾಂಡುರಾಜನು ಕುಂತಿ, ಮಾದ್ರಿ ಎಂಬ ಇಬ್ಬರು ಕನ್ಯಾರತ್ನವನ್ನು ಪಡೆದು ಯಥೇಚ್ಛವಾಗಿ ಸುಖಗಳನ್ನು ಅನುಭವಿಸಿದನು. ಅಣ್ಣನಾದ ಧೃತರಾಷ್ಟ್ರನಿಗೆ ಸಂಪತ್ತನ್ನು ತಂದು ಕೊಡುತ್ತಾ ವಿದುರನು ಉಪದೇಶಿಸಿದ ನೀತಿಮಾರ್ಗದಿಂದ ಭೂಮಿಯನ್ನು ರಕ್ಷಿಸಿದನು.

**ಭೀಷ್ಮೋ ಹಿ ರಾಷ್ಟ್ರೇ ಧೃತರಾಷ್ಟ್ರಮೇವ**
**ಸಂಸ್ಥಾಪ್ಯ ಪಾಂಡುಂ ಯುವರಾಜಮೇವ ।**
**ಚಕ್ರೇ ತಥಾಽಪ್ಯಂಧ ಇತಿ ಸ್ಮ ರಾಜ್ಯಂ**
**ಚಕಾರ ನಾಸಾವಕರೋಚ್ಚ ಪಾಂಡುಃ ॥ ೧೬೪ ॥**

**ಪದಚ್ಛೇದ** :- ಭೀಷ್ಮಃ, ಹಿ, ರಾಷ್ಟ್ರೇ, ಧೃತರಾಷ್ಟ್ರಂ, ಏವ, ಸಂಸ್ಥಾಪ್ಯ, ಪಾಂಡುಂ, ಯುವರಾಜಂ, ಏವ, ಚಕ್ರೇ, ತಥಾ, ಅಪಿ, ಅಂಧಃ, ಇತಿ, ಸ್ಮ ರಾಜ್ಯಂ, ಚಕಾರ, ನ, ಅಸೌ, ಅಕರೋತ್, ಚ, ಪಾಂಡುಃ.

**ಅರ್ಥ** :- **ಭೀಷ್ಮಃ ಹಿ** ಭೀಷ್ಮನಾದರೂ **ರಾಷ್ಟ್ರೇ** ರಾಜ್ಯದಲ್ಲಿ **ಧೃತರಾಷ್ಟ್ರಂ ಏವ** ಧೃತರಾಷ್ಟ್ರನನ್ನೇ **ಸಂಸ್ಥಾಪ್ಯ** ಸಂಸ್ಥಾಪಿಸಿ (ರಾಜನನ್ನಾಗಿ ಮಾಡಿ) **ಪಾಂಡುಂ** ಪಾಂಡುವನ್ನು **ಯುವರಾಜಂ ಏವ** ಯುವರಾಜನನ್ನಾಗಿಯೇ **ಚಕ್ರೇ** ಮಾಡಿದನು. **ತಥಾ ಅಪಿ** ಹಾಗಿದ್ದರೂ ಕೂಡ **ಅಸೌ** ಈ ಧೃತರಾಷ್ಟ್ರನು **ಅಂಧಃ ಇತಿ** ಕುರುಡನೆಂದು **ರಾಜ್ಯಂ** ರಾಜ್ಯವನ್ನು **ನ ಚಕಾರ ಸ್ಮ** ಪರಿಪಾಲಿಸಲಿಲ್ಲ. **ಪಾಂಡುಃ ಚ** ಪಾಂಡುವಾದರೂ **ಅಕರೋತ್** ಪರಿಪಾಲಿಸಿದನು.

**ತಾತ್ಪರ್ಯ** :- ಭೀಷ್ಮನು ಧೃತರಾಷ್ಟ್ರನನ್ನೇ ರಾಜನನ್ನಾಗಿ ಮಾಡಿ, ಪಾಂಡುವನ್ನು ಯುವರಾಜನನ್ನಾಗಿ ಮಾಡಿದ. ಆದರೆ ಧೃತರಾಷ್ಟ್ರನು ಕುರುಡನಾದ್ದರಿಂದ ರಾಜ್ಯವನ್ನು ಪರಿಪಾಲಿಸಲಿಲ್ಲ. ಪಾಂಡುವೇ ರಾಜ್ಯವನ್ನು ಪರಿಪಾಲಿಸಿದನು.

**ಭೀಷ್ಮಾಂಬಿಕೇಯೋಕ್ತಿಪರಃ ಸದೈವ**
**ಪಾಂಡುಃ ಶಶಾಸಾವನಿಮೇಕವೀರಃ ।**
**ಅಥಾಂಽಬಿಕೇಯೋ ಬಹುಭಿಶ್ಚ ಯಜ್ಞೈ-**
**ರೀಜೇ ಸಪಾಂಡುಶ್ಚ ಮಹಾಧನೌಘೈಃ ॥ ೧೬೫ ॥**

ಪದಚ್ಛೇದ :- ಭೀಷ್ಮಾಂಬಿಕೇಯೋಕ್ತಿಪರಃ, ಸದಾ, ಏವ, ಪಾಂಡುಃ, ಶಶಾಸ, ಅವನಿಂ, ಏಕವೀರಃ, ಅಥ, ಅಂಬಿಕೇಯಃ, ಬಹುಭಿಃ, ಚ, ಯಜ್ಞೈಃ, ಈಜೇ, ಸಪಾಂಡುಃ, ಚ, ಮಹಾಧನೌಘೈಃ.

**ಅರ್ಥ** :- **ಏಕವೀರಃ** ಪ್ರತಿಭಟನಿಲ್ಲದಿರುವ **ಪಾಂಡುಃ** ಪಾಂಡುವು **ಸದಾ** ಯಾವಗಲೂ **ಭೀಷ್ಮಾಂಬಿಕೇಯೋಕ್ತಿಪರಃ** ಭೀಷ್ಮಾಚಾರ್ಯರ ಮತ್ತು ಧೃತರಾಷ್ಟ್ರನ ಮಾತುಗಳಲ್ಲಿ ಆಸಕ್ತನಾಗಿ **ಅವನಿಂ** ಭೂಮಿಯನ್ನು **ಶಶಾಸ** ಆಳಿದನು. **ಅಥ** ಅನಂತರ **ಅಂಬಿಕೇಯಃ** ಧೃತರಾಷ್ಟ್ರನು **ಚ** ಮತ್ತು **ಸಃ** ಆ ಪಾಂಡುರಾಜನು **ಮಹಾಧನೌಘೈಃ** ಬಹಳ ಹಣಗಳ ಸಮೂಹಗಳುಳ್ಳ **ಬಹುಭಿಃ** ಅನೇಕವಾದ **ಯಜ್ಞೈಃ** ಯಾಗಗಳಿಂದ **ಈಜೇ** (ಪರಮಾತ್ಮನನ್ನು) ಪೂಜಿಸಿದರು.

**ತಾತ್ಪರ್ಯ** :- ಪ್ರತಿವೀರರಿಲ್ಲದ ಪಾಂಡುರಾಜನು ಯಾವಾಗಲೂ ಭೀಷ್ಮ ಮತ್ತು ಧೃತರಾಷ್ಟ್ರನ ಮಾತುಗಳನ್ನು ಕೇಳುತ್ತಾ ಭೂಮಿಯನ್ನು ಆಳಿದನು. ಅನಂತರ ಧೃತರಾಷ್ಟ್ರ ಮತ್ತು ಪಾಂಡುರಾಜನು ಬಹಳ ಸಂಪತ್ತುಗಳಿಂದ ಅನೇಕ ಯಾಗಗಳನ್ನು ಮಾಡಿ ಪರಮಾತ್ಮನನ್ನು ಸಂತೋಷಗೊಳಿಸಿದರು.

**ನೈಷಾ ವಿರೋಧೇ ಕುರುಪಾಂಡವಾನಾಂ**
**ತಿಷ್ಠೇದಿತಿ ವ್ಯಾಸ ಉದೀರ್ಣಸದ್ಗುಣಃ ।**
**ಸ್ವಮಾತರಂ ಸ್ವಾಶ್ರಮಮೇವ ನಿನ್ಯೇ**
**ಸ್ನುಷೇ ಚ ತಸ್ಯಾ ಯಯತುಃ ಸ್ಮ ತಾಮನು ॥ ೧೬೬ ॥**

ಪದಚ್ಛೇದ :- ನ, ಏಷಾ, ವಿರೋಧೇ, ಕುರುಪಾಂಡವಾನಾಂ, ತಿಷ್ಠೇತ್, ಇತಿ, ವ್ಯಾಸಃ, ಉದೀರ್ಣಸದ್ಗುಣಃ, ಸ್ವಮಾತರಂ, ಸ್ವಾಶ್ರಮಂ, ಏವ, ನಿನ್ಯೇ, ಸ್ನುಷೇ, ಚ, ತಸ್ಯಾಃ, ಯಯತುಃ, ಸ್ಮ, ತಾಂ, ಅನು.

**ಅರ್ಥ** :- **ಕುರುಪಾಂಡವಾನಾಂ** ಕೌರವ ಮತ್ತು ಪಾಂಡವರ **ವಿರೋಧೇ** ವಿರೋಧವುಂಟಾದಾಗ **ಏಷಾ** ಈ ಸತ್ಯವತಿಯು **ನ ತಿಷ್ಠೇತ್** ಇರಬಾರದು **ಇತಿ** ಎಂದು **ಉದೀರ್ಣಸದ್ಗುಣಃ** ಉತ್ಕೃಷ್ಟವಾದ ಸದ್ಗುಣ ಗಳುಳ್ಳ **ವ್ಯಾಸಃ** ವೇದವ್ಯಾಸರು **ಸ್ವಮಾತರಂ** ತನ್ನ ತಾಯಿಯಾದ ಸತ್ಯವತಿ ಯನ್ನು **ಸ್ವಾಶ್ರಮಂ ಏವ** ತಮ್ಮ ಆಶ್ರಮಕ್ಕೇ **ನಿನ್ಯೇ** ಕರೆದುಕೊಂಡು ಹೋದರು

**ತಾಂ** ಆ ಸತ್ಯವತಿಯನ್ನು **ತಸ್ಯಾಃ** ಅವಳ **ಸ್ನುಷೇ ಚ** ಸೊಸೆಯಂದಿರೂ ಕೂಡ **ಅನು ಯಯತುಃ ಸ್ಮ** ಅನುಸರಿಸಿ ಹೋದರು.

**ತಾತ್ಪರ್ಯ** :- ಮುಂದೆ ಕೌರವರಿಗೂ ಪಾಂಡವರಿಗೂ ಜಗಳ ಉಂಟಾದಾಗ ಸತ್ಯವತಿಯು ಇರಬಾರದೆಂದು ಉತ್ಕೃಷ್ಟಸದ್ಗುಣಗಳಿಂದ ಕೂಡಿದ ವ್ಯಾಸರು ತಾಯಿಯನ್ನು ತಮ್ಮ ಆಶ್ರಮಕ್ಕೆ ಕರೆದುಕೊಂಡು ಹೋದರು. ಆಕೆಯನ್ನು ಸೊಸೆಯರಾದ ಅಂಬಿಕೆ, ಅಂಬಾಲಿಕೆಯರೂ ಅನುಸರಿಸಿ ಹೊರಟರು.

**ಸುತೋಕ್ತಮಾರ್ಗೇಣ ವಿಚಿಂತ್ಯ ತಂ ಹರಿಂ**
**ಸುತಾತ್ಮನಾ ಬ್ರಹ್ಮತಯಾ ಚ ಸಾ ಯಯೌ ।**
**ಪರಂ ಪದಂ ವೈಷ್ಣವಮೇವ ಕೃಷ್ಣ-**
**ಪ್ರಸಾದತಃ ಸ್ವರ್ಯಯತುಃ ಸ್ನುಷೇ ಚ ॥ ೧೬೭ ॥**

ಪದಚ್ಛೇದ :- ಸುತೋಕ್ತಮಾರ್ಗೇಣ, ವಿಚಿಂತ್ಯ, ತಂ, ಹರಿಂ, ಸುತಾತ್ಮನಾ, ಬ್ರಹ್ಮತಯಾ, ಚ, ಸಾ, ಯಯೌ, ಪರಂ, ಪದಂ, ವೈಷ್ಣವಂ, ಏವ, ಕೃಷ್ಣಪ್ರಸಾದತಃ, ಸ್ವಃ, ಯಯತುಃ, ಸ್ನುಷೇ, ಚ.

**ಅರ್ಥ** :- **ಸಾ** ಆ ಸತ್ಯವತಿಯು **ಸುತೋಕ್ತಮಾರ್ಗೇಣ** ಮಗನಾದ ವ್ಯಾಸರಿಂದ ಹೇಳಲ್ಪಟ್ಟ ದಾರಿಯಿಂದ **ಹರಿಂ** ಪರಮಾತ್ಮನನ್ನು **ಸುತಾತ್ಮನಾ** ಮಗನಂತೆ **ಚ** ಮತ್ತು **ಬ್ರಹ್ಮತಯಾ** ಪರಬ್ರಹ್ಮನಂತೆ **ವಿಚಿಂತ್ಯ** ಧ್ಯಾನಿಸಿ **ಕೃಷ್ಣಪ್ರಸಾದತಃ** ಪರಮಾತ್ಮನ ಅನುಗ್ರಹದಿಂದ **ಪರಂ** ಶ್ರೇಷ್ಠವಾದ **ಪದಂ** ಸ್ಥಾನವಾದ **ವೈಷ್ಣವಂ** ವಿಷ್ಣುವಿನ ಲೋಕಕ್ಕೆ **ಯಯೌ** ಹೋದಳು. **ಸ್ನುಷೇ ಚ** ಸೊಸೆಯಂದಿರೂ ಕೂಡ **ಸ್ವಃ** ಸ್ವರ್ಗವನ್ನು ಕುರಿತು **ಯಯತುಃ** ಹೋದರು.

**ತಾತ್ಪರ್ಯ** :- ಆ ಸತ್ಯವತಿಯು ಮಗನಾದ ವ್ಯಾಸರ ಮಾತಿನಂತೆ ನಡೆದು ಪರಮಾತ್ಮನನ್ನು ಮಗನೆಂದು ಮತ್ತು ಪರಬ್ರಹ್ಮನೆಂದು ಉಪಾಸನೆ ಮಾಡಿದಳು. ಪರಮಾತ್ಮನ ಅನುಗ್ರಹದಿಂದಲೇ ಶ್ರೇಷ್ಠವಾದ ವಿಷ್ಣುವಿನ ಸ್ಥಾನವಾದ ಮೋಕ್ಷವನ್ನು ಪಡೆದಳು. ಅವಳ ಸೊಸೆಯಂದಿರಾದ ಅಂಬಿಕಾ ಮತ್ತು ಅಂಬಾಲಿಕಾರು ಸ್ವರ್ಗಕ್ಕೆ ಹೋದರು.

**ಮಾತಾ ಚ ಸಾ ವಿದುರಸ್ಯಾಽಪ ಲೋಕಂ**
**ವೈರಿಂಚಮನ್ವೇವ ಗತಾಂಽಬಿಕಾಂ ಸತೀ ।**
**ವ್ಯಾಸಪ್ರಸಾದಾತ್ ಸುತಸದ್ಗುಣೈಶ್ಚ**
**ಕಾಲೇನ ಮುಕ್ತಿಂ ಚ ಜಗಾಮ ಸನ್ಮತಿಃ ॥ ೧೬೮ ॥**

ಪದಚ್ಛೇದ :- ಮಾತಾ, ಚ, ಸಾ, ವಿದುರಸ್ಯ, ಆಪ, ಲೋಕಂ, ವೈರಿಂಚಂ, ಅನು, ಏವ, ಗತಾಂ, ಅಂಬಿಕಾಂ, ಸತೀ, ವ್ಯಾಸಪ್ರಸಾದಾತ್, ಸುತಸದ್ಗುಣೈಃ, ಚ, ಕಾಲೇನ, ಮುಕ್ತಿಂ, ಚ, ಜಗಾಮ, ಸನ್ಮತಿಃ

**ಅರ್ಥ** :- **ಅಂಬಿಕಾಂ** ಅಂಬಿಕೆಯನ್ನು **ಅನುಗತಾ ಏವ** ಅನುಸರಿಸಿಕೊಂಡೇ ಹೋದ **ಸತೀ** ಪತಿವ್ರತೆಯಾದ **ವಿದುರಸ್ಯ** ವಿದುರನ **ಮಾತಾ ಚ** ತಾಯಿ ಯಾದರೂ **ವ್ಯಾಸಪ್ರಸಾದಾತ್** ವೇದವ್ಯಾಸರ ಅನುಗ್ರಹದಿಂದ **ಚ** ಮತ್ತು **ಸುತಸದ್ಗುಣೈಃ** ಮಗನ ಸದ್ಗುಣಗಳಿಂದ **ವೈರಿಂಚಂ** ಬ್ರಹ್ಮದೇವರ ಸಂಬಂಧಿಯಾದ **ಲೋಕಂ** ಸತ್ಯಲೋಕವನ್ನು **ಆಪ** ಹೊಂದಿದಳು. **ಸನ್ಮತಿಃ** ಸದ್ಬುದ್ಧಿಯುಳ್ಳ ಅವಳು **ಕಾಲೇನ** ಕಾಲಕ್ರಮೇಣ **ಮುಕ್ತಿಂ** ಮುಕ್ತಿಯನ್ನು **ಜಗಾಮ** ಹೊಂದಿದಳು.

**ತಾತ್ಪರ್ಯ** :- ಪತಿವ್ರತೆಯಾದ ವಿದುರನ ತಾಯಿ ಅಂಬಿಕೆಯನ್ನು ಅನುಸರಿಸಿಕೊಂಡು ಹೋಗಿ ವೇದವ್ಯಾಸರ ಅನುಗ್ರಹದಿಂದ ಮತ್ತು ಮಗನ ಸದ್ಗುಣಗಳಿಂದ ಬ್ರಹ್ಮದೇವರ ಸತ್ಯಲೋಕವನ್ನು ಹೊಂದಿದಳು. ಸದ್ಬುದ್ಧಿಯನ್ನು ಹೊಂದಿದ ಅವಳು ಕಾಲಕ್ರಮದಿಂದ ಮುಕ್ತಿಯನ್ನು ಹೊಂದಿದಳು.

**ಅಂಬಾಲಿಕಾಽಪಿ ಕ್ರಮಯೋಗತೋಽಗಾತ್**
**ಪರಾಂ ಗತಿಂ ನೈವ ತಥಾಂಽಬಿಕಾ ಯಯೌ ।**
**ಯಥಾಯಥಾ ವಿಷ್ಣುಪರಶ್ಚಿದಾತ್ಮಾ**
**ತಥಾತಥಾ ಹ್ಯಸ್ಯ ಗತಿಃ ಪರತ್ರ ॥ ೧೬೯ ॥**

ಪದಚ್ಛೇದ :- ಅಂಬಾಲಿಕಾ, ಅಪಿ, ಕ್ರಮಯೋಗತಃ, ಅಗಾತ್, ಪರಾಂ, ಗತಿಂ, ನ, ಏವ, ತಥಾ, ಅಂಬಿಕಾ, ಯಯೌ, ಯಥಾಯಥಾ, ವಿಷ್ಣುಪರಃ, ಚಿದಾತ್ಮಾ ತಥಾತಥಾ, ಹಿ, ಅಸ್ಯ, ಗತಿಃ, ಪರತ್ರ.

**ಅರ್ಥ** :- **ಅಂಬಾಲಿಕಾ ಅಪಿ** ಅಂಬಾಲಿಕೆಯಾದರೂ **ಕ್ರಮಯೋಗತಃ** ಕಾಲಕ್ರಮದಿಂದ ಸಂಪಾದಿತವಾದ ಮೋಕ್ಷೋಪಾಯದಿಂದ **ಪರಾಂ** ಉತ್ತಮ ವಾದ **ಗತಿಂ** ವೈಕುಂಠಾದಿಸ್ಥಾನವನ್ನು **ಅಗಾತ್** ಹೊಂದಿದಳು. **ತಥಾ** ಹಾಗೆ **ಅಂಬಿಕಾ** ಅಂಬಿಕೆಯು **ನ ಯಯೌ** ಏವ ಉತ್ತಮಗತಿಯನ್ನು ಹೊಂದಲೇ ಇಲ್ಲ. **ಚಿದಾತ್ಮಾ** ಜೀವಾತ್ಮನು **ಯಥಾಯಥಾ** ಹೇಗೆ ಹೇಗೆ **ವಿಷ್ಣುಪರಃ** ಪರಮಾತ್ಮನಲ್ಲಿ ಭಕ್ತಿಯುಳ್ಳವನಾಗುತ್ತಾನೋ **ತಥಾತಥಾ** ಹಾಗೆ ಹಾಗೆ **ಅಸ್ಯ** ಈ ಜೀವಾತ್ಮನಿಗೆ **ಪರತ್ರ** ಪರಲೋಕದಲ್ಲಿ **ಗತಿಃ** ಗತಿಯಾಗುತ್ತದೆ **ಹಿ** ಪ್ರಸಿದ್ಧವು.

**ತಾತ್ಪರ್ಯ** :- ಅಂಬಾಲಿಕೆಯು ಕಾಲಕ್ರಮವಾಗಿ ಪಡೆದುಕೊಂಡ ಉಪಾಯದಿಂದ ಉತ್ತಮವಾದ ವೈಕುಂಠಾದಿ ಲೋಕವನ್ನು ಪಡೆದಳು. ಆದರೆ ಅಂಬಿಕೆಯು ಹಾಗೆ ವೈಕುಂಠವನ್ನು ಹೊಂದಲಿಲ್ಲ. ಹೊರತು ಸಾರೂಪ್ಯ ವನ್ನು ಪಡೆದಳು. ಜೀವನು ಹೇಗೆ ಹೇಗೆ ಪರಮಾತ್ಮನಲ್ಲಿ ಭಕ್ತಿಯನ್ನು ಮಾಡುತ್ತಾನೋ ಹಾಗೆ ಹಾಗೆ ಪರಲೋಕದಲ್ಲಿ ಉತ್ತಮ ಗತಿಯನ್ನು ಪಡೆಯುತ್ತಾನೆ ಎಂದು ಪ್ರಸಿದ್ಧವಾಗಿದೆ.

**ಪಾಂಡುಸ್ತತೋ ರಾಜ್ಯಭರಂ ನಿಧಾಯ**
**ಜ್ಯೇಷ್ಠಾನುಜೇ ಚೈವ ವನಂ ಜಗಾಮ ।**
**ಪತ್ನೀದ್ವಯೇನಾನುಗತೋ ಬದರ್ಯಾಮ್**
**ಉವಾಸ ನಾರಾಯಣಪಾಲಿತಾಯಾಮ್ ॥ ೧೭೦ ॥**

ಪದಚ್ಛೇದ :- ಪಾಂಡುಃ, ತತಃ, ರಾಜ್ಯಭರಂ, ನಿಧಾಯ, ಜ್ಯೇಷ್ಠಾನುಜೇ, ಚ, ಏವ,ವನಂ, ಜಗಾಮ, ಪತ್ನೀದ್ವಯೇನ, ಅನುಗತಃ, ಬದರ್ಯಾಂ, ಉವಾಸ, ನಾರಾಯಣಪಾಲಿತಾಯಾಮ್.

**ಅರ್ಥ** :- **ತತಃ** ಅನಂತರ **ಪಾಂಡುಃ** ಪಾಂಡುರಾಜನು **ಜ್ಯೇಷ್ಠೇ** ಹಿರಿಯನಾದ ಧೃತರಾಷ್ಟ್ರನಲ್ಲಿ **ಅನುಜೇ ಚ** ತಮ್ಮನಾದ ವಿದುರನಲ್ಲಿಯೂ **ರಾಜ್ಯಭಾರಂ** ರಾಜ್ಯಭಾರವನ್ನು **ನಿಧಾಯ** ಇಟ್ಟು **ಪತ್ನೀದ್ವಯೇನ** ಇಬ್ಬರು ಹೆಂಡತಿಯರಿಂದ **ಅನುಗತಃ** ಅನುಸರಿಸಲ್ಪಟ್ಟವನಾಗಿ **ವನಂ** ಏವ ಕಾಡನ್ನು ಕುರಿತು **ಜಗಾಮ** ಹೋದನು. **ನಾರಾಯಣಪಾಲಿತಾಯಾಂ** ನಾರಾಯಣ ನಿಂದ ರಕ್ಷಿತವಾದ **ಬದರ್ಯಾಂ** ಬದರಿಕಾಶ್ರಮದಲ್ಲಿ **ಉವಾಸ** ವಾಸಮಾಡಿದನು.

ತಾತ್ಪರ್ಯ :- ಅನಂತರ ಪಾಂಡುರಾಜನು ರಾಜ್ಯಭಾರವನ್ನು ಅಣ್ಣನಾದ ಧೃತರಾಷ್ಟ್ರನಲ್ಲಿ ಮತ್ತು ತಮ್ಮನಾದ ವಿದುರನಲ್ಲಿ ಒಪ್ಪಿಸಿ ಇಬ್ಬರು ಹೆಂಡಂದಿರನ್ನು ಕರೆದುಕೊಂಡು ಕಾಡಿಗೆ ಹೋದನು. ನಾರಾಯಣನಿಂದ ರಕ್ಷಿತವಾದ ಬದರಿಯಲ್ಲಿ ವಾಸಮಾಡಿದನು.

ಗೃಹಾಶ್ರಮೇಣೈವ ವನೇ ನಿವಾಸಂ
ಕುರ್ವನ್ ಸ ಭೋಗಾನ್ ಬುಭುಜೇ ತಪಶ್ಚ ।
ಚಕ್ರೇ ಮುನೀಂದ್ರೈಃ ಸಹಿತೋ ಜಗತ್ಪತಿಂ
ರಮಾಪತಿಂ ಭಕ್ತಿಯುತೋಽಭಿಪೂಜಯನ್ ॥ ೧೭೧ ॥

ಪದಚ್ಛೇದ :- ಗೃಹಾಶ್ರಮೇಣ, ಏವ, ವನೇ, ನಿವಾಸಂ, ಕುರ್ವನ್, ಸಃ, ಭೋಗಾನ್, ಬುಭುಜೇ ತಪಃ, ಚ, ಚಕ್ರೇ, ಮುನೀಂದ್ರೈಃ, ಸಹಿತಃ, ಜಗತ್ಪತಿಂ, ರಮಾಪತಿಂ, ಭಕ್ತಿಯುತಃ, ಅಭಿಪೂಜಯನ್.

ಅರ್ಥ :- ಸಃ ಆ ಪಾಂಡುರಾಜನು ಗೃಹಾಶ್ರಮೇಣ ಏವ ಗೃಹಸ್ಥಾಶ್ರಮದಿಂದಲೇ ವನೇ ಕಾಡಿನಲ್ಲಿ ನಿವಾಸಂ ವಾಸವನ್ನು ಕುರ್ವನ್ ಮಾಡುತ್ತಾ ಭೋಗಾನ್ ಸುಖಗಳನ್ನು ಬುಭುಜೇ ಅನುಭವಿಸಿದನು. ಚ ಮತ್ತು ಮುನೀಂದ್ರೈಃ ಋಷಿಶ್ರೇಷ್ಠರುಗಳಿಂದ ಸಹಿತಃ ಕೂಡಿದವನಾಗಿ ಭಕ್ತಿಯುತಃ ಭಕ್ತಿಯಿಂದ ಸಹಿತನಾಗಿ ಜಗತ್ಪತಿಂ ಲೋಕಕ್ಕೆ ಒಡೆಯನಾದ ರಮಾಪತಿಂ ಲಕ್ಷ್ಮೀ ದೇವಿಯ ಗಂಡನಾದ ನಾರಾಯಣನನ್ನು ಅಭಿಪೂಜಯನ್ ಪೂಜಿಸುತ್ತಾ ತಪಃ ತಪಸ್ಸನ್ನು ಚಕ್ರೇ ಮಾಡಿದನು.

ತಾತ್ಪರ್ಯ :- ಆ ಪಾಂಡುರಾಜನು ಗೃಹಸ್ಥಾಶ್ರಮದಿಂದಲೇ ಕಾಡಿನಲ್ಲಿ ವಾಸಮಾಡುತ್ತಾ ಸುಖಗಳನ್ನು ಅನುಭವಿಸಿದನು. ಋಷಿಶ್ರೇಷ್ಠರೊಂದಿಗೆ ಭಕ್ತಿಯಿಂದ ಜಗತ್ತಿಗೆ ಸ್ವಾಮಿಯಾದ ನಾರಾಯಣನನ್ನು ಪೂಜಿಸುತ್ತಾ ತಪಸ್ಸನ್ನು ಮಾಡಿದನು.

ಸ ಕಾಮತೋ ಹರಿಣತ್ವಂ ಪ್ರಪನ್ನಂ
ದೈವಾದೃಷಿಂ ಗ್ರಾಮ್ಯಕರ್ಮಾನುಷಕ್ತಮ್ ।
ವಿದ್ಧ್ವಾ ಶಾಪಂ ಪ್ರಾಪ ತಸ್ಮಾತ್ ಸ್ತ್ರಿಯಾ
ಯುಙ್ಮರಿಷ್ಯಸೀತ್ಯೇವ ಬಭೂವ ಚಾರ್ತಃ ॥ ೧೭೨ ॥

ಪದಚ್ಛೇದ :- ಸಃ, ಕಾಮತಃ, ಹರಿಣತ್ವಂ, ಪ್ರಪನ್ನಂ, ದೈವಾತ್, ಋಷಿಂ, ಗ್ರಾಮ್ಯಕರ್ಮಾನುಷಕ್ತಂ, ವಿದ್ಧ್ವಾ, ಶಾಪಂ, ಪ್ರಾಪ, ತಸ್ಮಾತ್, ಸ್ತ್ರಿಯಾ, ಯುಕ್, ಮರಿಷ್ಯಸಿ, ಇತಿ, ಏವ, ಬಭೂವ, ಚ, ಆರ್ತಃ.

**ಅರ್ಥ** :- **ಸಃ** ಆ ಪಾಂಡುರಾಜನು **ದೈವಾತ್** ಭಗವಂತನ ಇಚ್ಛೆಯಿಂದ **ಕಾಮತಃ** ಸ್ವೇಚ್ಛೆಯಿಂದ **ಹರಿಣತ್ವಂ** ಜಿಂಕೆಯರೂಪವನ್ನು **ಪ್ರಪನ್ನಂ** ಹೊಂದಿದ **ಗ್ರಾಮ್ಯಕರ್ಮಾನುಷಕ್ತಂ** ಮೈಥುನಕ್ರಿಯೆಯಲ್ಲಿ ಆಸಕ್ತನಾದ **ಋಷಿಂ** ಕಿಂದಮ ಋಷಿಯನ್ನು **ವಿದ್ಧ್ವಾ** ಬಾಣದಿಂದ ಹೊಡೆದು **ತಸ್ಮಾತ್** ಆ ಋಷಿಯಿಂದ **ಸ್ತ್ರಿಯಾ** ಸ್ತ್ರೀಯೊಂದಿಗೆ **ಯುಕ್** ಯುಕ್ತನಾಗಿ (ರತಿಕ್ರೀಡೆಯಲ್ಲಿ ಆಸಕ್ತನಾಗಿ) **ಮರಿಷ್ಯಸಿ** ಮರಣವನ್ನು ಹೊಂದುವೆ **ಇತಿ ಏವ** ಎಂಬುದಾಗಿಯೇ **ಶಾಪಂ** ಶಾಪವನ್ನು **ಪ್ರಾಪ** ಹೊಂದಿದನು. **ಆರ್ತಃ ಚ** ದುಃಖಿತನೂ **ಬಭೂವ** ಆದನು.

**ತಾತ್ಪರ್ಯ** :- ಆ ಪಾಂಡುರಾಜನು ದೈವಾಧೀನನಾಗಿದ್ದನು. ಆದರೂ ಸ್ವೇಚ್ಛೆಯಿಂದ ಜಿಂಕೆಯರೂಪವನ್ನು ಹೊಂದಿ ರತಿಕ್ರೀಡೆಯಲ್ಲಿ ಆಸಕ್ತನಾಗಿದ್ದ ಕಿಂದಮ ಋಷಿಯನ್ನು ಬಾಣದಿಂದ ಹೊಡೆದು ಅವನಿಂದ 'ನೀನು ಸ್ತ್ರೀಯೊಂದಿಗೆ ರತಿಕ್ರೀಡೆಯಲ್ಲಿ ಆಸಕ್ತನಾದರೆ ಮರಣವನ್ನು ಹೊಂದುವಿ' ಎಂದು ಶಾಪವನ್ನು ಪಡೆದು ದುಃಖಿತನಾದನು.

ನ್ಯಸಿಷ್ಣುರುಕ್ತಃ ಪೃಥಯಾ ಸ ನೇತಿ
ಪ್ರಣಾಮಪೂರ್ವಂ ನ್ಯವಸತ್ ತಥೈವ ।
ತಾಭ್ಯಾಂ ಸಮೇತಃ ಶತಶೃಂಗಪರ್ವತೇ
ನಾರಾಯಣಸ್ಯಾಶ್ರಮಮಧ್ಯಗೇ ಪುರಃ ॥ ೧೭೩ ॥

ಪದಚ್ಛೇದ :- ನ್ಯಸಿಷ್ಣುಃ, ಉಕ್ತಃ, ಪೃಥಯಾ, ಸಃ, ನ, ಇತಿ, ಪ್ರಣಾಮಪೂರ್ವಂ, ನ್ಯವಸತ್, ತಥಾ, ಏವ, ತಾಭ್ಯಾಂ, ಸಮೇತಃ, ಶತಶೃಂಗಪರ್ವತೇ, ನಾರಾಯಣಸ್ಯ ಆಶ್ರಮಮಧ್ಯಗೇ, ಪುರಃ.

**ಅರ್ಥ** :- **ನ್ಯಸಿಷ್ಣುಃ** ಸನ್ಯಾಸವನ್ನು ಸ್ವೀಕರಿಸಲು ಇಚ್ಛೆಯುಳ್ಳ ಪಾಂಡುರಾಜನು **ಪೃಥಯಾ** ಕುಂತಿಯಿಂದ **ಪ್ರಣಾಮಪೂರ್ವಕಂ** ನಮಸ್ಕಾರ ಪೂರ್ವಕವಾಗಿ **ನ ಇತಿ** ಬೇಡವೆಂದು **ಉಕ್ತಃ** ಹೇಳಲ್ಪಟ್ಟವನಾಗಿ **ತಥಾ ಏವ**

ಹಾಗೆಯೇ **ತಾಭ್ಯಾಂ** ಆ ಕುಂತಿ ಮತ್ತು ಮಾದ್ರಿಯರೊಂದಿಗೆ **ಸಮೇತಃ** ಕೂಡಿದವನಾಗಿ **ಆಶ್ರಮಮಧ್ಯಗೇ** ಬದರಿಕಾಶ್ರಮದ ಮಧ್ಯದಲ್ಲಿರುವ **ಶತ ಶೃಂಗಪರ್ವತೇ** ಶತಶೃಂಗ ಪರ್ವತದಲ್ಲಿರುವ **ನಾರಾಯಣಸ್ಯ** ವೇದವ್ಯಾಸ ದೇವರ, **ಪುರಃ** ಮುಂಭಾಗದಲ್ಲಿ **ನ್ಯವಸತ್** ವಾಸಿಸಿದನು.

**ತಾತ್ಪರ್ಯ** :- ಪಾಂಡುರಾಜನು ಸನ್ಯಾಸಾಶ್ರಮವನ್ನು ಸ್ವೀಕರಿಸಲು ಬಯಸಿದನು. ಕುಂತಿಯು ನಮಸ್ಕರಿಸಿ ಬೇಡವೆಂದು ಪ್ರಾರ್ಥಿಸಿದಾಗ ಇಬ್ಬರು ಹೆಂಡತಿಯರೊಂದಿಗೆ ಬದರಿಕಾಶ್ರಮದ ಮಧ್ಯದಲ್ಲಿರುವ ಶತಶೃಂಗಪರ್ವತ ದಲ್ಲಿರುವ ವೇದವ್ಯಾಸದೇವರ ಮುಂಭಾಗದಲ್ಲಿ ವಾಸಿಸತೊಡಗುತ್ತಾನೆ.

**ತಪೋ ನಿತಾಂತಂ ಸ ಚಕಾರ ತಾಭ್ಯಾಂ ಸಮನ್ವಿತಃ ಕೃಷ್ಣಪದಾಂಬುಜಾಶ್ರಯಃ ।**
**ತತ್ಸಂಗಪೂತದ್ಯುಸರಿದ್ವರಾಂಭಃ ಸದಾವಗಾಹಾತಿಪವಿತ್ರಿತಾಂಗಃ ॥ ೧೭೪ ॥**

ಪದಚ್ಛೇದ :- ತಪಃ, ನಿತಾಂತಂ, ಸಹ, ಚಕಾರ, ತಾಭ್ಯಾಂ, ಸಮನ್ವಿತಃ, ಕೃಷ್ಣಪದಾಂಬುಜಾಶ್ರಯಃ, ತತ್ಸಂಗಪೂತದ್ಯುಸರಿದ್ವರಾಂಭಃ, ಸದಾ, ಅವಗಾಹಾತಿಪವಿತ್ರತಾಂಗತಃ

**ಅರ್ಥ** :- **ತಾಭ್ಯಾಂ** ಆ ಕುಂತಿ ಮತ್ತು ಮಾದ್ರಿಯರೊಂದಿಗೆ **ಸಮನ್ವಿತಃ** ಕೂಡಿದ **ಕೃಷ್ಣಪದಾಂಬುಜಾಶ್ರಯಃ** ಪರಮಾತ್ಮನ ಪಾದಕಮಲಗಳನ್ನು ಆಶ್ರಯಿಸಿದ **ಸಃ** ಆ ಪಾಂಡುರಾಜನು **ತತ್ಸಂಗಪೂತದ್ಯುಸರಿದ್ವರಾಂಭಃ** ಪರಮಾತ್ಮನ ಪಾದನಖದ ಸಂಪರ್ಕದಿಂದ ಪವಿತ್ರಳಾದ ದೇವನದಿಯಾದ ಗಂಗೆಯ ಉತ್ತಮವಾದ ನೀರಿನಲ್ಲಿ **ಸದಾ** ಯಾವಾಗಲೂ **ಅವಗಾಹಾತಿ ಪವಿತ್ರತಾಂಗಃ** ಸ್ನಾನ ಮಾಡುವುದರಿಂದ ಪವಿತ್ರಗೊಳಿಸಲ್ಪಟ್ಟ ದೇಹವುಳ್ಳವನಾಗಿ **ನಿತಾಂತಂ** ಬಹಳವಾಗಿ **ತಪಃ** ತಪಸ್ಸನು **ಚಕಾರ** ಮಾಡಿದನು.

**ತಾತ್ಪರ್ಯ** :- ಪರಮಾತ್ಮನ ಪಾದಕಮಲಗಳನ್ನು ಆಶ್ರಯಿಸಿದ ಪಾಂಡು ರಾಜನು ಹೆಂಡತಿಯರೊಂದಿಗೆ ಸಹಿತನಾಗಿ ಪರಮಾತ್ಮನ ಪಾದನಖದ ಸಂಪರ್ಕದಿಂದ ಪವಿತ್ರಳಾದ ಗಂಗೆಯ ನೀರಿನಲಿ ಪ್ರತಿನಿತ್ಯ ಸ್ನಾನ ಮಾಡಿ ದೇಹದ ಪಾವಿತ್ರ್ಯವನ್ನು ಸಂಪಾದಿಸಿಕೊಂಡು ಬಹಳ ತಪಸ್ಸನ್ನು ಮಾಡಿದನು.

**ಏತಸ್ಮಿನ್ನೇವ ಕಾಲೇ ಕಮಲಭವಶಿವಾಗ್ರೇಸರಾಃ ಶಕ್ರಪೂರ್ವಾ**
**ಭೂಮ್ಯಾ ಪಾಪಾತ್ಮದೈತ್ಯೈರ್ಭುವಿ ಕೃತನಿಲಯೈರಾಕ್ರಮಂ ಚಾಸಹಂತ್ಯಾ ।**

ಈಯುರ್ದೇವಾಧಿದೇವಂ ಶರಣಮಜಗುರುಂ ಪೂರ್ಣಷಾಡ್ಗುಣ್ಯಮೂರ್ತಿಂ
ಕ್ಷೀರಬ್ಧೌ ನಾಗಭೋಗೇ ಶಯಿತಮನುಪಮಾನಂದಸಂದೋಹದೇಹಮ್
॥ ೧೭೩॥

ಪದಚ್ಛೇದ :- ಏತಸ್ಮಿನ್, ಏವ, ಕಾಲೇ, ಕಮಲಭವಶಿವಾಗ್ರೇಸರಾಃ, ಶಕ್ರಪೂರ್ವಾಃ, ಭೂಮ್ಯಾ, ಪಾಪಾತ್ಮದೈತ್ಯೈಃ, ಭುವಿ, ಕೃತನಿಲಯ್ಯೈಃ, ಆಕ್ರಮಂ, ಚ, ಅಸಹಂತ್ಯಾ, ಈಯುಃ, ದೇವಾಧಿದೇವಂ, ಶರಣಂ, ಅಜಗುರುಂ, ಪೂರ್ಣಷಾಡ್ಗುಣ್ಯಮೂರ್ತಿಂ, ಕ್ಷೀರಾಬ್ಧೌ ನಾಗಭೋಗೇ, ಶಯಿತಂ, ಅನುಪಮಾನಂದಸಂದೋಹದೇಹಮ್.

**ಅರ್ಥ** :- **ಏತಸ್ಮಿನ್** ಈ ಯಾವ **ಕಾಲೇ ಏವ** ಸಮಯದಲ್ಲಿಯೇ **ಕಮಲಭವಶಿವಾಗ್ರೇಸರಾಃ** ಬ್ರಹ್ಮ ರುದ್ರರೇ ಮೊದಲಾಗಿ ಉಳ್ಳ **ಶಕ್ರಪೂರ್ವಾಃ** ಇಂದ್ರನೇ ಮೊದಲಾದ ದೇವತೆಗಳು **ಭುವಿ** ಭೂಮಿಯಲ್ಲಿ **ಕೃತನಿಲಯ್ಯೈಃ** ಮಾಡಲ್ಪಟ್ಟವಾಸವುಳ್ಳ **ಪಾಪಾತ್ಮದೈತ್ಯೈಃ** ಪಾಪಿಷ್ಠರಾದ ರಾಕ್ಷಸರಿಂದ **ಆಕ್ರಮಂ** ಆಕ್ರಮಣವನ್ನು **ಅಸಹಂತ್ಯಾ** ಸಹಿಸದಿರುವ **ಭೂಮ್ಯಾ** ಭೂದೇವಿಯೊಂದಿಗೆ ಕೂಡಿಕೊಂಡು **ದೇವಾಧಿದೇವಂ** ದೇವತೆಗಳಿಗೆ ಮುಖ್ಯ ಒಡೆಯನಾದ **ಅಜಗುರುಂ** ಬ್ರಹ್ಮನಿಗೂ ಗುರುವೆನಿಸಿದ **ಪೂರ್ಣಷಾಡ್ಗುಣ್ಯಮೂರ್ತಿಂ** ಪೂರ್ಣಗಳಾದ ಐಶ್ವರ್ಯಾದಿ ಷಡ್ಗುಣಗಳೇ ಸ್ವರೂಪವಾಗಿ ಉಳ್ಳ **ಕ್ಷೀರಾಬ್ಧೌ** ಕ್ಷೀರಸಮುದ್ರದಲ್ಲಿ **ನಾಗಭೋಗೇ** ಶೇಷನ ಶರೀರದಲ್ಲಿ **ಶಯಿತಂ** ಮಲಗಿರುವ **ಅನುಪಮಾನಂದಸಂದೋಹದೇಹಂ** ಅಸದೃಶವಾದ ಆನಂದದ ಸಮೂಹವೇ ಶರೀರವಾಗಿ ಉಳ್ಳ ಶ್ರೀಹರಿಯನ್ನು **ಶರಣಂ** ರಕ್ಷಕನನ್ನಾಗಿ **ಈಯುಃ** ಹೊಂದಿದರು.

**ತಾತ್ಪರ್ಯ** :- ಪಾಂಡುರಾಜನು ತಪಸ್ಸನ್ನು ಮಾಡುತ್ತಿರುವ ಕಾಲದಲ್ಲಿಯೇ ಬ್ರಹ್ಮರುದ್ರರನ್ನು ಮುಂದೆಮಾಡಿಕೊಂಡು ಇಂದ್ರಾದಿ ದೇವತೆಗಳು ಭೂಮಿಯಲ್ಲಿ ನೆಲೆಸಿದ ಪಾಪಿಷ್ಠರಾದ ದೈತ್ಯರ ಆಕ್ರಮಣವನ್ನು ಸಹಿಸದಿರುವ ಭೂದೇವಿಯೊಂದಿಗೆ ಕೂಡಿಕೊಂಡು ಕ್ಷೀರಸಮುದ್ರದಲ್ಲಿ ಶೇಷನ ದೇಹದ ಮೇಲೆ ಮಲಗಿರುವ, ಪೂರ್ಣಷಡ್ಗುಣಸ್ವರೂಪಿಯಾದ, ಅಸದೃಶ ವಾದ ಆನಂದದ ಸಮೂಹವೇ ಶರೀರವಾಗಿ ಉಳ್ಳ, ಬ್ರಹ್ಮದೇವರಿಗೂ ಗುರು ವಾದ, ದೇವತೆಗಳಿಗೆ ಅಧಿನಾಯಕನಾದ ಪರಮಾತ್ಮನನ್ನು ಮೊರೆಹೊಕ್ಕರು.

ಊಚುಃ ಪರಂ ಪುರುಷಮೇನಮನಂತಶಕ್ತಿಂ
ಸೂಕ್ತೇನ ತೇಽಬ್ಜಜಮುಖಾ ಅಪಿ ಪೌರುಷೇಣ ।
ಸ್ತುತ್ವಾ ಧರಾಽಸುರವರಾಕ್ರಮಣಾತ್ ಪರೇಶ
ಖಿನ್ನಾ ಯತೋ ಹಿ ವಿಮುಖಾಸ್ತವ ತೇಽತಿಪಾಪಾಃ ॥ ೧೭೬ ॥

ಪದಚ್ಛೇದ :- ಊಚುಃ, ಪರಂ, ಪುರುಷಂ, ಏನಂ, ಅನಂತಶಕ್ತಿಂ, ಸೂಕ್ತೇನ, ತೇ, ಅಬ್ಜಜಮುಖಾಃ, ಅಪಿ, ಪೌರುಷೇಣ, ಸ್ತುತ್ವಾ, ಧರಾ, ಅಸುರವರಾಕ್ರಮಣಾತ್, ಪರೇಶ, ಖಿನ್ನಾ, ಯತಃ, ಹಿ, ವಿಮುಖಾಃ, ತವ, ತೇ, ಅತಿಪಾಪಾಃ.

**ಅರ್ಥ** :- **ತೇ** ಆ ಯಾವ **ಅಬ್ಜಜಮುಖಾಃ ಅಪಿ** ಬ್ರಹ್ಮನೇ ಮೊದಲಾದ ದೇವತೆಗಳೂ ಕೂಡ **ಪೌರುಷೇಣ ಸೂಕ್ತೇನ** ಪುರುಷಸೂಕ್ತದಿಂದ **ಅನಂತಶಕ್ತಿಂ** ಅಪರಿಮಿತವಾದ ಶಕ್ತಿಯುಳ್ಳ **ಪರಂ** ಉತ್ತಮನಾದ **ಏನಂ** ಈ ಯಾವ **ಪುರುಷಂ** ಪರಮಾತ್ಮನನ್ನು **ಸ್ತುತ್ವಾ** ಸ್ತೋತ್ರ ಮಾಡಿ **ಊಚುಃ** ಹೇಳಿದರು. **ಹೇ ಪರೇಶ** ಸರ್ವೋತ್ತಮನಾದ ಸ್ವಾಮಿಯೇ! **ಯತಃ** ಯಾವಕಾರಣದಿಂದ **ಅತಿಪಾಪಾಃ** ಅತ್ಯಂತ ಪಾಪಿಷ್ಠರಾದ **ತೇ** ಆ ದೈತ್ಯರು **ತವ** ನಿನಗೆ **ಅತಿವಿಮುಖಾಃ** ಅತ್ಯಂತ ವಿಮುಖರಾಗಿದ್ದಾರೋ **ತತ್** ಆ ಕಾರಣದಿಂದ **ಧರಾ** ಭೂದೇವಿಯು **ಅಸುರವರಾಕ್ರಮಣಾತ್** ದೈತ್ಯಶ್ರೇಷ್ಠರ ಆಕ್ರಮಣ ದಿಂದ **ಖಿನ್ನಾ** ದುಃಖಿತಳಾಗಿದ್ದಾಳೆ.

**ತಾತ್ಪರ್ಯ** :- ಬ್ರಹ್ಮನೇ ಮೊದಲದ ದೇವತೆಗಳು ಅಪರಿಮಿತವಾದ ಶಕ್ತಿಯುಳ್ಳ, ಉತ್ತಮನಾದ ಪರಮಾತ್ಮನನ್ನು ಪುರುಷಸೂಕ್ತದಿಂದ ಸ್ತೋತ್ರಮಾಡಿ ಹೇಳಿದರು– 'ಸರ್ವೋತ್ತಮನೇ! ಪಾಪಿಷ್ಠರಾದ ದೈತ್ಯರು ನಿನಗೆ ವಿಮುಖ ರಾಗಿದ್ದಾರೆ. ಇಂತಹ ದೈತ್ಯರ ಆಕ್ರಮಣದಿಂದ ಭೂದೇವಿ ದುಃಖಿತಳಾಗಿದ್ದಾಳೆ.

ದುಸ್ಸಂಗತಿರ್ಭವತಿ ಭಾರವದೇವ ದೇವ
ನಿತ್ಯಂ ಸತಾಮಪಿ ಹಿ ನಃ ಶೃಣು ವಾಕ್ಯಮೀಶ ।
ಪೂರ್ವಂ ಹತಾ ದಿತಿಸುತಾ ಭವತಾ ರಣೇಷು
ಹ್ಯಸ್ಮತ್ಪ್ರಿಯಾರ್ಥಮಧುನಾ ಭುವಿ ತೇಽಭಿಜಾತಾಃ ॥ ೧೭೭ ॥

ಪದಚ್ಛೇದ :- ದುಸ್ಸಂಗಂತಿಃ, ಭವತಿ, ಭಾರವತ್, ಏವ, ದೇವ, ನಿತ್ಯಂ, ಸತಾಂ, ಅಪಿ, ಹಿ, ನಃ, ಶೃಣು, ವಾಕ್ಯಂ, ಈಶ, ಪೂರ್ವಂ, ಹತಾಃ, ದಿತಿಸುತಾಃ, ಭವತಾ, ರಣೇಷು, ಹಿ, ಅಸ್ಮತ್ಪ್ರಿಯಾರ್ಥಂ, ಅಧುನಾ, ಭುವಿ, ತೇ, ಅಭಿಜಾತಾಃ.

**ಅರ್ಥ** :- **ದೇವ** ಸ್ವಾಮಿಯೇ! **ನಿತ್ಯಂ** ಯಾವಾಗಲೂ **ದುಸ್ಸಂಗತಿಃ** ದುರ್ಜನರ ಸಂಗವು **ಸತಾಂ** ಸಜ್ಜನರಿಗೆ **ಭಾರವತ್ ಏವ** ಭಾರದಂತೆಯೇ **ಭವತಿ** ಆಗುತ್ತದೆ. **ಈಶ** ಪ್ರಭುವೇ! **ನಃ** ನಮ್ಮ **ವಾಕ್ಯಂ ಅಪಿ** ಮಾತನ್ನೂ **ಶೃಣು** ಕೇಳು. **ಪೂರ್ವಂ** ಹಿಂದೆ **ದಿತಿಸುತಾಃ** ದೈತ್ಯರು **ಅಸ್ಮತ್ಪ್ರಿಯಾರ್ಥಂ** ನಮ್ಮ ಸಂತೋಷಕ್ಕಾಗಿ **ಭವತಾ** ನಿನ್ನಿಂದ **ರಣೇಷು** ಯುದ್ಧಗಳಲ್ಲಿ **ಹತಾಃ ಹಿ** ಕೊಲ್ಲಲ್ಪಟ್ಟಿದ್ದಾರಷ್ಟೇ. **ತೇ** ಅವರು **ಅಧುನಾ** ಈಗ **ಭುವಿ** ಭೂಮಿಯಲ್ಲಿ **ಅಭಿಜಾತಾಃ** ಹುಟ್ಟಿದ್ದಾರೆ.

**ತಾತ್ಪರ್ಯ** :- ಸ್ವಾಮಿ! ದುರ್ಜನರ ಸಂಗ ಸಜ್ಜನರಿಗೆ ಯಾವಾಗಲೂ ಭಾರದಂತೆಯೇ ಆಗುತ್ತದೆ. ಪ್ರಭುವೇ! ನಮ್ಮ ಮಾತನ್ನು ಕೇಳು. ಹಿಂದೆ ನೀನು ನಮ್ಮ ಸಂತೋಷಕ್ಕಾಗಿ ಯುದ್ಧಗಳಲ್ಲಿ ದೈತ್ಯರನ್ನು ಕೊಂದಿದ್ದೆಯಷ್ಟೇ! ಅವರು ಈಗ ಭೂಮಿಯಲ್ಲಿ ಹುಟ್ಟಿ ಬಂದಿದ್ದಾರೆ.

**ಆಸೀತ್ ಪುರಾ ದಿತಿಸುತೈರಮರೋತ್ತಮಾನಾಂ**
**ಸಂಗ್ರಾಮ ಉತ್ತಮಗಜಾಶ್ವರಥದ್ವಿಪದ್ಭಿಃ ।**
**ಅಕ್ಷೌಹಿಣೀಶತಮಹೌಘಮಹೌಘಮೇವ**
**ಸೈನ್ಯಂ ಸುರಾತ್ಮಕಮಭೂತ್ ಪರಮಾಸ್ತ್ರಯುಕ್ತಮ್ ॥ ೧೭೭ ॥**

ಪದಚ್ಛೇದ :- ಆಸೀತ್, ಪುರಾ, ದಿತಿಸುತೈಃ, ಅಮರೋತ್ತಮಾನಾಂ, ಸಂಗ್ರಾಮಃ, ಉತ್ತಮಗಜಾಶ್ವರಥದ್ವಿಪದ್ಭಿಃ, ಅಕ್ಷೌಹಿಣೀಶತಮಹೌಘಮಹೌಘಂ, ಏವ, ಸೈನ್ಯಂ, ಸುರಾತ್ಮಕಂ, ಅಭೂತ್, ಪರಮಾಸ್ತ್ರಯುಕ್ತಮ್.

**ಅರ್ಥ** :- **ಪುರಾ** ಹಿಂದೆ **ಅಮರೋತ್ತಮಾನಾಂ** ದೇವತೆಗಳಿಗೆ **ದಿತಿಸುತೈಃ** ದೈತ್ಯರೊಡನೆ **ಸಂಗ್ರಾಮಃ** ಯುದ್ಧವು **ಆಸೀತ್** ನಡೆಯಿತು. **ಉತ್ತಮಗಜಾಶ್ವರಥದ್ವಿಪದ್ಭಿಃ** ಉತ್ತಮಗಳಾದ ಆನೆಗಳು, ಕುದುರೆಗಳು, ರಥಗಳು, ಪದಾತಿಗಳಿಂದ ಸಹಿತವಾದ **ಅಕ್ಷೌಹಿಣೀಶತಮಹೌಘಮಹೌಘಂ** ಅಕ್ಷೌಹಿಣೀಗಳ ನೂರರಿಂದ ಸಹಿತವಾದ ಮಹೌಘಗಳ ಮಹೌಘವುಳ್ಳ **ಪರಮಾಸ್ತ್ರಯುಕ್ತಂ** ಅದ್ಭುತ ಅಸ್ತ್ರಗಳಿಂದ ಯುಕ್ತವಾದ **ಸುರಾತ್ಮಕಂ ಏವ** ದೇವತೆಗಳ ಸಂಬಂಧಿಯೇ ಆದ **ಸೈನ್ಯಂ** ಸೈನ್ಯವು **ಅಭೂತ್** ಇದ್ದಿತು.

**ತಾತ್ಪರ್ಯ** :- ಹಿಂದೆ ದೇವತೆಗಳಿಗೆ ದೈತ್ಯರೊಂದಿಗೆ ಯುದ್ಧವು ನಡೆಯಿತು. ಆ ಯುದ್ಧದಲ್ಲಿ ಉತ್ತಮವಾದ ಆನೆಗಳು, ಕುದುರೆಗಳು, ರಥ ಗಳು ಮತ್ತು ಪದಾತಿಗಳಿಂದ ಕೂಡಿದ ನೂರು ಮಹೌಘಗಳ ಮಹೌಘಗಳಷ್ಟು ಅಕ್ಷೌಹಿಣಿ ಸೈನ್ಯವೇ ಇತ್ತು.

**ತಸ್ಮಾನ್ಮಹೌಘಗುಣಮಾಸ ಮಹಾಸುರಾಣಾಂ**
**ಸೈನ್ಯಂ ಶಿಲಾಗಿರಿಮಹಾಸ್ತ್ರಧರಂ ಸುಘೋರಮ್ ।**
**ತೇಷಾಂ ರಥಾಶ್ಚ ಬಹುನಲ್ವಪರಿಪ್ರಮಾಣಾ**
**ದೇವಾಸುರಪ್ರವರಕಾರ್ಮುಕಬಾಣಪೂರ್ಣಾಃ ।**
**ನಾನಾಂಬರಾಭರಣವೇಷವರಾಯುಧಾಢ್ಯಾ**
**ದೇವಾಸುರಾಃ ಸಸೃಪುರಾಶು ಪರಸ್ಪರಂ ತೇ ॥ ೧೭೯ ॥**

**ಪದಚ್ಛೇದ** :- ತಸ್ಮಾತ್, ಮಹೌಘಗುಣಂ, ಆಸ, ಮಹಾಸುರಾಣಾಂ, ಸೈನ್ಯಂ, ಶಿಲಾಗಿರಿಮಹಾಸ್ತ್ರಧರಂ, ಸುಘೋರಂ, ತೇಷಾಂ, ರಥಾಃ, ಚ, ಬಹುನಲ್ವಪರಿ ಪ್ರಮಾಣಾಃ, ದೇವಾಸುರಪ್ರವರಕಾರ್ಮುಕಬಾಣಪೂರ್ಣಾಃ, ನಾನಾಂಬರಾಭರಣ ವೇಷವರಾಯುಧಾಢ್ಯಾಃ, ದೇವಾಸುರಾಃ, ಸಸೃಪುಃ, ಆಶು, ಪರಸ್ಪರಂ, ತೇ.

**ಅರ್ಥ** :- **ತಸ್ಮಾತ್** ಆ ದೇವತೆಗಳ ಸೈನ್ಯಕ್ಕಿಂತ **ಮಹೌಘಗುಣಂ** ಮಹೌಘದಿಂದ ಗುಣಿತವಾದ **ಶಿಲಾಗಿರಿಮಹಾಸ್ತ್ರಧರಂ** ಬಂಡೆಕಲ್ಲುಗಳು, ಬೆಟ್ಟಗಳು ಮಹತ್ತಾದ ಅಸ್ತ್ರಗಳು ಇವುಗಳನ್ನು ಧರಿಸಿದ **ಸುಘೋರಂ** ಅತಿಭಯಂಕರವಾದ **ಮಹಾಸುರಾಣಾಂ** ಮಹಾಸುರರ **ಸೈನ್ಯಂ** ಸೈನ್ಯವು **ಆಸ** ಇದ್ದಿತು **ತೇಷಾಂ** ಆ ದೇವತೆಗಳ ಮತ್ತು ದೈತ್ಯರ **ರಥಾಃ ಚ** ರಥಗಳಾದರೂ **ಬಹುನಲ್ವಪರಿಪ್ರಮಾಣಾಃ** ಬಹಳ ನಲ್ವಗಳ ಪರಿಮಾಣ ಗಳುಳ್ಳವುಗಳು **ದೇವಾಸುರಪ್ರವರಕಾರ್ಮುಕಬಾಣಪೂರ್ಣಾಃ** ದೇವತೆಗಳ ಮತ್ತು ದೈತ್ಯರ ಶ್ರೇಷ್ಠವಾದ ಬಿಲ್ಲು, ಬಾಣಗಳಿಂದ ತುಂಬಿದವುಗಳಾಗಿದ್ದವು **ನಾನಾಂಬರಾಭರಣವೇಷವರಾಯುಧಾಢ್ಯಾಃ** ಅನೇಕ ವಿಧವಾದ ವಸ್ತ್ರಗಳು, ಆಭರಣಗಳು ಇವುಗಳಿಂದ ಉತ್ತಮ ವೇಷಗಳುಳ್ಳ ಉತ್ತಮವಾದ ಆಯುಧ ಗಳಿಂದ ಕೂಡಿದ **ತೇ** ಆಯಾವ **ದೇವಾಸುರಾಃ** ದೇವತೆಗಳು ಮತ್ತು ದೈತ್ಯರು **ಆಶು** ಕೂಡಲೇ **ಪರಸ್ಪರಂ** ಪರಸ್ಪರವಾಗಿ **ಸಸೃಪುಃ** ಯುದ್ಧಮಾಡಲು ಮುಂದಾದರು.

**ತಾತ್ಪರ್ಯ :-** ಅಸುರರ ಸೈನ್ಯವು ದೇವತೆಗಳ ಸೈನ್ಯಕ್ಕಿಂತ ಮಹೌಘ ಪಾಲು ಅಧಿಕ ವಾಗಿತ್ತು. ಬಂಡೆಕಲ್ಲು, ಬೆಟ್ಟಗಳು ಮಹಾಸ್ತ್ರಗಳು ಇವುಗಳನ್ನು ಧರಿಸಿ ಭಯಂಕರವಾಗಿತ್ತು. ದೇವಾಸುರರ ರಥಗಳು ಬಹಳ ನಲ್ವಪರಿಮಾಣ ದ್ದಾಗಿದ್ದವು. ಅವರ ಉತ್ತಮವಾದ ಬಿಲ್ಲು ಬಾಣಗಳಿಂದ ತುಂಬಿದ್ದವು. ಅನೇಕ ಬಟ್ಟೆಗಳು ಆಭರಣಗಳಿಂದ ಉತ್ತಮ ವೇಷಗಳನ್ನು ಹೊಂದಿದ ಉತ್ತಮ ಆಯುಧಗಳಿಂದ ಕೂಡಿದ ದೇವತೆಗಳು ಮತ್ತು ದೈತ್ಯರು ಕೂಡಲೇ ಒಬ್ಬರಿಗೊಬ್ಬರು ಯುದ್ಧಮಾಡಲು ಮುಂದಾದರು.

**ವಿವರಣೆ :-** 'ಕಿಷ್ಕುರ್ಹಸ್ತೇ ವಿತಸ್ತೌ ಚ ನಲ್ವಃ ಕಿಷ್ಕುಚತುಃಶತಮ್' ಎಂಬ ಪ್ರಮಾಣದಂತೆ ೪೦೦ ಹಸ್ತಪ್ರಮಾಣವನ್ನು 'ನಲ್ವ' ಎನ್ನುತ್ತಾರೆ.

**ಜಘ್ನುರ್ಗಿರೀಂದ್ರತಲಮುಷ್ಟಿಮಹಾಸ್ತ್ರಶಸ್ತ್ರೈಃ**
**ಚಕ್ರುರ್ನದೀಶ್ಚ ರುಧಿರೌಘವಹಾ ಮಹೌಘಮ್ ।**
**ತತ್ರ ಸ್ಮ ದೇವವೃಷಭೈರಸುರೇಶಚಮ್ವಾ**
**ಯುದ್ಧೇ ನಿಷೂದಿತ ಉತೌಘಬಲೈಃ ಶತಾಂಶಃ ॥ ೧೮೦ ॥**

ಪದಚ್ಛೇದ :- ಜಘ್ನುಃ, ಗಿರೀಂದ್ರತಲಮುಷ್ಟಿಮಹಾಸ್ತ್ರಶಸ್ತ್ರೈಃ, ಚಕ್ರುಃ, ನದೀಃ, ಚ, ರುಧಿರೌಘವಹಾಃ, ಮಹೌಘಂ, ತತ್ರ, ಸ್ಮ ದೇವವೃಷಭೈಃ, ಅಸುರೇಶಚಮ್ವಾ ಯುದ್ಧೇ, ನಿಷೂದಿತಃ, ಉತ, ಓಘಬಲೈಃ, ಶತಾಂಶಃ.

**ಅರ್ಥ :- ಗಿರೀಂದ್ರತಲಮುಷ್ಟಿಮಹಾಸ್ತ್ರಶಸ್ತ್ರೈಃ** ಪರ್ವತಶ್ರೇಷ್ಠ ಗಳಿಂದಲೂ, ಹಸ್ತವಾದ ಪ್ರದೇಶಗಳಿಂದ, ಮುಷ್ಟಿಪ್ರಹಾರಗಳಿಂದ, ಮಂತ್ರ ಯುಕ್ತಗಳಾದ ಆಯುಧಗಳಿಂದ, ಖಡ್ಗ ಮೊದಲಾದ ಶಸ್ತ್ರಗಳಿಂದ **ಜಘ್ನುಃ** ಹೊಡೆದುಕೊಂಡರು. **ಮಹೌಘಂ** ದೊಡ್ಡಪ್ರವಾಹವು ಹೇಗಾಗುತ್ತದೋ ಹಾಗೆ **ರುಧಿರೌಘವಹಾಃ** ರಕ್ತದಸಮೂಹದಿಂದ ಹರಿಯುತ್ತಿರುವ **ನದೀಃ** ನದಿಗಳನ್ನು **ಚಕ್ರುಃ** ಮಾಡಿದರು. **ತತ್ರ ಯುದ್ಧೇ** ಆ ಯುದ್ಧದಲ್ಲಿ **ಓಘಬಲೈಃ** ಮಹಾಬಲವುಳ್ಳ **ದೇವವೃಷಭೈಃ** ದೇವಶ್ರೇಷ್ಠರುಗಳಿಂದ **ಅಸುರೇಶಚಮ್ವಾ** ದೈತ್ಯಶ್ರೇಷ್ಠರ ಸೈನ್ಯದಿಂದ **ಶತಾಂಶಃ** ಸೈನ್ಯದ ನೂರನೇ ಒಂದು ಭಾಗವು **ನಿಷೂದಿತಃ** ನಾಶಮಾಡಲ್ಪಟ್ಟಿತು.

**ತಾತ್ಪರ್ಯ** :- ದೇವತೆಗಳು ಮತ್ತು ದೈತ್ಯರು ದೊಡ್ಡ ಪರ್ವತಗಳಿಂದ, ಹಸ್ತಪಾದಗಳಿಂದ, ಮುಷ್ಟಿಪ್ರಹಾರಗಳಿಂದ, ಮಂತ್ರಯುಕ್ತವಾದ ಆಯುಧ ಗಳಿಂದ, ಖಡ್ಗಮೊದಲಾದ ಶಸ್ತ್ರಗಳಿಂದ ಪರಸ್ಪರ ಹೊಡೆದುಕೊಂಡರು. ರಕ್ತದ ಸಮೂಹವನ್ನು ಹರಿಸುವ ನದಿಗಳನ್ನು ಸೃಷ್ಟಿಸಿದರು. ಆ ಯುದ್ಧದಲ್ಲಿ ದೇವತೆ ಗಳೂ ಮತ್ತು ದೈತ್ಯರ ಸೈನ್ಯವು ಸೇರಿ ಸೈನ್ಯದ ನೂರನೇ ಒಂದಂಶವನ್ನು ನಾಶಮಾಡಿದರು.

**ಅಥಾಽತ್ಮಸೇನಾಮವಮೃದ್ಯಮಾನಾಂ**
**ವೀಕ್ಷ್ಯಾಸುರಃ ಶಂಬರನಾಮಧೇಯಃ ।**
**ಸಸಾರ ಮಾಯಾವಿದಸಹ್ಯಮಾಯೋ**
**ವರಾದುಮೇಶಸ್ಯ ಸುರಾನ್ ವಿಮೋಹಯನ್ ॥ ೧೮೧ ॥**

**ಪದಚ್ಛೇದ** :- ಅಥ, ಆತ್ಮಸೇನಾಂ, ಅವಮೃದ್ಯಮಾನಾಂ, ವೀಕ್ಷ್ಯ, ಅಸುರಃ, ಶಂಬರನಾಮಧೇಯಃ, ಸಸಾರ, ಮಾಯಾವಿತ್, ಅಸಹ್ಯಮಾಯಃ, ವರಾತ್, ಉಮೇಶಸ್ಯ, ಸುರಾನ್, ವಿಮೋಹಯನ್.

**ಅರ್ಥ** :- **ಅಥ** ಅನಂತರ **ಅವಮೃದ್ಯಮಾನಾಂ** ನಾಶಗೊಳ್ಳುತ್ತಿರುವ **ಆತ್ಮಸೇನಾಂ** ತನ್ನ ಸೈನ್ಯವನ್ನು **ವೀಕ್ಷ್ಯ** ನೋಡಿ **ಮಾಯಾವಿತ್** ಮಾಯೆಯನ್ನು ತಿಳಿದ **ಉಮೇಶಸ್ಯ** ರುದ್ರನ **ವರಾತ್** ವರದಿಂದ **ಅಸಹ್ಯಮಾಯಃ** ಸಹಿಸಲು ಅಶಕ್ಯವಾದ ಮಾಯೆಯುಳ್ಳ **ಶಂಬರನಾಮಧೇಯಃ** ಶಂಬರನೆಂಬ ಹೆಸರುಳ್ಳ **ಅಸುರಃ** ದೈತ್ಯನು **ಸುರಾನ್** ದೇವತೆಗಳನ್ನು **ವಿಮೋಹಯನ್** ಮೋಹ ಗೊಳಿಸುತ್ತಾ **ಸಸಾರ** ಆಕ್ರಮಿಸಿದನು (ಮುಂದುವರೆದನು).

**ತಾತ್ಪರ್ಯ** :- ನಾಶವಾಗುತ್ತಿರುವ ತನ್ನ ಸೈನ್ಯವನ್ನು ನೋಡಿ ಇಂದ್ರಜಾಲ ಮಾಯಾ ವಿದ್ಯೆಯನ್ನು ತಿಳಿದ ರುದ್ರದೇವರ ವರದಿಂದ ಸಹಿಸಲಶಕ್ಯವಾದ ಮಾಯೆಯನ್ನು ಹೊಂದಿದ ಶಂಬರನೆಂಬ ಅಸುರನು ದೇವತೆಗಳನ್ನು ಮೋಹ ಗೊಳಿಸುತ್ತಾ ಆಕ್ರಮಿಸತೊಡಗಿದನು.

**ಮಾಯಾಸಹಸ್ರೇಣ ಸುರಾಃ ವಿಮರ್ದಿತಾ**
**ರಣೇ ವಿಷೇದುಃ ಶಶಿಸೂರ್ಯಮುಖ್ಯಾಃ ।**
**ತಾನ್ ವೀಕ್ಷ್ಯ ವಜ್ರೀ ಪರಮಾಖ್ಯವಿದ್ಯಾಂ**
**ಸ್ವಯಂಭುದತ್ತಾಂ ಪ್ರಯುಯೋಜ ವೈಷ್ಣವೀಮ್ ॥ ೧೮೨ ॥**

ಪದಚ್ಛೇದ :- ಮಾಯಾಸಹಸ್ರೇಣ, ಸುರಾಃ, ವಿಮರ್ದಿತಾಃ, ರಣೇ, ವಿಷೇದುಃ, ಶಶಿಸೂರ್ಯಮುಖ್ಯಾಃ, ತಾನ್, ವೀಕ್ಷ್ಯ, ವಜ್ರೀ, ಪರಮಾಖ್ಯವಿದ್ಯಾಂ, ಸ್ವಯಂಭುದತ್ತಾಂ, ಪ್ರಯುಯೋಜ, ವೈಷ್ಣವೀಮ್.

**ಅರ್ಥ** :- **ರಣೇ** ಯುದ್ಧದಲ್ಲಿ **ಮಾಯಾಸಹಸ್ರೇಣ** ಸಾವಿರಾರು ಮಾಯೆಗಳಿಂದ **ವಿಮರ್ದಿತಾಃ** ಪೀಡಿಸಲ್ಪಟ್ಟ **ಶಶಿಸೂರ್ಯಮುಖ್ಯಾಃ** ಚಂದ್ರ ಸೂರ್ಯ ಮೊದಲಾದ **ಸುರಾಃ** ದೇವತೆಗಳು **ವಿಷೇದುಃ** ಆಯಾಸಗೊಂಡರು **ತಾನ್** ಆ ದೇವತೆಗಳನ್ನು **ವೀಕ್ಷ್ಯ** ಕಂಡು **ವಜ್ರೀ** ವಜ್ರಾಯುಧವನ್ನು ಧರಿಸಿದ ಇಂದ್ರನು **ಸ್ವಯಂಭುದತ್ತಾಂ** ಬ್ರಹ್ಮದೇವರಿಂದ ಕೊಡಲ್ಪಟ್ಟ **ವೈಷ್ಣವೀಂ** ವಿಷ್ಣುಸಂಬಂಧಿಯಾದ **ಪರಮಾಖ್ಯವಿದ್ಯಾಂ** ಪರಮವಿದ್ಯೆಯನ್ನು (ವೈಷ್ಣವೀ ಮಾಯೆಯನ್ನು) **ಪ್ರಯುಯೋಜ** ಪ್ರಯೋಗಿಸಿದನು.

**ತಾತ್ಪರ್ಯ** :- ಶಂಬರಾಸುರನು ಪ್ರಯೋಗಿಸಿದ ಸಾವಿರಾರು ಮಾಯೆಗಳಿಂದ ಚಂದ್ರ ಸೂರ್ಯರೇ ಮೊದಲಾದ ದೇವತೆಗಳು ಯುದ್ಧದಲ್ಲಿ ಆಯಾಸಗೊಂಡರು. ಅವರನ್ನು ಕಂಡು ಇಂದ್ರನು ಬ್ರಹ್ಮದೇವರಿಂದ ಪಡೆದುಕೊಂಡ ವೈಷ್ಣವಮಾಯೆಯನ್ನು ಪ್ರಯೋಗಿಸಿದನು.

**ಸಮಸ್ತಮಾಯಾಪಹಯಾ ತಯೈವ**
**ವರಾದ್ ರಮೇಶಸ್ಯ ಸದಾಽಪ್ಯಸಹ್ಯಯಾ ।**
**ಮಾಯಾ ವಿನೇಶುರ್ದಿತಿಜೇಂದ್ರಸೃಷ್ಟಾ**
**ವಾರೀಶವಹ್ನೀಂದುಮುಖಾಶ್ಚ ಮೋಚಿತಾಃ ॥ ೧೮೩ ॥**

ಪದಚ್ಛೇದ :- ಸಮಸ್ತಮಾಯಾಪಹಯಾ, ತಯಾ, ಏವ, ವರಾತ್, ರಮೇಶಸ್ಯ, ಸದಾ, ಅಪಿ, ಅಸಹ್ಯಯಾ, ಮಾಯಾಃ, ವಿನೇಶುಃ, ದಿತಿಜೇಂದ್ರಸೃಷ್ಟಾಃ, ವಾರೀಶವಹ್ನೀಂದುಮುಖಾಃ, ಚ, ಮೋಚಿತಾಃ.

**ಅರ್ಥ** :- **ರಮೇಶಸ್ಯ** ಶ್ರೀಹರಿಯ **ವರಾತ್** ವರದಿಂದ **ಸದಾ ಅಪಿ** ಯಾವಾಗಲೂ ಕೂಡ **ಅಸಹ್ಯಯಾ** ಯಾರಿಂದಲೂ ಸಹಿಸಲು ಸಾಧ್ಯವಾಗದ **ಸಮಸ್ತಮಾಯಾಪಹಯಾ** ಎಲ್ಲ ಮಾಯೆಗಳನ್ನು ನಾಶಮಾಡತಕ್ಕ **ತಯಾ ಏವ** ಆ ವೈಷ್ಣವ ಮಾಯೆಯಿಂದಲೇ **ದಿತಿಜೇಂದ್ರಸೃಷ್ಟಾಃ** ದೈತ್ಯಶ್ರೇಷ್ಠನಾದ ಶಂಬರಾಸುರನಿಂದ ಸೃಷ್ಟಿಮಾಡಲ್ಪಟ್ಟ **ಮಾಯಾಃ** ಮಾಯೆಗಳು **ವಿನೇಶುಃ** ನಾಶ

ಹೊಂದಿದವು. **ಚ** ಮತ್ತು **ವಾರೀಶವಹ್ನೀಂದುಮುಖಾಃ** ವರುಣ, ಅಗ್ನಿ, ಚಂದ್ರ ಮುಂತಾದ ದೇವತೆಗಳು **ಮೋಚಿತಾಃ** (ಶಂಬರಾಸುರನ ಮಾಯೆಯಿಂದ) ಬಿಡಿಸಲ್ಪಟ್ಟರು.

**ತಾತ್ಪರ್ಯ** :- ಪರಮಾತ್ಮನ ಅನುಗ್ರಹದಿಂದ ಎಂದಿಗೂ ಯಾರಿಂದಲೂ ಸಹಿಸಲಾಗದ, ಇತರ ಎಲ್ಲ ಮಾಯೆಗಳನ್ನೂ ನಾಶಪಡಿಸತಕ್ಕ, ವೈಷ್ಣವ ಮಾಯೆಯಿಂದ ಶಂಬರಾಸುರನು ಪ್ರಯೋಗಿಸಿದ ಇತರ ಎಲ್ಲ ಮಾಯೆಗಳೂ ನಾಶವಾದವು. ವರುಣ, ಅಗ್ನಿ, ಚಂದ್ರ ಮೊದಲಾದ ದೇವತೆಗಳು ಆ ಶಂಬರನ ಮಾಯೆಯಿಂದ ಬಿಡುಗಡೆ ಹೊಂದಿದರು.

**ಯಮೇಂದುಸೂರ್ಯಾದಿಸುರಾಸ್ತತೋಽಸುರಾನ್**
**ನಿಜಘ್ನುರಾಪ್ಯಾಯಿತವಿಕ್ರಮಾಸ್ತದಾ ।**
**ಸುರೇಶ್ವರೇಣೋರ್ಜಿತಪೌರುಷಾ ಬಹೂನ್**
**ವಜ್ರೇಣ ವಜ್ರೀ ನಿಜಘಾನ ಶಂಬರಮ್ ॥ ೧೮೪ ॥**

ಪದಚ್ಛೇದ :- ಯಮೇಂದುಸೂರ್ಯಾದಿಸುರಾಃ, ತತಃ, ಅಸುರಾನ್, ನಿಜಘ್ನುಃ, ಆಪ್ಯಾಯಿತವಿಕ್ರಮಾಃ, ತದಾ, ಸುರೇಶ್ವರೇಣ, ಊರ್ಜಿತಪೌರುಷಾಃ, ಬಹೂನ್, ವಜ್ರೇಣ,ವಜ್ರೀ, ನಿಜಘಾನ, ಶಂಬರಮ್.

**ಅರ್ಥ** :- **ತತಃ** ಅನಂತರ **ತದಾ** ಆಗ **ಸುರೇಶ್ವರೇಣ** ದೇವೇಂದ್ರನಿಂದ **ಆಪ್ಯಾಯಿತವಿಕ್ರಮಾಃ** ಬೆಳೆಸಲ್ಪಟ್ಟ ಪರಾಕ್ರಮವುಳ್ಳ **ಊರ್ಜಿತಪೌರುಷಾಃ** ಉತ್ಕೃಷ್ಟವಾದ ಪರಾಕ್ರಮವುಳ್ಳ **ಯಮೇಂದುಸೂರ್ಯಾದಿಸುರಾಃ** ಯಮ, ಚಂದ್ರ, ಸೂರ್ಯ ಮೊದಲಾದ ದೇವತೆಗಳು **ಬಹೂನ್** ಬಹಳ **ಅಸುರಾನ್** ದೈತ್ಯರನ್ನು **ನಿಜಘ್ನುಃ** ಕೊಂದರು. **ವಜ್ರೀ** ಇಂದ್ರನು **ವಜ್ರೇಣ** ವಜ್ರಾಯುಧದಿಂದ **ಶಂಬರಂ** ಶಂಬರಾಸುರನನ್ನು **ನಿಜಘಾನ** ಕೊಂದನು.

**ತಾತ್ಪರ್ಯ** :- ಮಾಯೆಯಿಂದ ಬಿಡುಗಡೆ ಹೊಂದಿದ ನಂತರ ಮಹಾಪೌರುಷವುಳ್ಳ ಯಮ, ಚಂದ್ರ, ಸೂರ್ಯ ಮೊದಲಾದ ದೇವತೆಗಳು ಇಂದ್ರನಿಂದ ವರ್ಧಿತವಾದ ಪರಾಕ್ರಮವುಳ್ಳವರಾಗಿ ಅನೇಕ ದೈತ್ಯರನ್ನು ಕೊಂದರು. ಇಂದ್ರನು ವಜ್ರಾಯುಧದಿಂದ ಶಂಬರಾಸುರನನ್ನು ಕೊಂದನು.

ತಸ್ಮಿನ್ ಹತೇ ದಾನವಲೋಕಪಾಲೇ
ದಿತೇಃ ಸುತಾ ದುದ್ರುವುರಿಂದ್ರಭೀಷಿತಾಃ ।
ತಾನ್ ವಿಪ್ರಚಿತ್ತಿರ್ವಿನಿವಾರ್ಯ ಧನ್ವೀ
ಸಸಾರ ಶಕ್ರಪ್ರಮುಖಾನ್ ಸುರೋತ್ತಮಾನ್ ॥ ೧೮೫ ॥

ಪದಚ್ಛೇದ :- ತಸ್ಮಿನ್, ಹತೇ, ದಾನವಲೋಕಪಾಲೇ, ದಿತೇಃ, ಸುತಾಃ, ದುದ್ರುವುಃ, ಇಂದ್ರಭೀಷಿತಾಃ, ತಾನ್, ವಿಪ್ರಚಿತ್ತಿಃ, ವಿನಿವಾರ್ಯ, ಧನ್ವೀ, ಸಸಾರ, ಶಕ್ರಪ್ರಮುಖಾನ್, ಸುರೋತ್ತಮಾನ್.

**ಅರ್ಥ** :- **ದಾನವಲೋಕಪಾಲೇ** ದೈತ್ಯಜನರಿಗೆ ರಕ್ಷಕನಾದ **ತಸ್ಮಿನ್** ಆ ಶಂಬರನು **ಹತೇ (ಸತಿ)** ಕೊಲ್ಲಲ್ಪಡುತ್ತಿರಲು **ದಿತೇಃ ಸುತಾಃ** ದಿತಿದೇವಿಯ ಮಕ್ಕಳಾದ ದೈತ್ಯರು **ಇಂದ್ರಭೀಷಿತಾಃ** ಇಂದ್ರನಿಂದ ಹೆದರಿದವರಾಗಿ **ದುದ್ರುವುಃ** ಓಡಿದರು. **ಧನ್ವೀ** ಧನುರ್ಧಾರಿಯಾದ **ವಿಪ್ರಚಿತ್ತಿಃ** ವಿಪ್ರಚಿತ್ತಿಯು **ತಾನ್** ಓಡುತ್ತಿರುವ ಆ ದೈತ್ಯರನ್ನು **ವಿನಿವಾರ್ಯ** ತಡೆದು **ಶಕ್ರಪ್ರಮುಖಾನ್** ಇಂದ್ರನೇ ಮೊದಲಾದ **ಸುರೋತ್ತಮಾನ್** ದೇವಶ್ರೇಷ್ಠರುಗಳನ್ನು ಕುರಿತು **ಸಸಾರ** ಯುದ್ಧಕ್ಕೆ ಹೋದನು.

**ತಾತ್ಪರ್ಯ** :- ದೈತ್ಯಜನರನ್ನು ರಕ್ಷಿಸುತ್ತಿದ್ದ ಶಂಬರಾಸುರನು ಮೃತನಾಗಲು ದೈತ್ಯರೆಲ್ಲಾ ಇಂದ್ರನಿಗೆ ಹೆದರಿ ಓಡಿಹೋದರು. ಆಗ ಅವರನ್ನು ತಡೆದು ವಿಪ್ರಚಿತ್ತಿಯು ಧನುರ್ಧಾರಿಯಾಗಿ ಇಂದ್ರಮೊದಲಾದ ದೇವಶ್ರೇಷ್ಠರ ಜೊತೆ ಯುದ್ಧ ಮಾಡಲು ಮುಂದೆ ಹೋದನು.

ವರಾದಜೇಯೇನ ವಿಧಾತುರೇವ
ಸುರೋತ್ತಮಾಂಸ್ತೇನ ಶರೈರ್ನಿಪಾತಿತಾನ್ ।
ನಿರೀಕ್ಷ್ಯ ಶಕ್ರಂ ಚ ವಿಮೋಹಿತಂ ದ್ರುತಂ
ನ್ಯವಾರಯತ್ ತಂ ಪವನಃ ಶರೌಘೈಃ ॥ ೧೮೬ ॥

ಪದಚ್ಛೇದ :- ವರಾತ್, ಅಜೇಯೇನ, ವಿಧಾತುಃ, ಏವ, ಸುರೋತ್ತಮಾನ್, ತೇನ, ಶರೈಃ, ನಿಪಾತಿತಾನ್, ನಿರೀಕ್ಷ್ಯ, ಶಕ್ರಂ, ಚ, ವಿಮೋಹಿತಂ, ದ್ರುತಂ, ನ್ಯವಾರಯತ್, ತಂ, ಪವನಃ, ಶರೌಘೈಃ.

**ಅರ್ಥ** :- **ವಿಧಾತುಃ** ಬ್ರಹ್ಮದೇವರ **ವರಾತ್ ಏವ** ವರದಿಂದಲೇ **ಅಜೇಯೇನ** ಗೆಲ್ಲಲು ಅಯೋಗ್ಯನಾದ **ತೇನ** ಆ ವಿಪ್ರಚಿತ್ತಿಯಿಂದ **ಶರೈಃ** ಬಾಣಗಳಿಂದ **ನಿಪಾತಿತಾನ್** ಬೀಳಿಸಲ್ಪಟ್ಟ **ಸುರೋತ್ತಮಾನ್** ದೇವಶ್ರೇಷ್ಠರುಗಳನ್ನು **ಚ** ಮತ್ತು **ವಿಮೋಹಿತಂ** ಮೂರ್ಛೆಗೊಳಿಸಲ್ಪಟ್ಟ **ಶಕ್ರಂ** ಇಂದ್ರನನ್ನು **ನಿರೀಕ್ಷ್ಯ** ನೋಡಿ **ದ್ರುತಂ** ಕೂಡಲೇ **ಪವನಃ** ವಾಯುದೇವರು **ಶರೌಘೈಃ** ಬಾಣಗಳ ಸಮೂಹದಿಂದ **ತಂ** ಆ ವಿಪ್ರಚಿತ್ತಿಯನ್ನು **ನ್ಯವಾರಯತ್** ತಡೆದನು.

**ತಾತ್ಪರ್ಯ** :- ಬ್ರಹ್ಮದೇವರ ವರದಿಂದ ಅಜೇಯನಾದ ವಿಪ್ರಚಿತ್ತಿಯು ಬಾಣಗಳಿಂದ ದೇವತೆಗಳನ್ನು ಬೀಳಿಸಿದ್ದನ್ನು ಮತ್ತು ಇಂದ್ರನನ್ನು ಮೂರ್ಛೆ ಹೋಗುವಂತೆ ಮಾಡಿದ್ದನ್ನು ಕಂಡು ವಾಯುದೇವರು ಕೂಡಲೇ ಬಾಣಗಳನ್ನು ಪ್ರಯೋಗಿಸಿ ಆ ವಿಪ್ರಚಿತ್ತಿಯನ್ನು ತಡೆದರು.

**ಅಸ್ತ್ರಾಣಿ ತಸ್ಯಾಸ್ತ್ರವರೈರ್ನಿವಾರ್ಯ**
**ಚಿಕ್ಷೇಪ ತಸ್ಯೋರಸಿ ಕಾಂಚನೀಂ ಗದಾಮ್ ।**
**ವಿಚೂರ್ಣಿತೋಽಸೌ ನಿಪಪಾತ ಮೇರೌ**
**ಮಹಾಬಲೋ ವಾಯುಬಲಾಭಿನುನ್ನಃ ॥ ೧೮೭ ॥**

**ಪದಚ್ಛೇದ** :- ಅಸ್ತ್ರಾಣಿ, ತಸ್ಯ, ಅಸ್ತ್ರವರೈಃ, ನಿವಾರ್ಯ, ಚಿಕ್ಷೇಪ, ತಸ್ಯ, ಉರಸಿ, ಕಾಂಚನೀಂ, ಗದಾಂ, ವಿಚೂರ್ಣಿತಃ, ಅಸೌ, ನಿಪಪಾತ, ಮೇರೌ, ಮಹಾಬಲಃ, ವಾಯುಬಲಾಭಿನುನ್ನಃ.

**ಅರ್ಥ** :- **ತಸ್ಯ** ಆ ವಿಪ್ರಚಿತ್ತಿಯ **ಅಸ್ತ್ರಾಣಿ** ಅಸ್ತ್ರಗಳನ್ನು **ಅಸ್ತ್ರವರೈಃ** ಶ್ರೇಷ್ಠವಾದ ಅಸ್ತ್ರಗಳಿಂದ **ನಿವಾರ್ಯ** ತಡೆದು **ತಸ್ಯ** ಆ ವಿಪ್ರಚಿತ್ತಿಯ **ಉರಸಿ** ಎದೆಯಲ್ಲಿ **ಕಾಂಚನೀಂ** ಬಂಗಾರದ **ಗದಾಂ** ಗದೆಯನ್ನು **ಚಿಕ್ಷೇಪ** ಬಿಸಾಡಿದರು. **ಮಹಾಬಲಃ** ಮಹಾ ಪರಾಕ್ರಮಿಯಾದ **ಅಸೌ** ಈ ವಿಪ್ರಚಿತ್ತಿಯು **ವಿಚೂರ್ಣಿತಃ** ಪುಡಿಮಾಡಲ್ಪಟ್ಟವನಾಗಿ **ವಾಯುಬಲಾಭಿನುನ್ನಃ** ವಾಯುದೇವರ ಬಲದಿಂದ ತಳ್ಳಲ್ಪಟ್ಟವನಾಗಿ **ಮೇರೌ** ಮೇರುಪರ್ವತದಲ್ಲಿ **ನಿಪಪಾತ** ಬಿದ್ದನು.

**ತಾತ್ಪರ್ಯ** :- ವಾಯುದೇವರು ವಿಪ್ರಚಿತ್ತಿಯ ಅಸ್ತ್ರಗಳನ್ನು ಶ್ರೇಷ್ಠವಾದ ಅಸ್ತ್ರಗಳಿಂದ ತಡೆದು, ಅವನ ಎದೆಯಲ್ಲಿ ಬಂಗಾರದ ಗದೆಯನ್ನು ಎಸೆದರು. ಬಹಳ ಸಮರ್ಥನಾದ ಅವನು ಚೂರ್ಣಿತನಾಗಿ ವಾಯುದೇವರ ಬಲದಿಂದ ತಳ್ಳಲ್ಪಟ್ಟು ಮೇರುಪರ್ವತದಲ್ಲಿ ಬಿದ್ದನು.

ಅಥಾऽಸಸಾದಾऽಶು ಸ ಕಾಲನೇಮಿಃ
ತ್ವದಾಜ್ಞಯಾ ಯಸ್ಯ ವರಂ ದದೌ ಪುರಾ ।
ಸರ್ವೈರಜೇಯತ್ವಮಜೋऽಸುರಃ ಸ
ಸಹಸ್ರಶೀರ್ಷೋ ದ್ವಿಸಹಸ್ರಬಾಹುಯುಕ್ ॥ ೧೮೮ ॥

ಪದಚ್ಛೇದ :- ಅಥ, ಆಸಸಾದ, ಆಶು, ಸಃ, ಕಾಲನೇಮಿಃ, ತ್ವದಾಜ್ಞಯಾ, ಯಸ್ಯ, ವರಂ, ದದೌ, ಪುರಾ, ಸರ್ವೈಃ, ಅಜೇಯತ್ವಂ, ಅಜಃ, ಅಸುರಃ, ಸಃ, ಸಹಸ್ರಶೀರ್ಷಃ, ದ್ವಿಸಹಸ್ರಬಾಹುಯುಕ್.

**ಅರ್ಥ** :- **ಅಥ** ಅನಂತರ **ಅಜಃ** ಬ್ರಹ್ಮನು **ಪುರಾ** ಹಿಂದೆ **ತ್ವದಾಜ್ಞಯಾ** ನಿನ್ನ ಆಜ್ಞೆಯಿಂದ **ಯಸ್ಯ** ಯಾವನಿಗೆ **ಸರ್ವೈಃ** ಎಲ್ಲರಿಂದಲೂ **ಅಜೇಯತ್ವಂ** ಅಜೇಯತ್ವರೂಪವಾದ **ವರಂ** ವರವನ್ನು **ದದೌ** ಕೊಟ್ಟನೋ **ಸಃ** ಅಂತಹ **ಸಹಸ್ರಶೀರ್ಷಃ** ಸಾವಿರ ತಲೆಗಳುಳ್ಳ **ದ್ವಿಸಹಸ್ರಬಾಹುಯುಕ್** ಎರಡು ಸಾವಿರ ಭುಜಗಳಿಂದ ಕೂಡಿದ **ಕಾಲನೇಮಿಃ** ಕಾಲನೇಮಿಯೆಂಬ **ಅಸುರಃ** ದೈತ್ಯನು **ಆಶು** ಕೂಡಲೇ **ಆಸಸಾದ** (ವಾಯುದೇವರನ್ನು) ಸಮೀಪಿಸಿದನು.

**ತಾತ್ಪರ್ಯ** :- ವಿಪ್ರಚಿತ್ತಿಯು ಬಿದ್ದ ನಂತರದಲ್ಲಿ ಹಿಂದೆ ಪರಮಾತ್ಮನ ಆಜ್ಞೆಯಂತೆ ಬ್ರಹ್ಮನು ಯಾವನಿಗೆ ಸರ್ವರಿಂದಲೂ ಅಜೇಯನಾಗಬೇಕೆಂಬ ವರವನ್ನು ಕೊಟ್ಟಿದ್ದನೋ ಅಂತಹ ಸಾವಿರ ತಲೆಯುಳ್ಳ, ಎರಡು ಸಾವಿರ ಭುಜಗಳುಳ್ಳ ಕಾಲನೇಮಿಯೆಂಬ ದೈತ್ಯನು ಯುದ್ಧಕ್ಕಾಗಿ ವಾಯುದೇವರನ್ನು ಸಮೀಪಿಸಿದನು.

ತಮಾಪತಂತಂ ಪ್ರಸಮೀಕ್ಷ್ಯ ಮಾರುತಸ್ತ್ವದಾಜ್ಞಯಾ ದತ್ತವರಸ್ತ್ವಯೈವ ।
ಹಂತವ್ಯ ಇತ್ಯಸ್ಮರದಾಶು ಹಿ ತ್ವಾಂ ತದಾವಿರಾಸೀಸ್ತ್ವಮನಂತಪೌರುಷಃ
॥ ೧೮೯॥

ಪದಚ್ಛೇದ :- ತಂ, ಆಪತಂತಂ, ಪ್ರಸಮೀಕ್ಷ್ಯ, ಮಾರುತಃ, ತ್ವದಾಜ್ಞಯಾ, ದತ್ತವರಃ, ತ್ವಯಾ, ಏವ, ಹಂತವ್ಯಃ, ಇತಿ, ಅಸ್ಮರತ್, ಆಶು, ಹಿ, ತ್ವಾಂ, ತದಾ, ಆವಿರಾಸೀಃ, ತ್ವಂ, ಅನಂತಪೌರುಷಃ.

**ಅರ್ಥ** :- **ಮಾರುತಃ** ವಾಯುದೇವನು **ಆಪತಂತಂ** ಬರುತ್ತಿರುವ **ತಂ** ಆ ಕಾಲನೇಮಿಯನ್ನು **ಪ್ರಸಮೀಕ್ಷ್ಯ** ಕಂಡು **ತ್ವದಾಜ್ಞಯಾ** ನಿನ್ನ ಅಪ್ಪಣೆಯಿಂದ

**ದತ್ತವರಃ** ಕೊಡಲ್ಪಟ್ಟ ವರವುಳ್ಳ ಕಾಲನೇಮಿಯು **ತ್ವಯಾ ಏವ** ನಿನ್ನಿಂದಲೇ **ಹಂತವ್ಯಃ** ಕೊಲ್ಲಲ್ಪಡಬೇಕು **ಇತಿ** ಎಂದು **ತ್ವಾಂ** ನಿನ್ನನ್ನು **ಅಸ್ಮರತ್ ಹಿ** ಸ್ಮರಿಸಿದನಷ್ಟೆ **ತದಾ** ಆಗ **ಅನಂತಪೌರುಷಃ** ಅಪರಿಮಿತ ಪರಾಕ್ರಮವುಳ್ಳ **ತ್ವಮ್** ನೀನು **ಆಶು** ಕೂಡಲೇ **ಆವಿರಾಸೀಃ** ಪ್ರಕಟನಾದೆ.

**ತಾತ್ಪರ್ಯ :-** ವಾಯುದೇವನು ಬರುತ್ತಿರುವ ಕಾಲನೇಮಿಯನ್ನು ನೋಡಿ, ನಿನ್ನ ಅಪ್ಪಣೆಯಂತೆ ಬ್ರಹ್ಮನಿಂದ ವರವನ್ನು ಪಡೆದ ಕಾಲನೇಮಿಯನ್ನು ನೀನೇ ಸಂಹರಿಸಬೇಕೆಂದು ನಿನ್ನನ್ನೇ ಸ್ಮರಿಸಿದನು. ಅಪರಿಮಿತ ಪರಾಕ್ರಮ ಶಾಲಿಯಾದ ನೀನು ಆವಾಗ ಕೂಡಲೇ ಪ್ರಕಟನಾದೆ.

**ತಮಸ್ತ್ರಶಸ್ತ್ರಾಣಿ ಬಹೂನಿ ಬಾಹುಭಿಃ**
**ಪ್ರವರ್ಷಮಾಣಂ ಭುವನಾಪ್ತದೇಹಮ್ ।**
**ಚಕ್ರೇಣ ಬಾಹೂನ್ ವಿನಿಕೃತ್ಯ ಕಾನಿ ಚ**
**ನ್ಯವೇದಯಶ್ಚಾSಶು ಯಮಾಯ ಪಾಪಮ್ ॥ ೧೯೦ ॥**

**ಪದಚ್ಛೇದ :-** ತಂ, ಅಸ್ತ್ರಶಸ್ತ್ರಾಣಿ, ಬಹೂನಿ, ಬಾಹುಭಿಃ, ಪ್ರವರ್ಷಮಾಣಂ, ಭುವನಾಪ್ತದೇಹಂ, ಚಕ್ರೇಣ, ಬಾಹೂನ್, ವಿನಿಕೃತ್ಯ, ಕಾನಿ, ಚ, ನ್ಯವೇದಯಃ, ಚ, ಆಶು, ಯಮಾಯ, ಪಾಪಮ್.

**ಅರ್ಥ :-** **ಬಹೂನಿ** ಬಹಳವಾದ **ಅಸ್ತ್ರಶಸ್ತ್ರಾಣಿ** ಅಸ್ತ್ರಶಸ್ತ್ರಗಳನ್ನು **ಬಾಹುಭಿಃ** ಭುಜಗಳಿಂದ **ಪ್ರವರ್ಷಮಾಣಂ** ಸುರಿಸುತ್ತಿರುವ **ಭುವನಾಪ್ತ ದೇಹಂ** ಲೋಕವನ್ನು ವ್ಯಾಪಿಸಿದ ದೇಹವುಳ್ಳ **ಪಾಪಂ** ಪಾಪಿಷ್ಠನಾದ **ತಂ** ಆ ಕಾಲನೇಮಿಯನ್ನು **ಚಕ್ರೇಣ** ಸುದರ್ಶನ ಚಕ್ರದಿಂದ **ಬಾಹೂನ್** ಬಾಹುಗಳನ್ನು **ಕಾನಿ ಚ** ತಲೆಗಳನ್ನೂ **ವಿನಿಕೃತ್ಯ** ಕತ್ತರಿಸಿ **ಆಶು** ಕೂಡಲೇ **ಯಮಾಯ** ಯಮನಿಗೆ **ನ್ಯವೇದಯಃ** ಕೊಟ್ಟಿರುವಿ.

**ತಾತ್ಪರ್ಯ :-** ತನ್ನ ಬಾಹುಗಳಿಂದ ಅನೇಕ ಅಸ್ತ್ರಶಸ್ತ್ರಗಳನ್ನು ಪ್ರಯೋಗಿಸುತ್ತಿರುವ, ಲೋಕವನ್ನೇ ಶರೀರದಿಂದ ವ್ಯಾಪಿಸಿದ, ಪಾಪಿಯಾದ ಕಾಲನೇಮಿಯನ್ನು ನಿನ್ನ ಸುದರ್ಶನ ಚಕ್ರದಿಂದ ಬಾಹುಗಳನ್ನು ಮತ್ತು ತಲೆಗಳನ್ನು ತುಂಡರಿಸಿ ಕೂಡಲೇ ಯಮನಿಗೆ ಕೊಟ್ಟಿರುವೆ.

ತತೋऽಸುರಾಸ್ತೇ ನಿಹತಾ ಅಶೇಷಾಃ
ತ್ವಯಾ ತ್ರಿಭಾಗಾ ನಿಹತಾಶ್ಚತುರ್ಥಮ್ ।
ಜಘಾನ ವಾಯುಃ ಪುನರೇವ ಜಾತಾಃ
ತೇ ಭೂತಲೇ ಧರ್ಮಬಲೋಪಪನ್ನಾಃ ॥ ೧೯೧ ॥

ಪದಚ್ಛೇದ :- ತತಃ, ಅಸುರಾಃ, ತೇ, ನಿಹತಾಃ, ಅಶೇಷಾಃ, ತ್ವಯಾ, ತ್ರಿಭಾಗಾಃ, ನಿಹತಾಃ, ಚತುರ್ಥಂ, ಜಘಾನ, ವಾಯುಃ, ಪುನಃ, ಏವ, ಜಾತಾಃ, ತೇ, ಭೂತಲೇ, ಧರ್ಮಬಲೋಪಪನ್ನಾಃ.

ಅರ್ಥ :- ತತಃ ಅನಂತರ ತೇ ಆಯಾವ ಅಶೇಷಾಃ ಎಲ್ಲ ಅಸುರಾಃ ದೈತ್ಯರು ನಿಹತಾಃ ಕೊಲ್ಲಲ್ಪಟ್ಟರು. ತ್ವಯಾ ನಿನ್ನಿಂದ ತ್ರಿಭಾಗಾಃ ಮೂರು ಭಾಗಗಳು ನಿಹತಾಃ ಕೊಲ್ಲಲ್ಪಟ್ಟವು. ಚತುರ್ಥಂ ನಾಲ್ಕನೆಯ ಭಾಗವನ್ನು ವಾಯುಃ ವಾಯುದೇವರು ಜಘಾನ ಕೊಂದರು. ತೇ ಆ ದೈತ್ಯರು ಪುನಃ ಏವ ಮತ್ತೊಮ್ಮೆ ಧರ್ಮಬಲೋಪಪನ್ನಾಃ ಧರ್ಮ ಬಲಗಳಿಂದ ಕೂಡಿದವರಾಗಿ ಭೂತಲೇ ಭೂಮಂಡಲದಲ್ಲಿ ಜಾತಾಃ ಹುಟ್ಟಿದ್ದಾರೆ.

ತಾತ್ಪರ್ಯ :- ಆ ದೈತ್ಯರ ಮೂರುಭಾಗವನ್ನು ನೀನು ಕೊಂದಿರುವೆ. ನಾಲ್ಕನೇ ಭಾಗವನ್ನು ವಾಯುದೇವರು ಕೊಂದರು. ಹೀಗೆ ಕಾಲನೇಮಿಯ ಸಂಹಾರವಾದ ಬಳಿಕ ಎಲ್ಲ ದೈತ್ಯರೂ ಹತರಾದರು. ಅವರೇ ಧರ್ಮ ಬಲಗಳಿಂದ ಕೂಡಿದವರಾಗಿ ಭೂಮಿಯಲ್ಲಿ ಹುಟ್ಟಿದ್ದಾರೆ.

ರಾಜ್ಞಾಂ ಮಹಾವಂಶಸುಜನ್ಮನಾಂ ತು
ತೇಷಾಮಭೂದ್ ಧರ್ಮಮತಿರ್ವಿಪಾಪಾ ।
ಶಿಕ್ಷಾಮವಾಪ್ಯ ದ್ವಿಜಪುಂಗವಾನಾಂ
ತ್ವದ್ಭಕ್ತಿರಪ್ಯೇಷು ಹಿ ಕಾಚನ ಸ್ಯಾತ್ ॥ ೧೯೨ ॥

ಪದಚ್ಛೇದ :- ರಾಜ್ಞಾಂ, ಮಹಾವಂಶಸುಜನ್ಮನಾಂ, ತು, ತೇಷಾಂ, ಅಭೂತ್, ಧರ್ಮಮತಿಃ, ವಿಪಾಪಾ, ಶಿಕ್ಷಾಂ, ಅವಾಪ್ಯ, ದ್ವಿಜಪುಂಗವಾನಾಂ, ತ್ವದ್ಭಕ್ತಿಃ, ಅಪಿ, ಏಷು, ಹಿ, ಕಾಚನ, ಸ್ಯಾತ್.

ಅರ್ಥ :- ಮಹಾವಂಶಸುಜನ್ಮನಾಂ ಮಹಾವಂಶದಲ್ಲಿ ಒಳ್ಳೆಯ ಜನ್ಮವುಳ್ಳ ತೇಷಾಂ ಆಯಾವ ರಾಜ್ಞಾಂ ರಾಜರಿಗೆ ವಿಪಾಪಾ ಪಾಪರಹಿತವಾದ

**ಧರ್ಮಮತಿಃ** ಧರ್ಮದ ಬುದ್ಧಿಯು **ಅಭೂತ್** ಉಂಟಾಯಿತು. **ದ್ವಿಜಪುಂಗವಾನಾಂ** ಬ್ರಾಹ್ಮಣಶ್ರೇಷ್ಠರ **ಶಿಕ್ಷಾಂ** ಉಪದೇಶವನ್ನು **ಅವಾಪ್ಯ** ಹೊಂದಿ ಏಷು ಈ ದೈತ್ಯರಲ್ಲಿ **ಕಾಚನ ಅಪಿ** ಸ್ವಲ್ಪವಾದರೂ **ತ್ವದ್ಭಕ್ತಿಃ** ನಿನ್ನಲ್ಲಿ ಭಕ್ತಿಯು **ಸ್ಯಾತ್ ಹಿ** ಉಂಟಾಗಬಹುದೆಂದು ಊಹಿಸುತ್ತೇವೆಯಷ್ಟೇ.

**ತಾತ್ಪರ್ಯ :-** ಮಹಾವಂಶದಲ್ಲಿ ಹುಟ್ಟಿದ ಆ ರಾಜರಿಗೆ ಪಾಪರಹಿತ ವಾದ ಧರ್ಮಬುದ್ಧಿಯು ಉಂಟಾಗಿದೆ. ಬ್ರಾಹ್ಮಣಶ್ರೇಷ್ಠರ ಉಪದೇಶವನ್ನು ಪಡೆದ ಅವರಲ್ಲಿ ನಿನ್ನ ಭಕ್ತಿಯು ಉಂಟಾಗಿರಬಹುದೆಂದು ಊಹಿಸುತ್ತೇವೆ.

**ತ್ವದ್ಭಕ್ತಿಲೇಶಾಭಿಯುತಃ ಸುಕರ್ಮಾ**
**ವ್ರಜೇನ್ನ ಪಾಪಾಂ ತು ಗತಿಂ ಕಥಂಚಿತ್ ।**
**ದೈತ್ಯೇಶ್ವರಾಣಾಂ ಚ ತಮೋಽಂಧಮೇವ**
**ತ್ವಯೈವ ಕ್ಲೃಪ್ತಂ ನನು ಸತ್ಯಕಾಮ ॥ ೧೯೩ ॥**

ಪದಚ್ಛೇದ :- ತ್ವದ್ಭಕ್ತಿಲೇಶಾಭಿಯುತಃ, ಸುಕರ್ಮಾ, ವ್ರಜೇತ್, ನ, ಪಾಪಾಂ, ತು, ಗತಿಂ, ಕಥಂಚಿತ್, ದೈತ್ಯೇಶ್ವರಾಣಾಂ, ಚ, ತಮಃ, ಅಂಧಂ, ಏವ, ತ್ವಯಾ, ಏವ, ಕ್ಲೃಪ್ತಂ, ನನು, ಸತ್ಯಕಾಮ.

**ಅರ್ಥ :- ತ್ವದ್ಭಕ್ತಿಲೇಶಾಭಿಯುತಃ** ನಿನ್ನಲ್ಲಿ ಸ್ವಲ್ಪವಾದರೂ ಭಕ್ತಿಯಿಂದ ಕೂಡಿದವನು **ಸುಕರ್ಮಾ** ಒಳ್ಳೆಯ ಕರ್ಮವುಳ್ಳವನಾದರೆ **ಕಥಂಚಿತ್** ಯಾವ ರೀತಿಯಿಂದಲೂ **ಪಾಪಾಂ** ನರಕರೂಪವಾದ **ಗತಿಂ** ಸ್ಥಾನವನ್ನು **ನ ವ್ರಜೇತ್** ಹೊಂದಲಾರ. **ಸತ್ಯಕಾಮ** ಅಮೋಘವಾದ ಇಚ್ಛೆಯುಳ್ಳ ಹರಿಯೇ! **ದೈತ್ಯೇಶ್ವರಾಣಾಂ** ದೈತ್ಯಶ್ರೇಷ್ಠರುಗಳಿಗೆ **ಅಂಧಂ ತಮಃ ಏವ** ಅಂಧಂತಮಸ್ಸೇ **ತ್ವಯಾ ಏವ** ನಿನ್ನಿಂದಲೇ **ಕ್ಲೃಪ್ತಂ ಹಿ** ಸಿದ್ಧವಾಗಿದೆಯಷ್ಟೇ.

**ತಾತ್ಪರ್ಯ :-** ನಿನ್ನಲ್ಲಿ ಸ್ವಲ್ಪ ಭಕ್ತಿಯಿಂದ ಕೂಡಿದವನಾದರೂ ಒಳ್ಳೆಯ ಕರ್ಮವನ್ನು ಮಾಡುವವನಾದರೆ ಯಾವ ರೀತಿಯಿಂದಲೂ ನರಕವನ್ನು ಹೊಂದಲಾರ. ಸತ್ಯಕಾಮನಾದ ಸ್ವಾಮಿಯೇ! ದೈತ್ಯಶ್ರೇಷ್ಠರಿಗೆ ಅಂಧಂತಮಸ್ಸೇ ಗತಿಯೆಂದು ನೀನೇ ಸಿದ್ಧಪಡಿಸಿರುವಿ.

ಧರ್ಮಸ್ಯ ಮಿಥ್ಯಾತ್ವಭಯಾದ್ ವಯಂ ತ್ವಾಮ್
ಅಥಾಪಿ ವಾ ದೈತ್ಯಶುಭಾಪ್ತಿಭೀಷಾ ।
ಸಂಪ್ರಾರ್ಥಯಾಮೋ ದಿತಿಜಾನ್ ಸುಕರ್ಮಣಃ
ತ್ವದ್ಭಕ್ತಿತಶ್ಚಾಲಯಿತುಂ ಚ ಶೀಘ್ರಮ್ ॥ ೧೯೪ ॥

ಪದಚ್ಛೇದ :- ಧರ್ಮಸ್ಯ ಮಿಥ್ಯಾತ್ವಭಯಾತ್, ವಯಂ, ತ್ವಾಂ, ಅಥ, ಅಪಿ, ವಾ, ದೈತ್ಯಶುಭಾಪ್ತಿಭೀಷಾ, ಸಂಪ್ರಾರ್ಥಯಾಮಃ, ದಿತಿಜಾನ್, ಸುಕರ್ಮಣಃ, ತ್ವದ್ಭಕ್ತಿತಃ, ಚಾಲಯಿತುಂ, ಚ, ಶೀಘ್ರಮ್.

**ಅರ್ಥ** :- **ಧರ್ಮಸ್ಯ** ಪುಣ್ಯಕರ್ಮಕ್ಕೆ **ಮಿಥ್ಯಾತ್ವಭಯಾತ್** ವೈಯರ್ಥ್ಯ ಬರುತ್ತದೆ ಎಂಬ ಭಯದಿಂದ **ಅಥಾಪಿ ವಾ** ಹಾಗಿದ್ದರೂ **ದೈತ್ಯಶುಭಾಪ್ತಿಭೀಷಾ** ದೈತ್ಯರಿಗೆ ಸದ್ಗತಿಯಾಗುತ್ತದೆ ಎಂಬ ಭಯದಿಂದಲೂ **ದಿತಿಜಾನ್** ದೈತ್ಯರನ್ನು **ಸುಕರ್ಮಣಃ** ಸತ್ಕರ್ಮಗಳಿಂದ **ತ್ವದ್ಭಕ್ತಿತಃ ಚ** ನಿನ್ನ ಭಕ್ತಿಯಿಂದಲೂ **ಶೀಘ್ರಂ** ಕೂಡಲೇ **ಚಾಲಯಿತುಂ** ಚ್ಯುತರನ್ನಾಗಿ ಮಾಡಲು **ಸಂಪ್ರಾರ್ಥಯಾಮಃ** ಪ್ರಾರ್ಥಿಸುತ್ತೇವೆ.

**ತಾತ್ಪರ್ಯ** :- ಪುಣ್ಯ ಕರ್ಮ ವ್ಯರ್ಥವಾದೀತು ಎಂಬ ಭಯದಿಂದ ಹಾಗೂ ದೈತ್ಯರಿಗೆ ಸದ್ಗತಿಯಾಗುತ್ತದೆ ಎಂಬ ಭಯದಿಂದಲೂ ನಿನ್ನನ್ನು ಪ್ರಾರ್ಥಿಸುತ್ತಿದ್ದೇವೆ. ದೈತ್ಯರನ್ನು ಸತ್ಕರ್ಮದಿಂದ ಮತ್ತು ನಿನ್ನ ಭಕ್ತಿಯಿಂದ ಚ್ಯುತರನ್ನಾಗಿ ಮಾಡು.

ಯ ಉಗ್ರಸೇನಃ ಸುರಗಾಯಕಃ ಸಃ
ಜಾತೋ ಯದುಷ್ವೇಷ ತಥಾಽಭಿಧೇಯಃ ।
ತವೈವ ಸೇವಾರ್ಥಮಮುಷ್ಯ ಪುತ್ರೋ
ಜಾತೋಽಸುರಃ ಕಾಲನೇಮಿಃ ಸ ಈಶ ॥ ೧೯೫ ॥

ಪದಚ್ಛೇದ :- ಯಃ, ಉಗ್ರಸೇನಃ, ಸುರಗಾಯಕಃ, ಸಃ, ಜಾತಃ, ಯದುಷು, ಏಷಃ, ತಥಾಭಿಧೇಯಃ, ತವ, ಏವ, ಸೇವಾರ್ಥಂ, ಅಮುಷ್ಯ, ಪುತ್ರಃ, ಜಾತಃ, ಅಸುರಃ, ಕಾಲನೇಮಿಃ, ಸಃ, ಈಶ.

**ಅರ್ಥ** :- **ಈಶ** ಸ್ವಾಮಿಯೇ! **ಯಃ** ಯಾವನು **ಉಗ್ರಸೇನಃ** ಉಗ್ರಸೇನನೆಂಬ **ಸುರಗಾಯಕಃ** ದೇವತೆಗಳ ಗಾಯಕನಿದ್ದಾನೋ **ಸಃ** ಅವನು

**ಯದುಷು** ಯಾದವರಲ್ಲಿ **ತಥಾಭಿಧೇಯಃ** ಅದೇ ಹೆಸರುಳ್ಳವನಾಗಿ **ತವ** ನಿನ್ನ **ಸೇವಾರ್ಥಂ ಏವ** ಸೇವೆಗೋಸ್ಕರವೇ **ಜಾತಃ** ಹುಟ್ಟಿದ್ದಾನೆ. **ಸಃ** ಆ ಯಾವ **ಕಾಲನೇಮಿಃ** ಕಾಲನೇಮಿಯೆಂಬ **ಅಸುರಃ** ದೈತ್ಯನು **ಅಮುಷ್ಯ** ಈ ಉಗ್ರ ಸೇನನ **ಪುತ್ರಃ** ಮಗನಾಗಿ **ಜಾತಃ** ಹುಟ್ಟಿದ್ದಾನೆ.

**ತಾತ್ಪರ್ಯ** :- ಸ್ವಾಮಿಯೇ! ದೇವತೆಗಳ ಗಾಯಕನಾದ ಯಾವ ಉಗ್ರಸೇನನಿದ್ದನೋ ಅವನು ಅದೇ ಹೆಸರಿನಿಂದ ಯಾದವರಲ್ಲಿ ನಿನ್ನ ಸೇವೆಗಾಗಿ ಹುಟ್ಟಿದ್ದಾನೆ. ವಾಯುವಿನಿಂದ ಹತನಾಗದ ಕಾಲನೇಮಿಯು ಈ ಉಗ್ರಸೇನನ ಮಗನಾಗಿ ಹುಟ್ಟಿದ್ದಾನೆ.

**ಯಸ್ತ್ವತ್ಪ್ರಿಯಾರ್ಥಂ ನ ಹತೋ ಹಿ ವಾಯುನಾ**
**ಭವತ್ಪ್ರಸಾದಾತ್ ಪರಮೀಶತಾಽಪಿ ।**
**ಸ ಏಷ ಭೋಜೇಷು ಪುನಶ್ಚ ಜಾತೋ**
**ವರಾದುಮೇಶಸ್ಯ ಪರೈರಜೇಯಃ ॥ ೧೯೬ ॥**

ಪದಚ್ಛೇದ :- ಯಃ, ತ್ವತ್ಪ್ರಿಯಾರ್ಥಂ, ನ, ಹತಃ, ಹಿ, ವಾಯುನಾ, ಭವತ್ಪ್ರಸಾದಾತ್, ಪರಂ, ಈಶತಾ, ಅಪಿ, ಸಃ, ಏಷಃ, ಭೋಜೇಷು, ಪುನಃ, ಚ, ಜಾತಃ, ವರಾತ್, ಉಮೇಶಸ್ಯ, ಪರೈಃ, ಅಜೇಯಃ.

**ಅರ್ಥ** :- **ಭವತ್ಪ್ರಸಾದಾತ್** ನಿನ್ನ ಅನುಗ್ರಹದಿಂದ **ಪರಂ** ಅತ್ಯಂತವಾಗಿ **ಈಶತಾ ಅಪಿ** ಸಮರ್ಥನೇ ಆದ **ವಾಯುನಾ** ವಾಯುವಿನಿಂದ **ತ್ವತ್ಪ್ರಿಯಾರ್ಥಂ** ನಿನ್ನ ಪ್ರೀತಿಗೋಸ್ಕರ **ಯಃ** ಯಾವನು **ನ ಹತಃ** ಕೊಲ್ಲಲ್ಪಡ ಲಿಲ್ಲವೋ **ಸಃ** ಅಂತಹ **ಏಷಃ** ಈ ಕಾಲನೇಮಿಯು **ಉಮೇಶಸ್ಯ** ರುದ್ರನ **ವರಾತ್** ವರದಿಂದ **ಪರೈಃ** ಬೇರೆಯವರಿಂದ **ಅಜೇಯಃ** ಅಜೇಯನಾಗಿ **ಪುನಃ ಚ** ಮತ್ತೆ **ಭೋಜೇಷು** ಯಾದವರಲ್ಲಿ **ಜಾತಃ** ಹುಟ್ಟಿದ್ದಾನೆ.

**ತಾತ್ಪರ್ಯ** :- ನಿನ್ನ ಅನುಗ್ರಹದಿಂದ ಬಹಳ ಸಮರ್ಥನೇ ಆಗಿದ್ದರೂ ವಾಯುದೇವನು ನಿನ್ನ ಪ್ರೀತಿಗಾಗಿ ಯಾವನನ್ನು ಕೊಲ್ಲಲಿಲ್ಲವೋ ಆ ಕಾಲನೇಮಿಯು ರುದ್ರದೇವರ ವರದಿಂದ ಅಜೇಯನಾಗಿ ಮತ್ತೆ ಯಾದವ ರಲ್ಲಿ ಹುಟ್ಟಿ ಬಂದಿದ್ದಾನೆ.

ಸ ಔಗ್ರಸೇನೇ ಜನಿತೋಽಸುರೇಣ
ಕ್ಷೇತ್ರೇ ಹಿ ತದ್ರೂಪಧರೇಣ ಮಾಯಯಾ ।
ಗಂಧರ್ವಜೇನ ದ್ರಮಿಲೇನ ನಾಮ್ನಾ
ಕಂಸೋ ಜಿತೋ ಯೇನ ವರಾಚ್ಛಚೀಪತಿಃ ॥ ೧೯೭ ॥

ಪದಚ್ಛೇದ :– ಸಃ, ಔಗ್ರಸೇನೇ, ಜನಿತಃ, ಅಸುರೇಣ, ಕ್ಷೇತ್ರೇ, ಹಿ, ತದ್ರೂಪಧರೇಣ, ಮಾಯಯಾ, ಗಂಧರ್ವಜೇನ, ದ್ರಮಿಲೇನ, ನಾಮ್ನಾ ಕಂಸಃ, ಜಿತಃ, ಯೇನ, ವರಾತ್, ಶಚೀಪತಿಃ.

**ಅರ್ಥ** :- **ಯೇನ** ಯಾವನಿಂದ (ಕಂಸನಿಂದ) **ವರಾತ್** ರುದ್ರದೇವರ ವರದಿಂದ **ಶಚೀಪತಿಃ** ಇಂದ್ರನು **ಜಿತಃ** ಗೆಲ್ಲಲ್ಪಟ್ಟನೋ **ಸಃ** ಅವನು **ಮಾಯಯಾ** ಗಂಧರ್ವಮಾಯೆಯಿಂದ **ತದ್ರೂಪಧರೇಣ** ಉಗ್ರಸೇನನ ರೂಪವನ್ನೇ ಧರಿಸಿರುವ **ಗಂಧರ್ವಜೇನ** ಗಂಧರ್ವಕುಲದಲ್ಲಿ ಹುಟ್ಟಿದ **ದ್ರಮಿಲೇನ** ದ್ರಮಿಲನೆಂಬ **ಅಸುರೇಣ** ದೈತ್ಯನಿಂದ **ಔಗ್ರಸೇನೇ** ಉಗ್ರಸೇನನ ಸಂಬಂಧಿಯಾದ **ಕ್ಷೇತ್ರೇ** ಧರ್ಮಪತ್ನಿಯಲ್ಲಿ **ನಾಮ್ನಾ** ಹೆಸರಿನಿಂದ **ಕಂಸಃ ಇತಿ** ಕಂಸನೆಂದು **ಜಾತಃ** ಹುಟ್ಟಿಸಲ್ಪಟ್ಟನು.

**ತಾತ್ಪರ್ಯ** :- ಗಂಧರ್ವಕುಲದಲ್ಲಿ ಹುಟ್ಟಿದ ದ್ರಮಿಲನೆಂಬುವನು ಮಾಯೆಯಿಂದ ಉಗ್ರಸೇನನ ರೂಪವನ್ನು ಧರಿಸಿ ಉಗ್ರಸೇನನ ಧರ್ಮಪತ್ನಿಯಲ್ಲಿ ಮಗುವನ್ನು ಹುಟ್ಟಿಸಿದನು. ಅವನೇ ಈ ಕಂಸ. ಇವನು ರುದ್ರದೇವರ ವರದಿಂದ ಇಂದ್ರನನ್ನೂ ಗೆದ್ದನು.

ಜಿತ್ವಾ ಜಲೇಶಂ ಚ ಹೃತಾನಿ ಯೇನ ರತ್ನಾನಿ ಯಕ್ಷಾಶ್ಚ ಜಿತಾಃ ಶಿವಸ್ಯ ।
ಕನ್ಯಾವನಾರ್ಥಂ ಮಗದಾಧಿಪೇನ ಪ್ರಯೋಜಿತಾಸ್ತೇ ಚ ಹೃತೇ ಬಲೇನ
॥ ೧೯೮ ॥

ಪದಚ್ಛೇದ :– ಜಿತ್ವಾ, ಜಲೇಶಂ, ಚ, ಹೃತಾನಿ, ಯೇನ, ರತ್ನಾನಿ, ಯಕ್ಷಾಃ, ಚ, ಜಿತಾಃ, ಶಿವಸ್ಯ, ಕನ್ಯಾವನಾರ್ಥಂ, ಮಗದಾಧಿಪೇನ, ಪ್ರಯೋಜಿತಾಃ, ತೇ, ಚ, ಹೃತೇ, ಬಲೇನ.

**ಅರ್ಥ** :- **ಜಲೇಶಂ** ವರುಣನನ್ನು **ಜಿತ್ವಾ** ಗೆದ್ದು **ಯೇನ** ಯಾವ ಕಂಸನಿಂದ **ರತ್ನಾನಿ** ರತ್ನಗಳು **ಹೃತಾನಿ** ಅಪಹರಿಸಲ್ಪಟ್ಟವು **ಮಗದಾಧಿಪೇನ**

ಮಗದ ದೇಶದ ರಾಜನಾದ ಜರಾಸಂಧನಿಂದ **ಕನ್ಯಾವನಾರ್ಥಂ** ಹೆಣ್ಣು ಮಕ್ಕಳ ರಕ್ಷಣೆಗಾಗಿ **ಪ್ರಯೋಜಿತಾಃ** ನಿಯೋಜಿಸಲ್ಪಟ್ಟ **ಶಿವಸ್ಯ** ಶಿವನ **ಯಕ್ಷಾಃ** ಯಕ್ಷರು **ಜಿತಾಃ** ಗೆಲ್ಲಲ್ಪಟ್ಟರು. **ಚ** ಮತ್ತು **ಬಲೇನ** ಬಲಾತ್ಕಾರದಿಂದ **ತೇ** ಅಸ್ತಿ ಪ್ರಾಸ್ತಿಯರೆಂಬ ಇಬ್ಬರು **ಹೃತೇ** ಅಪಹರಿಸಲ್ಪಟ್ಟರು.

**ತಾತ್ಪರ್ಯ** :- ಕಂಸನು ವರುಣನನ್ನು ಗೆದ್ದು ಸಮುದ್ರದಿಂದ ರತ್ನಗಳನ್ನು ಪಡೆದುಕೊಂಡನು. ತನ್ನ ಹೆಣ್ಣು ಮಕ್ಕಳ ರಕ್ಷಣೆಗಾಗಿ ಜರಾಸಂಧನು ನಿಯಮಿಸಿದ ಶಿವನ ಯಕ್ಷರನ್ನೂ ಗೆದ್ದನು. ಬಲಾತ್ಕಾರದಿಂದ ಅಸ್ತಿ ಮತ್ತು ಪ್ರಾಸ್ತಿ ಎಂಬ ಜರಾಸಂಧನ ಇಬ್ಬರು ಹೆಣ್ಣು ಮಕ್ಕಳನ್ನೂ ಅಪಹರಿಸಿದ.

**ಸ ವಿಪ್ರಚಿತ್ತಿಶ್ಚ ಜರಾಸುತೋಽಭೂದ್**
**ವರಾದ್ ವಿಧಾತುರ್ಗಿರಿಶಸ್ಯ ಚೈವ ।**
**ಸರ್ವೈರಜೇಯೋ ಬಲಮುತ್ತಮಂ ತತ್**
**ಜ್ಞಾತ್ವೈವ ಕಂಸಸ್ಯ ಮುದಾ ಸುತೇ ದದೌ ॥ ೧೯ ॥**

ಪದಚ್ಛೇದ :- ಸಃ, ವಿಪ್ರಚಿತ್ತಿಃ, ಚ, ಜರಾಸುತಃ, ಅಭೂತ್, ವರಾತ್, ವಿಧಾತುಃ, ಗಿರಿಶಸ್ಯ, ಚ, ಏವ, ಸರ್ವೈಃ, ಅಜೇಯಃ, ಬಲಂ, ಉತ್ತಮ, ತತ್, ಜ್ಞಾತ್ವಾ ಏವ, ಕಂಸಸ್ಯ, ಮುದಾ, ಸುತೇ, ದದೌ.

**ಅರ್ಥ** :- **ವಿಪ್ರಚಿತ್ತಿಃ ಚ** ವಿಪ್ರಚಿತ್ತಿಯಾದರೂ **ಜರಾಸುತಃ** ಜರಾಸಂಧನಾಗಿ **ಅಭೂತ್** ಹುಟ್ಟಿದನು. **ಸಃ** ಆ ಜರಾಸಂಧನು **ವಿಧಾತುಃ** ಬ್ರಹ್ಮದೇವರ **ಚ** ಮತ್ತು **ಗಿರಿಶಸ್ಯ** ರುದ್ರದೇವರ **ವರಾತ್** ವರದಿಂದ **ಸರ್ವೈಃ** ಎಲ್ಲರಿಂದಲೂ **ಅಜೇಯಃ** ಅಜೇಯನಾಗಿದ್ದನು. **ಕಂಸಸ್ಯ** ಕಂಸನ **ತತ್** ಆ ಯಾವ **ಉತ್ತಮಂ** ಉತ್ತಮವಾದ **ಬಲಂ** ಬಲವನ್ನು **ಜ್ಞಾತ್ವಾ** ತಿಳಿದು **ಮುದಾ ಏವ** ಸಂತೋಷದಿಂದಲೇ **ಸುತೇ** ಇಬ್ಬರು ಹೆಣ್ಣು ಮಕ್ಕಳನ್ನು **ದದೌ** ಕೊಟ್ಟನು.

**ತಾತ್ಪರ್ಯ** :- ವಿಪ್ರಚಿತ್ತಿಯೇ ಜರಾಸಂಧನಾಗಿ ಹುಟ್ಟಿದನು. ಆ ಜರಾಸಂಧನು ಬ್ರಹ್ಮದೇವರ ಮತ್ತು ರುದ್ರದೇವರ ವರದಿಂದಾಗಿ ಎಲ್ಲರಿಂದಲೂ ಅಜೇಯನಾಗಿದ್ದನು. ಹಾಗಿದ್ದರೂ ಅವನು ಕಂಸನ ಬಲವನ್ನು ತಿಳಿದು ತನ್ನ ಇಬರು ಹೆಣ್ಣು ಮಕ್ಕಳನ್ನು ಸಂತೋಷದಿಂದಲೇ ಮದುವೆ ಮಾಡಿ ಕೊಟ್ಟನು.

ನಿವಾರಯಾಮಾಸ ನ ಕಂಸಮುದ್ಧತಂ
ಶಕ್ತೋऽಪಿ ಯೋ ಯಸ್ಯ ಬಲೇನ ಕಶ್ಚಿತ್ ।
ತುಲ್ಯಃ ಪೃಥಿವ್ಯಾಂ ವಿವರೇಷು ವಾ ಕ್ವಚಿದ್
ವಶೇ ಬಲಾಢ್ಯೋ ನೃಪತೀಂಶ್ಚ ಚಕ್ರೇ ॥ ೨೦೦ ॥

ಪದಚ್ಛೇದ :- ನಿವಾರಯಾಮಾಸ, ನ, ಕಂಸಂ, ಉದ್ಧತಂ, ಶಕ್ತಃ, ಅಪಿ, ಯಃ, ಯಸ್ಯ, ಬಲೇನ, ಕಶ್ಚಿತ್, ತುಲ್ಯಃ, ಪೃಥಿವ್ಯಾಂ, ವಿವರೇಷು, ವಾ, ಕ್ವಚಿತ್, ವಶೇ, ಬಲಾಢ್ಯಃ, ನೃಪತೀನ್, ಚ, ಚಕ್ರೇ.

**ಅರ್ಥ** :- **ಯಸ್ಯ** ಯಾವ ಜರಾಸಂಧನಿಗೆ **ಬಲೇ** ಬಲದಲ್ಲಿ **ತುಲ್ಯಃ** ಸಮನಾದವನು **ಪೃಥಿವ್ಯಾಂ** ಭೂಮಿಯಲ್ಲಿ **ವಿವರೇಷು** ಪಾತಾಳಾದಿ ಏಳು ಲೋಕಗಳಲ್ಲಿ **ಕ್ವಚಿತ್ ವಾ** ಎಲ್ಲಿಯೂ **ನ** ಇರಲಿಲ್ಲ. **ಬಲಾಢ್ಯಃ** ಬಲಿಷ್ಠನಾದ ಜರಾಸಂಧನು **ನೃಪತೀನ್** ರಾಜರುಗಳನ್ನು **ವಶೇ** ಅಧೀನದಲ್ಲಿ **ಚಕ್ರೇ ಚ** ಮಾಡಿಕೊಂಡಿದ್ದನೂ ಕೂಡ. **ಯಃ** ಯಾವ ಜರಾಸಂಧನು **ಶಕ್ತಃ** ಸಮರ್ಥ ನಾದರೂ ಕೂಡ **ಉದ್ಧತಂ** ದೃಪ್ತನಾದ **ಕಂಸಂ** ಕಂಸನನ್ನು **ನ ನಿವಾರಯಾಮಾಸ** ತಡೆಯಲಿಲ್ಲ.

**ತಾತ್ಪರ್ಯ** :- ಜರಾಸಂಧನಿಗೆ ಬಲದಲ್ಲಿ ಸಮಾನನಾದವನು ಭೂಮಿಯಲ್ಲಾಗಲೀ, ಪಾತಾಳಾದಿ ಏಳು ಲೋಕಗಳಲ್ಲಿಯೂ ಎಲ್ಲೂ ಇಲ್ಲ. ಎಲ್ಲ ರಾಜರುಗಳನ್ನು ತನ್ನ ಅಧೀನ ಮಾಡಿಕೊಂಡಿದ್ದ. ಅವನು ಸಮರ್ಥನಾಗಿದ್ದರೂ ತನ್ನ ಕನ್ಯೆಯರನ್ನು ಅಪಹರಿಸಿಕೊಂಡು ಹೋಗುತ್ತಿರುವ ದೃಪ್ತನಾದ ಕಂಸನನ್ನು ತಡೆಯಲಿಲ್ಲ.

ಹತೌ ಪುರಾ ಯೌ ಮಧುಕೈಟಭಾಖ್ಯೌ
ತ್ವಯೈವ ಹಂಸೋ ಡಿಭಿಕಶ್ಚ ಜಾತೌ ।
ವರಾದಜೇಯೌ ಗಿರಿಶಸ್ಯ ವೀರೌ
ಭಕ್ತೌ ಜರಾಸಂಧಮನು ಸ್ಮ ತೌ ಶಿವೇ ॥ ೨೦೧ ॥

ಪದಚ್ಛೇದ :- ಹತೌ, ಪುರಾ, ಯೌ, ಮಧುಕೈಟಭಾಖ್ಯೌ, ತ್ವಯಾ, ಏವ, ಹಂಸಃ, ಡಿಭಿಕಃ, ಚ, ಜಾತೌ, ವರಾತ್, ಅಜೇಯೌ, ಗಿರಿಶಸ್ಯ, ವೀರೌ, ಭಕ್ತೌ, ಜರಾಸಂಧಂ, ಅನು, ಸ್ಮ, ತೌ, ಶಿವೇ.

**ಅರ್ಥ** :- **ಪುರಾ** ಹಿಂದೆ **ತ್ವಯಾ ಏವ** ನಿನ್ನಿಂದಲೇ **ಯೌ** ಯಾವ **ಮಧುಕೈಟಭೌ** ಮಧು ಕೈಟಭರು **ಹತೌ** ಕೊಲ್ಲಲ್ಪಟ್ಟಿದ್ದರೋ **ತೌ ಏವ** ಅವರೇ **ಹಂಸಃ ಡಿಭಿಕಃ ಚ** ಹಂಸ ಮತ್ತು ಡಿಭಿಕರಾಗಿ **ಜಾತೌ** ಹುಟ್ಟಿದ್ದಾರೆ. **ಗಿರಿಶಸ್ಯ** ರುದ್ರದೇವರ **ವರಾತ್** ವರದಿಂದ **ಅಜೇಯೌ** ಅಜೇಯರಾದ **ವೀರೌ** ಪರಾಕ್ರಮಿಗಳಾದ **ಜರಾಸಂಧಂ ಅನು** ಜರಾಸಂಧನ ಅನಂತರ **ತೌ** ಅವರು **ಶಿವೇ** ರುದ್ರನಲ್ಲಿ **ಭಕ್ತೌ ಸ್ಮ** ಮುಖ್ಯ ಭಕ್ತರೇ ಆಗಿದ್ದಾರೆ.

**ತಾತ್ಪರ್ಯ** :- ಹಿಂದೆ ನೀನು ಹಯಗ್ರೀವ ರೂಪದಿಂದ ಸಂಹರಿಸಿದ ಮಧು ಕೈಟಭರು ಹಂಸ ಡಿಭಿಕರಾಗಿ ಹುಟ್ಟಿದ್ದಾರೆ. ರುದ್ರದೇವರ ವರದಿಂದ ಅಜೇಯರಾಗಿದ್ದಾರೆ. ವೀರರೂ ಹೌದು. ಜರಾಸಂಧನ ಅನಂತರ ರುದ್ರನ ಮುಖ್ಯ ಭಕ್ತರಾಗಿದ್ದಾರೆ.

**ಅನ್ಯೇಽಪಿ ಭೂಮಾವಸುರಾಃ ಪ್ರಜಾತಾಃ**
**ತ್ವಯಾ ಹತಾ ಯೇ ಸುರದೈತ್ಯಸಂಗರೇ ।**
**ಅನ್ಯೇ ತಥೈವಾಂಧತಮಃ ಪ್ರಪೇದಿರೇ**
**ಕಾರ್ಯಾ ತಥೈಷಾಂ ಚ ತಮೋ ಗತಿಸ್ತ್ವಯಾ ॥ ೨೦೨ ॥**

ಪದಚ್ಛೇದ :– **ಅನ್ಯೇ, ಅಪಿ ಭೂಮೌ, ಅಸುರಾಃ, ಪ್ರಜಾತಾಃ, ತ್ವಯಾ, ಹತಾಃ, ಯೇ, ಸುರದೈತ್ಯಸಂಗರೇ, ಅನ್ಯೇ, ತಥಾ ಏವ, ಅಂಧತಮಃ, ಪ್ರಪೇದಿರೇ, ಕಾರ್ಯಾ, ತಥಾ, ಏಷಾಂ, ಚ, ತಮೋಗತಿಃ, ತ್ವಯಾ ॥**

**ಅರ್ಥ** :- **ಸುರದೈತ್ಯಸಂಗರೇ** ದೇವತೆಗಳು ದೈತ್ಯರೂ ನಡೆಸಿದ ಯುದ್ಧದಲ್ಲಿ **ತ್ವಯಾ** ನಿನ್ನಿಂದ **ಯೇ** ಯಾವ **ಅನ್ಯೇ ಅಪಿ** ಬೇರೆಯವರಾದ **ಅಸುರಾಃ** ದೈತ್ಯರು **ಹತಾಃ** ಕೊಲ್ಲಲ್ಪಟ್ಟರೋ **ತೇ** ಅವರು **ಭೂಮೌ** ಭೂಮಿಯಲ್ಲಿ **ಪ್ರಜಾತಾಃ** ಹುಟ್ಟಿದ್ದಾರೆ. **ತಥಾ ಏವ** ಹಾಗೆಯೇ **ಅನ್ಯೇ ಅಪಿ** ಬೇರೆಯವರೂ **ಅಂಧತಮಃ** ಅಂಧಂತಮಸ್ಸನ್ನು **ಪ್ರಪೇದಿರೇ** ಹೊಂದಿದರು. **ತಥಾ** ಹಾಗೆಯೇ **ಏಷಾಂ ಚ** ಭೂಮಿಯಲ್ಲಿ ಹುಟ್ಟಿದ ಈ ದೈತ್ಯರಿಗೂ **ತ್ವಯಾ** ನಿನ್ನಿಂದ **ತಮೋಗತಿಃ** ತಮ ಪ್ರಾಪ್ತಿಯು **ಕಾರ್ಯಾ** ಮಾಡಲ್ಪಡಬೇಕು.

**ತಾತ್ಪರ್ಯ** :- ದೇವತೆಗಳು ದೈತ್ಯರು ಸೇರಿ ನಡೆಸಿದ ಯುದ್ಧದಲ್ಲಿ ಯಾವ ದೈತ್ಯರನ್ನು ನೀನು ಕೊಂದಿರುವೆಯೋ ಅವರೆಲ್ಲರೂ ಈಗ

ಭೂಮಿಯಲ್ಲಿ ಹುಟ್ಟಿದ್ದಾರೆ. ಇನ್ನು ಬೇರೆಯವರು ಅಂಧಂತಮಸ್ಸನ್ನು ಹೊಂದಿದ್ದಾರೆ. ಹಾಗೆ ಈಗ ಭೂಮಿಯಲ್ಲಿ ಹುಟ್ಟಿದ ಈ ದೈತ್ಯರಿಗೂ ಅಂಧಂತಮಸ್ಸು ದೊರೆಯುವಂತೆ ನೀನು ಮಾಡಬೇಕು.

**ವ್ಯಾಸಾವತಾರೇ ನಿಹತಸ್ತ್ವಯಾ ಯಃ ಕಲಿಃ ಸುಶಾಸ್ತ್ರೋಕ್ತಿಭಿರೇವ ಚಾದ್ಯ ।**
**ಶ್ರುತ್ವಾ ತ್ವದುಕ್ತೀಃ ಪುರುಷೇಷು ತಿಷ್ಠನ್ನೀಷಚ್ಚಕಾರೇವ ಮನಸ್ತ್ವಯೀಶ**
**॥ ೨೦೩ ॥**

ಪದಚ್ಛೇದ :- ವ್ಯಾಸಾವತಾರೇ, ನಿಹತಃ, ತ್ವಯಾ, ಯಃ, ಕಲಿಃ, ಸುಶಾಸ್ತ್ರೋಕ್ತಿಭಿಃ, ಏವ, ಚ, ಅದ್ಯ, ಶ್ರುತ್ವಾ ತ್ವದುಕ್ತೀಃ, ಪುರುಷೇಷು, ತಿಷ್ಠನ್, ಈಷತ್, ಚಕಾರ, ಇವ, ಮನಃ, ತ್ವಯಿ, ಈಶ ॥

**ಅರ್ಥ** :- **ಈಶ** ಸ್ವಾಮಿಯೇ! **ವ್ಯಾಸಾವತಾರೇ** ವ್ಯಾಸಾವತಾರದಲ್ಲಿ **ತ್ವಯಾ** ನಿನ್ನಿಂದ **ಸುಶಾಸ್ತ್ರೋಕ್ತಿಭಿಃ ಏವ** ಶೋಭನಗಳಾದ ಶಾಸ್ತ್ರಗಳ ವಚನಗಳಿಂದಲೇ **ಯಃ** ಯಾವ **ಕಲಿಃ** ಕಲಿಯು **ನಿಹತಃ** ಕೊಲ್ಲಲ್ಪಟ್ಟಿದ್ದಾನೋ **ಸಃ** ಅವನು **ಅದ್ಯ** ಈವಾಗ **ಪುರುಷೇಷು** ಜನರಲ್ಲಿ **ತಿಷ್ಠನ್** ನಿಂತು **ತ್ವದುಕ್ತೀಃ** ನಿನ್ನ ಉಪದೇಶಗಳನ್ನು **ಶ್ರುತ್ವಾ** ಕೇಳಿ **ತ್ವಯಿ** ನಿನ್ನಲ್ಲಿ **ಈಷತ್** ಸ್ವಲ್ಪ **ಮನಃ** ಮನಸ್ಸನ್ನು **ಚಕಾರ ಇವ** ಮಾಡುವವನಂತೆ ಇದ್ದಾನೆ .

**ತಾತ್ಪರ್ಯ** :- ಸ್ವಾಮಿ! ನೀನು ವ್ಯಾಸಾವತಾರದಲ್ಲಿ ಶಾಸ್ತ್ರ ವಾಕ್ಯಗಳಿಂದ ಯಾವ ಕಲಿಯನ್ನು ಸಂಹರಿಸಿರಿವಿಯೋ ಆ ಕಲಿಯು ಈಗ ಜನರಲ್ಲಿ ನಿಂತು ನಿನ್ನ ಉಪದೇಶ ವಾಕ್ಯಗಳನ್ನು ಕೇಳಿ ಸ್ವಲ್ಪ ಭಕ್ತಿಯನ್ನು ಮಾಡುವವನಂತೆ ಕಾಣುತ್ತಾನೆ .

**ರಾಮಾತ್ಮನಾ ಯೇ ನಿಹತಾಶ್ಚ ರಾಕ್ಷಸಾ**
**ದೃಷ್ಟ್ವಾ ಬಲಂ ತೇಽಪಿ ತದಾ ತವಾದ್ಯ ।**
**ಸಮಂ ತವಾನ್ಯಂ ನ ಹಿ ಚಿಂತಯಂತಿ**
**ಸುಪಾಪಿನೋಽಪೀಶ ತಥಾ ಹನೂಮತಃ ॥ ೨೦೪ ॥**

ಪದಚ್ಛೇದ :- ರಾಮಾತ್ಮನಾ, ಯೇ, ನಿಹತಾಃ, ಚ, ರಾಕ್ಷಸಾಃ, ದೃಷ್ಟ್ವಾ ಬಲಂ, ತೇ, ಅಪಿ, ತದಾ, ತವ, ಅದ್ಯ, ಸಮಂ, ತವ, ಅನ್ಯಂ, ನ, ಹಿ, ಚಿಂತಯಂತಿ, ಸುಪಾಪಿನಃ, ಅಪಿ, ಈಶ, ತಥಾ, ಹನೂಮತಃ ॥

**ಅರ್ಥ** :- **ಈಶ** ಪ್ರಭುವೇ! **ರಾಮಾತ್ಮನಾ** ರಾಮಸ್ವರೂಪಿಯಾದ **ತ್ವಯಾ** ನಿನ್ನಿಂದ **ಯೇ** ಯಾವ **ರಾಕ್ಷಸಾಃ** ರಾಕ್ಷಸರು **ನಿಹತಾಃ ಅಪಿ** ಕೊಲ್ಲಲ್ಪಟ್ಟಿದ್ದಾರಾದರೂ **ತೇ** ಅಂತಹ **ಸುಪಾಪಿನಃ** ಬಹಳ ಪಾಪಿಷ್ಠರಾದ **ರಾಕ್ಷಸಾಃ ಅಪಿ** ರಾಕ್ಷಸರೂ ಕೂಡ **ತದಾ** ಆಗ **ತವ** ನಿನ್ನ **ಬಲಂ** ಬಲವನ್ನು **ದೃಷ್ಟ್ವಾ** ಕಂಡು **ಅದ್ಯ** ಇಂದು **ತವ** ನಿನಗೆ **ತಥಾ** ಹಾಗೆಯೇ **ಹನೂಮತಃ** ಹನುಮಂತನಿಗೆ **ಸಮಂ** ಸಮಾನನಾದ **ಅನ್ಯಂ** ಬೇರೆಯವರನ್ನು **ನ ಚಿಂತಯಂತಿ ಹಿ** ತಿಳಿಯುವುದಿಲ್ಲವಷ್ಟೇ !

**ತಾತ್ಪರ್ಯ** :- ನೀನು ರಾಮಾವತಾರವನ್ನು ತಾಳಿ ಯಾವ ರಾಕ್ಷಸರನ್ನು ಕೊಂದಿದ್ದೆಯೋ ಅವರು ಆಗ ನಿನ್ನ ಬಲವನ್ನು ಕಂಡು ಈಗ ನಿನಗೆ ಸಮಾನರಾದವರನ್ನು ಹನುಮಂತನಿಗೆ ಸಮಾನರಾದವರನ್ನು ಕಾಣುತ್ತಿಲ್ಲ.

**ಯೇ ಕೇಶವ ತ್ವದ್ಬಹುಮಾನಯುಕ್ತಾಃ**
**ತಥೈವ ವಾಯೌ ನ ಹಿ ತೇ ತಮೋಂಧಮ್ ।**
**ಯೋಗ್ಯಾಃ ಪ್ರವೇಷ್ಟುಂ ತದತೋ ಹಿ ಮಾರ್ಗಾ-**
**ಚ್ಚಾಲ್ಯಾಸ್ತ್ವಯಾ ಜನಯಿತ್ವೈವ ಭೂಮೌ ॥ ೨೦೫ ॥**

ಪದಚ್ಛೇದ :- ಯೇ, ಕೇಶವ, ತ್ವದ್ಬಹುಮಾನಯುಕ್ತಾಃ, ತಥಾ, ಏವ, ವಾಯೌ, ನ, ಹಿ, ತೇ, ತಮಃ, ಅಂಧಂ, ಯೋಗ್ಯಾಃ, ಪ್ರವೇಷ್ಟುಂ, ತತ್, ಅತಃ, ಹಿ, ಮಾರ್ಗಾತ್, ಚಾಲ್ಯಾಃ, ತ್ವಯಾ, ಜನಯಿತ್ವಾ, ಏವ, ಭೂಮೌ ॥

**ಅರ್ಥ** :- **ಕೇಶವ** ಶ್ರೀಹರಿಯೇ! **ಯೇ** ಯಾರು **ತ್ವದ್ಬಹುಮಾನಯುಕ್ತಾಃ** ನಿನ್ನಲ್ಲಿ ಮಹತ್ವಬುದ್ಧಿಯಿಂದ ಕೂಡಿರುವರೋ **ತಥಾ ಏವ** ಹಾಗೆಯೇ **ವಾಯೌ** ವಾಯುದೇವನಲ್ಲಿ ಮಹತ್ವಬುದ್ಧಿಯುಳ್ಳವರಾಗುತ್ತಾರೋ **ತೇ** ಅವರು **ತತ್** ಆಯಾವ **ಅಂಧಂತಮಃ** ಅಂಧಂತಮಸ್ಸನ್ನು **ಪ್ರವೇಷ್ಟುಂ** ಪ್ರವೇಶಿಸಲು **ನ ಯೋಗ್ಯಾಃ ಹಿ** ಯೋಗ್ಯರಲ್ಲವಷ್ಟೇ! **ಅತಃ** ಆದ್ದರಿಂದ **ತ್ವಯಾ ಏವ** ನಿನ್ನಿಂದಲೇ **ಭೂಮೌ** ಭೂಮಿಯಲ್ಲಿ **ಜನಯಿತ್ವಾ** ಹುಟ್ಟಿಸಿ **ಮಾರ್ಗಾತ್** ಸನ್ಮಾರ್ಗದಿಂದ **ಚಾಲ್ಯಾಃ ಹಿ** ಭ್ರಷ್ಟರನ್ನಾಗಿ ಮಾಡಲು ಅರ್ಹರೇ ಆಗಿದ್ದಾರೆ.

**ತಾತ್ಪರ್ಯ** :- ಶ್ರೀ ಹರಿಯೇ! ಯಾರು ನಿನ್ನಲ್ಲಿ ಹಾಗೆಯೇ ವಾಯು ದೇವರಲ್ಲಿ ಮಹತ್ವಬುದ್ಧಿಯನ್ನು ಹೊಂದಿದ್ದಾರೋ ಅವರು ಅಂಧಂತಮಸ್ಸನ್ನು

ಸೇರಲು ಯೋಗ್ಯರಾಗಿಲ್ಲ. ಆದ್ದರಿಂದ ನೀನು ಅವರನ್ನು ಭೂಮಿಯಲ್ಲಿ ಹುಟ್ಟಿಸಿ ಸನ್ಮಾರ್ಗದಿಂದ ಭ್ರಷ್ಟರನ್ನಾಗಿ ಮಾಡಬೇಕು.

**ನಿತಾಂತಮುತ್ಪಾದ್ಯ ಭವದ್ವಿರೋಧಂ**
**ತಥೈವ ವಾಯೌ ಬಹುಭಿಃ ಪ್ರಕಾರೈಃ ।**
**ಸರ್ವೇಷು ದೇವೇಷು ಚ ಪಾತನೀಯಾಃ**
**ತಮಸ್ಯಥಾಂಧೇ ಕಲಿಪೂರ್ವಕಾಸುರಾಃ ॥ ೨೦೬ ॥**

ಪದಚ್ಛೇದ :- **ನಿತಾಂತಂ, ಉತ್ಪಾದ್ಯ, ಭವದ್ವಿರೋಧಂ, ತಥಾ, ಏವ, ವಾಯೌ, ಬಹುಭಿಃ, ಪ್ರಕಾರೈಃ, ಸರ್ವೇಷು, ದೇವೇಷು, ಚ ಪಾತನೀಯಾಃ, ತಮಸಿ, ಅಥ, ಅಂಧೇ, ಕಲಿಪೂರ್ವಕಾಸುರಾಃ ॥**

**ಅರ್ಥ** :- **ನಿತಾಂತಂ** ಬಹಳವಾಗಿ **ಭವದ್ವಿರೋಧಂ** ನಿನ್ನಲ್ಲಿ ವಿರೋಧವನ್ನು **ತಥಾ ಏವ** ಹಾಗೆಯೇ **ವಾಯೌ** ವಾಯುದೇವರಲ್ಲಿ **ಚ** ಮತ್ತು **ಸರ್ವೇಷು** ಎಲ್ಲ **ದೇವೇಷು** ದೇವತೆಗಳಲ್ಲಿ **ಬಹುಭಿಃ** ಅನೇಕವಾದ **ಪ್ರಕಾರೈಃ** ಪ್ರಕಾರಗಳಿಂದ **ವಿರೋಧಂ** ವಿರೋಧವನ್ನು **ಉತ್ಪಾದ್ಯ** ಹುಟ್ಟಿಸಿ **ಕಲಿಪೂರ್ವಕಾಸುರಾಃ** ಕಲಿಯೇ ಮೊದಲಾದ ದೈತ್ಯರು **ಅಂಧೇ ತಮಸಿ** ಅಂಧಂತಮಸ್ಸಿನಲ್ಲಿ **ಪಾತನೀಯಾಃ** ಬೀಳಿಸಲ್ಪಡಬೇಕು.

ತಾತ್ಪರ್ಯ :- ನಿನ್ನಲ್ಲಿ ವಾಯುದೇವರಲ್ಲಿ ಮತ್ತು ಇತರ ದೇವತೆಗಳಲ್ಲಿ ಅನೇಕ ರೀತಿಗಳಿಂದ ಜಗಳವಾಗಿ ವಿರೋಧವನ್ನು ಹುಟ್ಟಿಸಿ ಕಲಿಯೇ ಮೊದಲಾದ ದೈತ್ಯರನ್ನು ಅಂಧಂತಮಸ್ಸಿನಲ್ಲಿ ಬೀಳಿಸಬೇಕು.

**ಹತೌ ಚ ಯೌ ರಾವಣಕುಂಭಕರ್ಣೌ**
**ತ್ವಯಾ ತ್ವದೀಯೌ ಪ್ರತಿಹಾರಪಾಲೌ ।**
**ಮಹಾಸುರಾವೇಶಯುತೌ ಹಿ ಶಾಪಾತ್**
**ತ್ವಯೈವ ತಾವದ್ಯ ವಿಮೋಚನೀಯೌ ॥ ೨೦೭ ॥**

ಪದಚ್ಛೇದ :- **ಹತೌ, ಚ ಯೌ, ರಾವಣಕುಂಭಕರ್ಣೌ, ತ್ವಯಾ, ತ್ವದೀಯೌ, ಪ್ರತಿಹಾರಪಾಲೌ, ಮಹಾಸುರಾವೇಶಯುತೌ, ಹಿ ಶಾಪಾತ್, ತ್ವಯಾ, ಏವ, ತೌ, ಅದ್ಯ, ವಿಮೋಚನೀಯೌ ॥**

**ಅರ್ಥ** :- **ತ್ವದೀಯೌ** ನಿನ್ನವರಾದ **ಪ್ರತಿಹಾರಪಾಲೌ** ದ್ವಾರಪಾಲಕರಾದ **ಶಾಪಾತ್** ಶಾಪದಿಂದ **ಮಹಾಸುರಾವೇಶಯುತೌ** ಶ್ರೇಷ್ಠರಾದ ಅಸುರರ ಆವೇಶದಿಂದ ಕೂಡಿದವರಾಗಿ **ಯೌ** ಯಾವ **ರಾವಣಕುಂಭಕರ್ಣೌ** ರಾವಣ ಮತ್ತು ಕುಂಭಕರ್ಣರು **ಹತೌ** ಕೊಲ್ಲಲ್ಪಟ್ಟಿದ್ದರೋ **ತೌ** ಅವರು **ಅದ್ಯ** (ಶಿಶುಪಾಲ, ದಂತವಕ್ರರಾಗಿ ಹುಟ್ಟಿದ) ಈ ಜನ್ಮದಲ್ಲಿ **ತ್ವಯಾ** ಏವ ನಿನ್ನಿಂದಲೇ **ಶಾಪಾತ್** ಶಾಪದಿಂದ **ವಿಮೋಚನೀಯೌ** ಬಿಡಸಲ್ಪಡಬೇಕು.

**ತಾತ್ಪರ್ಯ** :- ನಿನ್ನ ಭಕ್ತರಾದ ದ್ವಾರಪಾಲಕರಾದ ಜಯವಿಜಯರು ಸನಕಾದಿಗಳ ಶಾಪದಿಂದ ಶ್ರೇಷ್ಠ ಅಸುರರ ಆವೇಶದಿಂದ ಕೂಡಿದವರಾಗಿ ರಾವಣಕುಂಭಕರ್ಣರಾಗಿ ಹುಟ್ಟಿ ನಿನ್ನಿಂದ ಹತರಾಗಿದ್ದರೋ ಅವರೇ ಈ ಜನ್ಮದಲ್ಲಿ ಶಿಶುಪಾಲ, ದಂತವಕ್ರರಾಗಿ ಹುಟ್ಟಿದ್ದಾರೆ. ಅವರನ್ನು ನೀನೇ ಶಾಪದಿಂದ ಬಿಡುಗಡೆ ಮಾಡಬೇಕು.

**ಯೌ ತೌ ತವಾರೀಹ ತಯೋಃ ಪ್ರವಿಷ್ಟೌ**
**ದೈತ್ಯೌ ತು ತಾವಂಧತಮಃ ಪ್ರವೇಶ್ಯೌ ।**
**ಯೌ ತೌ ತ್ವದೀಯೌ ಭವದೀಯವೇಶ್ಮ**
**ತ್ವಯಾ ಪುನಃ ಪ್ರಾಪಣೀಯೌ ಪರೇಶ ॥ ೨೦೮ ॥**

ಪದಚ್ಛೇದ :– ಯೌ, ತೌ, ತವ, ಅರೀ, ಇಹ, ತಯೋಃ, ಪ್ರವಿಷ್ಟೌ ದೈತ್ಯೌ, ತು, ತೌ, ಅಂಧತಮಃ, ಪ್ರವೇಶ್ಯೌ, ಯೌ, ತೌ, ತ್ವದೀಯೌ, ಭವದೀಯವೇಶ್ಮ ತ್ವಯಾ, ಪುನಃ, ಪ್ರಾಪಣೀಯೌ, ಪರೇಶ ॥

**ಅರ್ಥ** :- **ಪರೇಶ** ಸರ್ವೋತ್ತಮನೇ! **ತವ** ನಿನ್ನ **ಅರೀ** ಶತ್ರುಗಳೆಂದು ಪ್ರಸಿದ್ಧರಾದ **ತಯೋಃ** ಆ ಜಯ ವಿಜಯರಲ್ಲಿ **ಪ್ರವಿಷ್ಟೌ** ಪ್ರವೇಶಿಸಿದ **ಯೌ** ಯಾವ **ದೈತ್ಯೌ** ಶಿಶುಪಾಲ ದಂತವಕ್ರರೆಂಬ ದೈತ್ಯರಿರುವರೋ **ತೌ ತು** ಅವರಾದರೂ **ತವ** ನಿನಗೆ (ನಿನ್ನಿಂದ) **ಅಂಧತಮಃ** ಅಂಧಂತಮಸ್ಸನ್ನು **ಪ್ರವೇಶ್ಯೌ** ಪ್ರವೇಶ ಮಾಡಲು ಅರ್ಹರೇ ಆಗಿದ್ದಾರೆ. **ತ್ವದೀಯೌ** ನಿನ್ನ ಭಕ್ತರಾದ **ಯೌ** ಯಾವ ಜಯ ವಿಜಯರಿರುವರೋ **ತೌ** ಅವರು **ಭವದೀಯವೇಶ್ಮ** ನಿನ್ನ ಸಂಬಂಧಿಯಾದ ವೈಕುಂಠಲೋಕವನ್ನೇ **ಪುನಃ** ಮತ್ತು **ಪ್ರಾಪಣೀಯೌ** ಹೊಂದಿಸಲು ಯೋಗ್ಯರೇ ಆಗಿದ್ದಾರೆ.

**ತಾತ್ಪರ್ಯ :-** ಜಯ ವಿಜಯರಲ್ಲಿ ಪ್ರವೇಶಿಸಿರುವ ದೈತ್ಯರಾದ ಶಿಶು ಪಾಲ, ದಂತವಕ್ರರನ್ನು ಅಂಧಂತಮಸ್ಸಿಗೆ ಕಳಿಸಬೇಕು ಮತ್ತು ನಿನ್ನ ಭಕ್ತರಾದ ಜಯವಿಜಯರನ್ನು ನಿನ್ನ ವೈಕುಂಠಲೋಕಕ್ಕೆ ಮತ್ತೆ ಹೊಂದಿಸಬೇಕು.

**ಆವಿಶ್ಯ ಯೋ ಬಲಿಮಂಜಶ್ಚಕಾರ**
**ಪ್ರತೀಪಮಸ್ಮಾಸು ತಥಾ ತ್ವಯೀಶ ।**
**ಸ ಚಾಸುರೋ ಬಲಿನಾಮ್ನೈವ ಭೂಮೌ**
**ಸಾಲ್ವೋ ನಾಮ್ನಾ ಬ್ರಹ್ಮದತ್ತಸ್ಯ ಜಾತಃ ॥ ೨೦೯ ॥**

**ಪದಚ್ಛೇದ :-** ಆವಿಶ್ಯ, ಯಃ, ಬಲಿಂ, ಅಂಜಃ, ಚಕಾರ, ಪ್ರತೀಪಂ, ಅಸ್ಮಾಸು, ತಥಾ, ತ್ವಯಿ, ಈಶ, ಸಃ, ಚ, ಅಸುರಃ, ಬಲಿನಾಂ, ಏವ, ಭೂಮೌ, ಸಾಲ್ವಃ, ನಾಮ್ನಾ ಬ್ರಹ್ಮದತ್ತಸ್ಯ, ಜಾತಃ .

**ಅರ್ಥ :-** **ಈಶ** ಸ್ವಾಮಿಯೇ! **ಯಃ** ಯಾವ ಬಲಿನಾಮಾ ಏವ ಬಲಿ ಎಂದು ಹೆಸರುಳ್ಳವನೇ ಆದ **ಅಸುರಃ** ಅಸುರನು **ಬಲಿಂ** ಬಲಿಚಕ್ರವರ್ತಿಯನ್ನು **ಆವಿಶ್ಯ** ಪ್ರವೇಶಿಸಿ **ಅಸ್ಮಾಸು** ನಮ್ಮಲ್ಲಿ **ತಥಾ** ಹಾಗೆಯೇ **ತ್ವಯಿ** ನಿನ್ನಲ್ಲಿ **ಪ್ರತೀಪಂ** ವಿರೋಧವನ್ನು **ಅಂಜಃ** ಚೆನ್ನಾಗಿ **ಚಕಾರ** ಮಾಡಿರುವನೋ **ಸಃ** ಅವನು **ನಾಮ್ನಾ** ಹೆಸರಿನಿಂದ **ಸಾಲ್ವಃ** ಸಾಲ್ವನೆಂಬುವನಾಗಿ **ಭೂಮೌ** ಭೂಮಿಯಲ್ಲಿ **ಬ್ರಹ್ಮದತ್ತಸ್ಯ** ಬ್ರಹ್ಮದತ್ತನಿಗೆ **ಜಾತಃ** ಹುಟ್ಟಿದನು.

**ತಾತ್ಪರ್ಯ :-** ಪ್ರಭುವೇ! ಬಲಿ ಎಂದೇ ಹೆಸರಿನ ಅಸುರನು ಬಲಿ ಚಕ್ರವರ್ತಿಯಲ್ಲಿ ಪ್ರವೇಶಿಸಿ ನಮ್ಮಲ್ಲಿ (ದೇವತೆಗಳಲ್ಲಿ) ಹಾಗೂ ನಿನ್ನಲ್ಲಿ ಚೆನ್ನಾಗೆ ವಿರೋಧವನ್ನು ಉಂಟು ಮಾಡಿದ್ದನೋ ಅವನು ಈಗ ಸಾಲ್ವನೆಂಬ ಹೆಸರಿನಿಂದ ಬ್ರಹ್ಮದತ್ತನಿಗೆ ಭೂಮಿಯಲ್ಲಿ ಹುಟ್ಟಿದನು.

**ಮಾಯಾಮಯಂ ತೇನ ವಿಮಾನಮಗ್ರ್ಯಮ್**
**ಅಭೇದ್ಯಮಾಪ್ತಂ ಸಕಲೈರ್ಗಿರೀಶಾತ್ ।**
**ವಿದ್ರಾವಿತೋ ಯೋ ಬಹುಶಸ್ತ್ವಯೈವ**
**ರಾಮಸ್ವರೂಪೇಣ ಭೃಗೂದ್ವಹೇನ ॥ ೨೧೦ ॥**

**ಪದಚ್ಛೇದ :-** ಮಾಯಾಮಯಂ, ತೇನ, ವಿಮಾನಂ, ಅಗ್ರ್ಯಂ, ಅಭೇದ್ಯಂ, ಆಪ್ತಂ, ಸಕಲೈಃ ಗಿರೀಶಾತ್, ವಿದ್ರಾವಿತಃ, ಯಃ, ಬಹುಶಃ, ತ್ವಯಾ, ಏವ, ರಾಮಸ್ವರೂಪೇಣ, ಭೃಗೂದ್ವಹೇನ.

**ಅರ್ಥ** :- **ಭೃಗೂದ್ವಹೇನ** ಭೃಗುಕುಲದಲ್ಲಿ ಅವತಾರ ಮಾಡಿದ **ರಾಮಸ್ವರೂಪೇಣ** ಪರಶುರಾಮರೂಪಿಯಾದ **ತ್ವಯಾ ಏವ** ನಿನ್ನಿಂದಲೇ **ಬಹುಶಃ** ಅನೇಕಬಾರಿ **ಯಃ** ಯಾವನು **ವಿದ್ರಾವಿತಃ** (ಯುದ್ಧದಲ್ಲಿ) ಓಡಿಸಲ್ಪಟ್ಟಿದ್ದನೋ **ತೇನ** ಅಂತಹ ಸಾಲ್ವನಿಂದ **ಮಾಯಾಮಯಃ** ಮಾಯಾ ಪ್ರಚುರನಾದ **ಸಕಲೈಃ** ಎಲ್ಲರಿಂದಲೂ **ಅಭೇದ್ಯಂ** ಭೇದಿಸಲು ಯೋಗ್ಯವಾಗದ **ಅಗ್ರ್ಯಂ** ಶ್ರೇಷ್ಠವಾದ **ವಿಮಾನಂ** ವಿಮಾನವು **ಗಿರೀಶಾತ್** ರುದ್ರದೇವರಿಂದ **ಆಪ್ತಂ** ಹೊಂದಲ್ಪಟ್ಟಿದೆ.

**ತಾತ್ಪರ್ಯ** :- ಸರ್ವೋತ್ತಮನೇ! ಭೃಗುಕುಲದಲ್ಲಿ ಅವತಾರ ಮಾಡಿದ ಪರಶುರಾಮ ರೂಪಿಯಾದ ನೀನು ಹಿಂದೆ ಅನೇಕಬಾರಿ ಯಾವ ಸಾಲ್ವನನ್ನು ಯುದ್ಧದಲ್ಲಿ ಓಡಿಸಿದ್ದಿಯೋ ಅವನು ಈಗ ಮಾಯಾಮಯವಾದ ಎಲ್ಲರಿಂದಲೂ ಭೇದಿಸಲು ಯೋಗ್ಯವಲ್ಲದ ಶ್ರೇಷ್ಠವಾದ ವಿಮಾನವನ್ನು ರುದ್ರ ದೇವರಿಂದ ಪಡೆದಿದ್ದಾನೆ.

**ನಾಸೌ ಹತಃ ಶಕ್ತಿಮತಾಪಿ ತತ್ರ ಕೃಷ್ಣಾವತಾರೇ ಸ ಮಯೈವ ವಧ್ಯಃ ।**
**ಇತ್ಯಾತ್ಮಸಂಕಲ್ಪಮೃತಂ ವಿಧಾತುಂ ಸ ಚಾತ್ರ ವಧ್ಯೋ ಭವತಾತಿಪಾಪೀ**
**॥ ೨೧೦ ॥**

**ಪದಚ್ಛೇದ** :- ನ, ಅಸೌ, ಹತಃ, ಶಕ್ತಿಮತಾ, ಅಪಿ, ತತ್ರ, ಕೃಷ್ಣಾವತಾರೇ, ಸಃ, ಮಯಾ, ಏವ, ವಧ್ಯಃ, ಇತಿ, ಆತ್ಮಸಂಕಲ್ಪಂ, ಋತಂ, ವಿಧಾತುಂ, ಸಃ, ಚ, ಅತ್ರ, ವಧ್ಯಃ, ಭವತಾ, ಅತಿಪಾಪೀ.

**ಅರ್ಥ** :- **ಕೃಷ್ಣಾವತಾರೇ** ಕೃಷ್ಣಾವತಾರದಲ್ಲಿ **ಮಯಾ ಏವ** ನನ್ನಿಂದಲೇ **ಸಃ** ಆ ಸಾಲ್ವನು **ವಧ್ಯಃ** ಸಂಹರಿಸಲು ಯೋಗ್ಯನಾದವನು. **ಇತಿ** ಎಂಬ **ಆತ್ಮಸಂಕಲ್ಪಂ** ತನ್ನ (ನಿನ್ನ) ಸಂಕಲ್ಪವನ್ನು **ಋತಂ** ಸತ್ಯವನ್ನಾಗಿ **ವಿಧಾತುಂ** ಮಾಡಲು **ತತ್ರ** ಆ ಪರಶುರಾಮಾವತಾರದಲ್ಲಿ **ಶಕ್ತಿಮತಾ ಅಪಿ** ಸಮರ್ಥನಾದ ನಿನ್ನಿಂದಲೂ **ಅಸೌ** ಈ ಸಾಲ್ವನು **ನ ಹತಃ** ಸಂಹರಿಸಲ್ಪಡಲಿಲ್ಲ. **ಅತಿಪಾಪೀ** ಬಹಳ ಪಾಪಿಷ್ಠನಾದ **ಸಃ** ಆ ಸಾಲ್ವನು **ಅತ್ರ** ಈ ಕೃಷ್ಣಾವತಾರದಲ್ಲಿ **ಭವತಾ** ನಿನ್ನಿಂದ **ವಧ್ಯಃ** ಕೊಲ್ಲಲ್ಪಡಬೇಕು.

**ತಾತ್ಪರ್ಯ** :- ಕೃಷ್ಣಾವತಾರದಲ್ಲಿ ನಾನೇ ಸಾಲ್ವನನ್ನು ಸಂಹರಿಸಬೇಕು ಎಂದು ನೀನೇ ಮಾಡಿದ ಸಂಕಲ್ಪವನ್ನು ಸತ್ಯಗೊಳಿಸಲು ನೀನು ಸಮರ್ಥನಾದರೂ

ಪರಶುರಾಮಾವತಾರದಲ್ಲಿ ಅವನನ್ನು ಸಂಹರಿಸಲಿಲ್ಲ. ಆದ್ದರಿಂದ ಪಾಪಿಯಾದ ಸಾಲ್ವನನ್ನು ಈ ಕೃಷ್ಣಾವತಾರದಲ್ಲಿ ನೀನೇ ಸಂಹರಿಸಬೇಕು.

**ಯದೀಯಮಾರುಹ್ಯ ವಿಮಾನಮಸ್ಯ ಪಿತಾಭವತ್ ಸೌಭಪತಿಶ್ಚ ನಾಮ್ನಾ ।**
**ಯದಾ ಸ ಭೀಷ್ಮೇಣ ಜಿತಃ ಪಿತಾಸ್ಯ ತದಾ ಸ ಸಾಲ್ವಸ್ತಪಸಿ ಸ್ಥಿತೋಽಭೂತ್**
**॥ ೨೧೨ ॥**

ಪದಚ್ಛೇದ :- ಯದೀಯಂ, ಆರುಹ್ಯ, ವಿಮಾನಂ, ಅಸ್ಯ, ಪಿತಾ, ಅಭವತ್, ಸೌಭಪತಿಃ, ಚ, ನಾಮ್ನಾ ಯದಾ, ಸಃ, ಭೀಷ್ಮೇಣ, ಜಿತಃ, ಪಿತಾ, ಅಸ್ಯ, ತದಾ, ಸಃ, ಸಾಲ್ವಃ, ತಪಸಿ, ಸ್ಥಿತಃ, ಅಭೂತ್.

**ಅರ್ಥ** :- **ಯದೀಯಂ** ಯಾವ ಸಾಲ್ವನ ಸಂಬಂಧಿಯಾದ **ವಿಮಾನಂ** ವಿಮಾನವನ್ನು **ಆರುಹ್ಯ** ಏರಿ **ಅಸ್ಯ** ಈ ಸಾಲ್ವನ **ಪಿತಾ ಚ** ತಂದೆಯಾದರೂ **ನಾಮ್ನಾ** ಹೆಸರಿನಿಂದ **ಸೌಭಪತಿಃ** ಸೌಭಪತಿ ಎಂದು ಪ್ರಸಿದ್ಧನೂ **ಅಭವತ್** ಆದನು. **ಯದಾ** ಯಾವಾಗ **ಅಸ್ಯ** ಈ ಸಾಲ್ವನ **ಪಿತಾ** ತಂದೆಯಾದ **ಸಃ** ಆ ಸೌಭಪತಿಯು **ಭೀಷ್ಮೇಣ** ಭೀಷ್ಮನಿಂದ **ಜಿತಃ** ಸೋಲಿಸಲ್ಪಟ್ಟನೋ **ತದಾ** ಆಗ **ಸಃ** ಆ ಯಾವ **ಸಾಲ್ವಃ** ಸಾಲ್ವನು **ತಪಸಿ** ತಪಸ್ಸಿನಲ್ಲಿ **ಸ್ಥಿತಃ** ಇರುವವನು **ಅಭೂತ್** ಆದನು.

**ತಾತ್ಪರ್ಯ** :- ಈ ಸಾಲ್ವನ ತಂದೆಯು ಸಾಲ್ವನ ವಿಮಾನವನ್ನು ಏರಿ ಸೌಭಪತಿ ಎಂದು ಪ್ರಸಿದ್ಧನಾದನು. ಯಾವಾಗ ಭೀಷ್ಮನು ಸಾಲ್ವನ ತಂದೆಯನ್ನು ಯುದ್ಧದಲ್ಲಿ ಸೋಲಿಸಿದನೋ ಆಗ ಈ ಸಾಲ್ವನು ತಪಸ್ಸಿನಲ್ಲಿ ಮಗ್ನನಾದನು.

**ಸ ಚಾದ್ಯ ತಸ್ಮಾತ್ ತಪಸೋ ನಿವೃತ್ತೋ ಜರಾಸುತಸ್ಯಾನುಮತೇ ಸ್ಥಿತೋ ಹಿ ।**
**ಅನನ್ಯವಧ್ಯೋ ಭವತಾದ್ಯ ವಧ್ಯಃ ಸ ಪ್ರಾಪಣೀಯಶ್ಚ ತಮಸ್ಯಥೋಗ್ರೇ**
**॥ ೨೧೩ ॥**

ಪದಚ್ಛೇದ :- ಸಃ, ಚ, ಅದ್ಯ, ತಸ್ಮಾತ್, ತಪಸಃ, ನಿವೃತ್ತಃ, ಜರಾಸುತಸ್ಯ, ಅನುಮತೇ, ಸ್ಥಿತಃ, ಹಿ, ಅನನ್ಯವಧ್ಯಃ, ಭವತಾ, ಅದ್ಯ, ವಧ್ಯಃ, ಸಃ, ಪ್ರಾಪಣೀಯಃ, ಚ, ತಮಸಿ, ಅಥ, ಉಗ್ರೇ ॥

**ಅರ್ಥ** :- **ಸಃ ಚ** ಆ ಸಾಲ್ವನಾದರೂ, **ಅದ್ಯ** ಈಗ, **ತಸ್ಮಾತ್** ಆ ಯಾವ, **ತಪಸಃ** ತಪಸ್ಸಿನಿಂದ, **ನಿವೃತ್ತಃ** ಹಿಂತಿರುಗಿದವನಾಗಿ, **ಜರಾಸುತಸ್ಯ** ಜರಾಸಂಧನ,

**ಅನುಮತೇ** ಅಪ್ಪಣೆಯಲ್ಲಿ **ಸ್ಥಿತಃ ಹಿ** ಇದ್ದಾನಷ್ಟೇ ! **ಅನನ್ಯವಧ್ಯಃ** ಯಾರಿಂದಲೂ ಸಂಹರಿಸಲು ಅಸಾಧ್ಯನಾದ, **ಸಃ** ಆ ಸಾಲ್ವನೂ, **ಅದ್ಯ** ಈಗ, **ಭವತಾ** ನಿನ್ನಿಂದ, **ವಧ್ಯಃ** ಸಂಹರಿಸಲು ಯೋಗ್ಯನಾಗಿದ್ದಾನೆ. **ಅಥ** ಅನಂತರದಲ್ಲಿ, **ಉಗ್ರೇ** ಭಯಂಕರವಾದ, **ತಮಸಿ** ಅಂಧಂತಮಸ್ಸಿನಲ್ಲಿ, **ಪ್ರಾಪಣೀಯಃ** ಹೊಂದಿಸಲು ಅರ್ಹನೂ ಆಗಿದ್ದಾನೆ.

**ತಾತ್ಪರ್ಯ** :- ಸಾಲ್ವನೂ ತಪಸ್ಸಿನಿಂದ ಹಿಂತಿರುಗಿದವನಾಗಿ ಜರಾಸಂಧನ ಅಪ್ಪಣೆಯಲ್ಲಿ ಇದ್ದು ಅನುವರ್ತಿಯಾಗಿದ್ದಾನೆ. ಯಾರಿಂದಲೂ ಸಂಹರಿಸಲು ಸಾಧ್ಯವಲ್ಲದ ಆ ಸಾಲ್ವನನ್ನು ನೀನೇ ಕೊಲ್ಲಬೇಕು ಮತ್ತು ಭಯಂಕರವಾದ ಅಂಧಂತಮಸ್ಸಿಗೂ ಕಳುಹಿಸಬೇಕು.

**ಯೋ ಬಾಣಮಾವಿಶ್ಯ ಮಹಾಸುರೋಽಭೂತ್**
**ಸ್ಥಿತಃ ಸ ನಾಮ್ನಾಪ್ರಥಿತೋಽಪಿ ಬಾಣಃ ।**
**ಸ ಕೀಚಕೋ ನಾಮ ಬಭೂವ ರುದ್ರ-**
**ವರಾದವಧ್ಯಃ ಸ ತಮಃ ಪ್ರವೇಶ್ಯಃ ॥ ೨೧೪ ॥**

ಪದಚ್ಛೇದ :- ಯಃ, ಬಾಣಂ, ಆವಿಶ್ಯ, ಮಹಾಸುರಃ, ಅಭೂತ್, ಸ್ಥಿತಃ, ಸಃ, ನಾಮ್ನಾ ಪ್ರಥಿತಃ, ಅಪಿ, ಬಾಣಃ, ಸಃ, ಕೀಚಕಃ, ನಾಮ, ಬಭೂವ, ರುದ್ರವರಾತ್, ಅವಧ್ಯಃ, ಸಃ, ತಮಃ, ಪ್ರವೇಶ್ಯಃ ॥

**ಅರ್ಥ** :- **ಯಃ** ಯಾವನು, **ಬಾಣಂ** ಬಾಣನೆಂಬ ದೇವತೆಯನ್ನು **ಆವಿಶ್ಯ** ಪ್ರವೇಶಿಸಿ, **ಸ್ಥಿತಃ** ಇರುವ, **ನಾಮ್ನಾ** ಹೆಸರಿನಿಂದ, **ಬಾಣಃ** ಬಾಣನೆಂದು **ಪ್ರಥಿತಃ** ಪ್ರಸಿದ್ಧನಾದ, **ಮಹಾಸುರಃ** ದೊಡ್ಡರಾಕ್ಷಸನಿದ್ದಾನೋ **ಸಃ ಅಪಿ** ಅವನಾದರೂ, **ರುದ್ರವಶಾತ್** ರುದ್ರದೇವರ ವರದಿಂದ, **ಅವಧ್ಯಃ** ಅವಧ್ಯನಾದ, **ಕೀಚಕಃನಾಮ** ಕೀಚಕನೆಂದು ಪ್ರಸಿದ್ಧನಾದವನಾಗಿ, **ಬಭೂವ** ಹುಟ್ಟಿದನು. **ಸಃ** ಅವನು, **ತಮಃ** ಅಂಧಂತಮಸ್ಸನ್ನು **ಪ್ರವೇಶ್ಯಃ** ಪ್ರವೇಶಿಸಲು ಯೋಗ್ಯನಾದವನು.

**ತಾತ್ಪರ್ಯ** :- ಬಾಣನೆಂಬ ದೇವತೆಯನ್ನು ಪ್ರವೇಶಿಸಿ ಇರುವವನಾದ್ದರಿಂದ ಬಾಣನೆಂದೇ ಪ್ರಸಿದ್ಧನಾದ ದೊಡ್ಡರಾಕ್ಷಸನಿದ್ದಾನೋ ಅವನೇ ಕೀಚಕನಾಗಿ ಹುಟ್ಟಿದನು. ರುದ್ರದೇವರ ವರದಿಂದ ಅವಧ್ಯನೂ ಆಗಿದ್ದ ಅವನೂ ಅಂಧಂತಮಸ್ಸನ್ನು ಪ್ರವೇಶಿಸಲು ಯೋಗ್ಯನಾಗಿದ್ದಾನೆ.

ಅತಸ್ತ್ವಯಾ ಭುವ್ಯವತೀರ್ಯ ದೇವ-
ಕಾರ್ಯಾಣಿ ಕಾರ್ಯಾಣ್ಯಖಿಲಾನಿ ದೇವ ।
ತ್ವಮೇವ ದೇವೇಶ ಗತಿಃ ಸುರಾಣಾಂ
ಬ್ರಹ್ಮೇಶಶಕ್ರೇಂದುಯಮಾದಿಕಾನಾಮ್ ॥ ೨೧೫ ॥

ಪದಚ್ಛೇದ :- ಅತಃ, ತ್ವಯಾ, ಭುವಿ, ಅವತೀರ್ಯ, ದೇವಕಾರ್ಯಾಣಿ, ಕಾರ್ಯಾಣಿ, ಅಖಿಲಾನಿ, ದೇವ, ತ್ವಂ, ಏವ, ದೇವೇಶ, ಗತಿಃ, ಸುರಾಣಾಂ, ಬ್ರಹ್ಮೇಶಶಕ್ರೇಂದುಯಮಾದಿಕಾನಾಮ್.

**ಅರ್ಥ** :- **ದೇವ** ಕ್ರೀಡಾದಿಗುಣವಿಶಿಷ್ಟನಾದ ಹರಿಯೇ!, **ಅತಃ** ಆದ್ದರಿಂದ, **ತ್ವಯಾ** ನಿನ್ನಿಂದ, **ಭುವಿ** ಭೂಮಿಯಲ್ಲಿ **ಅವತೀರ್ಯ** ಅವತಾರ ಮಾಡಿ **ಅಖಿಲಾನಿ** ಎಲ್ಲಾ, **ದೇವಕಾರ್ಯಾಣಿ** ದೇವತೆಗಳ ಕಾರ್ಯಗಳು, **ಕಾರ್ಯಾಣಿ** ಮಾಡಲ್ಪಡಬೇಕು, **ದೇವೇಶ** ದೇವತೆಗಳಿಗೆ ಒಡೆಯನೇ!, **ತ್ವಂ ಏವ** ನೀನೇ **ಬ್ರಹ್ಮೇಶಶಕ್ರೇಂದುಯಮಾದಿಕಾನಾಂ** ಬ್ರಹ್ಮ, ರುದ್ರ, ಇಂದ್ರ, ಚಂದ್ರ, ಯಮ ಮುಂತಾದ, **ಸುರಾಣಾಂ** ದೇವತೆಗಳಿಗೆ, **ಗತಿಃ ಅಸಿ** ಆಶ್ರಯನಾಗಿರುವಿ.

**ತಾತ್ಪರ್ಯ** :- ಹರಿಯೇ! ಆದ್ದರಿಂದ ನೀನು ಭೂಮಿಯಲ್ಲಿ ಅವತಾರ ಮಾಡಿ ಎಲ್ಲ ದೇವತೆಗಳ ಕಾರ್ಯಗಳನ್ನು ಮಾಡಬೇಕು. ಸ್ವಾಮಿ ! ನೀನೇ ಬ್ರಹ್ಮ, ರುದ್ರ, ಇಂದ್ರ, ಚಂದ್ರ, ಯಮ ಮುಂತಾದ ದೇವತೆಗಳಿಗೆ ಆಶ್ರಯನಾಗಿರುವಿ.

ತ್ವಮೇವ ನಿತ್ಯೋದಿತಪೂರ್ಣಶಕ್ತಿಸ್ತ್ವಮೇವ ನಿತ್ಯೋದಿತಪೂರ್ಣಚಿದ್ಘನಃ ।
ತ್ವಮೇವ ನಿತ್ಯೋದಿತಪೂರ್ಣಸತ್ಸುಖಸ್ತ್ವಾದೃಙ್ನಕಶ್ಚಿತ್ಕುತ ಏವ ತೇऽಧಿಕಃ
॥ ೨೧೬ ॥

ಪದಚ್ಛೇದ :- ತ್ವಂ, ಏವ ನಿತ್ಯೋದಿತಪೂರ್ಣಶಕ್ತಿಃ, ತ್ವಂ, ಏವ, ನಿತ್ಯೋದಿತಪೂರ್ಣಚಿದ್ಘನಃ, ತ್ವಂ, ಏವ, ನಿತ್ಯೋದಿತಪೂರ್ಣಸತ್ಸುಖಃ, ತ್ವಾದೃಕ್, ನ, ಕಶ್ಚಿತ್, ಕುತಃ, ಏವ, ತೇ, ಅಧಿಕಃ.

**ಅರ್ಥ** :- **ತ್ವಂ ಏವ** ನೀನೇ, **ನಿತ್ಯೋದಿತಪೂರ್ಣಶಕ್ತಿಃ** ಯಾವಾಗಲೂ ಅಭಿವ್ಯಕ್ತವಾದ ಪೂರ್ಣಶಕ್ತಿಯುಳ್ಳವನು. **ತ್ವಂ ಏವ** ನೀನೇ, **ನಿತ್ಯೋದಿತ**

**ಪೂರ್ಣಚಿದ್ಘನಃ** ಯಾವಾಗಲೂ ಅಭಿವ್ಯಕ್ತವಾದ ಪೂರ್ಣವಾದ ಜ್ಞಾನದಿಂದ ನಿಬಿಡನು. **ತ್ವಂ** ಏವ ನೀನೇ, **ನಿತ್ಯೋದಿತಪೂರ್ಣಸತ್ಸುಖಃ** ನಿತ್ಯದಲ್ಲಿಯೂ ಅಭಿವ್ಯಕ್ತವಾದ ದುಃಖಾಸ್ಪೃಷ್ಟವಾದ ಆನಂದಉಳ್ಳವನು. **ಕಶ್ಚಿತ್** ಯಾರೊಬ್ಬನು **ತ್ವಾದೃಕ್** ಏವ ನಿನ್ನಂತವನೇ ಇಲ್ಲ, **ತೇ** ನಿನಗೆ **ಅಧಿಕಃ** ಉತ್ತಮನಾದವನು, **ಕುತಃ** ಎಲ್ಲಿಂದ ಬಂದಾನು ?

**ತಾತ್ಪರ್ಯ** :- ನೀನೇ ಯಾವಾಗಲೂ ಅಭಿವ್ಯಕ್ತವಾದ ಪೂರ್ಣಶಕ್ತಿಯುಳ್ಳವನು. ನೀನೇ ಯಾವಾಗಲೂ ಅಭಿವ್ಯಕ್ತವಾದ ಪೂರ್ಣಜ್ಞಾನದಿಂದ ನಿಬಿಡನು. ನೀನೇ ಯಾವಾಗಲೂ ಅಭಿವ್ಯಕ್ತವಾದ ದುಃಖದ ಸಂಪರ್ಕವಿಲ್ಲದಿರುವ ಆನಂದವುಳ್ಳವನು. ನಿನಗೆ ಸದೃಶನಾದವನು ಯಾರೂ ಇಲ್ಲವೆಂದ ಮೇಲೆ ಉತ್ತಮನಾದವನು ಎಲ್ಲಿಂದ ಬಂದಾನು?

**ಇತೀರಿತೋ ದೇವವರ್ಯೈರುದಾರ-**
**ಗುಣಾರ್ಣವೋಽಕ್ಷೋಭ್ಯತಮಾಮೃತಾಕೃತಿಃ ।**
**ಉತ್ಥಾಯ ತಸ್ಮಾತ್ ಪ್ರಯಯಾವನಂತ-**
**ಸೋಮಾರ್ಕಕಾಂತಿದ್ಯುತಿರನ್ವಿತೋಽಮರ್ಯೈಃ ॥ ೨೧೭ ॥**

ಪದಚ್ಛೇದ :- ಇತಿ, ಈರಿತಃ, ದೇವವರ್ಯೈಃ, ಉದಾರಗುಣಾರ್ಣವಃ, ಅಕ್ಷೋಭ್ಯತಮಾಮೃತಾಕೃತಿಃ, ಉತ್ಥಾಯ, ತಸ್ಮಾತ್, ಪ್ರಯಯೌ, ಅನಂತಸೋಮಾರ್ಕಕಾಂತಿದ್ಯುತಿಃ, ಅನ್ವಿತಃ, ಅಮರ್ಯೈಃ.

**ಅರ್ಥ** :- **ಇತಿ** ಈ ರೀತಿಯಾಗಿ, **ದೇವವರ್ಯೈಃ** ದೇವಶ್ರೇಷ್ಠರುಗಳಿಂದ **ಈರಿತಃ** ಹೇಳಲ್ಪಟ್ಟ, **ಉದಾರಗುಣಾರ್ಣವಃ** ಉತ್ಕೃಷ್ಟವಾದ ಜ್ಞಾನಾನಂದಾದಿ ಗುಣಗಳಿಂದ ಸಮುದ್ರದಂತಿರುವ, **ಅಕ್ಷೋಭ್ಯತಮಾಮೃತಾಕೃತಿಃ** ಕಳವಳಪಡೆಸಲು ಅಶಕ್ಯವಾದ ಸರ್ವಥಾ ನಾಶರಹಿತವಾದ ಆಕಾರವುಳ್ಳ **ಅನಂತಸೋಮಾರ್ಕಕಾಂತಿದ್ಯುತಿಃ** ಅಪರಿಮಿತರಾದ ಚಂದ್ರರು ಸೂರ್ಯರು ಇವರ ಕಾಂತಿಯು ಪ್ರಕಾಶವೂ ಇವುಗಳುಳ್ಳ ಪರಮಾತ್ಮನು, **ಅಮರ್ಯೈಃ** ದೇವತೆಗಳಿಂದ, **ಅನ್ವಿತಃ** ಕೂಡಿದವನಾಗಿ, **ತಸ್ಮಾತ್** ಆ ಕ್ಷೀರಸಮುದ್ರದಿಂದ **ಪ್ರಯಯೌ** ಹೊರಟನು.

**ತಾತ್ಪರ್ಯ** :- ಈ ರೀತಿಯಾಗಿ ದೇವತೆಗಳಿಂದ ಪ್ರಾರ್ಥಿತನಾದ ಉತ್ಕೃಷ್ಟವಾದ ಜ್ಞಾನಾನಂದಾದಿ ಗುಣಗಳಿಂದ ಸಮುದ್ರದಂತಿರುವ ಕಳವಳ ಪಡಿಸಲು ಅಶಕ್ಯವಾದ ಮತ್ತು ಎಂದಿಗೂ ನಾಶವಾಗದಿರುವ ಆಕಾರವನ್ನು ಹೊಂದಿರುವ ಅಪರಿಮಿತರಾದ ಚಂದ್ರರ ಕಾಂತಿಯನ್ನು ಅಪರಿಮಿತರಾದ ಸೂರ್ಯರ ಪ್ರಕಾಶವನ್ನು ಹೊಂದಿರುವ ಪರಮಾತ್ಮನು ದೇವತೆಗಳಿಂದ ಕೂಡಿ ಕ್ಷೀರಸಮುದ್ರದಿಂದ ಹೊರಟನು.

**ಸ ಮೇರುಮಾಪ್ಯಾಹ ಚತುರ್ಮುಖಂ ಪ್ರಭುಃ**
**ಯತ್ರ ತ್ವಯೋಕ್ತೋಽಸ್ಮಿ ಹಿ ತತ್ರ ಸರ್ವಥಾ ।**
**ಪ್ರಾದುರ್ಭವಿಷ್ಯೇ ಭವತೋ ಹಿ ಭಕ್ತ್ಯಾ**
**ವಶಸ್ತವಾಹಂ ಸ್ವವಶೋಽಪಿ ಚೇಚ್ಛಯಾ ॥ ೨೧೮ ॥**

**ಪದಚ್ಛೇದ** :- ಸಃ ಮೇರುಂ, ಆಪ್ಯ, ಆಹ, ಚತುರ್ಮುಖಂ, ಪ್ರಭುಃ, ಯತ್ರ, ತ್ವಯಾ, ಉಕ್ತಃ, ಅಸ್ಮಿ, ತತ್ರ, ಸರ್ವಥಾ, ಪ್ರಾದುರ್ಭವಿಷ್ಯೇ, ಭವತಃ, ಹಿ, ಭಕ್ತ್ಯಾ, ವಶಃ, ತವ, ಅಹಂ, ಸ್ವವಶಃ, ಅಪಿ, ಚ, ಇಚ್ಛಯಾ.

**ಅರ್ಥ** :- **ಪ್ರಭುಃ** ಸಮರ್ಥನಾದ, **ಸಃ** ಆ ಪರಮಾತ್ಮನು, **ಮೇರುಂ** ಮೇರು ಪರ್ವತವನ್ನು **ಆಪ್ಯ** ಹೊಂದಿ, **ಚತುರ್ಮುಖಂ** ಬ್ರಹ್ಮದೇವರನ್ನು ಕುರಿತು, **ಆಹ** ಹೇಳಿದನು. **ಯತ್ರ** ಎಲ್ಲಿ (ಯಾವ ಸ್ಥಳದಲ್ಲಿ, ಯಾವ ಕುಲದಲ್ಲಿ) **ತ್ವಯಾ** ನಿನ್ನಿಂದ, **ಉಕ್ತಃ ಅಸ್ಮಿ** ಹೇಳಲ್ಪಟ್ಟಿರುವೆನೋ, **ತತ್ರ** ಅಲ್ಲಿ **ಸರ್ವಥಾ** ನಿಶ್ಚಯವಾಗಿಯೂ, **ಪ್ರಾದುರ್ಭವಿಷ್ಯೇ** ಅವತರಿಸುವೆನು. **ಹಿ** ನನಗೆ ಹುಟ್ಟಿಲ್ಲವೆಂಬುದು ಪ್ರಸಿದ್ಧವೇ ಆಗಿದೆ. **ಅಹಂ** ನಾನು, **ಸ್ವವಶಃ ಅಪಿ** ನನ್ನ ಅಧೀನನೇ ಆದರೂ, **ಭಕ್ತ್ಯಾ** ಭಕ್ತಿಯಿಂದ **ಚ** ಮತ್ತು, **ಇಚ್ಛಯಾ** ನನ್ನ ಇಚ್ಛೆಯಿಂದ **ಭವತಃ** ನಿನ್ನ **ಅಧೀನಃ** ಅಧೀನನು, **ಅಸ್ಮಿ** ಆಗಿದ್ದೇನೆ.

**ತಾತ್ಪರ್ಯ** :- ಸರ್ಮರ್ಥನಾದ ಪರಮಾತ್ಮನು ಮೇರುಪರ್ವತಕ್ಕೆ ಬಂದು ಚತುರ್ಮುಖಬ್ರಹ್ಮನಿಗೆ ಹೇಳಿದನು. ನೀನು ಎಲ್ಲಿ ಹೇಳಿದೆಯೋ ಅಲ್ಲಿಯೇ ಅವತಾರವನ್ನೂ ಮಾಡುತ್ತೇನೆ. ನಾನು ನನ್ನ ಅಧೀನನಾದರೂ ಸ್ವೇಚ್ಛೆಯಿಂದ ನಿನ್ನ ಭಕ್ತಿಯಿಂದ ನಿನ್ನ ಅಧೀನನಾಗಿದ್ದೇನೆ.

ಬ್ರಹ್ಮಾ ಪ್ರಣಮ್ಯಾಹ ತಮಾತ್ಮಕಾರಣಂ
ಪ್ರಾದಾಂ ಪುರಾಹಂ ವರುಣಾಯ ಗಾಃ ಶುಭಾಃ ।
ಜಹಾರ ತಾಸ್ತಸ್ಯ ಪಿತಾಮೃತಸ್ರವಾಃ
ಸ ಕಶ್ಯಪೋ ದ್ರಾಕ್ ಸಹಸಾತಿಗರ್ವಿತಃ ॥ ೨೧೯ ॥

ಪದಚ್ಛೇದ :- ಬ್ರಹ್ಮಾ, ಪ್ರಣಮ್ಯ, ಆಹ, ತಂ, ಆತ್ಮಕಾರಣಂ, ಪ್ರಾದಾಂ, ಪುರಾ, ಅಹಂ, ವರುಣಾಯ, ಗಾಃ, ಶುಭಾಃ, ಜಹಾರ, ತಾಃ, ತಸ್ಯ, ಪಿತಾ, ಅಮೃತಸ್ರವಾಃ, ಸಃ, ಕಶ್ಯಪಃ, ದ್ರಾಕ್, ಸಹಸಾ, ಅತಿಗರ್ವಿತಃ.

**ಅರ್ಥ** :- **ಬ್ರಹ್ಮಾ** ಚತುರ್ಮುಖಬ್ರಹ್ಮನು **ಆತ್ಮಕಾರಣಂ** ತನ್ನ ಉತ್ಪತ್ತಿಗೆ ಕಾರಣನಾದ, **ತಂ** ಆ ಪರಮಾತ್ಮನನ್ನು **ಪ್ರಣಮ್ಯ** ನಮಸ್ಕರಿಸಿ, **ಆಹ** ಹೇಳಿದನು. **ಪುರಾ** ಹಿಂದೆ, **ಅಹಂ** ನಾನು, **ವರುಣಾಯ** ವರುಣನಿಗೆ, **ಶುಭಾಃ** ಒಳ್ಳೆಯ, **ಗಾಃ** ಹಸುಗಳನ್ನೂ, **ಪ್ರಾದಾಂ** ಕೊಟ್ಟಿದ್ದೆ. **ತಸ್ಯ** ಆ ವರುಣನ, **ಪಿತಾ** ತಂದೆಯಾದ, **ಕಶ್ಯಪಃ** ಕಶ್ಯಪನು, **ಅತಿಗರ್ವಿತಃ** ಬಹಳ ಅಹಂಕಾರಗೊಂಡವನಾಗಿ, **ದ್ರಾಕ್** ಕೂಡಲೆ, **ಸಹಸಾ** ಯೋಚನೆಗೆ ನಿಲುಕದಂತೆ, **ಅಮೃತಸ್ರವಾಃ** ಅಮೃತವನ್ನು ಸುರಿಸುವ **ತಾಃ** ಆ ಹಸುಗಳನ್ನು **ಜಹಾರ** ಅಪಹರಿಸಿದನು.

**ತಾತ್ಪರ್ಯ** :- ತನ್ನ ಹುಟ್ಟಿಗೆ ಕಾರಣನಾದ ಪರಮಾತ್ಮನನ್ನು ನಮಸ್ಕರಿಸಿ ಚತುರ್ಮುಖ ಬ್ರಹ್ಮನು ಹೇಳಿದನು. ನಾನು ಹಿಂದೆ ವರುಣನಿಗೆ ಒಳ್ಳೆಯ ಹಸುಗಳನ್ನು ಕೊಟ್ಟಿದ್ದೆ. ಅವನ ತಂದೆಯಾದ ಕಶ್ಯಪನು ಬಹಳ ಅಹಂಕಾರಗೊಂಡ ಕೂಡಲೆ ಅಮೃತವನ್ನು ಸುರಿಸುವ ಆ ಹಸುಗಳನ್ನು ಅಪಹರಿಸಿದನು.

ಮಾತ್ರಾ ತ್ವದಿತ್ಯಾ ಚ ತಥಾ ಸುರಭ್ಯಾ
ಪ್ರಚೋದಿತೇನೈವ ಹೃತಾಸು ತಾಸು ।
ಶ್ರುತ್ವಾ ಜಲೇಶಾತ್ ಸ ಮಯಾಭಿಶಪ್ತಃ
ಕ್ಷತ್ರೇಷು ಗೋಜೀವನಕೋ ಭವೇತಿ ॥ ೨೨೦ ॥

ಪದಚ್ಛೇದ :- ಮಾತ್ರಾ, ತು, ಅದಿತ್ಯಾ, ಚ, ತಥಾ, ಸುರಭ್ಯಾ, ಪ್ರಚೋದಿತೇನ, ಏವ, ಹೃತಾಸು, ತಾಸು, ಶ್ರುತ್ವಾ ಜಲೇಶಾತ್, ಸಃ, ಮಯಾ, ಅಭಿಶಪ್ತಃ, ಕ್ಷತ್ರೇಷು, ಗೋಜೀವನಕಃ, ಭವ, ಇತಿ.

**ಅರ್ಥ** :- **ಮಾತ್ರಾ** ತಾಯಿಯಾದ, **ಅದಿತ್ಯಾ** ಅದಿತಿಯಿಂದ, **ಚ** ಮತ್ತು, **ತಥಾ** ಹಾಗೆಯೇ, **ಸುರಭ್ಯಾ ತು** ಸುರಭಿಯಿಂದಲೂ, **ಪ್ರಚೋದಿತೇನ ಏವ** ಪ್ರೇರಿಸಲ್ಪಟ್ಟವನೇ ಆದ, **ತೇನ** ಆ ಕಶ್ಯಪನಿಂದ, **ತಾಸು** ಆ ಹಸುಗಳು **ಹೃತಾಸು** ಕದಿಯಲ್ಪಡುತ್ತಿರಲು, **ಜಲೇಶಾತ್** ವರುಣನಿಂದ **ಶ್ರುತ್ವಾ** ಕೇಳಿ, **ಸಃ** ಆ ಕಶ್ಯಪನು, **ಮಯಾ** ನನ್ನಿಂದ, **ಕ್ಷತ್ರೇಷು** ಕ್ಷತ್ರಿಯರಲ್ಲಿ, **ಗೋಜೀವನಕಃ** ಗೋವುಗಳಿಂದ ಜೀವನೋಪಾಯವುಳ್ಳವನು, **ಭವ** ಆಗು, **ಇತಿ** ಎಂದು **ಅಭಿಶಪ್ತಃ** ಶಪಿಸಲ್ಪಟ್ಟಿದ್ದಾನೆ.

**ತಾತ್ಪರ್ಯ** :- ತಾಯಿಯರಾದ ಅದಿತಿ ಮತ್ತು ಸುರಭಿಯರಿಂದ ಪ್ರೇರಿತನಾದ ಕಶ್ಯಪನು ಗೋವುಗಳನ್ನು ಅಪಹರಿಸಿದಾಗ ಅದನ್ನು ನಾನು ವರುಣನಿಂದ ಕೇಳಿ, ಕಶ್ಯಪನಿಗೆ ಶಾಪ ಕೊಟ್ಟೆನು– 'ನೀನು ಕ್ಷತ್ರಿಯ ಕುಲದಲ್ಲಿ ಹುಟ್ಟಿ ಗೋವುಗಳಿಂದ ಉಪಜೀವನವನ್ನು ಮಾಡು' ಎಂದು.

**ಶೂರಾತ್ ಸ ಜಾತೋ ಬಹುಗೋಧನಾಢ್ಯೋ**
**ಭೂಮೌ ಯಮಾಹುರ್ವಸುದೇವ ಇತ್ಯಪಿ ।**
**ತಸ್ಯೈವ ಭಾರ್ಯಾ ತ್ವದಿತಿಶ್ಚ ದೇವಕೀ**
**ಬಭೂವ ಚಾನ್ಯಾ ಸುರಭಿಶ್ಚ ರೋಹಿಣೀ ॥ ೨೨೧ ॥**

ಪದಚ್ಛೇದ :- **ಶೂರಾತ್, ಸಃ, ಜಾತಃ, ಬಹುಗೋಧನಾಢ್ಯಃ, ಭೂಮೌ, ಯಂ, ಆಹುಃ, ವಸುದೇವಃ, ಇತಿ, ಅಪಿ, ತಸ್ಯ, ಏವ, ಭಾರ್ಯಾ, ತು, ಅದಿತಿಃ, ಚ, ದೇವಕೀ, ಬಭೂವ, ಚ, ಅನ್ಯಾ, ಸುರಭಿಃ, ಚ, ರೋಹಿಣೀ.**

**ಅರ್ಥ** :- **ಸಃ** ಆ ಕಶ್ಯಪನು, **ಶೂರಾತ್** ಶೂರನಿಂದ, **ಬಹುಗೋಧನಾಢ್ಯಃ** ಬಹಳ ಗೋಸಂಪತ್ತಿನಿಂದ ಕೂಡಿದವನಾಗಿ, **ಭೂಮೌ** ಭೂಮಿಯಲ್ಲಿ ಆಸ ಹುಟ್ಟಿದನು. **ಯಂ** ಯಾವನನ್ನು **ವಸುದೇವಃ ಇತಿ ಅಪಿ** ವಸುದೇವನೆಂಬುದಾಗಿಯೂ, **ಆಹುಃ** ಕರೆಯುತ್ತಾರೋ. **ತಸ್ಯ ಏವ** ಆ ಕಶ್ಯಪನಿಗೇನೇ **ಭಾರ್ಯಾ** ಹೆಂಡತಿಯಾದ **ಅದಿತಿಃ ತು** ಅದಿತಿಯಾದರೂ, **ದೇವಕೀ** ದೇವಕಿಯಾಗಿ **ಚ** ಮತ್ತು **ಅನ್ಯಾ** ಮತ್ತೊಬ್ಬಳಾದ **ಭಾರ್ಯಾ** ಹೆಂಡತಿಯಾದ **ಸುರಭಿಃ** ಸುರಭಿಯು, **ರೋಹಿಣಿ** ರೋಹಿಣಿಯಾಗಿ, **ಬಭೂವ** ಹುಟ್ಟಿದಳು.

ತಾತ್ಪರ್ಯ :- ಆ ಕಶ್ಯಪನು ಶೂರನ ಮಗನಾಗಿ ಬಹಳ ಗೋಸಂಪತ್ತಿನಿಂದ ಕೂಡಿದವನಾಗಿ ಭೂಮಿಯಲ್ಲಿ ಹುಟ್ಟಿದ. ಅವನನ್ನು ವಸುದೇವನೆಂದೇ ಜನರು ಕರೆಯುತ್ತಿದ್ದರು. ಅವನ ಹೆಂಡತಿಯೇ ಆದ ಅದಿತಿಯು ದೇವಕಿಯಾಗಿ ಮತ್ತೊಬ್ಬ ಹೆಂಡತಿಯಾದ ಸುರಭಿಯು ರೋಹಿಣಿಯಾಗಿ ಹುಟ್ಟಿದರು.

ತತ್ ತ್ವಂ ಭವಸ್ವಾಶು ಚ ದೇವಕೀಸುತಃ
ತಥೈವ ಯೋ ದ್ರೋಣನಾಮಾ ವಸುಃ ಸಃ ।
ಸ್ವಭಾರ್ಯಯಾ ಧರಯಾ ತ್ವತ್ಪಿತೃತ್ವಂ
ಪ್ರಾಪ್ತುಂ ತಪಸ್ತೇಪ ಉದಾರಮಾನಸಃ ॥ ೨೨೨ ॥

ಪದಚ್ಛೇದ :- ತತ್, ತ್ವಂ, ಭವಸ್ವ, ಆಶು, ಚ, ದೇವಕೀಸುತಃ, ತಥಾ, ಏವ, ಯಃ, ದ್ರೋಣನಾಮಾ, ವಸುಃ, ಸಃ, ಸ್ವಭಾರ್ಯಯ, ಧರಯಾ, ತ್ವತ್ಪಿತೃತ್ವಂ, ಪ್ರಾಪ್ತುಂ, ತಪಃ, ತೇಪೇ, ಉದಾರಮಾನಸಃ.

ಅರ್ಥ :- **ತತ್** ಆದ್ದರಿಂದ, **ತ್ವಂ** ನೀನು, **ಆಶು** ಕೂಡಲೇ, **ದೇವಕೀಸುತಃ** ದೇವಕಿಯ ಮಗನಾಗಿ, **ಭವಸ್ವ** ಅವತಾರವನ್ನು ಮಾಡು, **ತಥಾ ಏವ** ಹಾಗೆಯೇ, **ಯಃ** ಯಾವ, **ಉದಾರಮಾನಸಃ** ಉತ್ತಮವಾದ ಅಂತಃಕರಣ ವುಳ್ಳ **ದ್ರೋಣನಾಮಾ** ದ್ರೋಣನೆಂದು ಹೆಸರುಳ್ಳ, **ವಸುಃ** ವಸುವಿರುವನೋ, **ಸಃ** ಅವನು, **ಸ್ವಭಾರ್ಯಯ** ತನ್ನ ಹೆಂಡತಿಯಾದ **ಧರಯಾ** ಧರೆಯಿಂದ ಕೂಡಿ, **ತ್ವತ್ಪಿತೃತ್ವಂ** ನಿನ್ನ ಪಿತೃತ್ವವನ್ನು **ಪ್ರಾಪ್ತುಂ** ಹೊಂದಲು, **ತಪಃ** ತಪಸ್ಸನ್ನು **ತೇಪೇ** ಮಾಡಿದನು.

ತಾತ್ಪರ್ಯ :- ಆದ್ದರಿಂದ ನೀನು ದೇವಕಿಯ ಮಗನಾಗಿ ಕೂಡಲೆ ಅವತರಿಸು. ಹಾಗೆಯೇ ಉತ್ಕೃಷ್ಟವಾದ ಅಂತಃಕರಣವುಳ್ಳ ದ್ರೋಣನೆಂಬ ವಸು ತನ್ನ ಹೆಂಡತಿಯಾದ ಧರೆಯೊಂದಿಗೆ ನಿನ್ನ ತಂದೆಯಾಗಬೇಕೆಂದು ಬಯಸಿ ತಪಸ್ಸನ್ನು ಮಾಡಿದನು.

ತಸ್ಮೈ ವರಃ ಸ ಮಯಾ ಸನ್ನಿಸೃಷ್ಟಃ
ಸ ಚಾಸ ನಂದಾಖ್ಯ ಉತಾಸ್ಯ ಭಾರ್ಯಾ ।
ನಾಮ್ನಾ ಯಶೋದಾ ಸ ಚ ಶೂರತಾತ-
ಸುತಸ್ಯ ವೈಶ್ಯಾಪ್ರಭವೋಽಥ ಗೋಪಃ ॥ ೨೨೩ ॥

ಪದಚ್ಛೇದ :- ತಸ್ಮೈ, ವರಃ, ಸಃ, ಮಯಾ, ಸನ್ನಿಸೃಷ್ಟಃ, ಸಃ, ಚ, ಆಸ, ನಂದಾಖ್ಯಃ, ಉತ, ಅಸ್ಯ, ಭಾರ್ಯಾ, ನಾಮ್ನಾ ಯಶೋದಾ, ಸಃ, ಚ, ಶೂರತಾತಸುತಸ್ಯ, ವೈಶ್ಯಾಪ್ರಭವಃ, ಅಥ, ಗೋಪಃ .

**ಅರ್ಥ** :- **ಮಯಾ** ನನ್ನಿಂದ **ಸಃ** ಆ **ವರಃ** ವರವು **ತಸ್ಮೈ** ಅವನಿಗೆ **ಸನ್ನಿಸೃಷ್ಟಃ** ಕೊಡಲ್ಪಟ್ಟಿತು **ಸಃ ಚ** ಅವನಾದರೋ **ನಂದಾಖ್ಯಃ** ನಂದ ಎಂಬ ಹೆಸರುಳ್ಳವನಾಗಿ **ಆಸ** ಹುಟ್ಟಿದನು **ಉತ** ಅನಂತರ **ಅಸ್ಯ** ಇವನ **ಭಾರ್ಯಾ** ಹೆಂಡತಿಯು **ನಾಮ್ನಾ** ಹೆಸರಿನಿಂದ **ಯಶೋದಾ** ಯಶೋದೆ ಎಂಬುವವಳಾಗಿ **ಆಸ** ಹುಟ್ಟಿದಳು **ಸಃ ಚ** ಅವನಾದರೋ **ಶೂರತಾತಸುತಸ್ಯಶೂರ** ಶೂರನ **ತಾತ** ತಂದೆಯ **ಸುತಸ್ಯ** ಮಗನಿಗೆ (ಶೂರನ ತಂದೆಯಾದ ವಿಡೂರಥನಿಗೆ ಮತ್ತೊಬ್ಬ ಹೆಂಡತಿಯಲ್ಲಿ ಹುಟ್ಟಿದ ರಾಜಾಧಿದೇವನಿಗೆ) **ವೈಶ್ಯಾಪ್ರಭವಃ ವೈಶ್ಯಾ** ವೈಶ್ಯಪತ್ನಿಯಲ್ಲಿ **ಪ್ರಭವಃ** ಹುಟ್ಟುಳ್ಳವನು **ಅಥ** ಆದರಿಂದ **ಸಃ** ಅವನು **ಗೋಪಃ** ಗೋಪಾಲನಾದ.

**ತಾತ್ಪರ್ಯ** :- ವಸುವಿಗೆ ನಿನ್ನ ತಂದೆಯಾಗುವ ವರವನ್ನು ಕೊಟ್ಟೆ ದ್ರೋಣನಾಮಕ ವಸು ನಂದ ಎಂಬ ಹೆಸರಿನವನಾಗಿ ಹುಟ್ಟಿದ್ದಾನೆ. ನಂದನ ಜನನಾನಂತರ ಅವನ ಪತ್ನಿಯಾದ ಧರೆ ಯಶೋದೆ ಎಂಬ ನಾಮದಿಂದ ಜನಿಸಿದ್ದಾಳೆ. ಈ ನಂದ ಶೂರನ ತಂದೆಯ ಮಗನಿಗೆ ವೈಶ್ಯ ಜಾತಿಯ ಪತ್ನಿಯಲ್ಲಿ ಜನಿಸಿದವನು. ಆದ್ದರಿಂದ ಅವನು ಗೋಪಾಲಕನಾದ.

**ತೌ ದೇವಕೀವಸುದೇವೌ ಚ ತೇಪತುಃ**
**ತಪಸ್ತ್ವದೀಯಂ ಸುತಮಿಚ್ಛಮಾನೌ ।**
**ತ್ವಾಮೇವ ತಸ್ಮಾತ್ ಪ್ರಥಮಂ ಪ್ರದರ್ಶ್ಯ**
**ತತ್ರ ಸ್ವರೂಪಂ ಹಿ ತತೋ ವ್ರಜಂ ವ್ರಜ ॥ ೨೨೪ ॥**

ಪದಚ್ಛೇದ :- ತೌ, ದೇವಕೀವಸುದೇವೌ, ಚ, ತೇಪತುಃ, ತಪಃ, ತ್ವದೀಯಂ, ಸುತಂ, ಇಚ್ಛಮಾನೌ, ತ್ವಾಂ, ಏವ, ತಸ್ಮಾತ್, ಪ್ರಥಮಂ, ಪ್ರದರ್ಶ್ಯ, ತತ್ರ, ಸ್ವರೂಪಂ, ಹಿ, ತತಃ, ವ್ರಜಂ, ವ್ರಜ.

**ಅರ್ಥ** :- **ತೌ** ಆ **ದೇವಕೀವಸುದೇವೌ** ದೇವಕೀವಸುದೇವರು **ತ್ವಾಂ ಏವ** ನಿನ್ನನ್ನೇ **ಸುತಂ** ಮಗನನ್ನಾಗಿ **ಇಚ್ಛಮಾನೌ** ಹೊಂದಲು ಬಯಸಿದವರಾಗಿ

ತಾತ್ಪರ್ಯ :- ಆ ಕಶ್ಯಪನು ಶೂರನ ಮಗನಾಗಿ ಬಹಳ ಗೋಸಂಪತ್ತಿನಿಂದ ಕೂಡಿದವನಾಗಿ ಭೂಮಿಯಲ್ಲಿ ಹುಟ್ಟಿದ. ಅವನನ್ನು ವಸುದೇವನೆಂದೇ ಜನರು ಕರೆಯುತ್ತಿದ್ದರು. ಅವನ ಹೆಂಡತಿಯೇ ಆದ ಅದಿತಿಯು ದೇವಕಿಯಾಗಿ ಮತ್ತೊಬ್ಬ ಹೆಂಡತಿಯಾದ ಸುರಭಿಯು ರೋಹಿಣಿಯಾಗಿ ಹುಟ್ಟಿದರು.

ತತ್ ತ್ವಂ ಭವಸ್ವಾಶು ಚ ದೇವಕೀಸುತಃ
ತಥೈವ ಯೋ ದ್ರೋಣನಾಮಾ ವಸುಃ ಸಃ ।
ಸ್ವಭಾರ್ಯಯಾ ಧರಯಾ ತ್ವತ್ಪಿತೃತ್ವಂ
ಪ್ರಾಪ್ತುಂ ತಪಸ್ತೇಪ ಉದಾರಮಾನಸಃ ॥ ೨೨೨ ॥

ಪದಚ್ಛೇದ :- ತತ್, ತ್ವಂ, ಭವಸ್ವ, ಆಶು, ಚ, ದೇವಕೀಸುತಃ, ತಥಾ, ಏವ, ಯಃ, ದ್ರೋಣನಾಮಾ, ವಸುಃ, ಸಃ, ಸ್ವಭಾರ್ಯಯ, ಧರಯಾ, ತ್ವತ್ಪಿತೃತ್ವಂ, ಪ್ರಾಪ್ತುಂ, ತಪಃ, ತೇಪೇ, ಉದಾರಮಾನಸಃ.

ಅರ್ಥ :- **ತತ್** ಆದ್ದರಿಂದ, **ತ್ವಂ** ನೀನು, **ಆಶು** ಕೂಡಲೇ, **ದೇವಕೀಸುತಃ** ದೇವಕಿಯ ಮಗನಾಗಿ, **ಭವಸ್ವ** ಅವತಾರವನ್ನು ಮಾಡು, **ತಥಾ ಏವ** ಹಾಗೆಯೇ, **ಯಃ** ಯಾವ, **ಉದಾರಮಾನಸಃ** ಉತ್ತಮವಾದ ಅಂತಃಕರಣ ವುಳ್ಳ **ದ್ರೋಣನಾಮಾ** ದ್ರೋಣನೆಂದು ಹೆಸರುಳ್ಳ, **ವಸುಃ** ವಸುವಿರುವನೋ, **ಸಃ** ಅವನು, **ಸ್ವಭಾರ್ಯಯ** ತನ್ನ ಹೆಂಡತಿಯಾದ **ಧರಯಾ** ಧರೆಯಿಂದ ಕೂಡಿ, **ತ್ವತ್ಪಿತೃತ್ವಂ** ನಿನ್ನ ಪಿತೃತ್ವವನ್ನು **ಪ್ರಾಪ್ತುಂ** ಹೊಂದಲು, **ತಪಃ** ತಪಸ್ಸನ್ನು **ತೇಪೇ** ಮಾಡಿದನು.

ತಾತ್ಪರ್ಯ :- ಆದ್ದರಿಂದ ನೀನು ದೇವಕಿಯ ಮಗನಾಗಿ ಕೂಡಲೆ ಅವತರಿಸು. ಹಾಗೆಯೇ ಉತ್ಕೃಷ್ಟವಾದ ಅಂತಃಕರಣವುಳ್ಳ ದ್ರೋಣನೆಂಬ ವಸು ತನ್ನ ಹೆಂಡತಿಯಾದ ಧರೆಯೊಂದಿಗೆ ನಿನ್ನ ತಂದೆಯಾಗಬೇಕೆಂದು ಬಯಸಿ ತಪಸ್ಸನ್ನು ಮಾಡಿದನು.

ತಸ್ಮೈ ವರಃ ಸ ಮಯಾ ಸನ್ನಿಸೃಷ್ಟಃ
ಸ ಚಾಸ ನಂದಾಖ್ಯ ಉತಾಸ್ಯ ಭಾರ್ಯಾ ।
ನಾಮ್ನಾ ಯಶೋದಾ ಸ ಚ ಶೂರತಾತ-
ಸುತಸ್ಯ ವೈಶ್ಯಾಪ್ರಭವೋಽಥ ಗೋಪಃ ॥ ೨೨೩ ॥

ಪದಚ್ಛೇದ :- ತಸ್ಮೈ, ವರಃ, ಸಃ, ಮಯಾ, ಸನ್ನಿಸೃಷ್ಟಃ, ಸಃ, ಚ, ಆಸ, ನಂದಾಖ್ಯಃ, ಉತ, ಅಸ್ಯ, ಭಾರ್ಯಾ, ನಾಮ್ನಾ ಯಶೋದಾ, ಸಃ, ಚ, ಶೂರತಾತಸುತಸ್ಯ, ವೈಶ್ಯಾಪ್ರಭವಃ, ಅಥ, ಗೋಪಃ .

**ಅರ್ಥ** :- **ಮಯಾ** ನನ್ನಿಂದ **ಸಃ** ಆ **ವರಃ** ವರವು **ತಸ್ಮೈ** ಅವನಿಗೆ **ಸನ್ನಿಸೃಷ್ಟಃ** ಕೊಡಲ್ಪಟ್ಟಿತು **ಸಃ ಚ** ಅವನಾದರೋ **ನಂದಾಖ್ಯಃ** ನಂದ ಎಂಬ ಹೆಸರುಳ್ಳವನಾಗಿ **ಆಸ** ಹುಟ್ಟಿದನು **ಉತ** ಅನಂತರ **ಅಸ್ಯ** ಇವನ **ಭಾರ್ಯಾ** ಹೆಂಡತಿಯು **ನಾಮ್ನಾ** ಹೆಸರಿನಿಂದ **ಯಶೋದಾ** ಯಶೋದೆ ಎಂಬುವವಳಾಗಿ **ಆಸ** ಹುಟ್ಟಿದಳು **ಸಃ ಚ** ಅವನಾದರೋ **ಶೂರತಾತಸುತಸ್ಯಶೂರ** ಶೂರನ ತಾತ ತಂದೆಯ **ಸುತಸ್ಯ** ಮಗನಿಗೆ (ಶೂರನ ತಂದೆಯಾದ ವಿಡೂರಥನಿಗೆ ಮತ್ತೊಬ್ಬ ಹೆಂಡತಿಯಲ್ಲಿ ಹುಟ್ಟಿದ ರಾಜಾಧಿದೇವನಿಗೆ) **ವೈಶ್ಯಾಪ್ರಭವಃ ವೈಶ್ಯಾ** ವೈಶ್ಯಪತ್ನಿಯಲ್ಲಿ **ಪ್ರಭವಃ** ಹುಟ್ಟುಳ್ಳವನು **ಅಥ** ಆದರಿಂದ **ಸಃ** ಅವನು **ಗೋಪಃ** ಗೋಪಾಲನಾದ.

**ತಾತ್ಪರ್ಯ** :- ವಸುವಿಗೆ ನಿನ್ನ ತಂದೆಯಾಗುವ ವರವನ್ನು ಕೊಟ್ಟೆ ದ್ರೋಣನಾಮಕ ವಸು ನಂದ ಎಂಬ ಹೆಸರಿನವನಾಗಿ ಹುಟ್ಟಿದ್ದಾನೆ. ನಂದನ ಜನನಾನಂತರ ಅವನ ಪತ್ನಿಯಾದ ಧರೆ ಯಶೋದೆ ಎಂಬ ನಾಮದಿಂದ ಜನಿಸಿದ್ದಾಳೆ. ಈ ನಂದ ಶೂರನ ತಂದೆಯ ಮಗನಿಗೆ ವೈಶ್ಯ ಜಾತಿಯ ಪತ್ನಿಯಲ್ಲಿ ಜನಿಸಿದವನು. ಆದ್ದರಿಂದ ಅವನು ಗೋಪಾಲಕನಾದ.

**ತೌ ದೇವಕೀವಸುದೇವೌ ಚ ತೇಪತುಃ**
**ತಪಸ್ತ್ವದೀಯಂ ಸುತಮಿಚ್ಛಮಾನೌ ।**
**ತ್ವಾಮೇವ ತಸ್ಮಾತ್ ಪ್ರಥಮಂ ಪ್ರದರ್ಶ್ಯ**
**ತತ್ರ ಸ್ವರೂಪಂ ಹಿ ತತೋ ವ್ರಜಂ ವ್ರಜ ॥ ೨೨೪ ॥**

ಪದಚ್ಛೇದ :- ತೌ, ದೇವಕೀವಸುದೇವೌ, ಚ, ತೇಪತುಃ, ತಪಃ, ತ್ವದೀಯಂ, ಸುತಂ, ಇಚ್ಛಮಾನೌ, ತ್ವಾಂ, ಏವ, ತಸ್ಮಾತ್, ಪ್ರಥಮಂ, ಪ್ರದರ್ಶ್ಯ, ತತ್ರ, ಸ್ವರೂಪಂ, ಹಿ, ತತಃ, ವ್ರಜಂ, ವ್ರಜ.

**ಅರ್ಥ** :- **ತೌ** ಆ **ದೇವಕೀವಸುದೇವೌ** ದೇವಕೀವಸುದೇವರು **ತ್ವಾಂ ಏವ** ನಿನ್ನನ್ನೇ **ಸುತಂ** ಮಗನನ್ನಾಗಿ **ಇಚ್ಛಮಾನೌ** ಹೊಂದಲು ಬಯಸಿದವರಾಗಿ

**ತ್ವದೀಯಂ** ನಿನ್ನ ಸಂಬಂಧಿಯಾದ **ತಪಃ** ತಪಸ್ಸನ್ನು **ತೇಪತುಃ** ಮಾಡಿದರು **ತಸ್ಮಾತ್** ಆದ್ದರಿಂದ **ತತ್ರ** ಅವರಲ್ಲಿ **ಪ್ರಥಮಂ** ಮೊದಲಿಗೆ **ಸ್ವರೂಪಂ** ತನ್ನ (ನಿನ್ನ) ರೂಪವನ್ನು **ಪ್ರದರ್ಶ್ಯ** ತೋರಿಸಿ **ತತಃ** ಬಳಿಕ **ವ್ರಜಂ** ಗೋಕುಲವನ್ನು ಕುರಿತು **ವ್ರಜ** ಹೋಗು.

**ತಾತ್ಪರ್ಯ** :- ದೇವಕೀ ಮತ್ತು ವಸುದೇವರು ನಿನ್ನನ್ನು ಮಗನಾಗಿ ಹೊಂದಲಿಚ್ಛಿಸಿ ನಿನ್ನನ್ನು ಕುರಿತು ತಪಸ್ಸು ಮಾಡಿದ್ದಾರೆ. ಆದ್ದರಿಂದ ಅವರಲ್ಲಿ ನಿನ್ನ ಕೃಷ್ಣಸ್ವರೂಪವನ್ನು ತೋರಿಸಿ ನಂತರ ಗೋಕುಲಕ್ಕೆ ಹೋಗು.

**ಇತೀರಿತಃ ಸೋಽಬ್ಜಭವೇನ ಕೇಶವಃ**
**ತಥೇತಿ ಚೋಕ್ತ್ವಾ ಪುನರಾಹ ದೇವತಾಃ ।**
**ಸರ್ವೇ ಭವಂತೋ ಭವತಾಶು ಮಾನುಷೇ**
**ಕಾರ್ಯಾನುಸಾರೇಣ ಯಥಾನುರೂಪತಃ ॥ ೨೨೫ ॥**

ಪದಚ್ಛೇದ :- **ಇತಿ, ಈರಿತಃ, ಸಃ, ಅಬ್ಜಭವೇನ, ಕೇಶವಃ, ತಥಾ, ಇತಿ, ಚ, ಉಕ್ತ್ವಾ ಪುನಃ, ಆಹ, ದೇವತಾಃ, ಸರ್ವೇ, ಭವಂತಃ, ಭವತ, ಆಶು, ಮಾನುಷೇ, ಕಾರ್ಯಾನುಸಾರೇಣ, ಯಥಾನುರೂಪತಃ.**

**ಅರ್ಥ** :- **ಇತಿ** ಈ ರೀತಿಯಾಗಿ **ಅಬ್ಜಭವೇನ** ಬ್ರಹ್ಮನಿಂದ **ಈರಿತಃ** ಹೇಳಲ್ಪಟ್ಟ **ಸಃ** ಆ **ಕೇಶವಃ** ಹರಿಯು **ತಥಾ** ಹಾಗೇ ಆಗಲಿ **ಇತಿ ಚ** ಎಂದೂ **ಉಕ್ತ್ವಾ** ಹೇಳಿ **ಪುನಃ** ಮತ್ತೆ **ದೇವತಾಃ** ದೇವತೆಗಳನ್ನು ಕುರಿತು **ಆಹ** ಹೇಳಿದನು **ಭವಂತಃ** ನೀವು **ಸರ್ವೇ** ಎಲ್ಲರೂ **ಆಶು** ಕೂಡಲೇ **ಮಾನುಷೇ** ಮನುಷ್ಯಲೋಕದಲ್ಲಿ **ಕಾರ್ಯಾನುಸಾರೇಣ** ಸ್ವಕಾರ್ಯಕ್ಕೆ ಅನುಕೂಲ ವಾಗುವ ರೂಪದಿಂದ **ಯಥಾನುರೂಪತಃ** ಯೋಗ್ಯತಾನುಸಾರವಾಗಿ (ಯಾರು ಎಲ್ಲಿ ಹುಟ್ಟಲಿಕ್ಕೆ ಯೋಗ್ಯರೋ ಹಾಗೆಯೇ) **ಭವತ** ಹುಟ್ಟಿರಿ.

**ತಾತ್ಪರ್ಯ** :- ಹೀಗೆ ಬ್ರಹ್ಮನು ಹೇಳಿದಾಗ ಶ್ರೀಹರಿಯು ಹಾಗೇ ಆಗಲಿ ಎಂದು ಹೇಳಿ ಮತ್ತೆ ದೇವತೆಗಳಿಗೆ ಹೇಳಿದನು 'ನೀವೆಲ್ಲರೂ ಕೂಡಲೇ ಕಾರ್ಯಾನುಸಾರವಾಗಿ ಯೋಗ್ಯತಾನುಸಾರವಾಗಿ ಚಾತುರ್ವರ್ಣ್ಯದಲ್ಲಿ ಹುಟ್ಟಿ' ಎಂದು.

ಅಥಾವತೀರ್ಣಾಃ ಸಕಲಾಶ್ಚ ದೇವತಾ
ಯಥಾ ಯಥೈವಾಹ ಹರಿಸ್ತಥಾ ತಥಾ ।
ವಿತ್ತೇಶ್ವರಃ ಪೂರ್ವಮಭೂದ್ಧಿ ಭೌಮಾದ್
ಹರೇಃ ಸುತತ್ವೇಽಪಿ ತದಿಚ್ಛಯಾಽಸುರಾತ್ ॥ ೨೨೬ ॥

ಪದಚ್ಛೇದ :- ಅಥ, ಅವತೀರ್ಣಾಃ, ಸಕಲಾಃ, ಚ, ದೇವತಾಃ, ಯಥಾ, ಯಥಾ, ಏವ, ಆಹ, ಹರಿಃ, ತಥಾ, ತಥಾ, ವಿತ್ತೇಶ್ವರಃ, ಪೂರ್ವಂ, ಅಭೂತ್, ಹಿ, ಭೌಮಾತ್, ಹರೇಃ, ಸುತತ್ವೇ, ಅಪಿ, ತದಿಚ್ಛಯಾ, ಅಸುರಾತ್.

**ಅರ್ಥ** :- **ಅಥ** ಅನಂತರ **ಸಕಲಾಃ** ಎಲ್ಲಾ **ದೇವತಾಃ ಚ** ದೇವತೆಗಳೂ **ಹರಿಃ** ಶ್ರೀಹರಿಯು, **ಯಥಾ ಯಥಾ** ಯಾವರೀತಿಯಲ್ಲಿ **ಆಹ** ಹೇಳಿದನೋ **ತಥಾ ತಥಾ ಏವ** ಆ ರೀತಿಯಲ್ಲಿಯೇ, **ಅವತೀರ್ಣಾಃ** ಅವತರಿಸಿದರು **ಪೂರ್ವಮ್** ಮೊದಲು **ವಿತ್ತೇಶ್ವರಃ** ಕುಬೇರನು **ಹರೇಃ** ಹರಿಯ **ಸುತತ್ವೇಪಿ** ಮಗನಾಗಿದ್ದರೂ ಕೂಡ **ತದಿಚ್ಛಯಾ** ಪರಮಾತ್ಮನ ಇಚ್ಛೆಯಿಂದ **ಅಸುರಾತ್** ಅಸುರನಾಗಿದ್ದ **ಭೌಮಾತ್** ನರಕನಿಂದ **ಅಭೂತ್** ಹುಟ್ಟಿದನು.

**ತಾತ್ಪರ್ಯ** :- ಅನಂತರ ಶ್ರೀಹರಿ ಹೇಳಿದಂತೆಯೇ ಎಲ್ಲಾ ದೇವತೆಗಳೂ ಕೂಡ ಅವತರಿಸಿದರು. ಹಾಗೇ ಶ್ರೀಹರಿಯ ಇಚ್ಛೆಯಿಂದ ಕುಬೇರನು ನರಕಾಸುರನಿಂದ ಹುಟ್ಟಿದನು. ನರಕನು ಹರಿಯ ಮಗನಾಗಿದ್ದರೂ ಅಸುರನಾಗಿದ್ದನು.

ಪಾಪೇನ ತೇನಾಪಹೃತೋ ಹಿ ಹಸ್ತೀ
ಶಿವಪ್ರದತ್ತಃ ಸುಪ್ರತೀಕಾಭಿಧಾನಃ ।
ತದರ್ಥಮೇವಾಸ್ಯ ಸುತೋಽಭಿಜಾತೋ
ಧನೇಶ್ವರೋ ಭಗದತ್ತಾಭಿಧಾನಃ ॥ ೨೨೭ ॥

ಪದಚ್ಛೇದ :- ಪಾಪೇನ, ತೇನ, ಅಪಹೃತಃ, ಹಿ, ಹಸ್ತೀ, ಶಿವಪ್ರದತ್ತಃ, ಸುಪ್ರತೀಕಾಭಿಧಾನಃ, ತದರ್ಥಂ, ಏವ, ಅಸ್ಯ, ಸುತಃ, ಅಭಿಜಾತಃ, ಧನೇಶ್ವರಃ, ಭಗದತ್ತಾಭಿಧಾನಃ

**ಅರ್ಥ** :- **ಶಿವಪ್ರದತ್ತಃ** ಶಿವನಿಂದ ಕೊಡಲ್ಪಟ್ಟ **ಸುಪ್ರತೀಕಾಭಿಧಾನಃ** ಸುಪ್ರತೀಕ ಎಂಬ ಹೆಸರುಳ್ಳ **ಹಸ್ತೀ** ಆನೆಯು **ಪಾಪೇನ** ಪಾಪಿಯಾದ **ತೇನ**

ನರಕನಿಂದ **ಅಪಹೃತಃ** ಅಪಹರಿಸಲ್ಪಟ್ಟಿತ್ತು **ತದರ್ಥಮೇವ** ಅದಕ್ಕಾಗಿಯೇ **ಅಸ್ಯ** ಇವನಿಗೆ **ಧನೇಶ್ವರಃ** ಕುಬೇರನು **ಭಗದತ್ತಾಭಿಧಾನಃ** ಭಗದತ್ತ ಎಂಬ ಹೆಸರುಳ್ಳ **ಸುತಃ** ಮಗನಾಗಿ **ಅಭಿಜಾತಃ** ಹುಟ್ಟಿದನು.

**ತಾತ್ಪರ್ಯ** :- ಶಿವನು ಕುಬೇರನಿಗೆ ಕೊಟ್ಟಿದ್ದ ಸುಪ್ರತೀಕ ಎಂಬ ಆನೆಯನ್ನು ನರಕನು ಅಪಹರಿಸಿದ್ದ. ಅದಕ್ಕಾಗಿಯೇ ಕುಬೇರ ಅವನ ಮಗನಾಗಿ ಭಗದತ್ತನೆಂಬ ಹೆಸರಿನಿಂದ ಹುಟ್ಟಿದ.

**ಮಹಾಸುರಸ್ಯಾಂಶಯುತಃ ಸ ಏವ**
**ರುದ್ರಾವೇಶಾದ್ ಬಲವಾನಸ್ತ್ರವಾಂಶ್ಚ ।**
**ಶಿಷ್ಯೋ ಮಹೇಂದ್ರಸ್ಯ ಹತೇ ಬಭೂವ**
**ತಾತೇ ಸ್ವಧರ್ಮಾಭಿರತಶ್ಚ ನಿತ್ಯಮ್ ॥ ೨೨೮ ॥**

ಪದಚ್ಛೇದ :- **ಮಹಾಸುರಸ್ಯ, ಅಂಶಯುತಃ, ಸಃ, ಏವ, ರುದ್ರಾವೇಶಾತ್, ಬಲವಾನ್, ಅಸ್ತ್ರವಾನ್, ಚ, ಶಿಷ್ಯಃ, ಮಹೇಂದ್ರಸ್ಯ, ಹತೇ, ಬಭೂವ, ತಾತೇ, ಸ್ವಧರ್ಮಾಭಿರತಃ, ಚ, ನಿತ್ಯಮ್.**

**ಅರ್ಥ** :- **ಸಃ** ಭಗದತ್ತನು **ಮಹಾಸುರಸ್ಯ** ಮಹಾಸುರನ **ಅಂಶಯುಕ್ತಃ** ಅಂಶದಿಂದ ಕೂಡಿದವನಾಗಿ **ರುದ್ರಾವೇಶಾತ್** ರುದ್ರಾವೇಶದಿಂದ **ಬಲವಾನ್** ಬಲಿಷ್ಠನು **ಮಹೇಂದ್ರಸ್ಯ** ದೇವೇಂದ್ರನ **ಶಿಷ್ಯಃ** ಶಿಷ್ಯನು **ಚ** ಮತ್ತು **ಅಸ್ತ್ರವಾನ್** ಅಸ್ತ್ರಜ್ಞನೂ **ಬಭೂವ** ಆಗಿದ್ದನು **ತಾತೇ** ತಂದೆಯು **ಹತೇ** (**ಸತಿ**) ಸಾಯುತ್ತಿರಲು **ನಿತ್ಯಮ್** ನಿತ್ಯವೂ **ಸ್ವಧರ್ಮಾಭಿರತಃ** ಸ್ವಧರ್ಮದಲ್ಲಿ ಆಸಕ್ತಿಯುಳ್ಳವನು **ಬಭೂವ** ಆದನು.

**ತಾತ್ಪರ್ಯ** :- ಭಗದತ್ತನು ಮಹಾಸುರನ ಅಂಶವಾಗಿದ್ದು ರುದ್ರಾವೇಶದಿಂದ ಬಲಿಷ್ಠನಾಗಿದ್ದ ಮತ್ತು ದೇವೇಂದ್ರನ ಶಿಷ್ಯನಾಗಿದ್ದು ಅಸ್ತ್ರಜ್ಞನೂ ಎನಿಸಿದ್ದ. ತಂದೆ ಹತನಾದಾಗ ಸದಾ ತನ್ನ ಧರ್ಮದಲ್ಲಿ ನಿರತನಾಗಿದ್ದ.

**ಅಭೂಚ್ಛಿನಿರ್ನಾಮ ಯದುಪ್ರವೀರಃ**
**ತಸ್ಯಾತ್ಮಜಃ ಸತ್ಯಕ ಆಸ ತಸ್ಮಾತ್ ।**
**ಕೃಷ್ಣಃ ಪಕ್ಷೋ ಯುಯುಧಾನಾಭಿಧೇಯೋ**
**ಗರುತ್ಮತೋಽಂಶೇನ ಯುತೋ ಬಭೂವ ॥ ೨೨೯ ॥**

ಪದಚ್ಛೇದ :- ಅಭೂತ್, ಶಿನಿಃ, ನಾಮ, ಯದುಪ್ರವೀರಃ, ತಸ್ಯ, ಆತ್ಮಜಃ, ಸತ್ಯಕಃ, ಆಸ, ತಸ್ಮಾತ್, ಕೃಷ್ಣಃಪಕ್ಷಃ, ಯುಯುಧಾನಾಭಿಧೇಯಃ, ಗರುತ್ಮತಃ, ಅಂಶೇನ, ಯುತಃ, ಬಭೂವ.

**ಅರ್ಥ** :- **ಶಿನಿಃ ನಾಮ** ಶಿನಿ ಎಂದು ಪ್ರಸಿದ್ಧನಾದ **ಯದುಪ್ರವೀರಃ** ಯಾದವವೀರನು **ಅಭೂತ್** ಇದ್ದನು **ತಸ್ಯ** ಅವನಿಗೆ **ಸತ್ಯಕಃ** ಸತ್ಯಕನೆಂಬ **ಆತ್ಮಜಃ** ಮಗನು **ಆಸ** ಇದ್ದನು **ತಸ್ಮಾತ್** ಅವನಿಂದ **ಕೃಷ್ಣಃ ಪಕ್ಷಃ** ಕೃಷ್ಣಪಕ್ಷಾಭಿಮಾನಿ ದೇವನು **ಯುಯುಧಾನಾಭಿಧೇಯಃ** ಯುಯುಧಾನ ನೆಂದು ಹೆಸರುಳ್ಳವನಾಗಿ **ಗರುತ್ಮತಃ** ಗರುಡನ **ಅಂಶೇನ** ಅಂಶದಿಂದ **ಯುತಃ** ಕೂಡಿದವನಾಗಿ **ಬಭೂವ** ಹುಟ್ಟಿದನು.

**ತಾತ್ಪರ್ಯ** :- ಶಿನಿ ಎಂಬ ಯಾದವಶ್ರೇಷ್ಠನಿದ್ದನು. ಅವನಿಗೆ ಸತ್ಯಕನೆಂಬ ಮಗನಿದ್ದ. ಅವನಿಂದ ಕೃಷ್ಣಪಕ್ಷಾಭಿಮಾನಿದೇವತೆಯು ಯುಯುಧಾನನೆಂಬ ಹೆಸರಿನವನಾಗಿ ಹುಟ್ಟಿದ.

**ಯಃ ಸಂವಹೋ ನಾಮ ಮರುತ್ ತದಂಶಃ**
**ಚಕ್ರಸ್ಯ ವಿಷ್ಣೋಶ್ಚ ಬಭೂವ ತಸ್ಮಿನ್ ।**
**ಯದುಷ್ವಭೂದ್ಧೃದಿಕೋ ಭೋಜವಂಶೇ**
**ಸಿತಃ ಪಕ್ಷಸ್ತಸ್ಯ ಸುತೋ ಬಭೂವ ॥ ೨೩೦ ॥**

ಪದಚ್ಛೇದ :- ಯಃ, ಸಂವಹಃ, ನಾಮ, ಮರುತ್, ತದಂಶಃ, ಚಕ್ರಸ್ಯ, ವಿಷ್ಣೋಃ, ಚ, ಬಭೂವ, ತಸ್ಮಿನ್, ಯದುಷು, ಅಭೂತ್, ಹೃದಿಕಃ, ಭೋಜವಂಶೇ, ಸಿತಃ, ಪಕ್ಷಃ, ತಸ್ಯ, ಸುತಃ, ಬಭೂವ.

**ಅರ್ಥ** :- **ಯಃ** ಯಾವನು **ಸಂವಹಃ** ಸಂವಹನೆಂದು ಪ್ರಸಿದ್ಧನಾದ **ಮರುತ್** ಮರುದ್ದೇವತೆಯಿದ್ದಾನೋ **ತದಂಶಃ** ಅವನ ಅಂಶವುಳ್ಳ **ಚ** ಮತ್ತು **ವಿಷ್ಣೋಃ** ವಿಷ್ಣುವಿನ, **ಚಕ್ರಸ್ಯ** ಚಕ್ರದ (ಅಂಶವು), **ತಸ್ಮಿನ್** ಯುಯುಧಾನ ನಲ್ಲಿ, **ಬಭೂವ** ಇದ್ದಿತು, **ಯದುಷು** ಯಾದವರಲ್ಲಿ, **ಭೋಜವಂಶೇ** ಭೋಜ ವಂಶದಲ್ಲಿ, **ಹೃದಿಕಃ** ಹೃದಿಕನೆಂಬುವನು, **ಅಭೂತ್** ಇದ್ದನು, **ತಸ್ಯ** ಅವನಿಗೆ, **ಸಿತಃ ಪಕ್ಷಃ** ಶುಕ್ಲಪಕ್ಷಾಭಿಮಾನಿದೇವನು, **ಸುತಃ** ಮಗನಾಗಿ, **ಬಭೂವ** ಜನಿಸಿದ.

ತಾತ್ಪರ್ಯ :- ಸಂವಹನೆಂಬ ಮರುತನ ಮತ್ತು ವಿಷ್ಣುಚಕ್ರದ ಅಂಶಗಳು ಯುಯುಧಾನನಲ್ಲಿದ್ದವು. ಯಾದವರಲ್ಲಿ ಭೋಜವಂಶದಲ್ಲಿ ಹೃದಿಕನೆಂಬುವ ನಿದ್ದ. ಅವನಿಗೆ ಶುಕ್ಲಪಕ್ಷಾಭಿಮಾನಿದೇವನು ಮಗನಾಗಿ ಜನಿಸಿದ.

**ಸ ಪಾಂಚಜನ್ಯಾಂಶಯುತೋ ಮರುತ್ಸು**
**ತಥಾಂಶಯುಕ್ತಃ ಪ್ರವಹಸ್ಯ ವೀರಃ ।**
**ನಾಮಾಸ್ಯ ಚಾಭೂತ್ ಕೃತವರ್ಮೇತ್ಯಥಾನ್ಯೇ**
**ಯೇ ಯಾದವಾಸ್ತೇಽಪಿ ಸುರಾ ಸಗೋಪಾಃ ॥ ೨೩೦ ॥**

ಪದಚ್ಛೇದ :- **ಸಃ ಪಾಂಚಜನ್ಯಾಂಶಯುತಃ, ಮರುತ್ಸು, ತಥಾ, ಅಂಶಯುಕ್ತಃ, ಪ್ರವಹಸ್ಯ, ವೀರಃ, ನಾಮ, ಅಸ್ಯ, ಚ, ಅಭೂತ್, ಕೃತವರ್ಮಾ, ಇತಿ ಅಥ, ಅನ್ಯೇ, ಯೇ ಯಾದವಾಃ, ತೇ, ಅಪಿ, ಸುರಾಃ, ಸಗೋಪಾಃ.**

**ಅರ್ಥ** :- **ಸಃ** ಅವನು, **ಪಾಂಚಜನ್ಯಾಂಶಯುತಃ** ಪಾಂಚಜನ್ಯಾಂಶ ಯುಕ್ತನು (ಆಗಿದ್ದ), **ತಥಾ** ಹಾಗೆಯೇ, **ಮರುತ್ಸು** ಮರುತ್ತುಗಳಲ್ಲಿ **ಪ್ರವಹಸ್ಯ** ಪ್ರವಹನ, **ಅಂಶಯುಕ್ತಃ** ಅಂಶಯುಕ್ತನು. **ವೀರಃ** ವೀರನೂ (ಆಗಿದ್ದ) **ಅಸ್ಯ** ಇವನಿಗೆ, **ಕೃತವರ್ಮಾ** ಕೃತವರ್ಮಾ, **ಇತಿ** ಎಂಬ, **ನಾಮ** ಹೆಸರು, **ಅಭೂತ್** ಉಂಟಾಯಿತು, **ಅಥ** ಹೀಗೆ, **ಅನ್ಯೇ** ಬೇರೆ, **ಸಗೋಪಾಃ** ಗೋಪಾಲಕರಿಂದ ಕೂಡಿದ, **ಯೇ ಯಾದವಾಃ** ಯಾವ ಯಾದವರಿರುವರೋ, **ತೇ ಅಪಿ** ಅವರು ಕೂಡ **ಸುರಾಃ** ದೇವತೆಗಳೇ ಆಗಿದ್ದರು.

ತಾತ್ಪರ್ಯ :- ಹೃದಿಕನ ಮಗ ಪಾಂಚಜನ್ಯಾಂಶಯುಕ್ತನಾಗಿದ್ದ ಮರುತ್ತುಗಳಲ್ಲಿ ಪ್ರವಹನ ಅಂಶಯುಕ್ತನೂ, ವೀರನೂ ಆಗಿದ್ದ ಅವನಿಗೆ ಕೃತವರ್ಮನೆಂಬ ಹೆಸರು ಉಂಟಾಯಿತು. ಹೀಗೆ ಬೇರೆ ಯಾದವರೂ ಗೋಪಾಲಕರೂ ದೇವಾಂಶ ಸಂಭೂತರಾಗಿದ್ದರು.

**ಯೇ ಪಾಂಡವಾನಾಮಭವನ್ ಸಹಾಯಾ**
**ದೇವಾಶ್ಚ ದೇವಾನುಚರಾಃ ಸಮಸ್ತಾಃ ।**
**ಅನ್ಯೇಽಪಿ ಸರ್ವೇ ತ್ವಸುರಾ ಹಿ ಮಧ್ಯಮಾ**
**ಯೇ ಮಾನುಷಾಸ್ತೇ ಚಲಬುದ್ಧಿವೃತ್ತಯಃ ॥ ೨೩೨ ॥**

ಪದಚ್ಛೇದ :- ಯೇ, ಪಾಂಡವಾನಾಂ, ಅಭವನ್ ಸಹಾಯಾಃ, ದೇವಾಃ, ಚ, ದೇವಾನುಚರಾಃ, ಸಮಸ್ತಾಃ, ಅನ್ಯೇ, ಅಪಿ, ಸರ್ವೇ, ತು, ಅಸುರಾಃ, ಹಿ, ಮಧ್ಯಮಾಃ, ಯೇ, ಮಾನುಷಾಃ, ತೇ, ಚಲಬುದ್ಧಿವೃತ್ತಯಃ .

**ಅರ್ಥ** :- **ಪಾಂಡವಾನಾಂ** ಪಾಂಡವರಿಗೆ, **ಯೇ** ಯಾರು, **ಸಹಾಯಾಃ** ಸಹಾಯಕರಾಗಿದ್ದರೋ **ತೇ ಸಮಸ್ತಾಃ** ಅವರೆಲ್ಲರೂ **ದೇವಾಃ** ದೇವತೆಗಳು **ಚ** ಮತ್ತು **ದೇವಾನುಚರಾಃ** ದೇವಾನುಚರರು, **ಅನ್ಯೇ** ಪಾಂಡವಪ್ರತಿಕೂಲರು **ಸರ್ವೇ ಅಪಿ** ಅವರೆಲ್ಲರೂ ಕೂಡ **ಅಸುರಾಃ** ಅಸುರರು, **ಯೇ** ಯಾರು **ಮಧ್ಯಮಾಃ** ಉದಾಸೀನರೋ **ಚಲಬುದ್ಧಿವೃತ್ತಯಃ** ಚಂಚಲಬುದ್ಧಿಯುಳ್ಳವರೋ **ತೇ** ಅವರು **ಮಾನುಷಾಃ** ಮನುಷ್ಯರು.

**ತಾತ್ಪರ್ಯ** :- ಪಾಂಡವರಿಗೆ ಯಾರು ಸಹಾಯಕರಾಗಿದ್ದರೋ ಅವರೆಲ್ಲರೂ ದೇವತೆಗಳು ಅಥವಾ ದೇವಾನುಚರರು. ಯಾರು ಪಾಂಡವರೆಗೆ ವಿರೋಧಿಗಳಾಗಿದ್ದಾರೋ ಅವರೆಲ್ಲರೂ ದೈತ್ಯರು. ಯಾರು ಉದಾಸೀನರೋ ಚಂಚಲ ಬುದ್ಧಿಯವರೋ ಅವರು ಮನುಷ್ಯರು.

**ಲಿಂಗಂ ಸುರಾಣಾಂ ಹಿ ಪರೈವ ಭಕ್ತಿಃ**
**ವಿಷ್ಣೌ ತದನ್ಯೇಷು ಚ ತತ್ಪ್ರತೀಪತಾ ।**
**ಅತೋಽತ್ರ ಯೇ ಯೇ ಹರಿಭಕ್ತಿತತ್ಪರಾಃ**
**ತೇ ತೇ ಸುರಾಸ್ತದ್ಭರಿತಾ ವಿಶೇಷತಃ ॥ ೨೩೩ ॥**

ಪದಚ್ಛೇದ :- ಲಿಂಗಂ, ಸುರಾಣಾಂ, ಹಿ, ಪರಾ, ಏವ, ಭಕ್ತಿಃ, ವಿಷ್ಣೌ, ತದನ್ಯೇಷು, ಚ, ತತ್ಪ್ರತೀಪತಾ, ಅತಃ, ಅತ್ರ, ಯೇ, ಯೇ, ಹರಿಭಕ್ತಿತತ್ಪರಾಃ, ತೇ, ತೇ, ಸುರಾಃ, ತದ್ಭರಿತಾಃ, ವಿಶೇಷತಃ .

**ಅರ್ಥ** :- **ವಿಷ್ಣೌ** ವಿಷ್ಣುವಿನಲ್ಲಿ, **ಪರಾ** ಉತ್ತಮವಾದ, **ಭಕ್ತಿಃ ಏವ** ಭಕ್ತಿಯೇ, **ಸುರಾಣಾಂ** ದೇವತೆಗಳ **ಲಿಂಗಂ** ಲಕ್ಷಣವು. **ತದನ್ಯೇಷು ಚ** ಅವರಿಗಿಂತ ಭಿನ್ನರಾದ ಅಸುರರಲ್ಲಿಯಾದರೂ **ತತ್ಪ್ರತೀಪತಾ** ಪರಮಾತ್ಮನಿಗೆ ವಿರುದ್ಧವಾಗಿರುವಿಕೆಯೇ **ಲಿಂಗಂ** ಲಕ್ಷಣವು. **ಅತಃ** ಆದ್ದರಿಂದ **ಅತ್ರ** ಕುರುಪಾಂಡವರ ಸೈನ್ಯದಲ್ಲಿ **ಯೇ ಯೇ** ಯಾರು ಯಾರು **ಹರಿಭಕ್ತಿ ತತ್ಪರಾಃ** ಹರಿಭಕ್ತಿಯಲ್ಲಿ ತಾತ್ಪರ್ಯವುಳ್ಳವರೋ **ತೇ ತೇ** ಅವರೆಲ್ಲರೂ **ಸುರಾಃ**

ದೇವತೆಗಳು (ಅಥವಾ) **ವಿಶೇಷತಃ** ವಿಶೇಷವಾಗಿ **ತದ್ಭರಿತಾಃ** ದೇವತೆಗಳಿಂದ ಆವಿಷ್ಟರಾದವರು. **ಯೇ ಯೇ** ಯಾರು ಯಾರು **ಅಹರಿಭಕ್ತಿ ತತ್ಪರಾಃ** ಪರಮಾತ್ಮನ ಭಕ್ತಿಯಲ್ಲಿ ಆಸಕ್ತರಾಗಿಲ್ಲವೋ **ತೇ ತೇ** ಅವರೆಲ್ಲರೂ **ಅಸುರಾಃ** ದೈತ್ಯರು (ಅಥವಾ) **ವಿಶೇಷತಃ** ವಿಶೇಷವಾಗಿ **ತದ್ಭರಿತಾಃ** ಅಸುರರಿಂದ ಆವಿಷ್ಟರಾದವರು.

**ತಾತ್ಪರ್ಯ** :- ಪರಮಾತ್ಮನಲ್ಲಿ ಭಕ್ತಿಯನ್ನು ಮಾಡುವುದು ದೇವತೆಗಳ ಲಕ್ಷಣ. ಯಾರು ಪರಮಾತ್ಮನಿಗೆ ವಿರೋಧವನ್ನು ಮಾಡುತ್ತಾರೋ ಅವರೆಲ್ಲರೂ ಅಸುರರು. ಆದ್ದರಿಂದ ಕುರು ಹಾಗು ಪಾಂಡವರ ಸೈನ್ಯದಲ್ಲಿ ಯಾರು ಪರಮಾತ್ಮನ ಭಕ್ತಿಯಲ್ಲಿ ಆಸಕ್ತರೋ ಅವರೆಲ್ಲರೂ ದೇವತೆಗಳು ಅಥವಾ ದೇವತೆಗಳ ಆವೇಶವುಳ್ಳವರು. ಯಾರು ಪರಮಾತ್ಮನ ವಿರೋಧಿಗಳೋ ಅವರು ಅಸುರರು. ಅಥವಾ ವಿಶೇಷವಾಗಿ ಅಸುರರ ಆವೇಶವುಳ್ಳವರು ಆಗಿರುತ್ತಾರೆ.

**॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಭಗವದವತಾರಪ್ರತಿಜ್ಞೆ ಎಂಬ ಹನ್ನೊಂದನೆಯ ಅಧ್ಯಾಯ ಸಮಾಪ್ತವಾಯಿತು ॥**

## ಅಧ್ಯಾಯ - 12

ಬಭೂವ ಗಂಧರ್ವಮುನಿಸ್ತು ದೇವಕಃ
ಸ ಆಸ ಸೇವಾರ್ಥಮಥಾऽಹುಕಾದ್ಧರೇಃ ।
ಸ ಉಗ್ರಸೇನಾವರಜಸ್ತಥೈವ
ನಾಮಾಸ್ಯ ತಸ್ಮಾದಜನಿ ಸ್ಮ ದೇವಕೀ ॥ ೧ ॥

ಪದಚ್ಛೇದಃ : ಬಭೂವ, ಗಂಧರ್ವಮುನಿಃ, ತು, ದೇವಕಃ ಸಃ ಆಸ ಸೇವಾರ್ಥಂ ಅಥ, ಆಹುಕಾತ್, ಹರೇಃ, ಸಃ ಉಗ್ರಸೇನಾವರಜಃ, ತಥಾ, ಏವ, ನಾಮ, ಅಸ್ಯ ತಸ್ಮಾತ್, ಅಜನಿ ಸ್ಮ ದೇವಕಿ.

**ಅರ್ಥ** :- **ಅಥ** ಆ ನಂತರ **ದೇವಕಃ** ದೇವಕನೆಂಬ **ಗಂಧರ್ಮಮುನಿಃ** ಗಂಧರ್ವಋಷಿಯು ಬಭೂವ ಇದ್ದನು **ಸಃ ತು** ಆ ದೇವಕನಾದರೂ **ಹರೇಃ** ಪರಮಾತ್ಮನ **ಸೇವಾರ್ಥಂ** ಸೇವೆಗೋಸ್ಕರ **ಆಹುಕಾತ್** ಆಹುಕನೆಂಬ ಯಾದವನಿಂದ **ಆಸ** ಹುಟ್ಟಿದನು **ಸಃ** ಆ ದೇವಕನು **ಉಗ್ರಸೇನಾವರಜಃ** ಉಗ್ರಸೇನನ ತಮ್ಮನು **ಬಭೂವ** ಆಗಿದ್ದನು **ಅಸ್ಯ** ಈ ದೇವಕನಿಗೆ **ತಥೈವ** ಹಿಂದಿನ ಜನ್ಮದಂತೆಯೇ **ನಾಮ** ದೇವಕನೆಂಬ ಹೆಸರು **ಆಸೀತ್** ಇದ್ದಿತು **ತಸ್ಮಾತ್** ಆ ದೇವಕನಿಂದ **ದೇವಕೀ** ದೇವಕೀ ದೇವಿಯು **ಅಜನಿ ಸ್ಮ** ಹುಟ್ಟಿದಳು.

**ತಾತ್ಪರ್ಯ** :- ದೇವಕನೆಂಬ ಗಂಧರ್ವ ಋಷಿಯು ಪರಮಾತ್ಮನ ಸೇವೆಗಾಗಿ ಆಹುಕನೆಂಬ ಯಾದವನಿಂದ ಹುಟ್ಟಿದನು. ಅವನು ಉಗ್ರಸೇನನ ತಮ್ಮನಾಗಿದ್ದನು. ಹಿಂದಿನ ಜನ್ಮದಂತೆ ಈ ಜನ್ಮದಲ್ಲಿಯೂ ಅವನಿಗೆ ದೇವಕನೆಂಬ ಹೆಸರೇ ಇದ್ದಿತು. ಆ ದೇವಕನಿಂದ ದೇವಕೀದೇವಿಯು ಹುಟ್ಟಿದಳು.

ಅನ್ಯಾಶ್ಚ ಯಾಃ ಕಶ್ಯಪಸ್ಯೈವ ಭಾರ್ಯಾ
ಜ್ಯೇಷ್ಠಾಂ ತು ತಾಮಾಹುಕ ಆತ್ಮಪುತ್ರೀಮ್ ।
ಚಕಾರ ತಸ್ಮಾದ್ಧಿ ಪಿತೃಷ್ವಸಾ ಸಾ ಸ್ವಸಾ
ಚ ಕಂಸಸ್ಯ ಬಭೂವ ದೇವಕೀ ॥ ೨ ॥

ಪದಚ್ಛೇದಃ : ಅನ್ಯಾಃ ಚ ಯಾಃ ಕಶ್ಯಪಸ್ಯ ಏವ ಭಾರ್ಯಾಃ ಜ್ಯೇಷ್ಠಾಂ ತು ತಾಂ ಆಹುಕಃ ಆತ್ಮಪುತ್ರೀಂ ಚಕಾರ ತಸ್ಮಾತ್ ಹಿ ಪಿತೃಷ್ವಾ ಸಾ ಸ್ವಾ ಚ ಕಂಸಸ್ಯ ಬಭೂವ, ದೇವಕೀ.

**ಅರ್ಥ** :- **ಅನ್ಯಾಃ ಚ** ದೇವಕಿಯನ್ನು ಬಿಟ್ಟು ಇತರರಾದ **ಯಾಃ** ಯಾವ **ಕಶ್ಯಪಸ್ಯ ಏವ** ಕಶ್ಯಪಮಹರ್ಷಿಯ **ಭಾರ್ಯಾಃ** ಹೆಂಡತಿಯರೋ (**ತಾಃ ಚ** ಅವರೂ ಕೂಡ **ದೇವಕಾತ್** ದೇವಕನಿಂದ **ಜಾತಾಃ** ಹುಟ್ಟಿದರು) **ಹಿ** ಯಾವ ಕಾರಣದಿಂದ **ಜ್ಯೇಷ್ಠಾಂ** ದೊಡ್ಡವಳಾದ **ತಾಂ ತು** ಆ ದೇವಕಿಯನ್ನಾದರೂ **ಆಹುಕಃ** ದೇವಕನ ತಂದೆಯಾದ ಆಹುಕನು **ಆತ್ಮಪುತ್ರೀಂ** ತನ್ನ ಮಗಳನ್ನಾಗಿ **ಚಕಾರ** ಮಾಡಿಕೊಂಡನೋ **ತಸ್ಮಾತ್** ಆ ಕಾರಣದಿಂದ **ಸಾ** ಆ **ದೇವಕೀ** ದೇವಕಿಯು **ಕಂಸಸ್ಯ** ಕಂಸನಿಗೆ **ಪಿತೃಷ್ವಸಾ** ತಂದೆಯ ತಂಗಿಯು (ಸೋದರತ್ತೆ) **ಚ** ಮತ್ತು **ಸ್ವಸಾ** ತನ್ನ ತಂಗಿಯು **ಬಭೂವ** ಆದಳು.

**ತಾತ್ಪರ್ಯ** :- ದೇವಕನಿಗೆ ದೇವಕಿಯಲ್ಲದೆ ಕಶ್ಯಪಮಹರ್ಷಿಯ ಹೆಂಡತಿಯರಾದ ಇತರೆ ಹೆಣ್ಣುಮಕ್ಕಳೂ ಹುಟ್ಟಿದರು. ಅವರಲ್ಲಿ ದೇವಕಿಯೇ ಹಿರಿಯಳು. ದೇವಕನ ತಂದೆಯಾದ ಆಹುಕನು ಮೊಮ್ಮಗಳಾದ ದೇವಕಿಯನ್ನು ಮಗಳಂತೆಯೇ ಪಾಲಿಸಿದನು. ಆದ್ದರಿಂದ ಕಂಸನಿಗೆ ದೇವಕಿಯು ತನ್ನ ತಂದೆಯಾದ ಉಗ್ರಸೇನನ ತಂಗಿಯೂ (ಅಂದರೆ ಕಂಸನಿಗೆ ಸೋದರತ್ತೆಯೂ) ತನ್ನ ತಂಗಿಯೂ ಆದಳು.

**ಸೈವಾದಿತಿರ್ವಸುದೇವಸ್ಯ ದತ್ತಾ ತಸ್ಯಾ**
**ರಥಂ ಮಾಂಗಲಂ ಕಂಸ ಏವ ।**
**ಸಂಯಾಪಯಾಮಾಸ ತದಾ ಹಿ ವಾಯುರ್ಜಗಾದ**
**ವಾಕ್ಯಂ ಗಗನಸ್ಥಿತೋಽಮುಮ್ ॥ ೩ ॥**

ಪದಚ್ಛೇದಃ : ಸಾ ಏವ ಅದಿತಿಃ ವಸುದೇವಸ್ಯ ದತ್ತಾ ತಸ್ಯಾಃ ರಥಂ ಮಾಂಗಲಂ ಕಂಸಃ ಏವ ಸಂಯಾಪಯಾಮಾಸ ತದಾ ಹಿ ವಾಯುಃ ಜಗಾದ ವಾಕ್ಯಂ ಗಗನಸ್ಥಿತಃ ಅಮುಮ್.

**ಅರ್ಥ** :- **ಸಾ** ಅಂತಹ **ಅದಿತಿಃ ಏವ** ಅದಿತಿ ದೇವಿಯೇ ಆದ ದೇವಕಿಯು **ವಸುದೇವಸ್ಯ** ವಸುದೇವನಿಗೆ **ದತ್ತಾ** ಕೊಡಲ್ಪಟ್ಟಳು. **ತಸ್ಯಾಃ** ಆ

ದೇವಕಿಯ **ಮಾಂಗಲಂ** ಗೃಹಪ್ರವೇಶೋತ್ಸವಕ್ಕೆ ಸಂಬಂಧಿಸಿದ **ರಥಂ** ರಥವನ್ನು **ಕಂಸ** ಏವ ಕಂಸನು ತಾನೇ **ಸಂಯಾಪಯಾಮಾಸ** ನಡೆಸಿದನು. **ತದಾ ಹಿ** ಆ ಕಾಲದಲ್ಲೇ **ಗಗನಸ್ಥಿತಃ** ಆಕಾಶದಲ್ಲಿದ್ದ **ವಾಯುಃ** ವಾಯುವು **ಆಮುಂ (ಪ್ರತಿ)** ಈ ಕಂಸನನ್ನು ಕುರಿತು **ಜಗಾದ** ಮಾತನಾಡಿದನು.

**ತಾತ್ಪರ್ಯ :-** ಅದಿತಿಯ ಅವತಾರಳಾಗಿದ್ದ ದೇವಕಿಯನ್ನು ವಸುದೇವ ನಿಗೆ ಕೊಟ್ಟು ಮದುವೆ ಮಾಡಿದರು. ಮದುವೆಯಲ್ಲಿ ದೇವಕಿಯ ಗೃಹಪ್ರವೇಶದ ಉತ್ಸವದಲ್ಲಿ ವಧು-ವರರು ಇದ್ದ ರಥವನ್ನು ಕಂಸನು ತಾನೇ ನಡೆಸಿದನು. ಆ ಸಮಯದಲ್ಲಿ ಆಕಾಶದಲ್ಲಿದ್ದ ವಾಯುವು ಕಂಸನಿಗೆ ಹೇಳಿದನು.

**ವಿನಾಽಪರಾಧಾದ್ಧಿ ತತೋ ಗರೀಯಸೋ ನ**
**ಮಾತುಲೋ ವಧ್ಯತಾಮೇತಿ ವಿಷ್ಣೋಃ ।**
**ಲೋಕಸ್ಯ ಧರ್ಮಾನನುವರ್ತತೋಽತಃ**
**ಪಿತ್ರೋರ್ವಿರೋಧಾರ್ಥಮುವಾಚ ವಾಯುಃ ॥ ೪ ॥**

**ಪದಚ್ಛೇದಃ :** ವಿನಾ ಅಪರಾಧಾತ್ ಹಿ ತತಃ ಗರೀಯಃ ನ ಮಾತುಲಃ ವಧ್ಯತಾಂ ಏತಿ ವಿಷ್ಣೋಃ ಲೋಕಸ್ಯ ಧರ್ಮಾನ್ ಅನುವರ್ತತಃ, ಅತಃ ಪಿತ್ರೋಃ ವಿರೋಧಾರ್ಥಂ ಉವಾಚ ವಾಯುಃ

**ಅರ್ಥ :-** **ಲೋಕಸ್ಯ** ಜಗತ್ತಿನ **ಧರ್ಮಾನ್** ಧರ್ಮಗಳನ್ನು **ಅನುವರ್ತತಃ** ಅನುಸರಿಸುವ **ವಿಷ್ಣೋಃ** ಪರಮಾತ್ಮನಿಗೆ **ತತಃ** ಆ ಕಂಸನಿಗಿಂತ **ಗರೀಯಸಃ** ದೊಡ್ಡವರ **ಅಪರಾಧಾತ್ ವಿನಾ** ದ್ರೋಹವಿಲ್ಲದೇ **ಮಾತುಲಃ** ಸೋದರಮಾವನಾದ ಕಂಸನು **ವಧ್ಯತಾಂ** ವಧೆಗೆ ಅರ್ಹತೆಯನ್ನು **ನ ಏತಿ** ಹೊಂದುವುದಿಲ್ಲ **ಹಿ** ಯಾವ ಕಾರಣದಿಂದ **ಅತಃ** ಆದ್ದರಿಂದ **ವಾಯುಃ** ವಾಯುವು **ಪಿತ್ರೋಃ** (ಪರಮಾತ್ಮನ) ತಂದೆ-ತಾಯಿಯರ **ವಿರೋಧಾರ್ಥಂ** ವಿರೋಧ ಹುಟ್ಟಿಸಲು **ಉವಾಚ** ಮಾತನಾಡಿದನು.

**ತಾತ್ಪರ್ಯ :-** ವಾಯುವು ಕಂಸನನ್ನು ಕುರಿತು ಮಾತನಾಡಲು ಕಾರಣವನ್ನು ಇಲ್ಲಿ ತಿಳಿಸುತ್ತಿದ್ದಾರೆ - ಸೋದರಮಾವನನ್ನು ಕೊಲ್ಲಬಾರದು ಎಂಬ ಲೋಕದ ನಿಯಮವನ್ನು ಪರಮಾತ್ಮನು ಅನುಸರಿಸುತ್ತಾನೆ. ಅದಕ್ಕನು ಗುಣವಾಗಿ ಅವನು ಕಂಸನನ್ನು ಕೊಲ್ಲಲಾಗುವುದಿಲ್ಲ. ಕಂಸನು ಉತ್ತಮರಾದ

ಕೃಷ್ಣನ ತಂದೆ-ತಾಯಿಯರಿಗೆ ದ್ರೋಹ ಮಾಡಿದಲ್ಲಿ ವಧಾರ್ಹನಾಗುತ್ತಾನೆ. ಆದ್ದರಿಂದ ಕಂಸನಿಗೆ ವಸುದೇವ-ದೇವಕಿಯರೊಂದಿಗೆ ವಿರೋಧ ಉಂಟು ಮಾಡಲು ವಾಯುವು ಕಂಸನನ್ನು ಕುರಿತು ಮಾತನಾಡಿದನು. (ಶ್ಲೋಕದಲ್ಲಿ ಗರೀಯಸಃ ಎಂಬ ಪದಕ್ಕೆ ಕೃಷ್ಣನ ದೃಷ್ಟಿಯಿಂದ ದೊಡ್ಡವರಾದ ತಂದೆತಾಯಿಯರು ಎಂದು ಅರ್ಥ ವಾದಿರಾಜೀಯ.)

**ಮೃತ್ಯುಸ್ತವಾಸ್ಯಾ ಭವಿತಾಽಷ್ಟಮಃ ಸುತೋ**
**ಮೂಢೇತಿ ಚೋಕ್ತೋ ಜಗೃಹೇ ಕೃಪಾಣಮ್ ।**
**ಪುತ್ರಾನ್ ಸಮರ್ಪ್ಯಾಸ್ಯ ಚ ಶೂರಸೂನುರ್ವಿ-**
**ಮೋಚ್ಯ ತಾಂ ತತ್ಸಹಿತೋ ಗೃಹಂ ಯಯೌ ॥ ೫ ॥**

ಪದಚ್ಛೇದಃ : ಮೃತ್ಯುಃ ತವ ಅಸ್ಯಾಃ ಭವಿತಾ ಅಷ್ಟಮಃ ಸುತಃ ಮೂಢ ಇತಿ ಚ ಉಕ್ತಃ ಜಗೃಹೇ ಕೃಪಾಣಂ, ಪುತ್ರಾನ್ ಸಮರ್ಪ್ಯ ಅಸ್ಯ ಚ ಶೂರಸೂನುಃ ವಿಮೋಚ್ಯ ತಾಂ ತತ್ಸಹಿತಃ ಗೃಹಂ ಯಯೌ.

**ಅರ್ಥ** :- **ಮೂಢ** ಎಲೈ ಮೂಢನೇ **ಅಸ್ಯಾಃ** ಆ ದೇವಕಿಯ **ಅಷ್ಟಮ** ಎಂಟನೆಯ **ಸುತಃ** ಮಗನು **ತವ** ನಿನಗೆ **ಮೃತ್ಯುಃ** ಸಂಹಾರಕನು **ಭವಿತಾ** ಆಗಲಿದ್ದಾನೆ **ಇತಿ** ಎಂದು **ಉಕ್ತಃ ಚ** (ವಾಯುವಿನಿಂದ) ಹೇಳಲ್ಪಟ್ಟ ಕಂಸನಾದರೂ **ಕೃಪಾಣಂ** (ಅವಳನ್ನು ಕೊಲ್ಲಲು) ಖಡ್ಗವನ್ನು **ಜಗೃಹೇ** ತೆಗೆದುಕೊಂಡನು. **ಶೂರಸೂನುಃ ಚ** ಶೂರಸೇನನ ಮಗನಾದ ವಸುದೇವನಾದರೂ **ಅಸ್ಯ** ಈ ಕಂಸನಿಗೆ **ಪುತ್ರಾನ್** (ಮುಂದೆ ಹುಟ್ಟಲಿರುವ) ಮಕ್ಕಳನ್ನು **ಸಮರ್ಪ್ಯ** ಒಪ್ಪಿಸಿ **ತಾಂ** ಆ ದೇವಕಿಯನ್ನು **ವಿಮೋಚ್ಯ** ಬಿಡುಗಡೆಗೊಳಿಸಿ **ತತ್ಸಹಿತಃ (ಸನ್)** ಆ ದೇವಕಿಯಿಂದ ಸಹಿತನಾಗಿ **ಗೃಹಂ (ಪ್ರತಿ)** ಮನೆಯನ್ನು ಕುರಿತು **ಯಯೌ** ಹೋದನು.

**ತಾತ್ಪರ್ಯ** :- ಗಗನಸ್ಥಿತನಾದ ವಾಯುವು ಕಂಸನಿಗೆ ಹೇಳಿದನು ''ಎಲೈ ಮೂರ್ಖನೇ! ಈ ದೇವಕಿಯಲ್ಲಿ ಹುಟ್ಟಲಿರುವ ಎಂಟನೇ ಮಗುವು ನಿನ್ನ ಪಾಲಿನ ಮೃತ್ಯುವಾಗಲಿದ್ದಾನೆ'' ಎಂದು. ಅದನ್ನು ಕೇಳಿದ ಕಂಸನು ಅವಳನ್ನು ಕೊಲ್ಲಲು ಖಡ್ಗವನ್ನು ತೆಗೆದನು. ಆಗ ವಸುದೇವನು ''ಇವಳನ್ನು ಕೊಲ್ಲಬೇಡ; ಇವಳಲ್ಲಿ ಹುಟ್ಟಲಿರುವ ಎಲ್ಲ ಮಕ್ಕಳನ್ನೂ ನಿನಗೆ ಒಪ್ಪಿಸುತ್ತೇನೆ'' ಎಂದು ಹೇಳಿ ಅವಳನ್ನು ಬಿಡಿಸಿಕೊಂಡು ಮನೆಗೆ ಹೋದನು.

ಷಟ್ ಕನ್ಯಾಕಾಶ್ಚಾವರಜಾ ಗೃಹೀತಾಸ್ತೇ
ನೈವ ತಾಭಿಶ್ಚ ಮುಮೋದ ಶೂರಜಃ ।
ಬಾಹ್ಲೀಕಪುತ್ರೀ ಚ ಪುರಾ ಗೃಹೀತಾ
ಪುರಾಽಸ್ಯ ಭಾರ್ಯಾ ಸುರಭಿಸ್ತು ರೋಹಿಣೀ ॥ ೬ ॥

ಪದಚ್ಛೇದಃ : ಷಟ್ ಕನ್ಯಕಾಃ ಚ ಅವರಜಾಃ ಗೃಹೀತಾಃ ತೇನ ಏವ ತಾಭಿಃ ಚ ಮುಮೋದ ಶೂರಜಃ ಬಾಹ್ಲೀಕಪುತ್ರೀ ಚ ಪುರಾ ಗೃಹೀತಾ ಪುರಾ ಅಸ್ಯ ಭಾರ್ಯಾ ಸುರಭಿಃ ತು ರೋಹಿಣೀ.

**ಅರ್ಥ** :- **ತೇನ ಏವ** ಆ ವಸುದೇವನಿಂದಲೇ **ಅವರಜಾಃ** ದೇವಕಿಯ ನಂತರ ಹುಟ್ಟಿದ **ಷಟ್** ಆರು ಮಂದಿ **ಕನ್ಯಕಾಃ ಚ** ಕನ್ಯೆಯರೂ ಕೂಡ **ಗೃಹೀತಾಃ** (ಹೆಂಡತಿಯರಾಗಿ) ಸ್ವೀಕರಿಸಲ್ಪಟ್ಟರು. **ಶೂರಜಃ** ಶೂರಸೇನನ ಮಗನಾದ ವಸುದೇವನು **ತಾಭಿಃ ಚ** ಅವರೊಂದಿಗೂ ಕೂಡ **ಮುಮೋದ** ಸಂತೋಷಿಸಿದನು. **ಪುರಾ** ಹಿಂದಿನ ಜನ್ಮದಲ್ಲಿ **(ಯಾ)** ಯಾವಳು **ಅಸ್ಯ** ಈ ವಸುದೇವನ **ಭರ್ಯಾ** ಹೆಂಡತಿಯಾದ **ಸುರಭಿಃ ತು** ಸುರಭಿಯೆಂಬುವ ಳಾಗಿದ್ದಳೋ **(ಸಾ)** ಅಂತಹ **ಬಾಹ್ಲೀಕಪುತ್ರೀ** ಬಾಹ್ಲೀಕರಾಜನ ಮಗಳಾದ **ರೋಹಿಣೀ ಚ** ರೋಹಿಣಿಯೂ ಕೂಡ **ಪುರಾ** (ಆರು ಮಂದಿ ಕನ್ಯೆಯರಿಗಿಂತ) ಮೊದಲು **ಗೃಹೀತಾ** (ಹೆಂಡತಿಯಾಗಿ) ಸ್ವೀಕರಿಸಲ್ಪಟ್ಟಳು.

**ತಾತ್ಪರ್ಯ** :- ವಸುದೇವನ ದೇವಕಿಯ ಆರು ಜನ ತಂಗಿಯರನ್ನೂ ಮದುವೆಯಾಗಿ ಅವರೊಂದಿಗೆ ಸಂತೋಷಿಸಿದನು. ಬಾಹ್ಲೀಕ ರಾಜನ ಮಗಳಾದ ರೋಹಿಣಿಯನ್ನೂ ದೇವಕಿಯ ತಂಗಿಯರನ್ನು ಮದುವೆಯಾಗುವ ಮೊದಲೇ ಮದುವೆಯಾದನು. ಈ ರೋಹಿಣಿಯು ಹಿಂದಿನ ಜನ್ಮದಲ್ಲೂ ಸುರಭಿ ಎಂಬ ಹೆಸರಿನಿಂದ ವಸುದೇವನ ಹೆಂಡತಿಯೇ ಆಗಿದ್ದಳು.

ರಾಜ್ಞಶ್ಚ ಕಾಶಿಪ್ರಭವಸ್ಯ ಕನ್ಯಕಾಂ ಸ
ಪುತ್ರಿಕಾಪುತ್ರಕಧರ್ಮತೋಽವಹತ್ ।
ಕನ್ಯಾಂ ತಥಾ ಕರವೀರೇಶ್ವರಸ್ಯ ಧರ್ಮೇಣ
ತೇನೈವ ದಿತಿಂ ಧನುಂ ಪುರಾ ॥ ೭ ॥

ಪದಚ್ಛೇದಃ : ರಾಜ್ಞಃ ಚ ಕಾಶಿಪ್ರಭವಸ್ಯ ಕನ್ಯಕಾಂ ಸಃ ಪುತ್ರಿಕಾಪುತ್ರಧರ್ಮತಃ ಅವಹತ್ ಕನ್ಯಾಂ ತಥಾ ಕರವೀರೇಶ್ವರಸ್ಯ ಧರ್ಮೇಣ ತೇನ ಏವ ದಿತಿಂ ದನುಂ ಪುರಾ.

**ಅರ್ಥ** :- **ಸಃ** ಆ ವಸುದೇವನು **ಪುರಾ** ಹಿಂದಿನ ಜನ್ಮದಲ್ಲಿ **ದಿತಿಂ** ದಿತಿಯಾಗಿದ್ದ **ಕಾಶಿಪ್ರಭವಸ್ಯ** ಕಾಶಿಯಲ್ಲಿ ಹುಟ್ಟಿದ **ರಾಜ್ಞಃ** ಕಾಶಿರಾಜನ **ಕನ್ಯಕಾಂ ಚ** ಮಗಳನ್ನೂ ಕೂಡ **ಪುತ್ರಿಕಾಪುತ್ರಧರ್ಮತಃ** ಇವಳಲ್ಲಿ ಹುಟ್ಟಿದ ಮಗನು ನನಗೆ ಮಗನಾಗಲಿ ಎಂಬ ಧರ್ಮದಿಂದ **ಅವಹತ್** ಮದುವೆ ಯಾದನು. **ತಥಾ** ಹಾಗೆಯೇ **ಪುರಾ** ಹಿಂದಿನ ಜನ್ಮದಲ್ಲಿ **ದನುಂ** ದನುವಾಗಿದ್ದ **ಕರವೀರೇಶ್ವರಸ್ಯ** ಕರವೀರದೇಶದ ರಾಜನ **ಕನ್ಯಾಕಾಂ ಚ** ಮಗಳನ್ನೂ ಕೂಡ **ತೇನ ಏವ** ಪುತ್ರಿಕಾಪುತ್ರವೆಂಬ ಅದೇ **ಧರ್ಮೇಣ** ಧರ್ಮದಿಂದ **ಅವಹತ್** ಮದುವೆಯಾದನು.

**ತಾತ್ಪರ್ಯ** :- ಹಿಂದಿನ ಜನ್ಮದಲ್ಲಿ ಕಶ್ಯಪರ ಹೆಂಡತಿಯಾಗಿದ್ದ ದಿತಿದೇವಿಯು ಈ ಜನ್ಮದಲ್ಲಿ ಕಾಶಿರಾಜನ ಮಗಳಾಗಿ ಹುಟ್ಟಿದ್ದಳು. ವಸುದೇವನು ಅವಳನ್ನು ಪುತ್ರಿಕಾಪುತ್ರಧರ್ಮದಿಂದ ಅಂದರೆ ಅವಳಲ್ಲಿ ಹುಟ್ಟಿದ ಮಗನು ಕಾಶಿರಾಜನ ಮಗನಾಗುತ್ತಾನೆ ಎಂಬ ಒಪ್ಪಂದದೊಂದಿಗೆ ಮದುವೆಯಾದನು. ಅದೇ ರೀತಿಯಾಗಿ ಹಿಂದಿನ ಜನ್ಮದಲ್ಲಿ ಕಶ್ಯಪರ ಹೆಂಡತಿಯೇ ಆಗಿದ್ದ ದನುದೇವಿಯೂ ಕೂಡ ಈ ಜನ್ಮದಲ್ಲಿ ಕರವೀರಾಜನ ಮಗಳಾಗಿ ಹುಟ್ಟಿದ್ದಳು. ಅವಳನ್ನೂ ಪುತ್ರಿಕಾಪುತ್ರಧರ್ಮದಿಂದ ವಸುದೇವನು ಮದುವೆಯಾದನು.

**ಯೋ ಮನ್ಯತೇ ವಿಷ್ಣುರೇವಾಹಮಿತ್ಯಸೌ**
**ಪಾಪೋ ವೇನಃ ಪೌಂಡ್ರಕೋ ವಾಸುದೇವಃ ।**
**ಜಾತಃ ಪುನಃ ಶೂರಜಾತ್ ಕಾಶಿಜಾಯಾಂ**
**ನಾನ್ಯೋ ಮತ್ತೋ ವಿಷ್ಣುರಸ್ತೀತಿ ವಾದೀ ॥ ೮ ॥**

ಪದಚ್ಛೇದಃ : ಯಃ ಮನ್ಯತೇ ವಿಷ್ಣುಃ ಏವ ಅಹಂ ಇತಿ ಅಸೌ ಪಾಪಃ ವೇನಃ ಪೌಂಡ್ರಕಃ ವಸುದೇವಃ ಜಾತಃ ಪುನಃ ಶೂರಜಾತ್ ಕಾಶಿಜಾಯಾಂ ನ ಅನ್ಯಃ ಮತ್ತಃ ವಿಷ್ಣುಃ ಅಸ್ತಿ ಇತಿ ವಾದೀ.

**ಅರ್ಥ** :- **ಯಃ** ಯಾವ **ಪಾಪಃ** ಪಾಪಾತ್ಮನಾದ **ಅಹಂ ಏವ** ನಾನೇ **ವಿಷ್ಣುಃ** ವಿಷ್ಣುವು **ಇತಿ** ಎಂದು **ಮನ್ಯತೇ** ತಿಳಿದಿದ್ದನೋ **ಅಸೌ** ಅಂತಹ **ವೇನಃ** ವೇನನು **ಶೂರಜಾತ್** ಶೂರಸೇನನ ಮಗನಾದ ವಸುದೇವನಿಂದ **ಕಾಶಿಜಾಯಾಂ** ಕಾಶಿರಾಜನ ಮಗಳಲ್ಲಿ **ಪೌಂಡ್ರಕಃ ವಾಸುದೇವಃ** ಪೌಂಡ್ರಕ ವಾಸುದೇವನಾಗಿ **ಜಾತಃ** ಹುಟ್ಟಿದನು **ಪುನಃ** ಮತ್ತೆ; **ಮತ್ತಃ** ನನಗಿಂತ **ಅನ್ಯಃ** ಬೇರೊಬ್ಬ **ವಿಷ್ಣುಃ** ವಿಷ್ಣುವು **ನ ಅಸ್ತಿ** ಇಲ್ಲ **ಇತಿ** ಎಂದು **ವಾದೀ (ಬಭೂವ)** ವಾದಿಸುವವನಾದನು.

**ತಾತ್ಪರ್ಯ** :- ಹಿಂದಿನ ಜನ್ಮದಲ್ಲಿ ನಾನೇ ವಿಷ್ಣುವು ಎಂದು ತಿಳಿದಿದ್ದ ಪಾಪಾತ್ಮನಾದ ವೇನನೇ ಈ ಜನ್ಮದಲ್ಲಿ ವಸುದೇವನಿಂದ ಕಾಶಿರಾಜನ ಮಗಳಲ್ಲಿ ಪೌಂಡ್ರಕ ವಾಸುದೇವನೆಂಬ ಹೆಸರಿನಿಂದ ಹುಟ್ಟಿದನು. ಅವನು ಈ ಜನ್ಮದಲ್ಲಿಯೂ ಪುನಃ ನಾನೇ ವಿಷ್ಣುವು. ನನಗಿಂತ ಬೇರೊಬ್ಬ ವಿಷ್ಣುವಿಲ್ಲ ಎಂದು ವಾದಿಸತೊಡಗಿದನು.

**ಧುಂಧುರ್ಹತೋ ಯೋ ಹರಿಣಾ ಮಧೋಃ ಸುತ**
**ಆಸೀತ್ ಸುತಾಯಾಂ ಕರವೀರೇಶ್ವರಸ್ಯ ।**
**ಸೃಗಾಲನಾಮಾ ವಾಸುದೇವೋऽಥ**
**ದೇವಕೀಮುದೂಹ್ಯ ಶೌರಿರ್ನ ಯಯಾವುಭೇ ತೇ ॥ ೯ ॥**

**ಪದಚ್ಛೇದಃ** : ಧುಂಧುಃ ಹತಃ ಯಃ ಹರಿಣಾ ಮಧೋಃ ಸುತಃ ಆಸೀತ್ ಸುತಾಯಾಂ ಕರವೀರೇಶ್ವರಸ್ಯ ಸೃಗಾಲನಾಮಾ ವಾಸುದೇವಃ ಅಥ ದೇವಕೀಂ ಉದೂಹ್ಯ ಶೌರಿಃ ನ ಯಯೌ ಉಭೇ ತೇ ।

**ಅರ್ಥ** :- **ಯಃ** ಯಾವ **ಮಧೋಃ** ಮಧುನಾಮಕ ಅಸುರನ **ಸುತಃ** ಮಗನಾದ **ಧುಂಧುಃ** ಧುಂಧುವು **ಹರಿಣಾ** ಪರಮಾತ್ಮನಿಂದ **ಹತಃ** ಹತನಾಗಿದ್ದನೋ **(ಸಃ)** ಆ ಧುಂಧುವು **ಸೃಗಾಲನಾಮಾ** ಸೃಗಾಲನೆಂಬ ಹೆಸರುಳ್ಳವನಾಗಿ; **ಕರವೀರೇಶ್ವರಸ್ಯ** ಕರವೀರದೇಶದ ರಾಜನ **ಸುತಾಯಾಂ** ಮಗಳಲ್ಲಿ **ವಾಸುದೇವಃ** ವಸುದೇವನ ಮಗನಾಗಿ **ಆಸೀತ್** ಹುಟ್ಟಿದನು **ಅಥ** ಆ ನಂತರ **ಶೌರಿಃ** ಶೂರಸೇನನ ಮಗನಾದ ವಸುದೇವನು **ದೇವಕೀಂ** ದೇವಕಿಯನ್ನು **ಉದೂಹ್ಯ** ಮದುವೆಯಾಗಿ **ತೇ ಉಭೇ** ಆ ಕಾಶಿರಾಜನ ಮಗಳನ್ನು ಹಾಗು ಕರವೀರರಾಜನ ಮಗಳನ್ನು **ನ ಯಯೌ** ಸೇರಲಿಲ್ಲ.

**ತಾತ್ಪರ್ಯ** :- ಹಿಂದಿನ ಜನ್ಮದಲ್ಲಿ ಮಧುನಾಮಕ ಅಸುರನ ಮಗನಾಗಿದ್ದ ಧುಂಧುವನ್ನು ಪರಮಾತ್ಮನು (ಕುವಲಾಶ್ವರಾಜನಲ್ಲಿ ಸ್ಥಿತನಾಗಿದ್ದ ಹರಿಯು-ಜನಾರ್ದನೀಯ) ಸಂಹರಿಸಿದ್ದನು. ಅವನೇ ಈಗ ಕರವೀರೇಶ್ವರನ ರಾಜನ ಮಗಳಲ್ಲಿ ವಸುದೇವನಿಂದ ಸೃಗಾಲನೆಂಬ ಹೆಸರಿನಿಂದ ಹುಟ್ಟಿದನು. ವಸುದೇವನು ಇವರಿಬ್ಬರ ಹುಟ್ಟಿದ ನಂತರ ದೇವಕಿಯನ್ನು ಮದುವೆ ಯಾದನು. ದೇವಕಿಯನ್ನು ಮದುವೆಯಾದ ನಂತರ ವಸುದೇವನು ಕಾಶಿರಾಜ ಮಗಳೊಂದಿಗಾಗಲೀ, ಕರವೀರ ರಾಜನ ಮಗಳೊಂದಿಗಾಗಲೀ ರಮಿಸಲಿಲ್ಲ.

**ತತಸ್ತು ತೌ ವೃಷ್ಣಿಶತ್ರೂ ಬಭೂವತುರ್ಜ್ಯೇಷ್ಠೌ**
**ಸುತೌ ಶೂರಸುತಸ್ಯ ನಿತ್ಯಮ್ ॥**
**ಅನ್ಯಾಸು ಚ ಪ್ರಾಪ ಸುತಾನುದಾರಾನ್**
**ದೇವಾವತಾರಾನ್ ವಸುದೇವೋಽಖಿಲಜ್ಞಃ ॥ ೧೦ ॥**

**ಪದಚ್ಛೇದಃ** : **ತತಃ ತು ತೌ ವೃಷ್ಣಿಶತ್ರೂ ಬಭೂವತುಃ ಜ್ಯೇಷ್ಠೌ ಸುತೌ ಶೂರಸುತಸ್ಯ ನಿತ್ಯಂ ಅನ್ಯಾಸು ಚ ಪ್ರಾಪ ಸುತಾನ್ ಉದಾರಾನ್ ದೇವಾವತಾರಾನ್ ವಸುದೇವಃ ಅಖಿಲಜ್ಞಃ**

**ಅರ್ಥ** :- **ತತಃ** ಆ ನಂತರ **ಶೂರಸುತಸ್ಯ** ಶೂರಸೇನನ ಮಗನಾದ ವಸುದೇವನ **ಜ್ಯೇಷ್ಠೌ ಸುತೌ** ಹಿರಿಯ ಮಕ್ಕಳಾದ **ತೌ ತು** ಪೌಂಡ್ರಕ ಹಾಗು ಸೃಗಾಲರಿಬ್ಬರೂ **ನಿತ್ಯಂ** ಯಾವಾಗಲೂ **ವೃಷ್ಣಿಶತ್ರೂ** ಯಾದವರಿಗೆ ಶತ್ರುಗಳು **ಬಭೂವತುಃ** ಆದರು. **ಅಖಿಲಜ್ಞಃ** ಸರ್ವಜ್ಞನಾದ **ವಸುದೇವಃ** ವಸುದೇವನು **ಅನ್ಯಾಸು ಚ** ಇತರೆ ಹೆಂಡತಿಯರಲ್ಲೂ ಕೂಡ; **ಉದಾರಾನ್** ಉತ್ತಮರಾದ, **ದೇವಾವತಾರಾನ್** ದೇವತೆಗಳ ಅವತಾರರಾದ **ಸುತಾನ್** ಮಕ್ಕಳನ್ನು **ಪ್ರಾಪ** ಪಡೆದನು.

**ತಾತ್ಪರ್ಯ** :- ವಸುದೇವನ ಹಿರಿಯ ಮಕ್ಕಳಾದ ಪೌಂಡ್ರಕವಾಸುದೇವ ಹಾಗು ಸೃಗಾಲ ವಾಸುದೇವರಿಬ್ಬರೂ ಮುಂದೆ ಎಂದಿಗೂ ಯಾದವರ ಶತ್ರುಗಳೇ ಆದರು. ಎಲ್ಲವನ್ನು ಬಲ್ಲ ವಸುದೇವನು ಇತರೆ ಹೆಂಡತಿಯರಲ್ಲೂ ಕೂಡ ಉತ್ತಮರಾದ ದೇವಾಂಶಸಂಭೂತರಾದ ಮಕ್ಕಳನ್ನು ಪಡೆದನು.

ಯೇಯೇ ಹಿ ದೇವಾಃ ಪೃಥಿವೀಂ ಗತಾಸ್ತೇ
ಸರ್ವೇ ಶಿಷ್ಯಾಃ ಸತ್ಯವತೀಸುತಸ್ಯ ।
ವಿಷ್ಣುಜ್ಞಾನಂ ಪ್ರಾಪ್ಯ ಸರ್ವೇಽಖಿಲಜ್ಞಾಸ್ತಸ್ಮಾದ್
ಯಥಾಯೋಗ್ಯತಯಾ ಬಭೂವುಃ ॥ ೧೧ ॥

ಪದಚ್ಛೇದ : ಯೇಯೇ ಹಿ ದೇವಾಃ ಪೃಥಿವೀಂ ಗತಾಃ ತೇ ಸರ್ವೇ ಶಿಷ್ಯಾಃ ಸತ್ಯವತೀಸುತಸ್ಯ ವಿಷ್ಣುಜ್ಞಾನಂ ಪ್ರಾಪ್ಯ ಸರ್ವೇ ಅಖಿಲಜ್ಞಾಃ ತಸ್ಮಾತ್ ಯಥಾ ಯೋಗ್ಯತಯಾ, ಬಭೂವುಃ

**ಅರ್ಥ** :- **ಯೇಯೇ** ಯಾರುಯಾರು **ದೇವಾಃ** ದೇವತೆಗಳು **ಪೃಥಿವೀಂ (ಪ್ರತಿ)** ಭೂಮಿಯನ್ನು ಕುರಿತು **ಗತಾಃ** ಹೋದರೋ **ತೇ ಸರ್ವೇ** ಅವರೆಲ್ಲರೂ **ಸತ್ಯವತೀಸುತಸ್ಯ** ಸತ್ಯವತಿಯ ಮಗನಾದ ವೇದವ್ಯಾಸರ **ಶಿಷ್ಯಾಃ ಹಿ** ಶಿಷ್ಯರೇ **(ಆಸನ್)** ಆಗಿದ್ದರು **ಸರ್ವೇ** ಅವರೆಲ್ಲರೂ **ತಸ್ಮಾತ್** ಆ ವೇದವ್ಯಾಸರಿಂದ **ವಿಷ್ಣುಜ್ಞಾನಂ** ಪರಮಾತ್ಮನ ಜ್ಞಾನವನ್ನು **ಪ್ರಾಪ್ಯ** ಹೊಂದಿ **ಯಥಾಯೋಗ್ಯತಯಾ** ತಮ್ಮ ಯೋಗ್ಯತೆಯನ್ನು ಮೀರದಂತೆ **ಅಖಿಲಜ್ಞಾಃ** ಸರ್ವಜ್ಞರು **ಬಭೂವುಃ** ಆದರು.

**ತಾತ್ಪರ್ಯ** :- ಯಾವ ಯಾವ ದೇವತೆಗಳು ಭೂಮಿಯಲ್ಲಿ ಅವತರಿಸಿದರೋ ಅವರೆಲ್ಲರೂ ವೇದವ್ಯಾಸರ ಶಿಷ್ಯರೇ ಆಗಿದ್ದರು. ವೇದವ್ಯಾಸರಿಂದ ಪರಮಾತ್ಮನ ಬಗ್ಗೆ ತಿಳಿದು ತಮ್ಮ ತಮ್ಮ ಯೋಗ್ಯತೆಗೆ ಅನುಗುಣವಾಗಿ ಸರ್ವಜ್ಞರಾದರು.

ಮರೀಚಿಜಾಃ ಷಣ್ಮುನಯೋ ಬಭೂವುಸ್ತೇ
ದೇವಲಂ ಪ್ರಾಹಸನ್ ಕಾರ್ಶ್ಯಹೇತೋಃ ।
ತಚ್ಛಾಪತಃ ಕಾಲನೇಮಿಪ್ರಸೂತಾ
ಅವಧ್ಯತಾರ್ಥಂ ತಪ ಏವ ಚಕ್ರುಃ ॥ ೧೨ ॥

ಪದಚ್ಛೇದ : ಮರೀಚಿಜಾಃ ಷಟ್ ಮುನಯಃ ಬಭೂವುಃ ತೇ ದೇವಲಂ ಪ್ರಾಹಸನ್ ಕಾರ್ಶ್ಯಹೇತೋಃ ತಚ್ಛಾಪತಃ ಕಾಲನೇಮಿಪ್ರಸೂತಾಃ ಅವಧ್ಯತಾರ್ಥಂ ತಪಃ ಏವ ಚಕ್ರು.

**ಅರ್ಥ** :- **ಮರೀಚಿಜಾಃ** ಮರೀಚಿ ಋಷಿಗಳ ಮಕ್ಕಳಾದ **ಷಟ್** ಆರು ಮಂದಿ **ಮುನಯಃ** ಋಷಿಗಳು; **ಬಭೂವುಃ** ಇದ್ದರು. **ತೇ** ಅವರು **ದೇವಲಂ**

ದೇವಲ ಮಹರ್ಷಿಯನ್ನು ಕುರಿತು **ಕಾರ್ಶ್ಯಹೇತೋಃ** ಕೃಶತೆಯ ಕಾರಣದಿಂದ **ಪ್ರಾಹಸನ್** ನಕ್ಕರು. **ತಚ್ಛಾಪತಃ ಏವ** ಆ ದೇವಲ ಋಷಿಯ ಶಾಪದಿಂದಲೇ; **ಕಾಲನೇಮಿಪ್ರಸೂತಾಃ** ಕಾಲನೇಮಿಯಿಂದ ಹುಟ್ಟಿದವರಾಗಿ; **ಅವಧ್ಯತಾರ್ಥಂ** ಅವಧ್ಯತ್ವಕ್ಕಾಗಿ; **ತಪಃ** ತಪಸ್ಸನ್ನು; **ಚಕ್ರುಃ** ಮಾಡಿದರು.

**ತಾತ್ಪರ್ಯ** :- ಮರೀಚಿ ಋಷಿಗಳಿಗೆ ಆರು ಮಂದಿ ಮಕ್ಕಳಿದ್ದರು. ಅವರು ಒಮ್ಮೆ ತಪಸ್ಸು ಮಾಡಿ ಕೃಶರಾಗಿದ್ದ ದೇವಲ ಋಷಿಯನ್ನು ನೋಡಿ ಕಾಮಜ್ವರದಿಂದ ಕೃಶರಾಗಿದ್ದಾರೆ ಎಂದು ಅಪಹಾಸ್ಯ ಮಾಡಿದರು. ಆಗ ದೇವಲ ಋಷಿಗಳು ಅಸುರರಾಗುವಂತೆ ಶಾಪಕೊಟ್ಟರು. ಅವರ ಶಾಪದಂತೆ ಕಾಲನೇಮಿಯ ಮಕ್ಕಳಾಗಿ ಷಡ್‌ಗರ್ಭರೆಂಬ ಹೆಸರಿನಿಂದ ಹುಟ್ಟಿದರು. ಆ ಷಡ್‌ಗರ್ಭರು ತಮಗೆ ಅವಧ್ಯತ್ವ ಬರಲೆಂದು ಬ್ರಹ್ಮನನ್ನು ಕುರಿತು ತಪಸ್ಸು ಮಾಡಿದರು.

**ಧಾತಾ ಪ್ರಾದಾದ್ ವರಮೇಷಾಂ ತಥೈವ**
**ಶಶಾಪ ತಾನ್ ಕ್ಷ್ಮಾತಲೇ ಸಂಭವಧ್ವಮ್ ।**
**ತತ್ರ ಸ್ವತಾತೋ ಭವತಾಂ ನಿಹಂತೇ-**
**ತ್ಯಾತ್ಮಾನ್ಯತೋ ವರಲಿಪ್ಸೂನ್ ಹಿರಣ್ಯಃ ॥ ೧೩ ॥**

**ಪದಚ್ಛೇದ** : ಧಾತಾ ಪ್ರಾದಾತ್ ವರಂ ಏಷಾಂ ತಥಾ ಏವ ಶಶಾಪ ತಾನ್ ಕ್ಷ್ಮಾತಲೇ ಸಂಭವಧ್ವಂ ತತ್ರ ಸ್ವತಾತಃ ಭವತಾಂ ನಿಹಂತಾ ಇತಿ ಆತ್ಮಾನ್ಯತಃ ವರಲಿಪ್ಸೂನ್ ಹಿರಣ್ಯಃ

**ಅರ್ಥ** :- **ಧಾತಾ** ಚತುರ್ಮುಖಬ್ರಹ್ಮನು **ಏಷಾಂ** ಈ ಷಡ್‌ಗರ್ಭರಿಗೆ **ತಥಾ ಏವ** ಹಾಗೆಯೇ **ವರಂ** ವರವನ್ನು **ಪ್ರಾದಾತ್** ಕೊಟ್ಟನು **ಹಿರಣ್ಯಃ** ಹಿರಣ್ಯಕಶಿಪುವು **ಆತ್ಮಾನ್ಯತಃ** ತನ್ನನ್ನು ಬಿಟ್ಟು ಇತರರಿಂದ **ವರಲಿಪ್ಸೂನ್** ವರವನ್ನು ಬಯಸಿದ **ತಾನ್** ಆ ಷಡ್‌ಗರ್ಭಾಸುರರನ್ನು **ಕ್ಷ್ಮಾತಲೇ** ಭೂಮಿಯಲ್ಲಿ **ಸಂಭವಧ್ವಂ** ಹುಟ್ಟಿರಿ **ತತ್ರ** ಅಲ್ಲಿ **ಸ್ವತಾತಃ** ನಿಮ್ಮ ತಂದೆಯು; **ಭವತಾಂ** ನಿಮ್ಮ **ನಿಹಂತಾ** ಹಂತಕನು **ಭವೇತ** ಆಗಲಿ **ಇತಿ** ಎಂದು **ಶಶಾಪ** ಶಪಿಸಿದನು.

**ತಾತ್ಪರ್ಯ** :- ಚತುರ್ಮುಖಬ್ರಹ್ಮನು ಷಡ್‌ಗರ್ಭರು ಬಯಸಿದಂತೆಯೇ ವರವನ್ನು ಕೊಟ್ಟನು. ಇದರಿಂದ ಹಿರಣ್ಯಕಶಿಪುವು ಸಿಟ್ಟುಗೊಂಡನು. ಷಡ್ಗರ್ಭರು ತನ್ನ ತಮ್ಮನಾದ ಹಿರಣ್ಯಾಕ್ಷನ ಮೊಮ್ಮಕ್ಕಳು. ತಾತನಾದ ನನ್ನನ್ನು

ಬಿಟ್ಟು ಬೇರೊಬ್ಬರಿಂದ ವರಪಡೆದಿದ್ದಾರೆಂದು ತಿಳಿದಾಗ ಅವರಿಗೆ ಶಾಪ ಕೊಟ್ಟನು. ''ನೀವೆಲ್ಲರೂ ಭೂಮಿಯಲ್ಲಿ ಹುಟ್ಟಿರಿ, ಹಾಗು ಅಲ್ಲಿ ನಿಮ್ಮ ತಂದೆಯಿಂದಲೇ ನಿಮಗೆ ಸಾವು ಬರಲಿ'' ಎಂದು.

**ದುರ್ಗಾ ತದಾ ತಾನ್ ಭಗವತ್ಪ್ರಚೋದಿತಾ**
**ಪ್ರಸ್ವಾಪಯಿತ್ವಾ ಪ್ರಚಕರ್ಷ ಕಾಯಾತ್ ।**
**ಕ್ರಮಾತ್ ಸಮಾವೇಶಯದಾಶು ದೇವಕೀ-**
**ಗರ್ಭಾಶಯೇ ತಾನ್ ನ್ಯಹನಚ್ಚ ಕಂಸಃ ॥ ೧೪ ॥**

ಪದಚ್ಛೇದ : ದುರ್ಗಾ ತದಾ ತಾನ್ ಭಗವತ್ಪ್ರಚೋದಿತಾ ಪ್ರಸ್ವಾಪಯಿತ್ವಾ ಪ್ರಚಕರ್ಷ ಕಾಯಾತ್ ಕ್ರಮಾತ್ ಸಮಾವೇಶಯತ್ ಆಶು ದೇವಕೀಗರ್ಭಾಶಯೇ ತಾನ್ ನ್ಯಹನತ್ ಚ ಕಂಸಃ

**ಅರ್ಥ** :- **ತದಾ** ಆಗ **ಭಗವತ್ಪ್ರಚೋದಿತಾ** ಭಗವಂತನಿಂದ ಪ್ರೇರೇಪಿಸಲ್ಪಟ್ಟ **ದುರ್ಗಾ** ದುರ್ಗೆಯು **ತಾನ್** ಆ ಷಡ್‌ಗರ್ಭಾಸುರರನ್ನು **ಪ್ರಸ್ವಾಪಯಿತ್ವಾ** ನಿದ್ರಿಸುವಂತೆ ಮಾಡಿ; **ಕಾಯಾತ್** ಅವರ ದೇಹದಿಂದ **ಕ್ರಮಾತ್** ಕ್ರಮವಾಗಿ **ಪ್ರಚಕರ್ಷ** ಆಕರ್ಷಿಸಿದಳು. **ತಾನ್** ಆ ಅಸುರರನ್ನು **ದೇವಕೀಗರ್ಭಾಶಯೇ** ದೇವಕಿಯ ಗರ್ಭದಲ್ಲಿ **ಸಮಾವೇಶಯತ್** ಪ್ರವೇಶಿಸುವಂತೆ ಮಾಡಿದಳು. **ಕಂಸಃ ಚ** ಕಂಸನಾದರೂ **ತಾನ್** ಅವರನ್ನು **ಆಶು** ಹುಟ್ಟಿದ ಕೂಡಲೇ **ನ್ಯಹನತ್** ಕೊಂದನು.

**ತಾತ್ಪರ್ಯ** :- ವಸುದೇವ-ದೇವಕಿಯರ ವಿವಾಹದ ನಂತರ ಮಕ್ಕಳ ಜನನದ ಬಗ್ಗೆ ಇಲ್ಲಿ ಹೇಳುತ್ತಿದ್ದಾರೆ : ಭಗವಂತನಿಂದ ಪ್ರೇರಿತಳಾದ ದುರ್ಗಾದೇವಿಯು ಷಡ್‌ಗರ್ಭಾಸುರರನ್ನು ಒಬ್ಬೊಬ್ಬರನ್ನಾಗಿ ಒಂದು ಗುಹೆಯಲ್ಲಿಟ್ಟು ಅವರನ್ನು ಮಲಗುವಂತೆ ಮಾಡಿದಳು. ನಂತರ ಈ ಶರೀರದಿಂದ ಅವರನ್ನು ಆಕರ್ಷಿಸಿ ದೇವಕಿಯ ಗರ್ಭದಲ್ಲಿ ಇರಿಸಿದಳು. ಈ ಮಕ್ಕಳು ಹುಟ್ಟಿದ ಕೂಡಲೇ ಕಂಸನು ಅವರನ್ನು ಕೊಂದನು. ಅವರು ಹತರಾದ ನಂತರ ಪುನಃ ಅವರ ಶರೀರದಲ್ಲೇ ಅವರನ್ನು ಪ್ರವೇಶಿಸುವಂತೆ ಮಾಡಿದಳು. (ಅವರಿಗೆ ಮರಣ ಬರಬಾರದೆಂದು ಬ್ರಹ್ಮದೇವರ ವರವಿತ್ತು. ಹಾಗು ಅವರ ತಂದೆಯಾದ ಕಾಲನೇಮಿಯಿಂದಲೇ ಸಾಯಬೇಕೆಂಬ ಹಿರಣ್ಯಕಶಿಪುವಿನ

ಶಾಪವೂ ಇತ್ತು. ಅವೆರಡನ್ನೂ ಸತ್ಯವನ್ನಾಗಿಸಲು ದುರ್ಗೆಯು ಕಾಲನೇಮಿಯಿಂದ ಉಂಟಾದ ಷಡ್‌ಗರ್ಭಶರೀರದಿಂದ ಅವರನ್ನು ಆಕರ್ಷಿಸಿ ದೇವಕಿಯ ಗರ್ಭದಲ್ಲಿಟ್ಟು ಹುಟ್ಟಿದ ನಂತರ ಕಾಲನೇಮಿಯೇ ಆದ ಕಂಸನಿಂದ ಹತರಾಗುವಂತೆ ಮಾಡಿದಳು.)

**ತದಾ ಮುನೀಂದ್ರಸಂಯುತಃ ಸದೋ ವಿಧಾತುರುತ್ತಮಮ್ ।**
**ಸ ಪಾಂಡುರಾಪ್ತುಮೈಚ್ಛತ ನ್ಯವಾರಯಂಶ್ಚ ತೇ ತದಾ ॥ ೧೫ ॥**

ಪದಚ್ಛೇದ : ತದಾ ಮುನೀಂದ್ರಸಂಯುತಃ ಸದಃ ವಿಧಾತುಃ ಉತ್ತಮಂ ಸಃ ಪಾಂಡುಃ ಆಪ್ತುಂ ಐಚ್ಛತ ನ್ಯವಾರಯನ್ ಚ ತೇ ತದಾ.

**ಅರ್ಥ** :- ತದಾ ಆ ಕಾಲದಲ್ಲಿ **ಮುನೀಂದ್ರಸಂಯುತಃ** ಋಷಿಗಳೊಂದಿಗೆ ಕೂಡಿದ **ಸಃ** ಆ **ಪಾಂಡುಃ** ಪಾಂಡುರಾಜನು **ವಿಧಾತುಃ** ಬ್ರಹ್ಮದೇವರ **ಉತ್ತಮಂ** ಉತ್ತಮವಾದ **ಸದಃ** ಸಭೆಯನ್ನು **ಆಪ್ತುಂ** ಹೊಂದಲು **ಐಚ್ಛತ** ಬಯಸಿದನು. **ತದಾ** ಆಗ **ತೇ ಚ** ಆ ಮುನಿಗಳಾದರೂ **ನ್ಯವಾರಯನ್** ತಡೆದರು.

**ತಾತ್ಪರ್ಯ** :- ಅದೇ ಸಮಯದಲ್ಲಿ ಕಾಡಿನಲ್ಲಿ ಮುನಿಗಳೊಂದಿಗೆ ಇದ್ದ ಪಾಂಡುರಾಜನು ಯೋಗಶಕ್ತಿಯಿಂದ ಈ ಮಾನುಷ ಶರೀರವನ್ನು ತ್ಯಜಿಸಿ ಉತ್ತಮವಾದ ಬ್ರಹ್ಮದೇವರ ಸಭೆಯನ್ನು ಕುರಿತು ಹೋಗಲು ಬಯಸಿದನು. ಆಗ ಮುನಿಗಳು ಅವನನ್ನು ತಡೆದರು.

**ಯದರ್ಥಮೇಷ ಜಾಯತೇ ಪುಮಾನ್ ಹಿ ತಸ್ಯ ಸೋಽಕೃತೇಃ ।**
**ಶುಭಾಂ ಗತಿಂ ನ ತು ವ್ರಜೇದ್ ಧ್ರುವಂ ತತೋ ನ್ಯವಾರಯತ್ ॥ ೧೬ ॥**

ಪದಚ್ಛೇದ : ಯದರ್ಥಂ ಏಷಃ ಜಾಯತೇ ಪುಮಾನ್ ಹಿ ತಸ್ಯ ಸಃ ಅಕೃತೇಃ ಶುಭಾಂ ಗತಿಂ ನ ತು ವ್ರಜೇತ್ ಧ್ರುವಂ ತತಃ ನ್ಯವಾರಯತ್

**ಅರ್ಥ** :- **ಹಿ** ಯಾವ ಕಾರಣದಿಂದ **ಏಷಃ ಪುಮಾನ್** ಈ ಮನುಷ್ಯನು **ಯದರ್ಥಂ** ಯಾವ ಪ್ರಯೋಜನಕ್ಕಾಗಿ **ಜಾಯತೇ** ಹುಟ್ಟುತ್ತಾನೋ **ಸಃ** ಆ ಮನುಷ್ಯನು **ತಸ್ಯ** ಆ ಪ್ರಯೋಜನದ **ಅಕೃತೇಃ** ಅಕರಣದಿಂದ **ಶುಭಾಂ** ಒಳ್ಳೆಯ **ಗತಿಂ** ಗತಿಯನ್ನು **ಧ್ರುವಂ** ನಿಶ್ಚಯವಾಗಿ **ನ ತು ವ್ರಜೇತ್**

ಹೊಂದುವುದಿಲ್ಲ ತತಃ ಆದ್ದರಿಂದ (ತೇ) ಆ ಮುನಿಗಳು ನ್ಯವಾರಯತ್ ತಡೆದರು.

**ತಾತ್ಪರ್ಯ :-** ಮನುಷ್ಯನು ಯಾವ ಉದ್ದೇಶಕ್ಕಾಗಿ ಹುಟ್ಟಿರುತ್ತಾನೋ ಅದನ್ನು ನೆರವೇರಿಸದಿದ್ದಲ್ಲಿ ಅವನಿಗೆ ಉತ್ತಮವಾದ ಗತಿಯು ನಿಶ್ಚಯ ವಾಗಿಯೂ ಆಗುವುದಿಲ್ಲ. ಆದ್ದರಿಂದ ಮುನಿಗಳು ಪಾಂಡುರಾಜನನ್ನು ತಡೆದರು.

**ಪ್ರಧಾನದೇವತಾಜನೌ ನಿಯೋಕ್ತುಮಾತ್ಮನಃ ಪ್ರಿಯಾಮ್ ।**
**ಬಭೂವ ಪಾಂಡುರೇಷ ತದ್ ವಿನಾ ನ ತಸ್ಯ ಸದ್ಗತಿಃ ॥ ೧೭ ॥**

ಪದಚ್ಛೇದ : ಪ್ರಧಾನದೇವತಾಜನೌ ನಿಯೋಕ್ತುಂ ಆತ್ಮನಃ ಪ್ರಿಯಾಂ ಬಭೂವ ಪಾಂಡುಃ ಏಷಃ ತತ್ ವಿನಾ ನ ತಸ್ಯ ಸದ್ಗತಿಃ.

**ಅರ್ಥ :-** ಏಷಃ ಈ ಪಾಂಡುಃ ಪಾಂಡುರಾಜನು ಪ್ರಧಾನ ದೇವತಾಜನೌ ವಾಯುವೇ ಮೊದಲಾದ ಉತ್ತಮ ದೇವತೆಗಳ ಅವತಾರದಲ್ಲಿ ಆತ್ಮನಃ ತನ್ನ ಪ್ರಿಯಾಂ ಹೆಂಡತಿಯನ್ನು ನಿಯೋಕ್ತುಂ ನಿಯೋಜಿಸಲು ಬಭೂವ ಹುಟ್ಟಿದ್ದನು ತತ್ ಅದು ವಿನಾ ಇಲ್ಲದೇ ತಸ್ಯ ಅವನಿಗೆ ಸದ್ಗತಿಃ ಉತ್ತಮ ಗತಿಯು ನ ಇಲ್ಲ.

**ತಾತ್ಪರ್ಯ :-** ಪಾಂಡುವಿನ ಜನನದ ಉದ್ದೇಶವನ್ನು ಹೇಳುತ್ತಿದ್ದಾರೆ. ಪಾಂಡುರಾಜನು ವಾಯುವೇ ಮೊದಲಾದ ಉತ್ತಮ ದೇವತೆಗಳ ಅವತಾರ ಕ್ಕಾಗಿ ತನ್ನ ಹೆಂಡತಿಯನ್ನು ನಿಯೋಜಿಸಬೇಕು. ಅದನ್ನು ಮಾಡದೇ ಅವನಿಗೆ ಬ್ರಹ್ಮಲೋಕವೆಂಬ ಸದ್ಗತಿಯು ಆಗುವುದಿಲ್ಲ.

**ಅತೋಽನ್ಯಥಾ ಸುತಾನೃತೇ ವ್ರಜಂತಿ ಸದ್ಗತಿಂ ನರಾಃ ।**
**ಯಥೈವ ಧರ್ಮಭೂಷಣೋ ಜಗಾಮ ಸಂಧ್ಯಕಾಸುತಃ ॥ ೧೮ ॥**

ಪದಚ್ಛೇದ : ಅತಃ ಅನ್ಯಥಾ ಸುತಾನ್ ಋತೇ ವ್ರಜಂತಿ ಸದ್ಗತಿಂ ನರಾಃ ಯಥಾ ಏವ ಧರ್ಮಭೂಷಣಃ ಜಗಾಮ, ಸಂಧ್ಯಕಾಸುತಃ.

**ಅರ್ಥ :-** ಅತಃ ಆದ್ದರಿಂದ ಸುತಾನ್ ಮಕ್ಕಳು ಋತೇ ಇರದಿದ್ದರೂ ನರಾಃ ಮನುಷ್ಯರು ಅನ್ಯಥಾ ಬೇರೆ ಪ್ರಕಾರದಿಂದ ಸದ್ಗತಿಂ ಸದ್ಗತಿಯನ್ನು

**ವ್ರಜಂತಿ** ಹೊಂದುತ್ತಾರೆ **ಯಥಾ** ಹೇಗೆ **ಸಂಧ್ಯಕಾಸುತಃ** ಸಂಧ್ಯಕೆಯ ಮಗನಾದ **ಧರ್ಮಭೂಷಣಃ** ಧರ್ಮಾಂಗದನು **ಜಗಾಮ** (ಸದ್ಗತಿಯನ್ನು) ಹೊಂದಿದನೋ **(ತಥಾ)** ಏವ ಹಾಗೆಯೇ.

**ತಾತ್ಪರ್ಯ** :- ಋಷಿಗಳು ಪಾಂಡುವನ್ನು ದೇಹತ್ಯಾಗದಿಂದ ತಡೆದದ್ದು ಪುತ್ರರಿಲ್ಲದವರಿಗೆ ಸದ್ಗತಿ ಇಲ್ಲ ಎಂಬ ಉದ್ದೇಶದಿಂದಲ್ಲ. ಏಕೆಂದರೆ ಮನುಷ್ಯರು ಪುತ್ರಹೀನರಾದರೂ ಬೇರೆ ರೀತಿಯಿಂದ ಸದ್ಗತಿಯನ್ನು ಪಡೆಯ ಬಹುದು. ರುಕ್ಮಾಂಗದನಿಂದ ಸಂಧ್ಯಕೆಯಲ್ಲಿ ಹುಟ್ಟಿದ ಧರ್ಮಾಂಗದನು ನಿಯೋಗವೇ ಮೊದಲಾದ ಪದ್ಧತಿಯಿಂದ ಮಕ್ಕಳನ್ನು ಪಡೆಯದಿದ್ದರೂ ತನ್ನ ಏಕಾದಶೀವ್ರತನಿಷ್ಠೆಯಿಂದಲೇ ಮೋಕ್ಷವನ್ನು ಪಡೆದ.

**ತದಾ ಕಲಿಶ್ಚ ರಾಕ್ಷಸಾ ಬಭೂವುರಿಂದ್ರಜಿನ್ಮುಖಾಃ ।**
**ವಿಚಿತ್ರವೀರ್ಯನಂದನಪ್ರಿಯೋದರೇ ಹಿ ಗರ್ಭಗಾಃ ॥ ೧೯ ॥**

**ಪದಚ್ಛೇದ** : ತದಾ ಕಲಿಃ ಚ ರಾಕ್ಷಸಾಃ ಬಭೂವುಃ ಇಂದ್ರಜಿನ್ಮುಖಾಃ ವಿಚಿತ್ರವೀರ್ಯನಂದನಪ್ರಿಯೋದರೇ ಹಿ ಗರ್ಭಗಾಃ.

**ಅರ್ಥ** :- **ತದಾ** ಅದೇ ಸಮಯದಲ್ಲಿ **ಕಲಿಃ** ಕಲಿಯು **ಚ** ಮತ್ತು **ಇಂದ್ರಜಿನ್ಮುಖಾಃ** ಇಂದ್ರಜಿತ್ ಮೊದಲಾದ **ರಾಕ್ಷಸಾಃ** ರಾಕ್ಷಸರು **ವಿಚಿತ್ರವೀರ್ಯನಂದನಪ್ರಿಯೋದರೇ** ವಿಚಿತ್ರವೀರ್ಯನ ಮಗನಾದ ಧೃತರಾಷ್ಟ್ರನ ಹೆಂಡತಿ ಗಾಂಧಾರಿಯ ಉದರದಲ್ಲಿ; **ಗರ್ಭಗಾಃ** ಗರ್ಭವಾಸುವುಳ್ಳವರು **ಬಭೂವುಃ** ಆದರು.

**ತಾತ್ಪರ್ಯ** :- ಅದೇ ಸಮಯದಲ್ಲಿ ಕಲಿ, ಇಂದ್ರಜಿತ್ ಮೊದಲಾದ ದೈತ್ಯರು ಧೃತರಾಷ್ಟ್ರನ ಹೆಂಡತಿ ಗಾಂಧಾರಿಯ ಗರ್ಭದಲ್ಲಿ ಬಂದು ವಾಸಿಸಿದರು.

**ತದಾಸ್ಯ ಸೋಽನುಜೋಽಶ್ರುಣೋನ್ಮುನೀಂದ್ರಭಾಷಿತಂ ಚ ತತ್ ।**
**ವಿಚಾರ್ಯ ಚ ಪ್ರಿಯಾಮಿದಂ ಜಗಾದ ವಾಸುದೇವಧೀಃ ॥ ೨೦ ॥**

**ಪದಚ್ಛೇದ** : ತದಾ ಅಸ್ಯ ಸಃ ಅನುಜಃ ಅಶ್ರುಣೋತ್ ಮುನೀಂದ್ರಭಾಷಿತಂ ಚ ತತ್ ವಿಚಾರ್ಯ ಚ ಪ್ರಿಯಾಂ ಇದಂ ಜಗಾದ, ವಾಸುದೇವಧೀಃ.

**ಅರ್ಥ** :- **ತದಾ** ಅದೇ ಕಾಲದಲ್ಲಿ **ಅಸ್ಯ** ಈ ಧೃತರಾಷ್ಟ್ರನ **ಅನುಜಃ** ತಮ್ಮನಾದ **ವಾಸುದೇವಧೀಃ** ಪರಮಾತ್ಮನಲ್ಲಿ ಆಸಕ್ತವಾದ ಬುದ್ಧಿಯುಳ್ಳ **ಸಃ ಚ** ಆ ಪಾಂಡವಾದರೂ **ಮುನೀಂದ್ರಭಾಷಿತಂ** ಮುನಿಶ್ರೇಷ್ಠರಿಂದ ಹೇಳಲ್ಪಟ್ಟದ್ದನ್ನು **ಅಶ್ರುಣೋತ್** ಕೇಳಿದನು. **ಚ** ಮತ್ತು **ತತ್** ಆ ವಿಷಯವನ್ನು **ವಿಚಾರ್ಯ** ವಿಮರ್ಶಿಸಿ **ಪ್ರಿಯಾಂ** ಹೆಂಡತಿಯಾದ ಕುಂತಿಗೆ **ಇದಂ** ಈ ಮಾತನ್ನು **ಜಗಾದ** ಆಡಿದನು.

**ತಾತ್ಪರ್ಯ** :- ಪಾಂಡುರಾಜನಿಗೆ ಹಸ್ತಿನಾವತಿಯಿಂದ ಬಂದ ಮುನಿಗಳು ಗಾಂಧಾರಿಯ ಗರ್ಭದಲ್ಲಿ ಕಲಿಯೇ ಮೊದಲಾದವರು ವಾಸಿಸುತ್ತಿರುವ ವಿಚಾರವನ್ನು ಹೇಳಿದರು. ಆಗ ಪರಮಾತ್ಮನಲ್ಲೇ ಆಸಕ್ತನಾದ ಪಾಂಡುವು ಗಾಂಧಾರಿಯು ಗರ್ಭವತಿಯಾದ ವಿಚಾರವನ್ನು ಕೇಳಿ ಹಾಗು ಮುನಿಗಳು ಹೇಳಿದಂತೆ ಪುತ್ರೋತ್ಪತ್ತಿಗಾಗಿಯೇ ಹುಟ್ಟಿದ ತನಗೆ ಮಕ್ಕಳಿಲ್ಲದೇ ಸದ್ಗತಿಯಿಲ್ಲ ವೆಂಬುದನ್ನೂ ವಿಮರ್ಶಿಸಿ ತನ್ನ ಹೆಂಡತಿಯಾದ ಕುಂತಿಗೆ ಈ ಮಾತನ್ನು ಹೇಳಿದನು.

**ಯ ಏವ ಮದ್ಗುಣಾಧಿಕಸ್ತತಃ ಸುತಂ ಸಮಾಪ್ನುಹಿ ।**
**ಸುತಂ ವಿನಾ ನ ನೋ ಗತಿಂ ಶುಭಾಂ ವದಂತಿ ಸಾಧವಃ ॥ ೨೧ ॥**

ಪದಚ್ಛೇದ : **ಯಃ ಏವ ಮದ್ಗುಣಾಧಿಕಃ ತತಃ ಸುತಂ ಸಮಾಪ್ನುಹಿ ಸುತಂ ವಿನಾ ನ, ನಃ ಗತಿಂ ಶುಭಾಂ ವದಂತಿ ಸಾಧವಃ**

**ಅರ್ಥ** :- **ಸಾಧವಃ** ಸಾತ್ತ್ವಿಕರಾದ ಈ ಮುನಿಗಳು **ಸುತಂ** ಮಕ್ಕಳ **ವಿನಾ** ಇಲ್ಲದೇ **ನಃ** ನಮಗೆ **ಶುಭಾಂ** ಮಂಗಳಕರವಾದ **ಗತಿಂ** ಗತಿಯನ್ನು **ನ (ಇತಿ) ವದಂತಿ** ಇಲ್ಲವೆಂದು ಹೇಳುತ್ತಿದ್ದಾರೆ **(ಅತಃ)** ಆದ್ದರಿಂದ **ಯಃ ಏವ** ಯಾರು ತಾನೇ **ಮದ್ಗುಣಾಧಿಕಃ** ಗುಣಗಳಲ್ಲಿ ನನಗಿಂತಲೂ ಅಧಿಕನಿದ್ದಾನೋ **ತತಃ** ಅವನಿಂದ **ಸುತಂ** ಮಗನನ್ನು **ಸಮಾಪ್ನುಹಿ** ಪಡೆ.

**ತಾತ್ಪರ್ಯ** :- ''ಮಕ್ಕಳಿಲ್ಲದೇ ನಮಗೆ ಸದ್ಗತಿಯಿಲ್ಲವೆಂದು ಈ ಮುನಿಗಳು ಹೇಳುತ್ತಿದ್ದಾರೆ. ಆದ್ದರಿಂದ ಗುಣಗಳಲ್ಲಿ ನನಗಿಂತಲೂ ಉತ್ತಮನಾದವನಿಂದ ನೀನು ಮಗುವನ್ನು ಪಡೆ''.

ತದಸ್ಯ ಕೃಚ್ಛ್ರತೋ ವಚಂ ಪೃಥಾऽಗ್ರಹೀಜ್ಜಗಾದ ಚ ।
ಮಮಾಸ್ತಿ ದೇವವಶ್ಯದೋ ಮನೂತ್ತಮಃ ಸುತಾಪ್ತಿದಃ ॥ ೨೨ ॥

ಪದಚ್ಛೇದ : ತತ್ ಅಸ್ಯ ಕೃಚ್ಛ್ರತಃ ವಚಃ ಪೃಥಾ ಅಗ್ರಹೀತ್ ಜಗಾದ ಚ ಮಮ ಅಸ್ತಿ ದೇವವಶ್ಯದಃ ಮನೂತ್ತಮಃ ಸುತಾಪ್ತಿದಃ.

**ಅರ್ಥ** :- **ಪೃಥಾ** ಕುಂತಿದೇವಿಯು **ಅಸ್ಯ** ಈ ಪಾಂಡುರಾಜನ **ತತ್** ಅಂತಹ **ವಚಃ** ಮಾತನ್ನು **ಕೃಚ್ಛ್ರಾತ್** ಕಷ್ಟದಿಂದ **ಅಗ್ರಹೀತ್** ಒಪ್ಪಿದಳು **ಚ** ಮತ್ತು **ಜಗಾದ** ಹೇಳಿದಳು. **ಮಮ** ನನ್ನ ಬಳಿ **ದೇವವಶ್ಯದಃ** ದೇವತೆಗಳನ್ನು ವಶೀಕರಿಸಿಕೊಳ್ಳುವ **ಸುತಾಪ್ತಿದಃ** ಮಕ್ಕಳನ್ನು ಕೊಡುವ **ಮನೂತ್ತಮಃ** ಶ್ರೇಷ್ಠವಾದ ಮಂತ್ರವು **ಅಸ್ತಿ** ಇದೆ.

**ತಾತ್ಪರ್ಯ** :- ನಿಯೋಗಪದ್ಧತಿಯಿಂದ ಮಕ್ಕಳನ್ನು ಪಡೆಯುವ ಪಾಂಡು ರಾಜನ ಮಾತನ್ನು ಕುಂತಿಯು ಕಷ್ಟದಿಂದ ಒಪ್ಪಿದಳು. ನಂತರ ಪಾಂಡು ರಾಜನಿಗೆ ಹೇಳಿದಳು – "ದೇವತೆಗಳನ್ನು ವಶೀಕರಿಸಿಕೊಳ್ಳುವ ಹಾಗು ಮಕ್ಕಳನ್ನು ಕೊಡುವ ಉತ್ತಮವಾದ ಮಂತ್ರವೊಂದು ನನ್ನ ಬಳಿ ಇದೆ."

ನ ತೇ ಸುರಾನ್ಋತೇ ಸಮಃ ಸುರೇಷು ಕೇಚಿದೇವ ಚ ।
ಅತಸ್ತವಾಧಿಕಂ ಸುರಂ ಕಮಾಹ್ವಯೇ ತ್ವದಾಜ್ಞಯಾ ॥ ೨೩ ॥

ಪದಚ್ಛೇದ : ನ ತೇ ಸುರಾನ್ ಋತೇ ಸಮಃ ಸುರೇಷು ಕೇಚಿತ್ ಏವ ಚ ಅತಃ ತವ ಅಧಿಕಂ ಸುರಂ ಕಂ ಆಹ್ವಯೇ ತ್ವದಾಜ್ಞಯಾ.

**ಅರ್ಥ** :- **ಸುರಾನ್** ದೇವತೆಗಳನ್ನು **ಋತೇ** ಬಿಟ್ಟು **ತೇ** ನಿನಗೆ **ಸಮಃ** ಸಮನಾದವನು **ನ (ಅಸ್ತಿ)** ಯಾರೂ ಇಲ್ಲ **ಚ** ಹಾಗು **ಸುರೇಷು** ದೇವತೆಗಳಲ್ಲೂ **ಕೇಚಿತ್ ಏವ** ಕೆಲವರಷ್ಟೇ (ನಿನಗಿಂತ ಉತ್ತಮರಿದ್ದಾರೆ) **ಅತಃ** ಆದ್ದರಿಂದ **ತ್ವದಾಜ್ಞಯಾ** ನಿನ್ನ ಅಪ್ಪಣೆಯಿಂದ **ತವಾಧಿಕಂ** ನಿನಗಿಂತಲೂ ಉತ್ತಮನಾದ **ಕಂ** ಯಾವ **ಸುರಂ** ದೇವತೆಯನ್ನು **ಆಹ್ವಯೇ** ಆಹ್ವಾನಿಸಲಿ.

**ತಾತ್ಪರ್ಯ** :- ಕುಂತಿಯು ಪಾಂಡುರಾಜನಿಗೆ ಹೇಳುತ್ತಿದ್ದಾಳೆ – ನಿನಗಿಂತ ಉತ್ತಮರಾದವರು ದೇವತೆಗಳನ್ನು ಬಿಟ್ಟರೆ ಮನುಷ್ಯರಲ್ಲಿ ಯಾರೂ ಇಲ್ಲ. ದೇವತೆಗಳಲ್ಲೂ ಕೂಡ ಕೆಲವರಷ್ಟೇ ಇದ್ದಾರೆ. ಆದ್ದರಿಂದ ನಿನ್ನ ಅಪ್ಪಣೆಗೆ

ಅನುಸಾರವಾಗಿ ನಿನಗಿಂತ ಉತ್ತಮನಾದ ಯಾವ ದೇವತೆಯನ್ನು ಆಹ್ವಾನಿಸಲಿ?''

**ವರಂ ಸಮಾಶ್ರಿತಾ ಪತಿಂ ವ್ರಜೇತ ಯಾ ತತೋಽಧಮಮ್ ।**
**ನ ಕಾಚಿದಸ್ತಿ ನಿಷ್ಕೃತಿರ್ನ ಭರ್ತೃಲೋಕಮೃಚ್ಛತಿ ॥ ೨೪ ॥**

ಪದಚ್ಛೇದ : ವರಂ ಸಮಾಶ್ರಿತಾ ಪತಿಂ ವ್ರಜೇತ ಯಾ ತತಃ ಅಧಮಮ್ ನ ಕಾಚಿತ್ ಅಸ್ತಿ ನಿಷ್ಕೃತಿಃ ನ ಭರ್ತೃಲೋಕಂ ಋಚ್ಛತಿ

**ಅರ್ಥ** :- **ವರಂ** ಶ್ರೇಷ್ಠನಾದ **ಪತಿಂ** ಗಂಡನನ್ನು **ಸಮಾಶ್ರಿತಾ** ಆಶ್ರಯಿಸಿದ **ಯಾ** ಯಾವ ಹೆಂಡತಿಯು **ತತಃ** ಆ ಗಂಡನಿಗಿಂತ **ಅಧಮಂ** ನೀಚನಾದವನನ್ನು **ವ್ರಜೇತ** ಸೇರಿದರೆ (**ತಸ್ಯಾಃ**) ಅವಳಿಗೆ **ಕಾಚಿತ್** ಯಾವ ರೀತಿಯ **ನಿಷ್ಕೃತಿಃ** ಪ್ರಾಯಶ್ಚಿತ್ತವು; **ನ** (**ಅಸ್ತಿ**) ಇಲ್ಲ (**ಸಾ**) ಅವಳು **ಭರ್ತೃಲೋಕಂ** ಪತಿಲೋಕವನ್ನು **ನ ಋಚ್ಛತಿ** ಹೊಂದುವುದಿಲ್ಲ.

**ತಾತ್ಪರ್ಯ** :- ಉತ್ತಮನಾದ ಗಂಡನನ್ನು ಪಡೆದವಳು ಗಂಡನಿಗಿಂತ ನೀಚನಾದವನ ಸಂಗವನ್ನು ಮಾಡಬಾರದು. ಹಾಗೆ ಮಾಡಿದಲ್ಲಿ ಅವಳಿಗೆ ಪ್ರಾಯಶ್ಚಿತ್ತವೇ ಇಲ್ಲ. ಅಂತಹವಳು ಗಂಡನು ಪಡೆಯುವ ಲೋಕವನ್ನು ಪಡೆಯುವುದಿಲ್ಲ.

**ಕೃತೇ ಪುರಾ ಸುರಾಸ್ತಥಾ ಸುರಾಂಗನಾಶ್ಚ ಕೇವಲಮ್ ।**
**ನಿಮಿತ್ತತೋಽಪಿ ತಾಃ ಕ್ವಚಿನ್ನ ತಾನ್ ವಿಹಾಯ ರೇಮಿರೇ ॥ ೨೫ ॥**

ಪದಚ್ಛೇದ : ಕೃತೇ ಪುರಾ ಸುರಾಃ ತಥಾ ಸುರಾಂಗನಾಃ ಚ ಕೇವಲಂ ನಿಮಿತ್ತತಃ ಅಪಿ ತಾಃ ಕ್ವಚಿತ್ ನ ತಾನ್ ವಿಹಾಯ ರೇಮಿರೇ.

**ಅರ್ಥ** :- **ಪುರಾ** ಹಿಂದೆ **ಕೃತೇ** ಕೃತಯುಗದಲ್ಲಿ **ಸುರಾಃ** ದೇವತೆಗಳು **ಚ** ಮತ್ತು **ಸುರಾಂಗನಾಃ** ದೇವತೆಗಳ ಹೆಂಡತಿಯರು **ಕೇವಲಂ** ಮುಖ್ಯವಾಗಿ **ತಥಾ** ಹಾಗೆಯೇ **ನಿಮಿತ್ತತಃ ಅಪಿ** ಯಾವುದಾದರೂ ನಿಮಿತ್ತದಿಂದಾಗಲೀ **ತಾಃ** – ತಮ್ಮ ಹೆಂಡತಿಯನ್ನು **ತಾನ್** ತಮ್ಮ ಗಂಡಂದಿರನ್ನು **ವಿಹಾಯ** ಬಿಟ್ಟು **ನ ರೇಮಿರೇ** ರಮಿಸಲಿಲ್ಲ.

**ತಾತ್ಪರ್ಯ** :- ಹಿಂದೆ ಕೃತಯುಗದಲ್ಲಿ ದೇವತೆಗಳು ಕಾರಣವಿಲ್ಲದೇ ಆಗಲೀ ಅಥವಾ ಕಾರಣವಿದ್ದಾಗಲೀ ತಮ್ಮ ನಿಯತರಾದ ಹೆಂಡತಿಯರನ್ನು ಬಿಟ್ಟು ಇತರರೊಂದಿಗೆ ರಮಿಸಲಿಲ್ಲ. ಹಾಗೆಯೇ ದೇವತಾಸ್ತ್ರೀಯರೂ ಕೂಡ ಕಾರಣವಿಲ್ಲದೇ ಆಗಲೀ ಅಥವಾ ಕಾರಣವಿದ್ದಾಗಲೀ ತಮ್ಮ ನಿಯತರಾದ ಗಂಡಂದಿರನ್ನು ಬಿಟ್ಟು ಬೇರೊಬ್ಬರೊಂದಿಗೆ ರಮಿಸಲಿಲ್ಲ.

**ಮನೋವಚಶ್ಶರೀರತೋ ಯತೋ ಹಿ ತಾಃ ಪತಿವ್ರತಾಃ ।**
**ಅನಾದಿಕಾಲತೋಽಭವಂಸ್ತತಃ ಸಭರ್ತೃಕಾಃ ಸದಾ ॥ ೨೬ ॥**

ಪದಚ್ಛೇದ :ಮನೋವಚಶ್ಶರೀರತಃ ಯತಃ ಹಿ ತಾಃ ಪತಿವ್ರತಾಃ ಅನಾದಿಕಾಲತಃ ಅಭವನ್ ತತಃ ಸಭರ್ತೃಕಾಃ ಸದಾ.

**ಅರ್ಥ** :- **ಯತಃ** ಯಾವ ಕಾರಣದಿಂದ **ತಾಃ** ಆ ದೇವತಾಸ್ತ್ರೀಯರು **ಅನಾದಿಕಾಲತಃ** ಅನಾದಿಕಾಲದಿಂದ **ಮನೋವಚಶ್ಶರೀರತಃ** ಮನಸ್ಸು ವಾಕ್ ಶರೀರಗಳಿಂದ **ಪತಿವ್ರತಾಃ** ಪತಿಯಲ್ಲಿ ಆಸಕ್ತರಾದವರು ಆಗಿದ್ದರು **ತತಃ** ಆದ್ದರಿಂದ ಸದಾ ಯಾವಾಗಲೂ **ಸಭರ್ತೃಕಾಃ** ಗಂಡನಿಂದ ಸಹಿತರಾದವರು **ಅಭವನ್** ಆಗಿದ್ದರು. **ಹಿ** (ಇದು) ಪ್ರಸಿದ್ಧವು.

**ತಾತ್ಪರ್ಯ** :- ದೇವತಾಸ್ತ್ರೀಯರು ಅನಾದಿಕಾಲದಿಂದ ಮನಸ್ಸು ವಾಕ್ ಶರೀರಗಳಿಂದ ಪತಿಯಲ್ಲಿಯೇ ನಿಷ್ಠರಾಗಿದ್ದರು. ಅದ್ದರಿಂದ ಯಾವಾಗಲೂ ಗಂಡನೊಂದಿಗೇ ಇರುವವರಾಗಿದ್ದರು.

**ಸ್ವಭರ್ತೃಭಿರ್ವಿಮುಕ್ತಿಗಾಃ ಸಹೈವ ತಾ ಭವಂತಿ ಹಿ ।**
**ಕೃತಾಂತಮಾಪ್ಯ ಚಾಪ್ಸರಸ್ತ್ರಿಯೋ ಬಭೂವುರೂರ್ಜಿತಾಃ ॥ ೨೭ ॥**

ಪದಚ್ಛೇದ : ಸ್ವಭರ್ತೃಭಿಃ ವಿಮುಕ್ತಿಗಾಃ ಸಹ ಏವ ತಾಃ ಭವಂತಿ, ಹಿ ಕೃತಾಂತಂ ಆಪ್ಯ ಚ ಅಪ್ಸರಸ್ತ್ರಿಯಃ ಬಭೂವುಃ ಊರ್ಜಿತಾಃ

**ಅರ್ಥ** :- **ತಾಃ** ಆ ದೇವತಾಸ್ತ್ರೀಯರು **ಸ್ವಭರ್ತೃಭಿಃ** ತಮ್ಮ ಗಂಡಂದಿರಿಂದ **ಸಹ ಏವ** ಕೂಡಿಕೊಂಡೇ **ವಿಮುಕ್ತಿಗಾಃ** ಮೋಕ್ಷಕ್ಕೆ ಹೋಗುವವರು **ಭವಂತಿ** ಆಗುತ್ತಾರೆ **ಹಿ** (ಇದು) ಪ್ರಸಿದ್ಧವು **ಚ** ಮತ್ತು **ಕೃತಾಂತಂ** ಕೃತಯುಗದ ಕೊನೆಯನ್ನು **ಆಪ್ಯ** ಹೊಂದಿ **ಅಪ್ಸರಸ್ತ್ರಿಯಃ** ಅಪ್ಸರಸೆಯರು **ಬಭೂವುಃ** ಹುಟ್ಟಿದರು.

**ತಾತ್ಪರ್ಯ** :- ಪ್ರತಿನಿಷ್ಠರಾದ ಆ ಸುರಾಂಗನೆಯರು ತಮ್ಮ ತಮ್ಮ ಗಂಡಂದಿರೊಂದಿಗೆ ಮೋಕ್ಷವನ್ನು ಪಡೆಯುತ್ತಾರೆ. ಕೃತಯುಗವು ಮುಗಿದ ನಂತರ ಅಪ್ಸರಸೆಯರು ಹುಟ್ಟುತ್ತಾರೆ.

**ಅನಾವೃತಾಶ್ಚ ತಾಸ್ತಥಾ ಯಥೇಷ್ಟಭರ್ತೃಕಾಃ ಸದಾ ।**
**ಅತಸ್ತು ತಾ ನ ಭರ್ತೃಭಿರ್ವಿಮುಕ್ತಿಮಾಪುರುತ್ತಮಾಮ್ ॥ ೨೮ ॥**

ಪದಚ್ಛೇದ : ಅನಾವೃತಾಃ ಚ ತಾಃ ತಥಾ ಯಥೇಷ್ಟಭರ್ತೃಕಾಃ ಸದಾ ಅತಃ ತು ತಾಃ ನ ಭರ್ತೃಭಿಃ ವಿಮುಕ್ತಿಂ ಅಪುಃ ಉತ್ತಮಾಮ್.

**ಅರ್ಥ** :- **ತಾಃ ಚ** ಆ ಅಪ್ಸರಸೆಯರಾದರೂ **ಅನಾವೃತಾಃ** ಯಾರಿಂದಲೂ ವರಿಸಲ್ಪಡದೆ **ತಥಾ** ನಿಯತ ಗಂಡಂದಿರಿಲ್ಲದೇ **ಸದಾ** ಯಾವಾಗಲೂ **ಯಥೇಷ್ಟಭರ್ತೃಕಾಃ** ಬಯಸಿದವರನ್ನು ಗಂಡಂದಿರಾಗಿ ಉಳ್ಳವರು **ಬಭೂವುಃ** ಆದರು. **ಅತಃ** ಆದ್ದರಿಂದ **ತಾಃ ತು** ಆ ಅಪ್ಸರಸೆಯರು **ಭರ್ತೃಭಿಃ** ಗಂಡಂದಿರಿಂದ (ಕೂಡಿಕೊಂಡು) **ಉತ್ತಮಾಂ** ಉತ್ಕೃಷ್ಟವಾದ **ವಿಮುಕ್ತಿಂ** ಮೋಕ್ಷವನ್ನು **ನ ಆಪುಃ** ಹೊಂದುವುದಿಲ್ಲ.

**ತಾತ್ಪರ್ಯ** :- ಅಪ್ಸರಸೆಯರಿಗೆ ಇತರ ದೇವತಾಂಗನೆಗಳಿಗಿರುವಂತೆ ನಿಯತರಾದ ಪತಿಯು ಇರುವುದಿಲ್ಲ. ಅವರು ಯಾರಿಂದಲೂ ವರಿಸಲ್ಪಡುವುದಿಲ್ಲ. ತಾವು ಆ ಆ ಕಾಲಕ್ಕೆ ಬಯಸಿದವರನ್ನೇ ಗಂಡಂದಿರನ್ನಾಗಿ ಹೊಂದಿರುತ್ತಾರೆ. ಹೀಗೆ ನಿಯತಪತಿಗಳು ಅವರಿಗೆ ಇಲ್ಲವಾದ್ದರಿಂದ ಗಂಡನೊಂದಿಗೆ ಅವರು ಮೋಕ್ಷವನ್ನು ಹೊಂದುವುದಿಲ್ಲ.

**ಸುರಸ್ತ್ರಿಯೋಽತಿಕಾರಣ್ಯೈರ್ಯದಾನ್ಯಥಾ ಸ್ಥಿತಾಸ್ತದಾ ।**
**ದುರನ್ವಯಾಃ ಸುದುಃಸಹಾ ವಿಪತ್ ತತೋ ಭವಿಷ್ಯತಿ ॥ ೨೯ ॥**

ಪದಚ್ಛೇದ : ಸುರಸ್ತ್ರಿಯಃ ಅತಿಕಾರಣ್ಯೈಃ ಯದಾ ಅನ್ಯಥಾ ಸ್ಥಿತಾಃ ತದಾ ದುರನ್ವಯಾಃ ಸುದುಃಸಹಾಃ ವಿಪತ್ ತತ್ ಭವಿಷ್ಯತಿ.

**ಅರ್ಥ** :- **ಯದಾ** ಯಾವಾಗ **ಸುರಸ್ತ್ರಿಯಃ** ದೇವತಾಸ್ತ್ರೀಯರು **ಅತಿಕಾರಣ್ಯೈಃ** ಶಾಪವೇ ಮೊದಲಾದ ಪ್ರಬಲಕಾರಣಗಳಿಂದ **ಅನ್ಯಥಾ ಸ್ಥಿತಾಃ** ಗಂಡನನ್ನು ಬಿಟ್ಟು ಇತರರೊಂದಿಗೆ ಸಂಗ ಮಾಡಿರುತ್ತಾರೋ **ತದಾ** ಆಗ **ತತಃ**

ಆದರಿಂದ **ದುರನ್ವಯಾ** ದುಃಖಪ್ರದವಾದ **ಸುದುಃಸಹಾ** ಸಹಿಸಲು ಅಶಕ್ಯವಾದ **ವಿಪತ್** ವಿಪತ್ತು **ಭವಿಷ್ಯತಿ** ಆಗುತ್ತದೆ.

**ತಾತ್ಪರ್ಯ** :- ತಾರಾ ಮೊದಲಾದವರು ಅನ್ಯಪುರುಷನ ಸಂಪರ್ಕ ಮಾಡಿರುವುದರಿಂದ ಅವರಿಗುಂಟಾಗುವ ಅನರ್ಥವನ್ನು ಇಲ್ಲಿ ಹೇಳುತ್ತಿದ್ದಾರೆ – ಒಂದು ವೇಳೆ ದೇವತಾಸ್ತ್ರೀಯರು ತಮ್ಮ ಪ್ರಾರಬ್ಧಕರ್ಮಕ್ಕೆ ಅನುಗುಣವಾಗಿ ಬರುವ ಶಾಪವೇ ಮೊದಲಾದ ಪ್ರಬಲಕಾರಣಗಳಿಂದ ಅನ್ಯಪುರುಷರ ಸಂಪರ್ಕವನ್ನು ಮಾಡಿದರೆ ಅವರಿಗೆ ಸಹಿಸಲು ಅಶಕ್ಯವಾದಂತಹ ಬಹುಕಾಲ ತಮ್ಮ ನಿಯತಪತಿಯೊಂದಿಗೆ ಸಂಬಂಧವಿಲ್ಲದಂತಹ ವಿಪತ್ತು ಉಂಟಾಗುತ್ತದೆ.

**ಅಯುಕ್ತಮುಕ್ತವಾಂಸ್ತತೋ ಭವಾಂಸ್ತಥಾಪಿ ತೇ ವಚಃ ।**
**ಅಲಂಘ್ಯಮೇವ ಮೇ ತತೋ ವದಸ್ವ ಪುತ್ರದಂ ಸುರಮ್ ॥ ೩೦ ॥**

ಪದಚ್ಛೇದ : **ಅಯುಕ್ತಂ ಉಕ್ತವಾನ್ ತತಃ ಭವಾನ್ ತಥಾ ಅಪಿ ತೇ ವಚಃ ಅಲಂಘ್ಯಂ ಏವ ಮೇ ತತಃ ವದಸ್ವ ಪುತ್ರದಂ ಸುರಮ್.**

**ಅರ್ಥ** :- **ತತಃ** ಆದ್ದರಿಂದ **ಭವಾನ್** ನೀನು **ಅಯುಕ್ತಂ** ಅಯುಕ್ತವಾದದ್ದನ್ನು **ಉಕ್ತವಾನ್** ಹೇಳಿದ್ದೀಯ. **ತಥಾಪಿ** ಆದರೂ ಕೂಡ **ತೇ** ನಿನ್ನ **ವಚಃ** ಮಾತು **ಮೇ** ನನಗೆ **ಅಲಂಘ್ಯಂ** ಏವ ಮೀರಲು ಅಯೋಗ್ಯವಾದದ್ದೇ **ತತಃ** ಆದ್ದರಿಂದ **ಪುತ್ರದಂ** ಮಗನನ್ನು ಕೊಡುವ **ಸುರಂ** ದೇವತೆಯನ್ನು **ವದಸ್ವ** ಹೇಳು.

**ತಾತ್ಪರ್ಯ** :- ಹಿಂದೆ ಹೇಳಿದ ಕಾರಣದಿಂದ ನಿಯೋಗಪದ್ಧತಿಯಿಂದ ಮಕ್ಕಳನ್ನು ಪಡೆಯಲು ನೀನು ಹೇಳಿದ ಮಾತು ಅಯುಕ್ತವಾದದ್ದೇ ಆದರೂ ನಾನು ನಿನ್ಮಾತು ಮೀರುವಂತಿಲ್ಲ. ಆದ್ದರಿಂದ ಮಗನನ್ನು ಕೊಡುವ ದೇವತೆಯನ್ನು ಹೇಳು.

**ಇತೀರಿತೋಽಬ್ರವೀನ್ನೃಪೋ ನ ಧರ್ಮತೋ ವಿನಾ ಭುವಃ ।**
**ನೃಪೋಽಭಿರಕ್ಷಿತಾ ಭವೇತ್ ತದಾಹ್ವಯಾಽಶು ತಂ ವಿಭುಮ್ ॥ ೩೧ ॥**

ಪದಚ್ಛೇದ :**ಇತಿ ಈರಿತಃ ಅಬ್ರವೀತ್ ನೃಪಃ ನ ಧರ್ಮತಃ ವಿನಾ ಭುವಃ ನೃಪಃ ಅಭಿರಕ್ಷಿತಾ ಭವೇತ್ ತತ್ ಆಹ್ವಯ ಆಶು ತಂ ವಿಭುಮ್**

**ಅರ್ಥ** :- **ಇತಿ** ಈ ರೀತಿಯಾಗಿ **ಈರಿತಃ** ಹೇಳಲ್ಪಟ್ಟ **ನೃಪಃ** ಪಾಂಡು ರಾಜನು **ಅಬ್ರವೀತ್** ಮಾತನಾಡಿದನು **ಧರ್ಮತಃ** ಧರ್ಮವು ವಿನಾ ಇಲ್ಲದೇ **ಭುವಃ** ಭೂಮಿಗೆ **ನೃಪಃ** ರಾಜನು **ಅಭಿರಕ್ಷಿತಾ** ರಕ್ಷಕನು **ನ ಭವೇತ್** ಆಗಲಾರನು **ತತ್** ಆದ್ದರಿಂದ **ಆಶು** ಶೀಘ್ರವಾಗಿ **ತಂ** ಆ **ವಿಭುಂ** ಸಮರ್ಥ ನಾದ ಧರ್ಮನನ್ನು **ಆಹ್ವಯ** ಆಹ್ವಾನಿಸು.

**ತಾತ್ಪರ್ಯ** :- ಈ ರೀತಿಯಾಗಿ ಕುಂತಿಯು ಹೇಳಿದ ನಂತರ ಪಾಂಡು ರಾಜನು ಹೇಳಿದನು - ಧರ್ಮವಿಲ್ಲದೇ ಕೇವಲ ರಾಜನು ಭೂಮಿಯನ್ನು ರಕ್ಷಿಸಲಾರನು. ಆದ್ದರಿಂದ ಪುತ್ರದಾನ ಮಾಡಲು ಸಮರ್ಥನಾದ ಆ ಯಮಧರ್ಮನನ್ನು ತಡಮಾಡದೇ ಆಹ್ವಾನಿಸು.

**ಸ ಧರ್ಮಜಃ ಸುಧಾರ್ಮಿಕೋ ಭವೇದ್ಧಿ ಸೂನುರುತ್ತಮಃ ।**
**ಇತೀರಿತೇ ತಯಾ ಯಮಃ ಸಮಾಹುತೋऽಗಮದ್ ದ್ರುತಮ್ ॥ ೩೨ ॥**

ಪದಚ್ಛೇದ :ಸಃ ಧರ್ಮಜಃ ಸುಧಾರ್ಮಿಕಃ ಭವೇತ್ ಹಿ ಸನುಃ ಉತ್ತಮಃ ಇತಿ ಈರಿತೇ ತಯಾ ಯಮಃ ಸಮಾಹುತಃ ಅಗಮತ್ ದ್ರುತಮ್.

**ಅರ್ಥ** :- **ಧರ್ಮಜಃ** ಯಮಧರ್ಮನಿಂದ ಹುಟ್ಟುವ **ಸಃ** ಆ **ಉತ್ತಮಃ** ಉತ್ತಮನಾದ **ಸೂನುಃ** ಮಗನು **ಸುಧಾರ್ಮಿಕಃ** ಒಳ್ಳೆಯ ಧಾರ್ಮಿಕನು **ಭವೇತ್** ಆಗುತ್ತಾನೆ **ಹಿ** ನಿಶ್ಚಯವು **ಇತಿ** ಈ ರೀತಿಯಾಗಿ **ಈರಿತೇ ಸತಿ** ಹೇಳಲ್ಪಡಲು **ತಯಾ** ಆ ಕುಂತಿಯಿಂದ **ಸಮಾಹುತಃ** ಆಹ್ವಾನಿಸಲ್ಪಟ್ಟ **ಯಮಃ** ಯಮನು **ದ್ರುತಂ** ಶೀಘ್ರವಾಗಿ **ಅಗಮತ್** ಬಂದನು.

**ತಾತ್ಪರ್ಯ** :- ''ಯಮಧರ್ಮನಿಂದ ಹುಟ್ಟುವ ಮಗನು ಧರ್ಮಬುದ್ಧಿ ಯುಳ್ಳವನಾಗಿರುತ್ತಾನೆ ಆದ್ದರಿಂದ ಯಮಧರ್ಮನನ್ನು ಆಹ್ವಾನಿಸು'' ಈ ರೀತಿಯಾಗಿ ಪಾಂಡುರಾಜನು ಹೇಳಲು ಕುಂತಿಯು ಮಂತ್ರವನ್ನು ಜಪಿಸಿ ಯಮಧರ್ಮನನ್ನು ಕರೆದಳು. ಯಮನು ತಡಮಾಡದೆ ಬಂದನು.

**ತತಶ್ಚ ಸದ್ಯ ಏವ ಸಾ ಸುಷಾವ ಪುತ್ರಮುತ್ತಮಮ್ ।**
**ಯುಧಿಷ್ಠಿರಂ ಯಮೋ ಹಿ ಸ ಪ್ರಪೇದ ಆತ್ಮಪುತ್ರತಾಮ್ ॥ ೩೩ ॥**

ಪದಚ್ಛೇದ : ತತಃ ಚ ಸದ್ಯಃ ಏವ ಸಾ ಸುಷಾವ ಪುತ್ರಂ ಉತ್ತಮಂ ಯುಧಿಷ್ಠಿರಂ ಯಮಃ ಹಿ ಸಃ ಪ್ರಪೇದೇ ಆತ್ಮಪುತ್ರತಾಮ್.

**ಅರ್ಥ** :- **ತತಃ** ಆ ನಂತರ **ಸಾ ಚ** ಆ ಕುಂತಿಯಾದರೂ **ಸದ್ಯಃ ಏವ** ತತ್ಕ್ಷಣವೇ **ಉತ್ತಮಂ** ಉತ್ತಮನಾದ **ಪುತ್ರಂ** ಮಗನಾದ **ಯುಧಿಷ್ಠಿರಂ** ಯುಧಿಷ್ಠಿರನನ್ನು **ಸುಷಾವ** ಹಡೆದಳು **ಸಃ** ಆ **ಯಮಃ ಹಿ** ಯಮನೇ **ಆತ್ಮಪುತ್ರತಾಂ** ತನಗೆ ತಾನೆ ಪುತ್ರನಾಗುವಿಕೆಯನ್ನು **ಪ್ರಪೇದೇ** ಪಡೆದನು.

**ತಾತ್ಪರ್ಯ** :- ತತ್ಕ್ಷಣವೇ ಕುಂತಿಯು ಉತ್ತಮನಾದ ಯುಧಿಷ್ಠಿರನನ್ನು ಹಡೆದಳು. ಯಮನು ತಾನೇ ತನ್ನ ಮಗನಾಗಿ ಹುಟ್ಟಿದನು.

**ಯಮೇ ಸುತೇ ತು ಕುಂತಿತಃ ಪ್ರಜಾತ ಏವ ಸೌಬಲೀ ।**
**ಅದಹ್ಯತೇರ್ಷ್ಯಯಾಚಿರಂ ಬಭಂಜ ಗರ್ಭಮೇವ ಚ ॥ ೩೪ ॥**

ಪದಚ್ಛೇದ : ಯಮೇ ಸುತೇ ತು ಕುಂತಿತಃ ಪ್ರಜಾತಃ ಏವ ಸೌಬಲೀ ಅದಹ್ಯತ ಈರ್ಷ್ಯಯಾ ಅಚಿರಂ ಬಭಂಜ ಗರ್ಭಂ ಏವ ಚ.

**ಅರ್ಥ** :- **ಕುಂತಿತಃ** ಕುಂತಿಯಿಂದ **ಯಮೇ** ಯಮಸ್ವರೂಪಿಯಾದ **ಸುತೇ ತು** ಮಗನಾದರೂ **ಪ್ರಜಾತೇ (ಸತಿ) ಏವ** ಹುಟ್ಟುತ್ತಿರಲು **ಸೌಬಲೀ** ಸುಬಲನ ಮಗಳಾದ ಗಾಂಧಾರಿಯು **ಈರ್ಷ್ಯಯಾ** ಮಾತ್ಸರ್ಯದಿಂದ **ಅದಹ್ಯತ** ಬೆಂದಳು **ಚ** ಮತ್ತು **ಅಚಿರಂ** ಶೀಘ್ರವಾಗಿ **ಗರ್ಭಮೇವ** ತನ್ನ ಗರ್ಭವನ್ನೇ **ಬಭಂಜ** ಬಡಿದುಕೊಂಡಳು.

**ತಾತ್ಪರ್ಯ** :- ಕುಂತಿಗೆ ಯಮನೇ ಮಗನಾಗಿ ಹುಟ್ಟಿದ ಮೇಲೆ ಆ ವಿಷಯವನ್ನು ಕೇಳಿದ ಗಾಂಧಾರಿಯು ಹೊಟ್ಟೆ ಉರಿಯಿಂದ ಬೆಂದು ಹೋದಳು. ಮಾತ್ಸರ್ಯವನ್ನು ತಡೆಯಲಾರದೇ ಕೂಡಲೇ ಮುಷ್ಟಿಯಿಂದ ತನ್ನ ಗರ್ಭವನ್ನು ಜೋರಾಗಿ ಬಡಿದುಕೊಂಡಳು. ಗರ್ಭವು ಉದರದಿಂದ ಹೊರಕ್ಕೆ ಬಂದಿತು.

**ಸ್ವಗರ್ಭಪಾತನೇ ಕೃತೇ ತಯಾ ಜಗಾಮ ಕೇಶವಃ ।**
**ಪರಾಶರಾತ್ಮಜೋ ನ್ಯಧಾದ್ ಘಟೇಷು ತಾನ್ ವಿಭಾಗಶಃ ॥ ೩೫ ॥**

ಪದಚ್ಛೇದ : ಸ್ವಗರ್ಭಪಾತನೇ ಕೃತೇ ತಯಾ ಜಗಾಮ ಕೇಶವಃ ಪರಾಶರಾತ್ಮಜಃ ನ್ಯಧಾತ್ ಘಟೇಷು ತಾನ್ ವಿಭಾಗಶಃ.

**ಅರ್ಥ** :- **ತಯಾ** ಆ ಗಾಂಧಾರಿಯಿಂದ **ಸ್ವಗರ್ಭಪಾತನೇ** ತನ್ನ ಗರ್ಭಪಾತವು **ಕೃತೇ** (ಸತಿ) ಮಾಡಲ್ಪಡಲು **ಪರಾಶರಾತ್ಮಜಃ** ಪರಾಶರ ಋಷಿಗಳ ಮಗನಾದ **ಕೇಶವಃ** ಪರಮಾತ್ಮನಾದ ವೇದವ್ಯಾಸರು **ಜಗಾಮ** (ಅಲ್ಲಿಗೆ) ಹೋದರು. **ತಾನ್** ಆ ಗರ್ಭದ ತುಂಡುಗಳನ್ನು **ವಿಭಾಗಶಃ** ವಿಭಜಿಸಿ **ಘಟೇಷು** ಗಡಿಗೆಗಳಲ್ಲಿ **ನ್ಯಧಾತ್** ಇಟ್ಟರು.

**ತಾತ್ಪರ್ಯ** :- ಗಾಂಧಾರಿಯು ತಾನೇ ಗರ್ಭಪಾತವನ್ನು ಮಾಡಿಕೊಂಡ ನಂತರ ವೇದವ್ಯಾಸರು ಅಲ್ಲಿಗೆ ಬಂದರು. ಗರ್ಭದ ಎಲ್ಲ ತುಂಡುಗಳನ್ನು ವಿಭಜಿಸಿ ಗಡಿಗೆಗಳಲ್ಲಿ ಇರಿಸಿದರು.

**ಶತಾತ್ಮನಾ ವಿಭೇದಿತಾಃ ಶತಂ ಸುಯೋಧನಾದಯಃ ।**
**ಬಭೂವುರನ್ವಹಂ ತತಃ ಶತೋತ್ತರಾ ಚ ದುಶ್ಶಲಾ ॥ ೩೬ ॥**

ಪದಚ್ಛೇದ : ಶತಾತ್ಮನಾ ವಿಭೇದಿತಾಃ ಶತಂ ಸುಯೋಧನಾದಯಃ ಬಭೂವುಃ ಅನ್ವಹಂ ತತಃ ಶತೋತ್ತರಾ ಚ ದುಶ್ಶಲಾ.

**ಅರ್ಥ** :- **ಶತಾತ್ಮನಾ** ನೂರಾಗಿ **ವಿಭೇದಿತಾಃ** ವಿಭಜಿಸಲ್ಪಟ್ಟ **ಶತಂ** ನೂರುಜನ **ಸುಯೋಧನಾದಯಃ** ದುರ್ಯೋಧನ ಮೊದಲಾದವರು **ತತಃ** ಆ ಗಡಿಗೆಗಳಿಂದ **ಅನ್ವಹಂ** ಪ್ರತಿದಿನವೂ (ದಿನಕ್ಕೊಬ್ಬರು) **ಬಭೂವುಃ** ಹುಟ್ಟಿದರು. **ಚ** ಮತ್ತು **ಶತೋತ್ತರಂ** ನೂರುಜನದ ನಂತರ **ದುಶ್ಶಲಾ** ದುಶ್ಶಲೆಯು **(ಬಭೂವ)** ಹುಟ್ಟಿದಳು.

**ತಾತ್ಪರ್ಯ** :- ವೇದವ್ಯಾಸರು ಗರ್ಭಪಿಂಡವನ್ನು ನೂರು ವಿಭಾಗ ಮಾಡಿ ನೂರು ಗಡಿಗೆಗಳಲ್ಲಿ ಇರಿಸಿದ್ದರು. ದಿನಕ್ಕೊಬ್ಬರಂತೆ ಆ ಗಡಿಗೆಗಳಿಂದ ದುರ್ಯೋಧನ ಮೊದಲಾದವರು ಹುಟ್ಟಿದರು. ನೂರು ವಿಭಾಗ ಮಾಡಿದ ನಂತರ ಉಳಿದ ನೂರೊಂದನೇ ವಿಭಾಗದಿಂದ ದುಶ್ಶಲೆಯು ಹುಟ್ಟಿದಳು.

**ಸ ದೇವಕಾರ್ಯಸಿದ್ಧಯೇ ರರಕ್ಷ ಗರ್ಭಮೀಶ್ವರಃ ।**
**ಪರಾಶರಾತ್ಮಜೋ ವಿಭುರ್ವಿಚಿತ್ರವೀರ್ಯಜೋದ್ಭವಮ್ ॥ ೩೭ ॥**

ಪದಚ್ಛೇದ : ಸಃ ದೇವಕಾರ್ಯಸಿದ್ಧಯೇ ರರಕ್ಷ ಗರ್ಭಂ ಈಶ್ವರಃ ಪರಾಶರಾತ್ಮಜಃ ವಿಭುಃ ವಿಚಿತ್ರವೀರ್ಯಜೋದ್ಭವಮ್.

**ಅರ್ಥ** :- **ಈಶ್ವರಃ** ಸ್ವಾಮಿಯಾದ **ಪರಾಶರಾತ್ಮಜಃ** ಪರಾಶರರ ಮಕ್ಕಳಾದ; **ವಿಭುಃ** ಸಮರ್ಥರಾದ **ಸಃ** ಆ ವೇದವ್ಯಾಸರು **ದೇವಕಾರ್ಯ ಸಿದ್ಧಯೇ** ದೇವತೆಗಳ ಕಾರ್ಯವು ಸಿದ್ಧಿಸುವುದಕ್ಕಾಗಿ **ವಿಚಿತ್ರವೀರ್ಯ ಜೋದ್ಭವಂ** ವಿಚಿತ್ರವೀರ್ಯನ ಮಗನಾದ ಧೃತರಾಷ್ಟ್ರನಿಂದ ಹುಟ್ಟಿದ **ಗರ್ಭಂ** ಗರ್ಭವನ್ನು **ರರಕ್ಷ** ರಕ್ಷಿಸಿದರು.

**ತಾತ್ಪರ್ಯ** :- ಪರಾಶರರ ಮಕ್ಕಳಾದ ವೇದವ್ಯಾಸರು ದೇವತೆಗಳ ಕಾರ್ಯಸಿದ್ಧಿಗಾಗಿ ಧೃತರಾಷ್ಟ್ರನಿಂದ ಉಂಟಾದ ಗಾಂಧಾರಿಯ ಗರ್ಭವನ್ನು ರಕ್ಷಿಸಿದರು.

**ಕಲಿಃ ಸುಯೋಧನೋಽಜನಿ ಪ್ರಭೂತಬಾಹುವೀರ್ಯಯುಕ್ ।**
**ಪ್ರಧಾನವಾಯುಸನ್ನಿಧೇರ್ಬಲಾಧಿಕತ್ವಮಸ್ಯ ತತ್ ॥ ೩೮ ॥**

ಪದಚ್ಛೇದ :ಕಲಿಃ ಸುಯೋಧನಃ ಅಜನಿ ಪ್ರಭೂತಬಾಹುವೀರ್ಯಯುಕ್ ಪ್ರಧಾನವಾಯುಸನ್ನಿಧೇಃ ಬಲಾಧಿಕತ್ವಂ ಅಸ್ಯ ತತ್.

**ಅರ್ಥ** :- **ಕಲಿಃ** ಕಲಿಯು **ಪ್ರಭೂತಬಾಹುವೀರ್ಯಯುಕ್ (ಸನ್)** ಉತ್ಕೃಷ್ಟವಾದ ಬಾಹುಬಲವುಳ್ಳವನಾಗಿ **ಸುಯೋಧನಃ** ದುರ್ಯೋಧನನೆಂಬ ಹೆಸರಿನಿಂದ **ಅಜನಿ** ಹುಟ್ಟಿದನು. **ಅಸ್ಯ** ಈ ದುರ್ಯೋಧನನಿಗೆ **ಪ್ರಧಾನ ವಾಯುಸನ್ನಿಧೇ** ಮುಖ್ಯಪ್ರಾಣದೇವರ ಸನ್ನಿಧಾನದಿಂದ **ತತ್** ಅಂತಹ **ಬಲಾಧಿಕತ್ವಂ (ಆಸೀತ್)** ಅಧಿಕಬಲವಿದ್ದಿತು.

**ತಾತ್ಪರ್ಯ** :- ಕಲಿಯು ದುರ್ಯೋಧನನೆಂಮ ಹೆಸರಿನಿಂದ ಹುಟ್ಟಿದನು. ಅವನಿಗೆ ಹುಟ್ಟುವಾಗಲೇ ಬಹಳವಾದ ಬಾಹುಬಲವಿದ್ದಿತು. ಏಕೆಂದರೆ ಅವನಲ್ಲಿ ಮುಖ್ಯಪ್ರಾಣದೇವರ ಸಾನ್ನಿಧ್ಯವಿದ್ದಿತು.

**ಪುರಾ ಹಿ ಮೇರುಮೂರ್ಧನಿ ತ್ರಿವಿಷ್ಟಪೌಕಸಾಂ ವಚಃ ।**
**ವಸುಂಧರಾತಲೋದ್ಭವೋನ್ಮುಖಂ ಶ್ರುತಂ ದಿತೇಃ ಸುತೈಃ ॥ ೩೯ ॥**

ಪದಚ್ಛೇದ : ಪುರಾ ಹಿ ಮೇರುಮೂರ್ಧನಿ ತ್ರಿವಿಷ್ಟಪೌಕಸಾಂ ವಚಃ ವಸುಂಧರಾತಲೋದ್ಭವೋನ್ಮುಖಂ ಶ್ರುತಂ ದಿತೇಃ ಸುತೈಃ.

**ಅರ್ಥ** :- **ಪುರಾ ಹಿ** ಹಿಂದೆ **ದಿತೇಃ** ದಿತಿದೇವಿಯ **ಸುತೈಃ** ಮಕ್ಕಳಿಂದ **ಮೇರುಮೂರ್ಧನಿ** ಮೇರುಪರ್ವತದ ಮೇಲ್ಭಾಗದಲ್ಲಿ **ವಸುಂಧರಾತ**

ಲೋದ್ಭವೋನ್ಮುಖಂ ಭೂತಲದಲ್ಲಿ ಹುಟ್ಟುವ ಉತ್ಕಂಠತೆಯುಳ್ಳ ತ್ರಿವಿಷ್ಟ ಪೌಕಸಾಂ ದೇವತೆಗಳ ವಚಃ ಮಾತು ಶ್ರುತಂ ಕೇಳಲ್ಪಟ್ಟಿತು.

ತಾತ್ಪರ್ಯ :- ಹಿಂದೆ ಮೇರುಪರ್ವತದ ಶಿಖರದಲ್ಲಿ ದೇವತೆಗಳು ಭೂಮಿಯಲ್ಲಿ ಹುಟ್ಟುವ ಬಗ್ಗೆ ಉತ್ಕಂಠಿತರಾಗಿ ಮಾತನಾಡುತ್ತಿದ್ದರು. ದೈತ್ಯರು ಅದನ್ನು ಕೇಳಿಸಿಕೊಂಡರು.

**ತತಸ್ತು ತೇ ತ್ರಿಲೋಚನಂ ತಪೋಬಲಾದತೋಷಯನ್ ।**
**ವೃತಶ್ಚ ದೇವಕಂಟಕೋ ಹ್ಯವಧ್ಯ ಏವ ಸರ್ವತಃ ॥ ೪೦ ॥**

**ಪದಚ್ಛೇದ : ತತಃ ತು ತೇ ತ್ರಿಲೋಚನಂ ತಪೋಬಲಾತ್ ಅತೋಷಯನ್ ವೃತಃ ಚ ದೇವಕಂಟಕಃ ಹಿ ಅವಧ್ಯಃ ಏವ ಸರ್ವತಃ.**

**ಅರ್ಥ :- ತತಃ** ಆ ನಂತರ **ತೇ ತು** ಆ ದೈತ್ಯರು **ತಪೋಬಲಾತ್** ತಪಸ್ಸಿನ ಬಲದಿಂದ **ತ್ರಿಲೋಚನಂ** ಮೂರು ಕಣ್ಣುಳ್ಳ ಶಿವನನ್ನು **ಅತೋಷಯನ್** ಸಂತೋಷಪಡಿಸಿದರು. **ಚ** ಮತ್ತು **(ದೈತ್ಯೈಃ)** ದೈತ್ಯರಿಂದ **ದೇವಕಂಟಕಃ** ದೇವತೆಗಳಿಗೆ ಕಂಟಕನಾದ ಕಲಿಯು **ಸರ್ವತಃ** ಎಲ್ಲರಿಂದಲೂ **ಅವಧ್ಯ ಏವ** ಅವಧ್ಯನಾಗಿಯೇ **ವೃತಃ** ಯಾಚಿಸಲ್ಪಟ್ಟನು. **ಹಿ** ಪ್ರಸಿದ್ಧವು.

**ತಾತ್ಪರ್ಯ** :- ಮೇರುಪರ್ವತದ ಮೇಲೆ ದೇವತೆಗಳ ಮಾತನ್ನು ಕೇಳಿದ ನಂತರ ದೈತ್ಯರೆಲ್ಲರೂ ಶಿವನನ್ನು ಕುರಿತು ತಪಸ್ಸು ಮಾಡಿದರು. ತಪಸ್ಸಿನಿಂದ ಶಿವನನ್ನು ಸಂತೋಷಪಡಿಸಿ ಕಲಿಯು ಎಲ್ಲರಿಂದಲೂ ಅವಧ್ಯನಾಗಬೇಕೆಂದು ವರವನ್ನು ಬೇಡಿದರು.

**ವರಾದುಮಾಪತೇಸ್ತತಃ ಕಲಿಃ ಸ ದೇವಕಂಟಕಃ ।**
**ಬಭೂವ ವಜ್ರಕಾಯಯುಕ್ ಸುಯೋಧನೋ ಮಹಾಬಲಃ ॥ ೪೧ ॥**

**ಪದಚ್ಛೇದ : ವರಾತ್, ಉಮಾಪತೇಃ ತತಃ ಕಲಿಃ ಸಃ ದೇವಕಂಟಕಃ ಬಭೂವ ವಜ್ರಕಾಯಯುಕ್ ಸುಯೋಧನಃ ಮಹಾಬಲಃ.**

**ಅರ್ಥ :- ತತಃ** ಆನಂತರ **ಉಮಾಪತೇಃ** ಪಾರ್ವತೀಪತಿಯಾದ ಶಿವನ **ವರಾತ್** ವರದಿಂದ **ದೇವಕಂಟಕಃ** ದೇವತೆಗಳಿಗೆ ಕಂಟಕನಾದ **ಸಃ** ಆ **ಕಲಿಃ** ಕಲಿಯು **ವಜ್ರಕಾಯಯುಕ್** ವಜ್ರದಂತೆ ಕಠಿಣವಾದ ಶರೀರ ಉಳ್ಳವನಾಗಿ

**ಮಹಾಬಲಃ** ಮಹಾ ಪರಾಕ್ರಮವುಳ್ಳವನಾಗಿ **ಸುಯೋಧನಃ** ದುರ್ಯೋಧನ ನೆಂಬ ಹೆಸರುಳ್ಳವನಾಗಿ **ಬಭೂವ** ಹುಟ್ಟಿದನು.

**ತಾತ್ಪರ್ಯ** :- ಈ ರೀತಿಯಾಗಿ ಶಿವನ ವರದಿಂದ ದೇವಕಂಟಕನಾದ ಕಲಿಯು ಹುಟ್ಟುವಾಗಲೇ ವಜ್ರದಂತೆ ಕಠಿಣವಾದ ಶರೀರವನ್ನು ಹೊಂದಿ ಮಹಾ ಪರಾಕ್ರಮಿಯಾಗಿ ಜನಿಸಿದನು.

**ಅವಧ್ಯ ಏವ ಸರ್ವತಃ ಸುಯೋಧನೇ ಸಮುತ್ಥಿತೇ ।**
**ಘೃತಾಭಿಪೂರ್ಣಕುಂಭತಃ ಸ ಇಂದ್ರಜಿತ್ ಸಮುತ್ಥಿತಃ ॥ ೪೨ ॥**

ಪದಚ್ಛೇದ : **ಅವಧ್ಯೇ** ಏವ ಸರ್ವತಃ ಸುಯೋಧನೇ ಸಮುತ್ಥಿತೇ **ಘೃತಾಭಿಪೂರ್ಣಕುಂಭತಃ ಸಃ ಇಂದ್ರಜಿತ್ ಸಮುತ್ಥಿತಃ.**

**ಅರ್ಥ** :- **ಸರ್ವತಃ** ಏವ ಎಲ್ಲರಿಂದಲೂ **ಅವಧ್ಯೇ** ಅವಧ್ಯನಾದ **ಸುಯೋಧನೇ** ದುರ್ಯೋಧನನು **ಘೃತಾಭಿಪೂರ್ಣಕುಂಭತಃ** ತುಪ್ಪದಿಂದ ತುಂಬಿದ ಗಡಿಗೆಯಿಂದ **ಸಮುತ್ಥಿತೇ (ಸತಿ)** ಹೊರಬರಲು **ಸಃ** ಆ ಇಂದ್ರಜಿತ್ **ಘೃತಾಭಿಪೂರ್ಣಕುಂಭತಃ** ತುಪ್ಪದಿಂದ ತುಂಬಿದ ಗಡಿಗೆಯಿಂದ **ಸಮುತ್ಥಿತಃ** ಹೊರಬಂದನು.

**ತಾತ್ಪರ್ಯ** :- ಸರ್ವರಿಂದಲೂ ಅವಧ್ಯನಾದ ದುರ್ಯೋಧನನು ತುಪ್ಪ ತುಂಬಿದ ಗಡಿಗೆಯಿಂದ ಹುಟ್ಟಿಬಂದ ನಂತರ (ಪ್ರಸಿದ್ಧನಾದ ರಾವಣನ ತಮ್ಮನಾದ - ಜನಾರ್ದನೀಯ) ಇಂದ್ರಜಿತ್ ಕೂಡ ತುಪ್ಪ ತುಂಬಿದ ಗಡಿಗೆಯಿಂದ ಹುಟ್ಟಿಬಂದನು.

**ಸ ದುಃಖಶಾಸನೋಽಭವತ್ ತತೋಽತಿಕಾಯಸಂಭವಃ ।**
**ಸ ವೈ ವಿಕರ್ಣ ಉಚ್ಯತೇ ತತಃ ಖರೋಽಭವದ್ ಬಲೀ ॥ ೪೩ ॥**

ಪದಚ್ಛೇದ : ಸಃ ದುಃಖಶಾಸನಃ ಅಭವತ್ ತತಃ ಅತಿಕಾಯಸಂಭವಃ ಸವ್ವೈ ವಿಕರ್ಣಃ ಉಚ್ಯತೇ ತತಃ ಖರಃ ಅಭವತ್ ಬಲೀ.

**ಅರ್ಥ** :- **ಸಃ** ಆ ಇಂದ್ರಜಿತುವು **ದುಃಖಶಾಸನಃ** ದುಶ್ಶಾಸನನೆಂಬ ಹೆಸರಿನವನು **ಅಭವತ್** ಆದನು. **ತತಃ** ದುಶ್ಶಾಸನನ ನಂತರ **ಅತಿಕಾಯ ಸಂಭವಃ** ಅತಿಕಾಯನ ಉತ್ಪತ್ತಿಯು **ಅಭವತ್** ಆಯಿತು **ಸಃ** ಆ

ಅತಿಕಾಯನು **ವಿಕರ್ಣಃ** ವಿಕರ್ಣನೆಂದು **ಉಚ್ಯತೇ** ಕರೆಯಲ್ಪಡುತ್ತಾನೆ **ತತಃ** ಆ ವಿಕರ್ಣನ ನಂತರ **ಬಲೀ** ಬಲಶಾಲಿಯಾದ **ಖರಃ** ಖರನು **ಅಭವತ್** ಹುಟ್ಟಿದನು.

**ತಾತ್ಪರ್ಯ** :- ದುರ್ಯೋಧನನ ನಂತರ ಹುಟ್ಟಿದ ಇಂದ್ರಜಿತುವು ದುಶ್ಶಾಸನನೆಂಬ ಹೆಸರಿನವನಾದನು. ಅವನ ನಂತರ ಘೃತಪೂರ್ಣಕುಂಭದಿಂದ ಅತಿಕಾಯನು ಜನಿಸಿದನು. ಅವನು ವಿಕರ್ಣನೆಂಬ ಹೆಸರಿನವನಾದನು. ವಿಕರ್ಣನ ಜನನದ ನಂತರ ಬಲಶಾಲಿಯಾದ ಖರನು ಘೃತಪೂರ್ಣ ಕುಂಭದಿಂದ ಹುಟ್ಟಿದನು.

**ಸ ಚಿತ್ರಸೇನನಾಮಕಸ್ತಥಾಽಪರೇ ಚ ರಾಕ್ಷಸಾಃ ।**
**ಬಭೂವುರುಗ್ರಪೌರುಷಾ ವಿಚಿತ್ರವೀರ್ಯಜಾತ್ಮಜಾಃ ॥ ೪೪ ॥**

**ಪದಚ್ಛೇದ** : ಸಃ ಚಿತ್ರಸೇನನಾಮಕಃ ತಥಾ ಅಪರೇ ಚ ರಾಕ್ಷಸಾಃ ಬಭೂವುಃ ಉಗ್ರಪೌರುಷಾಃ ವಿಚಿತ್ರವೀರ್ಯಜಾತ್ಮಜಾಃ.

**ಅರ್ಥ** :- **ಸಃ** ಆ ಖರನು **ಚಿತ್ರಸೇನನಾಮಕಃ** ಚಿತ್ರಸೇನನೆಂಬ ಹೆಸರುಳ್ಳವನು **(ಅಭವತ್)** ಆದನು. **ತಥಾ** ಹಾಗೆಯೇ **ಅಪರೇ** ಇತರೆ **ರಾಕ್ಷಸಾಃ ಚ** ದೈತ್ಯರೂ ಕೂಡ **ಉಗ್ರಪೌರುಷಾಃ** ಉಗ್ರವಾದ ಪೌರುಷವುಳ್ಳವರಾಗಿ **ವಿಚಿತ್ರವೀರ್ಯಜಾತ್ಮಜಾಃ** ವಿಚಿತ್ರವೀರ್ಯನ ಮಗನಾದ ಧೃತರಾಷ್ಟ್ರನ ಮಕ್ಕಳಾಗಿ **ಬಭೂವುಃ** ಹುಟ್ಟಿದರು.

**ತಾತ್ಪರ್ಯ** :- ಆ ಖರನು ಚಿತ್ರಸೇನನೆಂಬ ಹೆಸರುಳ್ಳವನಾದನು. ಆ ನಂತರ ಅದೇ ರೀತಿಯಾಗಿ ಇತರೆ ದೈತ್ಯರೂ ಧೃತರಾಷ್ಟ್ರನ ಮಕ್ಕಳಾಗಿ ಹುಟ್ಟಿದರು. ಎಲ್ಲರೂ ಮಹಾಪರಾಕ್ರಮಿಗಳಾಗಿದ್ದರು.

**ಸಮಸ್ತದೋಷರೂಪಿಣಃ ಶರೀರಿಣೋ ಹಿ ತೇಽಭವನ್ ।**
**ಮೃಷೇತಿ ನಾಮತೋ ಹಿ ಯಾ ಬಭೂವ ದುಶ್ಶಲಾಽಽಸುರೀ ॥ ೪೫ ॥**

**ಕುಹೂಪ್ರವೇಶಸಂಯುತಾ ಯಯಾಽಽರ್ಜುನೇರ್ವಧಾಯ ಹಿ ।**
**ತಪಃ ಕೃತಂ ತ್ರಿಶೂಲಿನೇ ತತೋ ಹಿ ಸಾಽತ್ರ ಜಜ್ಞುಷೀ ॥ ೪೬ ॥**

ಪದಚ್ಛೇದ : ಸಮಸ್ತದೋಷರೂಪಿಣಃ ಶರೀರಿಣಃ ಹಿ ತೇ ಅಭವನ್ ಮೃಷಾ ಇತಿ ನಾಮತಃ ಹಿ ಯಾ ಬಭೂವ ದುಶ್ಶಲಾ ಅಸುರೀ ಕುಹೂಪ್ರವೇಶಸಂಯುತಾ ಯಯಾ ಆರ್ಜುನೇ ವಧಾಯ ಹಿ ತಪಃ ಕೃತಂ ತ್ರಿಶೂಲಿನೇ ತತಃ ಹಿ ಸಾ ಅತ್ರ ಜಜ್ಞುಷೀ.

**ಅರ್ಥ** :- **ಸಮಸ್ತದೋಷರೂಪಿಣಃ** ಎಲ್ಲ ದೋಷಗಳಿಗೆ ಅಭಿಮಾನಿಗಳಾದ **ತೇ** ಆ ದೈತ್ಯರು **ಶರೀರಿಣಃ** ಶರೀರವುಳ್ಳವರು **ಅಭವನ್** ಆದರು **ನಾಮತಃ** ಹೆಸರಿನಿಂದ **ಯಾ** ಯಾವಳು **ಮೃಷಾ ಇತಿ** ಮೃಷಾ ಎಂದು **ಅಸುರೀ** ಅಸುರಿ ಇದ್ದಳೋ (**ಸಾ**) ಅವಳು; **ಕುಹೂಪ್ರವೇಶಸಂಯುತಾ (ಸತೀ)** ಕುಹೂ ಎಂಬ ದೇವತೆಯ ಆವೇಶದಿಂದ ಕೂಡಿದವಳಾಗಿ **ದುಶ್ಶಲಾ** ದುಶ್ಶಲೆ ಎಂಬ ಹೆಸರುಳ್ಳವಳಾಗಿ **ಬಭೂವ** ಹುಟ್ಟಿದಳು. **ಯಯಾ** ಯಾವ ಅಸುರಿಯಿಂದ **ಆರ್ಜುನೇಃ** ಅರ್ಜುನನ ಮಗನಾದ **ಅಭಿಮನ್ಯುವಿನ ವಧಾಯ** ಸಂಹಾರಕ್ಕೋಸ್ಕರ **ತ್ರಿಶೂಲಿನೇ** ಶಿವನನ್ನುದ್ದೇಶಿಸಿ **ತಪಃ** ತಪಸ್ಸು **ಕೃತಂ** ಮಾಡಲ್ಪಟ್ಟಿತ್ತೋ **ತತಃ ಹಿ** ಆದ್ದರಿಂದಲೇ **ಸಾ** ಆ ಮೃಷೆಯೆಂಬ ಅಸುರಿಯು **ಅತ್ರ** ಧೃತರಾಷ್ಟ್ರನ ಹೆಂಡತಿಯಲ್ಲಿ **ಜಜ್ಞುಷೀ** ಹುಟ್ಟಿದಳು.

**ತಾತ್ಪರ್ಯ** :- ಎಲ್ಲ ದೋಷಗಳಿಗೂ ಅಭಿಮಾನಿಗಳಾದ ಅಸುರರು ಶರೀರವನ್ನು ಧರಿಸಿ ದುರ್ಯೋಧನ ಮೊದಲಾದವರಾಗಿ ಹುಟ್ಟಿದರು. ಮೃಷಾ ಎಂಬ ಅಸುರಿಯೊಬ್ಬಳು ಅರ್ಜುನನ ಮಗ ಅಭಿಮನ್ಯುವಿನ ಸಂಹಾರಕ್ಕಾಗಿ ಶಿವನನ್ನು ಕುರಿತು ತಪಸ್ಸನ್ನು ಮಾಡಿದ್ದಳು. ಆದ್ದರಿಂದ ಆ ಮೃಷೆಯು ಧೃತರಾಷ್ಟ್ರನ ಹೆಂಡತಿಯಲ್ಲಿ ದುಶ್ಶಲಾ ಎಂಬ ಹೆಸರಿನಿಂದ ಹುಟ್ಟಿದಳು. (ಮೃಷಾ – ಸುಳ್ಳಿಗೆ ಅಭಿಮಾನಿನಿಯಾದ್ದರಿಂದ ಮೃಷಾ ಎಂದೇ ಅವಳ ಹೆಸರು – ಜನಾರ್ದನೀಯ) ಆ ದುಶ್ಶಲೆಯು ಕುಹೂ ಎಂಬ ಹೆಸರಿನ ದೇವತೆಯ ಆವೇಶದಿಂದ ಕೂಡಿಕೊಂಡು ಹುಟ್ಟಿದ್ದಳು. (ಚತುರ್ದಶಿಯಿಂದ ಕೂಡಿದ ಅಮಾವಸ್ಯೆಯಂದು ಚಂದ್ರಕಲೆ ಕಾಣುವುದುಂಟು ಅದಕ್ಕೆ ಸಿನೀವಾಲೀ ಎಂದು ಹೆಸರು. ಚಂದ್ರನ ಕಲೆ ತೋರದ ಅಮಾವಾಸ್ಯೆಗೆ ಅಭಿಮಾನಿನಿ ಕುಹೂ ಜನಾರ್ದನೀಯ).

**ತಯೋದಿತೋ ಹಿ ಸೈಂಧವೋ ಬಭೂವ ಕಾರಣಂ ವಧೇ ।**
**ಸ ಕಾಲಕೇಯದಾನವಸ್ತದರ್ಥಮಾಪ ಭೂತಲೇ ॥ ೪೭ ॥**

ಪದಚ್ಛೇದ : ತಯಾ ಉದಿತಃ ಹಿ ಸೈಂಧವಃ ಬಭೂವ ಕಾರಣಂ ವಧೇ ಸಃ ಕಾಲಕೇಯದಾನವಃ ತದರ್ಥಂ ಆಸ ಭೂತಲೇ.

**ಅರ್ಥ :- ತಯಾ** ಆ ದುಶ್ಶಲೆಯಿಂದ **ಉದಿತಃ** ಹೇಳಲ್ಪಟ್ಟ **ಸೈಂಧವಃ ಹಿ** ಸೈಂಧವನೇ **ವಧೇ** (ಅಭಿಮನ್ಯುವಿನ) ಸಂಹಾರದಲ್ಲಿ **ಕಾರಣಂ** ಕಾರಣಳು **ಬಭೂವ** ಆದಳು **ಕಾಲಕೇಯದಾನವಃ** ಕಾಲಕೇಯನೆಂಬ ದಾನವನಾದ **ಸಃ** ಆ ಸೈಂಧವನು **ತದರ್ಥಂ** ಆ ಅಭಿಮನ್ಯುವಿನ ಸಂಹಾರಕ್ಕಾಗಿಯೇ **ಭೂತಲೇ** ಭೂಮಿಯಲ್ಲಿ **ಆಸ** ಹುಟ್ಟಿದ್ದನು.

**ತಾತ್ಪರ್ಯ :-** ಮುಂದೆ ಯುದ್ಧದಲ್ಲಿ ದುಶ್ಶಲೆಯ ಮಾತಿನಂತೆ ಸಿಂಧುದೇಶದ ರಾಜನಾದ ಜಯದ್ರಥನು ಪಾಂಡವರು ಚಕ್ರವ್ಯೂಹದೊಳಗೆ ನುಗ್ಗದಂತೆ ತಡೆದು ವ್ಯೂಹದೊಳಗಿದ್ದ ಅಭಿಮನ್ಯುವಿನ ಸಾವಿಗೆ ಕಾರಣ ನಾದನು. ಆ ಜಯದ್ರಥನು ಕಶ್ಯಪರ ಹೆಂಡತಿಯಾದ ಕಾಲಕೆಯ ಮಕ್ಕಳಲ್ಲಿ ಒಬ್ಬನು. ಅಭಿಮನ್ಯುವಿನ ಸಂಹಾರಕ್ಕಾಗಿಯೇ ಭೂಮಿಯಲ್ಲಿ ಹುಟ್ಟಿದ್ದನು.

**ತಥಾಽಽಸ ನಿರೃತಾಭಿಧೋಽನುಜಃ ಸ ನಿರೃತೇರಭೂತ್ ।**
**ಸ ನಾಸಿಕಾಮರುದ್ಯುತೋ ಯುಯುತ್ಸುನಾಮಕಃ ಕೃತೀ ॥ ೪೮ ॥**

ಪದಚ್ಛೇದ :ತಥಾ ಆಸ ನಿರೃತಾಭಿಧಃ ಅನುಜಃ ಸಃ ನಿರೃತೇಃ ಅಭೂತ್ ಸಃ ನಾಸಿಕಾಮರುದ್ಯುತಃ ಯುಯುತ್ಸುನಾಮಕಃ ಕೃತೀ.

**ಅರ್ಥ :- ತಥಾ** ಹಾಗೆಯೇ **ನಿರೃತೇಃ** ನಿರೃತಿಯ **ಅನುಜಃ** ತಮ್ಮನಾದ **ಸಃ** ಪ್ರಸಿದ್ಧನಾದ **ನಿರೃತಾಭಿಧಃ** ನಿರೃತನೆಂಬ ಹೆಸರಿನವನು **ಆಸ** ಇದ್ದನು **ಕೃತೀ** ಕುಶಲನಾದ **ಸಃ** ಅವನು **ನಾಸಿಕಾಮರುದ್ಯುತಃ (ಸನ್)** ನಾಸಿಕಾಭಿಮಾನಿ ಯಾದ ವಾಯುವಿನಿಂದ ಸಹಿತನಾಗಿ **ಯುಯುತ್ಸುಃ** ಯುಯುಸ್ತುವೆಂಬ ಹೆಸರುಳ್ಳವನಾಗಿ; **ಅಭೂತ್** ಹುಟ್ಟಿದನು.

**ತಾತ್ಪರ್ಯ :-** ಹಾಗೆಯೇ ಕೋಣಾಧಿಪತಿಯಾದ ನಿರೃತಿಯ ತಮ್ಮನಾದ ನಿರೃತನೆಂಬುವನು ಇದ್ದನು. ಕುಶಲನಾದ ಅವನು ನಾಸಿಕಾಭಿಮಾನಿ ವಾಯು ವಿನ ಆವೇಶದಿಂದ ಯುಕ್ತನಾಗಿ ಯುಯುತ್ಸುವೆಂಬ ಹೆಸರಿನಿಂದ ಹುಟ್ಟಿದನು.

**ಸ ಚಾಂಽಬಿಕೇಯವೀರ್ಯಜಃ ಸುಯೋಧನಾದನಂತರಃ ।**
**ಬಭೂವ ವೈಶ್ಯಕನ್ಯಕೋದರೋದ್‌ಭವೋ ಹರಿಪ್ರಿಯಃ ॥ ೪೯ ॥**

ಪದಚ್ಛೇದ : ಸಃ ಚ ಅಂಬಿಕೇಯುವೀರ್ಯಜಃ ಸುಯೋಧನಾತ್ ಅನಂತರಃ ಬಭೂವ ವೈಶ್ಯಕನ್ಯಕೋದರೋದ್‌ಭವಃ ಹರಿಪ್ರಿಯಃ.

**ಅರ್ಥ** :- **ಸಃ ಚ** ಆ ಯುಯುತ್ಸುವಾದರೂ **ಸುಯೋಧನಾತ್** ದುರ್ಯೋಧನನಿಂದ **ಅನಂತರಃ** ನಂತರದವನಾಗಿ **ಅಂಬಿಕೇಯವೀರ್ಯಜಃ** ಅಂಬಿಕೆಯ ಮಗನಾದ ಧೃತರಾಷ್ಟ್ರನ ವೀರ್ಯದಿಂದ ಹುಟ್ಟಿದವನು; **ಬಭೂವ** ಆದನು. **ವೈಶ್ಯಕನ್ಯಕೋದರೋದ್‌ಭವಃ** ವೈಶ್ಯಕನ್ಯೆಯ ಹೊಟ್ಟೆಯಿಂದ ಹುಟ್ಟಿದವನು **ಬಭೂವ** ಆಗಿದ್ದನು **ಹರಿಪ್ರಿಯಃ** ಪರಮಾತ್ಮನಿಗೆ ಪ್ರಿಯನು **ಬಭೂವ** ಆಗಿದ್ದನು.

**ತಾತ್ಪರ್ಯ** :- ಗಾಂಧಾರಿಯು ಗರ್ಭವತಿಯಾಗಿದ್ದಾಗ ಧೃತರಾಷ್ಟ್ರನಿಗೆ ಸೇವೆ ಮಾಡುತ್ತಿದ್ದ ವೈಶ್ಯಜಾತಿಯ ಹೆಂಡತಿಯಲ್ಲಿ ಧೃತರಾಷ್ಟ್ರನಿಂದ ಯುಯುತ್ಸುವು ಹುಟ್ಟಿದನು. ಅವನು ದುರ್ಯೋಧನನ ನಂತರ ಹುಟ್ಟಿದನು. ಭಗವಂತನಿಗೆ ಪ್ರಿಯನು (ಅಥವಾ ಭಗವಂತನಲ್ಲಿ ಪ್ರೀತಿಯುಳ್ಳವನು) ಆಗಿದ್ದನು.

**ಯುಧಿಷ್ಠಿರೇ ಜಾತ ಉವಾಚ ಪಾಂಡು-**
**ರ್ಬಾಹ್ವೋರ್ಬಲಾಜ್‌ಜ್ಞಾನಬಲಾಚ್ಚ ಧರ್ಮಃ ।**
**ರಕ್ಷ್ಯೋಽನ್ಯಥಾನಾಶಮುಪೈತಿ ತಸ್ಮಾದ್**
**ಬಲದ್ವಯಾಢ್ಯಂ ಜನಯಾಶು ಪುತ್ರಮ್ ॥ ೫೦ ॥**

ಪದಚ್ಛೇದ : ಯುಧಿಷ್ಠಿರೇ ಜಾತೇ ಉವಾಚ ಪಾಂಡುಃ ಬಾಹ್ವೋಃ ಬಲಾತ್ ಜ್ಞಾನಬಲಾತ್ ಚ ಧರ್ಮಃ ರಕ್ಷ್ಯಃ ಅನ್ಯಥಾ ನಾಶಂ ಉಪೈತಿ ತಸ್ಮಾತ್ ಬಲದ್ವಯಾಢ್ಯಂ ಜನಯ ಆಶು ಪುತ್ರಮ್.

**ಅರ್ಥ** :- **ಪಾಂಡುಃ** ಪಾಂಡುರಾಜನು **ಯುಧಿಷ್ಠಿರೇ** ಯುಧಿಷ್ಠಿರನು **ಜಾತೇ (ಸತಿ)** ಹುಟ್ಟುತ್ತಿರಲು **ಉವಾಚ** (ಕುಂತಿಗೆ) ಹೇಳಿದನು. **ಬಾಹ್ವೋಃ** ಬಾಹುಗಳ **ಬಲಾತ್** ಬಲದಿಂದ **ಚ** ಮತ್ತು **ಜ್ಞಾನಬಲಾತ್** ಜ್ಞಾನದ ಬಲದಿಂದ **ಧರ್ಮಃ** ಧರ್ಮವು **ರಕ್ಷ್ಯಃ** ರಕ್ಷಿಸಲ್ಪಡಬೇಕು **ಅನ್ಯಥಾ** ಹಾಗಿಲ್ಲದಿದ್ದಲ್ಲಿ **ಧರ್ಮಃ** ಧರ್ಮವು **ನಾಶಂ** ನಾಶವನ್ನು **ಉಪೈತಿ** ಹೊಂದುತ್ತದೆ **ತಸ್ಮಾತ್** ಆದ್ದರಿಂದ **ಆಶು** ಶೀಘ್ರವಾಗಿ **ಬಲದ್ವಯಾಢ್ಯಂ** ಎರಡು ವಿಧವಾದ ಬಲಗಳಿಂದ ಕೂಡಿದ; **ಪುತ್ರಂ** ಮಗನನ್ನು **ಜನಯ** ಹುಟ್ಟಿಸು.

ತಾತ್ಪರ್ಯ :- ಯುಧಿಷ್ಠಿರನು ಹುಟ್ಟಿದ ನಂತರ ಪಾಂಡುರಾಜನು ಕುಂತಿಗೆ ಹೇಳುತ್ತಾನೆ - "ಧರ್ಮವನ್ನು ರಕ್ಷಿಸಲು ಜ್ಞಾನಬಲ ಹಾಗು ಭುಜಬಲ ಎರಡೂ ಬೇಕು. ಕೇವಲ ಒಂದರಿಂದ ಧರ್ಮದ ರಕ್ಷಣೆ ಸಾಧ್ಯವಿಲ್ಲ, ಆದ್ದರಿಂದ ತಡಮಾಡದೆ ಎರಡೂ ವಿಧವಾದ ಬಲವುಳ್ಳ ಮಗನಿಗೆ ಜನ್ಮನೀಡು.

ಯಜ್ಞಾಧಿಕೋ ಹ್ಯಶ್ವಮೇಧೋ ಮನುಷ್ಯ-
ದೃಶ್ಯೇಷು ತೇಜಸ್ಸ್ವಧಿಕೋ ಹಿ ಭಾಸ್ಕರಃ ।
ವರ್ಣೇಷು ವಿಪ್ರಃ ಸಕಲೈರ್ಗುಣೈರ್ವರೋ
ದೇವೇಷು ವಾಯುಃ ಪುರುಷೋತ್ತಮಾದೃತೇ ॥ ೫೧ ॥

ಪದಚ್ಛೇದ : ಯಜ್ಞಾಧಿಕಃ ಹಿ ಅಶ್ವಮೇಧಃ ಮನುಷ್ಯದೃಶ್ಯೇಷು ತೇಜಸ್ಸು ಅಧಿಕಃ ಹಿ ಭಾಸ್ಕರಃ ವರ್ಣೇಷು ವಿಪ್ರಃ ಸಕಲೈಃ ಗುಣೈಃ ವರಃ ದೇವೇಷು ವಾಯುಃ ಪುರುಷೋತ್ತಮಾತ್ ಋತೇ.

ಅರ್ಥ :- **ಅಶ್ವಮೇಧಃ ಹಿ** ಅಶ್ವಮೇಧವೇ **ಯಜ್ಞಾಧಿಕಃ** ಯಜ್ಞಗಳಲ್ಲಿ ಉತ್ತಮವಾದದ್ದು; **ಮನುಷ್ಯದೃಶ್ಯೇಷು** ಮನುಷ್ಯರಿಂದ ಕಾಣಲು ಯೋಗ್ಯವಾದ; **ತೇಜಸ್ಸು** ತೇಜಸ್ಸುಗಳಲ್ಲಿ **ಭಾಸ್ಕರಃ ಹಿ** ಸೂರ್ಯನೇ **ಅಧಿಕಃ** ಉತ್ತಮನು; **ವರ್ಣೇಷು** ವರ್ಣಗಳಲ್ಲಿ **ವಿಪ್ರಃ** ಬ್ರಾಹ್ಮಣನು **ಅಧಿಕಃ** ಅಧಿಕನು **ದೇವೇಷು** ದೇವತೆಗಳಲ್ಲಿ **ಪುರುಷೋತ್ತಮಾತ್** ಸರ್ವೋತ್ತಮನಾದ ನಾರಾಯಣನನ್ನು **ಋತೇ** ಬಿಟ್ಟು **ಸರ್ವೈಃ** ಎಲ್ಲಾ **ಗುಣೈಃ** ಗುಣಗಳಿಂದ **ವಾಯುಃ** ಮುಖ್ಯಪ್ರಾಣನು **ವರಃ** ಶ್ರೇಷ್ಠನು.

ತಾತ್ಪರ್ಯ :- ಎರಡು ವಿಧವಾದ ಬಲವುಳ್ಳವರು ಯಾರು ಎಂದು ಇಲ್ಲಿ ಪಾಂಡುವು ಹೇಳುತ್ತಿದ್ದಾನೆ. ಯಜ್ಞಗಳಲ್ಲೇ ಅಶ್ವಮೇಧವು ಉತ್ತಮವಾದದ್ದು. ಮನುಷ್ಯರು ನೋಡಬಹುದಾದ ತೇಜಸ್ಸುಗಳಲ್ಲೇ ಸೂರ್ಯನು ಉತ್ತಮನಾದವನು; ಬ್ರಾಹ್ಮಣಾದಿ ನಾಲ್ಕು ವರ್ಣಗಳಲ್ಲೇ ಬ್ರಾಹ್ಮಣನು ಉತ್ತಮನು. ದೇವತೆಗಳಲ್ಲೇ ಎಲ್ಲಾ ಗುಣಗಳಿಂದ ಉತ್ತಮನೆಂದರೆ ಮುಖ್ಯಪ್ರಾಣನು; ಆದರೆ ಸರ್ವೋತ್ತಮನಾದ ನಾರಾಯಣನನ್ನು ಬಿಟ್ಟು ಏಕೆಂದರೆ ನಾರಾಯಣನು ಮುಖ್ಯಪ್ರಾಣನಿಗಿಂತಲೂ ಉತ್ತಮನು.

ವಿಶೇಷತೋऽಪ್ಯೇಷ ಪಿತೈವ ಮೇ
ಪ್ರಭುರ್ವ್ಯಾಸಾತ್ಮನಾ ವಿಷ್ಣುರನಂತಪೌರುಷಃ ।
ಅತಶ್ಚ ತೇ ಶ್ವಶುರೋ ನೈವ ಯೋಗ್ಯೋ ದಾತುಂ
ಪುತ್ರಂ ವಾಯುಮುಪೈಹಿ ತಂ ಪ್ರಭುಮ್ ॥ ೫೨ ॥

ಪದಚ್ಛೇದ : ವಿಶೇಷತಃ ಅಪಿ ಏಷಃ ಪಿತಾ ಏವ ಮೇ ಪ್ರಭುಃ ವ್ಯಾಸಾತ್ಮನಾ ವಿಷ್ಣುಃ ಅನಂತಪೌರುಷಃ ಅತಃ ಚ ತೇ ಶ್ವಶುರಃ ನ ಏವ ಯೋಗ್ಯಃ ದಾತುಂ ಪುತ್ರಂ ವಾಯುಂ ಉಪೈಹಿ ತಂ ಪ್ರಭುಮ್.

**ಅರ್ಥ** :- ಅನಂತಪೌರುಷಃ ಅಪರಿಮಿತ ಶಕ್ತಿಯುಳ್ಳ; ಏಷಃ ಈ ವಿಷ್ಣುಃ ವಿಷ್ಣುವು ವ್ಯಾಸಾತ್ಮನಾ ವ್ಯಾಸರೂಪದಿಂದ ವಿಶೇಷತಃ ಅಪಿ ವಿಶೇಷವಾಗಿಯೂ ಮೇ ನನಗೆ ಪಿತಾ ಏವ ತಂದೆಯೇ (ಆಗಿದ್ದಾನೆ); ಚ ಮತ್ತು ತೇ ನಿನ್ನ ಶ್ವಶುರಃ ಮಾವನು (ಆಗಿದ್ದಾನೆ) (ಪರಮಾತ್ಮನು) ಪುತ್ರಂ ಮಗನನ್ನು ದಾತುಂ ಕೊಡಲು ಯೋಗ್ಯಃ ಯೋಗ್ಯನು ನ ಏವ ಆಗುವುದಿಲ್ಲ ಅತಃ ಆದ್ದರಿಂದ ಪ್ರಭುಂ ಸಮರ್ಥನಾದ ತಂ ಆ ವಾಯುಂ ಮುಖ್ಯಪ್ರಾಣನನ್ನು ಉಪೈಹಿ ಹೊಂದು.

**ತಾತ್ಪರ್ಯ** :- ಸರ್ವೋತ್ತಮನಾದರೂ ಪರಮಾತ್ಮನನ್ನು ಕರೆಯಲು ಪಾಂಡು ಕುಂತಿಗೆ ಏಕೆ ಹೇಳಲಿಲ್ಲ? ಎಂಬ ಪ್ರಶ್ನೆಗೆ ಇಲ್ಲಿ ಉತ್ತರಿಸುತ್ತಿದ್ದಾರೆ. ಪಾಂಡುರಾಜನು ಹೇಳುತ್ತಾನೆ - "ಪರಮಾತ್ಮನು ಅನಂತಶಕ್ತಿಯುಳ್ಳವನಾದರೂ ಅವನು ವ್ಯಾಸರೂಪದಿಂದ ನನಗೆ ವಿಶೇಷವಾಗಿ ತಂದೆಯೇ ಆಗಿದ್ದಾನೆ. (ವಿಚಿತ್ರವೀರ್ಯನ ಹೆಂಡತಿಯಲ್ಲಿ ವೇದವ್ಯಾಸರಿಂದ ನಿಯೋಗ ಪದ್ಧತಿಯಿಂದ ಪಾಂಡುವು ಜನಿಸಿರುತ್ತಾನೆ. ಆದ್ದರಿಂದ ಪರಮಾತ್ಮನು ಪಾಂಡುವಿಗೆ ವಿಶೇಷವಾಗಿ ತಂದೆಯೇ ಆಗುತ್ತಾನೆ). ಆದ್ದರಿಂದ ನಿನಗೆ ಮಾವನಾಗುತ್ತಾನೆ. ಹಾಗಾಗಿ ಪರಮಾತ್ಮನನ್ನು ಸಂತಾನಕ್ಕಾಗಿ ಆಹ್ವಾನಿಸುವುದು ಬೇಡ. ದೇವತೆಗಳಲ್ಲೇ ಸಮರ್ಥನಾದ ಮುಖ್ಯಪ್ರಾಣನನ್ನೇ ಆಹ್ವಾನಿಸು."

ಇತೀರಿತೇ ಪೃಥಯಾऽऽಹೂತವಾಯು-
ಸಂಸ್ಪರ್ಶಮಾತ್ರಾದಭವದ್ ಬಲದ್ವಯೀ ।
ಸಮೋ ಜಗತ್ಯಸ್ತಿ ನ ಯಸ್ಯ ಕಶ್ಚಿದ್
ಭಕ್ತೌ ಚ ವಿಷ್ಣೋರ್ಭಗವದ್ವಶಃ ಸುತಃ ॥ ೫೩ ॥

ಪದಚ್ಛೇದ : ಇತಿ ಈರಿತೇ ಪೃಥಯಾ ಆಹೂತವಾಯುಸಂಸ್ಪರ್ಶಮಾತ್ರಾತ್ ಅಭವತ್ ಬಲದ್ವಯೇ ಸಮಃ ಜಗತಿ ಅಸ್ತಿ ನ ಯಸ್ಯ ಕಶ್ಚಿತ್ ಭಕ್ತೌ ಚ ವಿಷ್ಣೋಃ ಭಗವದ್ವಶಃ ಸುತಃ.

**ಅರ್ಥ** :- **ಇತಿ** ಈ ರೀತಿಯಾಗಿ **ಈರಿತೇ (ಸತಿ)** (ಪಾಂಡುರಾಜನಿಂದ) ಹೇಳಲ್ಪಡಲು **ಪೃಥಯಾ** ಕುಂತಿಯಿಂದ **ಆಹೂತವಾಯುಸಂಸ್ಪರ್ಶಮಾತ್ರಾತ್** ಆಹ್ವಾನಿಸಲ್ಪಟ್ಟ ವಾಯುವಿನ ಸ್ಪರ್ಶಮಾತ್ರದಿಂದ **ಜಗತಿ** ಜಗತ್ತಿನಲ್ಲಿ ಬಲದ್ವಯೇ ಎರಡು ವಿಧವಾದ ಬಲದಲ್ಲಿ **ಚ** ಮತ್ತು **ವಿಷ್ಣೋಃ** ಪರಮಾತ್ಮನ **ಭಕ್ತೌ** ಭಕ್ತಿಯಲ್ಲಿ **ಯಸ್ಯ** ಯಾರಿಗೆ **ಸಮಃ** ಸಮನಾದವನು **ಕಶ್ಚಿತ್** ಯಾವೊಬ್ಬನೂ **ನ ಅಸ್ತಿ** ಇಲ್ಲವೋ **ಸಃ** ಅಂತಹ **ಭಗವದ್ವಶಃ** ಪರಮಾತ್ಮನಿಗೆ ಮಾತ್ರ ಅಧೀನನಾದ **ಸುತಃ** ಮಗನು **ಅಭವತ್** ಹುಟ್ಟಿದನು.

**ತಾತ್ಪರ್ಯ** :- ಈ ರೀತಿಯಾಗಿ ಪಾಂಡುರಾಜನು ಹೇಳಲು ಕುಂತಿಯು ಮಂತ್ರವನ್ನು ಜಪಿಸಿ ವಾಯುವನ್ನು ಕರೆದಳು. ಬಂದಂತಹ ವಾಯುವಿನ ಸ್ಪರ್ಶರೂಪವಾದ ರತಿಯಿಂದಲೇ ಮಗನು ಹುಟ್ಟಿದನು. ಹುಟ್ಟಿದ ಆ ಮಗನಿಗೆ ಜ್ಞಾನಬಲ, ಬಾಹುಬಲಗಳಲ್ಲಿ ಮತ್ತು ವಿಷ್ಣುಭಕ್ತಿಯಲ್ಲಿ ಸಮನಾದವನು ಜಗತ್ತಿನಲ್ಲಿ ಮತ್ತೊಬ್ಬನು ಇಲ್ಲ. ಅವನು ಭಗವಂತನಿಗೆ ಮಾತ್ರ ಅಧೀನನಾದವನು.

**ಸ ವಾಯುರೇವಾಭವದತ್ರ ಭೀಮನಾಮಾ**
**ಭೃತಾ ಮಾಃ ಸಕಲಾ ಹಿ ಯಸ್ಮಿನ್ ।**
**ಸ ವಿಷ್ಣುನೇಶೇನ ಯುತಃ ಸದೈವ**
**ನಾಮ್ನಾ ಸೇನೋ ಭೀಮಸೇನಸ್ತತೋಽಸೌ ॥ ೫೪ ॥**

ಪದಚ್ಛೇದ : ಸಃ ವಾಯುಃ ಏವ ಅಭವತ್ ಅತ್ರ ಭೀಮನಾಮಾ ಭೃತಾಃ ಮಾಃ ಸಕಲಾಃ ಹಿ ಯಸ್ಮಿನ್ ಸಃ ವಿಷ್ಣುನಾ ಈಶೇನ ಯುತಃ ಸದಾ ಏವ ನಾಮ್ನಾ ಸೇನಃ ಭೀಮಸೇನಃ ತತಃ ಅಸೌ.

**ಅರ್ಥ** :- **ಸಃ** ಆ **ವಾಯುಃ ಏವ** ವಾಯುವೇ **ಅತ್ರ** ಈ ಕುಂತಿಯಲ್ಲಿ **ಭೀಮನಾಮಾ (ಸನ್)** ಭೀಮನೆಂಬ ಹೆಸರುಳ್ಳವನಾಗಿ **ಅಭವತ್** ಹುಟ್ಟಿದನು. **ಹಿ** ಯಾವ ಕಾರಣದಿಂದ **ಯಸ್ಮಿನ್** ಯಾವ ವಾಯುಪುತ್ರನಲ್ಲಿ

**ಸಕಲಾಃ** ಎಲ್ಲಾ **ಮಾಃ** ಜ್ಞಾನಗಳು **ಭೃತಾಃ** ತುಂಬಿದ್ದವೋ **ಸಃ** ಅವನು **ಸದಾ ಏವ** ಯಾವಾಗಲೂ **ಈಶೇನ** ತನ್ನ ಸ್ವಾಮಿಯಾದ ಪರಮಾತ್ಮನಿಂದ **ಯುತಃ (ಸನ್)** ಕೂಡಿಕೊಂಡಿದ್ದು **ನಾಮ್ನಾ** ಹೆಸರಿನಿಂದ **ಸೇನಃ** ಸೇನ (ಎಂದಾಗಿದ್ದನು) **ತತಃ** ಆದ್ದರಿಂದ **ಅಸೌ** ಭೀಮನಾದ ಈ ಸೇನನು **ಭೀಮಸೇನಃ** ಭೀಮಸೇನ (ಎನಿಸಿದ).

**ತಾತ್ಪರ್ಯ** :- ಆ ವಾಯುವೇ ಭೀಮನೆಂಬ ಹೆಸರಿನಿಂದ ಕುಂತಿಯಲ್ಲಿ ಹುಟ್ಟಿದನು. ಅವನಿಗೆ ಭೀಮನೆಂಬ ಹೆಸರು ಬರಲು ಕಾರಣ ಹೇಳುತ್ತಾರೆ - ಮಾ ಎಂದರೆ ಜ್ಞಾನ. ಭೀ ಎಂದರೆ ಪೂರ್ಣನಾದವನು. ಈ ವಾಯುಪುತ್ರನು (ಮಾ)ಜ್ಞಾನದಿಂದ (ಭೀ) ತುಂಬಿದವನಾದ್ದರಿಂದ ಭೀಮನೆಂಬ ಹೆಸರು ಪಡೆದ. ಹಾಗೆಯೇ ಈ ವಾಯುಪುತ್ರನು ಸೇನನೂ ಆಗಿದ್ದ. ಏಕೆಂದರೆ ಇನ ಎಂದರೆ ಸ್ವಾಮಿ. ಸ ಎಂದರೆ ಜೊತೆಗೆ. (ಇನ) ತನ್ನ ಸ್ವಾಮಿಯಾದ ಪರಮಾತ್ಮನೊಂದಿಗೆ ಯಾವಾಗಲೂ (ಸ) ಇರುತ್ತಾನಾದ್ದರಿಂದ ಇವನು ಸೇನ. ಆದ್ದರಿಂದಲೇ ಇವನಿಗೆ ಭೀಮಸೇನ ಎಂಬ ಹೆಸರು.

**ತಜ್ಜನ್ಮಮಾತ್ರೇಣ ಧರಾ ವಿದಾರಿತಾ**
**ಶಾರ್ದೂಲಭೀತಾಜ್ಜನನೀಕರಾದ್ ಯದಾ ।**
**ಪಪಾತ ಸಂಚೂರ್ಣಿತ ಏವ ಪರ್ವತ-**
**ಸ್ತೇನಾಖಿಲೋಽಸೌ ಶತಶೃಂಗನಾಮಾ ॥ ೫೫ ॥**

ಪದಚ್ಛೇದ : ತಜ್ಜನ್ಮಮಾತ್ರೇಣ ಧರಾ ವಿದಾರಿತಾ ಶಾರ್ದೂಲಭೀತಾತ್ ಜನನೀಕರಾತ್ ಯದಾ ಪಪಾತ ಸಂಚೂರ್ಣಿತಃ ಏವ ಪರ್ವತಃ ತೇನ ಅಖಿಲಃ ಅಸೌ ಶತಶೃಂಗನಾಮಾ.

**ಅರ್ಥ** :- **ತಜ್ಜನ್ಮಮಾತ್ರೇಣ** ಆ ಭೀಮಸೇನನು ಹುಟ್ಟಿದ ಮಾತ್ರದಿಂದ **ಧರಾ** ಭೂಮಿಯು **ವಿದಾರಿತಾ** ಸೀಳಲ್ಪಟ್ಟಿತು **ಯದಾ** ಯಾವಾಗ **ಶಾರ್ದೂಲಭೀತಾತ್** ಹುಲಿಗೆ ಹೆದರಿ ಕಂಪಿಸಿದ **ಜನನೀಕರಾತ್** ತಾಯಿಯ ಕೈಯಿಂದ **ಪಪಾತ** (ಪರ್ವತದಲ್ಲಿ) ಬಿದ್ದನೋ **(ತದಾ)** ಆಗ **ತೇನ ಏವ** ಭೀಮನ ಬೀಳುವಿಕೆಯಿಂದಲೇ **ಅಖಿಲಃ** ಸಮಗ್ರವಾದ **ಅಸೌ** ಈ **ಶತಶೃಂಗನಾಮಾ** ಶತಶೃಂಗವೆಂಬ ಹೆಸರಿನ **ಪರ್ವತಃ** ಪರ್ವತವು **ಸಂಚೂರ್ಣಿತಃ** ಪುಡಿಯಾಯಿತು.

**ತಾತ್ಪರ್ಯ** :- ಭೀಮಸೇನನು ಹುಟ್ಟಿದ ಮಾತ್ರಕ್ಕೆ ಭೂಮಿಯು ಸೀಳಿತು. ಕುಂತಿಯು ಮಗುವಿನೊಂದಿಗೆ ಶತಶೃಂಗ ಪರ್ವತಕ್ಕೆ ಬಂದಾಗ ಹುಲಿಯ ಗರ್ಜನೆಯ ಶಬ್ದವನ್ನು ಕೇಳಿ ಬೆದರಿ ಕುಂತಿಯ ಕೈ ನಡುಗಿತು. ಆಗ ಕುಂತಿಯ ಕೈಯಿಂದ ಭೀಮನು ಶತಶೃಂಗ ಪರ್ವತದ ಮೇಲೆ ಬಿದ್ದನು. ಅವನು ಬಿದ್ದದ್ದರಿಂದ ಈ ಪರ್ವತವು ಚೂರುಚೂರಾಯಿತು. (ಅವನು ಬಿದ್ದು ಪರ್ವತವು ಚೂರಾದ್ದರಿಂದ ಅದಕ್ಕೆ ಶತವೃಂಗವೆಂಬ ಹೆಸರು ಬಂದಿತೆಂದು ವ್ಯಾಖ್ಯಾನಿಸಬಾರದು. ಏಕೆಂದರೆ ಅವರು ಬರುವುದಕ್ಕೆ ಮೊದಲೇ ಈ ಪರ್ವತಕ್ಕೆ ಶತಶೃಂಗವೆಂದು ಹೆಸರಿತ್ತು. "ತಾಭ್ಯಾಂ ಸಮೇತಃ ಶತಶೃಂಗಪರ್ವತೇ" ಎಂಬ ಪ್ರಮಾಣವಿರುವುದರಿಂದ ವಾದೀರಾಜೀಯ ಜನಾರ್ದನೀಯ)

**ತಸ್ಮಿನ್ ಪ್ರಜಾತೇ ರುಧಿರಂ ಪ್ರಸುಸ್ರುವು-**
**ರ್ಮಹಾಸುರಾ ವಾಹನಸೈನ್ಯಸಂಯುತಾಃ ।**
**ನೃಪಾಶ್ಚ ತತ್ಪಕ್ಷಭವಾಃ ಸಮಸ್ತಾಸ್ತದಾ**
**ಭೀತಾ ಅಸುರಾ ರಾಕ್ಷಸಾಶ್ಚ ॥ ೫೬ ॥**

ಪದಚ್ಛೇದ : ತಸ್ಮಿನ್ ಪ್ರಜಾತೇ ರುಧಿರಂ ಪ್ರಸುಸ್ರುವುಃ ಮಹಾಸುರಾಃ **ವಾಹನಸೈನ್ಯಸಂಯುತಾಃ ನೃಪಾಃ ಚ ತತ್ಪಕ್ಷಭವಾಃ ಸಮಸ್ತಾಃ ತದಾ ಭೀತಾಃ ಅಸುರಾಃ ರಾಕ್ಷಸಾಃ ಚ.**

**ಅರ್ಥ** :- **ತಸ್ಮಿನ್** ಆ ಭೀಮನು **ಪ್ರಜಾತೇ (ಸತಿ)** ಹುಟ್ಟುತ್ತಿರಲು **ಮಹಾಸುರಾಃ** ದೊಡ್ಡ ಅಸುರರು **ಚ** ಮತ್ತು **ತತ್ಪಕ್ಷಭವಾಃ** ಆ ಅಸುರರ ಪಕ್ಷದಲ್ಲಿ ಜನಿಸಿದ **ವಾಹನಸೈನ್ಯಸಂಯುತಾಃ** ವಾಹನ ಹಾಗು ಸೈನ್ಯದಿಂದ ಸಹಿತರಾದ **ಸಮಸ್ತಾಃ** ಎಲ್ಲ **ನೃಪಾಃ** ರಾಜರು **ಅಸುರಾಃ** ಅಸುರರು **ಚ** ಮತ್ತು **ರಾಕ್ಷಸಾಃ** ರಾಕ್ಷಸರು **ಭೀತಾಃ (ಸಂತಃ)** ಹೆದರಿದವರಾಗಿ **ರುಧಿರಂ** ರಕ್ತವನ್ನು **ಪ್ರಸುಸ್ರುವುಃ** ಸುರಿಸಿದರು.

**ತಾತ್ಪರ್ಯ** :- ಭೀಮನು ಹುಟ್ಟಲು ಪಾತಾಳಾದಿ ಲೋಕದಲ್ಲಿ ಮೂಲರೂಪದಲ್ಲಿದ್ದ ಎಲ್ಲ ಅಸುರರೂ ಭೂಮಿಯಲ್ಲಿ ಅಸುರರ ಪಕ್ಷವಹಿಸಿ ಹುಟ್ಟಿದ ದುಷ್ಟರಾದ ಜರಾಸಂಧ ಮೊದಲಾದ ರಾಜರೂ, ಹಿಡಿಂಬ ಮೊದಲಾದ ರಾಕ್ಷಸರೂ ತಮ್ಮ ಮೂತ್ರದ್ವಾರ, ಗುದದ್ವಾರ ಹಾಗು ಮುಖಗಳಿಂದ ರಕ್ತ ಸುರಿಸಿದರು.

**ಅವರ್ಧತಾತ್ರೈವ ವೃಕೋದರೋ ವನೇ**
**ಮುದಂ ಸುರಾಣಾಮಭಿತಃ ಪ್ರವರ್ಧಯನ್ ।**
**ತದೈವ ಶೇಷೋ ಹರಿಣೋದಿತೋಽವಿಶದ್**
**ಗರ್ಭಂ ಸುತಾಯಾ ಅಪಿ ದೇವಕಸ್ಯ ॥ ೫೭ ॥**

ಪದಚ್ಛೇದ : ಅವರ್ಧತ ಅತ್ರ ಏವ, ವೃಕೋದರಃ ವನೇ ಮುದಂ ಸುರಾಣಾಂ ಅಭಿತಃ ಪ್ರವರ್ಧಯನ್ ತದಾ ಏವ ಶೇಷಃ ಹರಿಣಾ ಉದಿತಃ ಅವಿಶತ್ ಗರ್ಭಂ ಸುತಾಯಾಃ ಅಪಿ ದೇವಕಸ್ಯ.

**ಅರ್ಥ** :- **ವೃಕೋದರಃ** ಭೀಮಸೇನನು **ಅತ್ರ ಏವ** ಬದರಿಕಾಶ್ರಮದಲ್ಲೇ **ವನೇ** ಕಾಡಿನಲ್ಲಿ **ಸುರಾಣಾಂ** ದೇವತೆಗಳಿಗೆ **ಅಭಿತಃ** ಯಾವಾಗಲೂ **ಮುದಂ** ಸಂತೋಷವನ್ನು **ಪ್ರವರ್ಧಯನ್** ಹೆಚ್ಚಿಸುತ್ತಾ **ಅವರ್ಧತ** ಬೆಳೆದನು. **ತದಾ ಏವ** ದೇವತೆಗಳು ಅವತಾರಕ್ಕಾಗಿ ಭಗವಂತನಲ್ಲಿ ಪ್ರಾರ್ಥಿಸಿದ ಸಮಯದಲ್ಲೇ **ಹರಿಣಾ** ಪರಮಾತ್ಮನಿಂದ **ಉದಿತಃ** ಹೇಳಲ್ಪಟ್ಟ **ಶೇಷಃ ಅಪಿ** ಶೇಷನೂ ಕೂಡ **ದೇವಕಸ್ಯ** ದೇವಕನ **ಸುತಾಯಾಃ** ಮಗಳಾದ ದೇವಕಿಯ **ಗರ್ಭಂ** ಗರ್ಭವನ್ನು **ಅವಿಶತ್** ಪ್ರವೇಶಿಸಿದನು.

**ತಾತ್ಪರ್ಯ** :- ಹೀಗೆ ವೃಕೋದರನು ಬದರಿಕಾಶ್ರಮದ ಕಾಡಿನಲ್ಲಿ ದೇವತೆಗಳಿಗೆ ಯಾವಾಗಲೂ ಸಂತೋಷವನ್ನುಂಟು ಮಾಡುತ್ತಾ ಬೆಳೆದನು. ಬ್ರಹ್ಮಾದಿ ದೇವತೆಗಳು ಭಗವಂತನನ್ನು ಅವತಾರಕ್ಕಾಗಿ ಪ್ರಾರ್ಥಿಸಿದ ಸಮಯದಲ್ಲೇ ಪರಮಾತ್ಮನ ಅಪ್ಪಣೆಯಂತೆ ಶೇಷನು ದೇವಕಿಯ ಗರ್ಭವನ್ನು ಪ್ರವೇಶಿಸಿದನು.

**ಸ ತತ್ರ ಮಾಸತ್ರಯಮುಷ್ಯ ದುರ್ಗಯಾಽಪ-**
**ವಾಹಿತೋ ರೋಹಿಣೀಗರ್ಭಮಾಶು ।**
**ನಿಯುಕ್ತಯಾ ಕೇಶವೇನಾಥ ತತ್ರ ಸ್ಥಿತ್ವಾ**
**ಮಾಸಾನ್ ಸಪ್ತ ಜಾತಃ ಪೃಥಿವ್ಯಾಮ್ ॥ ೫೮ ॥**

ಪದಚ್ಛೇದ : ಸಃ ತತ್ರ ಮಾಸತ್ರಯಂ ಉಷ್ಯ ದುರ್ಗಯಾ ಅಪವಾಹಿತಃ ರೋಹಿಣೀಗರ್ಭಂ ಆಶು ನಿಯುಕ್ತಯಾ ಕೇಶವೇನ ಅಥ ತತ್ರ ಸ್ಥಿತ್ವಾ ಮಾಸಾನ್ ಸಪ್ತ ಜಾತಃ ಪೃಥಿವ್ಯಾಮ್.

**ಅರ್ಥ** :- **ಸಃ** ಆ ಶೇಷನು **ತತ್ರ** ಆ ದೇವಕಿಯ ಗರ್ಭದಲ್ಲಿ **ಮಾಸತ್ರಯಂ** ಮೂರು ಮಾಸಗಳು **ಉಷ್ಯ** ವಾಸಮಾಡಿ **ಕೇಶವೇನ** ಪರಮಾತ್ಮ ನಿಂದ **ನಿಯುಕ್ತಯಾ** ನಿಯೋಜಿಸಲ್ಪಟ್ಟ **ದುರ್ಗಯಾ** ದುರ್ಗೆಯಿಂದ **ಆಶು** ಶೀಘ್ರವಾಗಿ **ರೋಹಿಣೀಗರ್ಭಂ** ರೋಹಿಣಿಯ ಗರ್ಭವನ್ನು **ಅಪವಾಹಿತಃ (ಅಭೂತ್)** ಸೇರಿಸಲ್ಪಟ್ಟನು **ತತ್ರ** ಆ ರೋಹಿಣೀಗರ್ಭದಲ್ಲಿ **ಸಪ್ತ** ಏಳು **ಮಾಸಾನ್** ಮಾಸಗಳನ್ನು **ಸ್ಥಿತ್ವಾ** ಕಳೆದು **ಅಥ** ಆ ನಂತರ **ಪೃಥಿವ್ಯಾಂ** ಭೂಮಿಯಲ್ಲಿ **ಜಾತಃ (ಅಭೂತ್)** ಹುಟ್ಟಿದನು.

**ತಾತ್ಪರ್ಯ** :- ಪರಮಾತ್ಮನ ಅಪ್ಪಣೆಯಂತೆ ಶೇಷನು ದೇವಕಿಯ ಗರ್ಭದಲ್ಲಿ ಮೂರು ತಿಂಗಳ ಕಾಲ ವಾಸ ಮಾಡಿದನು. ನಂತರ ಪರಮಾತ್ಮ ನಿಂದ ನಿಯೋಜಿಸಲ್ಪಟ್ಟ ದುರ್ಗೆಯು ಶೇಷನನ್ನು ದೇವಕಿಯ ಗರ್ಭದಿಂದ ಆಕರ್ಷಿಸಿ ರೋಹಿಣಿಯ ಗರ್ಭವನ್ನು ಸೇರಿಸುತ್ತಾಳೆ. ಆ ರೋಹಿಣಿಯ ಗರ್ಭದಲ್ಲಿ ಏಳುತಿಂಗಳು ವಾಸ ಮಾಡಿ ನಂತರ ಶೇಷನು ಭೂಮಿ ಯಲ್ಲಿ ಹುಟ್ಟುತ್ತಾನೆ.

**ಸ ನಾಮತೋ ಬಲದೇವೋ ಬಲಾಢ್ಯೋ**
**ಬಭೂವ ತಸ್ಯಾನು ಜನಾರ್ದನಃ ಪ್ರಭುಃ ।**
**ಆವಿರ್ಬಭೂವಾಖಿಲಸದ್ಗುಣೈಕ**
**ಪೂರ್ಣಃ ಸುತಾಯಾಮಪಿ ದೇವಕಸ್ಯ ॥ ೫೯ ॥**

ಪದಚ್ಛೇದ : ಸಃ ನಾಮತಃ ಬಲದೇವಃ ಬಲಾಢ್ಯಃ ಬಭೂವ ತಸ್ಯ ಅನು ಜನಾರ್ದನಃ ಪ್ರಭುಃ ಆವಿರ್ಬಭೂವ, ಅಖಿಲಸದ್ಗುಣೈಕಪೂರ್ಣಃ ಸುತಾಯಾಂ ಅಪಿ ದೇವಕಸ್ಯ.

**ಅರ್ಥ** :- **ಬಲಾಢ್ಯಃ** ಬಲದಿಂದ ತುಂಬಿದ **ಸಃ** ಆ ಶೇಷನು **ನಾಮತಃ** ಹೆಸರಿನಿಂದ **ಬಲದೇವಃ** ಬಲದೇವನು **ಬಭೂವ** ಆದನು **ತಸ್ಯ** ಆ ಬಲದೇವನ **ಅನು** ನಂತರ **ಅಖಿಲಸದ್ಗುಣೈಕಪೂರ್ಣ** ಎಲ್ಲಾ ಸದ್ಗುಣಗಳಿಂದ ಮುಖ್ಯವಾಗಿ ಪೂರ್ಣನಾದ **ಪ್ರಭುಃ** ಸಮರ್ಥನಾದ **ಜನಾರ್ದನಃ ಅಪಿ** ಜನಾರ್ದನನೂ ಕೂಡ **ದೇವಕಸ್ಯ** ದೇವಕನ **ಸುತಾಯಾಂ** ಮಗಳಾದ ದೇವಕಿಯಲ್ಲಿ **ಆವಿರ್ಭಭೂವ** ಆವಿರ್ಭವಿಸಿದನು.

**ತಾತ್ಪರ್ಯ** :- ರೋಹಿಣೀಗರ್ಭದಿಂದ ಹುಟ್ಟಿದ ಶೇಷ ಬಲದಿಂದ ತುಂಬಿದ್ದನು. ಆದ್ದರಿಂದ ಅವನಿಗೆ ಬಲದೇವನೆಂಬ ಹೆಸರು ಬಂದಿತು. ಬಲದೇವನ ನಂತರ ಸಕಲಗುಣಪರಿಪೂರ್ಣನಾದ ಪರಮಾತ್ಮನು ದೇವಕಿಯಲ್ಲಿ ಆವಿರ್ಭವಿಸಿದನು.

**ಯಃ ಸತ್ಸುಖಜ್ಞಾನಬಲೈಕದೇಹಃ**
**ಸಮಸ್ತದೋಷಸ್ಪರ್ಶೋಜ್ಝಿತಃ ಸದಾ ।**
**ಅವ್ಯಕ್ತತತ್ಕಾರ್ಯಮಯೋ ನ ಯಸ್ಯ**
**ದೇಹಃ ಕುತಶ್ಚಿತ್ ಕ್ವ ಚ ಸ ಹ್ಯಜೋ ಹರಿಃ ॥ ೬೦ ॥**

**ಪದಚ್ಛೇದ** : ಯಃ ಸತ್ಸುಖಜ್ಞಾನಬಲೈಕದೇಹಃ ಸಮಸ್ತದೋಷಸ್ಪರ್ಶೋಜ್ಝಿತಃ ಸದಾ ಅವ್ಯಕ್ತತತ್ಕಾರ್ಯಮಯಃ ನ ಯಸ್ಯ ದೇಹಃ ಕುತಶ್ಚಿತ್ ಕ್ವ ಚ ಸಃ ಹಿ ಅಜಃ ಹರಿಃ.

**ಅರ್ಥ** :- **ಯಃ** ಯಾವನು **ಸತ್ಸುಖಜ್ಞಾನಬಲೈಕದೇಹಃ** ನಿರ್ದುಷ್ಟವಾದ ಜ್ಞಾನ-ಬಲ ಮೊದಲಾದ ಗುಣಗಳೇ ಮುಖ್ಯವಾಗಿ ದೇಹವಾಗಿ ಉಳ್ಳವನೋ **ಸದಾ** ಯಾವಾಗಲೂ **ಸಮಸ್ತದೋಷಸ್ಪರ್ಶೋಜ್ಝಿತಃ** ಎಲ್ಲಾ ದೋಷಗಳ ಸಂಪರ್ಕದಿಂದ ರಹಿತನಾದವನೋ **ಚ** ಮತ್ತು **ಯಸ್ಯ** ಯಾವನ **ದೇಹಃ** ಶರೀರವು **ಕುತಶ್ಚಿತ್** ಯಾವ ಕಾರಣದಿಂದಾಗಲೀ **ಕ್ವ ಚ** ಯಾವ ದೇಶದಲ್ಲಾಗಲೀ ಯಾವ ಕಾಲದಲ್ಲಾಗಲೀ **ಅವ್ಯಕ್ತತತ್ಕಾರ್ಯಮಯಃ ನ** ಮೂಲ ಪ್ರಕೃತಿಯ ಅಥವಾ ಅದರ ಕಾರ್ಯವಾದ ಪಂಚಭೂತಗಳ ವಿಕಾರವಲ್ಲವೋ **ಸಃ** ಅಂತಹ **ಹರಿಃ** ಪರಮಾತ್ಮನು **ಅಜಃ** ಜನನ ರಹಿತನು. **ಹಿ** (ಇದು) ಶ್ರುತಿಪ್ರಸಿದ್ಧವು.

**ತಾತ್ಪರ್ಯ** :- ಪರಮಾತ್ಮನು ನಿರ್ದುಷ್ಟವಾದ ಜ್ಞಾನಬಲ ಮೊದಲಾದ ಗುಣಗಳೇ ಶರೀರವಾಗಿ ಉಳ್ಳವನು. ಅವನಿಗೆ ಯಾವ ದೋಷದ ಸಂಪರ್ಕವೂ ಇಲ್ಲ, ಯಾವ ರೀತಿಯೇ ಆಗಲಿ ಎಂದಿಗೂ ಎಲ್ಲೂ ಅವನ ದೇಹವು ಮೂಲಪ್ರಕೃತಿಯಿಂದಾಗಲಿ ಮೂಲಪ್ರಕೃತಿಯ ಕಾರ್ಯವಾದ ಭೂತಗಳಿಂದಾಗಲೀ ವಿಕಾರಹೊಂದಿದ್ದಲ್ಲ. ಆದ್ದರಿಂದ ಆ ಪರಮಾತ್ಮನು ಜನನ ರಹಿತನು. ''ನ ಜಾಯತೇ ಮ್ರಿಯತೇ ವಾ ಕದಾಚಿತ್'' ಮೊದಲಾದ ಶ್ರುತಿಯೂ ಇದನ್ನೇ ಹೇಳುತ್ತಿದೆ.

ನ ಶುಕ್ಲರಕ್ತಪ್ರಭವೋಽಸ್ಯ ಕಾಯಸ್ತಥಾಪಿ
ತತ್ಪುತ್ರತಯೋಚ್ಯತೇ ಮೃಷಾ ।
ಜನಸ್ಯ ಮೋಹಾಯ ಶರೀರತೋಽಸ್ಯಾ
ಯದಾವಿರಾಸೀದಮಲಸ್ವರೂಪಃ ॥ ೬೧ ॥

ಪದಚ್ಛೇದ :ನ ಶುಕ್ಲರಕ್ತಪ್ರಭವಃ ಅಸ್ಯ ಕಾಯಃ ತಥಾಪಿ ತತ್ಪುತ್ರತಯಾ ಉಚ್ಯತೇ ಮೃಷಾ ಜನಸ್ಯ ಮೋಹಾಯ ಶರೀರತಃ ಅಸ್ಯಾಃ ಯತ್ ಆವಿರಾಸೀತ್ ಅಮಲಸ್ವರೂಪಃ

**ಅರ್ಥ** :- **(ಯದ್ಯಪಿ)** ನಿಜವಾಗಿ **ಅಸ್ಯ** ಈ ಪರಮಾತ್ಮನ **ಕಾಯಃ** ಶರೀರವು **ಶುಕ್ಲರಕ್ತಪ್ರಭವಃ ನ** ರೇತಸ್ಸು ರಕ್ತಗಳಿಂದ ಉಂಟಾದದ್ದಲ್ಲ **ತಥಾಪಿ** ಆದರೂ ಕೂಡ **ಮೃಷಾ** ಅಜ್ಞಾನದಿಂದ **ತತ್ಪುತ್ರತಯಾ** ಆ ವಸುದೇವ-ದೇವಕಿಯರ ಮಗನೆಂದು **ಉಚ್ಯತೇ** ಕರೆಯಲ್ಪಡುತ್ತಾನೆ **ಯತ್** ಯಾವ ಕಾರಣದಿಂದ **ಜನಸ್ಯ** ಅಸುರಜನರ **ಮೋಹಾಯ** ಮೋಹಕ್ಕಾಗಿ **ಅಸ್ಯಾಃ** ಈ ದೇವಕಿಯ **ಶರೀರತಃ** ಶರೀರದಿಂದ **ಅಮಲಸ್ವರೂಪಃ** ದೋಷರಹಿತಸ್ವರೂಪವುಳ್ಳ ಪರಮಾತ್ಮನು **ಆವಿರಾಸೀತ್** ಆವಿರ್ಭವಿಸಿದನು.

**ತಾತ್ಪರ್ಯ** :- ಪರಮಾತ್ಮನ ಶರೀರವು ವಸುದೇವ ದೇವಕಿಯರ ಶುಕ್ಲ-ಶೋಣಿತಗಳಿಂದ ಉಂಟಾದದ್ದಲ್ಲ. ಆದರೂ ಅವರ ಪುತ್ರ ಎಂದೇ ಲೋಕದಲ್ಲಿ ಕರೆಯಲ್ಪಡುತ್ತಾನೆ. ಏಕೆಂದರೆ ನಿರ್ದುಷ್ಟಸ್ವರೂಪನಾದ ಪರಮಾತ್ಮನು ಅಜ್ಞನರಿಗೆ ಭ್ರಮೆಯುಂಟುಮಾಡಬೇಕು. ಅದಕ್ಕಾಗಿ ದೇವಕಿಯ ಶರೀರದಿಂದ ಆವಿರ್ಭವಿಸಿದನು.

ಆವಿಶ್ಯ ಪೂರ್ವಂ ವಸುದೇವಮೇವ
ವಿವೇಶ ತಸ್ಮಾದೃತುಕಾಲ ಏವ ।
ದೇವೀಮುವಾಸಾತ್ರ ಚ ಸಪ್ತಮಾಸಾನ್
ಸಾರ್ಧಾಂಸ್ತತಶ್ಚಾಽವಿರಭೂದಜೋಽಪಿ ॥ ೬೨ ॥

ಪದಚ್ಛೇದ : ಆವಿಶ್ಯ ಪೂರ್ವಂ ವಸುದೇವಂ ಏವ ವಿವೇಶ ತಸ್ಮಾತ್ ಋತುಕಾಲೇ ಏವ ದೇವೀಂ ಉವಾಸ ಅತ್ರ ಚ ಸಪ್ತ ಮಾಸಾನ್ ಸಾರ್ಧಾನ್ ತತಃ ಚ ಆವಿರಭೂತ್ ಅಜಃ ಅಪಿ.

**ಅರ್ಥ** :- **(ಸಃ)** ಆ ಪರಮಾತ್ಮನು **ಪೂರ್ವಂ** ಮೊದಲಿಗೆ **ವಸುದೇವಂ** ಏವ ವಸುದೇವನನ್ನೇ ವಿವೇಶ ಪ್ರವೇಶಿಸಿದನು. **ತಸ್ಮಾತ್** ಆ ವಸುದೇವನಿಂದ **ಋತುಕಾಲೇ** ಏವ ಋತುಕಾಲದಲ್ಲಿಯೇ **ದೇವೀಂ** ದೇವಕಿಯನ್ನು ವಿವೇಶ ಪ್ರವೇಶಿಸಿದನು **ಅತ್ರ ಚ** ಈ ದೇವಕಿಯ ಗರ್ಭದಲ್ಲಾದರೂ **ಸರ್ಧಾನ್** ಅರ್ಧದಿಂದ ಸಹಿತವಾದ **ಸಪ್ತ** ಏಳು **ಮಾಸಾನ್** ತಿಂಗಳನ್ನು **ಉವಾಸ** ವಾಸ ಮಾಡಿದನು. **ತತಃ ಚ** ಅನಂತರವಷ್ಟೇ **ಅಜಃ ಅಪಿ** ಜನನ ರಹಿತನಾದರೂ ಕೂಡ **ಆವಿರಭೂತ್** ಆವಿರ್ಭವಿಸಿದನು.

**ತಾತ್ಪರ್ಯ** :- ಪರಮಾತ್ಮನು ವಸುದೇವನನ್ನು ಮೊದಲಿಗೆ ಪ್ರವೇಶಿಸಿ ನಂತರ ಋತುಕಾಲದಲ್ಲಿ ವಸುದೇವನಿಂದ ದೇವಕಿಯ ಗರ್ಭವನ್ನು ಪ್ರವೇಶಿಸಿದನು (ವಸುದೇವ-ದೇವಕಿಯರಲ್ಲಿ ಪರಮಾತ್ಮನ ಪ್ರವೇಶವು ಭೂತಾವೇಶದಂತೆಯೇ ಹೊರತು ರೇತಸ್ಸಿನ ಮೂಲಕವಲ್ಲ - ವಾದಿರಾಜೀಯ). ದೇವಕಿಯ ಗರ್ಭದಲ್ಲಿ ಏಳೂವರೆ ತಿಂಗಳ ಕಾಲವಿದ್ದು ನಂತರ ಆವಿರ್ಭವಿಸಿದನು. (ಮೊದಲು ಬಲರಾಮನೊಂದಿಗೆ ಶುಕ್ಲಕೇಶರೂಪದಿಂದ ಮೂರು ತಿಂಗಳು ಇದ್ದು ಬಲರಾಮನು ಹೊರಕ್ಕೆ ಹೋದ ನಂತರ ಏಳು ತಿಂಗಳು ಇದ್ದು ನಂತರ ಆವಿರ್ಭವಿಸಿದನು - ವಾದಿರಾಜೀಯ).

**ಯಥಾ ಪುರಾ ಸ್ತಂಭತ ಆವಿರಾಸೀದ-**
**ಶುಕ್ಲರಕ್ತೋಽಪಿ ನೃಸಿಂಹರೂಪಃ ।**
**ತಥೈವ ಕೃಷ್ಣೋಽಪಿ ತಥಾಽಪಿ ಮಾತಾಪಿತೃ-**
**ಕ್ರಮಾದೇವ ವಿಮೋಹಯತ್ಯಜಃ ॥ ೬೩ ॥**

**ಪದಚ್ಛೇದ : ಯಥಾ ಪುರಾ ಸ್ತಂಭತಃ ಅವಿರಾಸೀತ್ ಆಶುಕ್ಲರಕ್ತಃ ಅಪಿ ನೃಸಿಂಹರೂಪಃ ತಥಾ ಏವ ಕೃಷ್ಣಃ ಅಪಿ ತಥಾ ಅಪಿ ಮಾತಾಪಿತೃಕ್ರಮಾತ್ ಏವ ವಿಮೋಹಯತಿ ಅಜಃ**

**ಅರ್ಥ** :- **ಯಥಾ** ಹೇಗೆ **ಪುರಾ** ಹಿಂದೆ **ಅಶುಕ್ಲರಕ್ತಃ ಅಪಿ** ಶುಕ್ಲಶೋಣಿತಗಳ ಸಂಬಂಧವಿಲ್ಲದೇ **ನೃಸಿಂಹರೂಪಃ** ನರಸಿಂಹರೂಪಿಯಾದ ಪರಮಾತ್ಮನು **ಸ್ತಂಭತಃ** ಕಂಭದಿಂದ **ಆವಿರಾಸೀತ್** ಆವಿರ್ಭೂತನಾಗಿದ್ದನೋ **(ಯದ್ಯಪಿ)** ನಿಜವಾಗಿಯೂ **ಕೃಷ್ಣಃ ಅಪಿ** ಕೃಷ್ಣನೂ ಕೂಡ **ತಥಾ ಏವ** ನರಸಿಂಹನಂತೆ ಶುಕ್ಲಶೋಣಿತದ ಸಂಬಂಧವಿಲ್ಲದವನು **ತಥಾ ಅಪಿ** ಆದರೂ ಕೂಡ **ಅಜಃ** ಜನನ ರಹಿತನಾದ ಕೃಷ್ಣನು **ಮಾತಾಪಿತೃಕ್ರಮಾತ್ ಏವ** ಮಾತಾಪಿತೃಕ್ರಮವನ್ನು ಅನುಸರಿಸಿಯೇ; **ವಿಮೋಹಯತಿ** (ಅಸುರಜನರನ್ನು) ಭ್ರಾಂತರನ್ನಾಗಿಸುತ್ತಾನೆ.

ತಾತ್ಪರ್ಯ :- ಹಿಂದೆ ಕಂಭದಿಂದ ಆವಿರ್ಭೂತವಾದ ಪರಮಾತ್ಮನ ನರಸಿಂಹರೂಪವು ಶುಕ್ಲಶೋಣಿತಗಳ ಸಂಬಂಧವಿಲ್ಲದ್ದಾಗಿತ್ತೋ ಅದೇ ರೀತಿ ಕೃಷ್ಣನೂ ಕೂಡ ಶುಕ್ಲಶೋಣಿತಗಳ ಸಂಬಂಧವಿಲ್ಲದವನು. ಆದರೂ ಅಸುರಜನರ ಮೋಹಕ್ಕಾಗಿ ಮೊದಲಿಗೆ ತಂದೆಯನ್ನು ಪ್ರವೇಶಿಸಿ ನಂತರ ತಾಯಿಯನ್ನು ಪ್ರವೇಶಿಸಿ ಅಲ್ಲಿಂದ ಹೊರಕ್ಕೆ ಪ್ರಕಟನಾದನು.

**ಪಿತೃಕ್ರಮಂ ಮೋಹನಾರ್ಥಂ ಸಮೇತಿ**
**ನ ತಾವತಾ ಶುಕ್ಲತೋ ರಕ್ತತಶ್ಚ ।**
**ಜಾತೋಽಸ್ಯ ದೇಹಸ್ತ್ವಿತಿ ದರ್ಶನಾಯ**
**ಸಶಂಖಚಕ್ರಾಬ್ಜಗದಃ ಸ ದೃಷ್ಟಃ ॥ ೬೪ ॥**

ಪದಚ್ಛೇದ : ಪಿತೃಕ್ರಮಂ ಮೋಹನಾರ್ಥಂ ಸಮೇತಿ ನ ತಾವತಾ ಶುಕ್ಲತಃ ರಕ್ತತಃ ಚ ಜಾತಃ ಅಸ್ಯ ದೇಹಃ ತು ಇತಿ ದರ್ಶನಾಯ ಸಶಂಖಚಕ್ರಾಬ್ಜಗದಃ ಸಃ ದೃಷ್ಟಃ

ಅರ್ಥ :- ಸಃ ಆ ಶ್ರೀಕೃಷ್ಣನು **ಮೋಹನಾರ್ಥಂ** (ಅಸುರಜನರ) ಮೋಹಕ್ಕಾಗಿ **ಪಿತೃಕ್ರಮಂ** ಮಾತಾಪಿತೃಕ್ರಮವನ್ನು **ಸಮೇತಿ** ಅನುಕರಿಸುತ್ತಾನೆ **ತಾವತಾ** ಅಷ್ಟರಿಂದಲೇ **ಅಸ್ಯ** ಈ ಕೃಷ್ಣನ **ದೇಹಃ** ಶರೀರವು **ಶುಕ್ಲತಃ** ರೇತಸ್ಸಿನಿಂದ **ಚ** ಮತ್ತು **ರಕ್ತತಃ** ರಕ್ತದಿಂದ **ನ ಜಾತಃ** ಹುಟ್ಟಿದ್ದಲ್ಲ **ಇತಿ** ಎಂದು **ದರ್ಶನಾಯ** ತೋರಿಸಲು **ಸಶಂಖಚಕ್ರಾಬ್ಜಗಧಃ** (ಸನ್) ಶಂಖಚಕ್ರಪದ್ಮ ಗದಾಸಹಿತನಾಗಿಯೇ **ದೃಷ್ಟಃ** ಕಾಣಲ್ಪಟ್ಟನು.

ತಾತ್ಪರ್ಯ :- ಪರಮಾತ್ಮನು ಅಸುರಜನರ ಮೋಹಕ್ಕಾಗಿಯೇ ಲೋಕದ ಮಾತಾಪಿತೃಕ್ರಮವನ್ನು ಅನುಸರಿಸುತ್ತಾನೆ. ಅಷ್ಟರಿಂದಲೇ ಲೋಕದ ಜನರಿಗಿರುವಂತೆ ಪರಮಾತ್ಮನ ದೇಹವೂ ರೇತಸ್ಸು ಹಾಗು ರಕ್ತಗಳಿಂದ ಉಂಟಾದದ್ದು ಎಂದು ಹೇಳಬಾರದು. ಇದನ್ನು ತೋರಿಸಲೆಂದೇ ಕೃಷ್ಣನು ಶಂಖ-ಚಕ್ರ-ಗಧಾ-ಪದ್ಮಧಾರಿಯಾಗಿಯೇ ಸಜ್ಜನರಿಗೆ ಕಂಡನು.

**ಅನೇಕ ಸೂರ್ಯಾಭಕಿರೀಟಯುಕ್ತೋ**
**ವಿದ್ಯುತ್ಪ್ರಭೇ ಕುಂಡಲೇ ಧಾರಯಂಶ್ಚ ।**
**ಪೀತಾಂಬರೋ ವನಮಾಲೀ ಸ್ವನಂತಸೂರ್ಯೋ-**
**ರುದೀಪ್ತಿರ್ದದೃಶೇ ಗುಣಾರ್ಣವಃ ॥ ೬೫ ॥**

ಪದಚ್ಛೇದ : ಅನೇಕಸೂರ್ಯಾಭಕಿರೀಟಯುಕ್ತಃ ವಿದ್ಯುತ್ಪ್ರಭೇ ಕುಂಡಲೇ ಧಾರಯನ್ ಚ ಪೀತಾಂಬರಃ ವನಮಾಲೀ ಸ್ವನಂತಸೂರ್ಯೋರುದೀಪ್ತಿಃ ದದೃಶೇ ಗುಣಾರ್ಣವಃ.

**ಅರ್ಥ :- ಗುಣಾರ್ಣವಃ** ಗುಣಗಳಿಗೆ ಸಮುದ್ರನಂತಿರುವ ಶ್ರೀಕೃಷ್ಣನು **ಅನೇಕಸೂರ್ಯಾಭಕಿರೀಟಯುಕ್ತಃ** ಅನಂತಸೂರ್ಯನ ಕಾಂತಿಗೆ ಸಮನಾದ ಕಾಂತಿಯುಳ್ಳ ಕಿರೀಟದಿಂದ ಕೂಡಿದವನಾಗಿ **ವಿದ್ಯುತ್ಪ್ರಭೇ** ಮಿಂಚಿನಂತೆ ಕಾಂತಿಯುಳ್ಳ **ಕುಂಡಲೇ** ಕುಂಡಲಗಳನ್ನು **ಧಾರಯನ್** ಧರಿಸಿದವನಾಗಿ **ಪೀತಾಂಬರಃ** ಪೀತಾಂಬರವನ್ನು ಧರಿಸಿದವನಾಗಿ **ವನಮಾಲೀ** ವನಮಾಲೆಯನ್ನು ಧರಿಸಿದವನಾಗಿ **ಚ** ಮತ್ತು **ಸ್ವನಂತಸೂರ್ಯೋರುದೀಪ್ತಿಃ** ಶೋಭಿಸುವ ಅನಂತಸೂರ್ಯರಿಗೆ ಸಮಾನವಾದ ಉತ್ಕೃಷ್ಟಕಾಂತಿಯುಳ್ಳವನಾಗಿ **ದದೃಶೇ** ಕಂಡನು.

**ತಾತ್ಪರ್ಯ :-** ಗುಣಗಳಿಗೆ ಸಾಗರದಂತಿರುವ ಕೃಷ್ಣನು ಅನಂತ ಸೂರ್ಯರ ಕಾಂತಿಗೆ ಸಮನಾದ ಕಾಂತಿಯುಳ್ಳ ಕಿರೀಟವನ್ನು ಧರಿಸಿ, ಮಿಂಚಿನಂತೆ ಹೊಳೆಯುವ ಕುಂಡಲಗಳನ್ನು ಧರಿಸಿ, ಪೀತಾಂಬರಧಾರಿಯಾಗಿ ವನಮಾಲೆಯನ್ನೂ ಧರಿಸಿ ಅನಂತಸೂರ್ಯರ ಉತ್ಕೃಷ್ಟಕಾಂತಿಯೊಂದಿಗೆ ಕಂಡನು.

**ಸ ಕಂಜಯೋನಿಪ್ರಮುಖೈಃ ಸುರೈಃ ಸ್ತುತಃ ಪಿತ್ರಾ**
**ಚ ಮಾತ್ರಾ ಚ ಜಗಾದ ಶೂರಜಮ್ ।**
**ನಯಸ್ವ ಮಾಂ ನಂದಗೃಹಾನಿತಿ ಸ್ಮ**
**ತತೋ ಬಭೂವ ದ್ವಿಭುಜೋ ಜನಾರ್ದನಃ ॥ ೬೬ ॥**

ಪದಚ್ಛೇದ : ಸಃ ಕಂಜಯೋನಿಪ್ರಮುಖೈಃ ಸುರೈಃ ಸ್ತುತಃ ಪಿತ್ರಾ ಚ ಮಾತ್ರಾ ಚ ಜಗಾದ ಶೂರಜಂ ನಯಸ್ವ ಮಾಂ ನಂದಗೃಹಾನ್ ಇತಿ ಸ್ಮ ತತಃ ಬಭೂವ ದ್ವಿಭುಜಃ ಜನಾರ್ದನಃ.

**ಅರ್ಥ :- ಸಃ** ಆ ಕೃಷ್ಣನು **ಕಂಜಯೋನಿಪ್ರಮುಖೈಃ** ಕಮಲೋದ್ಭವನಾದ ಬ್ರಹ್ಮನೇ ಮೊದಲಾದ **ಸುರೈಃ** ದೇವತೆಗಳಿಂದ **ಚ** ಮತ್ತು **ಪಿತ್ರಾ** ತಂದೆಯಿಂದ **ಚ** ಮತ್ತು **ಮಾತ್ರಾ** ತಾಯಿಯಿಂದ **ಸ್ತುತಃ (ಸನ್)** ಸ್ತುತಿಸಲ್ಪಟ್ಟವನಾಗಿ

**ಶೂರಜಂ (ಪ್ರತಿ)** ಶೂರಸೇನನ ಮಗನಾದ ವಸುದೇವನನ್ನು ಕುರಿತು **ಮಾಂ** ನನ್ನನ್ನು **ನಂದಗೃಹಾನ್ (ಪ್ರತಿ)** ನಂದನ ಮನೆಯನ್ನು ಕುರಿತು; **ನಯಸ್ವ** ಕರೆದುಕೊಂಡು ಹೋಗು **ಇತಿ** ಎಂದು **ಜಗಾದ** ಹೇಳಿದನು **ತತಃ** ಆ ನಂತರ **ಜನಾರ್ದನಃ** ಜನಾರ್ದನನು **ದ್ವಿಭುಜಃ** ಎರಡು ಭುಜವುಳ್ಳವನು **ಬಭೂವ ಸ್ಮ** ಆದನು.

**ತಾತ್ಪರ್ಯ** :- ಆ ಕೃಷ್ಣನನ್ನು ಕಮಲೋದ್ಭವನಾದ ಬ್ರಹ್ಮನೇ ಮೊದಲಾದ ದೇವತೆಗಳು ಹಾಗು ತಂದೆ-ತಾಯಿಯರಾದ ವಸುದೇವ-ದೇವಕಿಯರು ಸ್ತುತಿಸಿದರು. ನಂತರ ಕೃಷ್ಣನು ವಸುದೇವನಿಗೆ ಹೇಳಿದನು; ''ನನ್ನನ್ನು ನಂದನ ಮನೆಗೆ ಕರೆದುಕೊಂಡು ಹೋಗು'' ಎಂದು. ಹೀಗೆ ಹೇಳಿ ಚತುರ್ಭುಜ ನಾಗಿದ್ದವನು ದ್ವಿಭುಜನಾದನು.

**ತದೈವ ಜಾತಾ ಚ ಹರೇರನುಜ್ಞಯಾ**
**ದುರ್ಗಾಭಿಧಾ ಶ್ರೀರನು ನಂದಪತ್ನ್ಯಾಮ್ ।**
**ತತಸ್ತಮಾದಾಯ ಹರಿಂ ಯಯೌ ಸ**
**ಶೂರಾತ್ಮಜೋ ನಂದಗೃಹಾನ್ ನಿಶೀಥೇ ॥ ೬೭ ॥**

ಪದಚ್ಛೇದ : ತದಾ ಏವ ಜಾತಾ ಚ ಹರೇಃ ಅನುಜ್ಞಯಾ ದುರ್ಗಾಭಿಧಾ ಶ್ರೀಃ ಅನು ನಂದಪತ್ನ್ಯಾಂ ತತಃ ತಂ ಆದಾಯ ಹರಿಂ ಯಯೌ ಸಃ ಶೂರಾತ್ಮಜಃ ನಂದಗೃಹಾನ್ ನಿಶೀಥೇ.

**ಅರ್ಥ** :- **ತದಾ ಏವ** ಕೃಷ್ಣನು ಆವಿರ್ಭವಿಸಿದ ಕಾಲದಲ್ಲೇ **ಹರೇಃ** ಪರಮಾತ್ಮನ **ಅನುಜ್ಞಯಾ** ಅಪ್ಪಣೆಯಿಂದ **ಅನು** (ಪರಮಾತ್ಮನನ್ನು) ಅನುಸರಿಸಿ **ಶ್ರೀಃ ಚ** ಲಕ್ಷ್ಮೀದೇವಿಯೂ ಕೂಡ **ದುರ್ಗಾಭಿಧಾ (ಸತೀ)** ದುರ್ಗಾ ಎಂಬ ಹೆಸರುಳ್ಳವಳಾಗಿ; **ನಂದಪತ್ನ್ಯಾಂ** ನಂದನ ಹೆಂಡತಿಯಲ್ಲಿ **ಜಾತಾ** ಹುಟ್ಟಿದಳು. **ತತಃ** ಅನಂತರ **ಶೂರಾತ್ಮಜಃ** ಶೂರಸೇನನ ಮಗನಾದ **ಸಃ** ಆ ವಸುದೇವನು **ತಂ** ಅಭಿವ್ಯಕ್ತನಾದ ಆ **ಹರಿಂ** ಕೃಷ್ಣನನ್ನು **ಆದಾಯ** ತೆಗೆದುಕೊಂಡು **ನಿಶೀಥೇ** ರಾತ್ರಿಯಲ್ಲಿ **ನಂದಗೃಹಾನ್ (ಪ್ರತಿ)** ನಂದನ ಮನೆಯನ್ನು ಕುರಿತು **ಯಯೌ** ಹೋದನು.

**ತಾತ್ಪರ್ಯ** :- ಕೃಷ್ಣನು ಆವಿರ್ಭವಿಸಿದ ಸಮಯದಲ್ಲೇ ಲಕ್ಷ್ಮೀ ದೇವಿಯೂ ನಂದನ ಹೆಂಡತಿಯಲ್ಲಿ ದುರ್ಗೆಯೆಂಬ ಹೆಸರಿನಿಂದ ಹುಟ್ಟಿದಳು.

ಕೃಷ್ಣನು ದ್ವಿಭುಜನಾದ ನಂತರ ವಸುದೇವನು ಅವನನ್ನು ಕರೆದುಕೊಂಡು ನಂದನ ಮನೆಗೆ ಹೋದನು.

**ಸಂಸ್ಥಾಪ್ಯ ತಂ ತತ್ರ ತಥೈವ ಕನ್ಯಕಾಮಾದಾಯ**
**ತಸ್ಮಾತ್ ಸ್ವಗೃಹಂ ಪುನರ್ಯಯೌ ।**
**ಹತ್ವಾ ಸ್ವಸುರ್ಗರ್ಭಷಟ್ಕಂ ಕ್ರಮೇಣ**
**ಮತ್ವಾಷ್ಟಮಂ ತತ್ರ ಜಗಾಮ ಕಂಸಃ ॥ ೬೮ ॥**

ಪದಚ್ಛೇದ : ಸಂಸ್ಥಾಪ್ಯ ತಂ ತತ್ರ ತಥಾ ಏವ ಕನ್ಯಕಾಂ ಆದಾಯ ತಸ್ಮಾತ್ ಸ್ವಗೃಹಂ ಪುನಃ ಯಯೌ ಹತ್ವಾ ಸ್ವಸುಃ ಗರ್ಭಷಟ್ಕಂ ಕ್ರಮೇಣ ಮತ್ವಾ ಅಷ್ಟಮಂ ತತ್ರ ಜಾಗಮು ಕಂಸಃ.

**ಅರ್ಥ** :- **(ಸಃ)** ಆ ವಸುದೇವನು **ತತ್ರ** ನಂದಗೋಪನ ಮನೆಯಲ್ಲಿ **ತಂ** ಆ ಕೃಷ್ಣನನ್ನು **ಸಂಸ್ಥಾಪ್ಯ** ಇಟ್ಟು **ತಥಾ ಏವ** ಹಾಗೆಯೇ **ತಸ್ಮಾತ್** ನಂದನ ಮನೆಯಿಂದ **ಕನ್ಯಕಾಂ** ಕನ್ಯೆಯನ್ನು **ಆದಾಯ** ತೆಗೆದುಕೊಂಡು **ಪುನಃ** ಮತ್ತೆ **ಸ್ವಗೃಹಂ (ಪ್ರತಿ)** ತನ್ನ ಮನೆಯನ್ನು ಕುರಿತು **ಯಯೌ** ಹೊರಟನು **ಕಂಸಃ** ಕಂಸನು **ಸ್ವಸುಃ** ತಂಗಿಯಾದ ದೇವಕಿಯ **ಗರ್ಭಷಟ್ಕಂ** ಆರು ಮಕ್ಕಳನ್ನು **ಕ್ರಮೇಣ** ಕ್ರಮವಾಗಿ **ಹತ್ವಾ** ಕೊಂದು **ಅಷ್ಟಮಂ** ಎಂಟನೆಯ ಮಗುವನ್ನು **ಮತ್ವಾ** (ಹುಟ್ಟಿದ್ದಾಗಿ) ತಿಳಿದು **ತತ್ರ** ಸೂತಿಕಾಗೃಹಕ್ಕೆ **ಜಗಾಮ** ಹೋದನು.

**ತಾತ್ಪರ್ಯ** :- ಆ ವಸುದೇವನು ನಂದಗೋಪನ ಮನೆಯಲ್ಲಿ ಕೃಷ್ಣನನ್ನು ಇಟ್ಟು ಅಲ್ಲಿಂದ ದುರ್ಗೆಯನ್ನು ತೆಗೆದುಕೊಂಡು ತನ್ನ ಮನೆಗೆ ಹೋದನು. ಕಂಸನು ಈ ಹಿಂದೆ ತನ್ನ ತಂಗಿಯಾದ ದೇವಕಿಯ ಆರು ಮಕ್ಕಳನ್ನು ಅವುಗಳು ಹುಟ್ಟಿದ ಕ್ರಮದಂತೆ ಕೊಂದಿದ್ದನು. ಈಗ ಎಂಟನೆಯ ಮಗುವು ಹುಟ್ಟಿರುವ ವಿಷಯ ತಿಳಿದು ಪ್ರಸವಗೃಹಕ್ಕೆ ಹೋದನು.

**ಗರ್ಭಂ ದೇವಕ್ಯಾಃ ಸಪ್ತಮಂ ಮೇನಿರೇ ಹಿ**
**ಲೋಕಾಃ ಸುತಂ ತ್ವಷ್ಟಮಂ ತಾಂ ತತಃ ಸಃ ।**
**ಮತ್ವಾ ಹಂತುಂ ಪಾದಯೋಃ ಸಂಪ್ರಗೃಹ್ಯ**
**ಸಂಪೋಥಯಾಮಾಸ ಶಿಲಾತಲೇ ಚ ॥ ೬೯ ॥**

ಪದಚ್ಛೇದ : ಗರ್ಭಂ ದೇವಕ್ಯಾಃ ಸಪ್ತಮಂ ಮೇನಿರೇ ಹಿ ಲೋಕಾಃ ಸುತಂ ತು ಅಷ್ಟಮಂ ತಾಂ ತತಃ ಸಃ ಮತ್ವಾ ಹಂತುಂ ಪಾದಯೋಃ ಸಂಪ್ರಗೃಹ್ಯ ಸಂಪೋಥಯಾಮಾಸ ಶಿಲಾತಲೇ ಚ.

**ಅರ್ಥ** :- ಹಿ ಯಾವ ಕಾರಣದಿಂದ **ಲೋಕಾಃ** ಜನರು **ದೇವಕ್ಯಾಃ** ದೇವಕಿಯ **ಸಪ್ತಮಂ** ಏಳನೆಯ **ಗರ್ಭಂ ತು** ಗರ್ಭವನ್ನಾದರೂ **ಸುತಂ** ಸ್ರಾವಗೊಂಡದ್ದನ್ನಾಗಿ **ಮೇನಿರೇ** ತಿಳಿದರೋ **ತತಃ** ಆದ್ದರಿಂದ **ಸಃ** ಆ ಕಂಸನು **ತಾಂ** ಆ ದುರ್ಗೆಯನ್ನು **ಅಷ್ಟಮಂ** ಎಂಟನೆಯ ಮಗುವೆಂದು **ಮತ್ವಾ** ತಿಳಿದು **ಹಂತುಂ** ಕೊಲ್ಲಲು **ಪಾದಯೋಃ** ಕಾಲುಗಳಲ್ಲಿ (ಕಾಲುಗಳನ್ನು) **ಸಂಪ್ರಗೃಹ್ಯ** ಹಿಡಿದುಕೊಂಡು **ಶಿಲಾತಲೇ ಚ** ಶಿಲೆಯ ಮೇಲೆ **ಸಂಪೋಥಯಾ ಮಾಸ** ಬೀಸಿದನು.

**ತಾತ್ಪರ್ಯ** :- ಆರು ಜನ ಮಕ್ಕಳನ್ನು ಕೊಂದಿದ್ದ ಕಂಸನು ದುರ್ಗೆಯನ್ನು ನೋಡಿ ಎಂಟನೆಯ ಮಗುವೆಂದು ಹೇಗೆ ತಿಳಿದನು? ಎಂದು ಲ್ಲಿ ವಿವರಿಸುತ್ತಿದ್ದಾರೆ - ಬಲರಾಮನು ದೇವಕಿಯ ಗರ್ಭದಲ್ಲಿ ಮೂರು ತಿಂಗಳು ವಾಸ ಮಾಡಿದ ನಂತರ ದುರ್ಗೆಯು ಅವನನ್ನು ಆ ಗರ್ಭದಿಂದ ರೋಹಿಣಿ ಗರ್ಭಕ್ಕೆ ಸಾಗಿಸಿದಳು. ಆಗ ಜನರು ದೇವಕಿಗೆ ಗರ್ಭಸ್ರಾವವಾಯಿತೆಂದೇ ತಿಳಿದರು. ಹಾಗಾಗಿ ದುರ್ಗೆಯನ್ನು ಎಂಟನೆಯ ಮಗುವೆಂದು ತಿಳಿದು ಆ ಮಗುವಿನ ಕಾಲುಗಳನ್ನು ಹಿಡಿದು ಬಂಡೆಯ ಮೇಲೆ ಬೀಸಿದನು.

**ಸಾ ತದ್ಧಸ್ತಾತ್ ಕ್ಷಿಪ್ರಮುತ್ಪತ್ಯ ದೇವೀ ಖೇಽದೃಶ್ಯತೈವಾಷ್ಟಭುಜಾ ಸಮಗ್ರಾ ।**
**ಬ್ರಹ್ಮಾದಿಭಿಃ ಪೂಜ್ಯಮಾನಾ ಸಮಗ್ರೈರತ್ಯದ್ಭುತಾಕಾರವತೀ ಹರಿಪ್ರಿಯಾ**
**॥ ೭೦ ॥**

ಪದಚ್ಛೇದ : ಸಾ ತದ್ಧಸ್ತಾತ್ ಕ್ಷಿಪ್ರಂ ಉತ್ಪತ್ಯ ದೇವೀ ಖೇ ಅದೃಶ್ಯತ ಏವ ಅಷ್ಟಭುಜಾ ಸಮಗ್ರಾ ಬ್ರಹ್ಮಾದಿಭಿಃ ಪೂಜ್ಯಮಾನಾ ಸಮಗ್ರೈಃ ಅತ್ಯದ್ಭುತಾಕಾರವತೀ ಹರಿಪ್ರಿಯಾ.

**ಅರ್ಥ** :- **ಹರಿಪ್ರಿಯಾ** ಹರಿಗೆ ಪ್ರಿಯಳಾದ **ಸಾ** ಆ ದುರ್ಗೆಯು **ತದ್ಧಸ್ತಾತ್** ಕಂಸನ ಕೈಯಿಂದ **ಕ್ಷಿಪ್ರಂ** ಶೀಘ್ರವಾಗಿ **ಉತ್ಪತ್ಯ** ಹಾರಿ **ಅಷ್ಟಭುಜಾ** ಎಂಟು ಭುಜಗಳುಳ್ಳವಳಾಗಿ **ಸಮಗ್ರಾ** ಸಕಲ ತರುಣೀ ಲಕ್ಷಣಗಳಿಂದ ಕೂಡಿದವಳಾಗಿ **ಬ್ರಹ್ಮಾದಿಭಿಃ** ಬ್ರಹ್ಮನೇ ಮೊದಲಾದ **ಸಮಗ್ರೈಃ** ಎಲ್ಲ ದೇವತೆಗಳಿಂದ **ಪೂಜ್ಯಮಾನಾ** ಸ್ತುತಿಸಲ್ಪಡುವವಳಾಗಿ **ಅದ್ಭುತಾಕಾರವತೀ** ಅದ್ಭುತವಾದ ಆಕಾರ ಉಳ್ಳವಳಾಗಿ **ಖೇ** ಆಕಾಶದಲ್ಲಿ **ಅದೃಶ್ಯತ** ಕಂಡಳು.

**ತಾತ್ಪರ್ಯ** :- ಕಂಸನು ಮಗುವಿನ ರೂಪದಲ್ಲಿದ್ದ ದುರ್ಗೆಯನ್ನು ಕೊಲ್ಲಲು ಶಿಲೆಯ ಮೇಲೆ ಅಪ್ಪಳಿಸುವಷ್ಟರಲ್ಲೇ ದುರ್ಗೆಯು ಅವನ ಕೈಯಿಂದ ಗಗನಕ್ಕೆ ಹಾರಿದಳು. ಗಗನದಲ್ಲಿ ಎಂಟು ಭುಜಗಳಿಂದ ಯುಕ್ತಳಾಗಿ, ಶಿಶುರೂಪದಿದ್ದವಳು ಸಮಗ್ರವಾದ ಯೌವನಲಕ್ಷಣಗಳುಳ್ಳವಳಾಗಿ ಬ್ರಹ್ಮಾದಿ ದೇವತೆಗಳಿಂದ ಸ್ತುತಳಾಗಿ, ತನ್ನ ಅತ್ಯಾಶ್ಚರ್ಯಕರವಾದ ರೂಪದಿಂದ ಭೂಮಿಯಲ್ಲಿದ್ದ ಎಲ್ಲರಿಗೂ ಕಂಡಳು.

**ಉವಾಚ ಚಾರ್ಯಾ ತವ ಮೃತ್ಯುರತ್ರ**
**ಕ್ವಚಿತ್ ಪ್ರಜಾತೋ ಹಿ ವೃಥೈವ ಪಾಪ ।**
**ಅನಾಗಸೀಂ ಮಾಂ ವಿನಿಹಂತುಮಿಚ್ಛಸ್ಯ-**
**ಶಕ್ಯಕಾರ್ಯೇ ತವ ಚೋದ್ಯಮೋಽಯಮ್ ॥ ೭೧ ॥**

ಪದಚ್ಛೇದ : ಉವಾಚ ಚ ಆರ್ಯಾ ತವ ಮೃತ್ಯುಃ ಅತ್ರ ಕ್ವಚಿತ್ ಪ್ರಜಾತಃ ಹಿ ವೃಥಾ ಏವ ಪಾಪ ಅನಾಗಸೀಂ ಮಾಂ ವಿನಿಹಂತುಂ ಇಚ್ಛಸಿ, ಅಶಕ್ಯಕಾರ್ಯೇ ತವ ಚ ಉದ್ಯಮಃ ಅಯಮ್.

**ಅರ್ಥ** :- **ಆರ್ಯಾ** ದುರ್ಗೆಯು **ಉವಾಚ ಚ** ಮಾತನಾಡಿದಳೂ ಕೂಡ **ಪಾಪ** ಹೇ ಪಾಪಸ್ವರೂಪಿಯೇ **ತವ** ನಿನ್ನ **ಮೃತ್ಯುಃ** ಸಂಹಾರಕನು **ಅತ್ರ** ಈ ಭೂಮಿಯಲ್ಲಿ **ಕ್ವಚಿತ್** ಎಲ್ಲೋ ಒಂದೆಡೆ **ಪ್ರಜಾತಃ ಹಿ** ಹುಟ್ಟಿದ್ದಾನಷ್ಟೆ **ವೃಥಾ ಏವ** ಕಾರಣವಿಲ್ಲದೆಯೇ **ಅನಾಗಸೀಂ** ಅಪರಾಧಮಾಡದ **ಮಾಂ** ನನ್ನನ್ನು **ವಿನಿಹಂತುಂ** ಕೊಲ್ಲಲು **ಇಚ್ಛಿಸಿ** ಬಯಸುತ್ತಿರುವಿ **ಚ** ಮತ್ತು **ಅಶಕ್ಯ ಕಾರ್ಯೇ** ಮಾಡಲು ಸಾಧ್ಯವಿಲ್ಲದ ಕೆಲಸದಲ್ಲಿ **ತವ** ನಿನ್ನ **ಅಯಂ** ಈ **ಉದ್ಯಮಃ** ಪ್ರಯತ್ನವು (ಇದೆ).

**ತಾತ್ಪರ್ಯ** :- ಕಂಸನ ಕೈಯಿಂದ ಗಗನಕ್ಕೆ ಹಾರಿದ ದುರ್ಗೆಯು ಕಂಸನಿಗೆ ಹೇಳುತ್ತಾಳೆ - "ಎಲೈ ಪಾಪಿಯಾದ ಕಂಸನೇ! ನಿನ್ನ ಮೃತ್ಯುವು ಈ ಭೂಮಿಯಲ್ಲಿ ಒಂದೆಡೆ ಹುಟ್ಟಿದ್ದಾನೆ. ಅಪರಾಧವನ್ನು ಮಾಡದ ನನ್ನನ್ನು ಕಾರಣವಿಲ್ಲದೇ ಕೊಲ್ಲಲು ಬಯಸುತ್ತಿರುವೆ. ಮಾಡಲು ಅಶಕ್ಯವಾದ ನನ್ನ ಸಂಹಾರರೂಪದ ಕೆಲಸವನ್ನು ಮಾಡಲು ನೀನು ವ್ಯರ್ಥವಾಗಿ ಪ್ರಯತ್ನಿಸುತ್ತಿರುವೆ.

ಉಕ್ತ್ವೇತಿ ಕಂಸಂ ಪುನರೇವ ದೇವಕೀ-
ತಲ್ಪೇऽಶಯದ್ ಬಾಲರೂಪೈವದುರ್ಗಾ ।
ನಾಜ್ಞಾಸಿಷುಸ್ತಾಮಥ ಕೇಚನಾತ್ರ
ಋತೇ ಹಿ ಮಾತಾಪಿತರೌ ಗುಣಾಢ್ಯಾಮ್ ॥ ೭೨ ॥

ಪದಚ್ಛೇದ : ಉಕ್ತ್ವಾ ಇತಿ ಕಂಸಂ ಪುನಃ ಏವ ದೇವಕೀತಲ್ಪೇ ಅಶಯತ್ ಬಾಲರೂಪಾ ಏವ ದುರ್ಗಾ ನ ಅಜ್ಞಾಸಿಷುಃ ತಾಂ ಅಥ, ಕೇಚನ ಅತ್ರ ಋತೇ ಹಿ ಮಾತಾಪಿತರೌ ಗುಣಾಢ್ಯಾಮ್.

**ಅರ್ಥ** :- **ಇತಿ** ಈ ರೀತಿಯಾಗಿ **ಕಂಸಂ (ಪ್ರತಿ)** ಕಂಸನನ್ನು ಕುರಿತು **ಉಕ್ತ್ವಾ** ಹೇಳಿ **ಪುನಃ ಏವ** ಮತ್ತೆ **ದುರ್ಗಾ** ದುರ್ಗೆಯು **ಬಾಲರೂಪಾ ಏವ (ಸತೀ)** ಬಾಲರೂಪದವಳಾಗಿಯೇ **ದೇವಕೀತಲ್ಪೇ** ದೇವಕಿಯ ಹಾಸಿಗೆಯಲ್ಲಿ **ಅಶಯತ್** ಮಲಗಿದಳು **ಅಥ** ಆ ನಂತರ **ಅತ್ರ** ಈ ಭೂಮಿಯಲ್ಲಿ **ಮಾತಾಪಿತರೌ** ತಂದೆತಾಯಿಗಳನ್ನು **ಋತೇ** ಬಿಟ್ಟು **ಗುಣಾಢ್ಯಾಂ** ಗುಣಗಳಿಂದ ತುಂಬಿದ **ತಾಂ** ಆ ದುರ್ಗೆಯನ್ನು **ಕೇಚನ** ಯಾರೂ **ನ ಅಜ್ಞಾಸಿಷುಃ ಹಿ** ತಿಳಿಯಲಿಲ್ಲವಷ್ಟೆ

**ತಾತ್ಪರ್ಯ** :- ಕಂಸನಿಗೆ ಇವಿಷ್ಟನ್ನು ಹೇಳಿ ದುರ್ಗೆಯು ಪುನಃ ಬಾಲರೂಪವನ್ನು ಧರಿಸಿ ದೇವಕಿಯ ಹಾಸಿಗೆಯಲ್ಲೇ ಮಲಗಿದಳು. ಆದರೆ ತಂದೆತಾಯಿಯರನ್ನು ಬಿಟ್ಟು ಬೇರಾರಿಗೂ ದುರ್ಗೆಯು ಭೂಮಿಯಲ್ಲಿ ರುವುದು ತಿಳಿಯಲಿಲ್ಲ.

ಶ್ರುತ್ವಾ ತಯೋಕ್ತಂ ತು ತದೈವ ಕಂಸಃ
ಪಶ್ಚಾತ್ತಾಪಾದ್ ವಸುದೇವಂ ಸಭಾರ್ಯಮ್ ।
ಪ್ರಸಾದಯಾಮಾಸ ಪುನಃಪುನಶ್ಚ
ವಿಹಾಯ ಕೋಪಂ ಚ ತಮೂಚತುಸ್ತೌ ।
ಸುಖಸ್ಯ ದುಃಖಸ್ಯ ಚ ರಾಜಸಿಂಹ
ನಾನ್ಯಃ ಕರ್ತಾ ವಾಸುದೇವಾದಿತಿ ಸ್ಮ ॥ ೭೩ ॥

ಪದಚ್ಛೇದ : ಶ್ರುತ್ವಾ ತಯಾ ಉಕ್ತಂ ತು ತದಾ ಏವ ಕಂಸಃ ಪಶ್ಚಾತ್ತಾಪಾತ್ ವಸುದೇವಂ ಸಭಾರ್ಯಂ ಪ್ರಸಾದಯಾಮಾಸ, ಪುನಃಪುನಃ ಚ ವಿಹಾಯ ಕೋಪಂ ಚ ತಂ

ಊಚತುಃ ತೌ ಸುಖಸ್ಯ ದುಃಖಸ್ಯ ಚ ರಾಜಸಿಂಹ ನ ಅನ್ಯಃ ಕರ್ತಾ ವಾಸುದೇವಾತ್ ಇತಿ ಸ್ಮ.

**ಅರ್ಥ** :- **ಕಂಸಃ ತು** ಕಂಸನಾದರೂ **ತಯಾ** ಆ ದುರ್ಗೆಯಿಂದ **ಉಕ್ತಂ** ಹೇಳಲ್ಪಟ್ಟದ್ದನ್ನು **ಶ್ರುತ್ವಾ** ಕೇಳಿ **ತದಾ ಏವ** ಆಗಲೇ **ಪಶ್ಚಾತ್ತಾಪಾತ್** ಪಶ್ಚಾತ್ತಾಪದಿಂದ **ಸಭಾರ್ಯಂ** ಹೆಂಡತಿಯಿಂದ ಸಹಿತನಾದ **ವಸುದೇವಂ** ವಸುದೇವನನ್ನು **ಪುನಃಪುನಃ** ಮತ್ತೆ ಮತ್ತೆ **ಪ್ರಸಾದಯಾಮಾಸ** ಪ್ರಸಾದಗೊಳಿಸಿದನು. **ತೌ ಚ** ಅವರಿಬ್ಬರಾದರೂ **ಕೋಪಂ** ಕೋಪವನ್ನು **ವಿಹಾಯ** ಬಿಟ್ಟು **ತಂ (ಪ್ರತಿ)** ಆ ಕಂಸನನ್ನು ಕುರಿತು **ರಾಜಸಿಂಹ** ಹೇ ರಾಜಸಿಂಹನೇ! **ಸುಖಸ್ಯ ಚ** ಸುಖಕ್ಕಾಗಲೀ **ದುಃಖಸ್ಯ ಚ** ದುಃಖಕ್ಕಾಗಲೀ **ವಾಸುದೇವಾತ್** ಪರಮಾತ್ಮನಿಗಿಂತ **ಅನ್ಯಃ** ಮತ್ತೊಬ್ಬನು **ಕರ್ತಾ** ಕರ್ತೃವು **ನ** ಇಲ್ಲ **ಇತಿ** ಎಂದು **ಊಚತುಃ** ಹೇಳಿದರು.

**ತಾತ್ಪರ್ಯ** :- ದುರ್ಗೆಯ ಮಾತನ್ನು ಕೇಳಿದ ಕಂಸನು ಪಶ್ಚಾತ್ತಾಪವನ್ನು ಪಟ್ಟು ವಸುದೇವ-ದೇವಕಿಯರನ್ನು ಮತ್ತೆಮತ್ತೆ ಸಮಾಧಾನಪಡಿಸಿದನು. ಆಗ ವಸುದೇವ-ದೇವಕಿಯರು ಕೋಪವನ್ನು ಬಿಟ್ಟು ಅವನಿಗೆ ಹೇಳಿದರು - ''ಹೇ ಕಂಸನೇ! ಸುಖಕ್ಕಾಗಲೀ ದುಃಖಕ್ಕಾಗಲೀ ಭಗವಂತನನ್ನು ಬಿಟ್ಟು ಮತ್ತಾರೂ ಕರ್ತೃಗಳಲ್ಲ'' ಎಂದು.

**ಆನೀಯ ಕಂಸೋಽಥ ಗೃಹೇ ಸ್ವಮಂತ್ರಿಣಃ**
**ಪ್ರೋವಾಚ ಕನ್ಯಾವಚನಂ ಸಮಸ್ತಮ್ ।**
**ಶ್ರುತ್ವಾ ಚ ತೇ ಪ್ರೋಚುರತ್ಯಂತಪಾಪಾಃ ಕಾರ್ಯಂ**
**ಬಾಲಾನಾಂ ನಿಧನಂ ಸರ್ವಶೋಽಪಿ ॥ ೭೪ ॥**

ಪದಚ್ಛೇದ : ಆನೀಯ, ಕಂಸಃ ಅಥ ಗೃಹೇ ಸ್ವಮಂತ್ರಿಣಃ ಪ್ರೋವಾಚ ಕನ್ಯಾವಚನಂ ಸಮಸ್ತಂ ಶ್ರುತ್ವಾ ಚ ತೇ ಪ್ರೋಚುಃ ಅತ್ಯಂತಪಾಪಾಃ ಕಾರ್ಯಂ ಬಾಲಾನಾಂ ನಿಧನಂ ಸರ್ವಶಃ ಅಪಿ.

**ಅರ್ಥ** :- **ಅಥ** ಆನಂತರ **ಕಂಸಃ** ಕಂಸನು **ಸ್ವಮಂತ್ರಿಣಃ** ತನ್ನ ಮಂತ್ರಿಗಳನ್ನು **ಗೃಹೇ** ಮನೆಗೆ **ಆನೀಯ** ಕರೆದು **ಸಮಸ್ತಂ** ಸಮಗ್ರವಾದ **ಕನ್ಯಾವಚನಂ** ದುರ್ಗೆಯ ಮಾತನ್ನು **ಪ್ರೋವಾಚ** ಹೇಳಿದನು **ಅತ್ಯಂತಪಾಪಾಃ**

ಅತ್ಯಂತ ಪಾಪಿಗಳಾದ **ತೇ ಚ** ಆ ಮಂತ್ರಿಗಳಾದರೂ **ಶ್ರುತ್ವಾ** (ಮಾತನ್ನು) ಕೇಳಿ; **ಸರ್ವಶಃ ಅಪಿ** ಸಮಗ್ರವಾಗಿ **ಬಾಲಾನಾಂ** ಮಕ್ಕಳ **ನಿಧನಂ** ಸಂಹಾರವನ್ನು **ಕಾರ್ಯಂ** ಮಾಡಬೇಕು; **(ಇತಿ)** ಎಂದು **ಪ್ರೋಚುಃ** ಹೇಳಿದರು.

**ತಾತ್ಪರ್ಯ** :- ನಂತರ ಕಂಸನು ತನ್ನ ಮಂತ್ರಿಗಳನ್ನು ಮನೆಗೆ ಕರೆಸಿಕೊಂಡು ದುರ್ಗೆಯು ಹೇಳಿದ ಮಾತೆಲ್ಲವನ್ನೂ ಹೇಳಿದನು. ಅತ್ಯಂತ ಪಾಪಿಗಳಾದ ಆ ಮಂತ್ರಿಗಳು ಎಲ್ಲ ಮಕ್ಕಳನ್ನು ಕೊಲ್ಲಲು ಹೇಳಿದರು.

**ತಥೇತಿ ತಾಂಸ್ತತ್ರ ನಿಯುಜ್ಯ ಕಂಸೋ**
**ಗೃಹಂ ಸ್ವಕೀಯಂ ಪ್ರವಿವೇಶ ಪಾಪಃ ।**
**ಚೇರುಶ್ಚ ತೇ ಬಾಲವಧೇ ಸದೋದ್ಯತಾ**
**ಹಿಂಸಾವಿಹಾರಾಃ ಸತತಂ ಸ್ವಭಾವತಃ ॥ ೭೫ ॥**

ಪದಚ್ಛೇದ : **ತಥಾ ಇತಿ ತಾನ್ ತತ್ರ ನಿಯುಜ್ಯ ಕಂಸಃ ಗೃಹಂ ಸ್ವಕೀಯಂ ಪ್ರವಿವೇಶ ಪಾಪಃ ಚೇರುಃ ಚ ತೇ ಬಾಲವಧೇ ಸದಾ ಉದ್ಯತಾಃ ಹಿಂಸಾವಿಹಾರಾಃ ಸತತಂ ಸ್ವಭಾವತಃ**

**ಅರ್ಥ** :- **ಪಾಪಃ** ಪಾಪಸ್ವರೂಪನಾದ **ಕಂಸಃ** ಕಂಸನು **ತಥಾ** ಹಾಗೆಯೇ ಆಗಲಿ **ಇತಿ** ಎಂದು **(ಉಕ್ತ್ವಾ)** ಹೇಳಿ **ತಾನ್** ಆ ಮಂತ್ರಿಗಳನ್ನು **ತತ್ರ** ಆ ಕೆಲಸದಲ್ಲಿ **ನಿಯುಜ್ಯ** ನಿಯೋಜಿಸಿ **ಸ್ವಕೀಯಂ** ತನ್ನ **ಗೃಹಂ** ಮನೆಯನ್ನು **ಪ್ರವಿವೇಶ** ಪ್ರವೇಶಿಸಿದನು **ಸತತಂ** ಯಾವಾಗಲೂ **ಸ್ವಭಾವತಃ** ಸ್ವಭಾವದಿಂದಲೇ **ಹಿಂಸಾವಿಹಾರಾಃ** ಹಿಂಸೆಯೇ ವಿಹಾರವಾಗಿ ಉಳ್ಳ **ತೇ ಚ** ಆ ಮಂತ್ರಿಗಳಾದರೂ **ಸದಾ** ಯಾವಾಗಲೂ **ಬಾಲವಧೇ** ಮಕ್ಕಳ ಸಂಹಾರದಲ್ಲಿ **ಉದ್ಯತಾಃ (ಸಂತಃ)** ಉದ್ಯುಕ್ತರಾಗಿ **ಚೇರುಃ** ಸಂಚರಿಸಿದರು.

**ತಾತ್ಪರ್ಯ** :- ಮಂತ್ರಿಗಳ ಮಾತಿಗೆ "ಹಾಗೆಯೇ ಆಗಲಿ" ಎಂದು ಹೇಳಿದ ಪಾಪಿ ಕಂಸನು ಮಕ್ಕಳನ್ನು ಕೊಲ್ಲಲು ಅವರನ್ನು ನಿಯೋಜಿಸಿ ತನ್ನ ಮನೆಗೆ ಹೋದನು. ನಂತರ ಸ್ವಭಾವದಿಂದಲೇ ಯಾವಾಗಲೂ ಹಿಂಸೆಯಿಂದಲೇ ವಿಹರಿಸುತ್ತಿದ್ದ ಆ ಮಂತ್ರಿಗಳು ನಿರಂತರವಾಗಿ ಮಕ್ಕಳನ್ನು ಕೊಲ್ಲುವುದರಲ್ಲಿ ಉದ್ಯುಕ್ತರಾಗಿ ಸಂಚರಿಸಿದರು.

ಅಥ ಪ್ರಭಾತೇ ಶಯನೇ ಶಯಾ-
ನಮಪಶ್ಯತಾಮಬ್ಜದಲಾಯತಾಕ್ಷಮ್ ।
ಕೃಷ್ಣಂ ಯಶೋದಾ ಚ ತಥೈವ ನಂದ
ಆನಂದಸಾಂದ್ರಾಕೃತಿಮಪ್ರಮೇಯಮ್ ॥ ೭೬ ॥

ಪದಚ್ಛೇದ : ಅಥ ಪ್ರಭಾತೇ ಶಯನೇ ಶಯಾನಂ ಅಪಶ್ಯತಾಂ ಅಬ್ಜದಲಾಯತಾಕ್ಷಂ ಕೃಷ್ಣಂ ಯಶೋದಾ ಚ ತಥಾ ಏವ ನಂದಃ ಆನಂದಸಾಂದ್ರಾಕೃತಿಂ ಅಪ್ರಮೇಯಮ್.

ಅರ್ಥ :- ಅಥ ಆ ನಂತರ ಯಶೋದಾ ಯಶೋದಾ ದೇವಿಯು ಚ ಮತ್ತು ನಂದಃ ನಂದನು ಪ್ರಭಾತೇ ಪ್ರಾತಃ ಕಾಲದಲ್ಲಿ ತಥಾ ಏವ ಹಾಗೆಯೇ (ವಸುದೇವನು ಮಲಗಿಸಿದಂತೆಯೇ) ಶಯನೇ ಹಾಸಿಗೆಯಲ್ಲಿ ಶಯಾನಂ ಮಲಗಿರುವ ಅಬ್ಜದಲಾಯತಾಕ್ಷಂ ಕಮಲದಂತೆ ವಿಸ್ತೃತವಾದ ಕಣ್ಣುಗಳುಳ್ಳ ಆನಂದಸಾಂದ್ರಾಕೃತಿಂ ಆನಂದದಿಂದ ಪೂರ್ಣವಾದ ಶರೀವುಳ್ಳ ಅಪ್ರಮೇಯಂ ಅಪ್ರಮೇಯನಾದ ಕೃಷ್ಣಂ ಕೃಷ್ಣನನ್ನು ಅಪಶ್ಯತಾಂ ನೋಡಿದರು.

ತಾತ್ಪರ್ಯ :- ಕೃಷ್ಣನು ಅವತರಿಸಿದ ನಂತರ ಪ್ರಾತಃಕಾಲದಲ್ಲಿ ವಸುದೇವನು ಮಲಗಿಸಿದಂತೆಯೇ ಮಲಗಿರುವ ಕಮಲದಂತೆ ವಿಸ್ತಾರವಾದ ಕಣ್ಣುಗಳಿಂದ ಯುಕ್ತನಾದ, ಆನಂದಪೂರ್ಣವಾದ ಶರೀರವುಳ್ಳ ಅಪ್ರಮೇಯನಾದ ಕೃಷ್ಣನನ್ನು ಯಶೋದಾ ಮತ್ತು ನಂದರು ಕಂಡರು.

ಮೇನಾತ ಏತೌ ನಿಜಪುತ್ರಮೇನಂ
ಸ್ರಷ್ಟಾರಮಬ್ಜಪ್ರಭವಸ್ಯ ಚೇಶಮ್ ।
ಮಹೋತ್ಸವಾತ್ ಪೂರ್ಣಮನಾಶ್ಚ
ನಂದೋ ವಿಪ್ರೇಭ್ಯೋಽದಾಲ್ಲಕ್ಷಮಿತಾಸ್ತದಾ ಗಾಃ ॥ ೭೭ ॥

ಪದಚ್ಛೇದ : ಮೇನಾತೇ ಏತೌ ನಿಜಪುತ್ರಂ ಏನಂ ಸ್ರಷ್ಟಾರಂ ಅಬ್ಜಪ್ರಭವಸ್ಯ ಚ ಈಶಂ ಮಹೋತ್ಸವಾತ್ ಪೂರ್ಣಮನಾಃ ಚ ನಂದಃ ವಿಪ್ರೇಭ್ಯಃ ಅದಾತ್ ಲಕ್ಷಮಿತಾಃ ತದಾ ಗಾಃ.

ಅರ್ಥ :- ಏತೌ ಈ ಯಶೋದಾ-ನಂದಗೋಪರು ಅಬ್ಜಪ್ರವಸ್ಯ ಕಮಲದಿಂದ ಹುಟ್ಟಿದ ಬ್ರಹ್ಮದೇವರಿಗೆ ಸ್ರಷ್ಟಾರಂ ಸೃಷ್ಟಿಕರ್ತನಾದ ಚ ಮತ್ತು

**ಈಶ್ವರಂ** ಸ್ವಾಮಿಯಾದ ಏನಂ ಈ ಕೃಷ್ಣನನ್ನು ನಿಜಪುತ್ರಂ ತಮ್ಮ ಮಗನನ್ನಾಗಿ **ಮೇನಾತೇ** ತಿಳಿದರು. ತದಾ ಆಗ **ಪೂರ್ಣಮನಾಃ** (ಆನಂದದಿಂದ) ತುಂಬಿದ ಮನಸ್ಸುಳ್ಳ **ನಂದಃ ಚ** ನಂದನಾದರೂ **ಮಹೋತ್ಸವಾತ್** ಪುತ್ರೋತ್ಸವದ ಕಾರಣದಿಂದ **ವಿಪ್ರೇಭ್ಯಃ** ಬ್ರಾಹ್ಮಣರಿಗೋಸ್ಕರ **ಲಕ್ಷಮಿತಾಃ** ಲಕ್ಷಸಂಖ್ಯೆಯಷ್ಟು **ಗಾಃ** ಹಸುಗಳನ್ನು **ಅದಾತ್** ದಾನಮಾಡಿದನು.

**ತಾತ್ಪರ್ಯ** :- ಚತುರ್ಮುಖಬ್ರಹ್ಮನನ್ನೇ ಸೃಷ್ಟಿಸಿದ ಎಲ್ಲರಿಗೂ ಸ್ವಾಮಿಯಾದ ಈ ಕೃಷ್ಣನನ್ನು ಯಶೋದಾ ಹಾಗು ನಂದಗೋಪರು ತಮ್ಮ ಮಗನೆಂದು ತಿಳಿದರು. ಪುತ್ರೋತ್ಸವದಿಂದ ಆನಂದದಿಂದ ಮನಸ್ಸು ತುಂಬಿದ ನಂದನು ಬ್ರಾಹ್ಮಣರಿಗೆ ಲಕ್ಷಸಂಖ್ಯೆಯಲ್ಲಿ ಗೋವುಗಳನ್ನು ದಾನ ಮಾಡಿದನು.

**ಸುವರ್ಣರತ್ನಾಂಬರಭೂಷಣಾನಾಂ**
**ಬಹೂನಿ ಗೋಜೀವಿಗಣಾಧಿನಾಥಃ ।**
**ಪ್ರಾದಾದಥೋಪಾಯನಪಾಣಯಸ್ತಂ ಗೋಪಾ**
**ಯಶೋದಾಂ ಚ ಮುದಾ ಸ್ತ್ರಿಯೋಽಗಮನ್ ॥ ೭೮ ॥**

ಪದಚ್ಛೇದ : ಸುವರ್ಣರತ್ನಾಂಬರಭೂಷಣಾನಾಂ ಬಹೂನಿ ಗೋಜೀವಿಗಣಾಧಿನಾಥಃ ಪ್ರಾದಾತ್ ಅಥ ಉಪಾಯನಪಾಣಯಃ ತಂ ಗೋಪಾಃ ಯಶೋದಾಂ ಚ ಮುದಾ ಸ್ತ್ರಿಯಃ ಅಗಮನ್.

**ಅರ್ಥ** :- **ಗೋಜೀವಿಗಣಾಧಿನಾಥಃ** ಹಸುಗಳಿಂದ ಜೀವಿಸುವ ಗೋಪಾಲಕರ ವೃಂದಕ್ಕೆ ನಾಯಕನಾದ ನಂದನು **ಸುವರ್ಣರತ್ನಾಂಬರ ಭೂಷಣಾನಿ** ಬಂಗಾರ ರತ್ನಗಳಿಂದ ಮಾಡಿದ ಆಭರಣಗಳ **ಬಹೂನಿ** ರಾಶಿ ಗಳನ್ನು **ಪ್ರಾದಾತ್** ಕೊಟ್ಟನು. **ಅಥ** ನಂತರ **ಉಪಾಯನಪಾಣಯಃ** ಉಡು ಗೊರೆಗಳನ್ನು ಕೈಲಿ ಹಿಡಿದ **ಗೋಪಾಃ** ಗೋಪಾಲಕರು **ತಂ (ಪ್ರತಿ)** ಆ ನಂದ ನನ್ನು ಕುರಿತು **ಚ** ಮತ್ತು **ಸ್ತ್ರಿಯಃ** ಗೋಪಾಲಿಕೆಯರು **ಯಶೋದಾಂ (ಪ್ರತಿ)** ಯಶೋದೆಯನ್ನು ಕುರಿತು **ಮುದಾ** ಸಂತೋಷದಿಂದ **ಅಗಮನ್** ಹೋದರು.

**ತಾತ್ಪರ್ಯ** :- ಕೃಷ್ಣನು ಹುಟ್ಟಿದ ನಂತರ ಗೋಪಾಲಕರ ನಾಯಕನಾದ ನಂದನು ಗೋಪಾಲಕರಿಗೆ ಬಂಗಾರ ರತ್ನಗಳಿಂದ ನಿರ್ಮಿತವಾದ ಆಭರಣಗಳ ರಾಶಿಯನ್ನೇ ಕೊಟ್ಟನು. ಗೋಪಾಲಕರು ಕೈಲಿ ಉಡುಗೊರೆಯನ್ನಿಟ್ಟುಕೊಂಡು

ನಂದಗೋಪನ ಬಳಿ ಹೋದರು. ಗೋಪಾಂಗನೆಯರೂ ಕೂಡ ಯಶೋದೆಯ ಬಳಿ ಹೋದರು.

ಗತೇಷು ತತ್ರೈವ ದಿನೇಷು ಕೇಷು-
ಚಿಜ್ಜಗಾಮ ಕಂಸಸ್ಯ ಗೃಹಂ ಸ ನಂದಃ ।
ಪೂರ್ವಂ ಹಿ ನಂದಃ ಸ ಕರಂ ಹಿ ದಾತುಂ
ಬೃಹದ್ವಾನ್ನಿಸ್ಸೃತಃ ಪ್ರಾಪ ಕೃಷ್ಣಾಮ್ ॥ ೭೯ ॥

ಪದಚ್ಛೇದ : ಗತೇಷು ತತ್ರ ಏವ ದಿನೇಷು ಕೇಷುಚಿತ್ ಜಗಾಮ ಕಂಸಸ್ಯ ಗೃಹಂ ಸಃ ನಂದಃ ಪೂರ್ವಂ ಹಿ ನಂದಃ ಸಃ ಕರಂ ಹಿ ದಾತುಂ ಬೃಹದ್ವನಾತ್ ನಿಸ್ಸೃತಃ ಪ್ರಾಪ ಕೃಷ್ಣಾಮ್.

**ಅರ್ಥ** :- **ತತ್ರ ಏವ** ಆ ಯಮುನಾತೀರದಲ್ಲಿಯೇ **ಕೇಷುಚಿತ್** ಕೆಲವು **ದಿನೇಷು** ದಿನಗಳು **ಗತೇಷು (ಸತ್ಸು)** ಕಳೆಯುತ್ತಿರಲು **ಸಃ** ಆ **ನಂದಃ** ನಂದನು **ಕಂಸಸ್ಯ** ಕಂಸನ **ಗೃಹಂ (ಪ್ರತಿ)** ಮನೆಯನ್ನು ಕುರಿತು **ಜಗಾಮ** ಹೋದನು. **ಹಿ** ಯಾವ ಕಾರಣದಿಂದ **ಸಃ** ಆ **ನಂದಃ** ನಂದನು **ಪೂರ್ವಂ ಹಿ** ಕೃಷ್ಣನು ಅವತರಿಸುವ ಮೊದಲೇ **ಕರಂ** ಕರವನ್ನು **ದಾತುಂ** ಕೊಡಲು **ಬೃಹದ್ವನಾತ್** ಬೃಹದ್ವನದಿಂದ **ನಿಸ್ಸೃತಃ (ಸನ್)** ಹೊರಟವನಾಗಿ **ಕೃಷ್ಣಾಂ** ಯಮುನೆಯನ್ನು **ಪ್ರಾಪ** ಸೇರಿದನು.

**ತಾತ್ಪರ್ಯ** :- ಕಂಸನಿಗೆ ಕರವನ್ನು ಕಟ್ಟಲು ಬೃಹದ್ವನದಿಂದ ಹೊರಟ ನಂದನು ಯಶೋದೆಯು ಗರ್ಭಿಣಿಯಾಗಿದ್ದಾಗಲೇ ಯಶೋದೆಯೊಂದಿಗೆ ಯಮುನಾ ತೀರಕ್ಕೆ ಬಂದು ನೆಲೆಸಿದ್ದನು. ಅಲ್ಲಿ ಕೆಲವು ದಿನಗಳು (ಮೂವತ್ತು ದಿನಗಳು - ಜನಾರ್ದನೀಯ) ಕಳೆಯಲು ಕರವನ್ನು ಕಟ್ಟಲು ಕಂಸನ ಮನಗೆ ಹೋದನು.

ಸಹಾಽಽಗತಾ ತೇನ ತದಾ ಯಶೋದಾ
ಸುಷಾವ ದುರ್ಗಾಮಥ ತತ್ರ ಶೌರಿಃ ।
ನಿಧಾಯ ಕೃಷ್ಣಂ ಪ್ರತಿಗೃಹ್ಯ ಕನ್ಯಕಾಂ
ಗೃಹಂ ಯಯೌ ನಂದ ಉವಾಸ ತತ್ರ ॥ ೮೦ ॥

ಪದಚ್ಛೇದ : ಸಹ ಆಗತಾ ತೇನ ತದಾ ಯಶೋದಾ ಸುಷಾವ ದುರ್ಗಾಂ ಅಥ ತತ್ರ ಶೌರಿಃ ನಿಧಾಯ ಕೃಷ್ಣಂ ಪ್ರತಿಗೃಹ್ಯ ಕನ್ಯಕಾಂ ಗೃಹಂ ಯಯೌ ನಂದಃ ಉವಾಸ ತತ್ರ.

**ಅರ್ಥ** :- **ತದಾ** ಯಮುನಾತೀರದಲ್ಲಿ ವಾಸವಾಗಿದ್ದಾಗ **ತೇನ** ಆ ನಂದನಿಂದ **ಸಹ** ಕೂಡಿಕೊಂಡು **ಆಗತಾ** ಬಂದಂತಹ **ಯಶೋದಾ** ಯಶೋದೆಯು **ದುರ್ಗಾಂ** ದುರ್ಗೆಯನ್ನು **ಸುಷಾವ** ಹಡೆದಳು. **ತತ್ರ** ಆ ಯಮುನಾತೀರದಲ್ಲಿ **ಶೌರಿಃ** ಶೂರನ ಮಗನಾದ ವಸುದೇವನು **ಕೃಷ್ಣಂ** ಕೃಷ್ಣನನ್ನು **ನಿಧಾಯ** ಇಟ್ಟು **ಕನ್ಯಕಾಂ** ದುರ್ಗೆಯನ್ನು **ಪ್ರತಿಗೃಹ್ಯ** ಸ್ವೀಕರಿಸಿ **ಗೃಹಂ (ಪ್ರತಿ)** ಮನೆಯನ್ನು ಕುರಿತು **ಯಯೌ** ಹೋದನು **ನಂದಃ** ನಂದನು **ತತ್ರ** ಆ ಯಮುನಾತೀರದಲ್ಲಿ **ಉವಾಸ** ವಾಸ ಮಾಡಿದನು.

**ತಾತ್ಪರ್ಯ** :- ಯಮುನಾತೀರದಲ್ಲಿ ವಾಸವಾಗಿದ್ದಾಗಲೇ (ಕಂಸನು ಕರವನ್ನು ಕೊಡಲು ಹೋಗುವ ಮೊದಲು) ಯಶೋದೆಯು ದುರ್ಗೆಯನ್ನು ಹಡೆದಳು. ಅಲ್ಲಿಗೆ ಬಂದ ವಸುದೇವನು ಕೃಷ್ಣನನ್ನು ಯಶೋದೆಯ ಮಂಚ ದಲ್ಲಿಟ್ಟು ಅಲ್ಲಿದ್ದ ದುರ್ಗೆಯನ್ನು ತೆಗೆದುಕೊಂಡು ಹೋದನು. ನಂದ ಗೋಪನು ಅಲ್ಲಿಯೇ ವಾಸಮಾಡಿದನು.

**ನಿರುಷ್ಯ ತಸ್ಮಿನ್ ಯಮುನಾತಟೇ ಸ ಮಾಸಂ**
**ಯಯೌ ದ್ರಷ್ಟುಕಾಮೋ ನರೇಂದ್ರಮ್ ।**
**ರಾಜ್ಞೇಽಥ ತಂ ದತ್ತಕರಂ ದದರ್ಶ**
**ಶೂರಾತ್ಮಜೋ ವಾಕ್ಯಮುವಾಚ ಚೈನಮ್ ॥ ೮೧ ॥**

ಪದಚ್ಛೇದ : ನಿರುಷ್ಯ ತಸ್ಮಿನ್ ಯಮುನಾತಟೇ ಸಃ ಮಾಸಂ ಯಯೌ ದ್ರಷ್ಟುಕಾಮಃ ನರೇಂದ್ರಂ ರಾಜ್ಞೇ ಅಥ ತಂ ದತ್ತಕರಂ ದದರ್ಶ ಶೂರಾತ್ಮಜಃ ವಾಕ್ಯಂ ಉವಾಚ ಚ ಏನಮ್.

**ಅರ್ಥ** :- **ಸಃ** ಆ ನಂದನು **ತಸ್ಮಿನ್** ಆ **ಯಮುನಾತಟೇ** ಯಮುನೆಯ ತೀರದಲ್ಲಿ **ಮಾಸಂ** ಒಂದು ತಿಂಗಳು **ನಿರುಷ್ಯ** ವಾಸಮಾಡಿ **ನರೇಂದ್ರಂ** ರಾಜನಾದ ಕಂಸನನ್ನು **ದ್ರಷ್ಟುಕಾಮಃ** ನೋಡಲು ಬಯಸಿದವನಾಗಿ **ಯಯೌ** ಹೋದನು. **ಅಥ** ಆ ನಂತರ **ಶೂರಜಃ** ಶೂರಸೇನನ ಮಗನಾದ

ವಸುದೇವನು ರಾಜ್ಞೇ ರಾಜನಿಗೆ ದತ್ತಕರಂ ಕೊಡಲ್ಪಟ್ಟ ಕರವುಳ್ಳ ತಂ ಆ ನಂದನನ್ನು ದದರ್ಶ ನೋಡಿದನು ಚ ಮತ್ತು ಏನಂ ಈ ವಾಕ್ಯಂ ಮಾತನ್ನು ಉವಾಚ ಹೇಳಿದನು.

ತಾತ್ಪರ್ಯ :- ಒಂದು ತಿಂಗಳ ಕಾಲ ಯಮುನಾತೀರದಲ್ಲೇ ವಾಸವಿದ್ದ ನಂದನು ನಂತರ ಕಂಸನನ್ನು ನೋಡಲು ಬಯಸಿ ಅವನ ಬಳಿಗೆ ಹೋಗಿ ಕರವನ್ನು ಒಪ್ಪಿಸಿದನು. ಅಲ್ಲಿ ನಂದನನ್ನು ನೋಡಿದ ವಸುದೇವನು ಈ ಮಾತನ್ನು ಹೇಳಿದನು.

ಯಾಹ್ಯುತ್ಪಾತಾಃ ಸಂತಿ ತತ್ರೇತ್ಯುದೀರಿತೇ
ಜಗಾಮ ಶೀಘ್ರಂ ಯಮುನಾಂ ಸ ನಂದಃ ।
ರಾತ್ರಾವೇವಾಽಗಚ್ಛಮಾನೇ ತು ನಂದೇ ಕಂಸಸ್ಯ
ಧಾತ್ರೀ ತು ಜಗಾಮ ಗೋಷ್ಠಮ್ ॥ ೮೨ ॥

ಪದಚ್ಛೇದ : ಯಾಹಿ ಉತ್ಪಾತಾಃ ಸಂತಿ ತತ್ರ ಇತಿ ಉದೀರಿತೇ ಜಗಾಮ ಶೀಘ್ರಂ ಯಮುನಾಂ ಸಃ ನಂದಃ ರಾತ್ರೌ ಏವ ಆಗಚ್ಛಮಾನೇ ತು ನಂದೇ ಕಂಸಸ್ಯ ಧಾತ್ರೀ ತು ಜಗಾಮ ಗೋಷ್ಠಮ್.

ಅರ್ಥ :- ತತ್ರ ಯಶೋದೆ ಇರುವಲ್ಲಿ ಉತ್ಪಾತಾಃ ಉತ್ಪಾತಗಳು ಸಂತಿ ಆಗುತ್ತವೆ (ಅತಃ) ಆದ್ದರಿಂದ ಯಾಹಿ ಹೋಗು ಇತಿ ಎಂದು ಉದೀರಿತೇ (ಸತಿ) ಹೇಳಲ್ಪಡಲು ಸಃ ಆ ನಂದಃ ನಂದನು ಶೀಘ್ರಂ ಶೀಘ್ರವಾಗಿ ಯಮುನಾಂ (ಪ್ರತಿ) ಯಮುನೆಯನ್ನು ಕುರಿತು ಜಗಾಮ ಹೋದನು. ನಂದೇ ತು ನಂದನಾದರೂ ರಾತ್ರೌ ಏವ ರಾತ್ರಿಯೇ ಆಗಚ್ಛಮಾನೇ (ಸತಿ) ಬರುತ್ತಿರಲು ಕಂಸಸ್ಯ ಕಂಸನ ಧಾತ್ರೀ ತು ಸಾಕುತಾಯಿಯಾದರೂ ಗೋಷ್ಠಂ (ಪ್ರತಿ) ಗೋಕುಲವನ್ನು ಕುರಿತು ಜಗಾಮ ಹೋದಳು.

ತಾತ್ಪರ್ಯ :- "ಯಶೋದೆ ಇದ್ದಲ್ಲಿ ಉತ್ಪಾತಗಳಾಗುತ್ತವೆ, ನೀನು ಅಲ್ಲಿಗೆ ಹೋಗು" ಎಂದು ವಸುದೇವನು ನಂದನಿಗೆ ಹೇಳಲು ನಂದನು ತಡಮಾಡದೇ ಯಮುನೆಯ ಬಳಿ ಹೋದನು. ರಾತ್ರಿಯೇ ನಂದನು ಹೊರಡಲು ಕಂಸನ ಸಾಕುತಾಯಿಯೂ ಅಲ್ಲಿಗೆ ಹೋದಳು.

ಸಾ ಪೂತನಾ ನಾಮ ನಿಜಸ್ವರೂಪ-
ಮಾಚ್ಛಾದ್ಯ ರಾತ್ರೌ ಶುಭರೂಪವಚ್ಚ ।
ವಿವೇಶ ನಂದಸ್ಯ ಗೃಹಂ ಬೃಹದ್ವನ-
ಪ್ರಾಂತೇ ಹಿ ಮಾರ್ಗೇ ರಚಿತಂ ಪ್ರಯಾಣೇ ॥ ೮೩ ॥

ಪದಚ್ಛೇದ : ಸಾ ಪೂತನಾ ನಾಮ ನಿಜಸ್ವರೂಪಂ ಆಚ್ಛಾದ್ಯ ರಾತ್ರೌ ಶುಭರೂಪವತ್ ಚ ವಿವೇಶ ನಂದಸ್ಯ ಗೃಹಮ್ ಬೃಹದ್ವನಪ್ರಾಂತೇ ಹಿ ಮಾರ್ಗೇ ರಚಿತಂ ಪ್ರಯಾಣೇ.

**ಅರ್ಥ** :- **ಪೂತನಾ** ಪೂತನಾ ಎಂದು **ನಾಮ** ಪ್ರಸಿದ್ಧಳಾದ **ಸಾ** ಆ ಕಂಸನ ಸಾಕುತಾಯಿಯು **ನಿಜಸ್ವರೂಪಂ** ತನ್ನ ಸ್ವಾಭಾವಿಕರೂಪವನ್ನು **ಆಚ್ಛಾದ್ಯ** ಮರೆಮಾಡಿ **ಚ** ಮತ್ತು **ಶುಭರೂಪವತ್** ಒಳ್ಳೆಯ ರೂಪವನ್ನು (ಧರಿಸಿ) **ಬೃಹದ್ವನಪ್ರಾಂತೇ** ಬೃಹದ್ವನದ ಪ್ರದೇಶದಲ್ಲಿರುವ **ಹಿ** ಪ್ರಸಿದ್ಧವಾದ **ಪ್ರಯಾಣೇ** ಪ್ರಯಾಣಿಸುವ **ಮಾರ್ಗೇ** (ಮಧುರೆಯ) ದಾರಿಯಲ್ಲಿ **ರಚಿತಂ** ನಿರ್ಮಿಸಿದ್ದ **ನಂದಸ್ಯ** ನಂದನ **ಗೃಹಂ** ಮನೆಯನ್ನು **ವಿವೇಶ** ಪ್ರವೇಶಿಸಿದಳು.

**ತಾತ್ಪರ್ಯ** :- ಕಂಸನ ಆ ಸಾಕುತಾಯಿಯ ಪೂತನೆ ಎಂಬ ಹೆಸರಿನವಳು. ಅವಳು ಮಾಯೆಯಿಂದ ತನ್ನ ರಾಕ್ಷಸೀರೂಪವನ್ನು ಮರೆಮಾಡಿ ಸುರೂಪವನ್ನು ಧರಿಸಿದಳು. ಬೃಹದ್ವನದಿಂದ ಮಧುರೆಗೆ ಹೋಗುವ ಪ್ರಸಿದ್ಧ ಮಾರ್ಗದಲ್ಲಿ ನಿರ್ಮಿಸಲಾಗಿದ್ದ ನಂದಗೋಪನ ಮನೆಯನ್ನು ರಾತ್ರಿಯ ಸಮಯದಲ್ಲಿ ಪ್ರವೇಶಿಸಿದಳು.

ತೀರೇ ಭಗಿನ್ಯಾಸ್ತು ಯಮಸ್ಯ ವಸ್ತ್ರಗೃಹೇ
ಶಯಾನಂ ಪುರುಷೋತ್ತಮಂ ತಮ್ ।
ಜಗ್ರಾಹ ಮಾತ್ರಾ ತು ಯಶೋದಯಾ ತಯಾ
ನಿದ್ರಾಯುಜಾ ಪ್ರೇಕ್ಷ್ಯಮಾಣಾ ಶುಭೇವ ॥ ೮೪ ॥

ಪದಚ್ಛೇದ : ತೀರೇ ಭಗಿನ್ಯಾಃ ತು ಯಮಸ್ಯ ವಸ್ತ್ರಗೃಹೇ ಶಯಾನಂ ಪುರುಷೋತ್ತಮಂ ತಂ ಜಗ್ರಾಹ ಮಾತ್ರಾ ತು ಯಶೋದಯಾ ತಯಾ ನಿದ್ರಾಯುಜಾ ಪ್ರೇಕ್ಷ್ಯಮಾಣಾ ಶುಭಾ ಇವ.

**ಅರ್ಥ** :- **ಯಮಸ್ಯ** ಯಮನ **ಭಗಿನ್ಯಾಃ** ತಂಗಿಯಾದ ಯಮುನೆಯ **ತೀರೇ** **ತು** ತೀರದಲ್ಲಿಯಾದರೂ **ನಿದ್ರಾಯುಜಾ** ನಿದ್ರೆಯಿಂದ ಕೂಡಿದ

**ಮಾತ್ರಾ** ತಾಯಿಯಾದ **ತಯಾ** ಆ **ಯಶೋದಯಾ ತು** ಯಶೋದೆಯಿಂದ ಲಾದರೂ **ಶುಭಾ ಇವ** ಒಳ್ಳೆಯವಳಂತೆ **ಪ್ರೇಕ್ಷ್ಯಮಾಣಾ** ಕಾಣಲ್ಪಟ್ಟ ಪೂತನೆಯು **ವಸ್ತ್ರಗೃಹೇ** ಬಟ್ಟೆಯಿಂದ ನಿರ್ಮಿಸಿದ ಮನೆಯಲ್ಲಿ **ಶಯಾನಂ** ಮಲಗಿರುವ **ಪುರುಷೋತ್ತಮಂ** ಸರ್ವೋತ್ತಮನಾದ **ತಂ** ಆ ಕೃಷ್ಣನನ್ನು **ಜಗ್ರಾಹ** ತೆಗೆದುಕೊಂಡಳು.

**ತಾತ್ಪರ್ಯ :-** ರಾತ್ರಿಯಲ್ಲಿ ಯಮುನೆಯ ತೀರದಲ್ಲಿದ್ದ ವಸ್ತ್ರದಿಂದ ನಿರ್ಮಿತವಾದ ಆ ಮನೆಯನ್ನು ಪೂತನೆಯು ಪ್ರವೇಶಿಸಿದಳು. ನಿದ್ರೆಯಲ್ಲಿದ್ದ ಕೃಷ್ಣನ ತಾಯಿ ಯಶೋದೆಗೆ ಆ ಪೂತನೆಯ ಒಳ್ಳೆಯವಳಂತೆಯೇ ಕಂಡಳು. ಅವಳು ಸರ್ವೋತ್ತಮನಾದ ಕೃಷ್ಣನನ್ನು ತೆಗೆದುಕೊಂಡಳು.

**ತನ್ಮಾಯಯಾ ಧರ್ಷಿತಾ ನಿದ್ರಯಾ ಚ**
**ನ್ಯವಾರಯನ್ನೈವ ಹಿ ನಂದಜಾಯಾ ।**
**ತಯಾ ಪ್ರದತ್ತಂ ಸ್ತನಮೀಶಿತಾಽಸುಭಿಃ**
**ಪಪೌ ಸಹೈವಾಽಶು ಜನಾರ್ದನಃ ಪ್ರಭುಃ ॥ ೮೫ ॥**

ಪದಚ್ಛೇದ : ತನ್ಮಾಯಯಾ ಧರ್ಷಿತಾ ನಿದ್ರಯಾ ಚ ನ್ಯವಾರಯತ್ ನ ಏವ ಹಿ ನಂದಜಾಯಾ ತಯಾ ಪ್ರದತ್ತಂ ಸ್ತನಂ ಈಶಿತಾ ಅಸುಭಿಃ ಪಪೌ ಸಹ ಏವ ಆಶು ಜನಾರ್ದನಃ ಪ್ರಭುಃ

**ಅರ್ಥ :-** **ತನ್ಮಾಯಯಾ** ಆ ಪೂತನೆಯ ಮಾಯೆಯಿಂದ **ಚ** ಮತ್ತು **ನಿದ್ರಯಾ** ನಿದ್ರೆಯಿಂದ **ಧರ್ಷಿತಾ** ವಶೀಕರಿಸಲ್ಪಟ್ಟ **ನಂದಜಾಯಾ** ನಂದನ ಹೆಂಡತಿಯಾದ ಯಶೋದೆಯು **ನ ಏವ ನ್ಯವಾರಯತ್ ಹಿ** ತಡೆಯಲೇ ಇಲ್ಲವಷ್ಟೆ **ಪ್ರಭುಃ** ಸಮರ್ಥನಾದ **ಈಶಿತಾ** ಸ್ವಾಮಿಯಾದ **ಜನಾರ್ದನಃ** ಕೃಷ್ಣನು **ತಯಾ** ಆ ಪೂತನೆಯಿಂದ **ಪ್ರದತ್ತಂ** ಕೊಡಲ್ಪಟ್ಟ **ಸ್ತನಂ** ಎದೆಹಾಲನ್ನು **ಅಸುಭಿಃ** ಪ್ರಾಣಗಳಿಂದ **ಸಹ ಏವ** ಜೊತೆಗೇ **ಆಶು** ಶೀಘ್ರವಾಗಿ **ಪಪೌ** ಕುಡಿದನು.

**ತಾತ್ಪರ್ಯ :-** ಪೂತನೆಯ ಮಾಯೆ ಹಾಗು ನಿದ್ರೆಗಳಿಂದ ವಶೀಕೃತಳಾದ ನಂದಪತ್ನಿಯು ಪೂತನೆಯನ್ನು ತಡೆಯಲಿಲ್ಲ. ಪೂತನೆಯು ಕೃಷ್ಣನಿಗೆ ಎದೆ ಹಾಲನ್ನು ಕೊಟ್ಟಾಗ ಸಮರ್ಥನಾದ ಸ್ವಾಮಿಯಾದ ಕೃಷ್ಣನು ತಡಮಾಡದೇ ಅವಳ ಎದೆಹಾಲನ್ನು ಪ್ರಾಣಗಳ ಜೊತೆಗೇ ಕುಡಿದನು.

ಮೃತಾ ಸ್ವರೂಪೇಣ ಸುಭೀಷಣೇನ
ಪಪಾತ ಸಾ ವ್ಯಾಪ್ಯ ವನಂ ಸಮಸ್ತಮ್ ।
ತದಾಽಽಗಮನ್ನಂದಗೋಪೋಽಪಿ ತತ್ರ
ದೃಷ್ಟೈವ ಸರ್ವೇಽಪ್ಯಭವನ್ ಸುವಿಸ್ಮಿತಾಃ ॥ ೮೬ ॥

ಪದಚ್ಛೇದ : ಮೃತಾ ಸ್ವರೂಪೇಣ ಸುಭೀಷಣೇನ ಪಪಾತ ಸಾ ವ್ಯಾಪ್ಯ ವನಂ ಸಮಸ್ತಂ ತದಾ ಆಗಮತ್ ನಂದಗೋಪಃ ಅಪಿ ತತ್ರ ದೃಷ್ಟ್ವಾ ಏವ ಸರ್ವೇ ಅಪಿ ಅಭವನ್ ಸುವಿಸ್ಮಿತಾಃ

**ಅರ್ಥ** :- **ಮೃತಾ** ಸತ್ತಂತಹ **ಸಾ** ಆ ಪೂತನೆಯು **ಸುಭೀಷಣೇನ** ಅತ್ಯಂತ ಭಯಂಕರವಾದ **ಸ್ವರೂಪೇಣ** ತನ್ನ ನಿಜರೂಪದಿಂದ **ಸಮಸ್ತಂ** ಸಮಗ್ರವಾದ **ವನಂ** ಕಾಡನ್ನು **ವ್ಯಾಪ್ಯ** ವ್ಯಾಪಿಸಿಕೊಂಡು **ಪಪಾತ** ಬಿದ್ದಳು. **ತದಾ** ಆಗ **ನಂದಗೋಪಃ ಅಪಿ** ನಂದಗೋಪನೂ ಕೂಡ **ತತ್ರ** ಅಲ್ಲಿಗೆ **ಆಗಮತ್** ಬಂದನು **ದೃಷ್ಟ್ವಾ ಏವ** (ಅದನ್ನು) ನೋಡಿಯೇ **ಸರ್ವೇ ಅಪಿ** ಎಲ್ಲರೂ ಕೂಡ **ಸುವಿಸ್ಮಿತಾಃ** ಅತ್ಯಂತ ಆಶ್ಚರ್ಯಗೊಂಡವರು **ಅಭವನ್** ಆದರು.

**ತಾತ್ಪರ್ಯ** :- ಕೃಷ್ಣನಿಂದ ಹತಳಾದ ಪೂತನೆಯು ತನ್ನ ನಿಜವಾದ ಭಯಂಕರವಾದ ರಾಕ್ಷಸೀರೂಪವನ್ನು ಧರಿಸಿ ಸಮಗ್ರ ಕಾಡನ್ನು ವ್ಯಾಪಿಸಿ ಕೊಂಡು ಬಿದ್ದಳು. ಅದೇ ಸಮಯಕ್ಕೆ ನಂದಗೋಪನೂ ಅಲ್ಲಿಗೆ ಬಂದನು. ಎಲ್ಲರೂ ಅವಳ ಭಯಂಕರರೂಪವನ್ನು ನೋಡಿ ಬಹಳ ಆಶ್ಚರ್ಯಪಟ್ಟರು.

ಸಾ ತಾಟಕಾ ಚೋರ್ವಶೀಸಂಪ್ರವಿಷ್ಟಾ
ಕೃಷ್ಣಾವಧ್ಯಾನಾನ್ನಿರಯಂ ಸಂಜಗಾಮ ।
ಸಾ ತೂರ್ವಶೀ ಕೃಷ್ಣಭುಕ್ತಸ್ತನೇನ ಪೂತಾ
ಸ್ವರ್ಗಂ ಪ್ರಯಯೌ ತತ್‌ಕ್ಷಣೇನ ॥ ೮೭ ॥

ಪದಚ್ಛೇದ : ಸಾ ತಾಟಕಾ ಚ ಉರ್ವಶೀಸಂಪ್ರವಿಷ್ಟಾ ಕೃಷ್ಣಾವಧ್ಯಾನಾತ್ ನಿರಯಂ ಸಂಜಗಾಮ ಸಾ ತು ಉರ್ವಶೀ ಕೃಷ್ಣಭುಕ್ತಸ್ತನೇನ ಪೂತಾ ಸ್ವರ್ಗಂ ಪ್ರಯಯೌ ತತ್ಕ್ಷಣೇನ.

**ಅರ್ಥ** :- **ಉರ್ವಶೀಸಂಪ್ರವಿಷ್ಟಾ** ಉರ್ವಶೀಯಿಂದ ಪ್ರವೇಶಿಸಲ್ಪಟ್ಟ **ತಾಟಕಾ** ತಾಟಕೆಯ ಸ್ವರೂಪಳಾದ **ಸಾ ಚ** ಆ ಪೂತನೆಯಾದರೂ

**ಕೃಷ್ಣಾವಧ್ಯಾನಾತ್** ಕೃಷ್ಣನಲ್ಲಿ ಅಪರಾಧ ಮಾಡಿದ್ದರಿಂದ **ನಿರಯಂ** ತಮಸ್ಸನ್ನು **ಸಂಜಗಾಮ** ಹೊಂದಿದಳು **ಸಾ** ಆ **ಉರ್ವಶೀ ತು** ಉರ್ವಶಿಯಾದರೂ **ಕೃಷ್ಣಭುಕ್ತಸ್ತನೇನ** ಕೃಷ್ಣನು ಸ್ತನಪಾನವನ್ನು ಮಾಡಿದ್ದರಿಂದ **ಪೂತಾ (ಸತೀ)** ಪವಿತ್ರಳಾದವಳಾಗಿ **ತತ್ಕ್ಷಣೇನ** ಆ ಕ್ಷಣದಲ್ಲಿಯೇ **ಸ್ವರ್ಗಂ (ಪ್ರತಿ)** ಸ್ವರ್ಗವನ್ನು ಕುರಿತು **ಪ್ರಯಯೌ** ಹೋದಳು.

**ತಾತ್ಪರ್ಯ :-** ಉರ್ವಶೀಯ ಆವೇಶದಿಂದ ಕೂಡಿದ ತಾಟಕೆಯೇ ಪೂತನೆಯಾಗಿದ್ದಳು. ಆ ತಾಟಕೆಯು ಕೃಷ್ಣನ ವಿಷಯದಲ್ಲಿ ಅಪರಾಧವನ್ನು ಮಾಡಿದ್ದರಿಂದ ತಮಸ್ಸನ್ನು ಸೇರಿದಳು. ಉರ್ವಶಿಯಾದರೂ ಕೃಷ್ಣನು ಎದೆ ಹಾಲನ್ನು ಕುಡಿದದ್ದರಿಂದ ಶೀಘ್ರವೇ ಸ್ವರ್ಗವನ್ನು ಪಡೆದಳು.

**ಸಾ ತುಂಬುರೋಃ ಸಂಗತ ಆವಿವೇಶ**
**ರಕ್ಷಸ್ತನುಂ ಶಾಪತೋ ವಿತ್ತಪಸ್ಯ ।**
**ಕೃಷ್ಣಸ್ಪರ್ಶಾಚ್ಛುದ್ಧರೂಪಾ ಪುನರ್ದಿವಂ**
**ಯಯೌ ತುಷ್ಟೇ ಕಿಮಲಭ್ಯಂ ರಮೇಶೇ ॥ ೮೮ ॥**

ಪದಚ್ಛೇದ : ಸಾ ತುಂಬುರೋಃ ಸಂಗತಃ ಆವಿವೇಶ, ರಕ್ಷಸ್ತನುಂ ಶಾಪತಃ ವಿತ್ತಪಸ್ಯ ಕೃಷ್ಣಸ್ಪರ್ಶಾತ್ ಶುದ್ಧರೂಪಾ ಪುನಃ ದಿವಂ ಯಯೌ ತುಷ್ಟೇ ಕಿಂ ಅಲಭ್ಯಂ ರಮೇಶೇ

**ಅರ್ಥ :-** **ಸಾ** ಆ ಉರ್ವಶಿಯು **ತುಂಬುರೋಃ** ತುಬುರುವಿನ **ಸಂಗತಃ** ಸಂಗದಿಂದಾಗಿ **ವಿತ್ತಪಸ್ಯ** ಧನರಕ್ಷಕನಾದ ಕುಬೇರನ **ಶಾಪತಃ** ಶಾಪದಿಂದ **ರಕ್ಷಸ್ತನುಂ** ರಾಕ್ಷಸಶರೀರವನ್ನು **ಆವಿವೇಶ** ಪ್ರವೇಶಿಸಿದಳು **ಕೃಷ್ಣಸ್ಪರ್ಶಾತ್** ಕೃಷ್ಣನ ಸ್ಪರ್ಶದಿಂದ **ಶುದ್ಧರೂಪಾ (ಸತೀ)** ಪರಿಶುದ್ಧವಾದ ಸ್ವಭಾವದವಳಾಗಿ **ಪುನಃ** ಮತ್ತೆ **ದಿವಂ (ಪ್ರತಿ)** ಸ್ವರ್ಗವನ್ನು ಕುರಿತು **ಯಯೌ** ಹೋದಳು **ರಮೇಶೇ** ಲಕ್ಷ್ಮೀಪತಿಯು **ತುಷ್ಟೇ (ಸತಿ)** ಸಂತುಷ್ಟನಾಗಲು **ಕಿಂ** ಯಾವುದು ತಾನೇ **ಅಲಭ್ಯಂ** ಅಲಭ್ಯವು.

**ತಾತ್ಪರ್ಯ :-** ಆ ಉರ್ವಶಿಯು ಕುಬೇರನೊಂದಿಗೆ ಇದ್ದಾಗ ತುಂಬುರುವಿನ ಸಂಗವನ್ನು ಮಾಡುತ್ತಾಳೆ. ಅದರಿಂದ ಸಿಟ್ಟಾದ ಕುಬೇರನು ರಾಕ್ಷಸ ಶರೀರವನ್ನು ಹೊಂದು ಎಂದು ಶಾಪವಿತ್ತನು. ಅದರಂತೆ ಉರ್ವಶಿಯು ರಾಕ್ಷಸಿಯಾದ ತಾಟಕೆಯ ಶರೀರವನ್ನು ಪ್ರವೇಶಿಸಿದ್ದಳು. ಅಲ್ಲಿ ಕೃಷ್ಣನ

ಸ್ಪರ್ಶವಾದ್ದರಿಂದ ಪರಿಶುದ್ಧಳಾಗಿ ಪುನಃ ಸ್ವರ್ಗಕ್ಕೆ ಹೋದಳು. ಲಕ್ಷ್ಮೀಪತಿಯಾದ ನಾರಾಯಣನು ಪ್ರಸನ್ನನಾದರೆ ಯಾವುದು ತಾನೆ ಅಲಭ್ಯ.

ಯದಾಽಪ ದೇವಶ್ಚತುರೋಽಥ ಮಾಸಾಂಸ್ತ-
ದೋಪನಿಷ್ಕ್ರಾಮಣಮಸ್ಯ ಚಾಽಸೀತ್ ।
ಜನ್ಮರ್ಕ್ಷಮಸ್ಮಿನ್ ದಿನ ಏವ ಚಾಸೀತ್
ಪ್ರಾತಃ ಕಿಂಚಿತ್ ತತ್ರ ಮಹೋತ್ಸವೋಽಭೂತ್ ॥ ೮೯ ॥

ಪದಚ್ಛೇದ : ಯದಾ ಆಪ ದೇವಃ ಚತುರಃ ಅಥ ಮಾಸಾನ್ ತದಾ ಉಪನಿಷ್ಕ್ರಾಮಣಂ ಅಸ್ಯ ಚ ಆಸೀತ್ ಜನ್ಮರ್ಕ್ಷಂ ಅಸ್ಮಿನ್ ದಿನೇ ಏವ ಚ ಆಸೀತ್ ಪ್ರಾತಃ ಕಿಂಚಿತ್ ತತ್ರ ಮಹೋತ್ಸವಃ ಅಭೂತ್.

**ಅರ್ಥ** :- **ಅಥ** ಆ ನಂತರ **ಯದಾ** ಯಾವಾಗ **ದೇವಃ** ಕ್ರೀಡಾದಿಗುಣ ವಿಶಿಷ್ಟನಾದ ಕೃಷ್ಣನು **ಚತುರಃ** ನಾಲ್ಕು **ಮಾಸಾನ್** ತಿಂಗಳುಗಳನ್ನು **ಆಪ** ಹೊಂದಿದನೋ **ತದಾ** ಆಗ **ಅಸ್ಯ** ಈ ಕೃಷ್ಣನಿಗೆ **ಉಪನಿಷ್ಕ್ರಾಮಣಂ** ಉಪನಿಷ್ಕ್ರಾಮಣವು **ಆಸೀತ್** ಇದ್ದಿತು. **ಚ** ಮತ್ತು **ಅಸ್ಮಿನ್** ಇದೇ **ದಿನೇ ಏವ** ದಿನದಲ್ಲಿಯೇ **ಪ್ರಾತಃ** ಪ್ರಾತಃಕಾಲದಲ್ಲಿ **ಕಿಂಚಿತ್** ಸ್ವಲ್ಪ **ಜನ್ಮರ್ಕ್ಷಂ ಚ** ಜನ್ಮನಕ್ಷತ್ರವೂ **ಆಸೀತ್** ಇದ್ದಿತು **ತತ್ರ** ಅಲ್ಲಿ **ಮಹೋತ್ಸವಃ** ದೊಡ್ಡ ಉತ್ಸವವೇ **ಅಭೂತ್** ಆಯಿತು.

**ತಾತ್ಪರ್ಯ** :- ಕೃಷ್ಣನಿಗೆ ನಾಲ್ಕು ತಿಂಗಳು ಆದ ನಂತರ ಅವನಿಗೆ ಉಪನಿಷ್ಕ್ರಾಮಣ (ಮಗುವಿಗೆ ಸೂರ್ಯನ ದರ್ಶನ ಮಾಡಿಸಿ ದೇವಸ್ಥಾನಕ್ಕೆ ಕರೆದುಕೊಂಡು ಹೋಗಿ ಅಲ್ಲಿಂದ ಸೋದರಮಾವ ಮೊದಲಾದ ಬಂಧುಗಳ ಮನೆಗೆ ಕರೆದುಕೊಂಡು ಹೋಗುವುದು)ವೆಂಬ ಕರ್ಮವು ನಡೆಯಿತು. ಆ ದಿನದಂದು ಬೆಳಿಗ್ಗೆ ಸ್ವಲ್ಪಕಾಲ ಕೃಷ್ಣನ ಜನ್ಮನಕ್ಷತ್ರವಾದ ರೋಹಿಣೀ ನಕ್ಷತ್ರವು ಇದ್ದಿತು. ಅಂದು ದೊಡ್ಡ ಉತ್ಸವವೇ ಅಲ್ಲಿ ಜರುಗಿತು.

ತದಾ ಶಯಾನಃ ಶಕಟಸ್ಯ ಸೋಽಧಃ
ಪದಾಽಕ್ಷಿಪತ್ ತಂ ದಿತಿಜಂ ನಿಹಂತುಮ್ ।
ಅನಃ ಸಮಾವಿಶ್ಯ ದಿತೇಃ ಸುತೋಽಸೌ
ಸ್ಥಿತಃ ಪ್ರತೀಪಾಯ ಹರೇಃ ಸುಪಾಪಃ ॥ ೯೦ ॥

ಪದಚ್ಛೇದ : ತದಾ ಶಯಾನಃ ಶಕಟಸ್ಯ ಸಃ ಅಧಃ ಪದಾ ಅಕ್ಷಿಪತ್ ತಂ ದಿತಿಜಂ ನಿಹಂತುಂ ಅನಃ ಸಮಾವಿಶ್ಯ ದಿತೇಃ ಸುತಃ ಅಸೌ ಸ್ಥಿತಃ ಪ್ರತೀಪಾಯ ಹರೇಃ ಸುಪಾಪಃ.

ಅರ್ಥ :- ತದಾ ಆಗ ಸಃ ಆ ಕೃಷ್ಣನು ಶಕಟಸ್ಯ ಬಂಡಿಯ ಅಧಃ ಕೆಳಗೆ ಶಯಾನಃ (ಸನ್) ಮಲಗಿದವನಾಗಿ ತಂ ಬಂಡಿಯಲ್ಲಿದ್ದ ಆ ದಿತಿಜಂ ದೈತ್ಯನನ್ನು ನಿಹಂತುಂ ಕೊಲ್ಲಲು ಪದಾ ಕಾಲಿನಿಂದ ಅಕ್ಷಿಪತ್ ತಳ್ಳಿದನು ಸುಪಾಪಃ ಮಹಾಪಾಪಿಯಾದ ದಿತೇಃ ದಿತಿಯ ಸುತಃ ಸಂತಾನವಾದ ಅಸೌ ಈ ಶಕಟಾಕ್ಷನು ಹರೇಃ ಕೃಷ್ಣನಿಗೆ ಪ್ರತೀಪಾಯ ಕೇಡನ್ನು ಮಾಡಲು ಅನಃ ಬಂಡಿಯನ್ನು ಸಮಾವಿಶ್ಯ ಪ್ರವೇಶಿಸಿ ಸ್ಥಿತಃ (ಅಭೂತ್) ಇದ್ದನು.

ತಾತ್ಪರ್ಯ :- ಈ ಉತ್ಸವದ ಕಾಲದಲ್ಲಿ ಗೋಪಿಯರು ಕೃಷ್ಣನನ್ನು ಬಂಡಿಯ ಕೆಳಗೆ ಮಲಗಿಸಿದರು. ಆ ಬಂಡಿಯಲ್ಲಿ ಶಕಟಾಕ್ಷನೆಂಬ ದೈತ್ಯನು ಕೃಷ್ಣನಿಗೆ ಕೇಡನ್ನು ಮಾಡಲು ಇದ್ದನು. ಬಂಡಿಯಲ್ಲಿದ್ದ ದೈತ್ಯನನ್ನು ಕೊಲ್ಲಲು ಕೃಷ್ಣನು ತನ್ನ ಕಾಲಿನಿಂದ ಬಂಡಿಯನ್ನು ಒದ್ದನು.

ಕ್ಷಿಪ್ತೋऽನಸಿಸ್ಥಃ ಶಕಟಾಕ್ಷನಾಮಾ ಸ ವಿಷ್ಣುನೇತ್ವಾ ಸಹಿತಃ ಪಪಾತ ।
ಮಮಾರ ಚಾऽಶು ಪ್ರತಿಭಗ್ನಗಾತ್ರೋ ವ್ಯತ್ಯಸ್ತಚಕ್ರಾಕ್ಷಮಭೂದನಶ್ಚ ॥ ೯೧ ॥

ಪದಚ್ಛೇದ : ಕ್ಷಿಪ್ತಃ ಅನಸಿಸ್ಥಃ ಶಕಟಾಕ್ಷನಾಮಾ ಸಃ ವಿಷ್ಣುನಾ ಇತ್ವಾಸಹಿತಃ ಪಪಾತ ಮಮಾರ ಚ ಆಶು ಪ್ರತಿಭಗ್ನಗಾತ್ರಃ ವ್ಯತ್ಯಸ್ತಚಕ್ರಾಕ್ಷಂ ಅಭೂತ್ ಅನಃ ಚ.

ಅರ್ಥ :- ವಿಷ್ಣುನಾ ಕೃಷ್ಣನಿಂದ ಕ್ಷಿಪ್ತಃ ತಳ್ಳಲ್ಪಟ್ಟ ಅನಸಿಸ್ಥಃ ಬಂಡಿಯಲ್ಲಿದ್ದ ಶಕಟಾಕ್ಷನಾಮಾ ಶಕಟಾಕ್ಷನೆಂಬ ಹೆಸರಿನ ಸಃ ಆ ದೈತ್ಯನು ಇತ್ವಾಸಹಿತಃ (ಸನ್) ಬಂಡಿಯಿಂದ ಸಹಿತನಾಗಿ ಪಪಾತ ಬಿದ್ದನು ಚ ಮತ್ತು ಆಶು ಶೀಘ್ರವಾಗಿ ಪ್ರತಿಭಗ್ನಗಾತ್ರಃ (ಸನ್) ಚೂರಾದ ಶರೀರವುಳ್ಳವನಾಗಿ ಮಮಾರ ಸತ್ತನು. ಅನಃ ಚ ಬಂಡಿಯಾದರೂ ವ್ಯತ್ಯಸ್ತಚಕ್ರಾಕ್ಷಂ ವ್ಯತ್ಯಾಸಗೊಂಡ ಚಕ್ರ ಅರಮೊದಲಾದವುಳ್ಳದ್ದು ಅಭೂತ್ ಆಯಿತು.

ತಾತ್ಪರ್ಯ :- ಕೃಷ್ಣನಿಂದ ತಳ್ಳಲ್ಪಟ್ಟ ಬಂಡಿಯಲ್ಲಿದ್ದ ಶಕಟಾಕ್ಷನೆಂಬ ದೈತ್ಯನು ಬಂಡಿಯ ಸಹಿತವಾಗಿ ಬಿದ್ದನು. ಅವನ ಶರೀರವೆಲ್ಲ ಚೂರುಚೂರಾಗಿ ಸತ್ತನು. ಬಂಡಿಯ ಚಕ್ರ ಅರಗಳೂ ಅಸ್ತವ್ಯಸ್ತಗೊಂಡವು. (ವಾದಿರಾಜೀಯ

ವ್ಯಾಖ್ಯಾನದ ಪ್ರಕಾರ "ಇತ್ವಾಸಹಿತಃ" ಎಂಬುದು ಒಂದೇ ಪದ. ಜನಾರ್ದನೀಯದ ಪ್ರಕಾರ ಇತ್ವಾ ಎನ್ನುವುದು ಭಿನ್ನಪದ).

ಸಾ ಸಂಭ್ರಮಾತ್ ತಂ ಪ್ರತಿಗೃಹ್ಯ ಶಂಕಯಾ
ಕೃಷ್ಣಂ ಯಶೋದಾ ದ್ವಿಜವರ್ಯಸೂಕ್ತಿಭಿಃ ।
ಸಂಸ್ನಾಪಯಾಮಾಸ ನದೀತಟಾತ್ ತದಾ
ಸಮಾಗತಾ ನಂದವಚೋಽಭಿತರ್ಜಿತಾ ॥ ೯೨ ॥

ಪದಚ್ಛೇದ : ಸಾ ಸಂಭ್ರಮಾತ್ ತಂ ಪ್ರತಿಗೃಹ್ಯ ಶಂಕಯಾ ಕೃಷ್ಣಂ ಯಶೋದಾ ದ್ವಿಜವರ್ಯಸೂಕ್ತಿಭಿಃ ಸಂಸ್ನಾಪಯಾಮಾಸ ನದೀತಟಾತ್ ತದಾ ಸಮಾಗತಾ ನಂದವಚೋಽಭಿತರ್ಜಿತಾ.

**ಅರ್ಥ** :- **ತದಾ** ಆಗ **ನಂದವಚೋಽಭಿತರ್ಜಿತಾ** ನಂದನ ಮಾತುಗಳಿಂದ ಗದರಿಸಿಕೊಂಡ **ಸಾ** ಆ **ಯಶೋದಾ** ಯಶೋದೆಯು **ನದೀತಟಾತ್** ನದಿಯ ತೀರದಿಂದ **ಸಮಾಗತಾ (ಸತೀ)** ಬಂದವಳಾಗಿ **ಸಂಭ್ರಮಾತ್** ಭಯದಿಂದ **ತಂ** ಆ **ಕೃಷ್ಣಂ** ಕೃಷ್ಣನನ್ನು **ಪ್ರತಿಗೃಹ್ಯ** ಎತ್ತಿಕೊಂಡು **ಶಂಕಯಾ** ಭೂತಬಾಧೆಯ ಶಂಕೆಯಿಂದ **ದ್ವಿಜವರ್ಯಸೂಕ್ತಿಭಿಃ** ಬ್ರಾಹ್ಮಣ ಶ್ರೇಷ್ಠರ ಮಂತ್ರಗಳಿಂದ **ಸಂಸ್ನಾಪಯಾಮಾಸ** ಸ್ನಾನ ಮಾಡಿಸಿದಳು.

**ತಾತ್ಪರ್ಯ** :- ಆಗ ನಂದನು ಮಗುವನ್ನು ಬಿಟ್ಟು ಹೋದದ್ದರಿಂದ ಯಶೋದೆಯನ್ನು ಬೈದನು. ಹೆದರಿದ ಯಶೋದೆಯ ನದೀತೀರದಿಂದ ಹೊರಟು ಕೃಷ್ಣನಿದ್ದಲ್ಲಿಗೆ ಬಂದು ಕೃಷ್ಣನನ್ನು ಎತ್ತಿಕೊಂಡಳು. ಭೂತ-ಪ್ರೇತಗಳ ಕಾಟವಿರಬಹುದು ಎಂಬ ಶಂಕೆಯಿಂದ ಬ್ರಾಹ್ಮಣರಿಂದ ಮಂತ್ರಪಠಣ ಮಾಡಿಸಿ ಸ್ನಾನ ಮಾಡಿಸಿದಳು.

ಹತ್ವಾ ತು ತಂ ಕಂಸಭೃತ್ಯಂ ಸ ಕೃಷ್ಣಃ
ಶಿಶ್ಯೇ ಪುನಃ ಶಿಶುವತ್ ಸರ್ವಶಾಸ್ತಾ ।
ಏವಂ ಗೋಪಾನ್ ಪ್ರೀಣಯನ್ ಬಾಲ-
ಕೇಲೀವಿನೋದತೋ ನ್ಯವಸತ್ ತತ್ರ ದೇವಃ ॥ ೯೩ ॥

ಪದಚ್ಛೇದ : ಹತ್ವಾ ತು ತಂ ಕಂಸಭೃತ್ಯಂ ಸಃ ಕೃಷ್ಣಃ ಶಿಶ್ಯೇ ಪುನಃ ಶಿಶುವತ್ ಸರ್ವಶಾಸ್ತಾ ಏವಂ ಗೋಪಾನ್ ಪ್ರೀಣಯನ್ ಬಾಲಕೇಲೀವಿನೋದತಃ ನ್ಯವಸತ್ ತತ್ರ ದೇವಃ.

**ಅರ್ಥ :- ಸರ್ವಶಾಸ್ತಾ** ಸರ್ವರಿಗೂ ಶಾಸಕನಾದ **ಸಃ** ಆ **ಕೃಷ್ಣಃ ತು** ಕೃಷ್ಣನಾದರೂ **ಕಂಸಭೃತ್ಯಂ** ಕಂಸನ ಸೇವಕನಾದ **ತಂ** ಆ **ಶಕಟಾಕ್ಷ**ನನ್ನು **ಹತ್ವಾ** ಕೊಂದು **ಪುನಃ** ಮತ್ತೆ **ಶಿಶುವತ್** ಮಗುವಿನಂತೆ **ಶಿಶ್ಯೇ** ಮಲಗಿದನು. **ಏವಂ** ಈ ರೀತಿಯಾಗಿ **ದೇವಃ** ಕ್ರೀಡಾದಿಗುಣವಿಶಿಷ್ಟನಾದ ಕೃಷ್ಣನು **ತತ್ರ** ಆ ಗೋಕುಲದಲ್ಲಿ **ಬಾಲಕೇಲೀವಿನೋದತಃ** ಮಗುವಿನ ಆಟದ ರೂಪವಾದ ವಿನೋದದಿಂದ **ಗೋಪಾನ್** ಗೋಪಾಲಕರನ್ನು **ಪ್ರೀಣಯನ್ (ಸನ್)** ಸಂತೋಷಪಡಿಸುತ್ತಾ **ನ್ಯವಸತ್** ವಾಸಮಾಡಿದನು.

**ತಾತ್ಪರ್ಯ :-** ಸರ್ವರಿಗೂ ಶಾಸಕನಾದ ಕೃಷ್ಣನು ಕಂಸನ ಸೇವಕನಾದ ಶಕಟಾಕ್ಷನನ್ನು ಕೊಂದು ಪುನಃ ಮಗುವಿನಂತೆ ಮಲಗಿದನು. ಕೃಷ್ಣನು ಈ ರೀತಿಯಾಗಿ ತನ್ನ ಬಾಲಕ್ರೀಡೆಗಳಿಂದ ಗೋಪಾಲಕರನ್ನು ಸಂತೋಷಗೊಳಿಸುತ್ತಾ ಗೋಕುಲದಲ್ಲೇ ವಾಸ ಮಾಡಿದನು.

**ವಿವರ್ಧಮಾನೇ ಲೋಕದೃಷ್ಟ್ಯೈವ ಕೃಷ್ಣೇ**
**ಪಾಂಡುಃ ಪುನಃ ಪ್ರಾಹ ಪೃಥಾಮಿದಂ ವಚಃ ।**
**ಧರ್ಮಿಷ್ಠೋ ನೌ ಸೂನುರಗ್ರೇ ಬಭೂವ**
**ಬಲದ್ವಯಜ್ಯೇಷ್ಠ ಉತಾಪರಶ್ಚ ॥ ೯೪ ॥**

ಪದಚ್ಛೇದ : ವಿವರ್ಧಮಾನೇ ಲೋಕದೃಷ್ಟ್ಯಾ ಏವ ಕೃಷ್ಣೇ ಪಾಂಡುಃ ಪುನಃ ಪ್ರಾಹ ಪೃಥಾಂ ಇದಂ ವಚಃ ಧರ್ಮಿಷ್ಠಃ ನೌ ಸೂನುಃ ಅಗ್ರೇ ಬಭೂವ ಬಲದ್ವಯಜ್ಯೇಷ್ಠಃ ಉತ ಅಪರಃ ಚ.

**ಅರ್ಥ :- ಲೋಕದೃಷ್ಟ್ಯಾ ಏವ** ಲೋಕದ ದೃಷ್ಟಿಯಿಂದಲೇ **ಕೃಷ್ಣೇ** ಕೃಷ್ಣನು **ವಿವರ್ಧಮಾನೇ (ಸತಿ)** ಬೆಳೆಯುತ್ತಿರಲು **ಪಾಂಡುಃ** ಪಾಂಡು ರಾಜನು **ಪುನಃ** ಮತ್ತೆ **ಪೃಥಾಂ (ಪ್ರತಿ)** ಕುಂತಿಯನ್ನು ಕುರಿತು **ಇದಂ** ಈ **ವಚಃ** ಮಾತನ್ನು **ಪ್ರಾಹ** ಆಡಿದನು **ನೌ** ನಮಗೆ **ಅಗ್ರೇ** ಮೊದಲು **ಧರ್ಮಿಷ್ಠಃ** ಧರ್ಮಬುದ್ಧಿಯುಳ್ಳ **ಸೂನುಃ** ಮಗನು **ಬಭೂವ** ಹುಟ್ಟಿದನು **ಉತ** ನಂತರ **ಬಲದ್ವಯಜ್ಯೇಷ್ಠಃ** ಎರಡುವಿಧ ಬಲದಲ್ಲಿಯೂ ಶ್ರೇಷ್ಠನಾದ **ಅಪರಃ ಚ** ಮತ್ತೊಬ್ಬ ಮಗನೂ **ಬಭೂವ** ಹುಟ್ಟಿದನು.

ತಾತ್ಪರ್ಯ :- ಅಜ್ಞಜನರ ದೃಷ್ಟಿಯಿಂದ ಕೃಷ್ಣನು ಬೆಳೆಯುತ್ತಿರಲು ಪಾಂಡುರಾಜನು ಕುಂತಿಯನ್ನು ಕುರಿತು ಪುನಃ ಹೇಳಿದನು. "ನಮಗೆ ಮೊದಲು ಧರ್ಮಬುದ್ಧಿಯುಳ್ಳ ಮಗನು ಹುಟ್ಟಿದನು; ನಂತರ ಜ್ಞಾನಬಲ, ಶರೀರಬಲ ಎರಡರಲ್ಲೂ ಶ್ರೇಷ್ಠನಾದ ಮತ್ತೊಬ್ಬ ಮಗನೂ ಹುಟ್ಟಿದನು."

**ಯದ್ಯೇಕ ಏವಾತಿಬಲೋಪಪನ್ನೋ**
**ಭವೇತ್ ತದಾ ತೇನ ಪರಾವಮರ್ದೇ ।**
**ಪ್ರವರ್ತಮಾನೇ ಸ್ವಪುರಂ ಹರೇಯುಶ್ಚೌರ್ಯಾತ್**
**ಪರೇ ತದ್ ದ್ವಯಮತ್ರ ಯೋಗ್ಯಮ್ ॥ ೯೫ ॥**

ಪದಚ್ಛೇದ : ಯದಾ ಏಕಃ ಏವ ಅತಿಬಲೋಪಪನ್ನಃ ಭವೇತ್ ತದಾ ತೇನ ಪರಾವಮರ್ದೇ ಪ್ರವರ್ತಮಾನೇ ಸ್ವಪುರಂ ಹರೇಯುಃ ಚೌರ್ಯಾತ್ ಪರೇ ತತ್ ದ್ವಯಂ ಅತ್ರ ಯೋಗ್ಯಮ್.

ಅರ್ಥ :- ಯದಾ ಒಂದು ವೇಳೆ **ಅತಿಬಲೋಪಪನ್ನಃ** ಅತ್ಯಂತ ಬಲವುಳ್ಳ **ಏಕಃ ಏವ** ಒಬ್ಬನೇ (ಮಗನು) **ಭವೇತ್** ಇದ್ದರೆ **ತದಾ** ಆಗ **ತೇನ** ಆ ಒಬ್ಬನಿಂದ **ಪರಾವಮರ್ದೇ** ಶತ್ರುಗಳೊಂದಿಗೆ ಯುದ್ಧವು **ಪ್ರವರ್ತಮಾನೇ** (ಸತಿ) ನಡೆಯುತ್ತಿರಲು **ಪರೇ** ವೈರಿಗಳು **ಚೌರ್ಯಾತ್** ಕಳ್ಳತನದಿಂದ **ಸ್ವಪುರಂ** ತಮ್ಮ ಪಟ್ಟವನ್ನು **ಹರೇಯುಃ** ಕಳ್ಳತನವನ್ನು ಮಾಡಿಯಾರು **ತತ್** ಆದ್ದರಿಂದ **ಅತ್ರ** ರಾಜ್ಯರಕ್ಷಣೆಯಲ್ಲಿ **ದ್ವಯಂ** (ಬಲಿಷ್ಠರಾದ) ಮಕ್ಕಳಿಬ್ಬರು **ಯೋಗ್ಯಂ** (ಇರುವುದು) ಯುಕ್ತವು.

ತಾತ್ಪರ್ಯ :- ಪಾಂಡುರಾಜನು ಕುಂತಿಗೆ ಹೇಳುತ್ತಿದ್ದಾನೆ - "ಒಂದು ವೇಳೆ ಅತಿಬಲಿಷ್ಠನಾದ ಒಬ್ಬನೇ ಮಗನಿದ್ದರೆ, ಆ ಮಗನು ಶತ್ರುಗಳೊಂದಿಗೆ ಯುದ್ಧದಲ್ಲಿ ತೊಡಗಿರುವಾಗ ಶತ್ರುಗಳು ಊರೊಳಗೆ ನುಗ್ಗಿ ಕಳ್ಳತನ ಮಾಡಿಯಾರು. ಬಲಿಷ್ಠರಾದ ಇಬ್ಬರು ಮಕ್ಕಳಿರುವುದು ಯುಕ್ತವು."

**ಶಸ್ತ್ರಾಸ್ತ್ರವಿದ್ ವೀರ್ಯವಾನ್ ನೌ ಸುತೋಽನ್ಯೋ**
**ಭವೇದ್ ದೇವಂ ತಾದೃಶಮಾಹ್ವಯಾತಃ ।**
**ಶೇಷಸ್ತವ ಭ್ರಾತೃಸುತೋಽಭಿಜಾತಸ್ತ-**
**ಸ್ಮಾನ್ನಾಸೌ ಸುತದಾನಾಯ ಯೋಗ್ಯಃ ॥ ೯೬ ॥**

ಪದಚ್ಛೇದ : ಶಸ್ತ್ರಾಸ್ತ್ರವಿತ್ ವೀರ್ಯವಾನ್ ನೌ ಸುತಃ ಅನ್ಯಃ ಭವೇತ್ ದೇವಂ ತಾದೃಶಂ ಆಹ್ವಯ ಅತಃ ಶೇಷಃ ತವ ಭ್ರಾತೃಸುತಃ ಅಭಿಜಾತಃ ತಸ್ಮಾತ್ ನ ಅಸೌ ಸುತದಾನಾಯ ಯೋಗ್ಯಃ

**ಅರ್ಥ** :- **ಶಸ್ತ್ರಾಸ್ತ್ರವಿತ್** ಶಸ್ತ್ರ-ಅಸ್ತ್ರಗಳನ್ನು ತಿಳಿದ **ವೀರ್ಯವಾನ್** ಪರಾಕ್ರಮಶಾಲಿಯಾದ **ಅನ್ಯಃ** ಮತ್ತೊಬ್ಬ **ಸುತಃ** ಮಗನು **ನೌ** ನಮಗೆ **ಭವೇತ್** ಆಗಬೇಕು **ಅತಃ** ಆದ್ದರಿಂದ **ತಾದೃಶಂ** ಅಂತಹ **ದೇವಮ್** ದೇವತೆಯನ್ನು **ಆಹ್ವಯ** ಆಹ್ವಾನಿಸು. **ಶೇಷಃ** ಶೇಷನು **ತವ** ನಿನ್ನ **ಭ್ರಾತೃಸುತಃ (ಸನ್)** ಅಣ್ಣನ ಮಗನಾಗಿ **ಅಭಿಜಾತಃ** ಹುಟ್ಟಿದ್ದಾನೆ **ತಸ್ಮಾತ್** ಆದ್ದರಿಂದ **ಅಸೌ** ಈ ಶೇಷನು **ಸುತದಾನಾಯ** ಮಗನನ್ನು ಕೊಡಲು **ನ ಯೋಗ್ಯಃ** ಯೋಗ್ಯನಲ್ಲ.

**ತಾತ್ಪರ್ಯ** :- "ಶಸ್ತ್ರವಿದ್ಯೆ ಹಾಗು ಅಸ್ತ್ರವಿದ್ಯೆಗಳನ್ನು ಬಲ್ಲ ಪರಾಕ್ರಮಿಯಾದ ಮತ್ತೊಬ್ಬ ಮಗನು ನಮಗೆ ಬೇಕು. ಆದ್ದರಿಂದ ಅಂತಹ ಮಗನನ್ನು ಕೊಡಲು ಸಮರ್ಥನಾದ ದೇವತೆಯನ್ನು ಆಹ್ವಾನಿಸು. ಶೇಷನು ನಿನ್ನ ಅಣ್ಣನಾದ ವಸುದೇವನ ಮಗನಾಗಿ ಹುಟ್ಟಿದ್ದಾನೆ. ಆದ್ದರಿಂದ ಅವನು ಮಗನನ್ನು ಕೊಡಲು ಯೋಗ್ಯನಲ್ಲ.

**ನ ವೈ ಸುಪರ್ಣಃ ಸುತದೋ ನರೇಷು**
**ಪ್ರಜಾಯತೇ ಚಾಽಸ್ಯ ಯತಸ್ತಥಾಽಜ್ಞಾ ।**
**ಕೃತಾ ಪುರಾ ಹರಿಣಾ ಶಂಕರಸ್ತು**
**ಕ್ರೋಧಾತ್ಮಕಃ ಪಾಲನೇ ನೈವ ಯೋಗ್ಯಃ ॥ ೯೭ ॥**

ಪದಚ್ಛೇದ : ನ ವೈ ಸುಪರ್ಣಃ ಸುತದಃ ನರೇಷು ಪ್ರಜಾಯತೇ ಚ ಅಸ್ಯ ಯತಃ ತಥಾ ಆಜ್ಞಾ ಕೃತಾ ಪುರಾ ಹರಿಣಾ ಶಂಕರಃ ತು ಕ್ರೋಧಾತ್ಮಕಃ ಪಾಲನೇ ನ ಏವ ಯೋಗ್ಯಃ

**ಅರ್ಥ** :- **ಸುಪರ್ಣಃ** ಗರುಡನು **ವೈ** ನಿಶ್ಚಯವಾಗಿ **ಸುತದಃ (ಸನ್)** ಮಗನನ್ನು ಕೊಡುವವನಾಗಿ **ನರೇಷು** ಮನುಷ್ಯರಲ್ಲಿ **ನ ಪ್ರಜಾಯತೇ** ಹುಟ್ಟುವುದಿಲ್ಲ. **ಯತಃ** ಯಾವ ಕಾರಣದಿಂದ **ಪುರಾ** ಹಿಂದೆ **ಹರಿಣಾ** ಪರಮಾತ್ಮನಿಂದ **ಅಸ್ಯ ಚ** ಈ ಗರುಡನಿಗೆ **ತಥಾ** ಹಾಗೆ **ಆಜ್ಞಾ** ಅಪ್ಪಣೆಯು **ಕೃತಾ** ಮಾಡಲ್ಪಟ್ಟಿದೆ. **ಕ್ರೋಧಾತ್ಮಕಃ** ಕ್ರೋಧಾಭಿಮಾನಿಯಾದ **ಶಂಕರಃ ತು**

ಶಂಕರನಾದರೂ **ಪಾಲನೇ** (ದೇಶದ)ರಕ್ಷಣೆಯಲ್ಲಿ **ನ ಯೋಗ್ಯಃ ಏವ** ಯೋಗ್ಯನೇ ಅಲ್ಲ

**ತಾತ್ಪರ್ಯ** :- "ಗರುಡನು ಮಗನನ್ನು ಕೊಡುತ್ತಾ ತಾನೇ ಭೂಮಿಯಲ್ಲಿ ಹುಟ್ಟುವುದಿಲ್ಲ. ಏಕೆಂದರೆ ಪರಮಾತ್ಮನು ಹಿಂದೆ ಈ ಗರುಡನಿಗೆ "ಮನುಷ್ಯರಲ್ಲಿ ಹುಟ್ಟಬೇಡ" ಎಂದು ಆಜ್ಞೆ ಮಾಡಿದ್ದಾನೆ. ಶಿವನಾದರೂ ಸಿಟ್ಟಿಗೆ ಕಾರಣವಾದ ತಮೋಗುಣಕ್ಕೆ ಅಭಿಮಾನಿಯಾಗಿದ್ದಾನೆ. ದೇಶದ ರಕ್ಷಣೆಗೆ ಅವನು ಯೋಗ್ಯನಾಗುವುದಿಲ್ಲ."

**ಅತೋ ಮಹೇಂದ್ರೋ ಬಲವಾನನಂತರ-**
**ಸ್ತೇಷಾಂ ಸಮಾಹ್ವಾನಮಿಹಾರ್ಹತಿ ಸ್ವರಾಟ್ ।**
**ಇತೀರಿತಾ ಸಾಹ್ವಯದಾಶು ವಾಸವಂ**
**ತತಂ ಪ್ರಜಜ್ಞೇ ಸ್ವಯಮೇವ ಶಕ್ರಃ ॥ ೯೮ ॥**

ಪದಚ್ಛೇದ : **ಅತಃ ಮಹೇಂದ್ರಃ ಬಲವಾನ್ ಅನಂತರಂ ತೇಷಾಂ ಸಮಾಹ್ವಾನಂ ಇಹ ಅರ್ಹತಿ ಸ್ವರಾಟ್ ಇತಿ ಈರಿತಾ ಸಾ ಆಹ್ವಯತ್ ಆಶು ವಾಸವಂ ತತಃ ಪ್ರಜಜ್ಞೇ ಸ್ವಯಂ ಏವ ಶಕ್ರಃ.**

**ಅರ್ಥ** :- **ಅತಃ** ಆದ್ದರಿಂದ **ತೇಷಾಂ** ಆ ಗರುಡಾದಿಗಳ **ಅನಂತರಃ** ನಂತರದಲ್ಲಿರುವ **ಬಲವಾನ್** ಬಲಶಾಲಿಯಾದ **ಸ್ವರಾಟ್** ಸ್ವರ್ಗಾಧಿಪತಿಯಾದ **ಮಹೇಂದ್ರಂ** ದೇವೇಂದ್ರನು **ಇಹ** ಈ ಪುತ್ರದಾನದಲ್ಲಿ **ಸಮಾಹ್ವಾನಂ** ಆಹ್ವಾನಕ್ಕೆ **ಅರ್ಹತಿ** ಯೋಗ್ಯನಾಗುತ್ತಾನೆ **ಇತಿ** ಎಂದು **ಈರಿತಾ** ಹೇಳಲ್ಪಟ್ಟ **ಸಾ** ಆ ಕುಂತಿಯು **ವಾಸವಂ** ಇಂದ್ರನನ್ನು **ಆಹ್ವಯತ್** ಆಹ್ವಾನಿಸಿದಳು. **ತತಃ** ಇಂದ್ರನು ಬಂದ ನಂತರ **ಸ್ವಯಂ** ಸಾಕ್ಷಾತ್ **ಶಕ್ರಃ ಏವ** ಇಂದ್ರನೇ **ಪ್ರಜಜ್ಞೇ** ಹುಟ್ಟಿದನು.

**ತಾತ್ಪರ್ಯ** :- "ಗರುಡ-ಶೇಷ-ರುದ್ರರು ಪುತ್ರದಾನಕ್ಕೆ ಯೋಗ್ಯರಲ್ಲವಾದ ಕಾರಣ ಅವರ ನಂತರ ಜ್ಞಾನ ಹಾಗು ಪರಾಕ್ರಮಗಳಲ್ಲಿ ಉತ್ತಮನಾದ ಸ್ವರ್ಗಾಧಿಪತಿಯಾದ ದೇವೇಂದ್ರನನ್ನು ಆಹ್ವಾನಿಸು". ಹೀಗೆ ಪಾಂಡುರಾಜನು ಹೇಳಲು ಕುಂತಿಯು ಇಂದ್ರನನ್ನು ಆಹ್ವಾನಿಸಿದಳು. ಇಂದ್ರನು ಬಂದು ಅವಳೊಂದಿಗೆ ರಮಿಸಿದ ನಂತರ ಸ್ವತಃ ಇಂದ್ರನೇ ಹುಟ್ಟಿದನು.

ಸ ಚಾರ್ಜುನೋ ನಾಮ ನರಾಂಶ-
ಯುಕ್ತೋ ವಿಷ್ಣ್ವಾವೇಶೀ ಬಲವಾನಸ್ತ್ರವೇತ್ತಾ ।
ರೂಪ್ಯನ್ಯಃ ಸ್ಯಾತ್ ಸೂನುರಿತ್ಯುಚ್ಯಮಾನಾ
ಭರ್ತ್ರಾ ಕುಂತೀ ನೇತಿ ತಂ ಪ್ರಾಹ ಧರ್ಮಾತ್ ॥ ೯೯ ॥

ಪದಚ್ಛೇದ : ಸಃ ಚ ಅರ್ಜುನಃ ನಾಮ ನರಾಂಶಯುಕ್ತಃ ವಿಷ್ಣ್ವಾವೇಶೀ ಬಲವಾನ್ ಅಸ್ತ್ರವೇತ್ತಾ ರೂಪೀ ಅನ್ಯಃ ಸ್ಯಾತ್ ಸೂನುಃ ಇತಿ ಉಚ್ಯಮಾನಾ ಭರ್ತ್ರಾ ಕುಂತೀ ನ ಇತಿ ತಂ ಪ್ರಾಹ ಧರ್ಮಾತ್.

**ಅರ್ಥ** :- **ಅರ್ಜುನಃ ನಾಮ** ಅರ್ಜುನನೆಂಬ ಪ್ರಸಿದ್ಧನಾದ **ಸಃ ಚ** ಹುಟ್ಟಿದ ಆ ಮಗನಾದರೂ **ನರಾಂಶಯುಕ್ತಃ** ನರನ ಅಂಶದಿಂದ ಯುಕ್ತನಾದವನು **ವಿಷ್ಣ್ವಾವೇಶೀ** ವಿಷ್ಣುವಿನ ಆವೇಶದಿಂದ ಕೂಡಿದವನು **ಬಲವಾನ್** ಬಲಶಾಲಿಯು **ಅಸ್ತ್ರವೇತ್ತಾ** ಅಸ್ತ್ರವನ್ನು ತಿಳಿದವನು **(ಆಸೀತ್)** ಆಗಿದ್ದನು. **ರೂಪೀ** ರೂಪಶಾಲಿಯಾದ **ಅನ್ಯಃ** ಮತ್ತೊಬ್ಬ **ಸೂನುಃ** ಮಗನು **ಸ್ಯಾತ್** ಇರಲಿ **ಇತಿ** ಎಂದು **ಭರ್ತ್ರಾ** ಗಂಡನಾದ ಪಾಂಡುರಾಜನಿಂದ **ಉಚ್ಯಮಾನಾ** ಹೇಳಲ್ಪಟ್ಟ **ಕುಂತೀ** ಕುಂತಿಯು **ಧರ್ಮಾತ್** ಧರ್ಮದ ಕಾರಣದಿಂದ **ನ ಇತಿ** ಬೇಡವೆಂದು **ಪ್ರಾಹ** ಹೇಳಿದಳು.

**ತಾತ್ಪರ್ಯ** :- ಹುಟ್ಟಿದ ಆ ಮಗುವು ನರ ಅಂಶದಿಂದ, ವಿಷ್ಣುವಿನ ಆವೇಶದಿಂದ ಕೂಡಿದ್ದನು. ಬಲವಂತನೂ ಅಸ್ತ್ರಜ್ಞನೂ ಆಗಿದ್ದನು. ಅರ್ಜುನನು ಹುಟ್ಟಿದ ನಂತರ ಪಾಂಡುರಾಜನು ಸುಂದರನಾದ ಮತ್ತೊಬ್ಬ ಮಗನನ್ನು ಬಯಸಿ ಕುಂತಿಗೆ ರೂಪವಂತನಾದ ಮತ್ತೊಬ್ಬ ಮಗನನ್ನು ಪಡೆಯಲು ಹೇಳಿದನು. ಆಗ ಕುಂತಿಯು ಮಹತ್ಕಾರ್ಯವಿಲ್ಲದೇ ಪರಪುರುಷಸಂಸರ್ಗ ಮಾಡುವುದು ಧರ್ಮವಲ್ಲವೆಂದು ನಿರಾಕರಿಸಿದಳು.

ಬೃಹಸ್ಪತಿಃ ಪೂರ್ವಮಭೂದ್ಧರೇಃ ಪದಂ
ಸಂಸೇವಿತುಂ ಪವನಾವೇಶಯುಕ್ತಃ ।
ಸ ಉದ್ಧವೋ ನಾಮ ಯದುಪ್ರವೀರಾತ್
ಜಾತೋ ವಿದ್ವಾನುಪಗವನಾಮಧೇಯಾತ್ ॥ ೧೦೦ ॥

ಪದಚ್ಛೇದ :– ಬೃಹಸ್ಪತಿಃ ಪೂರ್ವಂ ಅಭೂತ್ ಹರೇಃ ಪದಂ ಸಂಸೇವಿತುಂ ಪವನಾವೇಶಯುಕ್ತಃ ಸಃ ಉದ್ಧವಃ ನಾಮ ಯದುಪ್ರವೀರಾತ್ ಜಾತಃ ವಿದ್ವಾನ್ ಉಪಗವನಾಮಧೇಯಾತ್.

**ಅರ್ಥ** :– **(ಯಃ)** ಯಾವ **ಬೃಹಸ್ಪತಿಃ** ಬೃಹಸ್ಪತಿಯು **ಪೂರ್ವಂ** ಹಿಂದೆ **ಅಭೂತ್** (ದ್ರೋಣನಾಗಿ) ಹುಟ್ಟಿದ್ದನೋ **ಸಃ** ಆ ಬೃಹಸ್ಪತಿಯು **ಹರೇಃ** ಪರಮಾತ್ಮನ **ಪದಂ** ಪಾದವನ್ನು **ಸಂಸೇವಿತುಂ** ಸೇವಿಸಲು **ಪವನಾವೇಶಯುಕ್ತಃ (ಸನ್)** ಮುಖ್ಯಪ್ರಾಣದೇವರ ಆವೇಶದಿಂದ ಕೂಡಿದವನಾಗಿ **ಯದು ಪ್ರವೀರಾತ್** ಯದುವಂಶದಲ್ಲಿ ಶ್ರೇಷ್ಠನಾದ **ಉಪಗವನಾಮಧೇಯಾತ್** ಉಪಗವನೆಂಬ ಹೆಸರಿನವನಿಂದ **ಉದ್ಧವಃ ನಾಮ** ಉದ್ಧವನೆಂದು ಪ್ರಸಿದ್ಧನಾಗಿ **ಜಾತಃ** ಹುಟ್ಟಿದನು.

**ತಾತ್ಪರ್ಯ** :– ಹಿಂದೆ ಭೀಷ್ಮಾಚಾರ್ಯರು ಕೃಪಾಚಾರ್ಯರು ಹುಟ್ಟುವ ಸಮಯದಲ್ಲಿ ಬೃಹಸ್ಪತಿಯು ದ್ರೋಣಾಚಾರ್ಯರಾಗಿ ಹುಟ್ಟಿದ್ದನು. ಆ ಬೃಹಸ್ಪತಿಯೇ ಈಗ ಪುನಃ ಪರಮಾತ್ಮನ ಪಾದಸೇವೆಗಾಗಿ ಯಾದವಶ್ರೇಷ್ಠನಾದ ಉಪಗವನ ಮಗನಾಗಿ ಹುಟ್ಟಿದನು. ಅವನು ಉದ್ಧವನೆಂದು ಪ್ರಸಿದ್ಧನಾದನು.

**ದ್ರೋಣಾತ್ಮಕಂ ನಾತಿತರಾಂ ಸ್ವಸೇವಕಂ**
**ಕುರ್ಯಾದ್ಧರಿರ್ಮಾಮಿತಿ ಭೂಯ ಏವ ।**
**ಸ ಉದ್ಧವಾತ್ಮಾವತತಾರ ಯಾದವೇಷ್ವಾ-**
**ಸೇವನಾರ್ಥಂ ಪುರುಷೋತ್ತಮಸ್ಯ ॥ ೧೦೧ ॥**

ಪದಚ್ಛೇದ :– ದ್ರೋಣಾತ್ಮಕಂ ನ ಅತಿತರಾಂ ಸ್ವಸೇವಕಂ ಕುರ್ಯಾತ್ ಹರಿಃ ಮಾಂ ಇತಿ ಭೂಯಃ ಏವ ಸಃ ಉದ್ಧವಾತ್ಮಾ ಅವತತಾರ ಯಾದವೇಷು ಆಸೇವನಾರ್ಥಂ ಪುರುಷೋತ್ತಮಸ್ಯ.

**ಅರ್ಥ** :– **ಹರಿಃ** ಶ್ರೀಕೃಷ್ಣನು **ದ್ರೋಣಾತ್ಮಕಂ** ದ್ರೋಣರೂಪಿಯಾದ **ಮಾಂ** ನನ್ನನ್ನು **ಅತಿತರಾಂ** ಬಹಳವಾಗಿ **ಸ್ವಸೇವಕಂ** ತನ್ನ ಸೇವಕನನ್ನಾಗಿ **ನ ಕುರ್ಯಾತ್** ಮಾಡಕೊಳ್ಳುವುದಿಲ್ಲ **ಇತಿ** ಎಂಬ ಕಾರಣದಿಂದ **ಭೂಯಃ** ಮತ್ತೊಮ್ಮೆ **ಸಃ ಏವ** ಆ ಬೃಹಸ್ಪತಿಯೇ **ಪುರುಷೋತ್ತಮಸ್ಯ** ಸರ್ವೋತ್ತಮ ನಾದ ಪರಮಾತ್ಮನ **ಆಸೇವನಾರ್ಥಂ** ಪೂರ್ಣಸೇವೆಯನ್ನು ಮಾಡಲು

**ಯಾದವೇಷು** ಯಾದವರಲ್ಲಿ **ಉದ್ಧವಾತ್ಮಾ (ಸನ್)** ಉದ್ಧವರೂಪನಾಗಿ ಅವತತಾರ ಅವತರಿಸಿದನು.

**ತಾತ್ಪರ್ಯ** :– ದ್ರೋಣನಾಗಿ ಒಮ್ಮೆ ಬೃಹಸ್ಪತಿಯು ಹುಟ್ಟಿದ್ದರೂ ಆ ದ್ರೋಣರೂಪದಲ್ಲಿರುವ ಬೃಹಸ್ಪತಿಯನ್ನು ಪರಮಾತ್ಮನು ತನ್ನ ಸೇವಕನನ್ನಾಗಿ ಮಾಡಿಕೊಳ್ಳುವುದಿಲ್ಲ. ಆದ್ದರಿಂದ ತನ್ನ ಯೋಗ್ಯತಾಪೂರ್ತಿಗೆ ಅನುಸಾರವಾಗಿ ಪರಮಾತ್ಮನ ಸೇವೆಯನ್ನು ಮಾಡಲು ಬೃಹಸ್ಪತಿಯು ಪುನಃ ಯಾದವರಲ್ಲಿ ಉದ್ಧವನಾಗಿ ಹುಟ್ಟಿದನು.

**ಬೃಹಸ್ಪತೇರೇವ ಸ ಸರ್ವವಿದ್ಯಾ ಅವಾಪ ಮಂತ್ರೀ ನಿಪುಣಃ ಸರ್ವವೇತ್ತಾ ।**
**ವರ್ಷತ್ರಯೇ ತತ್ಪರತಃ ಸ ಸಾತ್ಯಕಿರ್ಜಜ್ಞೇ ದಿನೇ ಚೇಕಿತಾನಶ್ಚ ತಸ್ಮಿನ್**
**॥ ೧೦೨ ॥**

ಪದಚ್ಛೇದ :– ಬೃಹಸ್ಪತೇಃ ಏವ ಸಃ ಸರ್ವವಿದ್ಯಾಃ ಅವಾಪ ಮಂತ್ರೀ ನಿಪುಣಃ ಸರ್ವವೇತ್ತಾ ವರ್ಷತ್ರಯೇ ತತ್ಪರತಃ ಸಃ ಸಾತ್ಯಕಿಃ ಜಜ್ಞೇ ದಿನೇ ಚೇಕಿತಾನಃ ಚ ತಸ್ಮಿನ್.

**ಅರ್ಥ** :– **ಸಃ** ಆ ಉದ್ಧವನು **ಬೃಹಸ್ಪತೇಃ ಏವ** ಬೃಹಸ್ಪತಿಯಿಂದಲೇ **ಸರ್ವವಿದ್ಯಾಃ** ಎಲ್ಲ ವಿದ್ಯೆಗಳನ್ನು **ಅವಾಪ** ಪಡೆದನು. **ಸರ್ವವೇತ್ತಾ** ಎಲ್ಲವನ್ನು ತಿಳಿದ **ನಿಪುಣಃ** ಕುಶಲನಾದ **ಮಂತ್ರೀ** ಮಂತ್ರಿಯು **(ಅಭೂತ್)**. ಆದನು **ತತ್ಪರತಃ** ಆ ಉದ್ಧವನ ನಂತರ **ವರ್ಷತ್ರಯೇ** ಮೂರು ವರ್ಷಗಳ ಅಂತರದಲ್ಲಿ **ಸಃ** ಆ **ಸಾತ್ಯಕಿಃ** ಸಾತ್ಯಕಿಯು **ಜಜ್ಞೇ** ಹುಟ್ಟಿದನು **ತಸ್ಮಿನ್** ಅದೇ **ದಿನೇ** ದಿನದಲ್ಲಿ **ಚೇಕಿತಾನಃ ಚ** ಚೇಕಿತಾನನೂ **ಜಜ್ಞೇ** ಹುಟ್ಟಿದನು.

**ತಾತ್ಪರ್ಯ** :– ಉದ್ಧವನು ಬೃಹಸ್ಪತಿಯಿಂದಲೇ ಎಲ್ಲ ವಿದ್ಯೆಗಳನ್ನೂ ಕಲಿತನು. ಸರ್ವಜ್ಞನೂ ಕುಶಲನೂ ಆಗಿ ಕಂಸನಿಗೆ ಮಂತ್ರಿಯಾದನು. ಉದ್ಧವನು ಹುಟ್ಟಿದ ಮೂರು ವರ್ಷಗಳ ನಂತರ ಸಾತ್ಯಕಿಯು ಹುಟ್ಟಿದನು. ಸಾತ್ಯಕಿಯು ಹುಟ್ಟಿದ ದಿನದಂದೇ ಚೇಕಿತಾನನೂ ಹುಟ್ಟಿದನು. (ಮಂತ್ರಿ ಎಂದರೆ ಸಂಧಿ-ವಿಗ್ರಹಾದಿಗಳನ್ನು ತಿಳಿದವನು–ಜನಾರ್ದನೀಯ).

**ಮರುತ್ಸು ನಾಮ ಪ್ರವಹೋ(ಪ್ರತಿಭೋ) ಯದುಷ್ವಭೂತ್**
**ಸ ಚೇಕಿತಾನೋ ಹರಿಸೇವನಾರ್ಥಮ್ ।**
**ತದೈವ ಜಾತೋ ಹೃದಿಕಾತ್ಮಜೋಽಪಿ**
**ವರ್ಷತ್ರಯೇ ತತ್ಪರತೋ ಯುಧಿಷ್ಠಿರಃ ॥ ೧೦೩ ॥**

ಪದಚ್ಛೇದ :– ಮರುತ್ಸು ನಾಮ ಪ್ರವಹಃ (ಪ್ರತಿಭಃ) ಯದುಷು ಅಭೂತ್ ಸಃ ಚೇಕಿತಾನಃ ಹರಿಸೇವನಾರ್ಥಂ ತದಾ ಏವ ಜಾತಃ ಹೃದಿಕಾತ್ಮಜಃ ಅಪಿ ವರ್ಷತ್ರಯೇ ತತ್ಪರತಃ ಯುಧಿಷ್ಠಿರಃ

**ಅರ್ಥ** :– **ಮರುತ್ಸು** ಮರುತ್‌ದೇವತೆಗಳಲ್ಲಿ **(ಯಃ)** ಯಾವನು **ಪ್ರವಹಃ (ಪ್ರತಿಭಃ)** ಪ್ರವಹ (ಪ್ರತಿಭ)ನೆಂದು ನಾಮ ಪ್ರಸಿದ್ಧನೋ **ಸಃ** ಅವನು **ಚೇಕಿತಾನಃ** ಚೇಕಿತಾನನಾಗಿ **ಅಭೂತ್** ಹುಟ್ಟಿದನು **ತದಾ ಏವ** ಅದೇ ದಿನದಲ್ಲಿ **ಹರಿಸೇವನಾರ್ಥಂ** ಪರಮಾತ್ಮನ ಸೇವೆ ಮಾಡಲು **ಹೃದಿಕಾತ್ಮಜಃ ಅಪಿ** ಹೃದಿಕನ ಮಗನಾದ ಕೃತವರ್ಮನೂ ಕೂಡ **ಜಾತಃ** ಹುಟ್ಟಿದನು **ತತ್ಪರತಃ** ಅವನು ಹುಟ್ಟಿದ ನಂತರ **ವರ್ಷತ್ರಯೇ** ಮೂರು ವರ್ಷಗಳ ಅಂತರದಲ್ಲಿ **ಯುಧಿಷ್ಠಿರಃ** ಯುಧಿಷ್ಠಿರನು **(ಅಭೂತ್)** ಹುಟ್ಟಿದನು.

**ತಾತ್ಪರ್ಯ** :– ಮರುತ್‌ದೇವತೆಗಳಲ್ಲಿ ಪ್ರವಹ (ಪ್ರತಿಭ)ನೆಂಬುವನು ಯಾದವವಂಶದಲ್ಲಿ ಚೇಕಿತಾನನಾಗಿ ಹುಟ್ಟಿದನು. ಅವನು ಹುಟ್ಟಿದ ದಿನ ದಂದೇ ಹೃದಿಕನ ಮಗನಾದ ಕೃತವರ್ಮನೂ ಹರಿಸೇವೆಗಾಗಿ ಹುಟ್ಟಿದನು. ಕೃತವರ್ಮನು ಹುಟ್ಟಿದ ಮೂರುವರ್ಷಗಳ ನಂತರ ಯುಧಿಷ್ಠಿರನು ಹುಟ್ಟಿದನು. (ಕೆಲವೆಡೆ "ಪ್ರವಹೋ ಯದುಷ್ವಭೂತ್" ಎಂದು ಮತ್ತೆ ಕೆಲವೆಡೆ "ಪ್ರತಿಭೋ ಯದುಷ್ವಭೂತ್" ಎಂದೂ ಪಾಠಭೇದವಿದೆ).

**ತತೋಽಬ್ದತೋ ಭೂಭರಸಂಹೃತೌ**
**ಹರೇರಂಗತ್ವಮಾಪ್ತುಂ ಗಿರಿಶೋಽಜನಿಷ್ಟ ।**
**ಅಶ್ವತ್ಥಾಮಾ ನಾಮತೋಽಶ್ವಧ್ವನಿಂ ಸ**
**ಯಸ್ಮಾಚ್ಚಕ್ರೇ ಜಾಯಮಾನೋ ಮಹಾತ್ಮಾ ॥ ೧೦೪ ॥**

ಪದಚ್ಛೇದ :– ತತಃ ಅಬ್ದತಃ ಭೂಭರಸಂಹೃತೌ ಹರೇಃ ಅಂಗತ್ವಂ ಆಪ್ತುಂ ಗಿರಿಶಃ ಅಜನಿಷ್ಟ ಅಶ್ವತ್ಥಾಮಾ ನಾಮತಃ ಅಶ್ವಧ್ವನಿಂ ಸಃ ಯಸ್ಮಾತ್ ಚಕ್ರೇ ಜಾಯಮಾನಃ ಮಹಾತ್ಮಾ.

**ಅರ್ಥ** :– **ತತಃ** ಯುಧಿಷ್ಠಿರನು ಹುಟ್ಟಿದ ನಂತರ **ಅಬ್ದತಃ** ಒಂದು ವರ್ಷದ ತರುವಾಯ **ಗಿರಿಶಃ** ರುದ್ರನು **ಭೂಭರಸಂಹೃತೌ** ಭೂಭಾರಹರಣೆಯಲ್ಲಿ **ಹರೇಃ** ಪರಮಾತ್ಮನಿಗೆ **ಅಂಗತ್ವಂ** ಅಂಗತ್ವವನ್ನು **ಆಪ್ತುಂ** ಹೊಂದಲು **ಅಜನಿಷ್ಟ** ಹುಟ್ಟಿದನು. **ಯಸ್ಮಾತ್** ಯಾವ ಕಾರಣದಿಂದ **ಜಾಯಮಾನಃ**

ಹುಟ್ಟಿತ್ತಿರುವ **ಮಹಾತ್ಮಾ** ಮಹಾತ್ಮನಾದ **ಸಃ** ಅವನು **ಅಶ್ವಧ್ವನಿಂ** ಅಶ್ವದಂತೆ ಧ್ವನಿಯನ್ನು **ಚಕ್ರೇ** ಮಾಡಿದನೋ **(ತಸ್ಮಾತ್)** ಆದ್ದರಿಂದ **ನಾಮತಃ** ಹೆಸರಿನಿಂದ **ಅಶ್ವತ್ಥಾಮಾ** ಅಶ್ವತ್ಥಾಮನು **(ಬಭೂವ)** ಆದನು.

**ತಾತ್ಪರ್ಯ** :– ಯುಧಿಷ್ಠಿರನು ಹುಟ್ಟಿದ ಒಂದು ವರ್ಷದ ನಂತರ ರುದ್ರನೂ ಪರಮಾತ್ಮನ ಭೂಭಾರಹರಣಕಾರ್ಯದಲ್ಲಿ ತಾನೂ ಭಾಗಿಯಾಗಲು ಹುಟ್ಟಿದನು. ಮಹಾತ್ಮನಾದ ಇವನು ಹುಟ್ಟುವಾಗ ಅಶ್ವದಂತೆ ಧ್ವನಿಯನ್ನು ಮಾಡಿದನು. ಆದ್ದರಿಂದ ಅಶ್ವತ್ಥಾಮನೆಂಬ ಹೆಸರಿನಿಂದಲೇ ಪ್ರಸಿದ್ಧನಾದನು.

**ಸ ಸರ್ವವಿದ್ ಬಲವಾನಸ್ತ್ರವೇತ್ತಾ ಕೃಪಸ್ವಸಾಯಾಂ**
**ದ್ರೋಣವೀರ್ಯೋದ್ಭವೋऽಭೂತ್ ।**
**ಸುಯೋಧನಸ್ತಚ್ಚತುರ್ಥೇऽಹ್ನಿ ಜಾತಸ್ತಸ್ಯಾ-**
**ಪರೇದ್ಯುರ್ಭೀಮಸೇನಃ ಸುಧೀರಃ ॥ ೧೦೫ ॥**

ಪದಚ್ಛೇದ :– ಸಃ ಸರ್ವವಿತ್ ಬಲವಾನ್ ಅಸ್ತ್ರವೇತ್ತಾ ಕೃಪಸ್ವಸಾಯಾಂ ದ್ರೋಣವೀರ್ಯೋದ್ಭವಃ ಅಭೂತ್ ಸುಯೋಧನಃ ತಚ್ಚತುರ್ಥೇ ಅಹ್ನಿ ಜಾತಃ ತಸ್ಯ ಅಪರೇದ್ಯುಃ ಭೀಮಸೇನಃ ಸುಧೀರಃ.

**ಅರ್ಥ** :– **ಸರ್ವವಿತ್** ಸರ್ವಜ್ಞನಾದ **ಬಲವಾನ್** ಬಲಶಾಲಿಯಾದ **ಅಸ್ತ್ರವೇತ್ತಾ** ಅಸ್ತ್ರಗಳನ್ನು ತಿಳಿದ **ಸಃ** ಆ ಅಶ್ವತ್ಥಾಮನು **ಕೃಪಸ್ವಸಾಯಾಂ** ಕೃಪಾಚಾರ್ಯರ ತಂಗಿಯಾದ ಕೃಪಿಯಲ್ಲಿ **ದ್ರೋಣವೀರ್ಯೋದ್ಭವಃ** ದ್ರೋಣಾಚಾರ್ಯರ ವೀರ್ಯದಿಂದ ಹುಟ್ಟಿದವನು **ಅಭೂತ್** ಆದನು **ತಚ್ಚತುರ್ಥೇ** ಅಶ್ವತ್ಥಾಮ ಹುಟ್ಟಿದ (ನಂತರ) ನಾಲ್ಕನೆಯ **ಅಹ್ನಿ** ದಿನದಲ್ಲಿ **ಸುಯೋಧನಃ** ದುರ್ಯೋಧನನು **ಜಾತಃ** ಹುಟ್ಟಿದನು **ತಸ್ಯ** ಆ ದುರ್ಯೋಧನನ ಜನನದ (ನಂತರ) **ಅಪರೇದ್ಯುಃ** ಮಾರನೆಯ ದಿನದಲ್ಲಿ **ಸುಧೀರಃ** ಅತ್ಯಂತ ಧೀರನಾದ **ಭೀಮಸೇನಃ** ಭೀಮಸೇನನು **ಜಾತಃ** ಹುಟ್ಟಿದನು.

**ತಾತ್ಪರ್ಯ** :– ಅಶ್ವತ್ಥಾಮನು ಕೃಪಾಚಾರ್ಯರ ತಂಗಿಯಾದ ಕೃತಿಯಲ್ಲಿ ದ್ರೋಣಾಚಾರ್ಯರ ವೀರ್ಯದಿಂದ ಹುಟ್ಟಿದನು. ಅವನು ಸರ್ವಜ್ಞನೂ, ಬಲಶಾಲಿಯೂ, ಅಸ್ತ್ರವನ್ನು ತಿಳಿದವನೂ ಆಗಿದ್ದನು. ಅಶ್ವತ್ಥಾಮನು ಹುಟ್ಟಿದ ನಾಲ್ಕು ದಿನದ ನಂತರ ದುರ್ಯೋಧನನು ಹುಟ್ಟಿದನು. ದುರ್ಯೋಧನನು ಹುಟ್ಟಿದ ಮಾರನೆಯ ದಿನ ಅತ್ಯಂತ ಧೀರನಾದ ಭೀಮಸೇನನು ಹುಟ್ಟಿದನು.

ಯದಾ ಸ ಮಾಸದ್ವಿತಯೀ ಬಭೂವ
ತದಾ ರೋಹಿಣ್ಯಾಂ ಬಲದೇವೋऽಭಿಜಾತಃ ।
ಬಲೀ ಗುಣಾಢ್ಯಃ ಸರ್ವವೇದೀ ಯ ಏವ
ಸೇವಾಖಿನ್ನೋ ಲಕ್ಷ್ಮಣೋऽಗ್ರೇ ಹರೇರ್ಭೂತ್ ॥ ೧೦೬ ॥

ಪದಚ್ಛೇದ :– ಯದಾ ಸಃ ಮಾಸದ್ವಿತಯೀ ಬಭೂವ ತದಾ ರೋಹಿಣ್ಯಾಂ ಬಲದೇವಃ ಅಭಿಜಾತಃ ಬಲೀ ಗುಣಾಢ್ಯಃ ಸರ್ವವೇದೀ ಯಃ ಏವ ಸೇವಾಖಿನ್ನ ಲಕ್ಷ್ಮಣಃ ಅಗ್ರೇ ಹರೇಃ ಭೂತ್.

**ಅರ್ಥ :–** **ಯದಾ** ಯಾವಾಗ ಸಃ ಆ ಭೀಮಸೇನನು **ಮಾಸದ್ವಿತಯೀ** ಎರಡು ತಿಂಗಳಿನವನು **ಬಭೂವ** ಆದನೋ **ತದಾ** ಆಗ **ಬಲೀ** ಬಲಶಾಲಿಯಾದ **ಗುಣಾಢ್ಯಃ** ಗುಣಗಳಿಂದ ಶ್ರೇಷ್ಠನಾದ **ಸರ್ವವೇದೀ** ಸರ್ವಜ್ಞನಾದ **ಬಲದೇವಃ** ಬಲರಾಮನು **ರೋಹಿಣ್ಯಾಂ** ರೋಹಿಣಿಯಲ್ಲಿ **ಅಭಿಜಾತಃ** ಹುಟ್ಟಿದನು **ಯಃ ಏವ** ಯಾವನು ತಾನೇ **ಅಗ್ರೇ** ಹಿಂದೆ **ಸೇವಾಖಿನ್ನಃ** (ರಾಮನ) ಸೇವೆಯಿಂದ ಖಿನ್ನನಾಗಿದ್ದ **ಲಕ್ಷ್ಮಣಃ** ಲಕ್ಷ್ಮಣ ನಾಗಿದ್ದನೋ **(ಸಃ)** ಅವನು **ಹರೇಃ** ಪರಮಾತ್ಮನಿಗಿಂತ **ಅಗ್ರೇ** ಮೊದಲು **ಭೂತ್** ಹುಟ್ಟಿದನು.

**ತಾತ್ಪರ್ಯ :–** ಭೀಮಸೇನನು ಜನಿಸಿ ಎರಡು ತಿಂಗಳ ನಂತರ ಬಲರಾಮನು ರೋಹಿಣಿಯಲ್ಲಿ ಜನಿಸಿದನು. ಅವನು ಬಲಶಾಲಿಯೂ, ಗುಣಾಢ್ಯನೂ, ಸರ್ವಜ್ಞನೂ ಆಗಿದ್ದನು. ಹಿಂದೆ ಲಕ್ಷಣನಾಗಿದ್ದಾಗ ರಾಮನ ಸೇವೆ ಮಾಡಿ ಖಿನ್ನನಾಗಿದ್ದನು. ಆದ್ದರಿಂದ ಈ ಜನ್ಮದಲ್ಲಿ ಕೃಷ್ಣನಿಗಿಂತ ಮೊದಲೇ ಜನಿಸಿದನು. (''ಸೇವಾಖಿನ್ನಃ'' ಎಂದರೆ ಪರಮಾತ್ಮನ ಸೇವೆಯಲ್ಲಿ ಸಾಕು ಎಂಬ ಬುದ್ಧಿ ಇಲ್ಲದವನು ಎಂದು ಅರ್ಥ. ದುರ್ಘಟಾರ್ಥದೀಪಿಕಾ, ಜನಾರ್ದನೀಯ. ವಾದಿರಾಜೀಯದ ಪ್ರಕಾರ ಪರಮಾತ್ಮನ ಸೇವೆಯಿಂದ ಆಯಾಸಗೊಂಡವನು ಎಂದು ಅರ್ಥ. ''ಅಧಿಕಂ ಯೈಃ ಕೃತಂ ತತ್ರ ತೈರೂನಂ ಕೃತಮತ್ರ ತತ್'' 'ಹಿಂದೆ ಯಾರು ಯೋಗ್ಯತೆ ಮೀರಿ ಪುಣ್ಯ ಗಳಿಸಿದ್ದರೋ ಅವರು ಈಗ ಅದನ್ನು ಕಡಿಮೆ ಮಾಡಿಕೊಂಡರು' ಎಂದು ಆಚಾರ್ಯರ ಮಾತು ಇರುವುದರಿಂದ.)

ಹುಟ್ಟಿತ್ತಿರುವ **ಮಹಾತ್ಮಾ** ಮಹಾತ್ಮನಾದ **ಸಃ** ಅವನು **ಅಶ್ವಧ್ವನಿಂ** ಅಶ್ವದಂತೆ ಧ್ವನಿಯನ್ನು **ಚಕ್ರೇ** ಮಾಡಿದನೋ **(ತಸ್ಮಾತ್)** ಆದ್ದರಿಂದ **ನಾಮತಃ** ಹೆಸರಿನಿಂದ **ಅಶ್ವತ್ಥಾಮಾ** ಅಶ್ವತ್ಥಾಮನು **(ಬಭೂವ)** ಆದನು.

**ತಾತ್ಪರ್ಯ** :– ಯುಧಿಷ್ಠಿರನು ಹುಟ್ಟಿದ ಒಂದು ವರ್ಷದ ನಂತರ ರುದ್ರನೂ ಪರಮಾತ್ಮನ ಭೂಭಾರಹರಣಕಾರ್ಯದಲ್ಲಿ ತಾನೂ ಭಾಗಿಯಾಗಲು ಹುಟ್ಟಿದನು. ಮಹಾತ್ಮನಾದ ಇವನು ಹುಟ್ಟುವಾಗ ಅಶ್ವದಂತೆ ಧ್ವನಿಯನ್ನು ಮಾಡಿದನು. ಆದ್ದರಿಂದ ಅಶ್ವತ್ಥಾಮನೆಂಬ ಹೆಸರಿನಿಂದಲೇ ಪ್ರಸಿದ್ಧನಾದನು.

**ಸ ಸರ್ವವಿದ್ ಬಲವಾನಸ್ತ್ರವೇತ್ತಾ ಕೃಪಸ್ವಸಾಯಾಂ**
**ದ್ರೋಣವೀರ್ಯೋದ್ಭವೋಽಭೂತ್ ।**
**ಸುಯೋಧನಸ್ತಚ್ಚತುರ್ಥೇಽಹ್ನಿ ಜಾತಸ್ತಸ್ಯಾ-**
**ಪರೇದ್ಯುರ್ಭೀಮಸೇನಃ ಸುಧೀರಃ ॥ ೧೦೫ ॥**

**ಪದಚ್ಛೇದ** :– **ಸಃ ಸರ್ವವಿತ್ ಬಲವಾನ್ ಅಸ್ತ್ರವೇತ್ತಾ ಕೃಪಸ್ವಸಾಯಾಂ ದ್ರೋಣವೀರ್ಯೋದ್ಭವಃ ಅಭೂತ್ ಸುಯೋಧನಃ ತಚ್ಚತುರ್ಥೇ ಅಹ್ನಿ ಜಾತಃ ತಸ್ಯ ಅಪರೇದ್ಯುಃ ಭೀಮಸೇನಃ ಸುಧೀರಃ.**

**ಅರ್ಥ** :– **ಸರ್ವವಿತ್** ಸರ್ವಜ್ಞನಾದ **ಬಲವಾನ್** ಬಲಶಾಲಿಯಾದ **ಅಸ್ತ್ರವೇತ್ತಾ** ಅಸ್ತ್ರಗಳನ್ನು ತಿಳಿದ **ಸಃ** ಆ ಅಶ್ವತ್ಥಾಮನು **ಕೃಪಸ್ವಸಾಯಾಂ** ಕೃಪಾಚಾರ್ಯರ ತಂಗಿಯಾದ ಕೃಪಿಯಲ್ಲಿ **ದ್ರೋಣವೀರ್ಯೋದ್ಭವಃ** ದ್ರೋಣಾಚಾರ್ಯರ ವೀರ್ಯದಿಂದ ಹುಟ್ಟಿದವನು **ಅಭೂತ್** ಆದನು **ತಚ್ಚತುರ್ಥೇ** ಅಶ್ವತ್ಥಾಮ ಹುಟ್ಟಿದ (ನಂತರ) ನಾಲ್ಕನೆಯ **ಅಹ್ನಿ** ದಿನದಲ್ಲಿ **ಸುಯೋಧನಃ** ದುರ್ಯೋಧನನು **ಜಾತಃ** ಹುಟ್ಟಿದನು **ತಸ್ಯ** ಆ ದುರ್ಯೋಧನನ ಜನನದ (ನಂತರ) **ಅಪರೇದ್ಯುಃ** ಮಾರನೆಯ ದಿನದಲ್ಲಿ **ಸುಧೀರಃ** ಅತ್ಯಂತ ಧೀರನಾದ **ಭೀಮಸೇನಃ** ಭೀಮಸೇನನು **ಜಾತಃ** ಹುಟ್ಟಿದನು.

**ತಾತ್ಪರ್ಯ** :– ಅಶ್ವತ್ಥಾಮನು ಕೃಪಾಚಾರ್ಯರ ತಂಗಿಯಾದ ಕೃತಿಯಲ್ಲಿ ದ್ರೋಣಾಚಾರ್ಯರ ವೀರ್ಯದಿಂದ ಹುಟ್ಟಿದನು. ಅವನು ಸರ್ವಜ್ಞನೂ, ಬಲಶಾಲಿಯೂ, ಅಸ್ತ್ರವನ್ನು ತಿಳಿದವನೂ ಆಗಿದ್ದನು. ಅಶ್ವತ್ಥಾಮನು ಹುಟ್ಟಿದ ನಾಲ್ಕು ದಿನದ ನಂತರ ದುರ್ಯೋಧನನು ಹುಟ್ಟಿದನು. ದುರ್ಯೋಧನನು ಹುಟ್ಟಿದ ಮಾರನೆಯ ದಿನ ಅತ್ಯಂತ ಧೀರನಾದ ಭೀಮಸೇನನು ಹುಟ್ಟಿದನು.

ಯದಾ ಸ ಮಾಸದ್ವಿತಯೀ ಬಭೂವ
ತದಾ ರೋಹಿಣ್ಯಾಂ ಬಲದೇವೋಽಭಿಜಾತಃ ।
ಬಲೀ ಗುಣಾಢ್ಯಃ ಸರ್ವವೇದೀ ಯ ಏವ
ಸೇವಾಖಿನ್ನೋ ಲಕ್ಷ್ಮಣೋಽಗ್ರೇ ಹರೇರ್ಭೂತ್ ॥ ೧೦೬ ॥

ಪದಚ್ಛೇದ :– ಯದಾ ಸಃ ಮಾಸದ್ವಿತಯೀ ಬಭೂವ ತದಾ ರೋಹಿಣ್ಯಾಂ ಬಲದೇವಃ ಅಭಿಜಾತಃ ಬಲೀ ಗುಣಾಢ್ಯಃ ಸರ್ವವೇದೀ ಯಃ ಏವ ಸೇವಾಖಿನ್ನ ಲಕ್ಷ್ಮಣಃ ಅಗ್ರೇ ಹರೇಃ ಭೂತ್.

**ಅರ್ಥ** :– **ಯದಾ** ಯಾವಾಗ ಸಃ ಆ ಭೀಮಸೇನನು **ಮಾಸದ್ವಿತಯೀ** ಎರಡು ತಿಂಗಳಿನವನು **ಬಭೂವ** ಆದನೋ **ತದಾ** ಆಗ **ಬಲೀ** ಬಲಶಾಲಿಯಾದ **ಗುಣಾಢ್ಯಃ** ಗುಣಗಳಿಂದ ಶ್ರೇಷ್ಠನಾದ **ಸರ್ವವೇದೀ** ಸರ್ವಜ್ಞನಾದ **ಬಲದೇವಃ** ಬಲರಾಮನು **ರೋಹಿಣ್ಯಾಂ** ರೋಹಿಣಿಯಲ್ಲಿ **ಅಭಿಜಾತಃ** ಹುಟ್ಟಿದನು **ಯಃ ಏವ** ಯಾವನು ತಾನೇ **ಅಗ್ರೇ** ಹಿಂದೆ **ಸೇವಾಖಿನ್ನಃ** (ರಾಮನ) ಸೇವೆಯಿಂದ ಖಿನ್ನನಾಗಿದ್ದ **ಲಕ್ಷ್ಮಣಃ** ಲಕ್ಷ್ಮಣನಾಗಿದ್ದನೋ **(ಸಃ)** ಅವನು **ಹರೇಃ** ಪರಮಾತ್ಮನಿಗಿಂತ **ಅಗ್ರೇ** ಮೊದಲು **ಭೂತ್** ಹುಟ್ಟಿದನು.

**ತಾತ್ಪರ್ಯ** :– ಭೀಮಸೇನನು ಜನಿಸಿ ಎರಡು ತಿಂಗಳ ನಂತರ ಬಲರಾಮನು ರೋಹಿಣಿಯಲ್ಲಿ ಜನಿಸಿದನು. ಅವನು ಬಲಶಾಲಿಯೂ, ಗುಣಾಢ್ಯನೂ, ಸರ್ವಜ್ಞನೂ ಆಗಿದ್ದನು. ಹಿಂದೆ ಲಕ್ಷಣನಾಗಿದ್ದಾಗ ರಾಮನ ಸೇವೆ ಮಾಡಿ ಖಿನ್ನನಾಗಿದ್ದನು. ಆದ್ದರಿಂದ ಈ ಜನ್ಮದಲ್ಲಿ ಕೃಷ್ಣನಿಗಿಂತ ಮೊದಲೇ ಜನಿಸಿದನು. (''ಸೇವಾಖಿನ್ನಃ'' ಎಂದರೆ ಪರಮಾತ್ಮನ ಸೇವೆಯಲ್ಲಿ ಸಾಕು ಎಂಬ ಬುದ್ಧಿ ಇಲ್ಲದವನು ಎಂದು ಅರ್ಥ. ದುರ್ಘಟಾರ್ಥದೀಪಿಕಾ, ಜನಾರ್ದನೀಯ. ವಾದಿರಾಜೀಯದ ಪ್ರಕಾರ ಪರಮಾತ್ಮನ ಸೇವೆಯಿಂದ ಆಯಾಸಗೊಂಡವನು ಎಂದು ಅರ್ಥ. ''ಅಧಿಕಂ ಯ್ಯೆಃ ಕೃತಂ ತತ್ರ ತ್ತೈರೂನಂ ಕೃತಮತ್ರ ತತ್'' 'ಹಿಂದೆ ಯಾರು ಯೋಗ್ಯತೆ ಮೀರಿ ಪುಣ್ಯ ಗಳಿಸಿದ್ದರೋ ಅವರು ಈಗ ಅದನ್ನು ಕಡಿಮೆ ಮಾಡಿಕೊಂಡರು' ಎಂದು ಆಚಾರ್ಯರ ಮಾತು ಇರುವುದರಿಂದ.)

**ಯದಾ ಹಿ ಪುತ್ರಾನ್ ವಿನಿಹಂತುಮೇತೌ**
**ಸಹೈವ ಬುದ್ಧೌ ಗತಿಶೃಂಖಲಾಯಾಮ್ ।**
**ಕಂಸೇನಾಪಾಪೌ ದೇವಕೀಶೂರಪುತ್ರೌ ವಿಯೋಜಿತಾಃ**
**ಶೌರಿಭಾರ್ಯಾಃ ಪರಾಶ್ಚ ॥ ೧೦೭ ॥**

ಪದಚ್ಛೇದ :- ಯದಾ ಹಿ ಪುತ್ರಾನ್ ವಿನಿಹಂತುಂ ಏತೌ ಸಹ ಏವ ಬದ್ಧೌ ಗತಿಶೃಂಖಲಾಯಾಂ ಕಂಸೇನ ಅಪಾಪೌ ದೇವಕೀಶೂರಪುತ್ರೌ ವಿಯೋಜಿತಾಃ ಶೌರಿಭಾರ್ಯಾಃ ಪರಾಃ ಚ.

**ಅರ್ಥ** :- **ಯದಾ ಹಿ** ಯಾವಾಗ ತಾನೇ **ಪುತ್ರಾನ್** ಮಕ್ಕಳನ್ನು **ವಿನಿಹಂತುಂ** ಕೊಲ್ಲಲು **ಕಂಸೇನ** ಕಂಸನಿಂದ **ಗತಿಶೃಂಖಲಾಯಾಂ** ನಡೆಯಲು ಅನುಕೂಲವಾಗುವ ಸಂಕೋಲೆಯಲ್ಲಿ **ಅಪಾಪೌ** ಪಾಪರಹಿತರಾದ **ಏತೌ** ಈ **ದೇವಕೀಶೂರಪುತ್ರೌ** ದೇವಕೀ ಮತ್ತು ವಸುದೇವರು **ಸಹ ಏವ** ಜೊತೆಗೇ **ಬದ್ಧೌ (ಅಭೂತಾಂ)** ಕಟ್ಟಲ್ಪಟ್ಟಿದ್ದರು **ತದಾ** ಆಗ **ಪರಾಃ ಚ** (ದೇವಕಿಯನ್ನು ಬಿಟ್ಟು) ಬೇರೆಯ **ಶೌರಿಭಾರ್ಯಾಃ** ವಸುದೇವನ ಹೆಂಡತಿಯರು **ವಿಯೋಜಿತಾಃ** ದೂರ ಕಳಿಸ್ಪಟ್ಟಿದ್ದರು.

**ತಾತ್ಪರ್ಯ** :- ಕಂಸನು ವಸುದೇವ-ದೇವಕಿಯರು ರಾಜದ್ರೋಹ ಮೊದಲಾದ ಯಾವುದೇ ಪಾಪವನ್ನು ಮಾಡದಿದ್ದರೂ ಅವರಿಗೆ ಹುಟ್ಟುವ ಮಕ್ಕಳನ್ನು ಕೊಲ್ಲುವ ಸಲುವಾಗಿಯೇ ಅವರಿಬ್ಬರನ್ನು ಬಂಧಿಸಿದ್ದನು. ಹಾಗೆ ಬಂಧಿಸಿದರೂ ನಡೆದಾಡಲು ಅನುಕೂಲವಾಗುವ ಸಂಕೋಲೆಯಲ್ಲಿ ಇಬ್ಬರನ್ನೂ ಜೊತೆಗೇ ಬಂಧಿಸಿದ್ದನು. ಇವರಿಬ್ಬರು ಬಂಧಿತರಾಗಿದ್ದಾಗ ವಸುದೇವನ ಬೇರೆ ಹೆಂಡಿತಿಯರು ವಸುದೇವನೊಂದಿಗೆ ಸೇರದಂತೆ ಕಂಸನು ಅವರನ್ನು ಬೇರೆಡೆ ಕಳಿಸಿದ್ದನು.

**ವಿನಿಶ್ಚಯಾರ್ಥಂ ದೇವಕೀಗರ್ಭಜಾನಾಮನ್ಯಾ**
**ಭಾರ್ಯಾ ಧೃತಗರ್ಭಾಃ ಸ ಕಂಸಃ ।**
**ಸ್ಥಾನಾಂತರೇ ಪ್ರಸವೋ ಯಾವದಾಸಾಂ**
**ಸಂಸ್ಥಾಪಯಾಮಾಸ ಸುಪಾಪಬುದ್ಧಿಃ ॥ ೧೦೮ ॥**

ಪದಚ್ಛೇದ :– ವಿನಿಶ್ಚಯಾರ್ಥಂ ದೇವಕೀಗರ್ಭಜಾನಾಂ ಅನ್ಯಾಃ ಭಾರ್ಯಾಃ ಧೃತಗರ್ಭಾಃ ಸಃ ಕಂಸಃ ಸ್ಥಾನಾಂತರೇ ಪ್ರಸವಃ ಯಾವತ್ ಆಸಾಂ ಸಂಸ್ಥಾಪಯಾಮಾಸ ಸುಪಾಪಬುದ್ಧಿಃ.

**ಅರ್ಥ** :– **ಸುಪಾಪಬುದ್ಧಿಃ** ಅತ್ಯಂತ ಪಾಪಬುದ್ಧಿಯುಳ್ಳ **ಸಃ** ಆ **ಕಂಸಃ** ಕಂಸನು **ದೇವಕೀಗರ್ಭಜಾನಾಂ** ದೇವಕಿಯ ಗರ್ಭದಲ್ಲಿ ಹುಟ್ಟಿದ ಮಕ್ಕಳ **ವಿನಿಶ್ಚಯಾರ್ಥಂ** ನಿಶ್ಚಯಕ್ಕಾಗಿ **ಧೃತಗರ್ಭಾಃ** ಧರಿಸಲ್ಪಟ್ಟ ಗರ್ಭವುಳ್ಳ **ಅನ್ಯಾಃ** ಬೇರೆಯ **ಭಾರ್ಯಾಃ** ಹೆಂಡತಿಯರನ್ನು **ಯಾವತ್ ಪ್ರಸವಃ** ಪ್ರಸವದ ತನಕ **ಸ್ಥಾನಾಂತರೇ** ಬೇರೆ ಸ್ಥಳದಲ್ಲಿ **ಸಂಸ್ಥಾಪಯಾಮಾಸ** ಇರಿಸಿದನು.

**ತಾತ್ಪರ್ಯ** :– ವಸುದೇವನೊಂದಿಗೆ ದೇವಕಿಯಂತೆ ರೋಹಿಣೀ ಮೊದಲಾದ ಬೇರೆ ಹೆಂಡತಿಯರೂ ಇದ್ದರೆ ಅವರಿಗೂ ಮಕ್ಕಳಾದಾಗ ದೇವಕಿಯ ಮಕ್ಕಳು ಯಾರೆಂದು ನಿಶ್ಚಯಮಾಡಲು ಆಗುವುದಿಲ್ಲವೆಂದು ಅತ್ಯಂತ ಪಾಪಿಯಾದ ಕಂಸನು ರೋಹಿಣೀ ಮೊದಲಾದ ಇತರೆ ಹೆಂಡತಿಯರು ಗರ್ಭಿಣಿಯಾದ ಕೂಡಲೇ ಅವರನ್ನು ದೂರಪ್ರದೇಶಕ್ಕೆ ಕಳುಹಿಸುತ್ತಿದ್ದನು. (ಈ ಶ್ಲೋಕಕ್ಕೆ ಅನುಗುಣವಾಗಿ ಹಿಂದಿನ ಶ್ಲೋಕಕ್ಕೆ "ವಿನಿಯೋಜಿತಾಃ" ಎಂದರೆ ಗರ್ಭಿಣಿಯರಾದ ನಂತರ ಬೇರೆಡೆ ಕಳುಹಿಸಲ್ಪಟ್ಟರು ಎಂದು ಅರ್ಥ ಮಾಡಬೇಕು.)

**ಹೇತೋರೇತಸ್ಮಾದ್ ರೋಹಿಣೀ ನಂದಗೇಹೇ**
**ಪ್ರಸೂತ್ಯರ್ಥಂ ಸ್ಥಾಪಿತಾ ತೇನ ದೇವಿ ।**
**ಲೇಭೇ ಪುತ್ರಂ ಗೋಕುಲೇ ಪೂರ್ಣಚಂದ್ರ-**
**ಕಾಂತಾನನಂ ಬಲಭದ್ರ ಸುಶುಭ್ರಮ್ ॥ ೧೦೯ ॥**

ಪದಚ್ಛೇದ :– ಹೇತೋಃ ಏತಸ್ಮಾತ್ ರೋಹಿಣೀ ನಂದಗೇಹೇ ಪ್ರಸೂತ್ಯರ್ಥಂ ಸ್ಥಾಪಿತಾ ತೇನ ದೇವೀ ಲೇಭೇ ಪುತ್ರಂ ಗೋಕುಲೇ ಪೂರ್ಣಚಂದ್ರಕಾಂತಾನನಂ ಬಲಭದ್ರಂ ಸುಶುಭ್ರಮ್.

**ಅರ್ಥ** :– **ಏತಸ್ಮಾತ್** ಈ **ಹೇತೋಃ** ಕಾರಣದಿಂದ **ತೇನ** ಆ ಕಂಸನಿಂದ **ಪ್ರಸೂತ್ಯರ್ಥಂ** ಪ್ರಸವಕ್ಕಾಗಿ **ನಂದಗೇಹೇ** ನಂದನ ಮನೆಯಲ್ಲಿ **ಸ್ಥಾಪಿತಾ** ಇರಿಸಲ್ಪಟ್ಟಿದ್ದ **ದೇವೀ** ಕ್ರೀಡಾದಿಗುಣವಿಶಿಷ್ಟಳಾದ **ರೋಹಿಣೀ** ರೋಹಿಣಿಯು **ಗೋಕುಲೇ** ಗೋಕುಲದಲ್ಲಿ **ಸುಶುಭ್ರಂ** ಮನೋಹರವಾದ ಶುಭ್ರವರ್ಣವುಳ್ಳ

**ಪೂರ್ಣಚಂದ್ರಕಾಂತಾನನಂ** ಪೂರ್ಣಚಂದ್ರನಂತೆ ರಮ್ಯವಾದ ಮುಖವುಳ್ಳ **ಬಲಭದ್ರಂ** ಬಲರಾಮನನ್ನು **ಪುತ್ರಂ** ಮಗನನ್ನಾಗಿ **ಲೇಭೇ** ಪಡೆದಳು.

**ತಾತ್ಪರ್ಯ** :– ಕಂಸನು ಈ ಕಾರಣದಿಂದಲೇ ರೋಹಿಣಿಯು ಗರ್ಭಿಣಿಯಾದಾಗ ಪ್ರಸವಕ್ಕಾಗಿ ಅವಳನ್ನು ಗೋಕುಲದಲ್ಲಿ ಇರಿಸಿದ್ದ. ರೋಹಿಣಿಯೇ ಅಲ್ಲಿಯೇ ನಂದಗೋಪನ ಮನೆಯಲ್ಲಿ ಶುಭ್ರವಾದ ಶ್ವೇತವರ್ಣವುಳ್ಳ, ಚಂದ್ರನಂತೆ ಮನೋಹರವಾದ ಮುಖವುಳ್ಳ ಬಲರಾಮನನ್ನು ಮಗನನ್ನಾಗಿ ಪಡೆದಳು.

**ಯದಾ ತ್ರಿಮಾಸಃ ಸ ಬಭೂವ ದೇವಸ್ತದಾ-**
**ವಿರಾಸೀತ್ ಪುರುಷೋತ್ತಮೋಽಜಃ ।**
**ತೌ ಕೃಷ್ಣಶೇಷಾವಾಪ್ತುಕಾಮೌ ಸುತೌ**
**ಹಿ ತಪಶ್ಚಕ್ರಾತೇ ದೇವಕೀಶೂರಪುತ್ರೌ ॥ ೧೧೦ ॥**

ಪದಚ್ಛೇದ :– ಯದಾ ತ್ರಿಮಾಸಃ ಸಃ ಬಭೂವ ದೇವಃ ತದಾ ಆವೀರಾಸೀತ್ ಪುರುಷೋತ್ತಮಃ ಅಜಃ ತೌ ಕೃಷ್ಣಶೇಷೌ ಆಪ್ತುಕಾಮೌ ಸುತೌ ಹಿ ತಪಃ ಚಕ್ರಾತೇ ದೇವಕೀಶೂರಪುತ್ರೌ.

**ಅರ್ಥ** :– **ಯದಾ** ಯಾವಾಗ **ಸಃ** ಆ ಬಲರಾಮನು **ತ್ರಿಮಾಸಃ** ಮೂರು ತಿಂಗಳವನು **ಬಭೂವ** ಆದನೋ **ತದಾ** ಆಗ **ದೇವಃ** ಕ್ರೀಡಾದಿಗುಣ ವಿಶಿಷ್ಟನಾದ **ಪುರುಷೋತ್ತಮಃ** ಸರ್ವೋತ್ತಮನಾದ **ಅಜಃ** ಜನನರಹಿತನಾದ ಕೃಷ್ಣನು **ಆವಿರಾಸೀತ್** ಆವಿರ್ಭವಿಸಿದನು **ಕೃಷ್ಣಶೇಷೌ** ಕೃಷ್ಣ ಮತ್ತು ಶೇಷರನ್ನು **ಸುತೌ** ಮಕ್ಕಳನ್ನಾಗಿ **ಆಪ್ತುಕಾಮೌ** ಪಡೆಯಲು ಇಚ್ಛೆಯುಳ್ಳ **ತೌ** ಆ **ದೇವಕೀಶೂರಪುತ್ರೌ ಹಿ** ದೇವಕೀ ಮತ್ತು ವಸುದೇವರಾದರೂ **ತಪಃ** ತಪಸ್ಸನ್ನು **ಚಕ್ರಾತೇ** ಮಾಡಿದರು.

**ತಾತ್ಪರ್ಯ** :– ಯಾವಾಗ ಬಲರಾಮನು ಮೂರುತಿಂಗಳ ಮಗುವಾಗಿದ್ದನೋ ಆಗ ಸರ್ವೋತ್ತಮನಾದ, ಜನರಹಿತನಾದ ಪರಮಾತ್ಮನು ಕೃಷ್ಣನಾಗಿ ಆವಿರ್ಭವಿಸಿದನು. ಬಲರಾಮನು ದೇವಕೀ ಹಾಗೂ ರೋಹಿಣೀ ಇಬ್ಬರ ಗರ್ಭದಲ್ಲೂ ಬರಲು ಕಾರಣವನ್ನು ಮುಂದೆ ಹೇಳುತ್ತಾರೆ– ಹಿಂದೆ ವಸುದೇವ-ದೇವಕಿಯರು ಪರಮಾತ್ಮ ಹಾಗೂ ಶೇಷನನ್ನು ಮಕ್ಕಳನ್ನಾಗಿ ಪಡೆಯಲು ತಪಸ್ಸನ್ನು ಮಾಡಿದ್ದರು.

ವಿಷ್ಣ್ವಾವೇಶೀ ಬಲವಾನ್ ಯೋ ಗುಣಾಧಿಕಃ
ಸ ಮೇ ಸುತಃ ಸ್ಯಾದಿತಿ ರೋಹಿಣೀ ಚ ।
ತೇಪೇ ತಪೋಽತೋ ಹರಿಶುಕ್ಲಕೇಶಯುತಃ
ಶೇಷೋ ದೇವಕೀರೋಹಿಣೀಜಃ ॥ ೧೧೧ ॥

ಪದಚ್ಛೇದ :– ವಿಷ್ಣ್ವಾವೇಶೀ, ಬಲವಾನ್ ಯಃ ಗುಣಾಧಿಕಃ ಸಃ ಮೇ ಸುತಃ ಸ್ಯಾತ್ ಇತಿ ರೋಹಿಣೀ ಚ ತೇಪೇ ತಪಃ ಅತಃ ಹರಿಶುಕ್ಲಕೇಶಯುತಃ ಶೇಷಃ ದೇವಕೀರೋಹಿಣೀಜಃ

**ಅರ್ಥ** :– ಹಿ ಯಾವ ಕಾರಣದಿಂದ **ರೋಹಿಣೀ ಚ** ರೋಹಿಣಿಯೂ ಕೂಡ **ಯಃ** ಯಾವನು **ವಿಷ್ಣ್ವಾವೇಶೀ** ಪರಮಾತ್ಮನ ಆವೇಶವುಳ್ಳವನೋ **ಬಲವಾನ್** ಬಲಶಾಲಿಯೋ **ಗುಣಾಧಿಕಃ** ಗುಣಗಳಿಂದ ಉತ್ತಮನೋ **ಸಃ** ಅಂತಹವನು **ಮೇ** ನನ್ನ **ಸುತಃ** ಮಗನು **ಸ್ಯಾತ್** ಆಗಲಿ **ಇತಿ** ಎಂದು **ತಪಃ** ತಪಸ್ಸನ್ನು **ತೇಪೇ** ಮಾಡಿದ್ದಳು **ಅತಃ** ಆದ್ದರಿಂದ **ಹರಿಶುಕ್ಲಕೇಶಯುತಃ** ಪರಮಾತ್ಮನ ಶುಕ್ಲಕೇಶ ಆವೇಶದಿಂದ ಕೂಡಿದ **ಶೇಷಃ** ಶೇಷನು **ದೇವಕೀ ರೋಹಿಣೀಜಃ (ಅಭೂತ್)** ದೇವಕೀ ಹಾಗೂ ರೋಹಿಣೀಯರ ಮಗನಾಗಿ ಜನಿಸಿದನು.

**ತಾತ್ಪರ್ಯ** :– ರೋಹಿಣಿಯೂ ಕೂಡ ಪರಮಾತ್ಮನ ಆವೇಶದಿಂದ ಕೂಡಿದ ಬಲಶಾಲಿಯಾದ ಗುಣಗಳಿಂದ ಉತ್ತಮನಾದ ಮಗನು ನನಗೆ ಹುಟ್ಟಬೇಕು ಎಂದು ತಪಸ್ಸನ್ನು ಮಾಡಿದ್ದಳು. ಆದ್ದರಿಂದ ಪರಮಾತ್ಮನ ಶುಕ್ಲಕೇಶ ಆವೇಶದಿಂದ ಕೂಡಿದವನಾಗಿ ಶೇಷನು ದೇವಕೀ ರೋಹಿಣಿಯರ ಗರ್ಭದಲ್ಲಿ ಜನಿಸಿದನು.

ಅವರ್ಧತಾಸೌ ಹರಿಶುಕ್ಲಕೇಶಸಮಾವೇಶೀ
ಗೋಕುಲೇ ರೌಹಿಣೇಯಃ ।
ಕೃಷ್ಣೋಽಪಿ ಲೀಲಾಲಲಿತಾಃ ಪ್ರದರ್ಶಯನ್
ಬಲದ್ವಿತೀಯೋ ರಮಯಾಮಾಸ ಗೋಷ್ಠಮ್ ॥ ೧೧೨ ॥

ಪದಚ್ಛೇದ :– ಅವರ್ಧತ ಅಸೌ ಹರಿಶುಕ್ಲಕೇಶಸಮಾವೇಶೀ ಗೋಕುಲೇ ರೌಹಿಣೇಯಃ ಕೃಷ್ಣಃ ಅಪಿ ಲೀಲಾಲಲಿತಾಃ ಪ್ರದರ್ಶಯನ್ ಬಲದ್ವಿತೀಯಃ ರಮಯಾಮಾಸ ಗೋಷ್ಠಮ್.

**ಅರ್ಥ** :– **ಹರಿಶುಕ್ಲಸಮಾವೇಶೀ** ಪರಮಾತ್ಮನ ಶುಕ್ಲಕೇಶದ ಸಮೀಚೀನವಾದ ಆವೇಶವುಳ್ಳ **ಅಸೌ** ಈ **ರೌಹಿಣೇಯಃ** ರೋಹಿಣಿಯ ಮಗನಾದ ಬಲರಾಮನು **ಗೋಕುಲೇ** ಗೋಕುಲದಲ್ಲಿ **ಅವರ್ಧತ** ಬೆಳೆದನು. **ಕೃಷ್ಣಃ ಅಪಿ** ಕೃಷ್ಣನೂ ಕೂಡ **ಬಲದ್ವಿತೀಯಃ (ಸನ್)** ಬಲರಾಮನಿಂದ ಸಹಿತನಾಗಿ **ಲೀಲಾಲಲಿತಾಃ** ಮನೋಹರವಾದ ಲೀಲೆಗಳನ್ನು **ಪ್ರದರ್ಶಯನ್** ತೋರಿಸುತ್ತಾ **ಗೋಷ್ಠಂ** ಗೋಕುಲವನ್ನು **ರಮಯಾಮಾಸ** ಸಂತೋಷಪಡಿಸಿದನು.

**ತಾತ್ಪರ್ಯ** :– ಹೀಗೆ ರೋಹಿಣಿಯಲ್ಲಿ ಹುಟ್ಟಿದ ಭಗವಂತನ ಶುಕ್ಲಕೇಶ ಆವೇಶವುಳ್ಳ ಬಲರಾಮನು ಗೋಕುಲದಲ್ಲೇ ಬೆಳೆದನು. ಕೃಷ್ಣನೂ ಕೂಡ ಬಲರಾಮನೊಂದಿಗೆ ಕೂಡಿ ಮನೋಹರವಾದ ತನ್ನ ಲೀಲೆಗಳನ್ನು ಪ್ರದರ್ಶಿಸುತ್ತಾ ಗೋಕುಲವನ್ನು ಸಂತೋಷಗೊಳಿಸಿದನು.

**ಸ ಪ್ರಾಕೃತಂ ಶಿಶುಮಾತ್ಮಾನಮುಚ್ಚೈರ್ವಿ-**
**ಜಾನಂತ್ಯಾ ಮಾತುರಾದರ್ಶನಾಯ ।**
**ವಿಜೃಂಭಮಾಣೋऽಖಿಲಮಾತ್ಮಸಂಸ್ಥಂ**
**ಪ್ರದರ್ಶಯಾಮಾಸ ಕದಾಚಿದೀಶಃ ॥ ೧೧೩ ॥**

ಪದಚ್ಛೇದ :– ಸಃ ಪ್ರಾಕೃತಂ ಶಿಶುಂ ಆತ್ಮಾನಂ ಉಚ್ಚೈಃ ವಿಜಾನಂತ್ಯಾ ಮಾತುಃ ಆದರ್ಶನಾಯ ವಿಜೃಂಭಮಾಣಃ ಅಖಿಲಂ ಆತ್ಮಸಂಸ್ಥಂ ಪ್ರದರ್ಶಯಾಮಾಸ ಕದಾಚಿತ್ ಈಶಃ.

**ಅರ್ಥ** :– **ಕದಾಚಿತ್** ಒಮ್ಮೆ **ಈಶಃ** ನಿಯಾಮಕನಾದ **ಸಃ** ಆ ಕೃಷ್ಣನು **ಆತ್ಮಾನಾಂ** ತನ್ನನ್ನು **ಪ್ರಾಕೃತಂ** ಪ್ರಕೃತಿಯ ಸಂಬಂಧವುಳ್ಳ **ಶಿಶುಂ** ಮಗುವನ್ನಾಗಿ **ವಿಜಾನಂತ್ಯಾಃ** ತಿಳಿದ **ಮಾತುಃ** ತಾಯಿಯಾದ ಯಶೋದೆಗೆ **ಉಚ್ಚೈಃ** ವಿಶೇಷವಾಗಿ **ಆದರ್ಶನಾಯ** (ತನ್ನ ಸ್ವರೂಪವನ್ನು) ತೋರಿಸಲು **ವಿಜೃಂಭಮಾಣಃ (ಸನ್)** ವಿಜೃಂಭಿಸುವವನಾಗಿ **ಅಖಿಲಂ** ಎಲ್ಲವನ್ನೂ **ಆತ್ಮಸಂಸ್ಥಂ** ತನ್ನಲ್ಲೇ ಇರುವುದನ್ನಾಗಿ **ಪ್ರದರ್ಶಯಾಮಾಸ** ತೋರಿಸಿದನು.

**ತಾತ್ಪರ್ಯ** :– ಕೃಷ್ಣನ ತಾಯಿಯಾದ ಯಶೋದೆಯು ಕೃಷ್ಣನನ್ನು ಲೋಕದ ಎಲ್ಲ ಶಿಶುಗಳಂತೆಯೇ ಪ್ರಕೃತಿಯ ಸಂಬಂಧವುಳ್ಳ ಸಾಮಾನ್ಯ ಶಿಶುವೆಂದು ತಿಳಿದಿದ್ದಳು. ಅವಳಿಗೆ ತನ್ನ ಸ್ವರೂಪವನ್ನು ತಿಳಿಸಲು

ಜಗಸ್ವಾಮಿಯಾದ ಕೃಷ್ಣನು ಬಾಯಿತೆರೆದು ಸಮಸ್ತಜಗತ್ತೂ ತನ್ನಲ್ಲಿರುವುದನ್ನು ತೋರಿಸಿದನು.

**ಸಾಽಂಡಂ ಮಹಾಭೂತಮನೋಽಭಿ-**
**ಮಾನಮಹತ್ಕೃತ್ಯಾವೃತಮಬ್ಜಜಾದಿಭಿಃ ।**
**ಸುರೈಃ ಶಿವೇತೈರ್ನರದೈತ್ಯಸಂಘೈರ್ಯುತಂ**
**ದದರ್ಶಾಸ್ಯ ತನೌ ಯಶೋದಾ ॥ ೧೧೪ ॥**

**ಪದಚ್ಛೇದ :– ಸಾ ಅಂಡಂ ಮಹಾಭೂತಮನೋಽಭಿಮಾನಮಹತ್ಕೃತ್ಯಾವೃತಂ ಅಬ್ಜಜಾದಿಭಿಃ ಸುರೈಃ ಶಿವೇತೈಃ ನರದೈತ್ಯಸಂಘೈಃ ಯುತಂ ದದರ್ಶ ಅಸ್ಯ ತನೌ ಯಶೋದಾ.**

**ಅರ್ಥ :–** **ಸಾ** ಆ **ಯಶೋದಾ** ಯಶೋದೆಯು **ಅಸ್ಯ** ಈ ಕೃಷ್ಣನ **ತನೌ** ಶರೀರದಲ್ಲಿ **ಮಹಾಭೂತಮನೋಽಭಿಮಾನಮಹತ್ಕೃತ್ಯಾವೃತಂ** ಪಂಚಭೂತಗಳು (ಪಂಚತನ್ಮಾತ್ರಗಳು) ಮನಸ್ಸು (ದಶ ಇಂದ್ರಿಯಗಳು ಬುದ್ಧಿತತ್ವ) ರುದ್ರನಿಂದ ಅಭಿಮನ್ಯವಾದ ಅಹಂಕಾರತತ್ವ ಮಹತ್ತತ್ವ ಮೂಲಪ್ರಕೃತಿ ಇವುಗಳಿಂದ ಆವರಿಸಲ್ಪಟ್ಟ **ಅಬ್ಜಜಾದಿಭಿಃ** ಕಮಲೋದ್ಭವನಾದ ಬ್ರಹ್ಮನೇ ಮೊದಲಾದ **ಶಿವೇತೈಃ** ಶಿವನಿಂದ ಸಹಿತರಾದ **ಸುರೈಃ** ದೇವತೆಗಳಿಂದ **ನರದೈತ್ಯಸಂಘೈಃ** ಮನುಷ್ಯರು ದೈತ್ಯರು, ಇವರ ಸಮೂಹದಿಂದ **ಯುತಂ** ಕೂಡಿದ **ಅಂಡಂ** ಬ್ರಹ್ಮಾಂಡವನ್ನು **ದದರ್ಶ** ಕಂಡಳು.

**ತಾತ್ಪರ್ಯ :–** ಯಶೋದೆಯು ಕೃಷ್ಣನ ಶರೀರದಲ್ಲಿ ಏನನ್ನು ಕಂಡಳು ಎನ್ನುವುದನ್ನು ಈ ಶ್ಲೋಕದಲ್ಲಿ ವರ್ಣಿಸಿದ್ದಾರೆ– ಪಂಚಭೂತಗಳು, ಪಂಚತನ್ಮಾತ್ರಗಳು, ಮನಸ್ತತ್ವ, ದಶ ಇಂದ್ರಿಯಗಳು, ಬುದ್ಧಿತತ್ವ, ರುದ್ರದೇವರಿಂದ ಅಭಿಮನ್ಯವಾದ ಅಹಂಕಾರತತ್ವ, ಮಹತ್ತತ್ವ, ಮೂಲಪ್ರಕೃತಿ; ಈ ೨೫ ತತ್ವಗಳಿಂದ ಆವೃತವಾದ ಹಾಗೂ ಚತುರ್ಮುಖಬ್ರಹ್ಮ ಶಿವ ಮೊದಲಾದ ದೇವತೆಗಳು, ನರರು, ದೈತ್ಯರು ಇವರೆಲ್ಲರಿಂದ ಕೂಡಿದ ಬ್ರಹ್ಮಾಂಡವನ್ನು ನೋಡಿದಳು. (ಪೃಥ್ವಿಯನ್ನು ಬಿಟ್ಟು ನಾಲ್ಕು ಭೂತಗಳು, ಅಹಂಕಾರತತ್ವ, ಮಹತ್ತತ್ವ, ತ್ರಿಗುಣಾತ್ಮಕವಾದ ಪ್ರಕೃತಿ ಈ ಒಂಭತ್ತು ತತ್ವಗಳಿಂದ ಆವೃತವಾದ–ಜನಾರ್ದನೀಯ).

ವಿಶೇಷ ಸೂಚನೆ :– ಭಾಗವತ ಹಾಗೂ ಆಚಾರ್ಯರ ವಾಕ್ಯಗಳಿಗೆ ವಿರೋಧವನ್ನು ಪರಿಹರಿಸುವ ಇಲ್ಲಿನ ವಾದಿರಾಜರ ವ್ಯಾಖ್ಯಾನವನ್ನು ಎಲ್ಲರೂ ಅವಶ್ಯವಾಗಿ ಓದಬೇಕು.

**ನ್ಯಮೀಲಯಚ್ಚಾಕ್ಷಿಣೀ ಭೀತಭೀತಾ**
**ಜುಗೂಹ ಜಾತ್ಮಾನಮಥೋ ರಮೇಶಃ ।**
**ವಪುಃ ಸ್ವಕೀಯಂ ಸುಖಚಿತ್ಸ್ವರೂಪಂ**
**ಪೂರ್ಣಂ ಸತ್ಸು ಜ್ಞಾಪಯಂಸ್ತದ್ಧ್ಯದರ್ಶಯತ್ ॥ ೧೧೫ ॥**

**ಪದಚ್ಛೇದ :– ನ್ಯಮೀಲಯತ್ ಚ ಅಕ್ಷಿಣೀ ಭೀತಭೀತಾ ಜುಗೂಹ ಚ ಆತ್ಮಾನಂ ಅಥೋ ರಮೇಶಃ ವಪುಃ ಸ್ವಕೀಯಂ ಸುಖಚಿತ್ಸ್ವರೂಪಂ ಪೂರ್ಣಂ ಸತ್ಸು ಜ್ಞಾಪಯನ್ ತತ್ ಹಿ ಅದರ್ಶಯತ್.**

**ಅರ್ಥ** :– **ಭೀತಭೀತಾ ಚ** ಅತ್ಯಂತಭೀತಳಾದ ಯಶೋದೆಯಾದರೂ **ಅಕ್ಷಿಣೀ** ಕಣ್ಣುಗಳನ್ನು **ನ್ಯಮೀಲಯತ್** ಮುಚ್ಚಿದಳು **ಅಥೋ** ಆ ನಂತರ **ರಮೇಶಃ ಚ** ರಮಾಪತಿಯಾದ ಕೃಷ್ಣನಾದರೂ **ಆತ್ಮಾನಂ** ತನ್ನ ಸ್ವರೂಪವನ್ನು **ಜುಗೂಹ** ಮರೆ ಮಾಡಿದನು. **ಸತ್ಸು** ಸಜ್ಜನರಲ್ಲಿ **ಸ್ವಕೀಯಂ** ತನ್ನ **ಸುಖಚಿತ್ಸ್ವರೂಪಂ** ಜ್ಞಾನಾನಂದಸ್ವರೂಪವಾದ **ಪೂರ್ಣಂ** ವ್ಯಾಪ್ತನಾದ **ವಪುಃ** ಶರೀರವನ್ನು **ಜ್ಞಾಪಯನ್** (ಸನ್) ತಿಳಿಸುವವನಾಗಿ **ತತ್** ಆ ವಿಶ್ವರೂಪವನ್ನು **ಅದರ್ಶಯತ್ ಹಿ** ತೋರಿಸಿದನಷ್ಟೆ

**ತಾತ್ಪರ್ಯ** :– ಕೃಷ್ಣನ ಬಾಯಲ್ಲಿ ವಿಶ್ವರೂಪವನ್ನು ನೋಡಿ ಅತ್ಯಂತ ಭೀತಳಾದ ಯಶೋದೆಯು ಕಣ್ಣನ್ನು ಮುಚ್ಚಿದಳು. ನಂತರ ಕೃಷ್ಣನು ತನ್ನ ರೂಪವನ್ನು ಮರೆ ಮಾಡಿದನು. ಕೃಷ್ಣನು ಸಜ್ಜನರಿಗೆ ತನ್ನ ಜ್ಞಾನಾನಂದ ಸ್ವರೂಪವಾದ, ಸರ್ವವ್ಯಾಪ್ತವಾದ ರೂಪವನ್ನು ತಿಳಿಸಲೆಂದೇ ಆ ರೂಪವನ್ನು ಯಶೋದೆಗೆ ತೋರಿಸಿದನು.

**ಕದಾಚಿತ್ ತಂ ಲಾಲಯಂತೀ ಯಶೋದಾ**
**ವೋಢುಂ ನಾಶಕ್ನೋತ್ ಭೂರಿಭಾರಾಧಿಕಾರ್ತಾ ।**
**ನಿಧಾಯ ತಂ ಭೂಮಿತಲೇ ಸ್ವಕರ್ಮ ಯದಾ**
**ಚಕ್ರೇ ದೈತ್ಯ ಆಗಾತ್ ಸುಘೋರಃ ॥ ೧೧೬ ॥**

ಪದಚ್ಛೇದ :— ಕದಾಚಿತ್ ತಂ ಲಾಲಯಂತೀ ಯಶೋದಾ ವೋಢುಂ ನ ಅಶಕ್ನೋತ್ ಭೂರಿಭಾರಾಧಿಕಾರ್ತಾ ನಿಧಾಯ ತಂ ಭೂಮಿತಲೇ ಸ್ವಕರ್ಮ ಯದಾ ಚಕ್ರೇ ದೈತ್ಯಃ ಆಗಾತ್ ಸುಘೋರಃ.

**ಅರ್ಥ** :— **ಕದಾಚಿತ್** ಒಮ್ಮೆ **ತಂ** ಆ ಕೃಷ್ಣನನ್ನು **ಲಾಲಯಂತೀ** ಮುದ್ದಿಸುತ್ತಿದ್ದ **ಯಶೋದಾ** ಯಶೋದೆಯು **ಭೂರಿಭಾರಾಧಿಕಾರ್ತಾ (ಸತೀ)** (ಕೃಷ್ಣನ) ಬಹಳವಾದ ಭಾರದಿಂದ ಪೀಡಿತಳಾಗಿ **ತಂ** ಆ ಕೃಷ್ಣನನ್ನು **ವೋಢುಂ** ಹೊತ್ತುಕೊಳ್ಳಲು **ನ ಅಶಕ್ನೋತ್** ಶಕ್ತಳಾಗಲಿಲ್ಲ **ಯದಾ** ಯಾವಾಗ **ತಂ** ಆ ಕೃಷ್ಣನನ್ನು **ಭೂಮಿತಲೇ** ಭೂಮಿಯ ಮೇಲೆ **ನಿಧಾಯ** ಇಟ್ಟು **ಸ್ವಕರ್ಮ** ತನ್ನ ಕೆಲಸವನ್ನು **ಚಕ್ರೇ** ಮಾಡಿದಳೋ **(ತದಾ)** ಆಗ **ಸುಘೋರಃ** ಅತ್ಯಂತ ಕ್ರೂರನಾದ **ದೈತ್ಯಃ** ದೈತ್ಯನು **ಆಗಾತ್** ಬಂದನು.

**ತಾತ್ಪರ್ಯ** :— ಒಮ್ಮೆ ಕೃಷ್ಣನನ್ನು ಮುದ್ದಾಡುತ್ತಿದ್ದ ಯಶೋದೆಗೆ ಅವನು ಬಹಳ ಭಾರನೆನಿಸಿದನು. ಅವನನ್ನು ಹೊತ್ತುಕೊಳ್ಳಲು ಸಮರ್ಥಳಾಗದೇ ನೆಲದ ಮೇಲಿಟ್ಟು ತನ್ನ ಕೆಲಸವನ್ನು ಮಾಡಲು ಹೋದಳು. ಆಗ ಅತ್ಯಂತಕ್ರೂರನಾದ ದೈತ್ಯನು ಬಂದನು.

**ತೃಣಾವರ್ತೋ ನಾಮತಃ ಕಂಸಭೃತ್ಯಃ**
**ಸೃಷ್ಟ್ವಾತ್ಯುಗ್ರಂ ಚಕ್ರವಾತಂ ಶಿಶುಂ ತಮ್ ।**
**ಆದಾಯಾಗಾದಂತರಿಕ್ಷಂ ಸ ತೇನ**
**ಶಸ್ತಃ ಕಂಠಗ್ರಾಹಸಂರುದ್ಧವಾಯುಃ ॥ ೧೧೭ ॥**

ಪದಚ್ಛೇದ :— ತೃಣಾವರ್ತಃ ನಾಮತಃ ಕಂಸಭೃತ್ಯಃ ಸೃಷ್ಟ್ವಾ ಅತ್ಯುಗ್ರಂ ಚಕ್ರವಾತಂ ಶಿಶುಂ ತಂ ಆದಾಯ ಅಗಾತ್ ಅಂತರಿಕ್ಷಂ ಸಃ ತೇನ ಶಸ್ತಃ ಕಂಠಗ್ರಾಹಸಂರುದ್ಧವಾಯುಃ.

**ಅರ್ಥ** :— **ನಾಮತಃ** ಹೆಸರಿನಿಂದ **ತೃಣಾವರ್ತಃ** ತೃಣಾವರ್ತನೆಂಬ **ಕಂಸಭೃತ್ಯಃ** ಕಂಸನ ಸೇವಕನು **ಅತ್ಯುಗ್ರಂ** ಅತ್ಯಂತ ಉಗ್ರವಾದ **ಚಕ್ರವಾತಂ** ಸುಳಿಯಾಕಾರದ ಗಾಳಿಯನ್ನು **ಸೃಷ್ಟ್ವಾ** ಸೃಷ್ಟಿಸಿ **ತಂ** ಆ **ಶಿಶುಂ** ಮಗುವನ್ನು **ಆದಾಯ** ತೆಗೆದುಕೊಂಡು **ಅಂತರಿಕ್ಷಂ (ಪ್ರತಿ)** ಆಕಾಶವನ್ನು ಕುರಿತು **ಅಗಾತ್** ಹೋದನು **ಸಃ** ಆ ತೃಣಾವರ್ತನು **ಕಂಠಗ್ರಾಹಸಂರುದ್ಧವಾಯುಃ (ಸನ್)**

ಗಂಟಲಿನಲ್ಲಿ ಹಿಡಿಯುವಿಕೆಯಿಂದ ತಡೆಯಲ್ಪಟ್ಟ ಗಾಳಿಯುಳ್ಳವನಾಗಿ **ತೇನ** ಆ ಕೃಷ್ಣನಿಂದ **ಶಸ್ತಃ (ಅಭೂತ್)** ಹಿಂಸಿಸಲ್ಪಟ್ಟವನಾದನು.

**ತಾತ್ಪರ್ಯ** :– ಬಂದ ಆ ದೈತ್ಯನು ಕಂಸನ ಸೇವಕನು. ಅವನ ಹೆಸರು ತೃಣಾವರ್ತ. ಅವನು ಭಯಜನಕವಾದ ಸುಳಿಗಾಳಿಯನ್ನುಂಟುಮಾಡಿ ಕೃಷ್ಣನನ್ನು ತೆಗೆದುಕೊಂಡು ಆಕಾಶಕ್ಕೆ ಹಾರಿದನು. ಆಗ ಕೃಷ್ಣನು ಅವನ ಗಂಟಲನ್ನು ಹಿಡಿದು ಶ್ವಾಸವನ್ನು ತಡೆದನು. ಕೃಷ್ಣನಿಂದ ಹೀಗೆ ತೃಣಾವರ್ತನು ಹಿಂಸಿತನಾದನು.

**ಪಪಾತ ಕೃಷ್ಣೇನ ಹತಃ ಶಿಲಾತಲೇ**
**ತೃಣಾವರ್ತಃ ಪರ್ವತೋದಗ್ರದೇಹಃ ।**
**ಸುವಿಸ್ಮಯಂ ಚಾಪುರಥೋ ಜನಾಸ್ತೇ**
**ತೃಣಾವರ್ತಂ ವೀಕ್ಷ್ಯ ಸಂಚೂರ್ಣಿತಾಂಗಮ್ ॥ ೧೧೮ ॥**

ಪದಚ್ಛೇದ :– **ಪಪಾತ ಕೃಷ್ಣೇನ ಹತಃ ಶಿಲಾತಲೇ ತೃಣಾವರ್ತಃ ಪರ್ವತೋದಗ್ರದೇಹಃ ಸುವಿಸ್ಮಯಂ ಚ ಆಪುಃ ಅಥೋ ಜನಾಃ ತೇ ತೃಣಾವರ್ತಂ ವೀಕ್ಷ್ಯ ಸಂಚೂರ್ಣಿತಾಂಗಮ್.**

**ಅರ್ಥ** :– **ಪರ್ವತೋದಗ್ರದೇಹಃ** ಪರ್ವತದಂತೆ ದೀರ್ಘವಾದ ಶರೀರವುಳ್ಳ **ತೃಣಾವರ್ತಃ** ತೃಣಾವರ್ತನು **ಕೃಷ್ಣೇನ** ಕೃಷ್ಣನಿಂದ **ಹತಃ (ಸನ್)** ಸಂಹರಿಸಲ್ಪಟ್ಟವನಾಗಿ **ಶಿಲಾತಲೇ** ಕಲ್ಲಿನ ಮೇಲೆ **ಪಪಾತ** ಬಿದ್ದನು. **ಅಥೋ** ಆ ನಂತರ **ತೇ** ಆ **ಜನಾಃ ಚ** ಜನರಾದರೂ **ಸಂಚೂರ್ಣಿತಾಂಗಂ** ಚೂರಾದ ಅವಯವವುಳ್ಳ **ತೃಣಾವರ್ತಂ** ತೃಣಾವರ್ತನನ್ನು **ವೀಕ್ಷ್ಯ** ನೋಡಿ **ಸುವಿಸ್ಮಯಂ** ಅತ್ಯಂತ ಆಶ್ಚರ್ಯವನ್ನು **ಆಪುಃ** ಹೊಂದಿದರು.

**ತಾತ್ಪರ್ಯ** :– ಹೀಗೆ ಪರಮಾತ್ಮನಿಂದ ಸಂಹರಿಸಲ್ಪಟ್ಟ ತೃಣಾವರ್ತನು ತನ್ನ ಪರ್ವದಂತಹ ದೊಡ್ಡದಾದ ಶರೀರದೊಂದಿಗೆ ಕಲ್ಲಿನ ಮೇಲೆ ಬಿದ್ದನು. ಅವನ ಶರೀರವು ಚೂರುಚೂರಾಯಿತು. ಅಲ್ಲಿನ ಜನರು ಅವನ ಶರೀರವನ್ನು ನೋಡಿ ಬಹಳ ಆಶ್ಚರ್ಯಗೊಂಡರು.

ಅಕ್ರುದ್ಧ್ಯತಾಂ ಕೇಶವೋऽನುಗ್ರಹಾಯ ಶುಭಂ
ಸ್ವಯೋಗ್ಯಾದಧಿಕಂ ನಿಹಂತುಮ್ ।
ಸ ಕೃದ್ಧ್ಯತಾಂ ನವನೀತಾದಿ ಮುಷ್ಣಂಶ್ಚಚಾರ
ದೇವೋ ನಿಜಸತ್ಸುಖಾಂಬುಧಿಃ ॥ ೧೧೯ ॥

ಪದಚ್ಛೇದ :– ಅಕ್ರುದ್ಧ್ಯತಾಂ ಕೇಶವಃ ಅನುಗ್ರಹಾಯ ಶುಭಂ ಸ್ವಯೋಗ್ಯಾತ್ ಅಧಿಕಂ ನಿಹಂತುಂ ಸಃ ಕೃದ್ಧ್ಯತಾಂ ನವನೀತಾದಿ ಮುಷ್ಣನ್ ಚಚಾರ ದೇವಃ ನಿಜಸತ್ಸುಖಾಂಬುಧಿಃ.

**ಅರ್ಥ** :– ನಿಜಸತ್ಸುಖಾಂಬುಧಿಃ ಸ್ವರೂಪಾಭೂತವಾದ ನಿರ್ದುಷ್ಟವಾದ ಆನಂದದಿಂದ ಸಮುದ್ರನಂತಿರುವ **ದೇವಃ** ಕ್ರೀಡಾದಿಗುಣವಿಶಿಷ್ಟನಾದ **ಸಃ** ಆ **ಕೇಶವಃ** ಕೃಷ್ಣನು **ಅಕ್ರುದ್ಧ್ಯತಾಂ** ಸಿಟ್ಟು ಮಾಡದವರಿಗೆ **ಅನುಗ್ರಹಾಯ** ಅನುಗ್ರಹ ಮಾಡುವುದಕ್ಕೋಸ್ಕರ **ಕೃದ್ಧ್ಯತಾಂ** ಸಿಟ್ಟು ಮಾಡುವವರಿಗೆ **ಸ್ವಯೋಗ್ಯಾಧಿಕಂ** ತಮ್ಮ ಯೋಗ್ಯತೆಗಿಂತ ಅಧಿಕವಾದ **ಶುಭಂ** ಪುಣ್ಯವನ್ನು **ನಿಹಂತುಂ** ನಾಶ ಮಾಡಲು **ನವನೀತಾದಿ** ಬೆಣ್ಣೆ ಮೊದಲಾದವನ್ನು **ಮುಷ್ಣನ್** **(ಸನ್)** ಕದಿಯುತ್ತಾ **ಚಚಾರ** ತಿಂದನು (ಸಂಚರಿಸಿದನು).

**ತಾತ್ಪರ್ಯ** :– ಕೃಷ್ಣನು ತಾನು ನಿರ್ದುಷ್ಟವಾದ ಆನಂದದ ಸಮುದ್ರನಂತಿದ್ದರೂ ಎಲ್ಲರ ಮನೆಗಳಲ್ಲಿ ಬೆಣ್ಣೆಯನ್ನು ಕದ್ದ. ಏಕೆಂದರೆ ಯಾರು ತನ್ನ ಮೇಲೆ ಸಿಟ್ಟಾಗುತ್ತಿರಲಿಲ್ಲವೋ ಅವರಿಗೆ ಅನುಗ್ರಹವನ್ನು ಮಾಡಲು ಹಾಗೂ ಯಾರು ಸಿಟ್ಟಾಗುತ್ತಿದ್ದರೋ ಅವರ ಯೋಗ್ಯತೆ ಮೀರಿದ ಪುಣ್ಯವನ್ನು ನಾಶಮಾಡಲು ಹಾಗೆ ಬೆಣ್ಣೆ ಮುಂತಾದವುಗಳನ್ನು ಕದ್ದನು.

ಯಸ್ಮಿನ್ನಬ್ದೇ ಭಾದ್ರಪದೇ ಸ ಮಾಸೇ
ಸಿಂಹಸ್ಥಯೋರ್ಗುರುರವ್ಯೋಃ ಪರೇಶಃ ।
ಉದೈತ್ ತತಃ ಫಾಲ್ಗುನೇ ಫಲ್ಗುನೋऽಭೂದ್
ಗತೇ ತತೋ ಮಾದ್ರವತೀ ಬಭಾಷೇ ॥ ೧೨೦ ॥

ಪದಚ್ಛೇದ :– ಯಸ್ಮಿನ್ ಅಬ್ದೇ ಭಾದ್ರಪದೇ ಸಃ ಮಾಸೇ ಸಿಂಹಸ್ಥಯೋಃ ಗುರುರವ್ಯೋಃ ಪರೇಶಃ ಉದೈತ್ ತತಃ ಫಾಲ್ಗುನೇ ಫಲ್ಗುನಃ ಅಭೂತ್ ಗತೇ ತತಃ ಮಾದ್ರವತೀ ಬಭಾಷೇ.

**ಅರ್ಥ** :– **ಯಸ್ಮಿನ್** ಯಾವ **ಅಬ್ದೇ** ಸಂವತ್ಸರದಲ್ಲಿ **ಭಾದ್ರಪದೇ ಮಾಸೇ** ಭಾದ್ರಪದ ಮಾಸದಲ್ಲಿ **ಗುರುರವ್ಯೋಃ** ಗುರು ಮತ್ತು ರವಿಯು **ಸಿಂಹಸ್ಥಯೋಃ (ಸತ್ಯೋಃ)** ಸಿಂಹರಾಶಿಯಲ್ಲಿರಲು **ಪರೇಶಃ** ಸರ್ವೋತ್ತಮನಾದ **ಸಃ** ಆ ಕೃಷ್ಣನು **ಉದೈತ್** ಆವಿರ್ಭವಿಸಿದನೋ **ತತಃ** ಆ ನಂತರ **ಫಾಲ್ಗುನೇ** ಫಾಲ್ಗುನ ಮಾಸದಲ್ಲಿ **ಫಲ್ಗುನಃ** ಅರ್ಜುನನು **ಅಭೂತ್** ಹುಟ್ಟಿದನು **ತತಃ** ಅರ್ಜುನನು ಹುಟ್ಟಿದ ನಂತರ **ಗತೇ (ಸತಿ)** ಆ ವರ್ಷವು ಕಳೆಯುತ್ತಿರಲು **ಮಾತ್ರವತೀ** ಮಾದ್ರವತಿಯು **(ಪಾಂಡುಂ** ಪ್ರತಿ) ಪಾಂಡುರಾಜನನ್ನು ಕುರಿತು **ಬಭಾಷೇ** ಮಾತನಾಡಿದಳು.

**ತಾತ್ಪರ್ಯ** :– ಯಾವ ವರ್ಷದ ಭಾದ್ರಪದ ಮಾಸದಲ್ಲಿ ಬೃಹಸ್ಪತಿ ಮತ್ತು ಸೂರ್ಯರು ಸಿಂಹರಾಶಿಯಲ್ಲಿದ್ದರೋ ಆ ಭಾದ್ರಪದಮಾಸದಲ್ಲಿ ಕೃಷ್ಣನು ಅವತರಿಸಿದನು. ಅದೇ ವರ್ಷದ ಫಾಲ್ಗುನ ಮಾಸದಲ್ಲಿ ಅರ್ಜುನನು ಹುಟ್ಟಿದನು. ಅರ್ಜುನನು ಹುಟ್ಟಿ ಒಂದು ವರ್ಷದ ನಂತರ ಮಾದ್ರಿಯ ಪಾಂಡುರಾಜನಿಗೆ ಹೇಳಿದಳು.

**ಜಾತಾಃ ಸುತಾಸ್ತೇ ಪ್ರವಾರಾಃ ಪೃಥಾಯಾ-**
**ಮೇಕಾऽನಪತ್ಯಾऽಹಮತಃ ಪ್ರಸಾದಾತ್ ।**
**ತವೈವ ಭೂಯಾಸಮಹಂ ಸುತೇತಾ ವಿಧತ್ಸ್ವ**
**ಕುಂತೀಂ ಮಮ ಮಂತ್ರದಾತ್ರೀಮ್ ॥ ೧೨೧ ॥**

ಪದಚ್ಛೇದ :– **ಜಾತಾಃ ಸುತಾಃ ತೇ ಪ್ರವರಾಃ ಪೃಥಾಯಾಂ ಏಕಾ ಅನಪತ್ಯಾ ಅಹಂ ಅತಃ ಪ್ರಸಾದಾತ್ ತವ ಏವ ಭೂಯಸಂ ಅಹಂ ಸುತೇತಾ ವಿಧತ್ಸ್ವ ಕುಂತೀಂ ಮಮ ಮಂತ್ರದಾತ್ರೀಮ್.**

**ಅರ್ಥ** :– **ತೇ** ನಿನಗೆ **ಪೃಥಾಯಾಂ** ಕುಂತಿಯಲ್ಲಿ **ಪ್ರವರಾಃ** ಉತ್ತಮರಾದ **ಸುತಾಃ** ಮಕ್ಕಳು **ಜಾತಾಃ** ಹುಟ್ಟಿದ್ದಾರೆ **ಅಪತ್ಯಾ** ಮಕ್ಕಳಿಲ್ಲದವಳು **ಅಹಂ** ನಾನು **ಏಕಾ** ಒಬ್ಬಳೇ **ಅತಃ** ಆದ್ದರಿಂದ **ತವ** ನಿನ್ನ **ಪ್ರಸಾದಾತ್** ಅನುಗ್ರಹದಿಂದ **ಅಹಂ ಏವ** ನಾನೂ ಕೂಡ **ಸುತೇತಾ** ಮಕ್ಕಳಿಂದ ಕೂಡಿದವಳು **ಭೂಯಾಸಂ** ಆಗುತ್ತೇನೆ **ಕುಂತೀಂ** ಕುಂತಿಯನ್ನು **ಮಮ** ನನಗೆ **ಮಂತ್ರದಾತ್ರೀಂ** ಮಂತ್ರವನ್ನು ಕೊಡುವವಳನ್ನಾಗಿ **ವಿಧತ್ಸ್ವ** ಮಾಡು.

**ತಾತ್ಪರ್ಯ** :– ಮಾದ್ರಿಯು ಪಾಂಡುರಾಜನಿಗೆ ಹೇಳುತ್ತಾಳೆ – "ನಿನಗೆ ಕುಂತಿಯಲ್ಲಿ ಉತ್ತಮರಾದ ಮಕ್ಕಳು ಹುಟ್ಟಿದರು. ಆದ್ದರಿಂದ ನೀವಿಬ್ಬರೂ ಪುತ್ರವಂತರಾದಿರಿ. ಮಕ್ಕಳಿಲ್ಲದವಳು ನಾನೊಬ್ಬಳೇ. ಆದ್ದರಿಂದ ನಿನ್ನ ಅನುಗ್ರಹ ದಿಂದ ನಾನೂ ಪುತ್ರವತಿಯಾಗಲು ಬಯಸುತ್ತೇನೆ. ಅದಕ್ಕಾಗಿ ಕುಂತಿಯು ನನಗೆ ಮಂತ್ರವನ್ನು ಕೊಡುವಂತೆ ಮಾಡಬೇಕು."

**ಇತೀರಿತಃ ಪ್ರಾಹ ಪೃಥಾಂ ಸ ಮಾದ್ರ್ಯೈ**
**ದಿಶಸ್ವ ಮಂತ್ರಂ ಸುತದಂ ವರಿಷ್ಠಮ್ ।**
**ಇತ್ಯೂಚಿವಾಂಸಂ ಪತಿಮಾಹ ಯಾದವೀ**
**ದದ್ಯಾಂ ತ್ವದರ್ಥೇ ತು ಸಕೃತ್‌ಫಲಾಯ ॥ ೧೨೨ ॥**

**ಪದಚ್ಛೇದ** :– **ಇತಿ ಈರಿತಃ ಪ್ರಾಹ ಪೃಥಾಂ ಸಃ ಮಾದ್ರ್ಯೈ ದಿಶಸ್ವ ಮಂತ್ರಂ ಸುತದಂ ವರಿಷ್ಠಂ ಇತಿ ಊಚಿವಾಂಸಂ ಪತಿಂ ಆಹ ಯಾದವೀ ದದ್ಯಾಂ ತದರ್ಥೇ ತು ಸಕೃತ್ ಫಲಾಯ.**

**ಅರ್ಥ** :– **ಇತಿ** ಈ ರೀತಿಯಾಗಿ **ಈರಿತಃ** (ಮಾದ್ರಿಯಿಂದ) ಹೇಳಲ್ಪಟ್ಟ **ಸಃ** ಆ ಪಾಂಡುರಾಜನು **ಪೃಥಾಂ** (ಪ್ರತಿ) ಕುಂತಿಯನ್ನು ಕುರಿತು **ಪ್ರಾಹ** ಹೇಳಿದನು **ಮಾದ್ರ್ಯೈ** ಮಾದ್ರಿಗಾಗಿ **ಸುತದಂ** ಮಕ್ಕಳನ್ನು ಕೊಡುವ **ವರಿಷ್ಠಂ** ಶ್ರೇಷ್ಠವಾದ **ಮಂತ್ರಂ** ಮಂತ್ರವನ್ನು **ದಿಶಸ್ವ** ಕೊಡು **ಇತಿ** ಎಂದು **ಊಚಿ ವಾಂಸಂ** ಹೇಳುತ್ತಿರುವ **ಪತಿಂ** (ಪ್ರತಿ) ಗಂಡನಾದ ಪಾಂಡುರಾಜನನ್ನು ಕುರಿತು **ಯಾದವೀ** ಯದುವಂಶದ ಮಗಳಾದ ಕುಂತಿಯು **ಆಹ** ಹೇಳಿದಳು **ತ್ವದರ್ಥೇ ತು** ನಿನಗಾಗಿಯಷ್ಟೇ **ಸಕೃತ್** ಒಮ್ಮೆ **ಫಲಾಯ** ಫಲಕೊಡಲು **ದದ್ಯಾಂ** ಕೊಡುತ್ತೇನೆ.

**ತಾತ್ಪರ್ಯ** :– ಕುಂತಿಯು ಹೀಗೆ ಹೇಳಲು ಪಾಂಡುರಾಜನು ಕುಂತಿಗೆ ಹೇಳುತ್ತಾನೆ– "ಸಂತಾನವನ್ನು ಕೊಡಬಲ್ಲ ಶ್ರೇಷ್ಠವಾದ ಆ ಮಂತ್ರವನ್ನು ಮಾದ್ರಿಗೂ ಉಪದೇಶಿಸು" ಎಂದು. ಹೀಗೆ ರಾಜನು ಹೇಳಲು ಕುಂತಿಯು ಹೇಳುತ್ತಾಳೆ– "ನಿನ್ನ ಪ್ರೀತಿಗಾಗಿ ನಾನು ಆ ಮಂತ್ರವನ್ನು ಮಾದ್ರಿಗೆ ಕೊಡುತ್ತೇನೆ. ಆದರೆ ಆ ಮಂತ್ರವು ಒಮ್ಮೆ ಮಾತ್ರ ಫಲವನ್ನು ಕೊಡುತ್ತದೆ."

ಉವಾಚ ಮಾದ್ರ್ಯೈ ಸುತದಂ ಮನುಂ
ಚ ಪುನಃ ಫಲಂ ತೇ ನ ಭವಿಷ್ಯತೀತಿ ।
ಮಂತ್ರಂ ಸಮಾದಾಯ ಚ ಮದ್ರಪುತ್ರೀ
ವ್ಯಚಿಂತಯತ್ ಸ್ಯಾಂ ನು ಕಥಂ ದ್ವಿಪುತ್ರೀ ॥ ೧೨೩ ॥

ಪದಚ್ಛೇದ :– ಉವಾಚ ಮಾದ್ರ್ಯೈ ಸುತದಂ ಮನುಂ ಚ ಪುನಃ ಫಲಂ ತೇ ನ ಭವಿಷ್ಯತಿ ಇತಿ ಮಂತ್ರಂ ಸಮಾದಾಯ ಚ ಮದ್ರಪುತ್ರೀ ವ್ಯಚಿಂತಯತ್ ಸ್ಯಾಂ ನು ಕಥಂ ದ್ವಿಪುತ್ರೀ.

**ಅರ್ಥ** :– (ಸಾ) ಆ ಕುಂತಿಯು **ಮಾದ್ರ್ಯೈ** ಮಾದ್ರಿಗೆ **ಸುತದಂ** ಮಕ್ಕಳನ್ನು ಕೊಡಬಲ್ಲ **ಮನುಂ** ಮಂತ್ರವನ್ನು **ಉವಾಚ** ಉಪದೇಶಿಸಿದಳು **ತೇ** ನಿನಗೆ **ಪುನಃ** ಮತ್ತೆ **ಫಲಂ** ಫಲವು **ನ ಭವಿಷ್ಯತಿ** ಸಿಗುವುದಿಲ್ಲ **ಇತಿ ಚ** ಎಂದೂ **ಉವಾಚ** ಹೇಳಿದಳು **ಮದ್ರಪುತ್ರೀ ಚ** ಮದ್ರರಾಜನ ಮಗಳಾದ ಮಾದ್ರಿ ಯಾದರೂ **ಮಂತ್ರಂ** ಮಂತ್ರವನ್ನು **ಸಮಾದಾಯ** ಸ್ವೀಕರಿಸಿ **ಕಥಂ ನು** ಹೇಗೆ ತಾನೇ **ದ್ವಿಪುತ್ರೀ** ಎರಡು ಮಕ್ಕಳುಳ್ಳವಳು **ಸ್ಯಾಂ** ಆದೇನು (ಇತಿ) ಎಂದು **ವ್ಯಚಿಂತಯತ್** ಆಲೋಚಿಸಿದಳು.

ತಾತ್ಪರ್ಯ :– ಕುಂತಿಯು ಮಾದ್ರಿಗೆ ಮಕ್ಕಳನ್ನು ಕೊಡಬಲ್ಲ ಮಂತ್ರವನ್ನು ಉಪದೇಶಿಸಿದಳು. ಹಾಗೂ ಈ ಮಂತ್ರವು ನಿನಗೆ ಒಮ್ಮೆ ಮಾತ್ರ ಫಲವನ್ನು ಕೊಡುತ್ತದೆ ಎಂದೂ ಹೇಳಿದಳು. ಕುಂತಿಯಿಂದ ಮಂತ್ರವನ್ನು ಸ್ವೀಕರಿಸಿದ ಮಾದ್ರಿಯು ವಿಚಾರ ಮಾಡಿದಳು ಯಾವ ರೀತಿಯಿಂದ ನಾನು ಇಬ್ಬರು ಮಕ್ಕಳನ್ನು ಪಡೆಯಬಲ್ಲೆ ಎಂದು.

ಸದಾಽವಿಯೋಗೌ ದಿವಿಜೇಷು ದಸ್ರೌ.
ನ ಚೈತಯೋರ್ನಾಮಭೇದಃ ಕ್ವಚಿದ್ಧಿ ।
ಏಕಾ ಭಾರ್ಯಾ ಸೈತಯೋರಪ್ಯುಷಾ ಹಿ
ತದಾಯಾತಃ ಸಕೃದಾವರ್ತನಾದ್ ದೌ ॥ ೧೨೪ ॥

ಪದಚ್ಛೇದ :– ಸದಾ ಅವಿಯೋಗೌ ದಿವಿಜೇಷು ದಸ್ರೌ ನ ಚ ಏತಯೋಃ ನಾಮಭೇದಃ ಕ್ವಚಿತ್ ಹಿ ಏಕಾ ಭಾರ್ಯಾ ಸಾ ಏತಯೋಃ ಅಪಿ ಉಷಾಃ ಹಿ ತತ್ ಆಯಾತಃ ಸಕೃತ್ ಆವರ್ತನಾತ್ ದ್ವೌ

**ಅರ್ಥ** :– **ದಿವಿಜೇಷು** ದೇವತೆಗಳಲ್ಲಿ **ದಸ್ರೌ** ಅಶ್ವಿನಿದೇವತೆಗಳು ಸದಾ ಯಾವಾಗಲೂ **ಅವಿಯೋಗೌ** ವಿಯೋಗರಹಿತರಾದವರು **ಚ** ಮತ್ತು **ಏತಯೋಃ** ಇವರಿಬ್ಬರಿಗೆ **ಕ್ವಚಿತ್** ಎಲ್ಲಿಯೂ **ನಾಮಭೇದಃ** ಹೆಸರಿನಿಂದ ಭೇದವು **ನ ಹಿ** ಇಲ್ಲವಷ್ಟೆ **ಏತಯೋಃ** ಇವರಿಬ್ಬರಿಗೆ **ಭಾರ್ಯಾ ಅಪಿ** ಹೆಂಡತಿಯೂ ಕೂಡ **ಸಾ** ಆ **ಉಷಾಃ** ಉಷೆಯು **ಏಕಾ ಹಿ** ಒಬ್ಬಳೇ **ತತ್** ಆದ್ದರಿಂದ **ಸಕೃತ್** ಒಮ್ಮೆ **ಆವರ್ತನಾತ್** ಮಂತ್ರಪಠಣದಿಂದಲೇ **ದ್ವೌ** ಅಶ್ವಿನಿದೇವತೆಗಳಿಬ್ಬರೂ **ಆಯಾತಃ** ಬರುವರು.

**ತಾತ್ಪರ್ಯ** :– ಮಾದ್ರಿಯು ವಿಚಾರ ಮಾಡುತ್ತಾಳೆ– "ದೇವತೆಗಳಲ್ಲಿ ಅಶ್ವಿನಿದೇವತೆಗಳು ಒಬ್ಬರನ್ನೊಬ್ಬರು ಬಿಟ್ಟಿರುವುದೇ ಇಲ್ಲ, ಅವರಿಗೆ ಹೆಸರಿನಲ್ಲಿಯೂ ಭೇದವಿಲ್ಲ, ಇಬ್ಬರ ಹೆಸರೂ ಒಂದೇ ಆಗಿದೆ. ಅವರಿಬ್ಬರ ಹೆಂಡತಿಯೂ ಉಷಾದೇವಿಯೊಬ್ಬಳೇ ಆಗಿದ್ದಾಳೆ. ಆದ್ದರಿಂದ ಮಂತ್ರವನ್ನು ಒಮ್ಮೆ ಪಠಿಸಿದರೂ ಸಾಕು ಇಬ್ಬರೂ ಬರುತ್ತಾರೆ. ("ಸಾ" ಎಂದರೆ ಸಕಾರಾಂತ ಶಬ್ದದಿಂದ ವಾಚ್ಯಳು ಎಂದು ಅರ್ಥ, ಆಕಾರಾಂತ ಶಬ್ದವಾಚ್ಯಳಾದವಳು ಅನಿರುದ್ಧಪತ್ನಿಯಾದ ಉಷಾ ಬೇರೆಯೇ ಇದ್ದಳೆ– ಜನಾರ್ದನೀಯ).

**ಇತೀಕ್ಷಂತ್ಯಾಽಽಕಾರಿತಾವಶ್ವಿನೌ ತೌ**
**ಶೀಘ್ರಂ ಪ್ರಾಪ್ತೌ ಪುತ್ರಕೌ ತತ್ಪ್ರಸೂತೌ ।**
**ತಾವೇವ ದೇವೌ ನಕುಲಃ ಪೂರ್ವಜಾತಃ**
**ಸಹದೇವೋಽಭೂತ್ ಪಶ್ಚಿಮಸ್ತೌ ಯಮೌ ಚ ॥ ೧೨೫ ॥**

ಪದಚ್ಛೇದ :– **ಇತಿ ಈಕ್ಷಂತ್ಯಾ ಆಕಾರಿತೌ ಅಶ್ವಿನೌ ತೌ ಶೀಘ್ರಂ ಪ್ರಾಪ್ತೌ ಪುತ್ರಕೌ ತತ್ಪ್ರಸೂತೌ ತೌ ಏವ ದೇವೌ ನಕುಲಃ ಪೂರ್ವಜಾತಃ ಸಹದೇವಃ ಅಭೂತ್ ಪಶ್ಚಿಮಃ ತೌ ಯಮೌ ಚ.**

**ಅರ್ಥ** :– **ಇತಿ** ಹೀಗೆ **ಈಕ್ಷಂತ್ಯಾ** ವಿಚಾರ ಮಾಡುವ ಮಾದ್ರಿಯಿಂದ **ಆಕಾರಿತೌ** ಒಟ್ಟಿಗೇ ಆಹ್ವಾನಿಸಲ್ಪಟ್ಟ **ತೌ** ಆ **ಅಶ್ವಿನೌ** ಅಶ್ವಿನಿದೇವತೆಗಳನ್ನು **ಶೀಘ್ರಂ** ಶೀಘ್ರವಾಗಿ **ಪ್ರಾಪ್ತೌ** (ಬಭೂವತುಃ) ಬಂದರು **ತೌ** ಆ **ದೇವೌ ಏವ** ಅಶ್ವಿನಿದೇವತೆಗಳೇ **ಪುತ್ರಕೌ** (ಸಂತೌ) ಮಕ್ಕಳಾಗಿ **ತತ್ಪ್ರಸೂತೌ** (ಬಭೂವತುಃ) ಆ ಮಾದ್ರಿಯಲ್ಲಿ ಹುಟ್ಟಿದರು. (ತಯೋಃ ಮಧ್ಯೇ) ಅವರಿಬ್ಬರಲ್ಲಿ **ನಕುಲಃ** ನಕುಲನು **ಪೂರ್ವಜಾತಃ** ಮೊದಲು ಹುಟ್ಟಿದವನು

**ಸಹದೇವಃ** ಸಹದೇವನು **ಪಶ್ಚಿಮಃ** ನಂತರದವನಾಗಿ **ಅಭೂತ್** ಹುಟ್ಟಿದನು. **ತೌ ಚ** ಹುಟ್ಟಿದ ಅವರಿಬ್ಬರೂ ಕೂಡ **ಯಮೌ (ಅಸ್ತಾಂ)** ಅವಳಿಗಳೇ ಆಗಿದ್ದರು.

**ತಾತ್ಪರ್ಯ** :– ಹೀಗೆ ವಿಚಾರಮಾಡಿ ಮಾದ್ರಿಯು ಮಂತ್ರವನ್ನು ಪಠಿಸಿ ಅಶ್ವಿನಿದೇವತೆಗಳನ್ನು ಕರೆದಳು. ಒಮ್ಮೆ ಮಂತ್ರದ ಆವೃತ್ತಿಯಿಂದಲೇ ಇಬ್ಬರೂ ಬಂದರು. ಸ್ವತಃ ಅಶ್ವಿನಿದೇವತೆಗಳೇ ಮಕ್ಕಳಾಗಿ ಮಾದ್ರಿಯಲ್ಲಿ ಹುಟ್ಟಿದರು. ಅವರಿಬ್ಬರಲ್ಲಿ ನಕುಲನು ಮೊದಲು ಹುಟ್ಟಿದನು. ನಂತರ ಸಹದೇವನು ಹುಟ್ಟಿದನು. ಅಶ್ವಿನಿದೇವತೆಗಳಂತೆಯೇ ನಕುಲ-ಸಹದೇವರು ಅವಳಿಗಳಾಗಿದ್ದರು.

**ಪುನರ್ಮನೋಃ ಫಲವತ್ತ್ವಾಯ ಮಾದ್ರೀ**
**ಸಂಪ್ರಾರ್ಥಯಾಮಾಸ ಪತಿಂ ತದುಕ್ತಾ ।**
**ಪೃಥಾಽವಾದೀತ್ ಕುಟಿಲೈಷಾ ಮದಾಜ್ಞಾಮೃತೇ**
**ದೇವಾವಹ್ವಯಾಮಾಸ ದಸ್ರೌ ॥ ೧೨೬ ॥**

ಪದಚ್ಛೇದ :– ಪುನಃ ಮನೋಃ ಫಲವತ್ತ್ವಾಯ ಮಾದ್ರೀ ಸಂಪ್ರಾರ್ಥಯಾಮಾಸ ಪತಿಂ ತದುಕ್ತಾ ಪೃಥಾ ಅವಾದೀತ್ ಕುಟಿಲಾ ಏಷಾ ಮದಾಜ್ಞಾಂ ಋತೇ ದೇವೌ ಆಹ್ವಯಾಮಾಸ ದಸ್ರೌ.

**ಅರ್ಥ** :– **ಮಾದ್ರೀ** ಮಾದ್ರಿಯು **ಪುನಃ** ಮತ್ತೊಮ್ಮೆ **ಮನೋಃ** ಮಂತ್ರದ **ಫಲವತ್ತ್ವಾಯ** ಫಲಕ್ಕಾಗಿ **ಪತಿಂ** ಗಂಡನಾದ ಪಾಂಡುರಾಜನನ್ನು **ಸಂಪ್ರಾರ್ಥಯಾಮಾಸ** ಪ್ರಾರ್ಥಿಸಿದಳು **ತದುಕ್ತಾ** ಆ ಪಾಂಡುರಾಜನಿಂದ ಹೇಳಲ್ಪಟ್ಟ **ಪೃಥಾ** ಕುಂತಿಯು **ಅವಾದೀತ್** ಹೇಳಿದಳು **ಕುಟಿಲಾ** ಮೋಸಗಾರಳಾದ **ಏಷಾ** ಈ ಮಾದ್ರಿಯು **ಮದಾಜ್ಞಾಂ** ನನ್ನ ಆಜ್ಞೆಯು **ಋತೇ** ಇಲ್ಲದೇ **ದೇವೌ** ಕ್ರೀಡಾದಿಗುಣವಿಶಿಷ್ಟರಾದ **ದಸ್ರೌ** ಅಶ್ವಿನಿಗಳನ್ನು **ಆಹ್ವಯಾಮಾಸ** ಆಹ್ವಾನಿಸಿದಳು.

**ತಾತ್ಪರ್ಯ** :– ಇಬ್ಬರು ಮಕ್ಕಳಾದ ನಂತರ ಮಾದ್ರಿಯು ''ಮತ್ತೊಮ್ಮೆ ಆ ಮಂತ್ರವು ಫಲಕೊಡುವಂತೆ ಮಾಡು'' ಎಂದು ಗಂಡನನ್ನು ಪ್ರಾರ್ಥಿಸಿದಳು. ಪಾಂಡುರಾಜನು ಕುಂತಿಗೆ ಮಂತ್ರವು ಫಲಪ್ರದವಾಗುವಂತೆ ಮಾಡೆಂದು ಕೇಳಿದಾಗ ಕುಂತಿಯು ಪಾಂಡುರಾಜನಿಗೆ ಹೇಳುತ್ತಾಳೆ– ''ಮೋಸಗಾರಳಾದ ಈ ಮಾದ್ರಿಯು ನನ್ನ ಅಪ್ಪಣೆಯಿಲ್ಲದೇ ಅಶ್ವಿನಿದೇವತೆಗಳನ್ನು ಆಹ್ವಾನಿಸಿದಳು.''

ಅತೋ ವಿರೋಧಂ ಚ ಮದಾತ್ಮಜಾನಾಂ
ಕುರ್ಯಾದೇಷೇತ್ಯೇವ ಭೀತಾಂ ನ ಮಾಂ ತ್ವಮ್ ।
ನಿಯೋಕ್ತುಮರ್ಹಃ ಪುನರೇವ ರಾಜನ್ನಿ-
ತೀರಿತೋಽಸೌ ವಿರರಾಮ ಕ್ಷಿತೀಶಃ ॥ ೧೨೭ ॥

ಪದಚ್ಛೇದ :– ಅತಃ ವಿರೋಧಂ ಚ ಮದಾತ್ಮಜಾನಾಂ ಕುರ್ಯಾತ್ ಏಷಾ ಇತಿ ಏವ ಭೀತಾಂ ನ ಮಾಂ ತ್ವಂ ನಿಯೋಕ್ತುಂ ಅರ್ಹಃ ಪುನಃ ಏವ ರಾಜನ್ ಇತಿ ಈರಿತಃ ಅಸೌ ವಿರರಾಮ ಕ್ಷಿತೀಶಃ.

ಅರ್ಥ :– ಅತಃ ಅದರಿಂದ (ಮಾದ್ರಿಗೆ ಮತ್ತೊಮ್ಮೆ ಮಕ್ಕಳಾಗುವುದರಿಂದ) ಏಷಾ ಚ ಈ ಮಾದ್ರಿಯಾದರೂ ಮದಾತ್ಮಜಾನಾಂ ನನ್ನ ಮಕ್ಕಳಿಗೆ ವಿರೋಧಂ ವಿರೋಧವನ್ನು ಕುರ್ಯಾತ್ ಏವ ಮಾಡಿಯೇ ಮಾಡುತ್ತಾಳೆ ಇತಿ ಈ ಕಾರಣದಿಂದ ರಾಜನ್ ಹೇ ರಾಜನೇ! ಭೀತಾಂ ಭಯಗೊಂಡ ಮಾಂ ನನ್ನನ್ನು ತ್ವಂ ನೀನು ಪುನಃ ಮತ್ತೊಮ್ಮೆ ನಿಯೋಕ್ತುಂ ನಿಯೋಜಿಸಲು ನ ಅರ್ಹಃ ಏವ ಅರ್ಹನಾಗುವುದೇ ಇಲ್ಲ ಇತಿ ಹೀಗೆ ಈರಿತಃ ಹೇಳಲ್ಪಟ್ಟ ಅಸೌ ಈ ಕ್ಷಿತೀಶಃ ರಾಜನು ವಿರರಾಮ ಸುಮ್ಮನಾದನು.

ತಾತ್ಪರ್ಯ :– ಕುಂತಿಯು ರಾಜನಿಗೆ ಹೇಳುತ್ತಿದ್ದಾಳೆ– "ಈ ಮಾದ್ರಿಗೆ ಮತ್ತೊಮ್ಮೆ ಮಕ್ಕಳಾದರೆ ಅವಳು ಖಂಡಿತವಾಗಿಯೂ ನನ್ನ ಮಕ್ಕಳಿಗೆ ವಿರೋಧ ಮಾಡುತ್ತಾಳೆ. ಆದ್ದರಿಂದ ಭೀತಳಾದ ನನ್ನನ್ನು ಪುನಃ ಮಂತ್ರವು ಫಲ ಕೊಡುವಂತೆ ಮಾಡಲು ನಿಯೋಜಿಸಬೇಡ." ಹೀಗೆ ಕುಂತಿಯು ಹೇಳಲು ರಾಜನು ಸುಮ್ಮನಾದನು.

ವಿಶೇಷನಾಮ್ನೈವ ಸಮಾಹುತಾಃ ಸುರಾ ದದ್ಯುಃ
ಸುತಾನ್ ಇತ್ಯವಿಶೇಷಿತಂ ತಯೋಃ ।
ವಿಶೇಷನಾಮಾಪಿ ಸಮಾಹ್ವಯತ್ ತೌ
ಮಂತ್ರಾವೃತ್ತಿರ್ನಾಮಭೇದೇಽಸ್ಯ ಚೋಕ್ತಾ ॥ ೧೨೮ ॥

ಪದಚ್ಛೇದ :– ವಿಶೇಷನಾಮ್ನಾ ಏವ ಸಮಾಹುತಾಃ ಸುರಾಃ ದದ್ಯುಃ ಸುತಾನ್ ಇತಿ ಅವಿಶೇಷಿತಂ ತಯೋಃ ವಿಶೇಷನಾಮ ಅಪಿ ಸಮಾಹ್ವಯತ್ ತೌ ಮಂತ್ರಾವೃತ್ತಿಃ ನಾಮಭೇದೇ ಅಸ್ಯ ಚ ಉಕ್ತಾ.

**ಅರ್ಥ** :– **ವಿಶೇಷನಾಮ್ನಾ** ವಿಶೇಷವಾದ ಹೆಸರಿನಿಂದ **ಸಮಾಹುತಾಃ** ಆಹ್ವಾನಿಸಲ್ಪಟ್ಟ **ಸುರಾಃ ಏವ** ದೇವತೆಗಳೇ **ಸುತಾನ್** ಮಕ್ಕಳನ್ನು **ದದ್ಯುಃ** ಕೊಡುತ್ತಾರೆ **ಇತಿ** ಎಂದು **(ಯತಃ)** ಯಾವ ಕಾರಣದಿಂದ ನಿಯಮ ವಿದೆಯೋ **ತಯೋಃ** ಆ ಅಶ್ವಿನಿಗಳ **ವಿಶೇಷನಾಮ ಅಪಿ ನಾಸತ್ಯ** ದಸ್ರ ಎಂಬ ವಿಶೇಷನಾಮವೂ ಕೂಡ **ಅವಿಶೇಷಿತಂ (ಭವತಿ)** ಅವಿಶಿಷ್ಟವೇ ಆಗಿದೆಯೋ **(ತಸ್ಮಾತ್)** ಆದ್ದರಿಂದ **ತೌ** ಆ ಅಶ್ವಿನಿದೇವತೆಗಳನ್ನು **ಸಮಾಹ್ವಯತ್** ಆಹ್ವಾನಿಸಿದಳು **ಅಸ್ಯ** ಆಹ್ವಾನಿಸಲ್ಪಡುವ ದೇವತೆಯ **ನಾಮಭೇದೇ (ಸತಿ) ಚ** ಹೆಸರಿನಲ್ಲಿ ಭೇದವಿದ್ದಲ್ಲಿ ಮಾತ್ರ **ಮಂತ್ರಾವೃತ್ತಿಃ** ಮಂತ್ರದ **ಪುನಃ** ಪಠನವು **ಉಕ್ತಾ** ಹೇಳಲ್ಪಟ್ಟಿದೆ.

**ತಾತ್ಪರ್ಯ** :– ಮಾದ್ರಿಯು ಒಮ್ಮೆ ಮಂತ್ರದ ಪಠನದಿಂದಲೇ ಅನೇಕ ಪುತ್ರರನ್ನು ಪಡೆಯಬೇಕೆಂದು ಅಶ್ವಿನಿಗಳನ್ನು ಕರೆದಳು. ಹಾಗಿದ್ದಲ್ಲಿ ಅವಳು ಮರುತ್, ರುದ್ರ ಮೊದಲಾದ ಹೆಸರನ್ನೇ ಹೇಳಬಹುದಿತ್ತು. ಏಕೆಂದರೆ ಮರುತ್, ರುದ್ರ ಮುಂತಾದ ಹೆಸರುಗಳು ಅನೇಕ ದೇವತೆಗಳಿಗೆ ಸಂಬಂಧಿ ಸಿದ್ದು ಆಗ ಬಹಳ ಮಂದಿ ದೇವತೆಗಳಿಂದ ಬಹಳ ಮಂದಿ ಮಕ್ಕಳನ್ನು ಪಡೆಯಬಹುದಿತ್ತು. ಮಾದ್ರಿಯು ಹಾಗೇಕೆ ಮಾಡಲಿಲ್ಲ? ಎಂಬ ಪ್ರಶ್ನೆಗೆ ಆಚಾರ್ಯರು ಈ ಶ್ಲೋಕದಲ್ಲಿ ಉತ್ತರಿಸುತ್ತಿದ್ದಾರೆ– ದೇವತೆಗಳನ್ನು ಅವರ ವಿಶೇಷವಾದ (ಅವರಿಗೆ ಮಾತ್ರ ಸಂಬಂಧಿಸಿದ ಮತ್ತೊಬ್ಬರಿಗೆ ಸಂಬಂಧ ಪಡದ) ಹೆಸರಿನಿಂದ ಕರೆದರೆ ಮಾತ್ರ ಬಂದು ಮಕ್ಕಳನ್ನು ಕೊಡುತ್ತಾರೆ. ಇಂದ್ರ, ವಾಯು, ಯಮ ಮೊದಲಾದ ಹೆಸರುಗಳು ಕೇವಲ ಒಬ್ಬ ದೇವತೆಗೆ ಮಾತ್ರ ಸಂಬಂಧಿಸಿದ್ದಾಗಿದೆ. ಆದರೆ ಮರುತ್, ರುದ್ರ ಮೊದಲಾದ ನಾಮಗಳು ಅನೇಕರಿಗೆ ಸಂಬಂಧಪಟ್ಟದ್ದು. ಅಂತಹ ಹೆಸರಿನಿಂದ ದೇವತೆಗಳನ್ನು ಕರೆದರೆ ಇವಳು ಯಾರನ್ನು ಕರೆಯುತ್ತಿದ್ದಾಳೆ ಎಂದು ನಿಶ್ಚಯಮಾಡಲಾಗದೇ ಯಾರೂ ಬರುವುದಿಲ್ಲ. ಹಾಗಾಗಿ ಅಶ್ವಿನಿದೇವತೆಗಳನ್ನು ಕರೆದಳು.

ಪುನಃ ಇಲ್ಲಿ ಪ್ರಶ್ನೆ ಉದ್ಭವಿಸುತ್ತದೆ– ಮರುತ್, ರುದ್ರ ಮೊದಲಾದ ನಾಮಗಳಂತೆ ಅಶ್ವಿನಿ ಎಂಬ ನಾಮವೂ ಒಬ್ಬರಿಗೆ ಮಾತ್ರ ಸೀಮಿತವಾದದ್ದಲ್ಲ. ಇಬ್ಬರನ್ನೂ ಅಶ್ವಿನಿಗಳೆಂದೇ ಕರೆಯಲಾಗುತ್ತದೆ. ಹಾಗೆಯೇ ನಾಸತ್ಯ, ದಸ್ರ ಎಂಬ ನಾಮವೂ ಪ್ರತ್ಯೇಕವಾಗಿ ಇಬ್ಬರನ್ನೂ ಹೇಳುತ್ತದೆ. ಹಾಗಿದ್ದಲ್ಲಿ ಅವರನ್ನು ಹೇಗೆ ಆಹ್ವಾನಿಸಿದಳು? ಎಂದು. ಇದಕ್ಕೆ ಉತ್ತರ– ಅಶ್ವಿನಿಗಳಿಗೆ ವಿಶಿಷ್ಟವಾದ

ಒಂದು ನಾಮವಿಲ್ಲ. ಹೇಗೆ ಇಂದ್ರ, ವಾಯು, ಯಮ ಮೊದಲಾದವರಿಗೆ ದೇವ ಎಂಬ ಸಾಮಾನ್ಯನಾಮದ ಜೊತೆಗೇ ಇಂದ್ರ, ವಾಯು, ಯಮ ಮೊದಲಾದ ಅಸಾಧಾರಣ ನಾಮವೂ ಇದೆಯೋ ಹಾಗೆಯೇ ಅಶ್ವಿನಿದೇವತೆಗಳಿಗೆ ವಿಶೇಷನಾಮವು ಇಲ್ಲ. ಅಶ್ವಿನಿ ಶಬ್ದದಂತೆ ನಾಸತ್ಯ, ದಸ್ರ ಎಂಬ ನಾಮಗಳೂ ಇಬ್ಬರನ್ನೂ ತಿಳಿಸುತ್ತವೆ. ಅದಕ್ಕೆ ಉದಾಹರಣೆ ''ಪುಷ್ಪದಂತ'' ಎಂಬ ನಾಮ. ಇಲ್ಲಿ ಪುಷ್ಪ ಎಂಬುದು ಸೂರ್ಯನನ್ನು ಹೇಳುತ್ತದೆ, ದಂತ ಎಂಬುದು ಚಂದ್ರನನ್ನು ಹೇಳುತ್ತದೆ. ಪುಷ್ಪದಂತ ಎಂಬ ನಾಮದಿಂದ ಸೂರ್ಯಚಂದ್ರರಿಬ್ಬರನ್ನೂ ಒಟ್ಟಿಗೇ ಆಹ್ವಾನಿಸಬೇಕು. ಕೇವಲ ಒಬ್ಬರನ್ನು ಹೇಳಲಾಗುವುದಿಲ್ಲ. ಆದ್ದರಿಂದ ಪುಷ್ಪದಂತ ಎಂಬ ನಾಮವು ಸೂರ್ಯ-ಚಂದ್ರರಿಗೆ ಸಾಧಾರಣ ನಾಮವಾಗಿದೆ. ಅದರಂತೆಯೇ ಅಶ್ವಿನಿಗಳ ನಾಮವೂ ಸಾಧಾರಣವೇ ಆಗಿದೆ. ಇಬ್ಬರನ್ನೂ ಒಟ್ಟಿಗೇ ಆಹ್ವಾನಿಸಬೇಕಾದ್ದರಿಂದ.

''ಪುಷ್ಪದಂತ'' ಎಂಬ ನಾಮದಿಂದಾಗಲೀ ನಾಸತ್ಯ, ದಸ್ರ ಎಂಬ ನಾಮದಿಂದಾಗಲೀ ಇಬ್ಬರನ್ನೂ ಒಟ್ಟಿಗೇ ಆಹ್ವಾನಿಸಬೇಕಾದರೂ ಅವೆರಡಕ್ಕೂ ಸ್ವಲ್ಪ ವ್ಯತ್ಯಾಸವಿದೆ. ಪುಷ್ಪವೆಂಬ ಪದವು ಕೇವಲ ಸೂರ್ಯನನ್ನು ಹೇಳುತ್ತದೆ, ದಂತ ಎಂಬ ಪದವು ಕೇವಲ ಚಂದ್ರನನ್ನು ಹೇಳುತ್ತದೆ. ಆದರೆ ನಾಸತ್ಯ ಎಂಬ ಪದವಾಗಲೀ ದಸ್ರ ಎಂಬ ಪದವಾಗಲೀ ಇಬ್ಬರನ್ನೂ ತಿಳಿಸುತ್ತದೆ. ಎಂಬ ನಾಮವು ಇಬ್ಬರನ್ನೂ ಕರೆಯುತ್ತದೆ. ಆದರೆ ನಾಸತ್ಯ, ದಸ್ರ ಎಂಬ ನಾಮಗಳು ಇಬ್ಬರನ್ನೂ ತಿಳಿಸುವಂತೆ ಪ್ರತ್ಯೇಕವಾಗಿ ಒಬ್ಬರನ್ನೂ ಹೇಳುತ್ತದೆ. ಹಾಗಾಗಿ ನಾಸತ್ಯ, ದಸ್ರ ಎಂಬ ನಾಮಗಳು ಅಸಾಧಾರಣನಾಮದಂತೆ ಸಾಧಾರಣ ನಾಮವೂ ಆಗಿದೆ. ಆದ್ದರಿಂದ ಮಾದ್ರಿಯು ನಾಸತ್ಯ ಅಥವಾ ದಸ್ರ ಎಂಬ ನಾಮದಿಂದ ಅಶ್ವಿನಿಗಳನ್ನು ಆಹ್ವಾನಿಸಿದಳು ಎಂದು ತಿಳಿಯಬೇಕು.

ಇಬ್ಬರನ್ನು ಆಹ್ವಾನಿಸುವ ಉದ್ದೇಶವಿದ್ದಲ್ಲಿ ಒಂದೇ ಬಾರಿ ಮಂತ್ರವನ್ನು ಹೇಗೆ ಪಠಿಸಿದಳು? ಎಂಬ ಪ್ರಶ್ನೆಗೂ ಆಚಾರ್ಯರು ಉತ್ತರಿಸುತ್ತಾರೆ– ದೇವತೆಗಳ ನಾಮ ಬೇರೆಯಾಗಿದ್ದಲ್ಲಿ ಮಾತ್ರ ಮಂತ್ರವನ್ನು ಪಠಿಸಬೇಕು; ಹೊರತು ದೇವತೆಗಳು ಬೇರೆಯಾಗಿದ್ದಲ್ಲ.

**ವಿಶೇಷ ವಿಚಾರ** :– ಮೇಲಿನ ಎಲ್ಲ ವಿಷಯಗಳನ್ನು ತಿಳಿಯಲು ವಾದಿರಾಜೀಯ ವ್ಯಾಖ್ಯಾನವನ್ನು ಓದಿ.

**ಯುಧಿಷ್ಠಿರಾದ್ಯೇಷು ಚತುರ್ಷ ವಾಯುಃ**
**ಸಮಾವಿಷ್ಟಃ ಫಲ್ಗುನೇಽತೋ ವಿಶೇಷಾತ್ ।**
**ಯುಧಿಷ್ಠಿರೇ ಸೌಮ್ಯರೂಪೇಣ ವಿಷ್ಟೋ**
**ವೀರೇಣ ರೂಪೇಣ ಧನಂಜಯೇಽಸೌ ॥ ೧೨೯ ॥**

ಪದಚ್ಛೇದ :– ಯುಧಿಷ್ಠಿರಾದ್ಯೇಷು ಚತುರ್ಷು ವಾಯುಃ ಸಮಾವಿಷ್ಟಃ ಫಲ್ಗುನೇ ಅತಃ ವಿಶೇಷಾತ್ ಯುಧಿಷ್ಠಿರೇ ಸೌಮ್ಯರೂಪೇಣ ವಿಷ್ಟಃ ವೀರೇಣ ರೂಪೇಣ ಧನಂಜಯೇ ಅಸೌ.

ಅರ್ಥ :– ವಾಯುಃ ಮುಖ್ಯಪ್ರಾಣನು ಯುಧಿಷ್ಠಿರಾದ್ಯೇಷು (ಭೀಮನನ್ನು ಬಿಟ್ಟು) ಯುಧಿಷ್ಠಿರನೇ ಮೊದಲಾದ ಚತುರ್ಷು ನಾಲ್ಕು ಜನರಲ್ಲಿ ಸಮಾವಿಷ್ಟಃ (ಅಭೂತ್) ಪ್ರವಿಷ್ಟನಾಗಿದ್ದನು ಅತಃ ಆ ನಾಲ್ಕು ಜನರಿಗಿಂತ ವಿಶೇಷಾತ್ ವಿಶೇಷವಾಗಿ ಫಲ್ಗುನೇ ಅರ್ಜುನನಲ್ಲಿ (ಸಮಾವಿಷ್ಟಃ ಅಭೂತ್) ಆವಿಷ್ಟನಾಗಿದ್ದನು ಅಸೌ ಈ ವಾಯುವು ಯುಧಿಷ್ಠಿರೇ ಯುಧಿಷ್ಠಿರನಲ್ಲಿ ಸೌಮ್ಯರೂಪೇಣ ಶಾಂತರೂಪದಿಂದ ವಿಷ್ಟಃ (ಅಭೂತ್) ಪ್ರವೇಶಿಸಿದನು ವೀರೇಣ ರೂಪೇಣ ವೀರರೂಪದಿಂದ ಧನಂಜಯೇ ಅರ್ಜುನನಲ್ಲಿ ವಿಷ್ಟಃ (ಅಭೂತ್) ಪ್ರವೇಶಿಸಿದನು.

ತಾತ್ಪರ್ಯ :– ಮುಖ್ಯಪ್ರಾಣನು ಭೀಮನನ್ನು ಬಿಟ್ಟು ಉಳಿದ ಯುಧಿಷ್ಠಿರಾದಿ ನಾಲ್ಕು ಜನರಲ್ಲಿ ಪ್ರವೇಶಿಸಿದ್ದನು. ಅವರಲ್ಲೂ ಅರ್ಜುನನಲ್ಲಿ ವಿಶೇಷವಾಗಿ ಪ್ರವೇಶಿಸಿದ್ದನು. ಯುಧಿಷ್ಠಿರನಲ್ಲಿ ಶಾಂತರೂಪದಿಂದ ಹಾಗೂ ಅರ್ಜುನನಲ್ಲಿ ವೀರರೂಪದಿಂದ ಪ್ರವೇಶಿಸಿದ್ದನು.

**ಶೃಂಗಾರರೂಪಂ ಕೇವಲಂ ದರ್ಶಯಾನೋ**
**ವಿವೇಶ ವಾಯುರ್ಯಮಜೌ ಪ್ರಧಾನಃ ।**
**ಶೃಂಗಾರಕೈವಲ್ಯಮಭೀಪ್ಸಮಾನಃ ಪಾಂಡುರ್ಹಿ**
**ಪುತ್ರಂ ಚಕಮೇ ಚತುರ್ಥಮ್ ॥ ೧೩೦ ॥**

ಪದಚ್ಛೇದ :– ಶೃಂಗಾರರೂಪಂ ಕೇವಲಂ ದರ್ಶಯಾನಃ ವಿವೇಶ ವಾಯುಃ ಯಮಜೌ ಪ್ರಧಾನಃ ಶೃಂಗಾರಕೈವಲ್ಯಂ ಅಭೀಪ್ಸಮಾನಃ ಪಾಂಡುಃ ಹಿ ಪುತ್ರಂ ಚಕಮೇ ಚತುರ್ಥಮ್.

**ಅರ್ಥ** :- **ಪ್ರಧಾನಃ ವಾಯುಃ** ಮುಖ್ಯಪ್ರಾಣನು **ಕೇವಲಂ** ಮುಖ್ಯವಾಗಿ **ಶೃಂಗಾರರೂಪಂ** ಸೌಂದರ್ಯವುಳ್ಳ ರೂಪವನ್ನು **ದರ್ಶಯಾನಃ (ಸನ್)** ತೋರಿಸುವವನಾಗಿ **ಯಮಜೌ** ಅವಳಿಗಳಾದ ನಕುಲ-ಸಹದೇವ ರನ್ನು **ವಿವೇಶ** ಪ್ರವೇಶಿಸಿದನು **ಯತಃ** ಯಾವ ಕಾರಣದಿಂದ **ಪಾಂಡುಃ** ಪಾಂಡುರಾಜನು **ಶೃಂಗಾರಕೈವಲ್ಯಂ** ಸೌಂದರ್ಯವೇ ಪ್ರಧಾನವಾದವನನ್ನು **ಅಭೀಪ್ಸಮಾನಃ (ಸನ್)** ಬಯಸುವವನಾಗಿ **ಚತುರ್ಥಂ** ನಾಲ್ಕನೆಯ **ಪುತ್ರಂ** ಮಗನನ್ನು **ಚಕಮೇ** ಬಯಸಿದ್ದನು.

**ತಾತ್ಪರ್ಯ** :- ಮುಖ್ಯಪ್ರಾಣನು ಸೌಂದರ್ಯಪ್ರಧಾನವಾದ ರೂಪ ದಿಂದ ಅವಳಿಗಳಾದ ನಕುಲ-ಸಹದೇವರನ್ನು ಪ್ರವೇಶಿಸಿದನು. ಏಕೆಂದರೆ ಪಾಂಡುರಾಜನು ಸೌಂದರ್ಯವೇ ಪ್ರಧಾನವಾದ ನಾಲ್ಕನೆಯ ಮಗನನ್ನು ಬಯಸಿದ್ದನು.

**ಶೃಂಗಾರರೂಪೋ ನಕುಲೇ ವಿಶೇಷಾತ್**
**ಸುನೀತಿರೂಪಃ ಸಹದೇವಂ ವಿವೇಶ ।**
**ಗುಣೈಃ ಸಮಸ್ತೈಃ ಸ್ವಯಮೇವ ವಾಯು-**
**ರ್ಬಭೂವ ಭೂಮೌ ಜಗದಂತರಾತ್ಮಾ ॥ ೧೩೧ ॥**

ಪದಚ್ಛೇದ :- **ಶೃಂಗಾರರೂಪಃ ನಕುಲೇ ವಿಶೇಷಾತ್ ಸುನೀತಿರೂಪಃ ಸಹದೇವಂ ವಿವೇಶ ಗುಣೈಃ ಸಮಸ್ತೈಃ ಸ್ವಯಂ ಏವ ವಾಯುಃ ಬಭೂವ ಭೂಮೌ ಜಗದಂತರಾತ್ಮಾ.**

**ಅರ್ಥ** :- **(ತಸ್ಮಾತ್)** ಆದ್ದರಿಂದ **ವಾಯುಃ** ಮುಖ್ಯಪ್ರಾಣನು **ಶೃಂಗಾರರೂಪಃ (ಸನ್)** ಸೌಂದರ್ಯವುಳ್ಳ ರೂಪವುಳ್ಳವನಾಗಿ **ವಿಶೇಷಾತ್** ವಿಶೇಷವಾಗಿ **ನಕುಲೇ** ನಕುಲನಲ್ಲಿ **ವಿವೇಶ** ಪ್ರವೇಶಿಸಿದನು **ಸುನೀತಿರೂಪಃ (ಸನ್)** ಒಳ್ಳೆಯ ನೀತಿಯ ರೂಪದಿಂದ **ಸಹದೇವಂ** ಸಹದೇವನನ್ನು **ವಿವೇಶ** ಪ್ರವೇಶಿಸಿದನು **ಜಗದಂತರಾತ್ಮಾ** ಜಗತ್ತಿನ ಅಂತರಾತ್ಮನಾದ ವಾಯುವು **ಸಮಸ್ತೈಃ** ಎಲ್ಲಾ **ಗುಣೈಃ** ಗುಣಗಳಿಂದ **ಸ್ವಯಂ ಏವ** ತಾನೇ **ಭೂಮೌ** ಭೂಮಿಯಲ್ಲಿ **ಬಭೂವ** (ಭೀಮನಾಗಿ) ಹುಟ್ಟಿದನು.

**ತಾತ್ಪರ್ಯ** :- ಪಾಂಡುರಾಜನು ಹಾಗೆ ಬಯಸಿದ್ದರಿಂದ ವಾಯುವ ವಿಶೇಷವಾಗಿ ಸೌಂದರ್ಯಪ್ರಧಾನರೂಪದಿಂದ ನಕುಲನನ್ನು ಪ್ರವೇಶಿಸಿದನು.

ಸಹದೇವನಲ್ಲಿ ಒಳ್ಳೆಯ ನೀತಿಪ್ರದವಾದ ರೂಪದಿಂದ ಪ್ರವೇಶಿಸಿದನು. ಸ್ವತಃ ವಾಯುವೇ ಜ್ಞಾನಾನಂದಾದಿ ಸಮಸ್ತಗುಣಗಳಿಂದ ಕೂಡಿದವನಾಗಿ ಭೀಮ ನಾಗಿ ಭೂಮಿಯಲ್ಲಿ ಜನಿಸಿದನು.

**ಸುಪಲ್ಲವಾಕಾರತನುರ್ಹಿ ಕೋಮಲಃ**
**ಪ್ರಾಯೋ ಜನೈಃ ಪ್ರೋಚ್ಯತೇ ರೂಪಶಾಲೀ ।**
**ತತಃ ಸುಜಾತೌ ವರವಜ್ರಕಾಯೌ ಭೀಮಾರ್ಜುನಾ-**
**ವಪ್ಯೃತೇಪಾಂಡುರೈಚ್ಛತ್ ॥ ೧೩೨ ॥**

**ಪದಚ್ಛೇದ :– ಸುಪಲ್ಲವಾಕಾರತನುಃ ಹಿ ಕೋಮಲಃ ಪ್ರಾಯಃ ಜನೈಃ ಪ್ರೋಚ್ಯತೇ ರೂಪಶಾಲೀ ತತಃ ಸುಜಾತೌ ವರವಜ್ರಕಾಯೌ ಭೀಮಾರ್ಜುನೌ ಅಪಿ ಋತೇ ಪಾಂಡುಃ ಐಚ್ಛತ್.**

**ಅರ್ಥ :– ಹಿ** ಯಾವ ಕಾರಣದಿಂದ **ಪ್ರಾಯಃ** ಬಹಳವಾಗಿ **ಜನೈಃ** ಜನರಿಂದ **ಸುಪಲ್ಲವಾಕಾರತನುಃ** ಒಳ್ಳೆಯ ಚಿಗುರಿನಂತಿರುವ ಶರೀರವುಳ್ಳ **ಕೋಮಲಃ** ಮೃದುವಾದ ಶರೀರವುಳ್ಳವನೇ **ರೂಪಶಾಲೀ** ರೂಪವಂತನೆಂದು **ಪ್ರೋಚ್ಯತೇ** ಕರೆಯಲ್ಪಡುತ್ತಾನೆ **ತತಃ** ಆದ್ದರಿಂದ **ಪಾಂಡುಃ** ಪಾಂಡುರಾಜನು **ಸುಜಾತೌ ಅಪಿ** ಸುಂದರರಾಗಿ ಹುಟ್ಟಿದ್ದರೂ ಕೂಡ **ವರವಜ್ರಕಾಯೌ** ವಜ್ರಕ್ಕಿಂತಲೂ ಶ್ರೇಷ್ಠವಾದ ಶರೀರವುಳ್ಳ **ಭೀಮಾರ್ಜುನೌ** ಭೀಮ ಮತ್ತು ಅರ್ಜುನರನ್ನು **ಋತೇ** ಬಿಟ್ಟು **ಐಚ್ಛತ್** (ರೂಪಶಾಲಿಯಾದ ಮತ್ತೊಬ್ಬನನ್ನು) ಬಯಸಿದನು.

**ತಾತ್ಪರ್ಯ :–** ಭೀಮ ಮತ್ತು ಅರ್ಜುನರು ರೂಪವಂತರೇ ಆಗಿದ್ದರೂ ವಜ್ರದಂತೆ ಕಠಿಣವಾದ ಶರೀರವುಳ್ಳವರು. ಆದರೆ ಜಗತ್ತಿನಲ್ಲಿ ಜನರು ಹೆಚ್ಚಾಗಿ ಚಿಗುರಿನಂತಿರುವ ಮೃದುಶರೀರದವನನ್ನೇ ಸುಂದರ ಎಂದು ಕರೆಯುತ್ತಾರೆ. ಆದ್ದರಿಂದ ಭೀಮಾರ್ಜುನರಿದ್ದರೂ ಮತ್ತೊಬ್ಬ ಸುಂದರ ಮಗನನ್ನು ಪಾಂಡುವು ಬಯಸಿದನು.

**ಅಪ್ರಾಕೃತಾನಾಂ ತು ಮನೋಹರಂ ಯದ್**
**ರೂಪಂ ದ್ವಾಂತ್ರಿಶಲ್ಲಕ್ಷಣೋಪೇತಮಗ್ರ್ಯಮ್ ।**
**ತನ್ಮಾರುತೋ ನಕುಲೇ ಕೋಮಲಾಭ**
**ಏವಂ ವಾಯುಃ ಪಂಚರೂಪೋಽತ್ರ ಆಸೀತ್ ॥ ೧೩೩ ॥**

ಪದಚ್ಛೇದ :– ಅಪ್ರಾಕೃತಾನಾಂ ತು ಮನೋಹರಂ ಯತ್ ರೂಪಂ ದ್ವಾತ್ರಿಂಶಲ್ಲಕ್ಷಣೋಪೇತಂ ಅಗ್ರ್ಯಂ ತತ್ ಮಾರುತಃ ನಕುಲೇ ಕೋಮಲಾಭಃ ಏವಂ ವಾಯುಃ ಪಂಚರೂಪಃ ಅತ್ರ ಆಸೀತ್.

**ಅರ್ಥ** :– **ಯತ್** ಯಾವ **ದ್ವಾತ್ರಿಂಶಲ್ಲಕ್ಷಣೋಪೇತಂ** ೩೨ ಲಕ್ಷಣಗಳಿಂದ ಕೂಡಿದ **ಅಗ್ರ್ಯಂ** ಶ್ರೇಷ್ಠವಾದ **ರೂಪಂ** ರೂಪವಿದೆಯೋ **(ತತ್)** ಆ ರೂಪವು **ಅಪ್ರಾಕೃತಾನಾಂ ತು** ಸೂಕ್ಷ್ಮದೃಷ್ಟಿಯುಳ್ಳವರಿಗೆ ಮಾತ್ರ **ಮನೋಹರಂ** ಮನೋಹಾರಿಯು **ತತ್** ಆದ್ದರಿಂದ **ಮಾರುತಃ** ಮುಖ್ಯ ಪ್ರಾಣನು **ನಕುಲೇ** ನಕುಲನಲ್ಲಿ **ಕೋಮಲಾಭಃ (ಅಭೂತ್)** ಕೋಮಲವಾದ ಕಾಂತಿಯುಳ್ಳವನು ಆಗಿದ್ದನು **ಏವಂ** ಈ ರೀತಿಯಾಗಿ **ವಾಯುಃ** ಮುಖ್ಯ ಪ್ರಾಣನು **ಪಂಚರೂಪಃ (ಸನ್)** ಐದು ರೂಪವುಳ್ಳವನಾಗಿ **ಅತ್ರ** ಕೃಷ್ಣಾವತಾರ ಕಾಲದಲ್ಲಿ **ಆಸೀತ್** ಇದ್ದನು.

**ತಾತ್ಪರ್ಯ** :– ಭೀಮನು ೩೨ ಲಕ್ಷಣದಿಂದ ಕೂಡಿದ್ದರೂ ಸಾಮಾನ್ಯರಿಗೆ ಅವನ ಪರಿಪೂರ್ಣ ಸೌಂದರ್ಯ ಕಾಣುತ್ತಿರಲಿಲ್ಲ. ಕೇವಲ ಸೂಕ್ಷ್ಮದೃಷ್ಟಿಯುಳ್ಳ ವರಿಗೆ ಮಾತ್ರ ಕಾಣುತ್ತಿತ್ತು. ಆದ್ದರಿಂದ ನಕುಲನಲ್ಲಿ ಕೋಮಲರೂಪದಿಂದ ಪ್ರವೇಶಿಸಿದನು. ಹೀಗೆ ಮುಖ್ಯಪ್ರಾಣನು ಐದು ರೂಪಗಳಿಂದ ಕೃಷ್ಣಾವತಾರದ ಕಾಲದಲ್ಲಿ ಇದ್ದನು.

**ಅತೀತೇಂದ್ರಾ ಏವ ತೇ ವಿಷ್ಣುಷಷ್ಠಾಃ**
**ಪೂರ್ವೇಂದ್ರೋಽಸೌ ಯಜ್ಞನಾಮಾ ರಮೇಶಃ ।**
**ಸ ವೈ ಕೃಷ್ಣೋ ವಾಯುರಥ ದ್ವಿತೀಯಃ ಸ**
**ಭೀಮಸೇನೋ ಧರ್ಮ ಆಸೀತ್ ತೃತೀಯಃ ॥ ೧೩೪ ॥**

ಪದಚ್ಛೇದ :– ಅತೀತೇಂದ್ರಾಃ ಏವ ತೇ ವಿಷ್ಣುಷಷ್ಠಾಃ ಪೂರ್ವೇಂದ್ರಃ ಅಸೌ ಯಜ್ಞನಾಮಾ ರಮೇಶಃ ಸಃ ವೈ ಕೃಷ್ಣಃ ವಾಯುಃ ಅಥ ದ್ವಿತೀಯಃ ಸಃ ಭೀಮಸೇನಃ ಧರ್ಮಃ ಆಸೀತ್ ತೃತೀಯಃ.

**ಅರ್ಥ** :– **ವಿಷ್ಣುಷಷ್ಠಾಃ** ವಿಷ್ಣುವೇ ಆರನೆಯವನಾಗಿ ಉಳ್ಳ **ತೇ** ಆ ಪಾಂಡವರು **ಅತೀತೇಂದ್ರಾಃ ಏವ** ಇಂದ್ರರಾಗಿದ್ದವರೇ **ಯಜ್ಞನಾಮಾ** ಯಜ್ಞ ನೆಂಬ ಹೆಸರುಳ್ಳ **ಅಸೌ** ಈ **ರಮೇಶಃ** ಲಕ್ಷ್ಮೀಪತಿಯಾದ ನಾರಾಯಣನು

**ಪೂರ್ವೇಂದ್ರಃ (ಅಭೂತ್)** ಮೊದಲನೆಯ ಇಂದ್ರನಾಗಿದ್ದನು **ಸಃ ವೈ** ಯಜ್ಞನಾಮಕನಾದ ಆ ನಾರಾಯಣನೇ **ಕೃಷ್ಣಃ (ಬಭೂವ)** ಕೃಷ್ಣನಾಗಿ ಅವತರಿಸಿದನು. **ಅಥ** ಆ ನಂತರ **ವಾಯುಃ** ವಾಯುದೇವತೆಯು **ದ್ವಿತೀಯಃ (ಇಂದ್ರಃ ಅಭೂತ್)** ಎರಡನೆಯ ಇಂದ್ರನಾಗಿದ್ದನು **ಸಃ** ಆ ವಾಯುವೇ **ಭೀಮಸೇನಃ (ಬಭೂವ)** ಭೀಮಸೇನನಾಗಿ ಅವತರಿಸಿದನು **ಧರ್ಮಃ** ಯಮ ಧರ್ಮನು **ತೃತೀಯಃ (ಇಂದ್ರಃ)** ಮೂರನೆಯ ಇಂದ್ರನು **ಆಸೀತ್** ಆಗಿದ್ದನು.

**ತಾತ್ಪರ್ಯ :–** ವಿಷ್ಣುವಿನಿಂದ ಕೂಡಿದ ಪಾಂಡವರು ಹಿಂದೆ ಇಂದ್ರರೇ ಆಗಿದ್ದವರು. ಯಜ್ಞನಾಮಕನಾದ ನಾರಾಯಣನು ಮೊದಲನೆಯ ಮನ್ವಂತರದಲ್ಲಿ ಇಂದ್ರನಾಗಿದ್ದನು. ಆ ಯಜ್ಞನಾಮಕ ನಾರಾಯಣನೇ ಈಗ ಕೃಷ್ಣನಾಗಿ ಅವತರಿಸಿದನು. ಯಜ್ಞರೂಪೀ ಪರಮಾತ್ಮನ ನಂತರ ರೋಚನನಾಮಕನಾದ ಮುಖ್ಯಪ್ರಾಣನು ಮುಂದಿನ ಮನ್ವಂತರದ ಇಂದ್ರ ನಾಗಿದ್ದನು. ಅವನೇ ಈಗ ಭೀಮಸೇನನಾಗಿ ಅವತರಿಸಿದ್ದನು. ಯಮ ಧರ್ಮನು ಸತ್ಯಜಿತ್ ಎಂಬ ಹೆಸರಿನಿಂದ ಮೂರನೆಯ ಇಂದ್ರನಾಗಿದ್ದನು.

**ಯುಧಿಷ್ಠಿರೋಽಸಾವಥ ನಾಸತ್ಯದಸ್ರೌ ಕ್ರಮಾತ್**
**ತಾವೇತೌ ಮಾದ್ರವತೀಸುತೌ ಚ ।**
**ಪುರಂದರಃ ಷಷ್ಠ ಉತಾತ್ರ ಸಪ್ತಮಃ ಸ**
**ಏವೈಕಃ ಫಲ್ಗುನೋ ಹ್ಯೇತ ಇಂದ್ರಾಃ ॥ ೧೩೫ ॥**

ಪದಚ್ಛೇದ :– **ಯುಧಿಷ್ಠಿರಃ ಅಸೌ ಅಥ ನಾಸತ್ಯದಸ್ರೌ ಕ್ರಮಾತ್ ತೌ ಏತೌ ಮಾದ್ರವತೀಸುತೌ ಚ ಪುರಂದರಃ ಷಷ್ಠಃ ಉತ ಅತ್ರ ಸಪ್ತಮಃ ಸಃ ಏವ ಏಕಃ ಫಲ್ಗುನಃ ಹಿ ಏತೇ ಇಂದ್ರಾಃ**

**ಅರ್ಥ :–** **ಅಸೌ** ಈ ಯಮಧರ್ಮನೇ **ಯುಧಿಷ್ಠಿರಃ (ಬಭೂವ)** ಯುಧಿಷ್ಠಿರನಾದನು **ಅಥ** ಆ ನಂತರ **ನಾಸತ್ಯದಸ್ರೌ** ಅಶ್ವಿನಿಗಳಾದ ನಾಸತ್ಯ ದಸ್ರರು (ಇಂದ್ರೌ, ಅಭೂತಾಂ) ಇಂದ್ರರಾದರು **ತೌ** ಅಂತಹ **ಏತೌ** ಈ ಅಶ್ವಿನಿದೇವತೆಗಳು **ಕ್ರಮಾತ್** ಕ್ರಮವಾಗಿ **ಮಾದ್ರವತೀಸುತೌ (ಬಭೂವತುಃ)** (ನಕುಲ-ಸಹದೇವರೆಂದು) ಮಾದ್ರವತಿಯ ಮಕ್ಕಳಾದರು **ಪುರಂದರಃ** ಪುರಂದರನು **ಷಷ್ಠಃ** ಆರನೆಯ **ಉತ** ಹಾಗೂ **ಅತ್ರ** ಈ ವೈವಸ್ವತ

ಮನ್ವಂತರದಲ್ಲಿ ಸಪ್ತಮಃ ಏಳನೆಯ (ಇಂದ್ರಃ ಅಭೂತ್) ಇಂದ್ರನಾಗಿದ್ದನು ಏಕಃ ಏವ ಆರು ಹಾಗೂ ಏಳನೆಯ ಇಂದ್ರನು ಒಬ್ಬನೇ ಆದ ಸಃ ಆ ಪುರಂದರನ್ನು ಫಲ್ಗುನಃ (ಬಭೂವ) ಅರ್ಜುನನಾಗಿ ಹುಟ್ಟಿದನು.

**ತಾತ್ಪರ್ಯ** :– ಮೂರನೆಯ ಇಂದ್ರನಾದ ಯಮಧರ್ಮನೇ ಈಗ ಯುಧಿಷ್ಠಿರನಾಗಿ ಹುಟ್ಟಿದನು. ಅಶ್ವಿನಿದೇವತೆಗಳಾದ ನಾಸತ್ಯ ಮತ್ತು ದಸ್ರರು ನಾಲ್ಕು ಹಾಗೂ ಐದನೆಯ ಮನ್ವಂತರದ ಇಂದ್ರರಾಗಿದ್ದರು. ಅವರೇ ಈಗ ಮಾದ್ರಿಯ ಮಕ್ಕಳಾದ ನಕುಲ-ಸಹದೇವರಾಗಿ ಹುಟ್ಟಿದರು. ಆರನೆಯ ಮನ್ವಂತರಕ್ಕೆ ಮಂದ್ರದ್ಯುಮ್ನನಾಮಕನಾದ ಪುರಂದರನು ಇಂದ್ರನಾದನು. ಆ ಪುರಂದರನೇ ಏಳನೆಯ ಮನ್ವಂತರವಾದ ಈ ವೈವಸ್ವತ ಮನ್ವಂತರದಲ್ಲೂ ಇಂದ್ರನಾಗಿದ್ದಾನೆ. ಅವನೇ ಈಗ ಅರ್ಜುನನಾಗಿ ಹುಟ್ಟಿದನು. (ನಾಸತ್ಯ-ದಸ್ರರು ಇಬ್ಬರೂ ನಾಲ್ಕು ಹಾಗೂ ಐದನೆಯ ಮನ್ವಂತರದ ಇಂದ್ರ ರಾಗಿದ್ದರು. ಆದರೂ ಒಂದೊಂದು ಮನ್ವಂತರದಲ್ಲಿ ಒಬ್ಬೊಬ್ಬರಿಗೆ ಪ್ರಾಧಾನ್ಯ ವನ್ನಿಟ್ಟುಕೊಂಡು ನಾಲ್ಕನೆಯ ಮನ್ವಂತರದಲ್ಲಿ ನಾಸತ್ಯನು ಹಾಗೂ ಐದನೆಯ ಮನ್ವಂತರದಲ್ಲಿ ದಸ್ರನು ಇಂದ್ರನೆಂದು ಹೇಳಲಾಗಿದೆ. ಮೂಲರೂಪದಲ್ಲಿ ಅಶ್ವಿನಿದೇವತೆಗಳು ಹೆಸರು ಒಂದೇ ಆಗಿದ್ದರೂ, ಒಟ್ಟಿಗೇ ಹೋಗುವುದು, ಒಟ್ಟಿಗೇ ಭೋಗಿಸುವುದು ಇತ್ಯಾದಿಗಳಿದ್ದರೂ, ಅವರ ಅವತಾರದಲ್ಲಿ ಇಬ್ಬರಿಗೂ ನಕುಲ-ಸಹದೇವ ಎಂದು ಬೇರೆ ಬೇರೆ ಹೆಸರುಗಳಿದ್ದವು. ಒಬ್ಬನನ್ನು ಬಿಟ್ಟು ಮತ್ತೊಬ್ಬನು ಇರುವುದು, ಒಬ್ಬನನ್ನು ಬಿಟ್ಟು ಮತ್ತೊಬ್ಬನು ಭೋಗಿಸುವುದು ಇತ್ಯಾದಿಗಳಿದ್ದವು- ವಾದಿರಾಜೀಯ).

**ಕ್ರಮಾತ್ ಸಂಸ್ಕಾರಾನ್ ಕ್ಷತ್ರಿಯಾಣಾಮವಾಪ್ಯ**
**ತೇಽವರ್ಧಂತ ಸ್ವತವಸೋ ಮಹಿತ್ವನಾ ।**
**ಸರ್ವೇ ಸರ್ವಜ್ಞಾಃ ಸರ್ವಧರ್ಮೋಪಪನ್ನಾಃ**
**ಸರ್ವೇ ಭಕ್ತಾಃ ಕೇಶವೇಽತ್ಯಂತಯುಕ್ತಾಃ ॥ ೧೩೬ ॥**

ಪದಚ್ಛೇದ :– ಕ್ರಮಾತ್ ಸಂಸ್ಕಾರಾನ್ ಕ್ಷತ್ರಿಯಾಣಾಂ ಅವಾಪ್ಯ ತೇ ಅವರ್ಧಂತ ಸ್ವತವಸಃ ಮಹಿತ್ವನಾ ಸರ್ವೇ ಸರ್ವಜ್ಞಾಃ ಸರ್ವಧರ್ಮೋಪಪನ್ನಾಃ ಸರ್ವೇ ಭಕ್ತಾಃ ಕೇಶವೇ ಅತ್ಯಂತಯುಕ್ತಾಃ.

**ಅರ್ಥ** :– **ಸ್ವತವಸಃ** ಸ್ವರೂಪಭೂತವಾದ ಸಾಮರ್ಥ್ಯವುಳ್ಳ **ತೇ** ಆ ಪಾಂಡವರು **ಕ್ರಮಾತ್** ಕ್ರಮವಾಗಿ **ಕ್ಷತ್ರಿಯಾಣಾಂ** ಕ್ಷತ್ರಿಯರ **ಸಂಸ್ಕಾರಾನ್** ಸಂಸ್ಕಾರಗಳನ್ನು **ಅವಾಪ್ಯ** ಹೊಂದಿ **ಮಹಿತ್ವನಾ** ಮಹಿಮೆಯಿಂದ **ಅವರ್ಧಂತ** ಬೆಳೆದರು. **ಸರ್ವೇ** ಅವರೆಲ್ಲರೂ **ಸರ್ವಜ್ಞಾಃ** ಸರ್ವಜ್ಞರೂ **ಸರ್ವಧರ್ಮೋಪಪನ್ನಾಃ** ಎಲ್ಲಾ ಸದ್ಧರ್ಮಗಳಿಂದ ಕೂಡಿದವರೂ **ಸರ್ವೇ** ಎಲ್ಲರೂ **ಕೇಶವೇ** ಪರಮಾತ್ಮನಲ್ಲಿ **ಭಕ್ತಾಃ** ಭಕ್ತಿಯುಳ್ಳವರೂ **ಅತ್ಯಂತಯುಕ್ತಾಃ** (ಪರಮಾತ್ಮನಲ್ಲೇ) ಮನಸುಳ್ಳವರೂ **(ಆಸನ್)** ಆಗಿದ್ದರು.

**ತಾತ್ಪರ್ಯ** :– ಹೀಗೆ ಹುಟ್ಟಿದ ಆ ಪಾಂಡವರು ತಮ್ಮ ಸ್ವರೂಪ ಸಾಮರ್ಥ್ಯದಿಂದಲೇ ಬೆಳೆದರು. ಕ್ರಮವಾಗಿ ಯೋಗ್ಯವಯಸ್ಸಿಗೆ ಕ್ಷತ್ರಿಯೋಚಿತವಾದ ಸಂಸ್ಕಾರಗಳನ್ನೂ ಅವರು ಪಡೆದರು. ಅವರೆಲ್ಲರೂ ಸರ್ವಜ್ಞರೂ ಸ್ವವರ್ಣಾಶ್ರಮೋಚಿತ ಧರ್ಮಗಳಲ್ಲಿ ಆಸಕ್ತರೂ, ಪರಮಾತ್ಮನ ಭಕ್ತರೂ, ಪರಮಾತ್ಮನಲ್ಲೇ ಮನಸ್ಸುಳ್ಳವರೂ ಆಗಿದ್ದರು.

**ವಿಶೇಷ ವಿಚಾರ** :– ''ತೇಽವರ್ಧಂತ ಸ್ವತವಸೋ ಮಹಿತ್ವನಾ'' ಎಂಬ ಈ ಶ್ಲೋಕದ ಎರಡನೆಯ ಪಾದವು ಶ್ರುತಿವಾಕ್ಯವಾಗಿದೆ. ಹೀಗೆ ತಮ್ಮ ಶ್ಲೋಕದಲ್ಲಿ ಶ್ರಿತುವಾಕ್ಯವನ್ನು ಸೇರಿಸುವ ಮೂಲಕ ಮಧ್ವಾಚಾರ್ಯರು ತಮ್ಮ ಗ್ರಂಥವನ್ನು ವೇದತುಲ್ಯ ಎಂದು ಸೂಚಿಸಿದ್ದಾರೆ– ವಾದಿರಾಜೀಯ.

ಶ್ರುತಿವಾಕ್ಯವನ್ನು ಈ ಶ್ಲೋಕದಲ್ಲಿ ಸೇರಿಸಿರುವುದರಿಂದ ಪಾಂಡವರು ಶ್ರುತಿಪ್ರತಿಪಾದ್ಯರು ಎಂದು ತಿಳಿಸಿದಂತಾಯಿತು– ಜನಾರ್ದನೀಯ.

**ಇಲ್ಲಿಗೆ ಶ್ರೀಮಧ್ವಾಚಾರ್ಯರ ರಚಿಸಿದ ಮಹಾಭಾರತತಾತ್ಪರ್ಯನಿರ್ಣಯದ ಹನ್ನೆರಡನೇ ಅಧ್ಯಾಯವು ಮುಕ್ತಾಯವಾಯಿತು.**

# ಅಧ್ಯಾಯ - 13

**ಗರ್ಗಃ ಶೂರಸುತೋಕ್ತ್ಯಾ ವ್ರಜಮಾಯಾತ್ ಸಾತ್ವತಾಂ ಪುರೋಧಾಃ ಸಃ ।**
**ಚಕ್ರೇ ಕ್ಷತ್ರಿಯಯೋಗ್ಯಾನ್ ಸಂಸ್ಕಾರಾನ್ ಕೃಷ್ಣರೋಹಿಣೇ ಸೂನ್ವೋಃ ॥೧॥**

**ಅರ್ಥ :-** **ಸಾತ್ವತಾಂ** ಯಾದವರ **ಪುರೋಧಾಃ** ಪುರೋಹಿತನಾದ **ಗರ್ಗಃ** ಗರ್ಗನೆಂಬ ಮುನಿಯು **ಶೂರಸುತೋಕ್ತ್ಯಾ** ವಸುದೇವನ ಮಾತಿನಂತೆ **ವ್ರಜಂ** ನಂದಗೋಕುಲವನ್ನು ಕುರಿತು **ಆಯಾತ** ಬಂದನು. **ತತ್ರ** ಅಲ್ಲಿ **ಸಃ** ಆ ಗರ್ಗನು **ಕೃಷ್ಣರೋಹಿಣೇಸೂನ್ವೋಃ** ಕೃಷ್ಣ ಮತ್ತು ರೋಹಿಣಿಯ ಮಗನಾದ ರಾಮನಿಗೆ **ಕ್ಷತ್ರಿಯಯೋಗ್ಯಾನ್** ಕ್ಷತ್ರಿಯರಿಗೆ ಉಚಿತವಾದ **ನಾಮಕರಣಾದಿ ಸಂಸ್ಕಾರಾನ್** ಸಂಸ್ಕಾರಗಳನ್ನು **ಚಕ್ರೇ** ಮಾಡಿದನು.

**ತಾತ್ಪರ್ಯ :-** ಯಾದವರ ಪುರೋಹಿತನಾದ ಗರ್ಗನನ್ನು ವಸುದೇವನು ತನ್ನ ಮಕ್ಕಳಿಗೆ ತಮ್ಮ ಕುಲಪುರೋಹಿತರಿಂದಲೇ ಸಂಸ್ಕಾರವಾಗಬೇಕೆಂಬ ದೃಷ್ಟಿಯಿಂದ ನಂದಗೋಕುಲಕ್ಕೆ ಕಳುಹಿಸಿದನು. ಅಲ್ಲಿ ಗರ್ಗನು ಕೃಷ್ಣರಾಮರಿಗೆ ಕ್ಷತ್ರಿಯರಿಗೆ ಉಚಿತವಾದ ನಾಮಕರಣಾದಿ ಸಂಸ್ಕಾರಗಳನ್ನು ನಡೆಸಿದನು.

**ಊಚೇ ನಂದಸುತೋಽಯಂ ತವ ವಿಷ್ಣೋರ್ನಾವಮೋ ಗುಣೈಃ ಸರ್ವೈಃ ।**
**ಸರ್ವೇ ಚೈತತ್ರಾತ್ರಾಃ ಸುಖಮಾಪ್ಸ್ಯಂತ್ಯುನ್ನತಂ ಭವತ್ಪೂರ್ವಾಃ ॥ ೨ ॥**

**ಅರ್ಥ :-** **ನಂದ** ಎಲೈ ನಂದನೇ **ತವ** ನಿನ್ನ **ಅಯಂ** ಈ **ಸುತಃ** ಮಗನಾದ ಕೃಷ್ಣನು **ಸರ್ವೈಃ** ಎಲ್ಲಾ **ಗುಣೈಃ** ಗುಣಗಳಿಂದ **ವಿಷ್ಣೋಃ** ವಿಷ್ಣುವಿಗೆ **ನಾವಮಃ** ಕಡಿಮೆಯವನಲ್ಲ, **ಭವತ್ಪೂರ್ವಾಃ** ನೀನೇ ಮೊದಲಾದ **ಸರ್ವೇ** ಎಲ್ಲಾ ಜನರು **ಏತತ್ರಾತ್ರಾಃ** ಇವನಿಂದ ರಕ್ಷಿಸಲ್ಪಟ್ಟವರಾಗಿ **ಅತ್ಯುನ್ನತಂ** ಅತ್ಯಂತ ಶ್ರೇಷ್ಠವಾದ **ಸುಖಂ** ಸುಖವನ್ನು **ಆಪ್ಸ್ಯಂತಿ** ಹೊಂದುವಿರಿ **ಇತಿ** ಎಂದು **ಗರ್ಗಃ** ಗರ್ಗನು **ಊಚೇ** ಹೇಳಿದನು.

**ತಾತ್ಪರ್ಯ :-** ಆ ಸಮಯದಲ್ಲಿ ಗರ್ಗನು ನಂದನಿಗೆ ಹೀಗೆ ಹೇಳಿದನು. ಹೇ ನಂದನೇ ಈ ನಿನ್ನ ಮಗನು ಎಲ್ಲಾ ಗುಣಗಳಲ್ಲಿಯೂ ವಿಷ್ಣುವಿಗಿಂತ ಕಡಿಮೆಯವನಲ್ಲ, ಅಂದರೆ ವಿಷ್ಣುವಿಗೆ ಸಮಾನವಾದ ಗುಣವುಳ್ಳವನು. ಇವನಿಂಧ ನೀವು ಅಲ್ಲದೇ ಎಲ್ಲಾ ಸಜ್ಜನರು ದುಷ್ಟಪೀಡನೆಯಿಂದ

ರಕ್ಷಿಸಲ್ಪಡುವರು. ಇವನಿಂದಾಗಿಯೂ ಜೀವನದಲ್ಲಿ ಅತಿಶ್ರೇಷ್ಠವಾದ ಸುಖ ವನ್ನು ಹೊಂದುವಿರಿ ಎಂದು.

**ಇತ್ಯುಕ್ತಃ ಸಮುಮೋದ ಪ್ರಯಯೌ ಗರ್ಗೋऽಪಿ ಕೇಶವೋऽಥಾದ್ಯಃ ।**
**ಸ್ವಪದೈರಗ್ರಜಯುಕ್ತಶ್ಚಕ್ರೇ ಪುಣ್ಯಂ ವ್ರಜನ್ ವ್ರಜೋದ್ದೇಶಮ್ ॥ ೩ ॥**

**ಅರ್ಥ** :- **ಇತ್ಯುಕ್ತಃ** ಹೀಗೆಗರ್ಗನಿಂದ ಹೇಳಲ್ಪಟ್ಟ **ಸಃ** ಆ ನಂದನು **ಮುಮೋದ** ಅತೀವ ಸಂತೋಷವನ್ನು ಹೊಂದಿದನು **ಅಥ** ಅನಂತರ **ಗರ್ಗಃ** ಗರ್ಗನು **ಪ್ರಯಯೌ** ಹೊರಟು ಹೋದನು. **ಆದ್ಯಃ** ಆದಿಪುರುಷನಾದ **ಕೇಶವೋऽಪಿ** ಶ್ರೀಕೃಷ್ಣನಾದರೂ **ಅಗ್ರಜಯುಕ್ತಃ** ಅಣ್ಣನೊಂದಿಗೆ ಕೂಡಿಕೊಂಡು **ವ್ರಜನ್** ತಿರುಗುತ್ತಾ **ವ್ರಜೋದ್ದೇಶಂ** ನಂದಗೋಕುಲದ ಉತ್ತಮ ಪ್ರದೇಶ ಗಳನ್ನು **ಸ್ವಪದೈಃ** ತನ್ನ ಹೆಜ್ಜೆಗಳಿಂದ **ಪುಣ್ಯಂ** ಪಾವನವನ್ನಾಗಿ **ಚಕ್ರೇ** ಮಾಡಿದನು.

**ತಾತ್ಪರ್ಯ** :- ಹೀಗೆ ಗರ್ಗನು ಹೇಳಲು ನಂದನು ಅದರಿಂದ ಬಹಳ ಸಂತೋಷಪಟ್ಟನು. ನಂತರ ಗರ್ಗನು ತನ್ನ ಕೆಲಸವನ್ನು ಮುಗಿಸಿ ಹೊರಟುಹೋದನು. ನಂತರ ಆದಿಪುರುಷನಾದ ಶ್ರೀಕೃಷ್ಣನು ತನ್ನ ಅಣ್ಣ ನೊಂದಿಗೆ ತಿರುಗುತ್ತಾ ನಂದಗೋಕುಲದ ಉತ್ತಮ ಪ್ರದೇಶಗಳನ್ನು ತನ್ನ ಹೆಜ್ಜೆಯಿಂದ ಪಾವನಗೊಳಿಸಿದನು.

**ಸ ಕದಾಚಿಚ್ಛಿಶುಭಾವಂ ಕುರ್ವಂತ್ಯಾಮಾತುರಾತ್ಮನೋ ಭೂಯಃ ।**
**ಅಪನೇತುಂ ಪರಮೇಶೋ ಮೃದಂ ಜಘ್ರಾಸೀಕ್ಷತಾಂ ವಯಸ್ಯಾನಾಮ್ ॥ ೪ ॥**

**ಅರ್ಥ** :- **ಸಃ** ಆ ಶ್ರೀಕೃಷ್ಣನು **ಕದಾಚಿತ್** ಒಮ್ಮೆ **ಆತ್ಮನಃ** ತನಗೆ **ಶಿಶುಭಾವ** ಮಗುವೆಂಬ ಭಾವನೆಯನ್ನು **ಕುರ್ವಂತ್ಯಾಃ** ತೋರುತ್ತಿರುವ **ಮಾತುಃ** ತಾಯಿಯ (ಭ್ರಮೆಯನ್ನು) **ಭೂಯಃ** ಮತ್ತೊಮ್ಮೆ **ಲೀಪನೇತುಂ** ಕಳೆಯಲು **ಪರಮೇಶಃ** ಸರ್ವಶ್ರೇಷ್ಠನಾದ ಶ್ರೀಕೃಷ್ಣನು **ವಯಸ್ಸಾನಾಂ** ಜೊತೆಯ ಮಕ್ಕಳ **ಈಕ್ಷತಾಂ** ಕಣ್ಣೆದುರಲ್ಲಿಯೇ **ಮೃದಂ** ಮಣ್ಣನ್ನು **ಜಘಾಸು** ತಿಂದನು.

**ತಾತ್ಪರ್ಯ** :- ಶ್ರೀಕೃಷ್ಣ ತಾನು ಹುಟ್ಟಿದ ಕೂಡಲೇ ತಂದೆ ತಾಯಿಗೆ ವಿಶ್ವರೂಪವನ್ನು ತೋರಿಸಿ ತಾನು ಎಲ್ಲರಂತೆ ಮಗುವಲ್ಲ, ನಿಮ್ಮ ಮನೆಯ ಮುಗ್ಧ ಮಗುವೂ ಅಲ್ಲ ಎಂದು ತೋರಿಸಿದ್ದ. ನಂತರ ತಾನೇ ತಾಯಿಗೆ

ಮಾಯೆಯ ಬಂಧನವನ್ನು ನೀಡಿದ್ದ. ಈಗ ಯಶೋಧೆ ಕೃಷ್ಣನಲ್ಲಿ ತನ್ನ ಮಗುವೆಂದು ಕೇವಲ ಷವನಲ್ಲಿ ಬಾಲ ಭಾವವನ್ನು ಕಾಣುತ್ತಿದ್ದಾಗ ಅವಳಿಗಿದ್ದ ಭ್ರಾಂತಿಯನ್ನು ಮತ್ತೊಮ್ಮೆ ಕಳೆಯಲು ಎಲ್ಲರೂ ನೋಡುತ್ತಿದ್ದಂತೆ ತಾನು ಮಣ್ಣನ್ನು ತಿಂದ.

**ಮಾತ್ರೋಪಾಲಬ್ಧ ಈಶೋ ಮುಖವಿವೃತಿಮಕರ್ನಾಂಬ ಮೃದ್‌ಭಕ್ಷಿತಾऽಹಂ**
**ಪಶ್ಯೇತ್ಯಾಸ್ಯಾಂತರೇ ತು ಪ್ರಕೃತಿವಿಕೃತಿಯುಕ್ ಸಾ ಜಗತ್ ಪರ್ಯಪಶ್ಯತ್ ।**
**ಇತ್ಥಂ ದೇವೋऽತ್ಯ ಚಿಂತ್ಯಾಮಪರದುರಧಿಗಾಂ ಶಕ್ತಿಮುಚ್ಚಾಂ ಪ್ರದರ್ಶ್ಯ**
**ಪ್ರಾಯೋ ಜ್ಞಾತಾತ್ಮತತ್ತ್ವಾಂ ಪುನರಪಿ ಭಗವಾನಾವೃಣೋದಾತ್ಮಶಕ್ತ್ಯಾ ॥೫॥**

**ಅರ್ಥ :-** **ಮಾತ್ರಾ** ತಾಯಿಯಿಂದ **ಉಪಾಲಬ್ಧಃ** ಗದರಿಸಲ್ಪಟ್ಟ **ಈಶಃ** ಶ್ರೀಕೃಷ್ಣನು **ಲಿಂಬ** ತಾಯಿಯೇ **ನಾ** ಪರಮಪುರುಷನಾದ **ಅಹಂ** ನಾನು **ಮೃತ್** ಮಣ್ಣನ್ನು **ಭಕ್ಷಿತಾ** ತಿಂದನು **ಪಶ್ಯ** ನೋಡು ಎಂದು **ಮುಖವಿವೃತಿಂ** ಬಾಯಿ ತೆರೆಯುವಿಕೆಯನ್ನು **ಅಕಃ** ಮಾಡಿದನು. **ಆಸ್ಯಾಂತರೇತುಃ** ಅವನ ಬಾಯಿಯ ಒಳಗಾದರೂ **ಸೌ** ಆ ಯಶೋದೆಯು **ಪ್ರಕೃತಿ ವಿಕೃತಿಯುಕ್** ಪ್ರಕೃತಿ ಪ್ರಕೃತಿ ಮತ್ತು ವಿಕೃತಿ ಅದರ ಕಾರ್ಯಗಳಿಂದ **ಯುಕ್** ಯುಕ್ತವಾದ **ಜಗತ್** ಪ್ರಪಂಚವನ್ನು **ಪರ್ಯಪಶ್ಯತ್** ಕಂಡಳು. **ಇತ್ಥಂ** ಈ ರೀತಿಯಾಗಿ **ದೇವೋऽಪಿ** ಸರ್ವಸಮರ್ಥನಾದ ಭಗವಂತನಾದರೂ **ಅಪರದುರಧಿಗಾಂ** ಇನ್ನೊಬ್ಬರಿಂದ ತಿಳಿಯಲು ಅಶಕ್ಯವಾದ, **ಅಚಿಂತ್ಯಾಂ** ಆ ಚಿಂತ್ಯವಾದ **ಉಚ್ಚಾಂ ಶಕ್ತಿಂ** ತನ್ನ ಉನ್ನತಶಕ್ತಿಯನ್ನು **ಪ್ರದರ್ಶ್ಯ** ತೋರಿಸಿ **ಪ್ರಾಯಃ** ಹೆಚ್ಚಾಗಿ **ಜ್ಞಾತಾತ್ಮ ತತ್ತ್ವಾಂ** ತಿಳಿದ ತನ್ನ ಮಹಿಮೆಯುಳ್ಳವಳನ್ನಾಗಿಸಿ **ಪುನರಪಿ** ಮತ್ತೊಮ್ಮೆ **ಭಗವಾನ್** ಶ್ರೀಕೃಷ್ಣನು **ಆತ್ಮಶಕ್ತ್ಯಾ** ತನ್ನ ಮಾಯೆಯಿಂದ ಅವಳನ್ನು **ಆವೃಣೋತ್** ಆವರಿಸಿದನು.

**ತಾತ್ಪರ್ಯ :-** ಭಗವಂತ ಯಶೋದೆಗೆ ಮತ್ತೊಮ್ಮೆ ತನ್ನ ಮಹಿಮೆಯನ್ನು ತೋರಿಸಿದ ಮಕ್ಕಳು ಬಂದು ಕೃಷ್ಣ ಮಣ್ಣು ತಿಂದನೆಂದು ತಿಳಿಸಿದಾಗ ಯಶೋದೆ ಕೃಷ್ಣನನ್ನು ಕರೆದು ಗದರಿಸಿದಳು. ಆಗ ಕೃಷ್ಣ ಹೌದು ನಾನು ಮಣ್ಣು ತಿಂದ ಎಂದು ಬಾಯಿಯನ್ನು ತೆರೆದು ತೋರಿಸಿದನು. ಆಗ ಅವನ ಬಾಯಿಯಲ್ಲಿ ಯಶೋದೆಯ ಪ್ರಕೃತಿ ಮತ್ತು ಅದರ ಕಾರ್ಯವಾದ ಎಲ್ಲಾ ಭೌತಿಕಾಭೌತಿಕ ಪ್ರಪಂಚವನ್ನು ಕಂಡಳು. ಹೀಗೆ ಕೃಷ್ಣ ತನ್ನ ಅಚಿಂತ್ಯಾದ್ಭುತವಾದ

ಶಕ್ತಿಯನ್ನು ತಾಯಿಗೆ ತೋರಿಸಿ ನಂತರ ಅವಳಿಗೆ ತನ್ನ ಮಾಯೆಯನ್ನು ಆವರಿಸುವಂತೆ ಮಾಡಿ ಎಂದಿನಂತೆ ತಾಯಿಯ ಭಾವ ಬರುವಂತೆ ಮಾಡಿದನು.

**ಇತಿಪ್ರಭುಃ ಸಲೀಲಯಾ ಹರಿರ್ಜಗದ್ ವಿಡಂಬಯನ್ ।**
**ಚಚಾರ ಗೋಷ್ಠಮಂಡಲೇऽಪ್ಯನಂತ ಸೌಖ್ಯಚಿದ್ಘನಃ ॥ ೬ ॥**

**ಅರ್ಥ** :- **ಇತಿ** ಈ ರೀತಿಯಾಗಿ ಅನಂತ **ಸೌಖ್ಯಚಿದ್ಘನಃ** ಅನಂತ ಆನಂದಜ್ಞಾನ ಸ್ವರೂಪನಾದ **ಪ್ರಭುಃ** ಜಗದೊಡೆಯನಾದ **ಸಃ ಹರಿಃ** ಆ ಶ್ರೀಕೃಷ್ಣನು **ಲೀಲಯಾ** ಲೀಲೆಯಿಂದ **ಜಗತ್** ಲೋಕವನ್ನು **ವಿಡಂಬಯನ್** ಅನುಕರಣೆ ಮಾಡುತ್ತಾ **ಗೋಷ್ಠ ಮಂಡಲೇ** ಗೋಕುಲಪ್ರದೇಶದಲ್ಲಿ **ಚಚಾರ** ಓಡಾಡಿದನು.

**ತಾತ್ಪರ್ಯ** :- ಈ ರೀತಿಯಾಗಿ ಅಪರಿಮಿತವಾದ ಆನಂದಜ್ಞಾನವೇ ದೇಹವಾಗಿ ಉಳ್ಳ ಜಗದೊಡೆಯನಾದ ಶ್ರೀಕೃಷ್ಣನು ತಾನು ಸ್ವಯಂ ಲೋಕಾತೀತನಾದರೂ ಜಗತ್ತನ್ನು ಅನುಕರಣೆ ಮಾಡಲೋಸುಗ ಸಾರಮಾನ್ಯ ಮನುಷ್ಯನಂತೆ ನಂದಗೋಕುಲದಲ್ಲಿ ಓಡಾಡಿದನು.

**ಕದಾಚಿದೀಶ್ವರಃ ಸ್ತನಂ ಪಿಬನ್ ಯಶೋದಯಾ ಪಯಃ ।**
**ಸೃತಂ ನಿಧಾತುಮುಜ್ಝಿತೋ ಬಭಂಜ ದಧ್ಯಮತ್ರಕಮ್ ॥ ೭ ॥**

**ಅರ್ಥ** :- **ಕದಾಚಿತ್** ಒಮ್ಮೆ **ಈಶ್ವರಃ** ಸರ್ವಸಮರ್ಥನಾದ ಶ್ರೀಕೃಷ್ಣನು **ಸ್ತನಂ** ಎದೆ ಹಾಲನ್ನು **ಪಿಬನ್** ಕುಡಿಯುತ್ತಿರಲು **ಯಶೋದಯಾ** ಯಶೋದೆಯಿಂದ **ಸೃತಂ** ಉಕ್ಕಿಬಂದ ಹಾಲಿನ ಪಾತ್ರವನ್ನು **ನಿಧಾತುಂ** ಕೆಳಗಿಳಿಸಲು **ಉಜ್ಝಿತಃ** ಕೆಳಗಿಡಲ್ಪಟ್ಟವನಾಗಿ **ದಧ್ಯಮತ್ರಕಂ** ಮೊಸರಿನ ಗಡಿಗೆಯನ್ನು **ಬಭಂಜ** ಒಡೆದನು.

ತಾತ್ಪರ್ಯ :- ಒಮ್ಮೆ ಕೃಷ್ಣನು ಯಶೋದೆಯ ಎದೆಹಾಲನ್ನು ಕುಡಿಯುತ್ತಿದ್ದನು. ಆಗ ಅವಳು ಒಲೆಯಲ್ಲಿ ಹಾಲನ್ನು ಇಟ್ಟಿದ್ದಳು. ಹಾಲು ಉಕ್ಕಿ ಬರುತ್ತಿರಲು ಅದು ಚೆಲ್ಲುವುದೆಂಬ ದೃಷ್ಟಿಯಿಂದ ಪಾತ್ರೆಯನ್ನು ಕೆಳಗಿಳಿಸುವುದಕ್ಕಾಗಿ ಕೃಷ್ಣನನ್ನು ಕೆಳಗಿಟ್ಟಳು. ಆಗ ಕುಪಿತನಾದ ಕೃಷ್ಣ ಅಲ್ಲೇ ಇದ್ದ ಮೊಸರಿನ ಗಡಿಗೆಯನ್ನು ಒಡೆದನು.

ಪ್ರಮಥ್ಯಮಾನದಧ್ಯುರುಪ್ರಜಾತಮಿಂದುಸನ್ನಿಭಮ್ ।
ನವಂ ಹಿನೀತಮಾದದೇ ರಹೋ ಜಘಾಸ ಚೇಶಿತಾ ॥

ಅರ್ಥ :- ಈಶಿತಾ ಸಮರ್ಥನಾದ್ದ ಕೃಷ್ಣನು ಪ್ರಮಥ್ಯಮಾನದಧ್ಯರು ಪ್ರಜಾತಂ ಪ್ರಮಥ್ಯಮಾನ ಚೆನ್ನಾಗಿ ಕಡೆದ ದಧಿ ಮೊಸರಿನಿಂದ ಉರುಪ್ರಜಾತಂ ದೊಡಮುದ್ದೆಯಾಗಿ ಬಂದ ಇಂದುಸನ್ನಿಭಂ ಚಂದ್ರನಂತೆ ಬಿಳಿಯಾದ ನವಂ ನೀತಂ ಬೆಣ್ಣೆಯನ್ನು ಆದಧೇ ಎತ್ತಿಕೊಂಡನು ಚ ಮತ್ತು ರಹಃ ಏಕಾಂತದಲ್ಲಿ ಜಘಾಸ ತಿಂದನು.

ತಾತ್ಪರ್ಯ :- ಶ್ರೀಕೃಷ್ಣನು ಸಿಟ್ಟಿನಿಂದ ಕೇವಲ ಪಾತ್ರಯನ್ನೊಡೆದದ್ದಲ್ಲದೇ ಆಗಷ್ಟೆ ಮೊಸರಿನಿಂದ ಕಡೆದ ಚಂದ್ರನಂತೆ ಬಿಳಿಯಾದ ಬೆಣ್ಣೆಯನ್ನು ತೆಗೆದು ಏಕಾಂತದಲ್ಲಿ ತಿಂದನು.

ಪ್ರಜಾಯತೇ ಹಿ ಯತ್ಕುಲೇ ಯಥಾ ಯುಗಂ ಯಥಾವಯಃ ।
ತಥಾ ಪ್ರವರ್ತನಂ ಭವಾದ್ ದಿವೌಕಸಾಂ ಸಮುದ್ಭವೇ ॥ ೯ ॥

ಅರ್ಥ :- ದಿವೌಕಸಾಂ ದೇವತೆಗಳ ಸಮುದ್ಭವೇ ಅವತಾರವು ಭೂಮಿಯಲ್ಲಿ ಆಗುತ್ತಿರಲು ತೇ ಅವರು ಯಥಾ ಯುಗಂ ಯಾವ ಯುಗ ದಲ್ಲಿ ಯತ್ಕುಲೇ ಯಾವಕುಲದಲ್ಲಿ ಯಥಾವಯಃ ಯಾವ ವಯಸ್ಸಿನವರಾಗಿ ಪ್ರಜಾಯತೇ ಹುಟ್ಟುವರೋ ತಥಾ ಪ್ರವರ್ತನಂ ಆ ರೀತಿಯಾಗಿ ನಡೆಯಬೇಕು.

ಇತಿಸ್ವಧರ್ಮಮುತ್ತಮಂ ದಿವೌಕಸಾಂ ಪ್ರದರ್ಶಯನ್ ।
ಅಧರ್ಮಪಾವಕೋऽಪಿ ಸನ್ ವಿಡಂಬತೇ ಜನಾರ್ದನಃ ॥ ೧೦ ॥

ಅರ್ಥ :- ಇತಿ ಈ ರೀತಿಯಾಗಿ ದಿವೌಕಸಾಂ ದೇವತೆಗಳಿಗೆ ಉತ್ತಮಂ ಶ್ರೇಷ್ಠವಾದ ಸ್ವಧರ್ಮಂ ತನಗೆ ಪ್ರೀತಿಕರವಾದ ಧರ್ಮವನ್ನು ಪ್ರದರ್ಶಿಯನ್ ಸನ್ ತೋರಿಸುವವನಾಗಿ ಜನಾರ್ದನಃ ಶ್ರೀಕೃಷ್ಣನು ಅಧರ್ಮಪಾವಕೋऽಪಿ ಸನ್ ತಾನು ಅಧರ್ಮಕ್ಕೆ ಬೆಂಕಿಯಂತೆ ವಿರೋಧಿಯಾಗಿದ್ದರೂ ವಿಡಂಬತೇ ಲೋಕಾನುಕರಣೆಯನ್ನು ಮಾಡಿದನು.

ತಾತ್ಪರ್ಯ :- ಕೃಷ್ಣ ಬೆಣ್ಣೆಯನ್ನು ಕದ್ದು ತಿಂದನು ಎಂದು ಹೇಳಿದಾಗ ಎಲ್ಲರಿಗೂ ಸಂಶಯ ಬರುತ್ತದೆ. ಕದಿಯುವುದು ಘೋರವಾದ ಅಧರ್ಮದ

ಕೆಲಸ. ಅಂತಹ ಕೆಲಸವನ್ನು ಧರ್ಮಸ್ಥಾಪನೆಗಾಗಿ ಅವತರಿಸಿದ ಕೃಷ್ಣ ಹೇಗೆ ಮಾಡಿದ ಎಂದು ಅದಕ್ಕೆ ಆಚಾರ್ಯರು ಸಮಾಧಾನವನ್ನು ಕೊಡುತ್ತಿದ್ದಾರೆ. ದೇವತೆಗಳು ಭೂಮಿಯಲ್ಲಿ ಅವತರಿಸಿದಾಗ ಅವರು ಯಾವ ಯುಗದಲ್ಲಿ ಯಾವ ಕುಲದಲ್ಲಿ ಹುಟ್ಟುವರೋ ಆಯುಗದಲ್ಲಿ ಆ ಕುಲಧರ್ಮದಂತೆ ವಯಸ್ಸಿಗೆ ಅನುಸಾರವಾಗಿ ನಡೆಯಬೇಕು. ಈ ರೀತಿಯ ದೇವತೆಗಳ ಧರ್ಮ ತನಗೆ ಇಷ್ಟ ಎಂದು ದೇವತೆಗಳಿಗೆ ತೋರಿಸಲು ತಾನು ಅಧರ್ಮವೆಂಬ ಅರಣ್ಯಕ್ಕೆ ಬೆಂಕಿಯಂತಿದ್ದರೂ ಲೋಕದ ಅನುಕರಣೆಯನ್ನು ಮಾಡಿದ.

**ನೃತಿರ್ಯಗಾದಿ ರೂಪಕಃ ಸ ಬಾಲ್ಯ ಯೌವನಾದಿ ಯುಕ್ ।**
**ಕ್ರಿಯಾಶ್ಚ ತತ್ತದುದ್ಭವಾಃ ಕರೋತಿಶಾಶ್ವತೋಽಪಿ ಸನ್ ॥ ೧೧ ॥**

**ಅರ್ಥ :- ನೃತಿರ್ಯಗಾದಿರೂಪಕಃ** ನೃ ಮನುಷ್ಯರಂತೆ ಅವತರಿಸಿದ ರಾಮ ಕೃಷ್ಣಾದಿ, **ತಿರ್ಯಕ್** ಮತ್ಸ್ಯವರಾಹಾದಿ **ರೂಪಕಃ** ಅವತಾರವುಳ್ಳ **ಸಃ** ಆ ಶ್ರೀಹರಿಯು **ಶಾಶ್ವತಃ ಸನ್ನಪಿ** ಸದಾಕಾಲ ಏಕಪ್ರಕಾರವುಳ್ಳವನಾದರೂ ಕೂಡ **ಬಾಲ್ಯಯೌವನಾದಿಯುಕ್** ಬಾಲ್ಯಯೌವನಾದಿಗಳಿಂದ ಕೂಡಿದವನಾಗಿ **ತತ್ತದುದ್ಭವಾಃ** ಆಯಾ ವಯಸ್ಸಿನಲ್ಲಿ ಉಂಟಾಗುವ **ಕ್ರಿಯಾಶ್ಚ** ಪ್ರವೃತ್ತಿಗಳನ್ನೂ **ಕರೋತಿ** ಮಾಡುತ್ತಾನೆ.

**ತಾತ್ಪರ್ಯ :-** ಭಗವಂತ ಕೆಲವೊಮ್ಮೆ ಮನುಷ್ಯನಾಗಿ ಅವತರಿಸುತ್ತಾನೆ. ಕೆಲವೊಮ್ಮೆ ಪ್ರಾಣಿಯಾಗಿ ಅವತರಿಸುತ್ತಾನೆ. ಕೆಲವೊಮ್ಮೆ ನರಸಿಂಹ, ಹಯಗ್ರೀವನಂತೆ ಅರ್ಧ ಮನುಷ್ಯ ಅರ್ಧ ಪ್ರಾಣಿಯಾಗಿಯೂ ಅವತರಿಸುತ್ತಾನೆ. ಹೀಗೆ ಬೇರೆ ಬೇರೆಯಾಗಿ ಅವತರಿಸಿದರೂ ಕೂಡ ಅವನು ಯಾವುದೇ ವಿಕಾರವಿಲ್ಲದ ಸದಾತನನು. ಆದರೂ ಕೂಡ ಆಯಾ ರೂಪದಿಂದ ಅವತರಿಸಿದಾಗ ಆಯಾ ರೂಪಕ್ಕೆ ಅನುಗುಣವಾದ ಕರ್ಮಗಳನ್ನು ಮಾಡುತ್ತಿರುತ್ತಾನೆ.

**ಸ ವಿಪ್ರರಾಜ ಗೋಪಕ ಸ್ವರೂಪಕಸ್ತದುದ್ಭವಾಃ ।**
**ತದಾ ತದಾ ವಿಚೇಷ್ಟತೇ ಕ್ರಿಯಾಃ ಸುರಾನ್ ವಿಶಿಕ್ಷಯನ್ ॥ ೧೨ ॥**

**ಅರ್ಥ :- ಸಃ** ಆ ಶ್ರೀ ಹರಿಯು **ಯದಾ ಯದಾ** ಯಾವಾಗ **ವಿಪ್ರರಾಜ ಗೋಪಕಸ್ವರೂಪಃ** ವಿಪ್ರವ್ಯಾಸ ಪರಶುರಾಮ ಮೊದಲಾದ ಬ್ರಾಹ್ಮಣರ **ರಾಜ** ರಾಮಾದಿ ಕ್ಷತ್ರಿಯ **ಗೋಪಕಕೃಷ್ಣಾದಿ** ಗೋಪನಾಗಿ **ಸ್ವರೂಪಃ** ಅವತಾರ

ವುಳ್ಳವನಾಗುವನೋ **ತದಾ ತದಾ** ಆವಾಗ **ತದುದ್ಭವಾಃ** ಆಯಾಯಾ ರೂಪಗಳಿಗೆ ಉಚಿತವಾದ **ಕ್ರಿಯಾಃ** ಕೆಲಸಗಳನ್ನು **ಸುರಾನ್** ದೇವತೆಗಳನ್ನು **ವಿಶಿಕ್ಷಯನ್** ಶಿಕ್ಷಣ ಮಾಡುವುದಕ್ಕಾಗಿ **ವಿಚೇಷ್ಟತೇ** ಮಾಡುತ್ತಾನೆ.

**ತಾತ್ಪರ್ಯ** :- ಭಗವಂತ ತಾನು ಯಾವ ಯಾವ ವರ್ಣದಲ್ಲಿ ಅವತಾರ ಮಾಡುತ್ತಾನೋ ಅಂದರೆ ವ್ಯಾಸ ಪರಶುರಾಮನಾಗಿ ಬ್ರಾಹ್ಮಣಾವತಾರ, ರಾಮಾದಿ ಕ್ಷತ್ರಿಯಾವತಾರ, ಕೃಷ್ಣಾದಿ ಗೋಪಾಲಾವತಾರ ಮಾಡಿದಾಗ ಆಯಾ ರೂಪಗಳಿಗನುಸಾರವಾದ ಕೆಲಸಗಳನ್ನು ದೇವತೆಗಳಿಗೆ ತಿಳಿಸಿ ಕೊಡುವುದಕ್ಕಾಗಿ ಮಾಡುತ್ತಾನೆ.

**ತಥಾಪ್ಯನನ್ಯ ದೇವತಾ ಸಮಂ ನಿಜಂಬಲಂ ಪ್ರಭುಃ ।**
**ಪ್ರಕಾಶಯನ್ ಪುನಃ ಪುನಃ ಪ್ರಕಾಶಯತ್ಯಜೋ ಪುಮಾನ್ ॥ ೧೩ ॥**

**ಅರ್ಥ** :- **ತಥಾಪಿ** ಹೀಗೆ ದೇವತೆಗಳಿಗೆ ಮಾರ್ಗದರ್ಶಕನಾದರೂ ಕೂಡ **ಅಜಃ** ಜನನ ರಹಿತನಾದ **ಪ್ರಭುಃ** ಸರ್ವಸಮರ್ಥನಾದ ಶ್ರೀಹರಿಯು **ಅನನ್ಯದೇವತಾಸಮಂ** ಅನ್ಯದೇವತೆಗಳಿಗೆ ಹೋಲಿಸಲಾಗದ **ನಿಜಂ ಬಲಂ** ತನ್ನ ಸಾಮರ್ಥ್ಯವನ್ನು **ಪ್ರಕಾಶಯನ್** ತೋರುತ್ತಾ **ಪುನಃ ಪುನಃ** ಮತ್ತೆ ಮತ್ತೆ **ಗುಣಾನ್** ಅಲೌಕಿಕವಾದ ಸರ್ವಜ್ಞತ್ವಾದಿ ಗುಣಗಳನ್ನು **ಪ್ರಕಾಶಯತಿ** ಪ್ರಕಟಗೊಳಿಸುತ್ತಾನೆ.

ಹೀಗೆ ಶ್ರೀಹರಿಯು ತಾನು ಸ್ವಯಂ ಜನನ ಮರಣ ರಹಿತನಾದರೂ ಕೂಡ ಆಗಾಗ ದೇವತೆಗಳಿಗೆ ತಿಳಿಸಲು ಲೌಕಿಕ ಕ್ರಿಯೆಗಳನ್ನು ಮಾಡಿದರೂ ತಾನು ಸರ್ವ ಸಮರ್ಥನಾದ್ದರಿಂದ ದೇವತೆಗಳಲ್ಲಿಯೂ ಎಂದೂ ಇರಲಾರದ ತನ್ನ ಸರ್ವಜ್ಞತ್ವಾದಿ ಅಲೌಕಿಕ ಗುಣಗಳನ್ನು ಮಧ್ಯೆ ಮಧ್ಯೇ ತೋರಿಸುತ್ತಿರುತ್ತಾನೆ.

**ಅಥಾತ್ತಯಷ್ಟಿಮೀಕ್ಷ್ಯ ತಾಂ ಸ್ವಮಾತರಂ ಜಗದ್ಗುರುಃ ।**
**ಸ ಪುಪ್ಲುವೇ ತಮನ್ವಗಾನ್ಮನೋ ವಿದೂರ ಮಂಗನಾ ॥ ೧೪ ॥**

**ಅರ್ಥ** :- ಮೊಸರಿನ ಗಡಿಗೆಯನ್ನು ಒಡೆದ ಅನಂತರ **ಜಗದ್ಗುರುಃ** ಜಗತ್ತಿಗೆ ಗುರುವಾದ **ಸಃ** ಆ ಶ್ರೀಕೃಷ್ಣನು **ಅತ್ತಯಷ್ಟಿಂ** ಹಿಡಿದಿಕೊಳ್ಳಲು, **ಸ್ವಮಾತರಂ** ತನ್ನ ತಾಯಿಯನ್ನು **ಈಕ್ಷ್ಯ** ನೋಡಿ **ಪುಪ್ಲುವೇ** ಓಡಲು ಸುರು ಮಾಡಿದನು **ಅಂಗನಾ** ಅಬಲೆಯಾದ ಯಶೋದೆಯು **ಮನೋವಿದೂರಂ**

ಯೋಗಿಗಳಿಂದಲೂ ಮನಸ್ಸಿಗೆ ಅಗಮ್ಯನಾದ, **ತಂ** ಆಕೃಷ್ಣನನ್ನು **ಅನ್ವಗಾತ್** ಹಿಂಬಾಲಿಸಿದಳು.

**ತಾತ್ಪರ್ಯ** :- ಹೀಗೆ ದೇವತೆಗಳಿಗಾಗಿ ಮಾಡಿದ ಚೇಷ್ಟೆಯನ್ನು ನೋಡಿ ಮಾನವ ಸಹಜವಾದ ಗುಣದಿಂದ ಯಶೋದೆ ಕೃಷ್ಣನನ್ನು ಹೊಡೆಯಲು ಕೋಲನ್ನು ಎತ್ತಿದಳು. ಆಗ ಕೃಷ್ಣ ತಾನು ಹೆದರಿದವನಂತೆ ನಟಿಸಿ ಓಡಲು ಶುರು ಮಾಡಿದನು. ಯಶೋದೆಯಾದರೂ ಯೋಗಿಗಳಿಗೂ ಹಿಡಿದಿಡಲು ಅಸಾಧ್ಯ ನಾದ ಕೃಷ್ಣನನ್ನು ಹಿಡಿಯುವನೆಂಬ ಭ್ರಮೆಯಿಂದ ಅವನ ಹಿಂದೆ ಓಡಿದಳು.

**ಪುನಃ ಸಮೀಕ್ಷ್ಯ ತಚ್ಛ್ರಮಂ ಜಗಾಮ ತತ್ಕರಗ್ರಹಮ್**
**ಪ್ರಭುಃ ಸ್ವಭಕ್ತಿವಶ್ಯತಾಂ ಪ್ರಕಾಶಯನ್ನುರುಕ್ರಮಃ ॥ ೧೫ ॥**

**ಅರ್ಥ** :- ಪುನಃ ಅನಂತರ **ಉರುಕ್ರಮಃ** ದೊಡ್ಡ ದೊಡ್ಡ ಹೆಜ್ಜೆ ಇಡುವ ಸಾಮರ್ಥ್ಯವುಳ್ಳ **ಪ್ರಭುಃ** ಶ್ರೀಕೃಷ್ಣನು **ತಚ್ಛ್ರಮಂ** ಆಯಶೋದೆಯ ಕಷ್ಟವನ್ನು **ಸಮೀಕ್ಷ್ಯ** ನೋಡಿ **ಸ್ವಭಕ್ತವಶ್ಯತಾಂ** ತಾನು ಭಕ್ತರಿಗೆ ಯಾವಾಗಲೂ ವಶವಾಗುವವನು ಎಂಬುದನ್ನು **ಪ್ರಕಾಶಯನ್** ತೋರಿಸುವುದಕ್ಕಾಗಿ **ತತ್ಕರ ಗ್ರಹಮ್** ಆ ಯಶೋದೆಯ ಕೈವಶವನ್ನು **ಜಗಾಮ** ಹೊಂದಿದನು.

**ತಾತ್ಪರ್ಯ** :- ಹೀಗೆ ಯಶೋದೆ ಕೃಷ್ಣನನ್ನು ಓಡಿಸಿಕೊಂಡು ಹೋಗುತ್ತಿರಲು ಇಡೀ ಪ್ರಪಂಚವನ್ನು ಹೆಜ್ಜೆಯಿಂದ ಕ್ರಮಿಸಲು ಸಮರ್ಥನಾದ ಉರುಕ್ರಮನಾದ ಶ್ರೀಕೃಷ್ಣನು ತಾಯಿಯ ಕೈಗೆ ಸಿಗದೇ ಓಡಾಡುತ್ತಿದ್ದನು. ಕೊನೆಗೆ ತಾಯಿಯ ಕಷ್ಟವನ್ನು ನೋಡಿದ ಅವನು ತಾನು ಯಾವಾಗಲೂ ಭಕ್ತರ ವಶ ಎಂದು ತೋರಿಸಲೋಸುಗ ತಾಯಿಯ ಕೈಗೆ ಸಿಕ್ಕಿದನು.

**ಸದಾ ವಿಮುಕ್ತಮೀಶ್ವರಂ ನಿಬದ್ಧಮಂಜಸಾಽಽದದೇ ।**
**ಯದೈವ ದಾಮ ಗೋಪಿಕಾ ನ ತತ್ ಪುಪೂರ ತಂ ಪ್ರತಿ ॥ ೧೬ ॥**

**ಅರ್ಥ** :- **ಗೋಪಿಕಾ** ಯಶೋದೆಯು, **ಸದಾ** ಯಾವಾಗಲೂ, **ವಿಮುಕ್ತಂ** ಬಂಧನ ರಹಿತನಾದ **ಈಶ್ವರಂ** ಕೃಷ್ಣನನ್ನು **ಅಂಜಸಾ** ಚೆನ್ನಾಗಿ **ನಿಬದ್ಧುಂ** ಬಂಧಿಸಲು **ದಾಮ** ಹಗ್ಗವನ್ನು **ಯದಾ** ಯಾವಾಗ **ಆದದೇ** ಎತ್ತಿಕೊಂಡಳೋ **ತದಾ** ಆವಾಗ **ತತ್** ಆ ಹಗ್ಗವು **ತಂಪ್ರತಿ** ಆ ಕೃಷ್ಣನನ್ನು ಕುರಿತು **ನ ಪುಪೂರ** ಪೂರ್ಣವಾಗಲಿಲ್ಲ.

ತಾತ್ಪರ್ಯ :- ಯಾವಾಗಲೂ ಯಾರ ಬಂಧನಕ್ಕೂ ನಿಲುಕದ ಭಗವಂತ ನನ್ನು ಯಶೋದೆಯು ಬಂದಿಸಲು ಯಾವಾಗ ಹಗ್ಗವನ್ನು ತೆಗೆದುಕೊಂಡಳೋ ಆವಾಗ ಆ ಹಗ್ಗ ಕೃಷ್ಣನನ್ನು ಬಂದಿಸಲು ಬೇಕಾದಷ್ಟು ದೊಡ್ಡದು ಆಗಲೇ ಇಲ್ಲ.

**ಸಮಸ್ತದಾಮಸಂಚಯಃ ಸುಸಂಧಿತೋऽಪ್ಯಪೂರ್ಣತಾಮ್ ।**
**ಯಯಾವನಂತ ವಿಗ್ರಂಹೇ ಶಿಶುತ್ವ ಸಂಪ್ರದರ್ಶಕೇ ॥ ೧೭ ॥**

ಅರ್ಥ :- **ಸಮಸ್ತದಾಮ ಸಂಚಯಃ** ಅನೇಕ ಹಗ್ಗಗಳ ಸಮೂಹಗಳು **ಸುಸಂಧೀತೋऽಪಿ** ಪರಸ್ಪರ ಗಂಟು ಹಾಕುವಿಕೆಯಿಂದ ದೊಡ್ಡದಾದರೂ ಕೂಡ **ಶಿಶುತ್ವಂ** ಶಿಶುಭಾವವನ್ನು **ಸಂಪ್ರದರ್ಶಕೇ** ತೋರಿಸುತ್ತಿರುವ **ಅನಂತ ವಿಗ್ರಹೇ** ಅಪರಿಮಿತವಾದ ದೇಹವುಳ್ಳ ಕೃಷ್ಣನಿಗೆ **ಅಪೂರ್ಣತಾಂ** ಸ್ವಲ್ಪ ಉಳಿವಿಕೆಯನ್ನು **ಯಯೌ** ಹೊಂದಿತು.

ತಾತ್ಪರ್ಯ :- ಕೃಷ್ಣನನ್ನು ಕಟ್ಟಲು ಪ್ರಾರಂಭಿಸಿದಾಗ ಪ್ರತಿಯೊಂದು ಹಗ್ಗವನ್ನು ತಂದರೂ ಎರಡು ಅಂಗುಲ ಕಮ್ಮಿಯೇ ಆಯಿತು. ಮನೆಯ ಎಲ್ಲಾ ಹಗ್ಗವನ್ನು ಜೋಡಿಸಿ ಕಟ್ಟಲು ಬಂದರೂ ಕೂಡ ಅದೂ ಪರಿಮಾಣವೇ ಇಲ್ಲದ ದೇಹವುಳ್ಳ ಕೃಷ್ಣನಿಗೆ ಅಪೂರ್ಣವೇ ಆಯಿತು.

**ಅಬಂಧಯೋಗ್ಯತಾಂ ಪ್ರಭುಃ ಪ್ರದರ್ಶ್ಯ ಲೀಲಯಾ ಪುನಃ ।**
**ಸ ಏಕವತ್ಸಪಾಶಕಾಂತರಂ ಗತೋऽಖಿಲಂ ಭರಃ ॥ ೧೮ ॥**

**ಸುತಸ್ಯ ಮಾತೃವಶ್ಯತಾಂ ಪ್ರದರ್ಶ್ಯ ಧರ್ಮಮೀಶ್ವರಃ ।**
**ಬಭಂಜ ತೌದಿವಿಸ್ಪೃಶೌ ಯ ಮಾರ್ಜುನೌ ಸುರಾತ್ಮಜೌ ॥ ೧೯ ॥**

ಅರ್ಥ :- **ಅಖಿಲಂಭರಃ** ವಿಶ್ವಂಭರನಾದ **ಪ್ರಭುಃ** ಶ್ರೀಕೃಷ್ಣನು, **ಅಬಂಧಯೋಗ್ಯತಾಂ** ತಾನು ಯಾವ ಬಂಧನಕ್ಕೂ ನಿಲುಕದವನು ಎಂಬುದನ್ನು **ಪ್ರದರ್ಶ್ಯ** ತೋರಿಸಿ, **ಪುನಃ** ಮತ್ತೆ, **ಸುತಸ್ಯ** ಮಗನಿಗೆ, **ಮಾತೃವಶ್ಯತಾಂ** ತಾಯಿಯ ವಶದಲ್ಲಿರುವ **ಧರ್ಮಂ** ಧರ್ಮವನ್ನು **ಪ್ರದರ್ಶ್ಯ** ತೋರಿಸಿ **ಲೀಲಯಾ** ಲೀಲೆಯಿಂದಲೇ **ಸಃ** ಆ ಕೃಷ್ಣನು **ವತ್ಸಪಾಶಕಾಂತರಂ** ಕರುವನ್ನು ಕಟ್ಟುವ ಹಗ್ಗದ ಬಂಧನಕ್ಕೆ ಸಿಲುಕಿದವನು **ಗತಃ** ಆದನು **ತತಃ** ಅನಂತರ, **ಈಶ್ವರಃ** ಶ್ರೀಕೃಷ್ಣನು, **ದಿವಿಸ್ಪೃಶೌಃ** ಆಕಾಶವನ್ನು ಮುಟ್ಟುತ್ತಿರುವ **ಸುರಾತ್ಮಜೌ** ಕುಬೇರನ ಮಕ್ಕಳಾಗಿದ್ದ **ತೌ** ಆ ಯಾವ **ಯಮಾರ್ಜುನೌ** ಜೋಡಿ ಅರ್ಜುನವೃಕ್ಷಗಳನ್ನು **ಬಭಂಜ** ಬೀಳಿಸಿದನು.

ತಾತ್ಪರ್ಯ :- ತನ್ನ ಉದರದಲ್ಲಿ ಎಲ್ಲಾ ಪ್ರಪಂಚವನ್ನು ಧರಿಸಿದ ಭಗವಂತನು ತಾನು ಯಾರ ಬಂಧನಕ್ಕೂ ಸಿಲುಕದವನೆಂದು ತೋರಿಸಿಕೊಟ್ಟು ನಂತರ ಮಗುವಾದವನು ಯಾವಾಗಲೂ ತಾಯಿಯ ವಶದಲ್ಲಿ ಇರಬೇಕೆಂಬ ನ್ಯಾಯವನ್ನು ತೋರಿಸಲು ತಾನು ಕೇವಲ ಕರುವನ್ನು ಕಟ್ಟುವ ಹಗ್ಗದ ಬಂಧನಕ್ಕೆ ಸಿಕ್ಕಿದನು. ಹೀಗೆ ತಾಯಿಯು ಕೃಷ್ಣನನ್ನು ಒರಳಿಗೆ ಕಟ್ಟಿ ಒಳಹೋಗಲು ಕೃಷ್ಣನು ಕುಬೇರನ ಮಕ್ಕಳಾದ ಶಾಪಗ್ರಸ್ತರಾದ ಗಗನಚುಂಬಿ ಜೋಡಿಅರ್ಜುನಮರಗಳನ್ನು ಬೀಳಿಸಿದನು.

**ಪುರಾಧುನಿಶ್ಚಮುಸ್ತಥಾಪಿ ಪೂತನಾ ಸಮನ್ವಿತೌ**
**ಅನೋಕ್ಷ ಸಂಯುತೌ ತಪಃ ಪ್ರಚಕ್ರತುಃ ಶಿವಾಂ ಪ್ರತಿ ॥**
**ತಯಾ ವರೋಽಪ್ಯವಧ್ಯತಾ ಚತುರ್ಷು ಚ ಪ್ರಯೋಜಿತಃ ॥ ೨೦ ॥**

**ಅರ್ಥ** :- **ಪುರಾ** ಹಿಂದೆ **ಪೂತನಾಸಮನ್ವಿತೌ** ಪೂತನಿಯಿಂದ ಕೂಡಿಕೊಂಡು **ಅನೋಕ್ಷಸಂಯುತೌ** ಶಕಟಾಸುರನೊಂದಿಗೆ ಕೂಡಿಕೊಂಡು **ಧುನಿಃ** ಧುನಿಯಂಬ ಅಸುರನು **ತಥಾ** ಹಾಗೆಯೇ **ಚಮುಶ್ಚ** ಚಮು ಎಂಬ ಅಸುರನೂ ಕೂಡ **ಶಿವಾಂ ಪ್ರತಿ** ಪಾರ್ವತಿಯನ್ನು ಕುರಿತು **ತಪಃ** ತಪಸ್ಸನ್ನೂ **ಪ್ರಚಕ್ರತುಃ** ಮಾಡಿದರು. **ತಯಾ** ಆ ಪಾರ್ವತಿಯಿಂದ **ಅವಧ್ಯತಾ** ಅವಧ್ಯತ್ವರೂಪ **ವರೋಽಪಿ** ವರವೂ ಕೂಡ **ಚತುರ್ಷು ಚ** ಆ ನಾಲ್ವರಲ್ಲಿಯೂ ಕೂಡ **ಪ್ರಯೋಜಿತಃ** ಕೊಡಲ್ಪಟ್ಟಿತು.

ತಾತ್ಪರ್ಯ :- ಹಿಂದೆ ಧುನಿ ಮತ್ತು ಚಮು ಎಂಬ ಅಸುರರು ಪೂತನಿ ಮತ್ತು ಶಕಟಾಸುರನೊಂದಿಗೆ ಕೂಡಿಕೊಂಡು ಪಾರ್ವತಿಯನ್ನು ಕುರಿತು ತಪಸ್ಸು ಮಾಡಿದ್ದರು. ಈ ಪಾರ್ವತಿಯು ನಾಲ್ವರಿಗೂ ಕೂಡ ಒಟ್ಟಿಗೆ ಅವಧ್ಯತ್ವ ವರವನ್ನು ನೀಡಿದ್ದಳು.

**ಅನಂತರಂ ತೃಣೋದ್ಭ್ರಮಿಸ್ತಪೋಚರತ್ ವರಂ ಚ ತಮ್ ।**
**ಅವಾಪ ತೇ ತ್ರಯೋ ಹತಾಃ ಶಿಶುಸ್ವರೂಪವಿಷ್ಣುನಾ ॥ ೨೧ ॥**

**ಅರ್ಥ** :- **ಅನಂತರಂ** ಈ ನಾಲ್ವರೂ ವರವನ್ನು ಪಡೆದ ಅನಂತರ, **ತೃಣೋದ್ಭ್ರಮಿಃ** ತೃಣಾವರ್ತನಾಮಕ ಅಸುರನು, **ತಪಃ** ಪಾರ್ವತಿಯನ್ನು ಕುರಿತು ತಪಸ್ಸನ್ನು **ಅಚರತ್** ಮಾಡಿದನು. **ತಂ ವರಂಚ** ಅವಧ್ಯತ್ವ ವರವನ್ನು

ಅವಾಪ ಹೊಂದಿದನು **ಶಿಶುಸ್ವರೂಪವಿಷ್ಣುನಾ** ಮಗುವಿನ ರೂಪದಲ್ಲಿರುವ ವಿಷ್ಣುವಿನಿಂದ **ತೇ ತ್ರಯಃ** ಆ ಮೂವರೂ (ಪೂತನಾ, ಶಕಟಾಕ್ಷ, ತೃಣಾವರ್ತ) **ಹತೌ** ಸಾಯಿಸಲ್ಪಟ್ಟಿದ್ದರು.

**ತಾತ್ಪರ್ಯ** :- ಅದೇ ತರಹ ತೃಣಾವರ್ತಾನೆಂಬ ಅಸುರನೂ ಕೂಡ ಪಾರ್ವತಿಯಿಂದ ಅವಧ್ಯತ್ವ ವರವನ್ನು ಪಡೆದಿದ್ದನು. ಪೂತನೀ, ಶಕಟಾಕ್ಷ ತೃಣಾವರ್ತನೆಂಬ ಈ ಮೂವರೂ ಮಗುವಿನ ರೂಪದಲ್ಲಿದ್ದ ಕೃಷ್ಣನಿಂದ ಹತರಾದರು.

**ಧುನಿಶ್ಚಮುಶ್ಚ ತೌತರೂ ಸಮಾಶ್ರಿತೌ ನಿಷೂದಿತೌ ।**
**ತರುಪ್ರಭಂಗತೋಽಮುನಾ ತರೂಚಶಾಪಸಂಭವೌ ॥ ೨೩ ॥**

**ಅರ್ಥ** :- **ಅಮುನಾ** ಈ ಶ್ರೀಕೃಷ್ಣನಿಂದ, **ತೌತರೂ** ಆ ಅರ್ಜುನ ವೃಕ್ಷಗಳನ್ನು **ಸಮಾಶ್ರಿತೌ** ಆಶ್ರಯಿಸಿಕೊಂಡ **ದುನಿಶ್ಚಮುಶ್ಚ** ಧುನಿ ಮತ್ತು ಚಮು ರೂಪ ಅಸುರರು, **ತರು ಪ್ರಭಂಗತಃ** ಎರಡು ವೃಕ್ಷಗಳ ಮುರಿವಿಕೆ ಯಿಂದ **ನಿಷೂದಿತೌ** ಸಾಯಿಸಲ್ಪಟ್ಟರು **ತರೂ ಚ** ಆ ಅರ್ಜುನ ವೃಕ್ಷಗಳಾದರೂ, **ಶಾಪಸಂಭವೌ** ಶಾಪದಿಂದ ಹುಟ್ಟಿದವುಗಳು.

**ತಾತ್ಪರ್ಯ** :- ಹೀಗೆ ಅವಧ್ಯರಾಗಿದ್ದ ದುನಿ ಮತ್ತು ಚಮುಗಳು ಈ ವೃಕ್ಷಗಳಲ್ಲಿ ಸೇರಿಕೊಂಡಿದ್ದರು. ಶ್ರೀಕೃಷ್ಣನು ಈ ವೃಕ್ಷಗಳನ್ನು ಬೀಳಿಸುವ ಮೂಲಕ ಈ ವೃಕ್ಷದಲ್ಲಿ ಸೇರಿಕೊಂಡಿದ್ದ ಧುನಿ ಮತ್ತು ಚಮೂಗಳನ್ನು ಕೂಡ ಸಾಯಿಸಿದನು. ಈ ವೃಕ್ಷಗಳಾದರೂ ನಾರದರ ಶಾಪದಿಂದ ಹುಟ್ಟಿದವುಗಳು.

**ಪುರಾಹಿ ನಾರದಾಂತಿಕೇ ದಿಗಂಬರೌ ಶಶಾಪ ಸಃ ।**
**ಧನೇಶಪುತ್ರಕೌದ್ರುತಂ ತರುತ್ವಮಾಪ್ನುತಂ ತ್ವಿತಿ ॥ ೨೩ ॥**

**ಅರ್ಥ** :- **ಪುರಾ** ಹಿಂದೆ **ಸಃ ನಾರದಃ** ಆ ನಾರದರು, **ನಾರದಾಂತಿಕೇ** ತನ್ನ ಸಮೀಪಕ್ಕೆ **ದಿಗಂಬರೌ** ವಿವಸ್ತ್ರರಾಗಿ ನಿಂತ **ಧನೇಶಪುತ್ರಕೌ** ಕುಬೇರನ ಮಕ್ಕಳಾದ ನಲಕೂಬರ, ಮಣಿಗ್ರೀವರನ್ನು, **ಧ್ರುತಂ** ಕೂಡಲೇ **ತು** ದೀರ್ಘ ಕಾಲ **ತರುತ್ವಂ** ಮರದ ಭಾವವನ್ನು **ಆಪ್ನುತಂ** ಹೊಂದಿರಿ **ಇತಿ** ಎಂದು **ಶಶಾಪ** ಶಾಪವನ್ನು ಕೊಟ್ಟನು.

ತಾತ್ಪರ್ಯ :- ಹಿಂದೆ ಕುಬೇರನ ಮಕ್ಕಳು ಉನ್ಮತ್ತರಾಗಿ ನಾರದರ ಸಮೀಪಕ್ಕೆ ದಿಗಂಬರರಾಗಿ ಬಂದರು. ಹಿರಿಯರ ಮುಂದೆ, ಗುರುಗಳ ಮುಂದೆ, ಸ್ತ್ರೀಯರ ಮುಂದೆ ಎಲ್ಲಾ ದಿಗಂಬರರಾಗುವುದು ಅಶಾಸ್ತ್ರೀಯ. ಆದ್ದರಿಂದ ನಾರದರು ಕೂಡಲೇ ನೀವು ದೀರ್ಘಕಾಲ ಮರಗಳಾಗಿರಿ ಎಂದು ಶಾಪವನ್ನು ಕೊಟ್ಟರು.

**ತತೋ ಹಿ ತೌ ನಿಜಾಂ ತನುಂ ಹರೇಃ ಪ್ರಸಾದತಃ ಶುಭೌ ।**
**ಅವಾಪತುಃ ಸ್ತುತಿಂ ಪ್ರಭೋರ್ವಿಧಾಯ ಜಗ್ಮತುರ್ಗೃಹಮ್ ॥೨೪॥**

**ಅರ್ಥ** :- **ತತಃ** ಅನಂತರ **ತೌ** ಆ ನಲಕೂಬರ ಮಣಿಗ್ರಿವರು **ಹರೇಃ** ಭಗವಂತನಾದ ಶ್ರೀಕೃಷ್ಣನ **ಪ್ರಸಾದತಃ** ಅನುಗ್ರಹದಿಂದ **ಶುಭೌ** ಶಾಪಮುಕ್ತ ರಾದವರಾಗಿ **ನಿಜಾಂ ತನುಂ** ತಮ್ಮ ಮೂಲರೂಪವನ್ನು **ಅವಾಪತುಃ** ಹೊಂದಿದರು **ಪ್ರಭೋಃ** ಕೃಷ್ಣನ **ಸ್ತುತಿಂ** ಸ್ತೋತ್ರವನ್ನು **ವಿಧಾಯ** ಮಾಡಿ **ಗೃಹಂ** ತಮ್ಮ ಪದವಿಯನ್ನು **ಜಗ್ಮತುಃ** ಹೊಂದಿದರು.

ತಾತ್ಪರ್ಯ :- ಹೀಗೆ ಕೃಷ್ಣನಿಂದ ಶಾಪಮುಕ್ತರಾದ ಕುಬೇರನ ಮಕ್ಕಳು ತಮ್ಮಸ್ವರೂಪದೇಹವನ್ನು ಹೊಂದಿ ಕೃಷ್ಣನನ್ನು ಸ್ತುತಿಸಿ ತಮ್ಮ ಪದವಿಯನ್ನು ಮರಳಿ ಪಡೆದರು.

**ನಲಕೂಬರ ಮಣಿಗ್ರೀವೌ ಮೋಚಯಿತ್ವಾ ಚ ಶಾಪತಃ ।**
**ವಾಸುದೇವೋಽಥ ಗೋಪಾಲೈರ್ವಿಸ್ಮಿತೈರಭಿವೀಕ್ಷಿತಃ ॥ ೨೫ ॥**

**ಅರ್ಥ** :- **ನಲಕೂಬರಮಣಿಗ್ರೀವೌ** ನಲಕೂಬರ ಮಣಿಗ್ರೀವರನ್ನು **ಶಾಪತಃ** ಶಾಪದಿಂದ **ಮೋಚಯಿತ್ವಾ** ಮುಕ್ತಿಗೊಳಿಸಿ **ವಾಸುದೇವಃ** ಶ್ರೀಕೃಷ್ಣನು **ಅಥ** ಅವರಿಬ್ಬರೂ ಹಿಂತಿರುಗಿದ ಅನಂತರ **ಗೋಪಾಲೈಃ** ಗೊಲ್ಲರಿಂದ **ವಿಸ್ಮಿತೈಃ** ಆಶ್ಚರ್ಯಚಕಿತರಾಗಿ **ಅಭಿವೀಕ್ಷಿತಃ** ನೋಡಲ್ಪಟ್ಟನು.

ತಾತ್ಪರ್ಯ :- ಹೇಗೆ ಶ್ರೀಕೃಷ್ಣನು ಇವರಿಬ್ಬರನ್ನು ಶಾಪದಿಂದ ವಿಮೋಚನೆ ಗೊಳಿಸಿದನು. ನಂತರ ಅವರು ಹೊರಹೋದರು. ಇದೆಲ್ಲವನ್ನೂ ಮಾಡಿದ ಕೃಷ್ಣನನ್ನು ಗೋಪಾಲಕರು ಅತ್ಯಂತ ಆಶ್ಚರ್ಯದಿಂದ ನೋಡುತ್ತಿದ್ದರು.

**ವೃಂದಾವನಂ ಯಿಯಾಸುಃ ಸನ್ ನಂದಸೂನು ರ್ಬೃಹದ್ವನೇ ।**
**ಸಸರ್ಜ ರೋಮಕೂಪೇಭ್ಯೋ ವೃಕಾನ್ ವ್ಯಾಘ್ರಸಮಾನ್ ಬಲೇ ॥೨೬॥**

**ಅರ್ಥ :-** ನಂದಸೂನುಃ ಶ್ರೀಕೃಷ್ಣನು ವೃಂದಾವನಂ ವೃಂದಾವನವನ್ನು ಕುರಿತು, ಯಿಯಾಸುಃ ಸನ್ ಹೋಗಲು ಇಚ್ಛೆಯುಳ್ಳವನಾಗಿ ಬೃಹದ್ವನೇ ನಂದಗೋಕುಲದಲ್ಲಿ ರೋಮಕೂಪೇಭ್ಯಃ ರೋಮಕೂಪಗಳಿಂದ ಬಲೇ ಬಲದಲ್ಲಿ, ವ್ಯಾಘ್ರಸಮಾನಃ ಹುಲಿಗಳಿಗೆ ಸಮಾನವಾದ, ವೃಕಾನ್ ತೋಳಗಳನ್ನು ಸಸರ್ಜ ಸೃಷ್ಟಿಸಿದನು.

**ತಾತ್ಪರ್ಯ :-** ನಂತರ ಶ್ರೀಕೃಷ್ಣನು ಗೋಕುಲದಲ್ಲಿ ಕಾಡುಗಳು ಕಡಿಮೆಯಾಗುವುದನ್ನು ನೋಡಿ ಒಳ್ಳೆ ಮರಗಳಿಂದ ಹರಿದ್ವರ್ಣವಾಗಿದ್ದ ವೃಂದಾವನವನ್ನು ಕುರಿತು ಹೋಗಲು ಇಚ್ಛೆಯುಳ್ಳವನಾಗಿ ತಮ್ಮವರ ಬಳಿ ವಿಷಯವನ್ನು ಪ್ರಸ್ತಾಪಿಸಿದಾಗ ಹಿರಿಯರು ತಮ್ಮ ಊರನ್ನು ಬಿಡಲು ಒಪ್ಪಲಿಲ್ಲ. ಆಗ ಶ್ರೀಕೃಷ್ಣನು ತನ್ನ ರೋಮಕೂಪಗಳಿಂದ ನಾನಾ ತೋಳಗಳನ್ನು ಸೃಷ್ಟಿಸಿದನು. ಆ ತೋಳಗಳಾದರೂ ಹುಲಿಯಷ್ಟೇ ಸಮಾನವಾದ ಬಲವುಳ್ಳವುಗಳು. ಭಗವಂತನ ವೃಕಾವತಾರ ಇದು ಎಂದು ತಿಳಿಯಬೇಕು.

**ಅನೇಕ ಕೋಟಿ ಸಂಖ್ಯೈಸ್ತೈಃ ಪೀಡ್ಯಮಾನಾ ವ್ರಜಾಲಯಾಃ ।**
**ಯಯುರ್ವೃಂದಾವನಂ ನಿತ್ಯಾನಂದಮಾದಾಯ ನಂದಜಮ್ ॥ ೨೭ ॥**

**ಅರ್ಥ :- ಅನೇಕ ಕೋಟಿ ಸಂಖ್ಯೈಃ** ಬಹು ಕೋಟಿ ಸಂಖ್ಯಾಕಗಳಾದ ತೈಃ ಆ ತೋಳಗಳಿಂದ ಪೀಡ್ಯಮಾನಾಃ ಪೀಡಿಸಲ್ಪಟ್ಟ ವ್ರಜಾಲಯಾಃ ಗೋಕುಲ ವಾಸಿಗಳು, ನಿತ್ಯಾನಂದಂ ಸದಾ ಆನಂದ ರೂಪಿಯಾದ ನಂದಜಂ ಶ್ರೀಕೃಷ್ಣನನ್ನು ಆದಾಯ ಕರೆದುಕೊಂಡು ವೃಂದಾವನಂ ವೃಂದಾವನವನ್ನು ಕುರಿತು **ಯಯುಃ** ಹೋದರು.

**ತಾತ್ಪರ್ಯ :-** ಹೀಗೆ ಅನೇಕ ಕೋಟಿ ಸಂಖ್ಯೆಗಳಿಂದ ತೋಳಗಳು ಹುಟ್ಟಿ ಗೋಕುಲ ವಾಸಿಗಳನ್ನು ಪೀಡಿಸಲು ತೊಡಗಿದವು. ಆಗ ಪೀಡಿತರಾದ ಗೋಕುಲವಾಸಿಗಳು ಇನ್ನು ನಾವು ಇಲ್ಲಿ ವಾಸಮಾಡುವಂತಿಲ್ಲ ಎಂದು ತಿಳಿದು ಕೃಷ್ಣನನ್ನು ಕರೆದುಕೊಂಡು ವೃಂದಾವನಕ್ಕೆ ಹೊರಟುಹೋದರು.

**ಇಂದಿರಾಪತಿರಾನಂದಪೂರ್ಣೋ ವೃಂದಾವನೇ ಪ್ರಭುಃ ।**
**ನಂದಯಾಮಾಸ ನಂದಾದೀನುದ್ದಾಮತರ ಚೇಷ್ಟಿತೈಃ ॥ ೨೮ ॥**

**ಅರ್ಥ** :- **ವೃಂದಾವನೇ** ಆ ವೃಂದಾವನದಲ್ಲಿ **ಆನಂದಪೂರ್ಣಃ** ಪರಿಪೂರ್ಣವಾದ ಆನಂದವುಳ್ಳ **ಇಂದಿರಾಪತಿಃ** ಲಕ್ಷ್ಮೀಪತಿಯಾದ **ಪ್ರಭುಃ** ಶ್ರೀಕೃಷ್ಣನು, **ಉದ್ದಾಮತರಚೇಷ್ಟಿತೈಃ** ಅತ್ಯುತ್ತಮವಾದ ಲೀಲೆಗಳಿಂದ **ನಂದಾದೀನ್** ನಂದ ಮೊದಲಾದ ಗೋಪಾಲರನ್ನು **ನಂದಯಾಮಾಸ** ಸಂತೋಷಗೊಳಿಸಿದನು.

**ತಾತ್ಪರ್ಯ** :- ಪರಿಪೂರ್ಣವಾದ ಆನಂದರೂಪಿಯಾದ ಲಕ್ಷ್ಮೀಪತಿಯಾದ ಸರ್ವಸಮರ್ಥನಾದ ಶ್ರೀಕೃಷ್ಣನು ತನ್ನ ಅತಿಶ್ರೇಷ್ಠವಾದ ಲೀಲೆಗಳಿಂದ ನಂದ ಮೊದಲಾದ ಎಲ್ಲಾ ಗೋಪಾಲರನ್ನು ಸಂತೋಷಗೊಳಿಸಿದನು.

**ನ ಚಂದ್ರತೋ ಹಸತ್ಕಾಂತವದನೇನೇಂದು ವರ್ಚಸಾ ।**
**ಸಂಯುತೋ ರೌಹಿಣೇಯೇನ ವತ್ಸಪಾಲೋ ಬಭೂವ ಹಿ ॥೨೯॥**

**ಅರ್ಥ** :- **ಚಂದ್ರತಃ** ಚಂದ್ರನನ್ನು **ಹಸತ್** ತಿರಸ್ಕಾರ ಮಾಡುವ **ಕಾಂತವದನೇನ** ಮನೋಹರವಾದ ಮುಖವುಳ್ಳ **ಇಂದುವರ್ಚಸಾ** ಚಂದ್ರನ ಕಾಂತಿಯುಳ್ಳ **ರೌಹಿಣೇಯೇನ** ಬಲರಾಮನಿಂದ **ಸಹತಃ** ಸಹಿತನಾದ **ಸಃ** ಆ ಶ್ರೀಕೃಷ್ಣನು **ವತ್ಸಪಾಲ** ಕರುಕಾಯುವವನು **ಬಭೂವ ಹಿ** ಆದನಷ್ಟೆ

**ತಾತ್ಪರ್ಯ** :- ಚಂದ್ರನನ್ನು ಧಿಕ್ಕರಿಸುವ ಸುಂದರವದನನಾದ ಚಂದ್ರನಂತಹ ಕಾಂತಿಯ ಬಲರಾಮನೊಂದಿಗೆ ಶ್ರೀಕೃಷ್ಣನು ತಾನೂ ಕರುಗಳನ್ನು ಕಾಯುವವನಾಗಿ ಆದನು.

**ದೈತ್ಯಂ ಸವತ್ಸತನುಮಪ್ರಮೇಯಃ**
**ಪ್ರಗೃಹ್ಯ ಕಂಸಾನುಗಂ ಹರವರಾದಪರೈರವಧ್ಯಮ್ ।**
**ಪ್ರಕ್ಷಿಪ್ಯ ವೃಕ್ಷಶಿರಸಿನ್ಯಹನದ್ ಬಕೋऽಪಿ**
**ಕಂಸಾನುಗೋಥ ವಿಭುಮಚ್ಯುತಮಾಸಸಾದ ॥ ೩೦ ॥**

**ಅರ್ಥ** :- **ಅಪ್ರಮೇಯಃ** ಅಪ್ರಮೇಯನಾದ ಸಃ ಆ ಶ್ರೀಕೃಷ್ಣನು **ಹರವರಾತ್** ಶಿವನವರದಿಂದ **ಅಪರೈಃ** ಬೇರೆಯವರಿಂದ **ಅವಧ್ಯಂ** ಸಾಯಿಸಲು ಅಸಾಧ್ಯನಾದ **ಕಂಸಾನುಗಂ** ಕಂಸನ ಅನುಚರನಾದ, **ವತ್ಸತನುಂ** ಕರುವಿನ ರೂಪದಿಂದ ಬಂದ, **ದೈತ್ಯಂ** ರಾಕ್ಷಸನನ್ನು, **ಪ್ರಗೃಹ್ಯ** ಹಿಡಿದು **ವೃಕ್ಷಶಿರಸಿ** ಮರದ ತುದಿಗೆ **ಪ್ರಕ್ಷಿಪ್ಯ** ಎಸೆದು **ನ್ಯಹನತ್** ಕೊಂದನು **ಅಥ**

ಅನಂತರ **ಕಂಸಾನುಗಃ** ಕಂಸನ ಭೃತ್ಯನಾದ **ಬಕೋಽಪಿ** ಬಕಾಸುರನಾದರೂ **ವಿಭುಂ** ಸರ್ವಸಮರ್ಥನಾದ **ಅಚ್ಯುತಂ** ಶ್ರೀಕೃಷ್ಣನನ್ನು **ಆಸಸಾದ** ಹೊಂದಿದನು.

**ತಾತ್ಪರ್ಯ** :- ಹರವರದಿಂದ ಕೊಬ್ಬಿದ ಯಾರಿಂದಲೂ ಸಂಹರಿಸಲು ಅಶಕ್ಯನಾದ ಕಂಸನ ಅನುಚರನಾದ ಕರುವಿನ ವೇಷವನ್ನು ಧರಿಸಿ ಬಂದ ವತ್ಸನೆಂಬ ಅಸುರನನ್ನು ಅಪ್ರಮೇಯನಾದ ಶ್ರೀಕೃಷ್ಣ ಮರದ ತುದಿಗೆ ಎಸೆದು ಕೊಂದನು. ನಂತರ ಕಂಸನ ಇನ್ನೊಬ್ಬ ಅನುಚರ ಬಕಾಸುರನು ಕೃಷ್ಣನನ್ನು ಕೊಲ್ಲಲು ಬಂದನು.

**ಸ್ಕಂದಪ್ರಸಾದಕವಚಃ ಸ ಮುಖೇ ಚಕಾರ ಗೋವಿಂದ**
**ಮಗ್ನಿವದಮುಂ ಪ್ರದಹಂತಮುಚ್ಚೈಃ ।**
**ಚಚ್ಛರ್ದ ತುಂಡಶಿರಸೈವ ನಿಹಂತು ಮೇನಂ**
**ಆಯಾಂತಮೀಕ್ಷ್ಯ ಜಗೃಹೇಽಸ್ಯ ಸ ತುಂಡಮೀಶಃ ॥ ೩೧ ॥**

**ಅರ್ಥ** :- **ಸ್ಕಂದ ಪ್ರಸಾದ ಕವಚಃ** ಸ್ಕಂದವರದ ರಕ್ಷಣೆಯನ್ನು ಹೊಂದಿದ **ಸಃ** ಆ ಬಕಾಸುರನು **ಮುಖೇ** ಬಾಯಲ್ಲಿ **ಗೋವಿಂದಂ** ಕೃಷ್ಣನನ್ನು **ಚಕಾರ** ನುಂಗಿದನು **ಅಗ್ನಿವದ್** ಬೆಂಕಿಯಂತೆ **ಉಚ್ಚೈಃ** ಜೋರಾಗಿ **ಪ್ರದಹಂತಂ** ಸುಡುತ್ತಿರುವ **ಅಮುಂ** ಈ ಕೃಷ್ಣನನ್ನು **ಚಚ್ಛರ್ದ** ವಮನ ಮಾಡಿದನು **ತುಂಡಶಿರಸೈವ** ಕೊಕ್ಕಿನ ತುದಿಯಿಂದಲೇ **ಏನಂ** ಶ್ರೀಕೃಷ್ಣನನ್ನು **ನಿಹಂತಂ** ಕೊಲ್ಲಲು **ಆಯಾಂತಂ** ಬಂದವವನ್ನಾಗಿ, **ಈಕ್ಷ್ಯ** ನೋಡಿ, **ಸಃ** ಆ ಶ್ರೀಕೃಷ್ಣನು **ಅಸ್ಯ** ಈ ಬಕನ **ತುಡಂ** ಕೊಕ್ಕನ್ನು **ಜಗೃಹೇ** ಹಿಡಿದನು.

**ತಾತ್ಪರ್ಯ** :- ನಂತರ ಪೂತನಿಯ ಸಹೋದರನಾದ ಕಂಸನ ಭೃತ್ಯನಾದ ಷಣ್ಮುಖನವರದಿಂದ ಅವಧ್ಯನಾದ ಈ ಬಕನು ಕೃಷ್ಣನನ್ನು ನುಂಗಿದನು. ಆದರೆ ಹೊಟ್ಟೆಯಲ್ಲಿ ಈ ಕೃಷ್ಣನು ಬೆಂಕಿಯಂತೆ ಸುಡಲು ಪ್ರಾರಂಭಿಸಿದನು. ಆಗ ಕೂಡಲೇ ಅವನನ್ನು ವಮನ ಮಾಡಿದನು. ನಂತರ ಕೃಷ್ಣನು ತನ್ನನ್ನು ಕೊಲ್ಲಲು ಬಂದ ಆ ಬಕನ ಕೊಕ್ಕನ್ನು ಹಿಡಿದನು.

**ತುಂಡದ್ವಯಂ ಯದುಪತಿಃ ಕರಪಲ್ಲವಾಭ್ಯಾಂ**
**ಸಂಗೃಹ್ಯ ಚಾಶು ವಿದದಾರಹಿ ಪಕ್ಷಿದೈತ್ಯಮ್ ।**
**ಬ್ರಹ್ಮಾದಿಭಿಃ ಕುಸುಮವರ್ಷಿಭಿರೀಡ್ಯಮಾನಃ**
**ಸಾಯಂ ಯಯೌ ವ್ರಜಭುವಂ ಸಹಿತೋಽಗ್ರಜೇನ ॥ ೩೨ ॥**

**ಅರ್ಥ :- ಯದುಪತಿಃ** ಶ್ರೀಕೃಷ್ಣನು **ಕರಪಲ್ಲವಾಭ್ಯಾಂ** ಚಿಗುರಿನಂತಹ ಕೈಗಳಿಂದ **ತುಂಡದ್ವಯಂ** ಎರಡು ಕೊಕ್ಕುಗಳನ್ನು **ಸಂಗೃಹ್ಯ** ಹಿಡಿದು **ಆಶು** ಕೂಡಲೇ **ಪಕ್ಷಿದೈತ್ಯಮ್** ಪಕ್ಷಿರೂಪದ ಅಸುರನನ್ನು **ವಿದದಾರಹಿ** ಸೀಳಿದನೂ ಕೂಡ **ಬ್ರಹ್ಮಾದಿಭಿಃ** ಬ್ರಹ್ಮಾದಿ ದೇವತೆಗಳಿಂದ **ಕುಸುಮವರ್ಷಿಭಿಃ** ಹೂವಿನ ಮಳೆಗಳಿಂದ **ಈಡ್ಯಮಾನಃ** ಸ್ತೋತ್ರ ಮಾಡಲ್ಪಟ್ಟವನಾಗಿ **ಸಾಯಂ** ಸಾಯಂಕಾಲ **ಅಗ್ರಜೇನ** ಅಣ್ಣನಿಂದ **ಸಹಿತಃ** ಸಹಿತನಾಗಿ **ವ್ರಜಭುವಂ** ನಂದಗೋಕುಲವನ್ನು ಕುರಿತು **ಯಯೌ** ಹೋದನು.

**ತಾತ್ಪರ್ಯ :-** ಹೀಗೆ ತನ್ನನ್ನು ಕೊಲ್ಲಲು ಬಂದ ಬಕಾಸುರನನ್ನು ಕೃಷ್ಣನು ಎರಡು ಕೊಕ್ಕುಗಳನ್ನು ಹಿಡಿದು ಅದನ್ನು ಸೀಳಿದನು. ಹೀಗೆ ಅವನನ್ನು ಕೊಲ್ಲುವ ಮೂಲಕ ದೇವತೆಗಳಿಗೆ ಸಂತೋಷವನ್ನುಂಟು ಮಾಡಿದನು. ದೇವತೆಗಳೆಲ್ಲಾ ಹೂವಿನ ಮಳೆಯನ್ನು ಸುರಿಸುತ್ತಾ ಕೃಷ್ಣನನ್ನು ಸ್ತೋತ್ರ ಮಾಡಿದರು.

ನಂತರ ಕೃಷ್ಣನು ಸಾಯಂಕಾಲವಾಗಲು ಅಣ್ಣನೊಂದಿಗೆ ಕೂಡಿಕೊಂಡು ಗೋಕುಲಕ್ಕೆ ಹಿಂತಿರುಗಿದನು.

**ಏವಂ ಸ ದೇವ ವರವಂದಿತಪಾದಪದ್ಮೋ**
**ಗೋಪಾಲಕೇಷು ವಿಹರನ್ ಭುವಿಷಷ್ಠ ಮಬ್ದಮ್ ।**
**ಪ್ರಾಪ್ತೋ ಗವಾಮಖಿಲಪೋಽಪಿಹಿ ಪಾಲಕೋಽಭೂದ್**
**ವೃಂದಾವನಾಂತರಗಸಾಂದ್ರಲತಾವಿತಾನೇ ॥ ೩೩ ॥**

**ಅರ್ಥ :- ದೇವವರವಂದಿತಪಾದಪದ್ಮಃ** ದೇವಾನುದೇವತೆಗಳಿಂದ ನಮಿಸಲ್ಪಡುವ ಪಾದಕಮಲವುಳ್ಳವ ಆ ಶ್ರೀಕೃಷ್ಣನು **ಏವಂ** ಈ ರೀತಿಯಾಗಿ **ಭುವಿ** ಭೂಮಿಯಲ್ಲಿ **ಗೋಪಾಲಕೇಷು** ಗೋಪಾಲರ ಮಧ್ಯದಲ್ಲಿ **ವಿಹರನ್** ವಿಹರಿಸುತ್ತಾ **ಷಷ್ಠ** ಆರನೆಯ **ಅಬ್ದಂ** ವಯಸ್ಸನ್ನು **ಪ್ರಾಪ್ತಃ** ಹೊಂದಿದನು **ಅಖಿಲಪೋಽಪಿ** ಎಲ್ಲರಪಾಲಕನಾದರೂ **ವೃಂದಾವನಾಂತರಂಗಸಾಂದ್ರಲತಾವಿತಾನೇ** ವೃಂದಾವನದೊಳಗಿನ ನಿಬಿಡವಾದ ಲತಾ ಕುಂಜದಲ್ಲಿ **ಗವಾಂ** ಹಸುಗಳ **ಪಾಲಕಃ** ರಕ್ಷಕನು, **ಅಭೂತ್** ಆದನು.

**ತಾತ್ಪರ್ಯ :-** ಭಗವಂತ ಸ್ವಯಂ ದೇವಾನುದೇವತೆಗಳಿಂದ ವಂದಿಸಲ್ಪಟ್ಟವನಾದರೂ ಭೂಮಿಯಲ್ಲಿ ಗೋಪಾಲಕರ ಮಧ್ಯೆ ಸಾಮಾನ್ಯ

ಮನುಷ್ಯನಂತೆ ವಿಹಾರ ಮಾಡಿದನು. ಹೀಗಿರಲು ಅವನು ಆರನೇ ವಯಸ್ಸಿಗೆ ಕಾಲಿಟ್ಟನು. ತಾನು ಎಲ್ಲರ ರಕ್ಷಕನಾದರೂ ಕೂಡ ವೃಂದಾವನದಲ್ಲಿ ಕೇವಲ ಗೋವುಗಳ ರಕ್ಷಕನಂತೆ ಕಾಲವನ್ನು ಕಳೆಯುತ್ತಿದ್ದನು.

**ಜ್ಯೇಷ್ಠಂ ವಿಹಾಯ ಸಕದಾಚಿದಚಿಂತ್ಯ**
**ಶಕ್ತಿರ್ಗೋಗೋಪ್ಯಗೋಗಣಯುತೋ ಯಮುನಾ ತಟೇಷು ।**
**ರೇಮೇ ಭವಿಷ್ಯದನುವೀಕ್ಷ್ಯಹಿ ಗೋಪದುಃಖಂ**
**ತದ್ಬೋದನಾಯ ನಿಜಮಗ್ರಜಮೇಷು ಸೋಽಧಾತ್ ॥ ೩೪ ॥**

**ಅರ್ಥ :- ಅಚಿಂತ್ಯಶಕ್ತಿಃ** ಅಚಿಂತ್ಯಶಕ್ತಿಯುಳ್ಳ **ಸಃ** ಆ ಶ್ರೀಕೃಷ್ಣನು **ಕದಾಚಿತ್** ಒಮ್ಮೆ **ಜ್ಯೇಷ್ಠಂ** ಅಣ್ಣನಾದ ಬಲರಾಮನನ್ನು **ವಿಹಾಯ** ಬಿಟ್ಟು **ಗೋಗೋಪಗೋಗಣಯುತಃ** ಗೊಲ್ಲರ ಮತ್ತು ಹಸುಗಳ ಗುಂಪಿನೊಂದಿಗೆ ಕೂಡಿಕೊಂಡು, **ಯಮುನಾತಟೇಷು** ಯಮುನೆ ತೀರಗಳಲ್ಲಿ **ರೇಮೇ** ವಿಹರಿಸಿದನು **ಭವಿಷ್ಯತ್** ಮುಂದೆ ಬರುವ **ಗೋಪದುಃಖಂ** ಗೋಪಾಲರ ದುಃಖವನ್ನು **ಅನುವೀಕ್ಷ್ಯ** ಮೊದಲೇ ತಿಳಿದು **ತದ್ಬೋದನಾಯ** ಅವರನ್ನು ಸಮಾಧಾನ ಪಡಿಸಲು **ನಿಜಂ** ತನ್ನ **ಅಗ್ರಜಂ** ಅಣ್ಣನಾದ ಬಲರಾಮನನ್ನು **ಏಷು** ಅವರ ಮಧ್ಯದಲ್ಲಿ **ಸಃ** ಆ ಶ್ರೀಕೃಷ್ಣನು **ಅಧಾತ್** ನಿಲ್ಲಿಸಿದ್ದನು.

**ತಾತ್ಪರ್ಯ :-** ಶ್ರೀಕೃಷ್ಣ ಒಮ್ಮೆ ಯಮುನೆಯ ತಟದಲ್ಲಿ ಅಣ್ಣನನ್ನು ಬಿಟ್ಟು ತಾನೊಬ್ಬನೇ ಗೋಪಾಲರೊಂದಿಗೆ ಹಸುಗಳೊಂದಿಗೆ ವಿಹರಿಸುತ್ತಿದ್ದನು. ಮುಂದೆ ಕಾಲಿಯ ಮರ್ದನದ ಸಮಯದಲ್ಲಿ ತಾನಿಲ್ಲದ್ದನ್ನು ನೋಡಿ ಗೋಪಾಲರು ತೀವ್ರ ದುಃಖಿತರಾಗುತ್ತಾರೆ. ಆದ್ದರಿಂದ ಅವರನ್ನು ಸಮಾಧಾನ ಪಡಿಸಲು ಅಣ್ಣನು ಇರಬೇಕೆಂದು ತೀರ್ಮಾನಿಸಿ ಅಣ್ಣನನ್ನು ಜೊತೆಯಲ್ಲಿ ಕರೆದುಕೊಂಡು ಹೋಗದೆ ಅವನನ್ನು ವೃಂದಾವನದಲ್ಲಿ ಬಿಟ್ಟು ಹೋದನು.

**ಸ ಬ್ರಹ್ಮಣೋ ವರಬಲಾದುರಗಂ ತ್ವವಧ್ಯಂ**
**ಸರ್ವೈರವಾರ್ಯವಿಷವೀರ್ಯಮೃತೇ ಸುಪರ್ಣಾತ್ ।**
**ವಿಜ್ಞಾಯ ತದ್ವಿಷವಿದೂಷಿತವಾರಿಪಾನ-**
**ಸನ್ನಾನ್ ಪಶೂನಪಿ ವಯಸ್ಯಜನಾನ್ ಸ ಆವೀತ ॥ ೩೫ ॥**

**ಅರ್ಥ** :- **ಬ್ರಹ್ಮಣಃ** ಬ್ರಹ್ಮದೇವರ **ವರಬಲಾದ್** ವರದಬಲದಿಂದ **ಅವಧ್ಯಂ** ಅವಧ್ಯನಾದ **ಸುಪರ್ಣಾತ್** ಗರುಡನಿಂದ **ಋತೇ** ಹೊರತಾಗಿ **ಸರ್ವೈಃ** ಎಲ್ಲರಿಂದಲೂ **ಅವಾರ್ಯ ವಿಷವೀರ್ಯಂ** ತಡೆಯಲಶಕ್ಯವಾದ ವಿಷಬಲವುಳ್ಳ, **ತಂ ಉರಗಂ** ಆಯಾವ ಕಾಲಿಯನನ್ನು **ವಿಜ್ಞಾಯ** ಯಮುನೆಯ ಮಡುವಿನಲ್ಲಿರುಪಿನೆಂದು ತಿಳಿದು **ತದ್ವಿಷದೂಷಿತವಾರಿಪಾನ ಸನ್ನಾತ್** ಆಕಾಲಿಯನವಿಷದಿಂದ ದೂಷಿತವಾದ ಜಲದ ಕುಡಿವಿಕೆಯಿಂದ ಮೃತರಾದ **ವಯಸ್ಯಜನಾನ್** ಸಂಗಡಿಗರನ್ನು **ಪಶೂನಪಿ** ಹಸುಗಳನ್ನು ಕೂಡ **ಸಃ** ಆಶ್ರೀಕೃಷ್ಣನು ಆವೀತ ರಕ್ಷಿಸಿದನು.

**ತಾತ್ಪರ್ಯ** :- ಈಯಮುನೆಯ ಮಡುವಿನಲ್ಲಿ ಬ್ರಹ್ಮನ ವರದಿಂದ ಅವಧ್ಯನಾದ ಕೇವಲ ಗರುಡನನ್ನು ಬಿಟ್ಟು ಬೇರಾರಿಂದಲೂ ತಡೆಯಲಶಕ್ಯವಾದ ವಿಷದ ಬಲವುಳ್ಳ ಕಾಲಿಯನೆಂಬ ನಾಗನಿದ್ದನು. ಈ ನಾಗನ ವಿಷದಿಂದ ಯಮುನೆಯ ನೀರು ವಿಷಪೂರಿತವಾಗಿದ್ದಿತು. ಈ ನೀರನ್ನು ಕುಡಿದ ಹಸುಗಳು ಹಾಗೂ ಅವನ ಸ್ನೇಹಿತರು ಮರಣವನ್ನು ಹೊಂದಿದ್ದರು. ಅವರನ್ನೆಲ್ಲಾ ರಕ್ಷಿಸ ಯಮುನೆಯನ್ನು ಶುದ್ಧಮಾಡಲು ಬಯಸಿದನು.

**ತದ್ದೃಷ್ಟಿದಿವ್ಯಸುಧಯಾ ಸಹಸಾಽಭಿವೃಷ್ಟಾಃ**
**ಸರ್ವೇಽಪಿ ಜೀವಿತಮವಾಪುರಥೋಚ್ಚಶಾಖಮ್ ।**
**ಕೃಷ್ಣಃ ಕದಂಬಮಧಿರುಹ್ಯ ತತೋಽತಿತುಂಗಾ-**
**ದಾಸ್ಫೋಟ್ಯ ಗಾಢರಶನೋ ನ್ಯಪತದ್ ವಿಷೋದೇ ॥ ೩೬ ॥**

**ಅರ್ಥ** :- **ತದ್ದೃಷ್ಟಿದಿವ್ಯಸುಧಯಾ** ಕೃಷ್ಣನ ಕಣ್ಣನೋಟದ ದಿವ್ಯ ಅಮೃತದಿಂದ **ಅಭಿವೃಷ್ಟಾಃ** ತೋಯ್ದ **ಸರ್ವೇಪಿ** ಎಲ್ಲರೂ **ಸಹಸಾ** ಕೂಡಲೇ **ಜೀವಿತಂ** ಬದುಕನ್ನು **ಅವಾಪುಃ** ಹೊಂದಿದರು. **ಅಥ** ಅನಂತರ **ಕೃಷ್ಣಃ** ಕೃಷ್ಣನು **ಉಚ್ಚಶಾಖಮ್** ಉನ್ನತ ಟೊಂಗೆಗಳುಳ್ಳ **ಕದಂಬಂ** ಕದಂಬ ವೃಕ್ಷವನ್ನು **ಅಧಿರುಹ್ಯ** ಏರಿ **ಗಾಢರಶನಃ** ಧೃಡವಾಗಿ ಸೊಂಟಕ್ಕೆ ಬಿಗಿದ ಬಟ್ಟೆಯುಳ್ಳವನಾಗಿ **ಆಸ್ಫೋಟ್ಯ** ಭುಜವನ್ನು ಗಟ್ಟಿಯಾಗಿ ತಟ್ಟಿ **ಅತಿ ತುಂಗಾತ್** ಅತಿ ಎತ್ತರದಿಂದ **ವಿಷೋದೇ** ವಿಷದ ಮಡುವಿನಲ್ಲಿ **ನ್ಯಪತತ್** ಧುಮುಕಿದನು.

**ತಾತ್ಪರ್ಯ** :- ನಂತರ ಕೃಷ್ಣನ ದಿವ್ಯದೃಷ್ಟಿ ನೋಟವೆಂಬ ಅಮೃತದಿಂದ ತೋಯ್ದ ಪಶುಗಳು ಹಾಗೂ ಗೋಪರು ಮತ್ತೆ ಬದುಕಿಬಂದರು. ಸೊಂಟಕ್ಕೆ

ಉತ್ತರೀಯವನ್ನು ಬಿಗಿದುಕಟ್ಟಿ ಶ್ರೀಕೃಷ್ಣ ಕೊಂಬೆಗಳುಳ್ಳ ಕದಂಬ ವೃಕ್ಷವನ್ನು ಏರಿ ಭುಜವನ್ನು ತಟ್ಟಿ ಎತ್ತರದಿಂದ ನದಿಗೆ ಧುಮುಕಿದನು.

**ಸಾರ್ಪಹ್ರದಃ ಪುರುಷಸಾರನಿಪಾತವೇಗ-**
**ಸಂಕ್ಷೋಭಿತೋರಗವಿಷೋಚ್ಛ್ವಸಿತಾಂಬುರಾಶಿಃ ।**
**ಪರ್ಯುತ್ಪ್ಲುತೋ ವಿಷಕಷಾಯವಿಭೀಷಣೋರ್ಮಿ-**
**ಭೀಮೋ ಧನುಃಶತಮನಂತಬಲಸ್ಯ ಕಿಂ ತತ್ ॥ ೩೭ ॥**

**ಅರ್ಥ :-** **ಪುರುಷಸಾರ ರಾಶಿಃ** ಪುರುಷಸಾರ ಪುರುಷ ಶ್ರೇಷ್ಠನಾದ ಕೃಷ್ಣನ **ನಿಪಾತ** ಬೀಳುವಿಕೆಯ **ವೇಗ** ರಭಸದಿಂದ **ಸಂಕ್ಷೋಭಿತ** ಕ್ಷೋಭೆಗೊಂಡ **ಉರಗವಿಷ** ಕಾಲಿಯನ ವಿಷದಿಂದ **ಉಚ್ಛ್ವಸಿತ** ಉಕ್ಕಿಬಂದ **ಅಂಬುರಾಶಿಃ** ನೀರಿನ ಸಮೂಹವುಳ್ಳ ವಿಷಕಷಾಯ **ವಿಭೀಷಣೋರ್ಮಿಭೀಮಃ** ವಿಷಕಷಾಯ ಕುದಿಯುವ ವಿಷದಿಂದ **ವಿಭೀಷಣ** ಭಯಂಕರವಾದ **ಊರ್ಮಿಭೀಮಃ** ತರಂಗಗಳಿಂದ ಭಯಾನಕವಾದ **ಸಾರ್ಪಹ್ರದಃ** ಸರ್ಪನಿಂದ ಆಶ್ರಿತವಾದ ಯಮುನೆಯ ಮಡುವು **ಪರ್ಯಕ್ ಪ್ಲುತಃ** ಸುತ್ತಲೂ ಏರಿಬಂದದ್ದಾಗಿ **ಧನುಃಶತಂ** ನೂರುಧನುಷ್‌ಗಳಷ್ಟು ವ್ಯಾಪ್ತಿಯುಳ್ಳದ್ದಾದರೂ, **ಅನಂತಬಲಸ್ಯ** ಅಪರಿಮಿತಶಕ್ತಿಯುಳ್ಳ ಕೃಷ್ಣನಿಗೆ **ತತ್‌ಕಿಮ್** ಅದರಿಂದ ಏನು.

**ತಾತ್ಪರ್ಯ :-** ಹೀಗೆ ಕೃಷ್ಣನು ವೇಗವಾಗಿ ಮಡುವಿಗೆ ಧುಮುಕಿದಾಗ ಅವನ ವೇಗಕ್ಕೆ ಕ್ಷೋಭೆಗೊಂಡ ಕಾಲಿಯನು ಸಿಟ್ಟಿನಿಂದ ವಿಷವನ್ನು ಕಾರ ತೊಡಗಿದನು. ಅವನ ವಿಷದಿಂದ ತುಂಬಿದ ಮಡು ವಿಷದಿಂದ ಕುದಿಯುವ ಅಲೆಗಳು ಏಳುವಂತಾಯತು. ವಿಷತುಂಬಿದ ಅಲೆಗಳು ಅಲ್ಲಿ ನೂರು ಧನುಷ್ ಗಳಷ್ಟು ಪ್ರದೇಶವನ್ನು ಮುಳುಗಿಸಿತು. ಏನಾದರೂ ಕೂಡ ಅನಂತ ಬಲವುಳ್ಳ ಕೃಷ್ಣನಿಗೆ ಇದು ಏನೂ ಅಲ್ಲತಾನೆ.

**ತಂ ಯಾಮುನಹ್ರದವಿಲೋಳಕಮಾಪ್ಯ ನಾಗಃ**
**ಕಾಳ್ಯೋ ನಿಜೈಃ ಸಮದಶತ್ ಸಹ ವಾಸುದೇವಮ್ ।**
**ಭೋಗೈರ್ಬಬಂಧ ಚ ನಿಜೇಶ್ವರಮೇನಮಜ್ಞಃ**
**ಸೇಹೇ ತಮೀಶ ಉತ ಭಕ್ತಿಮತೋಽಪರಾಧಮ್ ॥ ೩೮ ॥**

**ಅರ್ಥ** :- **ಕಾಲ್ಯನಾಗಃ** ಕಾಲೀಯನೆಂಬ ನಾಗನು **ಯಾಮುನಹ್ರದ ವಿಲೋಲಕಂ** ಯಮುನೆಯ ಮಡುವನ್ನು ಕದಡುತ್ತಿರುವ **ವಾಸುದೇವಂ** ಕೃಷ್ಣನನ್ನು **ಆಪ್ಯ** ಹೊಂದಿ **ನಿಜೈಃ ಸಹಃ** ತನ್ನವರೊಂದಿಗೆ **ಸಮದಶತ್** ಕಚ್ಚಿದನು **ನಿಜೇಶ್ವರಂ** ತನ್ನ ಪ್ರಭುವಾದ **ಏನಂ** ಈ ಕೃಷ್ಣನನ್ನು **ಅಜ್ಞಃ** ಅಜ್ಞಾನಿಯಾಗಿ **ಭೋಗೈ** ಹೆಡೆ ಬಾಲಮೊದಲಾದ ತನ್ನ ದೇಹಗಳಿಂದ **ಬಬಂಧ** ಬಂಧಿಸಿದನು **ಈಶ ಉತ** ಸಮರ್ಥನಾದರೂ ಕೂಡ, **ಭಕ್ತಿಮತಃ** ಭಕ್ತನಾದ **ಅಕಾಲಿಯನ ತಂ** ಆ ಯಾವ **ಅಪರಾಧಂ** ಅಪರಾಧವನ್ನು **ಸೇಹೇ** ಸಹಿಸಿದನು.

**ತಾತ್ಪರ್ಯ** :- ಕೃಷ್ಣನು ಮಡುವಿಗೆ ಧುಮುಕಿ ತನ್ನ ಕೈಗಳಿಂದ ನೀರನ್ನು ಕದಡುತ್ತಿದ್ದನು. ಆಗ ಕುಪಿತನಾದ ಕಾಲಿಯನಾಗನು ಕೃಷ್ಣನು ನಿಜವಾಗಿಯೂ ತನ್ನ ಪ್ರಭುವಾಗಿದ್ದರೂ ಅಜ್ಞನಾಗಿ ತನ್ನವರೊಂದಿಗೆ ಕೂಡಿ ಬಂದು ಕೃಷ್ಣನನ್ನು ಕಚ್ಚಿದನು. ಎಲ್ಲವನ್ನು ಭರಿಸುವ ಶಕ್ತಿಯುಳ್ಳ ಈಶನು ಭಕ್ತನು ಮಾಡಿದ ಈ ಅಪರಾಧವನ್ನು ಕ್ಷಮಿಸಿದನು.

**ಉತ್ಪಾತಮೀಕ್ಷ್ಯ ತು ತದಾऽಖಿಲಗೋಪಸಂಘ-**
**ಸ್ತತ್ರಾऽಜಗಾಮ ಹಲಿನಾ ಪ್ರತಿಬೋಧತೋऽಪಿ ।**
**ದೃಷ್ಟ್ವಾ ನಿಜಾಶ್ರಯಜನಸ್ಯ ಬಹೋಃ ಸುದುಃಖಂ**
**ಕೃಷ್ಣಃ ಸ್ವಭಕ್ತಮಪಿ ನಾಗಮಮುಂ ಮಮರ್ದ ॥ ೩೯ ॥**

**ಅರ್ಥ** :- **ಹಲಿನಾ** ಬಲರಾಮನಿಂದ **ಪ್ರತಿಬೋಧಿತೋऽಪಿ** ತಡೆಯಲ್ಪಡುತ್ತಿದ್ದರೂ ಕೂಡ **ತದಾ** ಆವಾಗ **ಉತ್ಪಾತಂ** ನಂದಗೋಕುಲದಲ್ಲಿ ನಡೆದ ಉತ್ಪಾತವನ್ನು **ಈಕ್ಷ್ಯ** ನೋಡಿ **ಗೋಪಸಂಘಃ** ಗೊಲ್ಲರ ಗುಂಪು **ತತ್ರ** ಆ ಕೃಷ್ಣ ಧುಮುಕಿದ ಸ್ಥಳವನ್ನು ಕುರಿತು **ಆಜಗಾಮ** ಬಂದಿತು **ಕೃಷ್ಣಃ** ಕೃಷ್ಣನು **ಬಹೋಃ ನಿಜಾಶ್ರಯಜನಸ್ಯ** ತನ್ನನ್ನು ಆಶ್ರಯಿಸಿದ ಬಹಳ ಗೋಪಾಲರ **ಸುದುಃಖಂ** ಕಳವಳವನ್ನು **ದೃಷ್ಟ್ವಾ** ನೋಡಿ **ಸ್ವಭಕ್ತಮಪಿ** ತನ್ನ ಭಕ್ತನಾದರೂ **ಅಮುಂ** ಈ **ನಾಗಂ** ಕಾಲೀಯನನ್ನು **ಮಮರ್ದ** ಮರ್ದಿಸಿದನು.

**ತಾತ್ಪರ್ಯ** :- ಆ ಸಂದರ್ಭದಲ್ಲಿ ಗೋಕುಲದಲ್ಲಿ ನಾನಾ ಉತ್ಪಾತಗಳು ನಡೆದವು. ಆಗ ಗೋಪಾಲರು ಎಲ್ಲಾ ಕೃಷ್ಣನಿಗೆ ಏನೋ ಅನರ್ಥವಾಯಿತೆಂದು ಕಳವಳಪಟ್ಟರು ಆಗ ಬಲರಾಮನು ಅವರನ್ನೆಲ್ಲಾ ಸಮಾಧಾನ ಪಡಿಸುತ್ತಿದ್ದರು.

ಆದರೂ ಕೂಡ ಆ ಗೊಲ್ಲರಿಗೆ ಹೆದರಿಕೆ ಕಡಿಮೆಯಾಗದೇ ಅವರೆಲ್ಲ ಕಾಳಿಯ ಮಡುವಿಗೆ ಓಡಿ ಬಂದರು. ಅಲ್ಲಿ ಕೃಷ್ಣಧುಮುಕಿದ್ದು ತಿಳಿದು ಬಹಳ ಕಳವಳ ಪಡುತ್ತಿರಲು ಆಗ ಅವರ ಹೆದರಿಕೆಯನ್ನು ನೋಡಿದ ಕೃಷ್ಣನು ಕೂಡಲೇ ತನ್ನ ಭಕ್ತನೇ ಆದ ನಾಗನನ್ನು ಮರ್ದಿಸಿದನು

**ತಸ್ಯೋನ್ನತೇಷು ಸ ಫಣೇಷು ನನರ್ತ ಕೃಷ್ಣೋ**
**ಬ್ರಹ್ಮಾದಿಭಿಃ ಕುಸುಮವರ್ಷಿಭಿರೀಡ್ಯಮಾನಃ ।**
**ಆರ್ತೋ ಮುಖೈರುರು ವಮನ್ ರುಧಿರಂ ಸ ನಾಗೋ**
**ನಾರಾಯಣಂ ತಮರಣಂ ಮನಸಾ ಜಗಾಮ ॥ ೪೦ ॥**

**ಅರ್ಥ** :- **ಸಃ ಕೃಷ್ಣಃ** ಆ ಶ್ರೀಕೃಷ್ಣನು, **ಬ್ರಹ್ಮಾದಿಭಿಃ** ಬ್ರಹ್ಮಾದಿ ದೇವತೆಗಳಿಂದ **ಕುಸುಮವರ್ಷಿಭಿಃ** ಹೂವಿನ ಮಳೆಗಳಿಂದ **ಈಡ್ಯಮಾನಃ** ಸ್ತೋತ್ರಮಾಡಲ್ಪಡುತ್ತಿರುವ **ತಸ್ಯ** ಆ ಕಾಲಿಯ ನಾಗನ **ಉನ್ನತೇಷು** ಉತ್ತಮ ವಾದ **ಫಣೇಷು** ಹೆಡೆಗಳಲ್ಲಿ **ನನರ್ತ** ನೃತ್ಯಮಾಡಿದನು. **ಸಃ** ಆ **ನಾಗ** ನಾಗನು, **ಆರ್ತಃ ಸನ್** ದುಃಖಿತನಾದವನಾಗಿ **ಮುಖೈಃ** ಬಾಯಿಂದ **ಉರು** ಬಹಳ **ರುಧಿರಂ** ರಕ್ತವನ್ನು **ವಮನ್** ಕಾರುತ್ತಾ **ತಂ** ಆ **ನಾರಾಯಣಂ** ಭಕ್ತಪಾಲಕ ನಾದ ಶ್ರೀಕೃಷ್ಣನನ್ನು **ಮನಸಾ** ಮನಸ್ಸಿನಿಂದ **ಅರಣಂ ಜಗಾಮ** ಶರಣು ಹೊಂದಿದನು.

**ತಾತ್ಪರ್ಯ** :- ಹೀಗೆ ಕಾಲೀಯನು ಕೃಷ್ಣನೊಂದಿಗೆ ಹೋರಾಡುತ್ತಿರಲು ಕೃಷ್ಣ ಅವನನ್ನು ಬಾಲದಿಂದ ಹಿಡಿದು ಕೆಳಗೆ ಬಡಿದು ತಲೆಯನ್ನು ಕುಟ್ಟಿ ನಂತರ ಹೆಡೆಯ ಮೇಲೇರಿ ತಲೆಯನ್ನು ತುಳಿದು ಅದರ ಮೇಲೆ ಕುಣಿದಾಡಿದನು. ಅವನ ನರ್ತನ ನೋಡಿ ಸಂತಸ ಪಟ್ಟ ಬ್ರಹ್ಮಾದಿದೇವತೆಗಳು ಅವನ ಮೇಲೆ ಹೂವಿನ ಮಳೆಯನ್ನು ಎರೆದರು. ಕೃಷ್ಣನ ನರ್ತನದದಿಂದ ತಲೆಯ ಮೇಲೆ ಬಹಳ ಪೀಡಿತನಾದ ನಾಗನು ಮುಖದಿಂದ ರಕ್ತದ ವಮನವನ್ನು ಮಾಡಲು ಪ್ರಾರಂಭಿಸಿದನು. ನಂತರ ಈ ಕೃಷ್ಣನೇ ನಾರಾಯಣ ಎಂದು ತಿಳಿದು ಮನಸ್ಸಿನಿಂದ ಅವನ ಧ್ಯಾನವನ್ನು ಮಾಡಿದನು. ತನ್ನ ಹೋರಾಟವನ್ನು ನಿಲ್ಲಿಸಿ ಅವನನ್ನು ಶರಣು ಹೊಂದಿದನು.

ತಚ್ಚಿತ್ರತಾಂಡವವಿರುಗ್ಣಫಣಾತಪತ್ರಂ
ರಕ್ತಂ ವಮಂತಮುರು ಸನ್ನಧಿಯಂ ನಿತಾಂತಮ್ ।
ದೃಷ್ಟ್ವಾऽಹಿರಾಜಮುಪಸೇದುರಮುಷ್ಯ ಪತ್ನ್ಯೋ
ನೇಮುಶ್ಚ ಸರ್ವಜಗದಾದಿಗುರುಂ ಭುವೀಶಮ್ ॥ ೪೧ ॥

ಅರ್ಥ :-ತಚ್ಚಿತ್ರ ತಾಂಡವ ವಿರುಗ್ಣಫಣಾತಪತ್ರಂ ತಚ್ಚಿತ್ರತಾಂಡವ ಆ ಕೃಷ್ಣನ ವಿಚಿತ್ರವಾದ ತಾಂಡವನೃತ್ಯದಿಂದ ವಿರುಗ್ಣ ಜರ್ಜರಿತವಾದ, ಫಣಾತಪತ್ರಂ ಕೊಡಯಂತೆ ಹರಡಿದ ಹೆಡೆಯುಳ್ಳವನಾಗಿ ಉರು ಬಹಳ ರಕ್ತಂ ರಕ್ತವನ್ನು ವಮಂತಂ ಕಾರುತ್ತಾ ನಿತಾಂತಂ ಬಹಳವಾಗಿ ಸನ್ನಧಿಯಂ ಮೂರ್ಛಾವಸ್ಥೆಯುಳ್ಳ ಅಹಿರಾಜಂ ಸರ್ಪರಾಜನನ್ನು ದೃಷ್ಟ್ವಾ ನೋಡಿ ಅಮುಷ್ಯ ಈ ನಾಗರಾಜನ ಪತ್ನ್ಯಃ ಹೆಂಡಂದಿರು ಉಪಸೇದುಃ ಕೃಷ್ಣನ ಹತ್ತಿರ ಬಂದರು. ಚ ಮತ್ತು ಸರ್ವಜಗದಾದಿ ಗುರುಃ ಎಲ್ಲಾ ಜಗತ್ತಿಗೆ ಮೂಲಗುರುವಾದ, ಭುವೀಶಮ್ ಭೂಮಿಗೆ ಬಂದ ಪ್ರಭುವನ್ನು ನೇಮುಃ ನಮಸ್ಕರಿಸಿದರು.

ತಾತ್ಪರ್ಯ :- ಕೃಷ್ಣನು ನಾಗನ ಹೆಡೆಯ ಮೇಲೆ ವಿಚಿತ್ರವಾಗಿ ತಾಂಡವ ನೃತ್ಯವನ್ನು ಮಾಡಲು ಶುರು ಮಾಡಿದಾಗ ಕೊಡೆಯಂತೆ ಹರಡಿದ ತನ್ನ ಹೆಡೆಗಳು ಬಹಳ ಜರ್ಜರಿತವಾದವು. ನಾಗನು ಬಹಳವಾಗಿ ರಕ್ತಕಾರುತ್ತಾ ಬುದ್ಧಿಭ್ರಮಣೆಯನ್ನು ಹೊಂದಿದನು. ಅವನ ಈ ಅವಸ್ಥೆಯನ್ನು ನೋಡಿದ ಅವನ ಪತ್ನಿಯರು ಕೃಷ್ಣನಲ್ಲಿಗೆ ಬಂದು ಭೂಮಿಗೆ ಪ್ರಭುವಾಗಿ ಬಂದ ಎಲ್ಲಾ ಪ್ರಪಂಚಕ್ಕೆ ಮೂಲಗುರುವಾದ ಕೃಷ್ಣನನ್ನು ನಮಿಸಿದರು.

ತಾಭಿಃ ಸ್ತುತಃ ಸ ಭಗವಾನಮುನಾ ಚ ತಸ್ಮೈ
ದತ್ತ್ವಾऽಭಯಂ ಯಮಸಹೋದರವಾರಿತೋऽಮುಮ್ ।
ಉತ್ಸೃಜ್ಯ ನಿರ್ವಿಷಜಲಾಂ ಯಮುನಾಂ ಚಕಾರ
ಸಂಸ್ತೂಯಮಾನಚರಿತಃ ಸುರಸಿದ್ಧಸಾಧ್ಯೈಃ ॥ ೪೨ ॥

ಅರ್ಥ :- ತಾಭಿಃ ಆ ನಾಗಪತ್ನಿಯರಿಂದ ಅಮುನಾಚ ಈ ನಾಗ ನಿಂದಲೂ ಕೂಡ ಸ್ತುತಃ ಸ್ತೋತ್ರ ಮಾಡಲ್ಪಟ್ಟ ಸಃ ಆ ಭಗವಾನ್ ಶ್ರೀಕೃಷ್ಣನು ತಸ್ಮೈ ಆ ನಾಗನಿಗೆ ಅಭಯಂ ಗರುಡನಿಂದ ಭಯವಿಲ್ಲದಿರುವಿಕೆಯನ್ನು ದತ್ವಾ ಕೊಟ್ಟು ಯಮಸಹೋದರಿವಾರಿತಃ ಯಮನ ಸಹೋದರಿಯಾದ ಯಮುನೆಯ

ನೀರಿನಿಂದ **ಅಮುಂ** ಈ ನಾಗನನ್ನು **ಉತ್ಸೃಜ್ಯ** ದೂರ ಕಳುಹಿಸಿ **ಸುರಸಿದ್ಧಸಾಧ್ಯೈಃ** ದೇವತೆಗಳು ಸಿದ್ಧರು ಸಾಧ್ಯರಿಂದ **ಸಂಸ್ತೂಯಮಾನಚರಿತಃ** ಸ್ತೋತ್ರಮಾಡಲ್ಪಟ್ಟ ಲೀಲೆಯುಳ್ಳವನಾಗಿ **ಯಮುನಾಂ** ಯಮುನೆಯನ್ನು **ನಿರ್ವಿಷಯಜಲಾಂ** ವಿಷವಿಲ್ಲದ ನೀರುಳ್ಳವಳನ್ನಾಗಿ **ಚಕಾರ** ಮಾಡಿದನು.

**ತಾತ್ಪರ್ಯ :-** ಕೃಷ್ಣನು ನಾಗಪತ್ನಿಯರಿಂದ ನಾನಾ ರೀತಿಯಾಗಿ ಸ್ತೋತ್ರ ಮಾಡಿಸಿಕೊಂಡನು. ನಾಗನೂ ಕೂಡ ಕೃಷ್ಣನನ್ನು ಸ್ತೋತ್ರ ಮಾಡಿದನು. ಈ ಸ್ತೋತ್ರದಿಂದ ಪ್ರಸನ್ನನಾದ ಭಗವಂತ ನಾಗನಿಗೆ ನಿನ್ನ ತಲೆಯ ಮೇಲೆ ತನ್ನ ಹೆಜ್ಜೆಯ ಗುರುತು ಇರುವುದರಿಂದ ಇನ್ನು ಮುಂದೆ ನಿನಗೆ ಗರುಡನ ಭಯವಿರುವುದಿಲ್ಲ, ನೀನು ನಿನ್ನ ಸ್ಥಾನಕ್ಕೆ ಹೊರಟುಹೋಗು ಎಂದು ಅವನಿಗೆ ಅಭಯವನ್ನು ಕೊಟ್ಟು ಕಳುಹಿಸಿದನು. ದೇವತೆಗಳೂ, ಸಿದ್ಧರೂ, ಸಾಧ್ಯರೂ ಎಲ್ಲರೂ ಈ ಭಗವಂತನನ್ನು ಸ್ತೋತ್ರ ಮಾಡುತ್ತಿರಲು ಭಗವಂತನು ಯಮುನೆಯ ನೀರನ್ನು ವಿಷರಹಿತವನ್ನಾಗಿ ಮಾಡಿದನು.

**ಗೋಪೈರ್ಬಲಾದಿಭಿರುದೀರ್ಣತರಪ್ರಮೋದೈಃ**
**ಸಾರ್ಧಂ ಸಮೇತ್ಯ ಭಗವಾನರವಿಂದನೇತ್ರಃ ।**
**ತಾಂ ರಾತ್ರಿಮತ್ರ ನಿವಸನ್ ಯಮುನಾತಟೇ ಸ**
**ದಾವಾಗ್ನಿಮುದ್ಧತಬಲಂ ಚ ಪಪೌ ವ್ರಜಾರ್ಥೇ ॥ ೪೩ ॥**

**ಅರ್ಥ :-** **ಅರವಿಂದನೇತ್ರಃ** ಕಮಲನಯನನಾದ **ಭಗವಾನ್** ಶ್ರೀಕೃಷ್ಣನು, **ಸಮೇತ್ಯ** ಮೇಲಕ್ಕೆ ಬಂದು **ಉದೀರ್ಣ ತರಪ್ರಮೋದೈಃ** ಬಹಳ ಸಂತುಷ್ಟರಾದ **ಬಲಾದಿಭಿಃ** ಬಲರಾಮನೇ ಮೊದಲಾದ **ಗೋಪೈಃ** ಗೋಪಾಲರಿಂದ **ಸಾರ್ಧಂ** ಕೂಡಿಕೊಂಡು **ಯಮುನಾತಟೇ** ಯಮುನೆಯ ದಡದಲ್ಲಿ **ತಾಂ ರಾತ್ರೀಂ** ಆ ರಾತ್ರಿಯನ್ನು **ನಿವಸನ್** ವಾಸಮಾಡುತ್ತಾ **ಅತ್ರ** ಅಲ್ಲಿ **ಉದ್ಧತಬಲಂ** ಅತ್ಯಂತ ಪ್ರಬಲವಾದ, **ದಾವಾಗ್ನಿಂ** ಕಾಡ್ಗಿಚ್ಚನ್ನು **ವ್ರಜಾರ್ಥೇ** ಗೋಕುಲದ ರಕ್ಷಣೆಗಾಗಿ **ಪಪೌ** ಕುಡಿದನು.

**ತಾತ್ಪರ್ಯ :-** ಹೀಗೆ ಕಾಲಯನನ್ನು ನಿಗ್ರಹಿಸಿ ಎಲ್ಲರ ಆತಂಕ ಕಳೆಯುವ ಶ್ರೀಕೃಷ್ಣನು ಯಮುನೆಯ ತೀರಕ್ಕೆ ಬಂದನು. ನಿರಾಯಾಸನಾಗಿ ಬಂದ ಆ ಭಗವಂತನನ್ನು ನೋಡಿ ಬಲರಾಮನೇ ಮೊದಲಾದ ಗೋಪರು ಬಹಳ ಸಂತೋಷಪಟ್ಟರು. ನಂತರ ಕಮಲನಯನನಾದ ಭಗವಂತನು ಆ ರಾತ್ರಿಯನ್ನು

ಯಮುನೆಯ ತೀರದಲ್ಲಿ ಕಳೆಯಲು ನಿಶ್ಚಯಿಸಿದನು. ರಾತ್ರಿ ಎಲ್ಲರೂ ಮಲಗಿದಾಗ ಇಡೀ ಗೋಕುಲವನ್ನು ನುಂಗಲು ಕಾಡ್ಗಿಚ್ಚು ಪ್ರಾರಂಭವಾಯಿತು. ದೇವೋತ್ತಮನು ಆ ಕಾಡ್ಗಿಚ್ಚನ್ನು ಗೋಕುಲದ ರಕ್ಷಣೆಗಾಗಿ ನುಂಗಿದನು.

**ಇತ್ಥಂ ಸುರಾಸುರಗಣೈರವಿಚಿಂತ್ಯದಿವ್ಯ-**
**ಕರ್ಮಾಣಿ ಗೋಕುಲಗತೇಽಗಣಿತೋರುಶಕ್ತೌ ।**
**ಕುರ್ವತ್ಯಜೇ ವ್ರಜಭುವಾಮಭವದ್ ವಿನಾಶ**
**ಉಗ್ರಭಿಧಾದಸುರತಸ್ತರುರೂಪತೋಽಲಮ್ ॥ ೪೪ ॥**

**ಅರ್ಥ** :- **ಇತ್ಥಂ** ಈ ರೀತಿಯಾಗಿ, **ಅಗಣಿತೋರುಶಕ್ತೌ** ಅಪರಿಮಿತವಾದ ಮಹಾಶಕ್ತಿಯುಳ್ಳ **ಅಜೇ** ನಾಶರಹಿತನಾದ ಕೃಷ್ಣನು, **ಗೋಕುಲಗತೇ** ಗೋಕುಲದಲ್ಲಿ ಇದ್ದವನಾಗಿ, **ಸುರಾಸುರಗಣೈಃ** ದೇವದಾನವ ಸಮೂಹಗಳಿಂದ **ಅವಿಚಿಂತ್ಯದಿವ್ಯಕರ್ಮಾಣಿ** ಆಲೋಚಿಸಲೂ ಆಗದಂತ ಅದ್ಭುತ ಕರ್ಮಗಳನ್ನು **ಕುರ್ವತಿ ಸತಿ** ಮಾಡುತ್ತಿರಲು, **ತರುರೂಪತಃ** ವೃಕ್ಷರೂಪಿಯಾದ, **ಉಗ್ರಾಭಿದಾತ್** ಉಗ್ರನೆಂದು ಹೆಸರುಳ್ಳ **ಅಸುರತಃ** ಅಸುರನಿಂದ **ವ್ರಜಭೂಮೌ** ಗೋಕುಲದಲ್ಲಿರುವವರಿಗೆ **ಅಲಂ** ಬಹಳವಾದ **ವಿನಾಶಃ** ಅಪಾಯವು **ಅಭವತ್** ಬಂದೊದಗಿತು.

**ತಾತ್ಪರ್ಯ** :- ಹೀಗೆ ಶ್ರೀಕೃಷ್ಣನು ವೃಂದಾವನದಲ್ಲಿ ದೇವದಾನವರಿಗೂ ಎಣಿಸಲು ಸಾಧ್ಯವಾಗದಂತಹ ಅದ್ಭುತಲೀಲೆಗಳನ್ನು ಮಾಡುತ್ತಿದ್ದನು. ಆಗ ವೃಕ್ಷದ ರೂಪದಿಂದ ಉಗ್ರನೆಂಬ ಅಸುರನು ಗೋಕುಲಕ್ಕೆ ಬಂದು ಅಲ್ಲಿಯ ನಿವಾಸಿಗಳಲ್ಲಿ ಬಹಳ ಭಯ ಹುಟ್ಟಿಸಿದನು.

**ತದ್ಗಂಧತೋ ನೃಪಶುಮುಖ್ಯಸಮಸ್ತಭೂತಾ-**
**ನ್ಯಾಪುರ್ಮೃತಿಂ ಬಹಳರೋಗನಿಪೀಡಿತಾನಿ ।**
**ಧಾತುರ್ವರಾಜ್ಜಗದಭಾವಕೃತೈಕಬುದ್ಧಿ-**
**ರ್ವಧ್ಯೋ ನ ಕೇನಚಿದಸೌ ತರುರೂಪದೈತ್ಯಃ ॥ ೪೫ ॥**

**ಅರ್ಥ** :- **ತದ್ಗಂಧತಃ** ಆ ವೃಕ್ಷರೂಪ ಅಸುರನ ದುರ್ಗಂಧದಿಂದ **ನೃಪಶುಮುಖ್ಯಸಮಸ್ತಭೂತಾನಿ** ಮನುಷ್ಯರು ಪಶುಗಳು ಮುಂತಾದ ಎಲ್ಲಾ ಜೀವಿಗಳು **ಬಹುಲರೋಗನಿಪೀಡಿತಾನಿ** ನಾನಾ ರೋಗಗಳಿಂದ ಪೀಡಿತರಾದವರಾಗಿ,

ಮೃತಿಂ ಮರಣವನ್ನು ಆಪುಃ ಹೊಂದಿದರು. **ಅಸೌ ತರುರೂಪದೈತ್ಯಃ** ಈ ವೃಕ್ಷರೂಪಿಯಾದ ಅಸುರನು, **ಧಾತುಃ** ಬ್ರಹ್ಮದೇವರ **ವರಾತ್** ವರದಿಂದ **ಜಗದಭಾವಕೃತ್ಯೈಕ ಬುದ್ಧಿಃ** ಜಗತ್ತಿನ ನಾಶವೊಂದನ್ನೇ ಬಯಸುವ ಬುದ್ಧಿ ಯುಳ್ಳವನಾಗಿ, **ಕೇನಚಿತ್** ಯಾರಿಂದಲೂ **ನ ವಧ್ಯಃ ಆಸೀತ್** ಮರಣವಿಲ್ಲದವನಾಗಿದ್ದನು.

**ತಾತ್ಪರ್ಯ :-** ಆ ವೃಕ್ಷರೂಪಿಯಾದ ಉಗ್ರಾಸುರನು ತನ್ನ ದುರ್ಗಂಧ ದಿಂದ ಗೋಕುಲವಾಸಿಗಳಾದ ಪಶುಗಳನ್ನು ಮನುಷ್ಯರನ್ನೆಲ್ಲಾ ರೋಗಪೀಡಿತ ರನ್ನಾಗಿ ಮಾಡಿ ಅವರನ್ನು ಸಾಯಿಸುತ್ತಿದ್ದನು. ಅವನು ಬ್ರಹ್ಮದೇವರ ವರದಿಂದ ಅವಧ್ಯನಾಗಿದ್ದನು. ಆದ್ದರಿಂದ ಜಗತ್ತನ್ನು ನಾಶಮಾಡುವ ಬುದ್ಧಿಯೂ ಅವನದ್ದಾಗಿತ್ತು.

**ಸಂಕರ್ಷಣೇಽಪಿ ತದುದಾರವಿಷಾನುವಿಷ್ಟೇ**
**ಕೃಷ್ಣೋ ನಿಜಸ್ಪರ್ಶತಸ್ತಮಪೇತರೋಗಮ್ ।**
**ಕೃತ್ವಾ ಬಭಂಜ ವಿಷವೃಕ್ಷಮಮುಂ ಬಲೇನ**
**ತಸ್ಯಾನುಗೈಃ ಸಹ ತದಾಕೃತಿಭಿಃ ಸಮಸ್ತೈಃ ॥ ೪೬ ॥**

**ಅರ್ಥ :- ಸಂಕರ್ಷಣೇಽಪಿ** ಬಲರಾಮನೂ ಕೂಡ **ತದುದಾರವಿಷಾನು ವಿಷ್ಟೇ** ಆ ವೃಕ್ಷಾಸುರನ ವಿಷದ ಪ್ರವೇಶವುಳ್ಳವನಾಗುತ್ತಿರುಲು **ಕೃಷ್ಣಃ** ಕೃಷ್ಣನು **ನಿಜಸ್ಪರ್ಶತಃ** ತನ್ನ ಅಂಗಸ್ಪರ್ಶದಿಂದ **ತಂ** ಆ ಬಲರಾಮನನ್ನು **ಅಪೇತರೋಗಂ** ರೋಗರಹಿತನನ್ನಾಗಿ **ಕೃತ್ವಾ** ಮಾಡಿ, **ತದಾಕೃತಿಭಿಃ** ಅಸುರನಂತೆ ಆಕಾರವುಳ್ಳ ವೃಕ್ಷರೂಪಿಗಳಾದ **ಸಮಸ್ತೈಃ** ಎಲ್ಲಾ **ತಸ್ಯ** ಆ ಉಗ್ರಾಸುರನ **ಅನುಗೈಃ ಸಹ** ಅನುಚರರೊಂದಿಗೆ **ಅಮುಂ** ಈ **ವಿಷವೃಕ್ಷಂ** ವಿಷವೃಕ್ಷರೂಪಿಯಾದ ಅಸುರನನ್ನು **ಬಲೇನ** ಬಲದಿಂದ **ಬಭಂಬ** ಕಿತ್ತೆಸೆದನು.

**ತಾತ್ಪರ್ಯ :-** ಹೀಗೆ ಆ ವಿಷವೃಕ್ಷರೂಪಿಯಾದ ಅಸುರನು ಗೋಕುಲದ ಎಲ್ಲಾ ವಾಸಿಗಳನ್ನು ಪೀಡಿಸುತ್ತಿರುವಾಗ ಅವನ ವಿಷದಿಂದ ಬಲರಾಮನೂ ಅಸ್ವಸ್ಥನಾದನು. ಕೂಡಲೇ ಕೃಷ್ಣನು ಅವನನ್ನು ಸ್ಪರ್ಶಿಸಿ ಅವನ ರೋಗವನ್ನು ಪರಿಹರಿಸಿದನು. ನಂತರ ಅಸುರನಂತೆ ವೃಕ್ಷರೂಪಿಗಳಾಗಿ ಬಂದಿದ್ದ ಎಲ್ಲಾ ಅಸುರರನ್ನು ಈ ವಿಷವೃಕ್ಷವನ್ನೂ ಬುಡಸಹಿತ ಕಿತ್ತು ಎಸೆದನು.

ದೈತ್ಯಾಂಶ್ಚ ಗೋವಪುಷ ಆತ್ತವರಾನ್ ವಿರಿಂಚಾತ್
ಮೃತ್ಯೂಜ್ಝಿತಾನಪಿ ನಿಪಾತ್ಯ ದದಾಹ ವೃಕ್ಷಾನ್ ।
ವಿಕ್ರೀಡ್ಯ ರಾಮಸಹಿತೋ ಯಮುನಾಜಲೇ ಸ
ನೀರೋಗಮಾಶು ಕೃತವಾನ್ ವ್ರಜಮಬ್ಜನಾಭಃ ॥ ೪೭ ॥

**ಅರ್ಥ** :- ವಿರಿಂಚಾತ್ ಬ್ರಹ್ಮದೇವರಿಂದ **ಅತ್ತವರಾನ್** ಹೊಂದಲ್ಪಟ್ಟ ವರವುಳ್ಳವರಾದ **ಮೃತ್ಯೂಜ್ಝಿತಾನಪಿ** ಮರಣರಹಿತರೂ ಆದ **ಗೋ ವಪುಷಃ** ಗೋರೂಪಿಗಳಾದ **ದೈತ್ಯಾನ್** ರಾಕ್ಷಸರನ್ನು **ವೃಕ್ಷಾನ್ ಚ** ವೃಕ್ಷರೂಪಿಗಳಾದ ರಾಕ್ಷಸರನ್ನೂ **ನಿಪಾತ್ಯ** ಕೆಡುಹಿ **ದದಾಹ** ಸುಟ್ಟನು. **ಸಃ ಅಬ್ಜನಾಭಃ** ಆ ಪದ್ಮನಾಭು **ರಾಮಸಹಿತಃ** ಬಲರಾಮನಿಂದ ಕೂಡಿ **ಯಮುನಾ ಜಲೇ** ಯಮುನೆಯ ನೀರಿನಲ್ಲಿ **ವಿಕ್ರೀಡ್ಯ** ವಿಹರಿಸಿ, **ವ್ರಜಂ** ಗೋಕುಲವನ್ನು **ಆಶು** ಕೂಡಲೇ **ನಿರೋಗಂ** ರೋಗರಹಿತವನ್ನಾಗಿ **ಕೃತವಾನ್** ಮಾಡಿದನು.

**ತಾತ್ಪರ್ಯ** :- ಹೀಗೆ ಪದ್ಮನಾಭನಾದ ಕೃಷ್ಣನು ಬ್ರಹ್ಮದೇವರ ವರದಿಂದ ಅವಧ್ಯರಾಗಿದ್ದ ವೃಕ್ಷರೂಪಿ ದೈತ್ಯರ ಹೆಂಡಂದಿರಾಗಿದ್ದ ಗೋರೂಪಿ ದೈತ್ಯರನ್ನು ಅದೇ ರೀತಿ ಕರುವಿನ ರೂಪದಿಂದ ಇದ್ದ ಅವರ ಮಕ್ಕಳನ್ನೂ ವೃಕ್ಷರೂಪಿ ದೈತ್ಯರನ್ನೂ ಎಲ್ಲರನ್ನೂ ಕೊಂದು ಅವರನ್ನು ಸುಟ್ಟುಹಾಕಿದನು. ನಂತರ ಬಲ ರಾಮ ಸಹಿತವಾಗಿ ಯಮುನಾ ಜಲದಲ್ಲಿ ವಿಹರಿಸಿ ನಂದಗೋಕುಲಕ್ಕೆ ಬಂದಿದ್ದ ರೋಗರೂಪಭಯವನ್ನು ಪರಿಹರಿಸಿ ಎಲ್ಲರನ್ನೂ ನಿರೊಗಿಗಳಾಗಿಸಿದನು.

ಸಪ್ತೋಕ್ಷಣೋಽತಿಬಲವೀರ್ಯಯುತಾನದಮ್ಯಾನ್
ಸರ್ವೈರ್ಗಿರೀಶವರತೋ ದಿತಿಜಪ್ರಧಾನಾನ್ ।
ಹತ್ವಾಪುತಾಮಲಭದಾಶು ವಿಭುರ್ಯಶೋದಾ-
ಭ್ರಾತುಃ ಸ ಕುಂಭಕಸಮಾಹ್ವಯಿನೋಽಪಿ ನೀಲಾಮ್ ॥ ೪೮ ॥

**ವಿಭುಃ ಸಃ** ಸರ್ವೋತ್ತಮನಾದ ಆ ಶ್ರೀಕೃಷ್ಣನು **ಗಿರೀಶವರತಃ** ರುದ್ರನವರದಿಂದ **ಅತಿವೀರ್ಯಬಲಯುತಾನ್** ಅತ್ಯಂತ ಬಲವೀರ್ಯ ಯುಕ್ತರಾಗಿದ್ದ **ಸರ್ವೈಃ** ಎಲ್ಲರಿಂದಲೂ **ಅದಮ್ಯಾನ್** ನಿಗ್ರಹ ಮಾಡಲು ಅಶಕ್ಯ ರಾಗಿದ್ದ **ಸಪ್ತೋಕ್ಷಣಃ** ಎತ್ತಿನ ರೂಪದ ಏಳು **ದಿತಿಜಪ್ರಧಾನಾಂ** ದೈತ್ಯಶ್ರೇಷ್ಠ ರನ್ನು **ಆಶು** ಬೇಗನೇ **ಹತ್ವಾ** ಕೊಂದು **ಯಶೋದಾಭ್ರಾತುಃ** ಯಶೋದೆಯ

ಸೋದರನಾದ **ಕುಂಭಕಸಮಾಹ್ವಯಿನಃ** ಕುಂಭಕನೆಂಬ ಹೆಸರಿನ ಗೊಲ್ಲನ **ಸುತಾಂ** ಮಗಳಾದ **ನೀಲಾಂ** ನೀಲಾದೇವಿಯನ್ನು **ಅಲಭತ್** ಪಡೆದನು.

**ತಾತ್ಪರ್ಯ** :- ಸರ್ವೋತ್ತಮನಾದ ಭಗವಂತ ಒಮ್ಮೆ ಶಿವನ ವರದಿಂದ ಉನ್ಮತ್ತರಾಗಿದ್ದ ಯಾರಿಂದಲೂ ಸೋಲಿಸಲು ಅಶಕ್ಯರಾಗಿದ್ದ ವೃಷಭ ರೂಪದ ಏಳು ದೈತ್ಯರನ್ನು ಕೊಂದು ಯಶೋದಾ ದೇವಿಯ ತಮ್ಮನಾದ ಕುಂಭಕನೆಂಬ ಗೊಲ್ಲನ ಮಗಳಾದ ನೀಲೆಯನ್ನೂ ವಿವಾಹವಾದನು. ಈ ನೀಲೆಯೂ ಮುಂದೆ ಅಷ್ಟಮಹಿಷಿಯರಲ್ಲಿ ಒಬ್ಬಳಾದ ನೀಲೆಯೂ ಇಬ್ಬರೂ ಒಬ್ಬಳೇ. ಒಬ್ಬಳೇ ಎರಡು ರೂಪದಿಂದ ಹುಟ್ಟಿ ನಂತರ ಐಕ್ಯವಾಗುತ್ತಾರೆ ಎಂದು ಮುಂದೆ ೩೦ನೇ ಅಧ್ಯಾಯದಲ್ಲಿ ಆಚಾರ್ಯರು ಸ್ಪಷ್ಟಪಡಿಸುತ್ತಾರೆ. ಇಬ್ಬರನ್ನೂ ಸ್ವಯಂವರದ ರೀತಿಯಿಂದಲೇ ಎತ್ತನ್ನು ಮರ್ದಿಸಿ ಗೂಟಕ್ಕೆ ಕಟ್ಟಬೇಕೆಂಬ ಪಣದಿಂದಲೇ ಕೃಷ್ಣನು ಪಡೆದಿದ್ದಾನೆ.

**ಯಾ ಪೂರ್ವಜನ್ಮನಿ ತಪಃ ಪ್ರಥಮೈವ ಭಾರ್ಯಾ**
**ಭೂಯಾಸಮಿತ್ಯಚರದಸ್ಯ ಹಿ ಸಂಗಮೋ ಮೇ ।**
**ಸ್ಯಾತ್ ಕೃಷ್ಣಜನ್ಮನಿ ಸಮಸ್ತವರಾಂಗನಾಭ್ಯಃ**
**ಪೂರ್ವಂ ತ್ವಿತಿ ಸ್ಮ ತದಿಮಾಂ ಪ್ರಥಮಂ ಸ ಆಪ ॥ ೪೯ ॥**

**ಅರ್ಥ** :- **ಯಾ** ಯಾವನೀಲೆಯು **ಪೂರ್ವಜನ್ಮನಿ** ಹಿಂದಿನಜನ್ಮದಲ್ಲಿ **ಕೃಷ್ಣಜನ್ಮನಿ** ಕೃಷ್ಣಾವತಾರದಲ್ಲಿ **ಪ್ರಥಮಾ** ಏವ ಮೊದಲನೆಯ **ಭಾರ್ಯಾ** ಹೆಂಡತಿಯು **ಭೂಯಾಸಂ** ಆಗಲಿ, **ಇತಿ** ಎಂದು **ಸಮಸ್ತ ವರಾಂಗನಾದಿಭ್ಯಃ** ಎಲ್ಲಾ ಉತ್ತಮಸ್ತ್ರೀಯರಿಗಿಂತ **ಪೂರ್ವಂ** ಮೊದಲು **ಅಸ್ಯ** ಈ ಕೃಷ್ಣನ **ಸಂಗಮೋ** ಸಂಗಮವು **ಮೇ** ನನಗೆ **ಸ್ಯಾತ್** ಆಗಬೇಕು **ಇತಿ** ಎಂದು **ತಪಃ** ತಪಸ್ಸನ್ನು **ಆಚರತ್ ಸ್ಮ** ಮಾಡಿದ್ದಳು **ಹಿ** ಯಾವ ಕಾರಣದಿಂದ ತಪಸ್ಸು ಮಾಡಿದ್ದಳೋ **ತತ** ಆಕಾರಣದಿಂದ **ಸಃ** ಆ ಶ್ರೀಕೃಷ್ಣನು **ಇಮಾಂ** ಈ ನೀಲೆಯನ್ನು **ಪ್ರಥಮಂ** ಮೊದಲಿಗೆ **ಆಪ** ಪಡೆದನು.

**ತಾತ್ಪರ್ಯ** :- ಈ ನೀಲೆಯು ಹಿಂದಿನ ಜನ್ಮದಲ್ಲಿ ನನಗೆ ಎಲ್ಲರಿಗಿಂತಲೂ ಮೊದಲು ಕೃಷ್ಣನು ಗಂಡನಾಗಬೇಕು. ಬೇರೆ ಸ್ತ್ರೀಯರು ಅಂಗಸಂಗವನ್ನು ಹಾಗೆಯೇ ಪಡೆದರೂ ನಾನು ಮಾತ್ರ ಕೃಷ್ಣನ ಹೆಂಡತಿಯಾಗಿಯೇ ಬೇರೆ

ಉತ್ತಮ ಸ್ತ್ರೀಯರಿಗಿಂತ ಮೊದಲು ಅಂಗ ಸಂಗ ಪಡೆಯಬೇಕು ಎಂದು ತಪಸ್ಸನ್ನು ಆಚರಿಸಿದ್ದಳು. ಅದರಂತೆ ಕೃಷ್ಣ ಅವಳನ್ನು ಮೊದಲನೆಯ ಹೆಂಡತಿಯಾಗಿ ಪಡೆದ.

**ಅಗ್ರೇ ದ್ವಿಜತ್ವತ ಉಪಾವಹದೇಷ ನೀಲಾಂ**
**ಗೋಪಾಂಗನಾ ಅಪಿ ಪುರಾ ವರಮಾಪಿರೇ ಯತ್ ।**
**ಸಂಸ್ಕಾರತಃ ಪ್ರಥಮಮೇವ ಸುಸಂಗಮೋ ನೋ**
**ಭೂಯಾತ್ ತವೇತಿ ಪರಮಾಪ್ಸರಸಃ ಪುರಾ ಯಾಃ ॥ ೫೦ ॥**

**ಅರ್ಥ :-** **ಯತ್** ಯಾವ ಕಾರಣದಿಂದ **ಪುರಾ** ಹಿಂದೆ **ಯಾಃ** ಯಾವ **ಪರಂ** ಶ್ರೇಷ್ಠರಾದ, **ಆಪ್ಸರಸಃ** ಅಪ್ಸರಾ ಸ್ತ್ರೀಯರಾಗಿದ್ದ **ಗೋಪಾಂಗನಾ ಅಪಿ** ಗೋಪಿಕಾಸ್ತ್ರೀಯರೂ ಕೂಡ **ಸಂಸ್ಕಾರತಃ** ಉಪನಯನ ಸಂಸ್ಕಾರಕ್ಕಿಂತಲೂ, **ಪ್ರಥಮಮೇವ** ಮೊದಲೇ **ನಃ** ನಮಗೆ **ತವ** ನಿನ್ನ **ಸುಸಂಗಮಃ** ಉತ್ತಮ ಸಂಗವು **ಭೂಯಾತ್** ಆಗಲಿ **ಇತಿ** ಎಂದು **ವರಂ** ವರವನ್ನು **ಆಹಿರೇ** ಹೊಂದಿದ್ದರೋ **ತತ್** ಆ ಕಾರಣದಿಂದ **ಏಷಃ** ಶ್ರೀಕೃಷ್ಣನು, **ನೀಲಾಂ** ನೀಲೆಯನ್ನು **ದ್ವಿಜತ್ವತಃ** ಉಪನಯನ ಸಂಸ್ಕಾರಕ್ಕಿಂತಲೂ **ಅಗ್ರೇ** ಮೊದಲೇ **ಉಪಾವಹತ್** ಮದುವೆಯಾದನು.

**ತಾತ್ಪರ್ಯ :-** ಹಿಂದೆ ಅಪ್ಸರಸ್ತ್ರೀಯರೂ ಕೂಡ ನಮಗೆ ಕೃಷ್ಣನ ಅವತಾರದಲ್ಲಿ ಅವನ ಉಪನಯನಕ್ಕಿಂತ ಮೊದಲೇ ಅವನ ಅಂಗಸಂಗವಾಗಲಿ ಎಂದು ವರವನ್ನು ಬೇಡಿದ್ದರು. ಗೋಪಿಕಾಸ್ತ್ರೀಯರು ಅಪ್ಸರೆಯರಾದ್ದರಿಂದ ಅವರಿಗೆ ವಿವಾಹವಾಗದೇ ಅಂಗಸಂಗ ಪಡೆಯುವುದು ಯೋಗ್ಯವೇ. ಆದ್ದರಿಂದ ಅವರನ್ನು ವಿವಾಹವಾಗುವ ಅವಶ್ಯಕತೆ ಕೃಷ್ಣನಿಗಿರಲಿಲ್ಲ. ಹಾಗೆಯೇ ಅವರಿಗೆ ಅಂಗಸಂಗವನ್ನು ಕೊಟ್ಟಿದ್ದ. ಆದರೆ ನೀತಿಯು ವಿವಾಹವಾಗಿಯೇ ಉಪನಯನಕ್ಕಿಂತ ಮೊದಲೇ ತನಗೆ ಭಗವಂತನ ಅಂಗಸಂಗವಾಗಬೇಕೆಂದು ಬೇಡಿದ್ದರಿಂದ ಕೃಷ್ಣ ಅವಳನ್ನೂ ಉಪನಯನಕ್ಕಿಂತ ಮೊದಲೇ ವಿವಾಹವಾದನು.

**ತತ್ರಾಥ ಕೃಷ್ಣಮವದನ್ ಸಬಲಂ ವಯಸ್ಯಾಃ**
**ಪಕ್ವಾನಿ ತಾಲಸುಫಲಾನ್ಯನುಭೋಜಯೇತಿ ।**
**ಇತ್ಯರ್ಥಿತಃ ಸಬಲ ಆಪ ಸ ತಾಲವೃಂದಂ**
**ಗೋಪೈರ್ದುರಾಸದಮತೀವ ಹಿ ಧೇನುಕೇನ ॥ ೫೧ ॥**

**ಅರ್ಥ** :- **ಅಥ** ಅನಂತರ **ತತ್ರ** ಆ ಸಮಯದಲ್ಲಿ **ಸಬಲಂ** ಬಲರಾಮ ಸಮೇತನಾದ **ಕೃಷ್ಣಂ** ಶ್ರೀಕೃಷ್ಣನನ್ನು **ವಯಸ್ಯಾಃ** ಸ್ನೇಹಿತರು **ಅವದನ್** ಹೇಳಿದರು **ಪಕ್ವಾನಿ** ಮಾಗಿದ **ತಾಲ ಸುಫಲಾನಿ** ತಾಳೆಯ ಒಳ್ಳೆ ಫಲಗಳನ್ನು **ಭೋಜಯ** ತಿನ್ನಿಸು **ಇತಿ** ಎಂದು **ಅರ್ಥಿತಃ** ಬೇಡಲ್ಪಟ್ಟ **ಸಬಲಃ** ಬಲರಾಮ ನಿಂದ ಕೂಡಿದ, **ಸಃ** ಆ ಶ್ರೀಕೃಷ್ಣನು **ಗೋಪೈಃ** ಗೋಪಾಲರಿಂದ **ಧೇನುಕೇನ** ಧೇನುಕಾಸುರನ ನಿಮಿತ್ತದಿಂದ **ಅತೀವ** ಬಹಳ **ದುರಾಸದಂ** ಹೊಂದಲು ಅಶಕ್ಯವಾದ **ತಾಲ ವೃಂದಂ** ತಾಳೆ ವೃಕ್ಷಗಳ ಸಮೂಹವನ್ನು **ಆಪ** ಹೊಂದಿದನು.

**ತಾತ್ಪರ್ಯ** :- ಹೀಗೆ ಕೃಷ್ಣ ವೃಂದಾವನದಲ್ಲಿ ವಿಹರಿಸುತ್ತಿರಲು ಒಮ್ಮೆ ಅವನ ಸ್ನೇಹಿತರು ತಮಗೆ ತಾಳೆ ಹಣ್ಣುಗಳನ್ನು ತಿನ್ನಲು ಆಸೆಯಾಗಿತ್ತಿದೆ. ಆದ್ದರಿಂದ ಅದರ ಸಮೀಪ ಕರೆದುಕೊಂಡು ಹೋಗು ಎಂದು ಹೇಳಿದರು. ಆ ತಾಳೆಯ ವನದಲ್ಲಿ ಧೇನುಕನೆಂಬ ಅಸುರ ವಾಸ ಮಾಡುತ್ತಿದ್ದರಿಂದ ಈ ಗೋಪಾಲರಿಗೆ ಅಲ್ಲಿಗೆ ಹೋಗಲು ಅತೀವ ಕಷ್ಟಕರವಾಗಿತ್ತು. ಆಗ ಕೃಷ್ಣ ಅವರನ್ನೆಲ್ಲಾ ಕರೆದುಕೊಂಡು ತಾಳವನದ ಹತ್ತಿರ ಹೋದನು.

**ವಿಘ್ನೇಶತೋ ವರಮವಾಪ್ಯ ಸ ದುಷ್ಟದೈತ್ಯೋ**
**ದೀರ್ಘಾಯುರುತ್ತಮಬಲಃ ಕದನಪ್ರಿಯೋಽಭೂತ್ ।**
**ನಿತ್ಯೋದ್ಧತಃ ಸ ಉತ ರಾಮಮವೇಕ್ಷ್ಯ ತಾಲ-**
**ವೃಂತಾತ್ ಫಲಾನಿ ಗಳಯಂತಮಥಾಭ್ಯಧಾವತ್ ।**
**ತಸ್ಯ ಪ್ರಹಾರಮಭಿಕಾಂಕ್ಷತ ಆಶು ಪೃಷ್ಠ-**
**ಪಾದೌ ಪ್ರಗೃಹ್ಯ ತೃಣರಾಜಶಿರೋಽಹರತ್ ಸಃ ॥ ೫೨ ॥**

**ಅರ್ಥ** :- **ಸುದುಷ್ಟದೈತ್ಯಃ** ದುಷ್ಟನಾದ ದೈತ್ಯನಾಗಿದ್ದ **ಸಃ** ಆ ಧೇನುಕಾಸುರನು **ವಿಘ್ನೇಶತಃ** ವಿಘ್ನೇಶ್ವರನಿಂದ **ವರಂ** ವರವನ್ನು **ಅವಾಪ್ಯ** ಹೊಂದಿ **ದೀರ್ಘಾಯುಃ** ಚಿರಾಯುವು, **ಉತ್ತಮಬಲಃ** ಶ್ರೇಷ್ಠ ಬಲವುಳ್ಳವನು **ಕದನಪ್ರಿಯಃ** ಯುದ್ಧ ಪ್ರಿಯನೂ **ಅಭೂತ್** ಆಗಿದ್ದನು. **ನಿತ್ಯೋದ್ಧತಃ** ಸದಾ ಅಹಂಕಾರಿಯಾದ ಅವನು, **ತಾಲವೃಂದಾತ್** ತಾಳೆ ವೃಕ್ಷಗಳಿಂದ **ಫಲಾನಿ** ಹಣ್ಣುಗಳನ್ನು **ಗಲಯಂತಂ** ಉದುರಿಸುತ್ತಿರುವ **ರಾಮಂ** ಬಲರಾಮನನ್ನು **ಅವೇಕ್ಷ್ಯ** ನೋಡಿ **ಉತ** ಅಭ್ಯದಾವತ ಕೂಡಲೇ ಧಾವಿಸಿ ಬಂದನು.

**ತಾತ್ಪರ್ಯ** :- ಹೀಗೆ ಕೃಷ್ಣ ರಾಮರು ತಾಳೆ ವನದ ಹತ್ತಿರ ಬಂದರು. ಧೇನುಕಾಸುರನು ವಿಘ್ನೇಶನ ವರದಿಂದ ತಾನು ಚಿರಾಯುವು ಎಂದು ತಿಳಿದಿದ್ದನು. ಹಾಗೂ ಅತ್ಯಂತ ಬಲಶಾಲಿಯಾಗಿ ಸದಾ ಯುದ್ಧಪ್ರಿಯನಾಗಿದ್ದ ಸದಾ ಅಹಂಕಾರಿಯೂ ಆಗಿದ್ದ ಅವನು ತಾಳೆ ವೃಕ್ಷಗಳನ್ನೂ ಉದುರಿಸುತ್ತಿದ್ದ ಬಲರಾಮನನ್ನು ನೋಡಿ ಅವನ ಬಳಿ ಓಡಿ ಬಂದನು.

**ತಸ್ಮಿನ್ ಹತೇ ಖರತರೇ ಖರರೂಪದೈತ್ಯೇ**
**ಸರ್ವೇ ಖರಾಶ್ಚ ಖರತಾಲವನಾಂತರಸ್ಥಾಃ ।**
**ಪ್ರಾಪುಃ ಖರಸ್ವರತರಾ ಖರರಾಕ್ಷಸಾರಿಂ**
**ಕೃಷ್ಣಂ ಬಲೇನ ಸಹಿತಂ ನಿಹತಾಶ್ಚ ತೇನ ॥ ೫೩ ॥**

**ಅರ್ಥ** :- **ಸಃ** ಆ ಬಲರಾಮನು, **ಪ್ರಹಾರಂ** ಪೆಟ್ಟನ್ನೂ, **ಅಭಿಕಾಂಕ್ಷತಃ** ಕೊಡಲು ಬಯಸುತ್ತಿದ್ದ **ತಸ್ಯ** ಆ ಧೇನುಕನ, **ಪೃಷ್ಠಪಾದೌ** ಹಿಂಗಾಲುಗಳನ್ನು **ಆಶು** ಕೂಡಲೇ, **ಪ್ರಗೃಹ್ಯ** ಹಿಡಿದು, **ತೃಣರಾಜಶಿರಃ** ತಾಳೆಮರದ ತುದಿಗೆ, **ಅಹರತ್** ಎಸೆದನು, **ತಸ್ಮಿನ್** ಆ ಯಾವ, **ಖರತರೇ** ಅತಿಕ್ರೂರನಾದ, **ಖರ ರೂಪದೈತ್ಯೇ** ಕತ್ತೆಯ ರೂಪದ ಅಸುರನು, **ಹತೇ ಸತಿ** ಈ ರೀತಿ ಹತನಾಗುತ್ತಿರಲು, **ಖರತಾಲವನಾಂತರಸ್ಥಾಃ** ತಾಳೆಯ ತೋಪಿನೊಳಗಿದ್ದ **ಸರ್ವೇ** ಎಲ್ಲಾ, **ಖರಾಶ್ಚ** ಕತ್ತೆ ರೂಪದ ಅಸುರರೂ, **ಖರತರಸ್ವರತರಾಃ** ಕತ್ತೆಗಳಂತೆ ಕರ್ಕಶ ಧ್ವನಿಯನ್ನು ಮಾಡುತ್ತಾ, **ಖರರಾಕ್ಷಸಾರಿಂ** ಕ್ರೂರರಾಕ್ಷಸರಿಗೆ ಶತ್ರುವಾರ, **ಬಲೇನ ಸಹತಂ** ಬಲರಾಮನಿಂದ ಕೂಡಿದ, **ಕೃಷ್ಣಂ** ಶ್ರೀಕೃಷ್ಣನು, **ಪ್ರಾಪುಃ** ಮುತ್ತಿಗೆ ಹಾಕಿದರು, **ತೇನ** ಆ ಕೃಷ್ಣನಿಂದ, **ನಿಹತಾಶ್ಚ** ಸಾಯಸಲ್ಪಟ್ಟಿರೂ ಕೂಡ.

**ತಾತ್ಪರ್ಯ** :- ಧೇನುಕಾಸುರನು ಕತ್ತೆಯ ರೂಪದ ಅಸುರನಾಗಿದ್ದನು. ಯಾವಾಗ ಧೇನುಕನು ಬಲರಾಮನನ್ನು ಸಾಯಿಸಲು ಓಡಿ ಬಂದನೋ ಆಗ ಬಲರಾಮನು ಆ ಕತ್ತೆಯ ರೂಪದ ಅಸುರನ ಅಂಗಾಲನ್ನೆತ್ತಿ ತಾಳೆಯ ಮರದ ತುದಿಗೆ ಬಿಸುಡಿದನು. ಆಗ ಧೇನುಕನು ರಕ್ತವನ್ನು ಕಾರುತ್ತಾ ಸತ್ತುಬಿದ್ದನು. ಆವಾಗ ಅಲ್ಲಿಯೇ ಅಡಗಿದ್ದ ಸಾವಿರಾರು ಕತ್ತೆಯ ರೂಪದ ಅಸುರರು ರಾಮನಡೆಗೆ, ಕೃಷ್ಣನೆಡೆಗೆ ಕರ್ಕಶವಾಗಿ ಕಿರುಚುತ್ತಾ ಓಡಿ ಬಂದರು. ಕೃಷ್ಣನು ಅವರೆಲ್ಲರನ್ನೂ ಕ್ಷಣ ಮಾತ್ರದಲ್ಲಿ ನಾಶಮಾಡಿದನು.

ಸರ್ವಾನ್ ನಿಹತ್ಯ ಖರರೂಪಧರಾನ್ ಸ ದೈತ್ಯಾನ್
ವಿಘ್ನೇಶ್ವರಸ್ಯ ವರತೋಽನ್ಯಜನೈರವಧ್ಯಾನ್ ।
ಪಕ್ವಾನಿ ತಾಲಸುಫಲಾನಿ ನಿಜೇಷು ಚಾದಾದ್
ದುರ್ವಾರಪೌರುಷಗುಣೋದ್ಭರಿತೋ ರಮೇಶಃ ॥ ೫೪ ॥

**ಅರ್ಥ** :- **ದುರ್ವಾರಪೌರುಷಗುಣೋದ್ಭರಿತಃ**, ದುರ್ವಾರ ತಡೆಯಲ ಶಕ್ಯವಾದ ಪೌರುಷಗುಣ ಅಪರಿಮಿತ ಬಲ ಹಾಗೂ ಗುಣಗಳಿಂದ **ಭರಿತಃ** ಕೂಡಿದ, **ರಮೇಶಃ** ರಮಾಪತಿಯಾದ, **ಸಃ** ಆ ಶ್ರೀಕೃಷ್ಣನು, **ವಿಘ್ನೇಶ್ವರಸ್ಯ** ಗಣಪತಿಯ, **ವರೇಣ** ವರದಿಂದ, **ಅನ್ಯಜನ್ಯೈಃ** ಬೇರೆ ಜನರಿಂದ, **ಅವಧ್ಯಾಸ್** ಕೊಲ್ಲಲು ಅಶಕ್ಯವಾಗಿದ್ದ **ಖರರೂಪಧದಾನ್** ಕತ್ತೆಯ ರೂಪ ಧರಿಸಿದ್ದ **ಸರ್ವಾನ್** ಎಲ್ಲಾ, **ದೈತ್ಯಾನ್** ರಾಕ್ಷಸರನ್ನು **ನಿಹತ್ಯ** ಕೊಂದು, **ಪಕ್ವಾನಿ** ಮಾಗಿದ, **ತಾಲಫಲಾನಿ** ತಾಳೆಯ ಹಣ್ಣುಗಳನ್ನು **ನಿಜೇಷು** ತನ್ನವರಿಗೆ, **ಅದಾತ್** ಕೊಟ್ಟನು.

**ತಾತ್ಪರ್ಯ** :- ಈ ಕತ್ತೆಯ ರೂಪದ ದೈತ್ಯರು ಗಣಪತಿಯ ವರದಿಂದ ಬೇರೆಯವರಿಂದ ಅವಧ್ಯರಾಗಿದ್ದರು. ಅವರನ್ನೆಲ್ಲಾ ನಿರಾಯಾಸವಾಗಿ ಅಪ್ರತಿಮ ಪೌರುಷ ಗುಣಗಳಿಂದ ಕೂಡಿದ ರಮಾಪತಿಯಾದ ಶ್ರೀಕೃಷ್ಣನು ನಾಶಮಾಡಿ ತನ್ನವರಾದ ಗೋಪಾಲರಿಗೆ ಅವರು ಬಯಸಿದ ತಾಳೆಯ ಹಣ್ಣನ್ನು ಕೊಟ್ಟನು.

ಪಕ್ಷದ್ವಯೇನ ವಿಹರತ್ಸ್ವಥ ಗೋಪಕೇಷು
ದೈತ್ಯಃ ಪ್ರಲಂಬ ಇತಿ ಕಂಸವಿಸೃಷ್ಟ ಆಗಾತ್ ।
ಕೃಷ್ಣಸ್ಯ ಪಕ್ಷಿಷು ಜಯತ್ಸು ಸ ರಾಮಮೇತ್ಯ
ಪಾಪಃ ಪರಾಜಿತ ಉವಾಹ ತಮುಗ್ರರೂಪಃ ॥ ೫೫ ॥

**ಅರ್ಥ** :- **ಪಕ್ಷದ್ವಯೇನ** ಕೃಷ್ಣನ ತಂಡ ಬಲರಾಮನ ತಂಡವೆಂದು ಎರಡು ವಿಧವಾದ ತಂಡದಿಂದ, **ಗೋಪಕೇಷು** ಗೋಪಾಲಕರು, **ವಿಹರತ್ಸು** ಸತ್ಸು ಆಟವಾಡುತ್ತಿರಲು, **ಅಥ** ಈ ನಡುವೆ, **ಕಂಸೇನ** ಕಂಸನಿಂದ, **ವಿಸೃಷ್ಟ** ಕಳುಹಿಸಲ್ಪಟ್ಟ **ಪ್ರಲಂಭಃ ಇತಿ** ಪ್ರಲಂಭನೆಂಬ, **ದೈತ್ಯಃ** ರಾಕ್ಷಸನು, **ಅಗಾತ್** ಬಂದು ಕೃಷ್ಣನ ಪಕ್ಷ ಸೇರಿದನು, **ಕೃಷ್ಣಸ್ಯ** ಕೃಷ್ಣನ, **ಪಕ್ಷಿಷುಃ** ಪಕ್ಷದವರು, **ಜಯತ್ಸು**

ಸತ್ಸು ಜಯಿಸಲ್ಪಟ್ಟಿರಲು, **ಪರಾಜಿತಃ** ತಾನು ಬೇಕಂತಲೇ ಸೋತವನಾದ, **ಉಗ್ರರೂಪಃ** ಉಗ್ರರೂಪಿಯಾದ, **ಪಾಪಃ** ಪಾಪಿಷ್ಠನಾದ ಪ್ರಲಂಭನು, **ಅಥ** ತಾನು ಸೋತ ನಂತರ, **ತಂ ರಾಮಂ** ಆ ಬಲರಾಮನನ್ನೂ ಏತ್ಯ ಹೊಂದಿ, **ಉವಾಹ** ಹೊತ್ತುಕೊಂಡ.

**ತಾತ್ಪರ್ಯ :-** ಒಮ್ಮೆ ಗೋಪಾಲರು ಕೃಷ್ಣನ ಪಕ್ಷ, ರಾಮನ ಪಕ್ಷವೆಂದು ಎರಡು ಪಕ್ಷವನ್ನಾಗಿ ಮಾಡಿ ಹರಿಣಾಕ್ರೀಡನ ಎಂಬ ಆಟವನ್ನೂ ಆಡುತ್ತಿದ್ದರು. ಕೃಷ್ಣನ ತಂಡದವನು ರಾಮನ ತಂಡದವನೊಡನೆ ಸ್ಪರ್ಧಿಸುತ್ತಾ ದೂರದ ಆಲದ ಮರದವರೆಗೆ ಓಡಿಬರಬೇಕು. ಮೊದಲು ಬಂದವನು ಗೆಲ್ಲುತ್ತಾನೆ. ಗೆದ್ದವನು ಸೋತವರ ಹೊತ್ತುಕೊಂಡು ಹೋಗಬೇಕು. ಷಣ್ಮುಖನ ವರದಿಂದ ಬಲಶಾಲಿಯಾದ ಕಂಸನಿಂದ ಕಳುಹಿಸಲ್ಪಟ್ಟ ಪ್ರಲಂಭನೆಂಬ ಕ್ರೂರ ಅಸುರ ಕೃಷ್ಣನೊಂದಿಗೆ ಓಡುವಾಗ ತಾನು ಸೋತನು. ನಂತರ ನಿಯಮದಂತೆ ಗೆದ್ದ ಬಲರಾಮನನ್ನೂ ಹೊತ್ತುಕೊಂಡು ಓಡಿದನು.

**ಭೀತೇನ ರೋಹಿಣಿಸುತೇನ ಹರಿಃ ಸ್ತುತೋಽಸೌ**
**ಸ್ವಾವಿಷ್ಟತಾಮುಪದಿದೇಶ ಬಲಾಭಿಪೂರ್ತ್ಯೈ ।**
**ತೇನೈವ ಪೂರಿತಬಲೋಽಬರಚಾರಿಣಂ ತಂ**
**ಪಾಪಂ ಪ್ರಲಂಬಮುರುಮುಷ್ಟಿಹತಂ ಚಕಾರ ॥ ೫೬ ॥**

**ಅರ್ಥ :-** **ಭೀತೇನ** ಹೆದರಿದ, **ರೋಹಿಣೀ ಸುತೇನ** ಬಲರಾಮನಿಂದ, **ಸ್ತುತಃ** ಸ್ತೋತ್ರಮಾಡಿಸಿಕೊಂಡ, **ಅಸೌ** ಶ್ರೀಕೃಷ್ಣನು, **ಬಲಾಭಿಪೂರ್ತ್ಯೈ** ಬಲವನ್ನು ತುಂಬುವುದಕ್ಕಾಗಿ, **ಸ್ವಾವಿಷ್ಟತಾಂ** ತಾನು ಆವೇಶಗೊಂಡಿರುವುದನ್ನು **ಉಪದಿದೇಶ** ತಿಳಿಸಿದನು, **ತೇನೈವ** ಈ ರೀತಿಯಾದ ತನ್ನ ಆವೇಶದಿಂದ, **ಪೂರಿತಬಲಃ** ತುಂಬಿದ ಬಲವುಳ್ಳವನಾದ ಬಲರಾಮನು, **ಅಂಬರಚಾರಂ** ಆಕಾಶದಲ್ಲಿ ಸಂಚರಿಸುತ್ತಿರುವ, **ತಂ** ಆ, **ಪಾಪಂ** ಪಾಪಿಯಾದ, **ಪ್ರಲಂಬಂ** ಪ್ರಲಂಬಾಸುರನನ್ನು, **ಉರುಮುಷ್ಠಿಹತಂ** ದೃಢವಾದ ಮುಷ್ಠಿಯಿಂದ ಕೊಂದವನ್ನಾಗಿ, **ಚಕಾರ** ಮಾಡಿದನು.

**ತಾತ್ಪರ್ಯ :-** ಹೀಗೆ ಪ್ರಲಂಬನು ಬಲರಾಮನನ್ನು ಹೊತ್ತುಕೊಂಡು ಓಡುತ್ತಿರಲು ರಾಮನು ಹೆದರಿ ಕೃಷ್ಣನನ್ನು ಸ್ತೋತ್ರ ಮಾಡಿದನು. ಆಗ

ಶ್ರೀಕೃಷ್ಣನು ರಾಮನ ಮೂಲ ರೂಪದ ನೆನೆಪು ಮಾಡಿಸಿ ಅಲ್ಲಿದ್ದ ತನ್ನ ಶುಕ್ಲ ರೂಪದ ಆವೇಶವನ್ನು ತಿಳಿಸಿದನು. ಹೀಗೆ ಭಗವಂತನ ಶುಕ್ಲ ರೂಪದಾವೇಶ ವಿರುವ ತನ್ನ ಮೂಲರೂಪದ ಬಲವು ಅವನಲ್ಲಿ ವ್ಯಕ್ತವಾಯಿತು. ಕೂಡಲೇ ರಾಮನು ಆಕಾಶಸಂಚಾರಿಯಾದ ಆ ದುಷ್ಟರಾಕ್ಷಸನನ್ನೂ ಮುಷ್ಠಿಯಿಂದ ತಲೆಗೆ ಹೊಡೆದು ಕೊಂದನು.

**ತಸ್ಮಿನ್ ಹತೇ ಸುರಗಣಾ ಬಲದೇವನಾಮ**
**ರಾಮಸ್ಯ ಚಕ್ರುರತಿತೃಪ್ತಿಯುತಾ ಹರಿಶ್ಚ ।**
**ವಹ್ನಿಂ ಪಪೌ ಪುನರಪಿ ಪ್ರದಹಂತಮುಚ್ಚೈಃ**
**ಗೋಪಾಂಶ್ಚ ಗೋಗಣಮಗಣ್ಯಗುಣಾರ್ಣವೋಽಪಾತ್ ॥ ೫೭ ॥**

**ಅರ್ಥ :-** **ತಸ್ಮಿನ್** ಆ ಪ್ರಲಂಬನು, **ಹತೇ ಸತಿ** ಸಾಯುತ್ತಿರಲು, **ಸುರಾಗಣಾಃ** ದೇವತೆಗಳ ಸಮೂಹವು, **ಅತಿತೃಪ್ತಯುತಾಃ** ಅತ್ಯಂತ ತೃಪ್ತ ರಾದವರಾಗಿ, **ರಾಮಸ್ಯ** ರಾಮನಿಗೆ, **ಬಲದೇವನಾಮಾ** ಬಲದೇವನೆಂಬ ಹೆಸರನ್ನು **ಚಕ್ರುಃ** ಮಾಡಿದರು, **ಅಗಣ್ಯಗುಣಾರ್ಣವಃ** ಎಣಿಸಲಾಗದ ಗುಣಗಳ ಸಮುದ್ರನಾದ, **ಹರಿಶ್ಚ** ಕೃಷ್ಣನಾದರೂ, **ಪುನರಪಿ** ಮತ್ತೊಮ್ಮೆ **ಉಚ್ಚೈಃ** ಬಹಳವಾಗಿ, **ಪ್ರದಹಂತಂ** ಸುಡುತ್ತಿರುವ, **ವಹ್ನಿಂ** ಬೆಂಕಿಯನ್ನು **ಪಪೌ** ಕುಡಿದನು, **ಗೋಪಾನ್** ಗೋಪಾಲರನ್ನು, **ಗೋಗಣಂ ಚ** ಹಸುಗಳ ಸಮೂಹವನ್ನು, **ಅಪಾತ್** ರಕ್ಷಿಸಿದನು.

**ತಾತ್ಪರ್ಯ :-** ಪ್ರಲಂಬನೊಡನೆ ಯುದ್ಧವನ್ನು ಮಾಡಿ ಅವನನ್ನು ಸಂಹರಿಸಿದ ರಾಮನನ್ನು ಬಲರಾಮ ಎಂದು ನಾಮಕರಣಮಾಡಿದರು. ನಂತರ ಈ ಮಧ್ಯೆ ಗೋಪಾಲರ ಕಣ್ಣು ತಪ್ಪಿಸಿ ಹಸುಗಳು ಮುಂಜಾಟವಿಯನ್ನು ಪ್ರವೇಶಿಸಿದವು. ಆಗ ಹಸುಗಳನ್ನು ಕಾಣದ ಗೊಲ್ಲರು ಅವುಗಳ ಹೆಸರನ್ನೂ ಕೂಗಿ ಅವುಗಳ ಕೂಗಿನಿಂದ ಅವುಗಳಿದ್ದ ಸ್ಥಳಕ್ಕೆ ಹೋದರು ಆಗ ಅಲ್ಲಿ ಕಾಡ್ಗಿಚ್ಚು ಪ್ರಾರಂಭವಾಗಿ ಇವರೆಲ್ಲರನ್ನೂ ಸುತ್ತುವರೆಯಿತು. ಆಗ ಎಲ್ಲರೂ ಕೃಷ್ಣನನ್ನು ಪ್ರಾರ್ಥಿಸಿದಾಗ ಕೃಷ್ಣ ಅವರನ್ನು ಕಣ್ಣು ಮುಚ್ಚಲು ಹೇಳಿ ತಾನು ಮತ್ತೊಮ್ಮೆ ಆ ಕಾಡ್ಗಿಚ್ಚು ಕುಡಿದನು. ಯಾಕೆಂದರೆ ಅವನು ಕರುಣಾ ಸಮುದ್ರನು.

**ಕೃಷ್ಣಂ ಕದಾಚಿದತಿದೂರಗತಂ ವಯಸ್ಯಾ**
**ಊಚುಃ ಕ್ಷುಧಾಽರ್ದಿತತರಾ ವಯಮಿತ್ಯುದಾರಮ್ ।**
**ಸೋಽಪ್ಯಾಹ ಸತ್ರಮಿಹ ವಿಪ್ರಗಣಾಶ್ಚರಂತಿ**
**ತಾನ್ ಯಾಚತೇತಿ ಪರಿಪೂರ್ಣಸಮಸ್ತಕಾಮಃ ॥ ೫೮ ॥**

**ಅರ್ಥ :- ಕದಾಚಿತ್** ಒಮ್ಮೆ **ಅತಿದೂರಗತಂ** ಬಹಳ ದೂರಹೋಗಿದ್ದ **ಉದಾರಂ** ಭಕ್ತರ ಅಭೀಷ್ಟವನ್ನೂ ದಯಪಾಲಿಸುವ, **ಕೃಷ್ಣಂ** ಕೃಷ್ಣನನ್ನು ಕುರಿತು, **ವಯಸ್ಯಾಃ** ಸ್ನೇಹಿತರು, **ವಯಂ** ನಾವು, **ಕ್ಷುಧಾರ್ದಿತತರಾಃ** ಹಸಿವಿನಿಂದ **ಅತೀವ** ಪೀಡಿತರಾಗಿದ್ದೇವೆ ಎಂದು, **ಊಚುಃ** ಹೇಳಿದರು. **ಪರಿಪೂರ್ಣ ಸಮಸ್ತಕಾಮಃ** ಪರಿಪೂರ್ಣವಾದ ಎಲ್ಲಾ ಕಾಮನೆಯುಳ್ಳ, **ಸೋಽಪಿ** ಆ ಕೃಷ್ಣನಾದರೂ, **ಇಹ** ಇಲ್ಲಿ, **ವಿಪ್ರಗಣಾಃ** ಬ್ರಾಹ್ಮಣರ ಸಮೂಹವು, **ಸತ್ರಂ** ಯಾಗವನ್ನೂ, **ಚರಂತಿ** ಮಾಡುತ್ತಿದ್ದಾರೆ, **ತಾನ್** ಅವರನ್ನೂ, **ಯಾಚತ** ಬೇಡಿರಿ, **ಇತಿ** ಎಂದು, **ಆಹ** ಹೇಳಿದನು.

**ತಾತ್ಪರ್ಯ :-** ಒಮ್ಮೆ ಕೃಷ್ಣನು ಸ್ನೇಹಿತರೊಂದಿಗೆ ಹಸುವನ್ನೂ ಮೆಯಿಸುತ್ತಾ ಬಹಳ ದೂರ ಹೋದನು. ಆಗ ಬಹಳ ಹಸಿವಾದ ಸ್ನೇಹಿತರು ಭಕ್ತರ ಎಲ್ಲಾ ಅಭೀಷ್ಟಗಳನ್ನು ಕೊಡುವ ಕೃಷ್ಣನನ್ನು ಹಸಿವೆಂದು ಬೇಡಿದರು. ಆಗ ತಾನು ಪರಿಪೂರ್ಣನಾದ ಕಾಮನೆಯುಳ್ಳವನಾದರೂ ಸ್ನೇಹಿತರಿಗೆ ಇಲ್ಲಿಯೇ ಪಕ್ಕದಲ್ಲಿ ಬ್ರಾಹ್ಮಣರು ತುಂಬು ಜನರಿಂದ ಕೂಡಿ ಮಾಡುವ ಸತ್ರವನ್ನು ಮಾಡುತ್ತಿದ್ದಾರೆ ಅಲ್ಲಿ ಹೋಗಿ ಅವರಲ್ಲಿ ಅನ್ನ ಬೇಡಿರಿ ಎಂದು ಕೃಷ್ಣ ಹೇಳಿದ.

**ತಾನ್ ಪ್ರಾಪ್ಯ ಕಾಮಮನವಾಪ್ಯ ಪುನಶ್ಚ ಗೋಪಾಃ**
**ಕೃಷ್ಣಂ ಸಮಾಪುರಥ ತಾನವದತ್ ಸ ದೇವಃ ।**
**ಪತ್ನೀಃ ಸಮರ್ಥಯತ ಮದ್ವಚನಾದಿತಿ ಸ್ಮ**
**ಚಕ್ರುಶ್ಚತೇ ತದಪಿ ತಾ ಭಗವಂತಮಾಪುಃ ॥ ೫೯ ॥**

**ಅರ್ಥ :-ಗೋಪಾಃ** ಗೋಪಾಲರು, **ತಾನ್** ಆ ಬ್ರಾಹ್ಮಣರನ್ನು, **ಪ್ರಾಪ್ಯ** ಹೊಂದಿ, **ಕಾಮಂ** ಅಭೀಷ್ಟವನ್ನು, **ಅನವಾಪ್ಯ** ಪಡೆಯದೇ, **ಪುನಶ್ಚ** ಮತ್ತೆ, **ಕೃಷ್ಣಂ** ಕೃಷ್ಣನನ್ನು **ಸಮೀಯುಃ** ಹೊಂದಿದರು. **ಸಃ** ಆ, **ದೇವಃ** ಸ್ವಾಮಿಯಾದ ಕೃಷ್ಣನು, **ತಾನ್** ಆ ಗೋಪಾಲಕರನ್ನು, **ಮದ್ವಚನಾತ್** ನಾನು ಹೇಳಿದೆನೆಂದು,

ವಿಪ್ರಪತ್ನೀಃ ಬ್ರಾಹ್ಮಣರ ಹೆಂಡಂದಿರನ್ನು ಸಮರ್ಥಯತ ಪ್ರಾರ್ಥನೆ ಮಾಡಿರಿ, **ಇತಿ** ಎಂದು, **ಅವದತ್** ಹೇಳಿದನು, **ತೇ** ಆ ಗೋಪಾಲರು, **ತದಪಿ** ಬ್ರಾಹ್ಮಣರ ಪತ್ನಿಯರಲ್ಲಿ ಅನ್ನದ ಯಾಚನೆಯನ್ನು ಕೂಡ, **ಚಕ್ರುಃ** ಮಾಡಿದರು, **ತಾಃ** ಆ ವಿಪ್ರಪತ್ನಿಯರು ಆಗ, **ಭಗವಂತಂ** ಕೃಷ್ಣನನ್ನು, **ಆಪು** ಹೊಂದಿದರು.

**ತಾತ್ಪರ್ಯ :-** ಕೃಷ್ಣನು ಹೀಗೆ ಹೇಳಲು ಗೊಲ್ಲರು ಕೂಡಲೇ ಆ ಬ್ರಾಹ್ಮಣರ ಹತ್ತಿರ ಹೋಗಿ ಭಿಕ್ಷೆಯನ್ನು ಬೇಡಿದರು. ಆದರೆ ಆ ವಿಪ್ರರು ಯಾಗದ ಸಮಾಪ್ತಿಯಾಗದೇ ಏನೂ ಕೊಡುವ ಹಾಗಿಲ್ಲ. ಆದ್ದರಿಂದ ನಿಮಗೆ ಕೊಡಲಾಗುವುದಿಲ್ಲ ಎಂದು ಹೇಳಿದರು. ಆಗ ನಿರಾಶರಾದ ಗೊಲ್ಲರು ಕೃಷ್ಣನ ಬಳಿ ಬಂದು ಅವರು ನಮಗೆ ಏನೂ ಕೊಡಲಿಲ್ಲ ಎಂದು ಹೇಳಿದರು. ಆಗ ಕೃಷ್ಣನು ನೀವು ಬ್ರಾಹ್ಮಣ ಪತ್ನಿಯರಲ್ಲಿ ಹೋಗಿ ಕೃಷ್ಣನು ಬಂದಿದ್ದಾನೆ ಅವನಿಗೆ ಹಸಿವಾಗಿದೆ. ತಿನ್ನಲು ಕೊಡಿ ಎಂದು ಹೇಳಿರಿ ಎಂದು ಹೇಳಿದನು. ಗೋಪಾಲರು ಹಾಗೆಯೇ ವಿಪ್ರಪತ್ನಿಯರಲ್ಲಿ ಹೇಳಿದಾಗ ಸಂಭ್ರಮ ಪಟ್ಟ ಬ್ರಾಹ್ಮಣ ಸ್ತ್ರೀಯರು ಕೂಡಲೇ ಎಲ್ಲಾ ಭಕ್ಷ್ಯ ಭೋಜ್ಯಗಳನ್ನು ಹಿಡಿದುಕೊಂಡು ಕೃಷ್ಣನಲ್ಲಿ ಬಂದರು.

**ತಾಃ ಷಡ್ವಿಧಾನ್ನಪರಿಪೂರ್ಣಕರಾಃ ಸಮೇತಾಃ**
**ಪ್ರಾಪ್ತಾ ವಿಸೃಜ್ಯ ಪತಿಪುತ್ರಸಮಸ್ತಬಂಧೂನ್ ।**
**ಆತ್ಮಾರ್ಚನೈಕಪರಮಾ ವಿಸಸರ್ಜ ಕೃಷ್ಣ**
**ಏಕಾ ಪತಿಪ್ರವಿಧುತಾ ಪದಮಾಪ ವಿಷ್ಣೋಃ ॥ ೬೦ ॥**

**ಅರ್ಥ :-** **ಕೃಷ್ಣಃ** ಕೃಷ್ಣನು, **ಷಡ್ವಿಧಾನ್ನಪರಿಪೂರ್ಣಕರಾಃ** ಷಡ್ವಿಧರಸ ದಿಂದ ಪರಿಪೂರ್ಣವಾದ ಅನ್ನದಿಂದ ಪರಿಪೂರ್ಣವಾದ ಕೈಯುಳ್ಳ, **ಸಮೇತಾ** ಒಟ್ಟಾಗಿ ಸೇರಿದವರಾಗಿ, **ಪತಿಪುತ್ರಸಮಸ್ತಬಂಧೂನ್** ಗಂಡ ಮಕ್ಕಳು ಮೊದಲಾದ ಸಮಸ್ತ ಬಾಂಧವರನ್ನು, **ವಿಸೃಜ್ಯ** ಬಿಟ್ಟು, **ಪ್ರಾಪ್ತಾಃ** ಕೃಷ್ಣನನ್ನು ಕುರಿತು ಬಂದಂತಹ, **ಆತ್ಮಾರ್ಚನೈಕಪರಮಾಃ** ತನ್ನ ಪೂಜೆಯಲ್ಲಿಯೇ ಮುಖ್ಯ ಆಸಕ್ತರಾದ, **ತಾಃ** ಆ ವಿಪ್ರಪತ್ನಿಯರನ್ನೂ, **ವಿಸರ್ಜ** ಮತ್ತೆ ಯಾಗವಾಗು ವಲ್ಲಿಯೇ ಕಳುಹಿಸಿಕೊಟ್ಟನು, ತಾಸು ಅವರಲ್ಲಿ, **ಪತಿಪ್ರವಿದೃತಾ** ಗಂಡನಿಂದ ತಡೆಯಲ್ಪಟ್ಟ, **ಏಕಾ** ಒಬ್ಬಳು, **ವಿಷ್ಣುಃ** ಭಗವಂತನ, **ಪದಂ** ಸ್ಥಾನವನ್ನು **ಆಪ** ಹೊಂದಿದಳು.

**ತಾತ್ಪರ್ಯ** :- ಆ ವಿಪ್ರಪತ್ನಿಯರು ಕೃಷ್ಣ ಬಂದ ಸುದ್ದಿ ತಿಳಿದು ತಮ್ಮ ಪತಿ ಸುತ ಬಂಧುಗಳನ್ನು ಎಲ್ಲಾ ಬಿಟ್ಟು ಕೃಷ್ಣನ ಹತ್ತಿರ ಷಡ್ರಸೋಪೇತವಾದ ಭಕ್ಷಗಳನ್ನು ತೆಗೆದುಕೊಂಡು ಕೃಷ್ಣನನ್ನು ಪೂಜಿಸಬೇಕೆಂಬ ಉದ್ದೇಶದಿಂದ ಬಂದರು. ಅವರು ಎಲ್ಲವನ್ನೂ ಬಿಟ್ಟು ಕೃಷ್ಣನ ಹತ್ತಿರವೇ ಇರಬೇಕೆಂದು ಬಂದಿದ್ದರು. ಕೃಷ್ಣನು ಅವರಿಗೆ ಸಮಾಧಾನ ಹೇಳಿ ಮತ್ತೆ ಪತಿಯರ ಬಳಿ ಕಳುಹಿಸಿಕೊಟ್ಟನು. ಅವರಲ್ಲಿ ಒಬ್ಬಳನ್ನು ಅವಳ ಗಂಡ ಕೃಷ್ಣನ ಹತ್ತಿರ ಬಿಟ್ಟಿರಲಿಲ್ಲ. ಆಗ ದುಃಖಿತಳಾದ ಅವಳು ಕೃಷ್ಣನನ್ನು ನೆನೆಯುತ್ತಾ ಯೋಗಾಗ್ನಿಯಲ್ಲಿ ಪ್ರಾಣವನ್ನು ಬಿಟ್ಟು ವಿಷ್ಣುವಿನ ಸ್ಥಾನವನ್ನು ಸೇರಿದಳು.

**ಭುಕ್ತ್ವಾಽಥ ಗೋಪಸಹಿತೋ ಭಗವಾಂಸ್ತದನ್ನಂ**
**ರೇಮೇ ಚ ಗೋಕುಲಮವಾಪ್ಯ ಸಮಸ್ತನಾಥಃ ।**
**ಆಜ್ಞಾತಿಲಂಘನಕೃತೇಃ ಸ್ವಕೃತಾಪರಾಧಾತ್**
**ಪಶ್ಚಾತ್ ಸುತಪ್ತಮನಸೋಽಪ್ಯಭವನ್ ಸ್ಮ ವಿಪ್ರಾಃ ॥ ೬೧ ॥**

**ಅರ್ಥ** :- **ಅಥ** ಅನಂತರ, **ಗೋಪಸಹಿತಃ** ಗೋಪರಿಂದ ಕೂಡಿದ, **ಸಮಸ್ತನಾಥಃ** ಸರ್ವೇಶ್ವರನಾದ, **ಭಗವಾನ್** ಶ್ರೀಕೃಷ್ಣನು, **ತದನ್ನಂ** ಆ ವಿಪ್ರಪತ್ನಿಯರಿಂದ ಕೊಟ್ಟ ಅನ್ನವನ್ನು **ಭುಕ್ತ್ವಾ** ತಿಂದು, **ಗೋಕುಲಂ** ಗೋಕುಲವನ್ನು **ಅವಾಪ್ಯ** ಹೊಂದಿ, **ರೇಮೇ** ಅಲ್ಲಿ ವಿಹರಿಸಿದನು, **ವಿಪ್ರಾಃ** ಬ್ರಾಹ್ಮಣರಾದರೂ, **ಆಜ್ಞಾತಿಲಂಘನಕೃತೇಃ** ಭಗವಂತನ ಆಜ್ಞೆಯ ಉಲ್ಲಂಘನ ಕರ್ಮರೂಪವಾದ, **ಸ್ವಕೃತಾಪರಾಧಾತ್** ತಾವು ಮಾಡಿದ ಅಪರಾಧದಿಂದ, **ಪಶ್ಚಾತ್ಸುತಪ್ತಮನಸಃ** ಪಶ್ಚಾತ್ತಾಪದಿಂದ ಬೆಂದ ಮನಸ್ಸುಳ್ಳವರು, **ಅಭವನ್ನಪಿ** ಆದರೂ ಕೂಡ.

**ತಾತ್ಪರ್ಯ** :- ನಂತರ ಸರ್ವೇಶ್ವರನಾದ ಶ್ರೀಕೃಷ್ಣನು ಆ ವಿಪ್ರಪತ್ನಿಯರು ಕೊಟ್ಟ ಅನ್ನವನ್ನು ಗೋಪರೊಂದಿಗೆ ಸೇರಿಕೊಂಡು ತಿಂದನು. ನಂತರ ಗೋಕುಲಕ್ಕೆ ತಿರುಗಿ ಹೋಗಿ ಅಲ್ಲಿ ಸ್ನೇಹಿತರೊಂದಿಗೆ ವಿಹರಿಸುತ್ತಿದ್ದನು. ಇತ್ತ ಬ್ರಾಹ್ಮಣರು ತಾವು ಮಾಡಿದ ತಪ್ಪನ್ನೂ ನೆನೆದು ಬಹಳ ಪಶ್ಚಾತ್ತಾಪವನ್ನು ಹೊಂದಿದರು.

ಕೃಷ್ಣೋऽಥ ವೀಕ್ಷ್ಯ ಪುರುಹೂತಮಹಪ್ರಯತ್ನಂ
ಗೋಪಾನ್ ನ್ಯವಾರಯದವಿಸ್ಮರಣಾಯ ತಸ್ಯ ।
ಮಾ ಮಾನುಷೋऽಯಮಿತಿ ಮಾಮವಗಚ್ಛತಾಂ ಸ
ಇತ್ಯವ್ಯಯೋऽಸ್ಯ ವಿದಧೇ ಮಹಭಂಗಮೀಶಃ ॥ ೬೨ ॥

**ಅರ್ಥ** :- **ಅಥ** ಅನಂತರ, **ಕೃಷ್ಣಃ** ಕೃಷ್ಣನು, **ಪುರುಹೂತಮಹಪ್ರಯತ್ನಂ** ಇಂದ್ರನ ಪೂಜೆಯ ಕೃತ್ಯವನ್ನೂ **ವೀಕ್ಷ್ಯ** ನೋಡಿ, **ತಸ್ಯ** ಆ ಇಂದ್ರನ, **ಅವಿಸ್ಮರಣಾಯ** ತಾನು ಮನುಷ್ಯನಲ್ಲವೆಂಬ ಸ್ಮರಣೆ ಹೋಗದಿರುವುದಕ್ಕಾಗಿ **ಗೋಪಾನ್** ಗೋಪಾಲರನ್ನು **ನ್ಯವಾರಯತ್** ತಡೆದನು, **ಸಃ** ಆ ಇಂದ್ರನು, **ಮಾಂ** ನನ್ನನ್ನೂ **ಮಾನುಷೋऽಯಂ** ಇವನು ಮನುಷ್ಯನು, **ಇತಿ** ಎಂದು **ಮಾ ಅವಗಚ್ಛತಾತ್** ತಿಳಿಯದಿರಲಿ **ಇತಿ** ಎಂದು **ಈಶಃ** ಸಮರ್ಥನಾದ ಕೃಷ್ಣನು, **ಅಸ್ಯ** ಇಂದ್ರನ, **ಮಹಭಂಗಂ** ಪೂಜೆಯ ಕೆಡಿಸುವಿಕೆಯನ್ನು **ವಿದಧೇ** ಮಾಡಿದನು.

**ತಾತ್ಪರ್ಯ** :- ಒಮ್ಮೆ ಮಳೆಗಾಲದಲ್ಲಿ ಗೋಪಾಲರು ಎಂದಿನಂತೆ ಇಂದ್ರನು ಮಳೆಯನ್ನು ಕೊಡುವವನಾದುದರಿಂದ ಅವನ ಪೂಜೆಯನ್ನು ಮಾಡಲು ಸಿದ್ಧತೆಯನ್ನು ಮಾಡುತ್ತಿದ್ದರು. ಅದನ್ನು ನೋಡಿದ ಕೃಷ್ಣನು ಇಂದ್ರನು ನನ್ನನ್ನೂ ಕೇವಲ ಮನುಷ್ಯನು ಎಂದು ತಿಳಿಯದೇ ನನ್ನನ್ನು ಭಗವಂತನೇ ಎಂದು ತಿಳಿಯಲಿ ಎಂಬ ಉದ್ದೇಶದಿಂದ ಗೋಪಾಲರಿಗೆ ಅವನ ಪೂಜೆಯನ್ನು ಮಾಡುವುದು ಬೇಡ ಎಂದು ತಡೆದನು.

ಗೋಪಾಂಶ್ಚ ತಾನ್ ಗಿರಿಮಹೋऽಸ್ಮದುರುಸ್ವಧರ್ಮ
ಇತ್ಯುಕ್ತಿಸಚ್ಛಲತ ಆತ್ಮಮಹೇऽವತಾರ್ಯ ।
ಭೂತ್ವಾऽತಿವಿಸ್ಕೃತತನುರ್ಬುಭುಜೇ ಬಲಿಂ ಸ
ನಾನಾವಿಧಾನ್ನರಸಪಾನಗುಣ್ಯೈಃ ಸಹೈವ ॥ ೬೩ ॥

**ಅರ್ಥ** :- **ಸಃ** ಆ ಶ್ರೀಕೃಷ್ಣನು, **ಗಿರಿಮಹಃ** ಗಿರಿಪೂಜೆಯು, **ಅಸ್ಮದುರು ಸ್ವಧರ್ಮಃ** ನಮಗೆ ಶ್ರೇಷ್ಠವಾದ ಧರ್ಮವು, **ಇತ್ಯುಕ್ತಿಸಚ್ಛಲತಃ** ಈ ರೀತಿಯಾದ ಉಪದೇಶವೆಂಬ ಒಳ್ಳೆಯ ನೆಪದಿಂದ, **ತಾನ್ ಗೋಪಾನ್** ಆ ಗೊಲ್ಲರನ್ನೂ **ಆತ್ಮ ಮಹೇ** ತನ್ನ ಪೂಜೆಯಲ್ಲಿ, **ಅವತಾರ್ಯ** ತೊಡಗಿಸಿ, **ಅತಿವಿಸ್ಕೃತತನು**

ಬೃಹತ್ಕಾಯನು, **ಭೂತ್ವಾ** ಆಗಿ, **ನಾನಾವಿಧಾನ್ನರಸಪಾನಗುಣೈಃ ಸಹೈವ** ನಾನಾವಿಧವಾದ ಅನ್ನರಸಪಾನರೂಪ ಅಂಗಗಳೊಂದಿಗೇ **ಬಲಿಂ** ಬಲಿಯನ್ನು **ಬುಭುಜೇ** ಉಂಡನು.

**ತಾತ್ಪರ್ಯ** :- ಕೃಷ್ಣನು ಗೊಲ್ಲರಿಗೆ ಹೀಗೆ ಹೇಳಿದ ನಾವೆಲ್ಲರೂ ಗಿರಿಯನ್ನು ಆಶ್ರಯಿಸಿ ಇರುವವರು ಆದ್ದರಿಂದ ನಮಗೆ ಗಿರಿಪೂಜೆಯೇ ಶ್ರೇಷ್ಠ ಅದು ನಮ್ಮ ಧರ್ಮವು ಎಂದು. ಈ ರೀತಿಯಾದ ಉಪದೇಶದ ನೆಪದಿಂದ ತನ್ನ ಪೂಜೆಯನ್ನು ಮಾಡುವ ಹಾಗೆ ಮಾಡಿದನು. ನಂತರ ತಾನು ಆ ಗಿರಿಯಲ್ಲಿ ಗಿರಿ ರೂಪಿಯಾದ ದೊಡ್ಡದೇಹವವನ್ನು ಧರಿಸಿ ಗೋಪಾಲರು ಕೊಟ್ಟ ಎಲ್ಲಾ ವಿಧವಾದ ರಸಾನ್ನರೂಪ ಪೂಜೆಯನ್ನು ಸಾಂಗವಾಗಿ ಸ್ವೀಕರಿಸಿದನು.

**ಇಂದ್ರೋಽಥ ವಿಸ್ಮೃತರಥಾಂಗಧರಾವತಾರೋ**
**ಮೇಘಾನ್ ಸಮಾದಿಶದುರೂದಕಪೂಗವೃಷ್ಟ್ಯೈ ।**
**ತೇ ಪ್ರೇರಿತಾಃ ಸಕಲಗೋಕುಲನಾಶನಾಯ**
**ಧಾರಾ ವಿತೇರುರುರುನಾಗಕರಪ್ರಕಾರಾಃ ॥ ೬೪ ॥**

**ಅರ್ಥ** :- **ಅಥ** ಅನಂತರ, **ವಿಸ್ಮೃತರಥಾಂಗಧರಃ** ಕೃಷ್ಣನು ಭಗವಂತನ ಅವತಾರವೆಂದು ಮರೆತಿರುವ, **ಇಂದ್ರಃ** ಇಂದ್ರನು, **ಉರೂದಕಪೂಗವೃಷ್ಟ್ಯೈ** ಉತ್ಕೃಷ್ಟವಾದ ನೀರಿನ ಸಮೂಹಗಳ ಮಳೆಗಾಗಿ, **ಮೇಘಾನ್** ಮೋಡಗಳನ್ನು **ಸಮಾದಿಶತ್** ಆಜ್ಞಾಪಿಸಿದನು, **ಏವಂ** ಈ ರೀತಿಯಾಗಿ **ಪ್ರೇರಿತಾಃ** ಪ್ರೇರಿಸಲ್ಪಟ್ಟ **ತೇ** ಆ ಮೋಡಗಳು, **ಉರುನಾಗಕರಪ್ರಕಾರಾಃ** ಆನೆಯ ಸೊಂಡಿಲಗಾತ್ರದ, **ಧಾರಾಃ** ಜಲಧಾರೆಗಳನ್ನು, **ಸಕಲಗೋಕುಲನಾಶನಾಯ** ಇಡೀ ಗೋಕುಲ ನಾಶಕ್ಕಾಗಿ, **ವಿತೇರುಃ** ಸುರಿಸಿದವು.

**ತಾತ್ಪರ್ಯ** :- ಶ್ರೀಕೃಷ್ಣನು ಚಕ್ರಧರನಾದ ಹರಿಯ ಅವತಾರ ಎಂಬುದನ್ನು ಮರೆತ ಇಂದ್ರ ತನ್ನ ಪೂಜೆ ನಿಂತಿದ್ದರಿಂದ ಕ್ರುದ್ಧನಾಗಿ ಬಹಳ ನೀರುತುಂಬಿದ ಮೋಡಗಳನ್ನು ಮಳೆ ಸುರಿಸಲು ಆಜ್ಞಾಪಿಸಿದನು. ಇಂದ್ರನಿಂದ ಪ್ರೇರಿತವಾದ ಆ ಮೋಡಗಳು ಗೋಕುಲದ ಸರ್ವನಾಶಕ್ಕಾಗಿ ಆನೆಯ ಸೊಂಡಿಲಗಾತ್ರದ ಮಳೆಯನ್ನು ಸುರಿಸಿದವು.

ತಾಭಿರ್ನಿಪೀಡಿತಮುದೀಕ್ಷ್ಯ ಸ ಕಂಜನಾಭಃ
ಸರ್ವಂ ವ್ರಜಂ ಗಿರಿವರಂ ಪ್ರಸಭಂ ದಧಾರ ।
ವಾಮೇನ ಕಂಜದಲಕೋಮಳಪಾಣಿನೈವ
ತತ್ರಾಖಿಲಾಃ ಪ್ರವಿವಿಶುಃ ಪಶುಪಾಃ ಸ್ವಗೋಭಿಃ ॥ ೬೫ ॥

**ಅರ್ಥ :-** **ಕಂಜನಾಭಃ** ಪದ್ಮನಾಭನಾದ, **ಸಃ** ಆ ಕೃಷ್ಣನು, **ತಾಭಿಃ** ಆ ವರ್ಷಧಾರೆಗಳಿಂದ, **ನಿಪೀಡಿತಂ** ಬಹಳ ಪೀಡಿತರಾದ, **ಸರ್ವಂ ವ್ರಜಂ** ಎಲ್ಲಾ ಗೋಕುಲ ವಾಸಿಗಳನ್ನೂ, **ಉದೀಕ್ಷ** ನೋಡಿ, **ಕಂಜದಲಕೋಮಲಪಾಣಿನಾ** ಕಮಲದ ದಳದಂತೆ ಕೋಮಲವಾದ, **ವಾಮೇನ, ಏವ** ಎಡಕೈಯಿಂದಲೇ, **ಗಿರಿವರಂ** ಗೋವರ್ಧನ ಗಿರಿಯನ್ನು **ಪ್ರಸಭಂ** ಧೃಢವಾಗಿ **ದಧಾರ** ಎತ್ತಿಹಿಡಿದ, **ತತ್ರ** ಅದರಲ್ಲಿ **ಅಖಿಲಾಃ** ಎಲ್ಲಾ **ಪಶುಪಾಃ** ಗೋಪಾಲರು, **ಸ್ವಗೋಭಿಃ** ತಮ್ಮ ಹಸುಗಳೊಂದಿಗೆ, **ಪ್ರವಿವಿಶುಃ** ಪ್ರವೇಶ ಮಾಡಿದರು.

**ತಾತ್ಪರ್ಯ :-** ಪದ್ಮನಾಭನಾದ ಶ್ರೀಕೃಷ್ಣನು ಆ ಮುಸಲಧಾರಯಿಂದ ಎಲ್ಲಾ ಗೋಕುಲವಾಸಿಗಳು ಬಹಳ ಪೀಡಿತರಾದದ್ದು ನೋಡಿ ಕೂಡಲೇ ತನ್ನ ಕಮಲದಳದಂತೆ ಕೋಮಲವಾದ ಎಡಗೈಯಿಂದಲೇ ಆಗೋವರ್ಧನ ಗಿರಿಯನ್ನು ಎತ್ತಿಹಿಡಿದನು. ಆಗ ಆ ಗಿರಿಯ ಕೆಳಗೆ ಎಲ್ಲಾ ಗೋಕುಲ ವಾಸಿಗಳು ತಮ್ಮ ಹಸು ಕರುಗಳೊಂದಿಗೆ ನಿರ್ಭಯರಾಗಿ ವಾಸಮಾಡಿದರು.

ವೃಷ್ಟ್ವೋರುವಾರ್ಯಥ ನಿರಂತರಸಪ್ತರಾತ್ರಂ
ತ್ರಾತಂ ಸಮೀಕ್ಷ್ಯ ಹರಿಣಾ ವ್ರಜಮಶ್ರಮೇಣ ।
ಶಕ್ರೋಽನುಸಂಸ್ಮೃತಸುರಪ್ರವರಾವತಾರಃ
ಪಾದಂಬುಜಂ ಯದುಪತೇಃ ಶರಣಂ ಜಗಾಮ ॥ ೬೬ ॥

**ಅರ್ಥ :-** **ಶಕ್ರಃ** ಇಂದ್ರನು, **ನಿರಂತರ** ಅವಿರತವಾಗಿ, **ಸಪ್ತರಾತ್ರಂ** ಏಳುದಿನಗಳವರೆಗೆ, **ಉರುವಾರಿ** ಶ್ರೇಷ್ಠವಾದ ನೀರನ್ನು **ವೃಷ್ಟ್ವಾ** ಸುರಿಸಿ, **ಅಥ** ಅನಂತರ, **ಹರಿಣಾ** ಕೃಷ್ಣನಿಂದ, **ಅಶ್ರಮೇಣ** ಅನಾಯಸವಾಗಿ, **ವ್ರಜಂ** ಗೋಕುಲವನ್ನು **ತ್ರಾತಂ** ರಕ್ಷಿಸಲ್ಪಟ್ಟಿದ್ದನ್ನಾಗಿ, **ನಿರೀಕ್ಷ್ಯ** ನೋಡಿ, **ಅನುಸ್ಮೃತ** ಸುರವರ **ಪ್ರವರಾವತಾರಃ** ನೆನಪಿಸಿಕೊಂಡ ಕೃಷ್ಣನ ಭಗವಂತನ ಅವತಾರ ವುಳ್ಳವನಾಗಿ, **ಯದುಪತೇಃ** ಶ್ರೀಕೃಷ್ಣನ, **ಪಾದಾಂಬುಜಂ** ಚರಣಕಮಲವನ್ನು **ಶರಣಂ** ಶರಣು **ಜಗಾಮ** ಹೊಂದಿದನು.

**ತಾತ್ಪರ್ಯ** :- ಹೀಗೆ ಇಂದ್ರನು ನಿರಂತರವಾಗಿ ೭ ದಿವಸಗಳವರೆಗೆ ಮಳೆಯನ್ನು ಸುರಿಸಿದನು ಶ್ರೀಕೃಷ್ಣನು ನಿರಾಯಾಸವಾಗಿ ಅಷ್ಟು ದಿನಗಳ ಪರ್ಯಂತ ಎಡಕೈಯಲ್ಲೇ ಗಿರಿಯನ್ನು ಎತ್ತಿ ಎಲ್ಲರನ್ನೂ ರಕ್ಷಿಸಿದನು. ಆಗ ಇಂದ್ರನಿಗೆ ಕೃಷ್ಣ ಭಗವಂತನದ್ದೇ ಅವತಾರ ಎಂದು ನೆನಪು ಬಂದಿತು. ಕೂಡಲೇ ಇಂದ್ರನು ಭಗವಂತನ ಪಾದಕಮಲಗಳನ್ನು ಶರಣು ಹೊಂದಿದನು.

**ತುಷ್ಟಾವ ಚೈನಮುರುವೇದಶಿರೋಗತಾಭಿ-**
**ರ್ಗೀರ್ಭಿಃ ಸದಾಽಗಣಿತಪೂರ್ಣಗುಣಾರ್ಣವಂ ತಮ್ ।**
**ಗೋಭೃದ್ ಗುರುಂ ಹರಗುರೋರಪಿ ಗೋಗಣೇನ**
**ಯುಕ್ತಃ ಸಹಸ್ರಗುರಗಾಧಗುಮಗ್ರ್ಯಮಗ್ರ್ಯಾತ್ ॥ ೬೭ ॥**

**ಅರ್ಥ** :- **ಗೋಭೃತ್** ವಜ್ರಾಯುಧಧರನಾದ, **ಸಹಸ್ರಗುಃ** ಸಹಸ್ರಾಕ್ಷನಾದ ಇಂದ್ರನು, **ಗೋಗಣೇನ ಯುಕ್ತಃ** ಸುರಭಿ ಮುಂತಾದ ಹಸುಗಳಿಂದ ಕೂಡಿದವನಾಗಿ, **ಸದಾ** ಯಾವಾಗಲೂ, **ಅಗಣಿತಪೂರ್ಣಗುಣಾರ್ಣವಂ** ಅಸಂಖ್ಯಾತ ಪರಿಪೂರ್ಣ ಗುಣಗಳಿಗೆ ಸಮುದ್ರದಂತಿರುವ **ಹರಗುರೋರಪಿ** ಹರನ ಗುರುವಾದ ಬ್ರಹ್ಮನಿಗೂ, **ಗುರುಂ** ಗುರುವಾದ **ಅಗಾಧಗುಂ** ಅಪರಿಮಿತಕಾಂತಿಯುಳ್ಳ **ಅಗ್ರ್ಯಾತ್** ಉತ್ತಮರಿಗಿಂತ, **ಅಗ್ರ್ಯಂ** ಶ್ರೇಷ್ಠನಾದ, **ಏನಂ** ಈ ಕೃಷ್ಣನನ್ನು **ಉರುವೇದಶಿರೋಗತಾಭಿಃ** ಅನಂತವೇದಗಳ ಶಿರಸ್ಸಿನಂತಿರುವ ಉಪನಿಷತ್ತಿನ, **ಗೀರ್ಭಿಃ** ಮಂತ್ರಗಳಿಂದ **ತುಷ್ಟಾವ** ಸಂತೋಷಗೊಳಿಸಿದನು.

**ತಾತ್ಪರ್ಯ** :- ಇಂದ್ರನು ಭಗವಂತನಡೆಗೆ ಸುರಭಿ ಮುಂತಾದ ಹಸುಗಳೊಂದಿಗೆ ಬಂದು ಹೀಗೆ ಸ್ತುತಿಸಿದನು. ಅವನು ಅಗಣಿತವಾದ ಗುಣಗಳಿಗೆ ಸಮುದ್ರನಾದವನು. ಉತ್ತಮರಿಗಿಂತ ಉತ್ತಮನಾದವನು ಸರ್ವೋತ್ತಮನಾದ ಭಗವಂತನು ಹರನಿಗೂ ಗುರುವಾದ ಬ್ರಹ್ಮ ದೇವರಿಗೂ ಗುರುವು ಇಂತಹ ಶ್ರೇಷ್ಠನಾದ ಭಗವಂತನನ್ನೂ ಇಂದ್ರನು ವೇದದ ಶಿರೋಭಾಗವಾದ ಉಪನಿಷತ್ತಿನಿಂದ ಸ್ತುತಿಸಿದನು.

**ತ್ವತ್ತೋ ಜಗತ್ ಸಕಲಮಾವಿರಭೂದಗಣ್ಯ-**
**ಧಾಮ್ನಸ್ತ್ವಮೇವ ಪರಿಪಾಸಿ ಸಮಸ್ತಮಂತೇ ।**

**ಅತ್ತಿತ್ತಯೈವ ಜಗತೋಽಸ್ಯ ಹಿ ಬಂಧಮೋಕ್ಷೌ**
**ನ ತ್ವತ್ಸಮೋಽಸ್ತಿ ಕುಹಚಿತ್ ಪರಿಪೂರ್ಣಶಕ್ತೇ ॥ ೬೮ ॥**

**ಅರ್ಥ** :- **ಅಗಣ್ಯಧಾಮಃ** ಅಗಣಿತಜ್ಞಾನಾನಂದಾದಿ ಗುಣಗಳಿಗೆ ಆಶ್ರಯನಾದ, **ತ್ವತ್ತಃ** ನಿನ್ನಿಂದ, **ಸಕಲಂ ಜಗತ್** ಎಲ್ಲಾ ಪ್ರಪಂಚವೂ ಹುಟ್ಟಿತು, **ತ್ವಮೇವ** ನೀನೇ, **ಪರಿಪಾಸಿ** ಈ ಜಗತ್ತನ್ನೂ ರಕ್ಷಿಸುವಿ, **ಅಂತೇ** ಕೊನೆಯಲ್ಲಿ, **ಸಮಸ್ತಂ** ಎಲ್ಲಾ ಜಗತ್ತನ್ನೂ **ಅಲ್ಸೆ** ಸಂಹಾರಮಾಡುವಿ, **ತ್ವಯೈವ** ನಿನ್ನಿಂದಲೇ, **ಅಸ್ಯ ಜಗತಃ** ಈ ಪ್ರಪಂಚಕ್ಕೆ, **ಬಂಧಮೋಕ್ಷೌಹಿ** ಬಂಧನ ಹಾಗೂ ಮೋಚನವು, **ಪರಿಪೂರ್ಣಶಕ್ತೇ** ಪರಿಪೂರ್ಣವಾದ ಶಕ್ತಿಯುಳ್ಳ ಹರಿಯೇ, **ತ್ವತ್ಸಮ** ನಿನಗೆ ಸಮಾನನಾದವನು, **ಕುಹಚಿತ್** ಎಲ್ಲಿಯೂ ಕೂಡ, **ನಾಸ್ತಿ** ಇಲ್ಲ.

**ತಾತ್ಪರ್ಯ** :- ಹೇ ಭಗವಂತ ನೀನು ಅಗಣಿತವಾದ ಜ್ಞಾನಾನಂದಾದಿ ಗುಣವುಳ್ಳವನು. ನೀನು ಈ ಜಗತ್ತನ್ನು ಸೃಷ್ಟಿಸುವಿ. ನೀನೇ ಪಾಲಿಸುವಿ ಕೊನೆಗೆ ಎಲ್ಲರನ್ನೂ ನೀನೇ ಸಂಹರಿಸುವ ನಿನಗೆ ಸಮನಾದ ವ್ಯಕ್ತಿ ಇಡೀ ಬ್ರಹ್ಮಾಂಡದಲ್ಲಿ ಯಾರೂ ಇಲ್ಲ. ನೀನೇ ಈ ಪ್ರಪಂಚದ ಬಂಧ-ಮೋಕ್ಷಗಳಿಗೆ ಕಾರಣನು.

**ಕ್ಷಂತವ್ಯಮೇವ ಭವತಾ ಮಮ ಬಾಲ್ಯಮೀಶ**
**ತ್ವತ್ಸಂಶ್ರಯೋಽಸ್ಮಿ ಹಿ ಸದೇತ್ಯಭಿವಂದಿತೋಽಜಃ ।**
**ಕ್ಷಾಂತಂ ಸದೈವ ಭವತಸ್ತವ ಶಿಕ್ಷಣಾಯ**
**ಪೂಜಾಪಹಾರವಿಧಿರಿತ್ಯವದದ್ ರಮೇಶಃ ॥ ೬೯ ॥**

**ಅರ್ಥ** :- **ಈಶ** ಎಲೈ ಸ್ವಾಮಿಯೇ, ಸದಾ ಯಾವಾಗಲೂ, **ತ್ವತ್ ಸಂಶ್ರಯಃ** ನಿನ್ನ ಆಶ್ರಯಿಸಿದವನು, **ಅಸ್ಮಿ** ಆಗಿದ್ದೇನೆ, **ಅತಃ** ಆದ್ದರಿಂದ, **ಮಮ** ನನ್ನ **ಬಾಲ್ಯಂ** ಹುಡುಗುತನವು, **ಭವತಾಏವ** ನಿನ್ನಿಂದಲೇ **ಕ್ಷಂತವ್ಯಂ** ಕ್ಷಮಿಸಲ್ಪಡಬೇಕು, **ಇತಿ** ಎಂದು, **ಅಭಿವಂದಿತಃ** ನಮಸ್ಕರಿಸಲ್ಪಟ್ಟ **ಅಜಃ** ನಾಶರಹಿತನಾದ, **ರಮೇಶಃ** ಲಕ್ಷ್ಮೀಪತಿಯಾದ ಶ್ರೀಕೃಷ್ಣನು, **ಸದಾ** ಯಾವಾಗಲೂ, **ಭವತಃ** ನಿನ್ನ ಹುಡುಗುತನವು, **ಕ್ಷಾಂತಮೇವ** ಕ್ಷಮಿಸಲ್ಪಟ್ಟಿ ಇರುತ್ತದೆ, **ತವ** ನಿನ್ನ **ಶಿಕ್ಷಣಾಯ** ಕಣ್ಣು ತೆರೆಸುವ ಪಾಠಕ್ಕಾಗಿ, **ಪೂಜಾಪಹಾರ ವಿಧಿಃ** ಪೂಜೆಯನ್ನು ಕಸಿದುಕೊಳ್ಳುವ ಕರ್ಮವು ಮಾಡಲ್ಪಟ್ಟಿತು. **ಇತಿ** ಎಂದು **ಅವದತ್** ಹೇಳಿದನು.

**ತಾತ್ಪರ್ಯ** :- ಹೀಗೆ ಇಂದ್ರನು ನಿರಂತರವಾಗಿ ೭ ದಿವಸಗಳವರೆಗೆ ಮಳೆಯನ್ನು ಸುರಿಸಿದನು ಶ್ರೀಕೃಷ್ಣನು ನಿರಾಯಾಸವಾಗಿ ಅಷ್ಟು ದಿನಗಳ ಪರ್ಯಂತ ಎಡಕೈಯಲ್ಲೇ ಗಿರಿಯನ್ನು ಎತ್ತಿ ಎಲ್ಲರನ್ನೂ ರಕ್ಷಿಸಿದನು. ಆಗ ಇಂದ್ರನಿಗೆ ಕೃಷ್ಣ ಭಗವಂತನದ್ದೇ ಅವತಾರ ಎಂದು ನೆನಪು ಬಂದಿತು. ಕೂಡಲೇ ಇಂದ್ರನು ಭಗವಂತನ ಪಾದಕಮಲಗಳನ್ನು ಶರಣು ಹೊಂದಿದನು.

**ತುಷ್ಟಾವ ಚೈನಮುರುವೇದಶಿರೋಗತಾಭಿ-**
**ರ್ಗೀರ್ಭಿಃ ಸದಾಽಗಣಿತಪೂರ್ಣಗುಣಾರ್ಣವಂ ತಮ್ ।**
**ಗೋಭೃದ್ ಗುರುಂ ಹರಗುರೋರಪಿ ಗೋಗಣೇನ**
**ಯುಕ್ತಃ ಸಹಸ್ರಗುರಗಾಧಗುಮಗ್ರ್ಯಮಗ್ರ್ಯಾತ್ ॥ ೬೭ ॥**

**ಅರ್ಥ** :- **ಗೋಭೃತ್** ವಜ್ರಾಯುಧಧರನಾದ, **ಸಹಸ್ರಗುಃ** ಸಹಸ್ರಾಕ್ಷನಾದ ಇಂದ್ರನು, **ಗೋಗಣೇನ ಯುಕ್ತಃ** ಸುರಭಿ ಮುಂತಾದ ಹಸುಗಳಿಂದ ಕೂಡಿದವನಾಗಿ, **ಸದಾ** ಯಾವಾಗಲೂ, **ಅಗಣಿತಪೂರ್ಣಗುಣಾರ್ಣವಂ** ಅಸಂಖ್ಯಾತ ಪರಿಪೂರ್ಣ ಗುಣಗಳಿಗೆ ಸಮುದ್ರದಂತಿರುವ **ಹರಗುರೋರಪಿ** ಹರನ ಗುರುವಾದ ಬ್ರಹ್ಮನಿಗೂ, **ಗುರುಂ** ಗುರುವಾದ **ಅಗಾಧಗುಂ** ಅಪರಿಮಿತಕಾಂತಿಯುಳ್ಳ **ಅಗ್ರ್ಯಾತ್** ಉತ್ತಮರಿಗಿಂತ, **ಅಗ್ರ್ಯಂ** ಶ್ರೇಷ್ಠನಾದ, **ಏನಂ** ಈ ಕೃಷ್ಣನನ್ನು **ಉರುವೇದಶಿರೋಗತಾಭಿಃ** ಅನಂತವೇದಗಳ ಶಿರಸ್ಸಿನಂತಿರುವ ಉಪನಿಷತ್ತಿನ, **ಗೀರ್ಭಿಃ** ಮಂತ್ರಗಳಿಂದ **ತುಷ್ಟಾವ** ಸಂತೋಷಗೊಳಿಸಿದನು.

**ತಾತ್ಪರ್ಯ** :- ಇಂದ್ರನು ಭಗವಂತನಡೆಗೆ ಸುರಭಿ ಮುಂತಾದ ಹಸುಗಳೊಂದಿಗೆ ಬಂದು ಹೀಗೆ ಸ್ತುತಿಸಿದನು. ಅವನು ಅಗಣಿತವಾದ ಗುಣಗಳಿಗೆ ಸಮುದ್ರನಾದವನು. ಉತ್ತಮರಿಗಿಂತ ಉತ್ತಮನಾದವನು ಸರ್ವೋತ್ತಮನಾದ ಭಗವಂತನು ಹರನಿಗೂ ಗುರುವಾದ ಬ್ರಹ್ಮ ದೇವರಿಗೂ ಗುರುವು ಇಂತಹ ಶ್ರೇಷ್ಠನಾದ ಭಗವಂತನನ್ನೂ ಇಂದ್ರನು ವೇದದ ಶಿರೋಭಾಗವಾದ ಉಪನಿಷತ್ತಿನಿಂದ ಸ್ತುತಿಸಿದನು.

**ತ್ವತ್ತೋ ಜಗತ್ ಸಕಲಮಾವಿರಭೂದಗಣ್ಯ-**
**ಧಾಮ್ನಸ್ತ್ವಮೇವ ಪರಿಪಾಸಿ ಸಮಸ್ತಮಂತೇ ।**

**ಅತ್ತಿಸ್ತ್ವಯ್ಯೈವ ಜಗತೋಽಸ್ಯ ಹಿ ಬಂಧಮೋಕ್ಷೌ**
**ನ ತ್ವತ್ಸಮೋಽಸ್ತಿ ಕುಹಚಿತ್ ಪರಿಪೂರ್ಣಶಕ್ತೇ ॥ ೬೮ ॥**

**ಅರ್ಥ** :- **ಅಗಣ್ಯಧಾಮಃ** ಅಗಣಿತಜ್ಞಾನಾನಂದಾದಿ ಗುಣಗಳಿಗೆ ಆಶ್ರಯನಾದ, **ತ್ವತ್ತಃ** ನಿನ್ನಿಂದ, **ಸಕಲಂ ಜಗತ್** ಎಲ್ಲಾ ಪ್ರಪಂಚವೂ ಹುಟ್ಟಿತು, **ತ್ವಮೇವ** ನೀನೇ, **ಪರಿಪಾಸಿ** ಈ ಜಗತ್ತನ್ನೂ ರಕ್ಷಿಸುವಿ, **ಅಂತೇ** ಕೊನೆಯಲ್ಲಿ, **ಸಮಸ್ತಂ** ಎಲ್ಲಾ ಜಗತ್ತನ್ನೂ, **ಅಲ್ಸೆ** ಸಂಹಾರಮಾಡುವಿ, **ತ್ವಯ್ಯೈವ** ನಿನ್ನಿಂದಲೇ, **ಅಸ್ಯ ಜಗತಃ** ಈ ಪ್ರಪಂಚಕ್ಕೆ, **ಬಂಧಮೋಕ್ಷೌಹಿ** ಬಂಧನ ಹಾಗೂ ಮೋಚನವು, **ಪರಿಪೂರ್ಣಶಕ್ತೇ** ಪರಿಪೂರ್ಣವಾದ ಶಕ್ತಿಯುಳ್ಳ ಹರಿಯೇ, **ತ್ವತ್ಸಮ** ನಿನಗೆ ಸಮಾನನಾದವನು, **ಕುಹಚಿತ್** ಎಲ್ಲಿಯೂ ಕೂಡ, **ನಾಸ್ತಿ** ಇಲ್ಲ.

**ತಾತ್ಪರ್ಯ** :- ಹೇ ಭಗವಂತ ನೀನು ಅಗಣಿತವಾದ ಜ್ಞಾನಾನಂದಾದಿ ಗುಣವುಳ್ಳವನು. ನೀನು ಈ ಜಗತ್ತನ್ನು ಸೃಷ್ಟಿಸುವಿ. ನೀನೇ ಪಾಲಿಸುವಿ ಕೊನೆಗೆ ಎಲ್ಲರನ್ನೂ ನೀನೇ ಸಂಹರಿಸುವ ನಿನಗೆ ಸಮನಾದ ವ್ಯಕ್ತಿ ಇಡೀ ಬ್ರಹ್ಮಾಂಡದಲ್ಲಿ ಯಾರೂ ಇಲ್ಲ. ನೀನೇ ಈ ಪ್ರಪಂಚದ ಬಂಧ-ಮೋಕ್ಷಗಳಿಗೆ ಕಾರಣನು.

**ಕ್ಷಂತವ್ಯಮೇವ ಭವತಾ ಮಮ ಬಾಲ್ಯಮೀಶ**
**ತ್ವತ್ಸಂಶ್ರಯೋಽಸ್ಮಿ ಹಿ ಸದೇತ್ಯಭಿವಂದಿತೋಽಜಃ ।**
**ಕ್ಷಾಂತಂ ಸದೈವ ಭವತಸ್ತವ ಶಿಕ್ಷಣಾಯ**
**ಪೂಜಾಪಹಾರವಿಧಿರಿತ್ಯವದದ್ ರಮೇಶಃ ॥ ೬೯ ॥**

**ಅರ್ಥ** :- **ಈಶ** ಎಲೈ ಸ್ವಾಮಿಯೇ, **ಸದಾ** ಯಾವಾಗಲೂ, **ತ್ವತ್ ಸಂಶ್ರಯಃ** ನಿನ್ನ ಆಶ್ರಯಿಸಿದವನು, **ಅಸ್ಮಿ** ಆಗಿದ್ದೇನೆ, **ಅತಃ** ಆದ್ದರಿಂದ, **ಮಮ** ನನ್ನ **ಬಾಲ್ಯಂ** ಹುಡುಗುತನವು, **ಭವತಾಏವ** ನಿನ್ನಿಂದಲೇ **ಕ್ಷಂತವ್ಯಂ** ಕ್ಷಮಿಸಲ್ಪಡಬೇಕು, **ಇತಿ** ಎಂದು, **ಅಭಿವಂದಿತಃ** ನಮಸ್ಕರಿಸಲ್ಪಟ್ಟ **ಅಜಃ** ನಾಶರಹಿತನಾದ, **ರಮೇಶಃ** ಲಕ್ಷ್ಮೀಪತಿಯಾದ ಶ್ರೀಕೃಷ್ಣನು, **ಸದಾ** ಯಾವಾಗಲೂ, **ಭವತಃ** ನಿನ್ನ ಹುಡುಗುತನವು, **ಕ್ಷಾಂತಮೇವ** ಕ್ಷಮಿಸಲ್ಪಟ್ಟ ಇರುತ್ತದೆ, **ತವ** ನಿನ್ನ **ಶಿಕ್ಷಣಾಯ** ಕಣ್ಣು ತೆರೆಸುವ ಪಾಠಕ್ಕಾಗಿ, **ಪೂಜಾಪಹಾರ ವಿಧಿಃ** ಪೂಜೆಯನ್ನು ಕಸಿದುಕೊಳ್ಳುವ ಕರ್ಮವು ಮಾಡಲ್ಪಟ್ಟಿತು. **ಇತಿ** ಎಂದು **ಅವದತ್** ಹೇಳಿದನು.

**ತಾತ್ಪರ್ಯ** :- ಇಂದ್ರನು ಹೇ ಭಗವಂತನ ನನಗೆ ನೀನು ಸದಾಕಾಲ ಆಶ್ರಯಿಸು. ಆದ್ದರಿಂದ ಕರುಣಾಮಯಿಯಾದ ನೀನು ನನ್ನ ಈ ಹುಡುಗಾಟವನ್ನು ಕ್ಷಮಿಸಲೇಬೇಕು ಎಂದು ಹೇಳಿ ನಮಿಸಿದಾಗ ನಾಶರಹಿತ ನಾದ ಲಕ್ಷ್ಮೀಪತಿಯಾದ ಭಗವಂತನು ಹೇ ಇಂದ್ರ ನೀನು ನನ್ನ ಭಕ್ತನಾದ್ದರಿಂದ ನಿನ್ನ ಹುಡುಗಾಟವು ಯಾವಾಗಲೂ ನನಗೆ ಸಹ್ಯವೇ ಆದರೂ ನಿನ್ನ ಕಣ್ಣು ತೆರೆಸುವುದಕ್ಕಾಗಿಯೇ ನಾನು ಈರೀತಿ ಮಾಡಿದೆನು ಎಂದು ಹೇಳಿದನು.

**ಗೋವಿಂದಮೇನಮಭಿಷಿಚ್ಯ ಸ ಗೋಗಣೇತೋ**
**ಗೋಭಿರ್ಜಗಾಮ ಗುಣಪೂರ್ಣಮಮುಂ ಪ್ರಣಮ್ಯ ।**
**ಗೋಪೈರ್ಗಿರಾಂಪತಿರಪಿ ಪ್ರಣತೋಽಭಿಗಮ್ಯ**
**ಗೋವರ್ಧನೋದ್ಧರಣಸಂಗತಸಂಶಯೈಃ ಸಃ ॥ ೭೦ ॥**

**ಅರ್ಥ** :- **ಗೋಗಣೇಶಃ** ಸುರಭಿ ಮೊದಲಾದ ಹಸುಗಳ ಸಮೂಹಕ್ಕೆ ನಾಯಕನಾದ ಇಂದ್ರನು, **ಗೋಭಿಃ** ಆಕಾಶ ಗಂಗಾಜಲದಿಂದ, **ಗುಣ ಪೂರ್ಣಃ** ಗುಣಗಳಿಂದ ಪರಿಪೂರ್ಣನಾದ, **ಏನಂ** ಈ ಕೃಷ್ಣನನ್ನು, **ಅಭಿಷಿಚ್ಯ** ಅಭಿಷೀಕಗೈದು, **ಅಮುಂ** ಈ ಕೃಷ್ಣನನ್ನು **ಪ್ರಣಮ್ಯ** ನಮಸ್ಕರಿಸಿ, **ಜಗಾಮ** ಹೊರಟು ಹೋದನು, **ಗೋವರ್ಧನೋದ್ಧರಣಸಂಗತಸಂಶಯೈಃ** ಗೋವರ್ಧನ ಗಿರಿಯ ಎತ್ತುವಿಕೆಯಿಂದ ಚೆನ್ನಾಗಿ ಪರಿಹೃತವಾದ ಸಂಶಯವುಳ್ಳ, **ಗೋಪೈಃ** ಗೊಲ್ಲರಿಂದ, **ಗಿರಾಂಪತಿಃ** ವೇದದ ನಾಯಕನಾದ, **ಸಃ** ಆ ಶ್ರೀಕೃಷ್ಣನು, **ಅಭಿಗಮ್ಯ** ಎದುರುಗೊಂಡು, **ಪ್ರಣತಃ** ನಮಸ್ಕರಿಸಲ್ಪಟ್ಟನು.

**ತಾತ್ಪರ್ಯ** :- ನಂತರ ಇಂದ್ರನು ಆಕಾಶಗಂಗೆಯಿಂದ ಕೃಷ್ಣನನ್ನು ಅಭಿಷೇಕ ಮಾಡಿ ನೀನು ಗೋವುಗಳ ವೇದಗಳ ಪಾಲಕ. ಆದ್ದರಿಂದ ನೀನು ಗೋವಿಂದ ಎಂದು ಗುಣಪೂರ್ಣನಾದ ಕೃಷ್ಣನಿಗೆ ಗೋವಿಂದ ಪಟ್ಟಾಭಿಷೇಕ ವನ್ನು ಮಾಡಿ ಸುರಭಿ ಮುಂತಾದ ಗೋವುಗಳೊಂದಿಗೆ ಕೃಷ್ಣನನ್ನೂ ನಮಿಸಿ ತನ್ನ ಲೋಕಕ್ಕೆ ಹೊರಟು ಹೋದನು. ಗೊಲ್ಲರಿಗೆ ಈ ಹಿಂದೆ ಕೃಷ್ಣನ ಬಗ್ಗೆ ಸಂಶಯ ವಿದ್ದಿತು. ಈಗೂ ವರ್ಧ ನೋದ್ಧಾರದಿಂದ ಈ ಸಂಶಯವೆಲ್ಲಾ ಪರಿಹಾರವಾಗಿ ಅವನು ಸರ್ವೇಶ್ವರನಾದ ಭಗವಂತನೇ ಎಂದು ನಿಶ್ಚಯವಾಯಿತು. ಎಲ್ಲಾ ಗೋಪಾಲರು ವೇದ ಪತಿಯಾದ ಈ ಕೃಷ್ಣನನ್ನು ಎದುರುಗೊಂಡು ಅವನಿಗೆ ನಮಿಸಿದರು.

ಕೃಷ್ಣಂ ತತಃ ಪ್ರಭೃತಿ ಗೋಪಗಣಾ ವ್ಯಜಾನನ್
ನಾರಾಯಣೋಽಯಮಿತಿ ಗರ್ಗವಚಶ್ಚ ನಂದಾತ್ ।
ನಾರಾಯಣಸ್ಯ ಸಮ ಇತ್ಯುದಿತಂ ನಿಶಮ್ಯ
ಪೂಜಾಂ ಚ ಚಕ್ರುರಧಿಕಾಮರವಿಂದನೇತ್ರೇ ॥ ೭೧ ॥

**ಅರ್ಥ** :- **ತತಃ ಪ್ರಭೃತಿ** ಅಲ್ಲಿಂದ ಆರಂಭಿಸಿ, **ಗೋಪಗಣಃ** ಗೊಲ್ಲರ ಸಮೂಹವು, **ಅಯಂ** ಇವನು, **ನಾರಾಯಣ ಏವ** ನಾರಾಯಣನೇ, **ಇತಿ** ಎಂದು, **ಕೃಷ್ಣಂ** ಕೃಷ್ಣನನ್ನು, **ವ್ಯಜಾನನ್** ತಿಳಿದರು, **ಚ** ಮತ್ತು **ನಾರಾಯಣಸ್ಯ ಸಮಃ** ಇವನು ನಾರಾಯಣನೇ, **ಇತಿ** ಎಂದು, **ಉದಿತಂ** ಹೇಳಿದ, **ಗರ್ಗವಚಃ** ಗರ್ಗನ ಮಾತನ್ನು, **ನಂದಾತ್** ನಂದನಿಂದ, **ನಿಶಮ್ಯ** ತಿಳಿದು, **ಅರವಿಂದ ನೇತ್ರೇ** ಕಮಲನಯನನಾದ ಶ್ರೀಕೃಷ್ಣನಲ್ಲಿ **ಅಧಿಕಂ** ಹೆಚ್ಚಾದ, **ಪೂಜಾಂ** ಪೂಜೆಯನ್ನು ಕೂಡ, **ಚಕ್ರುಃ** ಮಾಡಿದರು.

**ತಾತ್ಪರ್ಯ** :- ಅಂದಿನಿಂದ ಗೊಲ್ಲರ ಗುಂಪು ಶ್ರೀಕೃಷ್ಣನನ್ನು ನಾರಾಯಣನೇ ಎಂದು ತಿಳಿದರು. ಅಲ್ಲದೇ ಗರ್ಗಾಚಾರ್ಯರು ನಾಮ ಕರಣದ ಸಮಯದಲ್ಲಿ ನಂದನ ಬಳಿ ಹೇಳಿದ ಇವನು ನಾರಾಯಣ ಸಮನು ಎಂಬ ಮಾತನ್ನು ನಂದನಿಂದ ತಿಳಿದು ಕೃಷ್ಣನಲ್ಲಿ ಸರ್ವೋತ್ತಮನೆಂಬ ಭಾವನೆ ಯಿಂದ ಪೂಜೆ ಮಾಡಿದರು.

ಸ್ಕಂದಾದುಪಾತ್ತವರತೋ ಮರಣಾದಪೇತಂ
ದೃಷ್ಟ್ವಾ ಚ ರಾಮನಿಹತಂ ಬಲಿನಂ ಪ್ರಲಂಬಮ್ ।
ಚಕ್ರುರ್ವಿನಿಶ್ಚಯಮಮುಷ್ಯ ಸುರಾಧಿಕತ್ವೇ
ಗೋಪಾ ಅಥಾಸ್ಯ ವಿದಧುಃ ಪರಮಾಂ ಚ ಪೂಜಾಮ್ ॥ ೭೨ ॥

**ಅರ್ಥ** :- **ಗೋಪಾಃ** ಗೊಲ್ಲರು, **ಸ್ಕಂದಾತ** ಷಣ್ಮುಖನಿಂದ, **ಉಪಾತ್ತವರತಃ** ಪಡೆದವರದಿಂದ, **ಮರಣಾದಪೇತಂ** ಮರಣ ರಹಿತನಾಗಿದ್ದ **ಬಲಿನಂ** ಶೂರನಾದ, **ಪ್ರಲಂಬಂ** ಪ್ರಲಂಬಾಸುರನನ್ನು, **ರಾಮನಿಹತಂ** ರಾಮನಿಂದ ಹತನಾದದ್ದನ್ನಾಗಿ, **ದೃಷ್ಟ್ವಾ** ನೋಡಿ, **ಅಮುಷ್ಯ** ಈ ರಾಮನ **ದೇವ ಶ್ರೇಷ್ಠತ್ವೇ** ದೇವೋತ್ತಮನೆಂದ ವಿಷಯದಲ್ಲಿ, **ವಿನಿಶ್ಚಯಂ** ನಿಶ್ಚಯ ವನ್ನೂ, **ಚಕ್ರೇ** ಮಾಡಿದರು, **ಅಥ** ಅನಂತರ, **ಅಸ್ಯ** ಈ ಕೃಷ್ಣನ, **ಪರಮಾಂ** ಶ್ರೇಷ್ಠವಾದ **ಪೂಜಾಂ ಚ** ಪೂಜೆಯನ್ನು ಕೂಡ, **ವಿದಧುಃ** ಮಾಡಿದರು.

**ತಾತ್ಪರ್ಯ** :- ಗೋಪರು ಷಣ್ಮುಖನ ವರದಿಂದ ಅವಧ್ಯನಾಗಿದ್ದ ಅತ್ಯಂತ ಬಲಿಷ್ಠನಾಗಿದ್ದ ಪ್ರಲಂಬನನ್ನು ರಾಮನು ಸಾಯಿಸಿದ್ದನ್ನು ನೋಡಿ ಈ ಬಲರಾಮನೂ ಕೂಡ ಕೃಷ್ಣನ ಅನಂತರ ದೇವೋತ್ತಮನೆಂದು ಪೂಜಿಸಲು ಅರ್ಹನು ಎಂದು ತಿಳಿದು ಕೃಷ್ಣನಲ್ಲಿ ಸರ್ವೋತ್ತಮ ಎಂಬ ಭಾವನೆಯಿಂದ ಪೂಜೆ ಮಾಡಿದರೆ ಈ ರಾಮನಲ್ಲಿ ದೇವೋತ್ತಮನೆಂಬ ಭಾವನೆಯಿಂದ ಪೂಜೆ ಮಾಡಿದರು.

**ಕಾತ್ಯಾಯನೀವ್ರತಪರಾಃ ಸ್ವಪತಿತ್ವಹೇತೋಃ**
**ಕನ್ಯಾ ಉವಾಹ ಭಗವಾನಪರಾಶ್ಚ ಗೋಪೀಃ ।**
**ಅನ್ಯೈರ್ಧೃತಾ ಅಯುಗಬಾಣಶರಾಭಿನುನ್ನಾಃ**
**ಪ್ರಾಪ್ತಾ ನಿಶಾಸ್ವರಮಯಚ್ಛಶಿರಾಜಿತಾಸು ॥ ೭೩ ॥**

**ಅರ್ಥ** :- **ಭಗವಾನ್** ಶ್ರೀಕೃಷ್ಣನು, **ಸ್ವಪತಿತ್ವಹೇತೋಃ** ತನ್ನನ್ನು ಪತಿಯನ್ನಾಗಿ ಪಡೆಯಬೇಕೆಂಬ ಕಾರಣದಿಂದ, **ಕಾತ್ಯಾಯನೀವ್ರತಧರಾಃ** ಕಾತ್ಯಾಯನೀದೇವಿಯ ವ್ರತವನ್ನು ನಡೆಸುತ್ತಿದ್ದ **ಕನ್ಯಾಃ** ಗೋಪಿಕಾ ಕನ್ಯೆಯರನ್ನು **ಉವಾಹ** ಮದುವೆಯಾದನು, **ಅನ್ಯೈ** ಬೇರೆಗೊಲ್ಲರಿಂದ, **ಧೃತಾಃ** ಮದುವೆಯಾಗಿದ್ದ **ಅಯುಗಬಾಣಶರಾಭಿನುನ್ನಾಃ** ಮನ್ಮಥನ ಬಾಣದಿಂದ ಪ್ರೇರಿತರಾದ, **ಪ್ರಾಪ್ತಾಃ** ಕೃಷ್ಣನನ್ನು ಹೊಂದಲು ಬಂದ **ಅಪರಾ ಗೋಪೀಶ್ಚ** ಬೇರೆ ಗೋಪಿಕಾ ಸ್ತ್ರೀಯರನ್ನೂ **ಶಶಿರಾಜಿತಾಸು** ಚಂದ್ರನಿಂದ ಶೋಭಾಯ ಮಾನವಾದ, **ನಿಶಾಸು** ರಾತ್ರಿಗಳಲ್ಲಿ, **ಅರಮಯತ್** ರಮಿಸಿದನು.

**ತಾತ್ಪರ್ಯ** :- ಕೃಷ್ಣನ ಅಂಗಸಂಗ ಪಡೆಯಬೇಕೆಂದು ಶ್ರದ್ಧೆಯಿಂದ ಗೋಪಿಕಾಸ್ತ್ರೀಯರು ಕಾತ್ಯಾಯನೀವ್ರತ ಎಂಬ ಗೌರೀಪೂಜೆಯನ್ನು ಮಾಡಿದರು. ಆದರಿಂದ ಸಂತೃಪ್ತಳಾದ ಲಕ್ಷ್ಮಿಯು ಅವರಲ್ಲಿ ಆವಿಷ್ಟಳಾದಳು. ಆಗ ಅವರನ್ನೆಲ್ಲಾ ಭಗವಂತನು ವಿವಾಹವಾದನು. ಅಲ್ಲದೇ ಬೇರೆ ಗೋಪಾಲರನ್ನೂ ಮದುವೆಯಾಗಿದ್ದ ಗೋಪಿಕಾಸ್ತ್ರೀಯರೂ ಕೂಡ ಮನ್ಮಥನ ಬಾಣದಿಂದ ಪೀಡಿತರಾಗಿ ಕೃಷ್ಣನ ಬಳಿ ಬಂದಾಗ ಕೃಷ್ಣ ಅವರೊಂದಿಗೆ ಬೆಳದಿಂಗಳಿನಿಂದ ಶೋಭಾಯ ಮಾನವಾದ ರಾತ್ರಿಯಲ್ಲಿ ಕ್ರೀಡಿಸಿದನು.

ತಾಸ್ತತ್ರ ತೇನ ಜನಿತಾ ದಶಲಕ್ಷಪುತ್ರಾ
ನಾರಾಯಣಾಹ್ವಯಯುತಾ ಬಲಿನಶ್ಚ ಗೋಪಾಃ ।
ಸರ್ವೇಽಪಿ ದೈವತಗಣಾ ಭಗವತ್ಸುತತ್ವ-
ಮಾಪ್ತುಂ ಧರಾತಳಗತಾ ಹರಿಭಕ್ತಿಹೇತೋಃ ॥ ೭೪ ॥

**ಅರ್ಥ** :- **ಅತ್ರ** ಈ ಗೋಕುಲದಲ್ಲಿ, **ತೇನ** ಆಕೃಷ್ಣನಿಂದ, **ತಾಸು** ಆ ಗೋಪಿಕಾಸ್ತ್ರೀಯರಲ್ಲಿ, **ಸರ್ವೇಽಪಿ** ಎಲ್ಲ **ದೈವತಗಣಾಃ** ದೇವತೆಗಣಗಳು **ಹರಿಭಕ್ತಿಹೇತೋಃ** ಭಗವಂತನಲ್ಲ ಭಕ್ತಿಯನ್ನು ಮಾಡುವುದಕ್ಕಾಗಿ, **ಭಗವತ್ ಸುತತ್ವಂ** ಭಗವಂತನ ಮಕ್ಕಳಾಗುವಿಕೆಯನ್ನು **ಆಪ್ತುಂ** ಹೊಂದಲು **ಧರಾತಲ ಗತಾಃ** ಭೂಮಿಯನ್ನು ಹೊಂದಿದವರಾಗಿ. **ನಾರಾಯಣಾಹ್ವಯಯುತಾಃ** ನಾರಾಯಣರೆಂಬ ಹೆಸರಿನಿಂದ ಕೂಡಿದವರಾಗಿ, **ಚ** ಮತ್ತು **ಬಲಿನಃ** ಬಲಿಷ್ಠರಾದ, **ಗೋಪಾಃ** ಗೋಪಾಲರಾಗಿ **ದಶಲಕ್ಷಪುತ್ರಾಃ** ಹತ್ತುಲಕ್ಷಪುತ್ರರಾಗಿ, **ಜನಿತಾ** ಹುಟ್ಟಿದರು.

**ತಾತ್ಪರ್ಯ** :- ಕೃಷ್ಣನು ತಾನು ಮದುವೆಯಾದ ಆ ಎಲ್ಲಾ ಗೋಪಿಕಾಸ್ತ್ರೀಯರಲ್ಲಿ ಹತ್ತುಲಕ್ಷ ಮಕ್ಕಳನ್ನೂ ಹುಟ್ಟಿಸಿದನು. ಅವರೆಲ್ಲಾ ನಾರಾಯಣ ಸೈನ್ಯ ಎಂದು ಪ್ರಸಿದ್ಧರಾದ ಮುಂದೆ ಕೌರವರ ಪಕ್ಷದಲ್ಲಿ ಹೋರಾಡಿ ಶತ್ರು ನಿಗ್ರಹವೆಂಬ ಭಗವಂತನ ಪೂಜೆಯಲ್ಲಿ ಸಹಾಯಕ ರಾಗಿದ್ದರು. ಈಗ ಅವರೆಲ್ಲರೂ ತಾಯಿಯ ಜಾತಿಯಂತೆ ಗೋಪಾಲಕ ರಾಗಿದ್ದರು. ದೇವತೆಗಳಾದ ಅವರೆಲ್ಲರೂ ಭಗವಂತ ಸೇವೆ ಮಾಡುವ ಉದ್ದೇಶದಿಂದ ಅವನ ಮಕ್ಕಳಾಗಿ ಹುಟ್ಟಿದರು.

ತಾಸ್ತತ್ರ ಪೂರ್ವವರದಾನಕೃತೇ ರಮೇಶೋ
ರಾಮಾ ದ್ವಿಜತ್ವಗಮನಾದಪಿ ಪೂರ್ವಮೇವ ।
ಸರ್ವಾ ನಿಶಾಸ್ವರಮಯತ್ ಸಮಭೀಷ್ಟಸಿದ್ಧಿ-
ಚಿಂತಾಮಣಿರ್ಹಿ ಭಗವಾನತುಭೈರಲಿಪ್ತಃ ॥ ೭೫ ॥

**ಅರ್ಥ** :- **ಭಗವಾನ್** ಪೂಜ್ಯನಾದ, **ರಮೇಶಃ** ಶ್ರೀಕೃಷ್ಣನು, **ತತ್ರ** ಆವೃಂದಾವನದಲ್ಲಿ **ಪೂರ್ವವರದಾನಕೃತೇಃ** ಹಿಂದೆ ತಾನು ವರವನ್ನೂ ಕೊಟ್ಟಿದ್ದರಿಂದ **ದ್ವಿಜಗಮನಾದ್** ಉಪನಯನ ಸಂಸ್ಕಾರಕ್ಕಿಂತಲೂ, **ಪೂರ್ವಂ** ಮೊದಲು **ರಾಮಾತ್** ಬಲರಾಮನಿಗಿಂತಲೂ, **ಪೂರ್ವಂ** ಏವ ಮೊದಲೇ,

**ತಾಃ ಸರ್ವಾಃ** ಆ ಗೋಪಿಕಾಸ್ತ್ರೀಯರನ್ನು **ನಿಶಾಸು** ರಾತ್ರಿಗಳಲ್ಲಿ **ಅರಮಯತ್** ರಮಿಸಿದನು. **ಹಿ** ಅದುಯುಕ್ತವೇ **ಅಶುಭೈಃ** ಕಾಮಾದಿಗಳಿಂದ, **ಅಲಿಪ್ತಃ** ಲೇಪಿತನಾಗದ, **ಭಗವಾನ್** ಶ್ರೀಕೃಷ್ಣನು, **ಸಮಭೀಷ್ಟಸಿದ್ಧಿಚಿಂತಾಮಣಿಃ** ಭಕ್ತರ ಅಭೀಷ್ಟಗಳನ್ನು ಪೂರೈಸುವ ಚಿಂತಾಮಣಿಯು.

**ತಾತ್ಪರ್ಯ** :- ಕೃಷ್ಣನು ಯಾವುದೇ ಕಾಮಾದಿಗಳಿಂದ ಲಿಪ್ತನಾಗುವುದಿಲ್ಲ ವಾದ್ದರಿಂದ ಅವನು ಗೋಪಿಕಾಸ್ತ್ರೀಯರೊಂದಿಗೆ ರಮಿಸಿದ್ದು ತನ್ನ ಸುಖಕ್ಕಾಗಿ ಅಲ್ಲ, ಅವನು ಭಕ್ತರ ಅಭೀಷ್ಟ ಪೂರೈಸುವ ಚಿಂತಾಮಣಿಯಾದ್ದರಿಂದ ಈಗ ಗೋಪಿಕಾಸ್ತ್ರೀಯರಾಗಿ ಹುಟ್ಟಿದ ಅಪ್ಸರಾಸ್ತ್ರೀಯರಿಗೆ ಹಿಂದೆಯೇ ತಾನು ಉಪನಯನವಾಗುವುದಕ್ಕಿಂತಲೂ ಮೊದಲು, ಅಣ್ಣನಾದ ರಾಮನಿಗಿಂತಲೂ ಮೊದಲು ನಿಮ್ಮನ್ನು ವಿವಾಹವಾಗುತ್ತೇನೆಂದು ವರವನ್ನೂ ಕೊಟ್ಟಿದ್ದ. ಆ ವರವನ್ನು ಪೂರೈಸಲೋಸುಗವೇ ಬೆಳದಿಂಗಳ ರಾತ್ರಿಯಲ್ಲಿ ಸ್ತ್ರೀಯ ರೊಂದಿಗೆ ರಮಿಸಿದನು.

**ಸಂಪೂರ್ಣಚಂದ್ರಕರರಾಜಿತಸದ್ರಜನ್ಯಾಂ**
**ವೃಂದಾವನೇ ಕುಮುದಕುಂದಸುಗಂಧವಾತೇ ।**
**ಶ್ರುತ್ವಾ ಮುಕುಂದಮುಖನಿಸ್ಸೃತಗೀತಸಾಂ**
**ಗೋಪಾಂಗನಾ ಮುಮುಹುರತ್ರ ಸಸಾರ ಯಕ್ಷಃ ॥ ೭೬ ॥**

**ಅರ್ಥ** :- **ಗೋಪಾಂಗನಾಃ** ಗೋಪಿಕಾಸ್ತ್ರೀಯರು **ಸಂಪೂರ್ಣಚಂದ್ರಕರರಾಜಿತಸದ್ರಜನ್ಯಾಂ** ಪೂರ್ಣ ಚಂದ್ರನ ಕಿರಣಗಳಿಂದ ಬೆಳಗುತ್ತಿರುವ ಉತ್ತಮ ರಾತ್ರಿಯಲ್ಲಿ, **ಕುಮುದಕುಂದಸುಗಂಧವಾತೇ** ಕನ್ನೈದಿಲೆ ಮಲ್ಲಿಗೆ ಹೂಗಳ ಸುಗಂಧದಿಂದ ಪರಿಮಳಯುಕ್ತವಾದ ಗಾಳಿಯುಳ್ಳ, **ವೃಂದಾವನೇ** ವೃಂದಾವನದಲ್ಲಿ, **ಮುಕುಂದಮುಖನಿಸ್ಸೃತಗೀತಸಾರಂ** ಕೃಷ್ಣನ ಮುಖದಿಂದ ಹೊರಹೊಮ್ಮಿದ ಉತ್ತಮಗಾನವನ್ನು, **ಶ್ರುತ್ವಾ** ಕೇಳಿ **ಮುಮುಹುಃ** ಮೈಮರೆತರು, **ಅತ್ರ** ಅಲ್ಲಿಗೆ **ಯಕ್ಷ** ಯಕ್ಷನೊಬ್ಬನು, ಸಸಾರ ಬಂದನು.

**ತಾತ್ಪರ್ಯ** :- ಎಲ್ಲಾ ಗೋಪಿಕಾಸ್ತ್ರೀಯರು ಕೃಷ್ಣನೊಂದಿಗೆ ರಮಿಸಲು ವೃಂದಾವನದ ವನ ಪ್ರದೇಶಕ್ಕೆ ಬಂದರು. ಆ ಪ್ರದೇಶವು ಪೂರ್ಣಚಂದಿರನ ಕಿರಣಗಳಿಂದ ಬೆಳಕಿನಿಂದ ತುಂಬಿದ ರಾತ್ರಿಯಿಂದ ಕೂಡಿತ್ತು. ಅಲ್ಲಿ ಬೀಸುವ ಗಾಳಿಯಲ್ಲಿ ಕನ್ನೈದಿಲೆಯ ಹಾಗೂ ಮಲ್ಲಿಗೆಯ ಪರಿಮಳ ತುಂಬಿ ಮನಸ್ಸಿಗೆ

ಹಿತವಾಗುತ್ತಿತ್ತು. ಅಲ್ಲಿ ಗೋಪಿಕಾಸ್ತ್ರೀಯರು ಭಗವಂತನ ಮುಖದಿಂದ ಹೊರಬಂದ ಸುಂದರವಾದ ಗಾನವನ್ನು ಕೇಳಿ ಮೈಮರೆತರು. ಆಗ ಅಲ್ಲಿಗೆ ಒಬ್ಬ ಯಕ್ಷನು ಬಂದನು.

**ರುದ್ರಪ್ರಸಾದಕೃತರಕ್ಷ ಉತಾಸ್ಯ ಸಖ್ಯು-**
**ರ್ಭೃತ್ಯೋ ಬಲೀ ಖಲತರೋऽಪಿಚ ಶಂಖಚೂಡಃ ।**
**ತಾಃ ಕಾಲಯನ್ ಭಗವತಸ್ತಳತಾಡನೇನ**
**ಮೃತ್ಯುಂ ಜಗಾಮ ಮಣಿಮಸ್ಯ ಜಹಾರ ಕೃಷ್ಣಃ ॥ ೭೭ ॥**

**ಅರ್ಥ** :- **ರುದ್ರಪ್ರಸಾದಕೃತರಕ್ಷಃ** ಶಿವನ ಅನುಗ್ರಹದಿಂದ ಮಾಡಲ್ಪಟ್ಟ ರಕ್ಷಣೆಯುಳ್ಳ, **ಅಸ್ಯ** ಈ ರುದ್ರನ, **ಸಖ್ಯುಃ** ಗೆಳೆಯನಾದ ಕುಬೇರನ, **ಭೃತ್ಯಃ ಅಪಿ** ಸೇವಕನೂ ಆದ, **ಬಲೀ** ಶೂರನಾದ, **ಚ** ಮತ್ತು **ಖರತರಃ** ಕ್ರೂರನೂ ಆದ, **ಶಂಖಚೂಡಃ** ಶಂಖ ಚೂಡನೆಂಬ ಯಕ್ಷನು, **ತಾಃ** ಆ ಗೋಪಿಕಾ ಸ್ತ್ರೀಯರನ್ನು **ಕಾಲಯನ್** ಓಡಿಸುತ್ತಿರಲು, **ಭಗವತಃ** ಶ್ರೀಕೃಷ್ಣನ **ತಲತ್ರಾಡನೇನ** ಕೈಯ ಏಟಿನಿಂದ, **ಮೃತ್ಯುಂ** ಮರಣವನ್ನು **ಜಗಾಮ** ಹೊಂದಿದನು, **ಅಸ್ಯ** ಈಯಕ್ಷನ, **ಮಣಿಂ** ಮಣಿಯನ್ನು, **ಜಹಾರ** ಅಪಹರಿಸಿದನು.

**ತಾತ್ಪರ್ಯ** :- ಶಂಖಚೂಡನೆಂಬ ಒಬ್ಬ ಯಕ್ಷ ಶಿವನ ಅನುಗ್ರಹ ಪಡೆದಿದ್ದ ಅಲ್ಲದೇ ಅವನು ಶಿವನ ಸ್ನೇಹಿತನಾದ ಕುಬೇರನ ಸೇವಕನಾಗಿದ್ದನು. ಅವನು ಬಹಳ ಕ್ರೂರಿಯಾಗಿದ್ದನು ಹಾಗೂ ಬಲಿಷ್ಠನಾಗಿದ್ದನು. ಅವನು ಗೋಪಿಯರನ್ನು ಅನುಭವಿಸುವ ಉದ್ದೇಶದಿಂದ ಯಾರಿಗೂ ತಿಳಿಯದಂತೆ ಬಂದು ಗೋಪಿಯರನ್ನೂ ಆಕಳ ಹಿಂಡಿನಂತೆ ಓಡಿಸಿಕೊಂಡು ಹೋದ. ಕೃಷ್ಣನನ್ನು ಕಂಡು ಅವರನ್ನೆಲ್ಲಾ ಬಿಟ್ಟು ಒಬ್ಬನೇ ಓಡಲು ಶುರುಮಾಡಿದ. ಕೃಷ್ಣ ಬಲರಾಮನನ್ನೂ ಗೋಪಿಯರ ರಕ್ಷಣೆಗೆ ಇಟ್ಟು ತಾನು ಒಬ್ಬನೇ ಅವನನ್ನೂ ಓಡಿಸಿಕೊಂಡು ಹೋಗಿ ಕೈಯ ಏಟಿನಿಂದಲೇ ಅವನನ್ನು ಕೊಂದು ಅವನ ತಲೆಯಲ್ಲಿದ್ದ ಅಮೂಲ್ಯವಾದ ಮಣಿಯನ್ನು ತಂದು ಸ್ತ್ರೀಯರು ನೋಡುತ್ತಿದ್ದಂತೇ ಬಲರಾಮನಿಗೆ ಅದನ್ನು ಕೊಟ್ಟನು.

**ನಾಮ್ನಾऽಪ್ಯರಿಷ್ಟ ಉರುಗಾಯವಿಲೋಮಚೇಷ್ಟೋ**
**ಗೋಷ್ಠಂ ಜಗಾಮ ವೃಷಭಾಕೃತಿರಪ್ಯವಧ್ಯಃ ।**
**ಶಂಭೋರ್ವರಾದನುಗತಶ್ಚ ಸದೈವ ಕಂಸಂ**
**ಗಾ ಭೀಷಯಂತಮಮುಮಾಹ್ವಯದಾಶು ಕೃಷ್ಣಃ ॥ ೭೮ ॥**

**ಅರ್ಥ** :- **ಉರುಗಾಯವಿಲೋಮಚೇಷ್ಟಃ** ಉತ್ತಮ ಚರಿತನಾದ ಕೃಷ್ಣನಿಗೆ ವಿರುದ್ಧವಾದ ಕರ್ಮಗಳನ್ನು ಮಾಡುತ್ತಾ **ವೃಷಭಾಕೃತಿರಪಿ** ಎತ್ತಿನ ರೂಪದಿಂದಿದ್ದರೂ, **ಶಂಭೋಃ** ಈಶ್ವರನ, **ವರಾತ್** ವರದಿಂದ, **ಅವಧ್ಯಃ** ಅವಧ್ಯನಾಗಿದ್ದ **ಸದೈವ** ಯಾವಾಗಲೂ, **ಕಂಸಂ** ಕಂಸನನ್ನೂ **ಅನುಗತಃ** ಅನುಸರಿಸುವ, **ನಾಮ್ನಾಽಪಿ** ಹೆಸರಿನಿಂದಲೂ, **ಅರಿಷ್ಟಃ** ಅರಿಷ್ಟನಾದ ಅಸುರನು, **ಗೋಷ್ಠಂ** ಗೋಕುಲವನ್ನೂ ಕುರಿತು, **ಜಗಾಮ** ಬಂದನು, **ಕೃಷ್ಣಃ** ಕೃಷ್ಣನು, **ಗಾಃ** ಹಸುಗಳನ್ನು, **ಭೀಷಯಂತಂ** ಹೆದರಿಸುತ್ತಿದ್ದ **ಅಮುಂ** ಆ ರಾಕ್ಷಸನನ್ನು **ಆಶು** ಕೂಡಲೇ, **ಆಹ್ವಯತ** ಹೋರಾಟಕ್ಕೆ ಕರೆದನು.

**ತಾತ್ಪರ್ಯ** :- ಎತ್ತಿನ ರೂಪದಲ್ಲಿದ್ದ ಶಿವ ವರದಿಂದ ಅವಧ್ಯನಾಗಿದ್ದ ಅರಿಷ್ಟನೆಂಬ ಅಸುರ ಗೋಕುಲಕ್ಕೆ ಬಂದನು. ಅಲ್ಲಿ ಅವನು ಯಾವಾಗಲೂ ಕೃಷ್ಣನಿಗೆ ವಿರುದ್ಧವಾದ ಕರ್ಮಗಳನ್ನೂ ಮಾಡುತ್ತಾ ಗೋವುಗಳನ್ನು ಹೆದರಿಸುತ್ತಿದ್ದನು. ಆಗ ಕೃಷ್ಣನು ಅವನನ್ನು ಯುದ್ಧಕ್ಕೆ ಕರೆದನು.

**ಸೋಽಪ್ಯಾಸಸಾದ ಹರಿಮುಗ್ರವಿಷಾಣಕೋಟಿ-**
**ಮಗ್ರೇ ನಿಧಾಯ ಜಗೃಹೇಽಸ್ಯ ವಿಷಾಣಮೀಶಃ ।**
**ಭೂಮೌ ನಿಪಾತ್ಯ ಚ ವೃಷಾಸುರಮುಗ್ರವೀರ್ಯಂ**
**ಯಜ್ಞೇ ಯಥಾ ಪಶುಮಮಾರಯದಗ್ರ್ಯಶಕ್ತಿಃ ॥ ೭೯ ॥**

**ಅರ್ಥ** :- **ಸೋಽಪಿ** ಆ ಅರಿಷ್ಟಾಸುರನಾದರೂ, **ಉಗ್ರವಿಷಾಣಕೋಟಿಂ** ಮಾನಚಾದಕೊಂಬಿನ ತುದಿಯನ್ನು **ಅಗ್ರೇ ನಿಧಾಯ** ಎದುರು ಮಾಡಿಕೊಂಡು, **ಹರಿಂ** ಕೃಷ್ಣನನ್ನು **ಆಸಸಾದ** ಹೊಂದಿದನು, **ಈಶಃ** ಕೃಷ್ಣನು, **ಅಸ್ಯ** ಈ ರಾಕ್ಷಸನ, **ವಿಷಾಣಂ** ಕೋಡನ್ನು **ಜಗೃಹೇ** ಹಿಡಿದನು, **ಚ** ಮತ್ತು, **ಯಥಾ** ಹೇಗೆ, **ಯಜ್ಞೇ** ಯಾಗದಲ್ಲಿ **ಪಶುಂ** ಪಶುವನ್ನೋ **ತಥಾ** ಹಾಗೆ, **ಉಗ್ರವೀರ್ಯಂ** ಮಹಾಬಲಿಷ್ಠನಾದ, **ವೃಷಾಸುರಂ** ವೃಷಭಾಸುರನನ್ನು **ಅಗ್ರ್ಯಶಕ್ತಿಃ** ಉತ್ತಮ ಬಲವುಳ್ಳ ಶ್ರೀಕೃಷ್ಣನು, **ಅಮಾರಯತ** ಕೊಂದನು.

**ತಾತ್ಪರ್ಯ** :- ಅರಿಷ್ಟಾಸುರನು ತನ್ನ ಚೂಪಾದ ಕೊಂಬನ್ನು ಎದುರು ಮಾಡಿಕೊಂಡು ಕೃಷ್ಣನನ್ನು ತಿವಿಯಲು ಬಂದನು ಆದರೆ ಉತ್ತಮ ಬಲವುಳ್ಳ ಕೃಷ್ಣನು ಅವನನ್ನು ಹಿಡಿದುಕೊಂಡು ಯಜ್ಞದಲ್ಲಿ ಹೇಗೆ ಪಶುಗಳನ್ನು ಆಯುಧಗಳಿಲ್ಲದೇ ಕಂಠ ಕಿವಿಚಕೋಲ್ಲುತ್ತಾರೋ ಅವರಂತೆ ಈ ಅಸುರನನ್ನೂ ಕಂಠ ಹಿಂಡಿ ಕೊಂಬನ್ನು ಕಿವಿಚಿ ಕೃಷ್ಣನು ಕೊಂದು ಹಾಕಿದನು.

ಕೇಶೀ ಚ ಕಂಸವಿಹಿತಸ್ತುರಗಸ್ವರೂಪೋ
ಗಿರ್ಯಾತ್ಮಜಾವರಮವಾಪ್ಯ ಸದಾ ವಿಮೃತ್ಯುಃ ।
ಪಾಪಃ ಸ ಕೇಶವಮವಾಪ ಮುಖೇಽಸ್ಯ ಬಾಹುಂ
ಪ್ರಾವೇಶಯತ್ ಸ ಭಗವಾನ್ ವವೃಧೇಽಥ ದೇಹೇ ॥ ೮೦ ॥

**ಅರ್ಥ** :- **ಕಂಸವಿಹಿತಃ** ಕಂಸನಿಂದ ಕಳುಹಿಸಲ್ಪಟ್ಟ **ತುರಗಸ್ವರೂಪಃ** ಕುದುರೆಯ ಆಕೃತಿಯುಳ್ಳ **ಗಿರ್ಯಾತ್ಮಜಾವರಂ** ಪಾರ್ವತಿಯಿಂದ ವರವನ್ನು **ಅವಾಪ್ಯ** ಪಡೆದು ಸದಾ ವಿಮೃತ್ಯುಃ ಯಾವಾಗಲೂ ಅವಧ್ಯನಾಗಿದ್ದ **ಕೇಶೀತು** ಕೇಶಿಯೆಂಬ **ಪಾಪಃ** ಪಾಪಿಯಾದ ಅಸುರನು **ಕೇಶವಂ** ಕೃಷ್ಣನನ್ನು **ಅವಾಪ** ಹೊಂದಿದನು. **ಸಃ ಭಗವಾನ್** ಆ ಕೃಷ್ಣನು **ಅಸ್ಯ** ಈ ಕೇಶಿಯ **ಮುಖೇ** ಬಾಯಲ್ಲಿ **ಬಾಹುಂ** ತೋಳನ್ನು **ಪ್ರಾವೇಶಯತ್** ಒಳಗೆ ಹಾಕಿದ **ಅಸ್ಯದೇಹೇ** ಈ ಕೇಶಿಯ ದೇಹದಲ್ಲಿ ವಿ ವೃಧೇ ಈ ತೋಳು ಬೆಳೆಯಿತು.

**ತಾತ್ಪರ್ಯ** :- ನಂತರ ಪಾರ್ವತಿಯವರದಿಂದ ಅವಧ್ಯನಾಗಿದ್ದ ಕಂಸನಿಂದ ಕಳುಹಿಸಲ್ಪಟ್ಟ ಕುದುರೆಯ ರೂಪಿಯಾದ ಪಾಪಿಯಾದ ಕೇಶಿ ಯೆಂಬ ಅಸುರ ಕೃಷ್ಣನಿದ್ದಲ್ಲಿಗೆ ಬಂದನು. ಕೃಷ್ಣನು ಅವನ ಬಾಯಲ್ಲಿ ತನ್ನ ತೋಳನ್ನೂ ತೂರಿಸಿದ. ಅಲ್ಲದೇ ಆ ತೋಳು ಅವನ ದೇಹದಲ್ಲಿ ಬೆಳೆಯಿತು.

ತತ್ ಖಾದನಾಯ ಕುಮತಿಃ ಸ ಕೃತಪ್ರಯಾಸಃ
ಶೀರ್ಣಾಸ್ಯದಂತದಶನಚ್ಛದರುದ್ಧವಾಯುಃ ।
ದೀರ್ಣಃ ಪಪಾತ ಚ ಮೃತೋ ಹರಿರಪ್ಯಶೇಷೈ-
ರ್ಬ್ರಹ್ಮೇಶಶಕ್ರದಿನಕೃತ್ ಪ್ರಮುಖೈಃ ಸ್ತುತೋಽಭೂತ್ ॥ ೮೧ ॥

**ಅರ್ಥ** :- **ತತ್ಖಾದನಾಯ** ಆ ಕೃಷ್ಣನ ಬಾಹುಗಳನ್ನು ತಿನ್ನಲು **ಕೃತ ಪ್ರಯಾಸಃ** ಮಾಡಲ್ಪಟ್ಟ ಪ್ರಯತ್ನಗಳುಳ್ಳ **ಸಃ** ಆ **ಕುಮತಿಃ** ದುರ್ಬುದ್ಧಿಯ ಅಸುರನು **ಶೀರ್ಣಾಸ್ಯದಂತದಶಚ್ಛದರುದ್ಧವಾಯುಃ** ನಾಶವಾದ ಮುಖ, ಹಲ್ಲು ತುಟಿ ಹಾಗೂ ತಡೆಯಲ್ಪಟ್ಟ ಉಸಿರಾಟವುಳ್ಳವನಾಗಿ **ದೀರ್ಣಃ** ಎರಡು ತುಂಡಾಗಿ **ಪಪಾತ** ಬಿದ್ದನು. **ಮೃತಶ್ಚ** ಸತ್ತನೂ ಕೂಡ. **ಹರಿರಪಿ** ಕೃಷ್ಣನೂ ಕೂಡ **ಅಶೇಷೈಃ** ಎಲ್ಲಾ **ಬ್ರಹ್ಮೇಶಶಕ್ರದಿನಕೃತ್‌ಪ್ರಮುಖೈಃ** ಬ್ರಹ್ಮ ರುದ್ರ ಇಂದ್ರ ಸೂರ್ಯ ಮುಂತಾದ ದೇವತೆಗಳಿಂದ **ಸ್ತುತಃ ಅಭೂತ್** ಸ್ತೋತ್ರಮಾಡಲ್ಪಟ್ಟವನು ಆದನು.

**ತಾತ್ಪರ್ಯ** :- ಹೀಗೆ ಕೃಷ್ಣನು ತನ್ನ ತೋಳನ್ನು ಆ ಕೇಶಿಯ ಬಾಯೊಳಗೆ ಹಾಕಿ ಅದನ್ನು ಅವನ ದೇಹದಲ್ಲಿ ವೃದ್ಧಿಸಿದಾಗ ಆಕೇಶಿ ಅವನ ತೋಳನ್ನೇ ತಿನ್ನಲು ಬಂದನು. ಆದರೆ ಆ ಪ್ರಯತ್ನದಲ್ಲಿ ಅವನ ಬಾಯಿ, ಹಲ್ಲು ತುಟಿಗಳೇ ನಾಶವಾಗಿ ಹೋದವು. ಅಷ್ಟೇ ಅಲ್ಲದೇ ಅಸುರನ ಎದೆಯಲ್ಲಿ ಕೈ ಸಿಕ್ಕಿದ್ದರಿಂದ ಅವನ ಉಸಿರಾಟಕ್ಕೆ ತೊಂದರೆಯುಂಟಾಯಿತು. ಕೊನೆಗೆ ಅವನ ಶರೀರವು ಎರಡು ಭಾಗವಾಗಿ ಬಿದ್ದಿತು. ಹಾಗೆಯೇ ಅಲ್ಲಿ ಅವನು ಸತ್ತುಹೋದನು. ಆಗ ಭಗವಂತನ ಅದ್ಭುತ ಲೀಲೆಯನ್ನು ನೋಡಿ ಬ್ರಹ್ಮರುದ್ರ ಇಂದ್ರ ಸೂರ್ಯರೇ ಮೊದಲಾದ ಎಲ್ಲಾ ದೇವತೆಗಳು ಭಗವಂತನನ್ನು ಸ್ತೋತ್ರ ಮಾಡಿದರು.

**ವ್ಯೋಮಶ್ಚ ನಾಮ ಮಯಸೂನುರಜಪ್ರಸಾದಾ-**
**ಲ್ಲಬ್ಧಾಯುತಾಯುರಖಿಲಾನ್ ವಿದಧೇ ಬಿಲೇ ಸಃ ।**
**ತಂ ಶ್ರೀಪತಿಃ ಪಶುಪತಿಃ ಪಶುವದ್ ವಿಶಸ್ಯ**
**ನಿಃಸಾರಿತಾನ್ ಬಿಲಮುಖಾದಖಿಲಾಂಶ್ಚಕಾರ ॥ ೮೨ ॥**

**ಅರ್ಥ** :- **ಮಯಸೂನುಃ** ಮಯನೆಂಬ ಅಸುರನ ಮಗನಾದ, **ಅಜ ಪ್ರಸಾದಾತ್** ಬ್ರಹ್ಮದೇವರ ವರದಿಂದ **ಲಬ್ಧಾಮಿತಾಯಃ** ಪಡೆದ ಅಪರಿಮಿತ ವಾದ ಆಯುಸ್ಸುಳ್ಳ **ವ್ಯೋಮಃ** ನಾಮ ವ್ಯೋಮನೆಂದು ಹೆಸರುಳ್ಳ ಅಸುರನು **ಅಖಿಲಾನ್** ಎಲ್ಲಾ ಗೋಪರನ್ನು **ಬಿಲೇ** ಗುಹೆಯಲ್ಲಿ **ವಿದಧೇ** ಅಡಗಿಸಿಟ್ಟನು. **ಸುರಪತಿಃ** ದೇವತೆಗಳಿಗೆ ಒಡೆಯನಾದ **ಶ್ರೀಪತಿಃ** ರಮಾಪತಿಯಾದ **ಸಃ** ಆ ಶ್ರೀಕೃಷ್ಣನು **ತಂ** ಆ ವ್ಯೋಮಾಸುರನನ್ನು **ಪಶುವತ್** ಪಶುವನ್ನು ಕೊಲ್ಲುವಂತೆ **ವಿಶಸ್ಯ** ಕೊಂದು **ಬಿಲಿಮುಖಾತ್** ಗುಹೆಯ ಬಾಗಿಲಿನಿಂದ **ಅಖಿಲಾನ್** ಎಲ್ಲಾ ಗೋಪರನ್ನು **ನಿಃಸಾರಿತಾನ್** ಹೊರಹೋಗುವಂತೆ **ಚಕಾರ** ಮಾಡಿದನು.

**ತಾತ್ಪರ್ಯ** :- ನಂತರ ಮಯನೆಂಬ ಅಸುರನ ಮಗನಾದ ವ್ಯೋಮಾ ಸುರನು ಬ್ರಹ್ಮದೇವರಿಂದ ದೀರ್ಘಾಯುಷ್ಯವನ್ನು ಪಡೆದಿದ್ದನು. ಅವನು ಕಂಸನ ಸೇವಕನಾಗಿದ್ದನು. ಅವನು ಗೋಕುಲಕ್ಕೆ ಬಂದು ಗೊಲ್ಲರೊಂದಿಗೆ ಕುರಿಗಳು ಕಳ್ಳರು ಮತ್ತು ರಾಜಭಟರು ಎಂಬ ಆಟವನ್ನು ಆಡುತ್ತಾ ನಿಯಮ ದಂತೆ ರಾಜಭಟರು ಕುರಿಗಳನ್ನು ಗುಹೆಯಲ್ಲಿ ಹುಡುಕಿ ತರಬೇಕು. ಕುರಿಗಳನ್ನು ಕಳ್ಳರು ಗುಹೆಯಲ್ಲಿ ಬಚ್ಚಿಡಬೇಕು. ಹೀಗೆ ಆಟವಾಡುತ್ತಿರುವಾಗ

ಈ ಅಸುರನು ಕಳ್ಳನ ವೇಷದಿಂದ ಬಂದು ಕುರಿಗಳಾಗಿ ಆಡುತ್ತಿದ್ದ ಎಲ್ಲಾ ಗೋಪಾಲರನ್ನು ಗುಹೆಯಲ್ಲಿ ಬಚ್ಚಿಟ್ಟ. ರಾಜಭಟರಾದ ಗೊಲ್ಲರಿಗೆ ಅವರನ್ನು ಹಿಡಿಯಲು ಆಗಲೇ ಇಲ್ಲ. ಆಗ ಕೃಷ್ಣ ಈ ಅಸುರನ ಆಟವನ್ನೆಲ್ಲಾ ತಿಳಿದು ಅವನು ಪಶುವನ್ನು ಕೊಲ್ಲುವಂತೆ ಕೊಂದು ಅವನಿಂದ ಬಂಧಿತರಾಗಿದ್ದ ಗೊಲ್ಲರನ್ನು ಗುಹೆಯಿಂದ ಬಿಡಿಸಿದನು. ದೇವದೇವತೆಗಳಿಗೆ ಒಡೆಯನಾದ ಈ ಕೃಷ್ಣನನ್ನು ಬ್ರಹ್ಮರುದ್ರ ಇಂದ್ರ ಸೂರ್ಯ ಮುಂತಾದ ದೇವತೆಗಳೆಲ್ಲರೂ ಸ್ತೋತ್ರ ಮಾಡಿದರು.

**ಕುರ್ವತ್ಯನನ್ಯವಿಷಯಾಣಿ ದುರಂತಶಕ್ತೌ**
**ಕರ್ಮಾಣಿ ಗೋಕುಲಗತೇಽಖಿಲಲೋಕನಾಥೇ ।**
**ಕಂಸಾಯ ಸರ್ವಮವದತ್ ಸುರಕಾರ್ಯಹೇತೋಃ**
**ಬ್ರಹ್ಮಾಂಕಜೋ ಮುನಿರಕಾರಿ ಯದೀಶಪಿತ್ರಾ ॥ ೮೩ ॥**

**ಅರ್ಥ :-** **ದುರಂತಶಕ್ತೌ** ಅನಂತಶಕ್ತಿಯುಳ್ಳ, **ಅಖಿಲಲೋಕನಾಥೇ** ಸಕಲ ಜಗತ್ತಿನೊಡೆಯನಾದ ಶ್ರೀಕೃಷ್ಣನು, **ಗೋಕುಲಗತೇ** ಗೋಕುಲದಲ್ಲಿ ಇದ್ದವನಾಗಿ **ಅನನ್ಯವಿಷಯಾಣಿ** ಇತರರಿಗೆ ಅಸಾಧ್ಯವಾದ **ಕರ್ಮಾಣಿ** ಕಾರ್ಯಗಳನ್ನು **ಕುರ್ವತಿ ಸತಿ** ಮಾಡುತ್ತಿರಲು **ಬ್ರಹ್ಮಾಂಕಜಃ** ಬ್ರಹ್ಮನ ತೊಡೆಯಿಂದ ಹುಟ್ಟಿದ, **ಮುನಿಃ** ಋಷಿಯಾದ ನಾರದರು **ಸುರಕಾರ್ಯ ಹೇತೋಃ** ದೇವತೆಗಳ ಕಾರ್ಯವಾದ ಕಂಸವಧೆಯ ನಿಮಿತ್ತದಿಂದ **ಈಶಪಿತ್ರಾ** ಕೃಷ್ಣನ ತಂದೆಯಾದ ವಸುದೇವನಿಂದ **ಯತ್** ಏನೆಲ್ಲಾ ಮಾಡಲ್ಪಟ್ಟಿತ್ತೋ **ತತ್ ಸರ್ವಂ** ಆ ಎಲ್ಲವನ್ನೂ **ಕಂಸಾಯ** ಕಂಸನಿಗೆ **ಅವಿದತ್** ಹೇಳಿದನು.

**ತಾತ್ಪರ್ಯ :-** ಹೀಗೆ ಅನಂತಶಕ್ತಿಯುಳ್ಳ ಸಕಲ ಜಗತ್ತಿನೊಡೆಯನಾದ ಕೃಷ್ಣನು ಗೋಕುಲದಲ್ಲಿ ಯಾರಿಂದಲೂ ಮಾಡಲಶಕ್ಯವಾದ ಕರ್ಮಗಳನ್ನು ಮಾಡುತ್ತಾ ಲೀಲೆಯಿಂದ ವಿಹರಿಸುತ್ತಿದ್ದನು. ಆಗ ಕೃಷ್ಣನು ಇನ್ನು ಮಧುರೆಗೆ ಹೋಗಿ ಕಂಸ ವಧ ಮುಂತಾದ ದೇವಕಾರ್ಯಗಳನ್ನು ಮಾಡಬೇಕೆಂಬ ದೇವತೆಗಳ ಉದ್ದೇಶಕ್ಕಾಗಿ ಕಂಸನ ಹತ್ತಿರ ಹೋಗಿ ವಸುದೇವ ಹಿಂದೆ ಮಾಡಿದ ಎಲ್ಲಾ ಕಾರ್ಯಗಳನ್ನು ಹೇಳಿದನು.

ಶ್ರುತ್ವಾಽತಿಕೋಪರಭಸೋಚ್ಚಲಿತಃ ಸ ಕಂಸೋ
ಬಧ್ವಾ ಸಭಾರ್ಯಮಥ ಶೂರಜಮುಗ್ರಕರ್ಮಾ ।
ಅಕ್ರೂರಮಾಶ್ವದಿಶದಾನಯನಾಯ ವಿಷ್ಣೋ
ರಾಮಾನ್ವಿತಸ್ಯ ಸಹ ಗೋಪಗಣೈ ರಥೇನ ॥ ೮೪ ॥

**ಅರ್ಥ** :- **ಶ್ರುತ್ವಾ** ನಾರದ ಎಲ್ಲಾ ಮಾತನ್ನು ಕೇಳಿ **ಕೋಪರಭ ಸೋಚ್ಚಲಿತಃ** ಕೋಪಾವೇಶದ ಭರದಿಂದ ಎದ್ದ **ಉಗ್ರಕರ್ಮಾ ಸಃ ಕಂಸಃ** ಕ್ರೂರಕರ್ಮಿಯಾದ ಆ ಕಂಸನು **ಸಭಾರ್ಯಾಂ** ದೇವಕಿಯೊಂದಿಗೆ **ಶೂರಜಂ** ವಸುದೇವನನ್ನು **ಬಧ್ವಾ** ಬಂಧಿಸಿ **ಅಥ** ಅನಂತರ **ರಥೇನ** ರಥದಿಂದ **ರಾಮಾನ್ವಿತಸ್ಯ** ಬಲರಾಮನೊಂದಿಗೆ ಕೂಡಿದ **ಗೋಪಗಣೈಃ ಸಹ** ಗೋಪಾಲ ರಿಂದ ಕೂಡಿದ **ವಿಷ್ಣೋಃ** ಶ್ರೀಕೃಷ್ಣನ **ಆನಯನಾಯ** ಕರೆತರುವಿಕೆಗಾಗಿ **ಆಶು** ಕೊಡಲೇ **ಅಕ್ರೂರಂ** ಅಕ್ರೂರನನ್ನು **ಆದಿಶತ್** ಅಪ್ಪಣೆ ಮಾಡಿದನು.

**ತಾತ್ಪರ್ಯ** :- ನಾರದ ಮುಖದಿಂದ ವಸುದೇವ ಮಾಡಿದ ವಂಚನೆ ಯನ್ನು ಕೇಳಿ ಕೋಪವೇಗದಿಂದ ದೇಹವೆಲ್ಲಾ ಕಂಪಿಸಿದವನಾಗಿ ಕೂಡಲೇ ವಸುದೇವ ದೇವಕಿಯರನ್ನು ಬಂದಿಸಿದನು. ನಂತರ ಗೋಪರೊಂದಿಗೆ ಬಲರಾಮನೊಂದಿಗೆ ಕೂಡಿದ ಕೃಷ್ಣನನ್ನು ಕರೆತರುವುದಕ್ಕಾಗಿ ಅಕ್ರೂರನಿಗೆ ಅಪ್ಪಣೆ ಮಾಡಿದನು.

ಸಂಸೇವನಾಯ ಸ ಹರೇರಭವತ್ ಪುರೈವ
ನಾಮ್ನಾ ಕಿಶೋರ ಇತಿ ಯಃ ಸುರಗಾಯನೋಽಭೂತ್ ।
ಸ್ವಾಯಂಭುವಸ್ಯ ಚ ಮನೋಃ ಪರಮಾಂಶಯುಕ್ತ
ಆವೇಶಯುಕ್ ಕಮಲಜಸ್ಯ ಬಭೂವ ವಿದ್ವಾನ್ ॥ ೮೫ ॥

**ಅರ್ಥ** :- **ಪುರಾ** ಹಿಂದೆ **ನಾಮ್ನಾ** ಹೆಸರಿನಿಂದ **ಕಿಶೋರ ಇತಿ** ಕಿಶೋರ ಎಂದು. **ಯಃ** ಯಾವನು **ಸುರಗಾಯಕಃ ಅಭೂತ್** ದೇವತೆಗಳ ಗಾಯಕನಾದ ಗಂಧರ್ವನಾಗಿದ್ದನೋ, **ಸಃ** ಅವನು **ಹರೇಃ** ಭಗವಂತನ **ಸಂಸೇವನಾಯ** ಏವ ಸೇವೆಗಾಗಿಯೇ **ಸ್ವಾಯಂಭುವಸ್ಯ** ಸ್ವಾಯಂಭುವ **ಮನೋಃ** ಮನುವಿನ **ಪರಮಾಂಶಯುಕ್ತಃ** ಉತ್ತಮ ಅಂಶಯುಕ್ತನಾಗಿ **ಕಮಲ ಜಸ್ಯ** ಚತುರ್ಮುಖ ಬ್ರಹ್ಮನ **ಆವೇಶಯುಕ್ ಚ** ಆವೇಶದಿಂದ ಕೂಡಿದವ ನಾಗಿಯೂ **ಅಭವತ್** ಹುಟ್ಟಿದ್ದನು **ವಿದ್ವಾನ್** ಜ್ಞಾನಿಯು **ಬಭೂವ** ಆಗಿದ್ದನು.

**ತಾತ್ಪರ್ಯ** :- ಈ ಅಕ್ರೂರನು ಹಿಂದೆ ಕಿಶೋರ ಎಂಬ ದೇವಗಂಧರ್ವನಾಗಿದ್ದನು. ಅವನು ಹರಿಯ ಸೇವೆಗಾಗಿ ಸ್ವಾಯಂಭುವ ಮನುವಿನ ಉತ್ತಮ ಅಂಶ ಹಾಗೂ ಚತುರ್ಮುಖಬ್ರಹ್ಮನ ಆವೇಶದಿಂದಲೂ ಕೂಡಿದವನಾಗಿ ಹುಟ್ಟಿದ್ದನು. ಒಳ್ಳೆ ಜ್ಞಾನಿಯೂ ಆಗಿದ್ದನು.

**ಸೋಽಕ್ರೂರ ಇತ್ಯಭವದುತ್ತಮಪೂಜ್ಯಕರ್ಮಾ**
**ವೃಷ್ಣಿಷ್ವಥಾಽಪ ಸ ಹಿ ಭೋಜಪತೇಶ್ಚ ಮಂತ್ರೀ ।**
**ಆದಿಷ್ಟ ಏವ ಜಗದೀಶ್ವರದೃಷ್ಟಿಹೇತೋಃ**
**ಆನಂದಪೂರ್ಣಸುಮನಾ ಅಭವತ್ ಕೃತಾರ್ಥಃ ॥ ೮೬ ॥**

**ಅರ್ಥ** :- **ಉತ್ತಮ ಪೂಜ್ಯ ಕರ್ಮಾ** ಉತ್ತಮವಾದ ಪೂಜಾವಿಷಯಕವಾದ ಕರ್ಮಗಳನ್ನು ಮಾಡುತ್ತಿದ್ದ **ಸಃ** ಅವನು **ವೃಷ್ಣಿಷು** ಯಾದವರಲ್ಲಿ **ಅಕ್ರೂರ ಇತಿ** ಅಕ್ರೂರನೆಂದು **ಅಭವತ್** ಆಗಿದ್ದನು **ಚ** ಮತ್ತು ಭೂ **ಜಡತೌ** ಕಂಸನ ಮಂತ್ರಿ **ಮಂತಿರಯು ಆಸ** ಆಗಿದ್ದನು **ಆದಿಷ್ಟವಮ್** ಕಂಸನ ಆಜ್ಞೆ ಬಂದೊಡನೇ **ಸಃ ಅಕ್ರೂನು** ಜಗದೀಶ್ವರ **ದೃಷ್ಟಿಹೇತೋಃ** ಕೃಷ್ಣನ ದರ್ಶನವಾಗುವುದೆಂಬ ಕಾರಣದಿಂದ **ಆನಂದಪೂರ್ಣ ಸುಮನಾಃ ಸನ್** ಆನಂದದಿಂದ ತುಂಬಿದ ಮನಸ್ಸುಳ್ಳವನಾದವನಾಗಿ, **ಕೃತಾರ್ಥಃ** ಕೃತಕೃತ್ಯನು **ಅಭವತ್** ಆದನು.

**ತಾತ್ಪರ್ಯ** :- ಆ ಕಿಶೋರನೆಂಬ ಗಂಧರ್ವಸೇ ಯಾದವರಲ್ಲಿ ಅಕ್ರೂರನೆಂಬ ಹೆಸರಿನಿಂದ ಹುಟ್ಟಿದನು. ಅವನು ಕಂಸನ ಮಂತ್ರಿಯೂ ಆಗಿದ್ದನು. ಸದಾಕಾಲ ಸಜ್ಜನರಿಗೆ ಸಮ್ಮತವಾಗುವ ದೇವತೆಗಳಿಗೆ ಇಷ್ಟವಾಗುವ ಕರ್ಮಗಳನ್ನೆ ಮಾಡುತ್ತಿದ್ದನು. ಕಂಸನ ಮಂತ್ರಿಯೂ ಆಗಿದ್ದ ಅವನು ಕಂಸನು ಕೃಷ್ಣನನ್ನು ಕರೆತರುವಂತೆ ಆಜ್ಞೆ ಮಾಡಿದ ಕೂಡಲೇ ಭಗವಂತನ ದರ್ಶನಾಗುವುದೆಂಬ ದೃಷ್ಟಿಯಿಂದ ಆನಂದ ತುಂಬಿದ ಮನಸ್ಸಿನಿಂದ ಕೃತಕೃತ್ಯಾಭಾವವನ್ನು ತಳೆದನು.

**ಆರುಹ್ಯ ತದ್ರಥವರಂ ಭಗವತ್ಪದಾಬ್ಜ-**
**ಮಬ್ಜೋದ್ಭವಪ್ರಣತಮಂತರಮಂತರೇಣ ।**
**ಸಂಚಿಂತಯನ್ ಪಥಿ ಜಗಾಮ ಸ ಗೋಷ್ಠಮಾರಾದ್**
**ದೃಷ್ಟ್ವಾ ಪದಾಂತಕಿಭುವಂ ಮುಮುದೇ ಪರಸ್ಯ ॥ ೮೭ ॥**

**ಅರ್ಥ** :- **ಸಃ** ಆ ಅಕ್ರೂನು, **ತದ್ರಥವರಂ** ಕೃಷ್ಣನಿಗಾಗಿ ಕೊಟ್ಟ ಶ್ರೇಷ್ಠರಥ ವನ್ನು **ಆರುಹ್ಯ** ಏರಿ **ಅಭ್ಜೋದ್ಭವ ಪ್ರಣತಂ** ಬ್ರಹ್ಮದೇವರು ವಂದಿಸುವ, **ಭಗವತ್ ಪದಾಬ್ಜಂ** ಭಗವಂತನ ಪಾದಕಮಲವನ್ನು **ಅಂತರಮಂತರೇಣ** ಅವಕಾಶವಿಲ್ಲದಂತೆ (ನಿರಂತರವಾಗಿ) **ಪಥಿಃ** ದಾರಿಯಲ್ಲ **ಸಂಚಿಂತಯನ್** ಧ್ಯಾನಿಸುತ್ತಾ **ಗೋಷ್ಠಂ** ಗೋಕುಲವನ್ನು **ಜಗಾಮ** ಹೋದನು. **ಆರಾತ್** ಗೋಕುಲದ ಸಮೀಪದಲ್ಲಿ, **ಪರಸ್ಯ** ಕೃಷ್ಣನ **ಪದಾಂಕಿತ ಭುವಂ** ಪಾದಚಿಹ್ನೆಯಿಂದ ಕೂಡಿದ ಭೂಮಿಯನ್ನು **ದೃಷ್ಟ್ವಾ** ನೋಡಿ **ಮುಮುದೇ** ಸಂತೋಷಪಟ್ಟನು.

**ತಾತ್ಪರ್ಯ** :- ಆ ಅಕ್ರೂರನು ಕಂಸನು ಕೃಷ್ಣನನ್ನು ಕರೆತರಲು ಕೊಟ್ಟ ಶ್ರೇಷ್ಠ ರಥವನ್ನು ಏರಿ ಬ್ರಹ್ಮನಿಂದ ಸೇವಿಸಲ್ಪಡುವ ಭಗವಂತನ ಪಾದ ಕಮಲವನ್ನು ನಿರಂತರವಾಗಿ ಮಾರ್ಗದಲ್ಲಿ ಧ್ಯಾನಿಸುತ್ತಾ ಗೋಕುಲವನ್ನು ಸೇರಿ ಗೋಕುಲದ ದ್ವಾರದಲ್ಲಿ ಭಗವಂತನ ಪಾದಚಿಹ್ನೆಗಳನ್ನು ನೋಡಿ ಸಂತೋಷಪಟ್ಟನು.

**ಸೋಽವೇಷ್ಟತಾತ್ರ ಜಗದೀಶಿತುರಂಗಸಂಗ-**
**ಲಬ್ಧೋಚ್ಚಯೇನ ನಿಖಿಲಾಘವಿದಾರಣೇಷು ।**
**ಪಾಂಸುಷ್ವಜೇಶಪುರುಹೂತಮುಖೋಚ್ಚವಿದ್ಯುದ್-**
**ಭ್ರಾಜತ್ಕಿರೀಟಮಣಿಲೋಚನಗೋಚರೇಷು ॥ ೮೮ ॥**

**ಅರ್ಥ** :- **ಸಃ** ಆ ಅಕ್ರೂರನು **ಜಗದೀಶಿತುಃ** ಜಗನ್ನಾಥನ **ಅಂಗಸಂಗಾತ್** ಪಾದಾಂಗಸ್ಪರ್ಶದಿಂದ **ಲಬ್ಧೋಚ್ಚಯೇನ** ಲಭಿಸಲ್ಪಟ್ಟ ಮಹತ್ತ್ವದಿಂದ **ನಿಖಿಲಾಘ ವಿದಾರಣೇಷು** ಸಕಲಪಾಪಪರಿಹಾರಕವಾದ **ಅಜೇಶ ಪುರುಹೂತ ಮುಖೋಚ್ಚವಿದ್ಯುದ್‌ಭ್ರಾಜತ್ಕಿರೀಟಮಣಿಲೋಚನಗೋಚರೇಷು ಅಜೇಶ** ಬ್ರಹ್ಮರುದ್ರ **ಪುರೂಹೂತ** ಇಂದ್ರನೇ **ಮುಖ** ಮೊದಲಾದ **ಉಚ್ಚ** ಶ್ರೇಷ್ಠ ದೇವತೆಗಳ **ವಿದ್ಯುತ್‌ಭ್ರಾಜತ್** ಮಿಂಚಿನ ಕಾಂತಿಯ **ಕಿರೀಟಮಣಿ** ಕಿರೀಟದ ಮಣಿಗಳಲ್ಲಿಯೂ **ಲೋಚನ** ಕಣ್ಣುಗಳಲ್ಲಿಯೂ **ಗೋಚರೇಷು** ಗೋಚರಿಸುತ್ತಿದ್ದ **ಪಾಂಸುಷು** ಧೂಳುಗಳಲ್ಲಿ **ಅವೇಷ್ಟತ** ಹೊರಳಾಡಿದನು.

**ತಾತ್ಪರ್ಯ** :- ಅಕ್ರೂರನು ಧೂಳಿನಲ್ಲಿ ಕೃಷ್ಣನ ಪಾದಗಳನ್ನು ಕಂಡೊಡನೆ ಭಕ್ತಿ ಪರವಶನಾದನು. ಕೃಷ್ಣನ ಪಾದಧೂಳಿಯನ್ನು ಧರಿಸುವುದಕ್ಕಾಗಿ

ಯಾವಾಗಲೂ ಬ್ರಹ್ಮರುದ್ರ ಇಂದ್ರ ಮುಂತಾದ ದೇವತೆಗಳ ಕೃಷ್ಣನ ಪಾದವನ್ನು ಮುಟ್ಟಲು ಬಗ್ಗುತ್ತಾರೆ. ಆಗ ಅವರ ಮಿಂಚಿನಂತಿರುವ ಕಿರೀಟ ಮಣಿಗಳಲ್ಲಿ ಹಾಗೂ ಅವರ ಮಿಂಚಿನ ಕಾಂತಿಯ ಕಣ್ಣುಗಳಲ್ಲಿ ಹರಿಯಪಾದದ ದೂಳಿನ ದರ್ಶನವಾಗುತ್ತದೆ. ಅಂತಹ ಪವಿತ್ರವಾದ ಭಗವಂತನ ಪಾದದ ಧೂಳು ಸಕಲಪಾಪಪರಿಹಾರಕವಾಗಿದೆ. ಅಂತಹ ಪಾದದೂಳಿಯಲ್ಲಿ ಅಕ್ರೂರ ಹೊರಳಾಡಿದ.

**ಸೋಽಪಶ್ಯತಾಥ ಜಗದೇಕಗುರುಂ ಸಮೇತ-**
**ಮಗ್ರೋದ್ಭವೇನ ಭುವಿ ಗಾ ಅಪಿ ದೋಹಯಂತಮ್ ।**
**ಆನಂದಸಾಂದ್ರತನುಮಕ್ಷಯಮೇನಮೀಕ್ಷ್ಯ**
**ಹೃಷ್ಟಃ ಪಪಾತ ಪದಯೋಃ ಪುರುಷೋತ್ತಮಸ್ಯ ॥ ೮೯ ॥**

**ಅರ್ಥ :-** **ಅಥ** ಅನಂತರ **ಸಃ** ಆ ಅಕ್ರೂರನು **ಜಗದೇಕಗುರುಂ ಅಪಿ** ಜಗತ್ತಿಗೇ ಮುಖ್ಯಗುರುವಾಗಿದ್ದರೂ **ಅಗ್ರೋದ್ಭವೇನ** ಅಣ್ಣನಾದ ಬಲರಾಮ ನಿಂದ **ಸಮೇತಂ** ಕೂಡಿದ, **ಭುವಿ** ಭೂಮಿಯಲ್ಲಿ **ಗಾಃ** ಹಸುವನ್ನು **ದೋಹ ಯಂತಂ** ಕರೆಯುತ್ತಿರುವ ಕೃಷ್ಣನನ್ನು **ಅಪಶ್ಯತ್** ನೋಡಿದನು. **ಆನಂದ ಸಾಂದ್ರ ತನುಂ** ಆನಂದದಿಂದ ಪೂರ್ಣ ಶರೀರಿಯಾದ **ಅಕ್ಷಯಂ** ನಾಶರಹಿತನಾದ **ಏನಂ** ಈ ಕೃಷ್ಣನನ್ನು **ಈಕ್ಷ್ಯ** ನೋಡಿ **ಹೃಷ್ಟಃ ಸನ್** ಸಂತೋಷಗೊಂಡವನಾಗಿ **ಪುರುಷೋತ್ತಮಸ್ಯ** ಸರ್ವೋತ್ತಮನ **ಪದಯೋಃ** ಪಾದಗಳಲ್ಲಿ **ಪಪಾತ** ಬಿದ್ದನು.

**ತಾತ್ಪರ್ಯ :-** ನಂತರ ಅಕ್ರೂರನು ಜಗತ್ತಿಗೆ ಮುಖ್ಯಸ್ವಾಮಿಯಾಗಿದ್ದರೂ ಅಣ್ಣನೊಂದಿಗೆ ಹಸುವಿನ ಹಾಲು ಕರೆಯುತ್ತಿದ್ದ ಕೃಷ್ಣನನ್ನು ಕಂಡನು. ಆನಂದಪರಿಪೂರ್ಣದೇಹಿಯಾದ ನಾಶರಹಿತನಾದ ಕೃಷ್ಣನನ್ನು ಕಂಡು ಹರ್ಷಗೊಂಡ ಅಕ್ರೂರ ಕೃಷ್ಣನ ಪಾದಗಳಲ್ಲಿ ಬಿದ್ದನು.

**ಉತ್ಥಾಪ್ಯ ತಂ ಯದುಪತಿಃ ಸಬಲೋ ಗೃಹಂ ಸ್ವಂ**
**ನೀತ್ವೋಪಚಾರಮಖಿಲಂ ಪ್ರವಿಧಾಯ ತಸ್ಮಿನ್ ।**
**ನಿತ್ಯೋದಿತಾಕ್ಷಯಚಿದಪ್ಯಖಿಲಂ ಚ ತಸ್ಮಾ-**
**ಚ್ಛುಶ್ರಾವ ಲೋಕಚರಿತಾನುವಿಡಂಬನೇನ ॥ ೯೦ ॥**

**ಅರ್ಥ** :- ಸಬಲಃ ಬಲರಾಮ ಸಹಿತನಾದ **ಯದುಪತಿಃ** ಕೃಷ್ಣನು **ತಂ** ಆ ಅಕ್ರೂರನನ್ನು **ಉತ್ಥಾಪ್ಯ** ಎಬ್ಬಿಸಿ **ಸ್ವಂ ಗೃಹಂ** ತನ್ನ ಮನೆಯನ್ನು ಕುರಿತು **ನೀತ್ವಾ** ಕರೆದುಕೊಂಡು ಹೋಗಿ, **ತಸ್ಮಿನ್** ಆ ಅಕ್ರೂರನಲ್ಲಿ **ಅಖಿಲಂ** ಎಲ್ಲಾ **ಉಪಚಾರಂ** ಷೋಡಶೋಪಚಾರಗಳನ್ನು **ಪ್ರವಿಧಾಯ** ಮಾಡಿ, **ನಿತ್ಯೋದಿ ತಾಕ್ಷಯಚಿದಪಿ** ನಿತ್ಯವ್ಯಕ್ತವಾದ ಅಕ್ಷಯಜ್ಞಾನವುಳ್ಳವನಾದರೂ ಕೂಡ, **ಸಃ** ಆ ಶ್ರೀಕೃಷ್ಣನು **ತಸ್ಮಾತ್** ಅಕ್ರೂರನಿಂದ **ಲೋಕಚರಿತಾನುವಿಡಂಬನೇನ** ಲೋಕ ವ್ಯವಹಾರವನ್ನು ಅನುಕರಿಸುವವನಾಗಿ **ಅಖಿಲಂ** ಎಲ್ಲಾ ವಿಷಯವನ್ನು **ಶುಶ್ರಾವ** ಕೇಳಿದನು.

**ತಾತ್ಪರ್ಯ** :- ಹೀಗೆ ಅಕ್ರೂರನು ಭಕ್ತಿಯಿಂದ ಕೃಷ್ಣನ ಪಾದಗಳಲ್ಲಿ ಬೀಳುತ್ತಿರಲು ಕೃಷ್ಣನು ಬಲ ರಾಮನೊಂದಿಗೆ ಅವನನ್ನು ಎಬ್ಬಿಸಿ ಮನೆಗೆ ಕರೆದುಕೊಂಡು ಹೋಗಿ ಷೋಡಶೋಪಚಾರ ಪೂಜೆಗಳನ್ನು ಮಾಡಿ ಅವನನ್ನು ಸತ್ಕರಿಸಿದನು. ನಂತರ ತಾನು ಎಲ್ಲಾ ವಿಷಯಗಳನ್ನು ತಿಳಿದ ಸರ್ವಜ್ಞನಾದರೂ ಲೋಕವಿಡಂಬನೆಗಾಗಿ ಅಕ್ರೂರನಿಂದ ಮಧುರೆಯ ವಿಷಗಳನ್ನು ಕೇಳಿದನು.

**ಶ್ರುತ್ವಾಸ ಕಂಸಹೃದಿ ಸಂಸ್ಥಿತಮಬ್ಜನಾಭಃ**
**ಪ್ರಾತಸ್ತು ಗೋಪಸಹಿತೋ ರಥಮಾರುರೋಹ ।**
**ರಾಮಶ್ವಫಲ್ಕತನಯಾಭಿಯುತೋ ಜಗಾಮ**
**ಯಾನೇನ ತೇನ ಯಮುನಾತಟಮವ್ಯಯಾತ್ಮಾ ॥ ೯೧ ॥**

**ಅರ್ಥ** :- **ಅಬ್ಜನಾಭಃ** ಕಮಲನಾಭನಾದ, **ಸಃ** ಆ ಶ್ರೀಕೃಷ್ಣನು **ಕಂಸಹೃದಿ** ಕಂಸನ ಮನೋಗತವನ್ನು **ಶ್ರುತ್ವಾ ತು** ಕೇಳಿ **ಪ್ರಾತಃ** ಬೆಳಿಗ್ಗೆ **ಗೋಪಸಹಿತಃ** ಗೊಲ್ಲರೊಂದಿಗೆ **ರಥಂ** ರಥವನ್ನು **ಆರುರೋಹ** ಏರಿದನು. **ರಾಮಶ್ವಫಲ್ಕ ತನಯಾಭಿಯುತಃ** ಬಲರಾಮ ಮತ್ತು ಶ್ವಫಲ್ಕನ ಮಗನಾದ ಅಕ್ರೂರನೊಂದಿಗೆ ಕೂಡಿಕೊಂಡು **ಅವ್ಯಯಾತ್ಮಾ** ನಾಶರಹಿತವಾದ ಶರೀರವುಳ್ಳ ಕೃಷ್ಣನು **ತೇನ** ಆ ಕಂಸನಿಂದ ಕಳುಹಿಸಲ್ಪಟ್ಟ **ಯಾನೇನ** ರಥದಿಂದ **ಯಮುನಾತಟಂ** ಯಮುನೆಯ ತೀರವನ್ನು **ಜಗಾಮ** ಪ್ರಯಾಣ ಮಾಡಿದನು.

**ತಾತ್ಪರ್ಯ** :- ಅಕ್ರೂರನೊಂದಿಗೆ ಕ್ಷೇಮ ಸಮಾಚಾರ ಕೇಳಿ ತಿಳಿದ ಕೃಷ್ಣನು ನಂತರ ಅಕ್ರೂರನ ಮೂಲಕ ಕಂಸನ ಮನೋಗತವನ್ನು ಕೇಳಿ ತಿಳಿದನು.

ತನ್ನನ್ನು ಬಲರಾಮ ಗೋಪರೊಂದಿಗೆ ಕರೆತರುವಂತೆ ಕಂಸ ತಿಳಿಸಿದ್ದನ್ನು ಕೇಳಿ ತಿಳಿದ ಕೃಷ್ಣ ಬಲರಾಮನು ಹಾಗೂ ಅಕ್ರೂರನೊಂದಿಗೆ ಎಲ್ಲಾ ಗೊಲ್ಲರನ್ನು ಕೂಡಿಕೊಂಡು ಕಂಸ ಕಳುಹಿಸಿದ ರಥವನ್ನು ಏರಿ ಯಮುನೆಯ ತೀರಕ್ಕೆ ಪ್ರಯಾಣ ಬೆಳೆಸಿದನು.

**ಸಂಸ್ಥಾಪ್ಯ ತೌ ರಥವರೇ ಜಗತಾऽಭಿವಂದ್ಯೌ**
**ಶ್ವಾಫಲ್ಕಿರಾಶ್ವವತತಾರ ಯಮಸ್ವಸಾರಮ್ ।**
**ಸ್ನಾತ್ವಾ ಸ ತತ್ರ ವಿಧಿನೈವ ಕೃತಾಘಮರ್ಷಃ**
**ಶೇಷಾಸನಂ ಪರಮಪೂರುಷಮತ್ರ ಚೈಕ್ಷತ್ ॥ ೯೨ ॥**

**ಅರ್ಥ** :- **ಶ್ವಾಫಲ್ಕಿಃ** ಅಕ್ರೂರನು **ಯಮಸ್ವಸಾರಂ** ಯಮುನಾ ನದಿಯನ್ನು ಹೊಂದಿ **ಗತಾಭಿವಂದ್ಯೌ** ಜಗತ್ತಿನಲ್ಲಿ ಎಲ್ಲರಿಂದಲೂ ನಮಿಸಲ್ಪಡುವ **ತೌ** ಆರಾಮಕೃಷ್ಣರನ್ನು **ರಥವರೇ** ಶ್ರೇಷ್ಠರಥದಲ್ಲಿ **ಸಂಸ್ಥಾಪ್ಯ** ಇರಿಸಿ **ಆಶು** ಕೂಡಲೇ **ಅವತತಾರ** ಇಳಿದನು **ಸಃ** ಆ ಅಕ್ರೂರನು **ತತ್ರ** ಆ ಯಮುನಾನದಿಯಲ್ಲಿ **ವಿಧಿನೈವ** ವಿಧಿಪೂರ್ವಕವಾಗಿ **ಸ್ನಾತ್ವಾ** ಸ್ನಾನಮಾಡಿ **ಕೃತಾಘಮರ್ಷಃ** ಮಾಡಲ್ಪಟ್ಟ **ಅಘಮರ್ಷಣ** ಸ್ನಾನ ರೂಪ ವಿಧಿಯುಳ್ಳವನಾಗಿ **ಅತ್ರ ಚ** ಆ ಯಮುನೆಯಲ್ಲಾದರೂ, **ಶೇಷಾಸನಂ** ಶೇಷಶಾಯಿಯಾದ **ಪರಮಪೂರುಷಂ** ಪರಮಪುರುಷನಾದ ಕೃಷ್ಣನನ್ನು **ಐಕ್ಷತ್** ಕಂಡನು.

**ತಾತ್ಪರ್ಯ** :- ಅಕ್ರೂರನು ಯಮುನೆಯ ತೀರಕ್ಕೆ ಬಂದಾಗ ಆ ಯಮುನೆಯಲ್ಲಿ ಸ್ನಾನಾದಿಗಳನ್ನು ಮಾಡಬೇಕೆಂದು ಕೂಡಲೇ ಅಕ್ರೂರನು ರಾಮಕೃಷ್ಣರನ್ನು ಆ ರಥದಲ್ಲಿಯೇ ಕುಳ್ಳಿರಿಸಿ ತಾನು ಯಮುನೆಯಲ್ಲಿ ಇಳಿದು ಸ್ನಾನ ಅಘಮರ್ಷಣ ಸ್ನಾನ ಮೊದಲಾದ ವಿಧಿಯನ್ನು ಪೂರೈಸಿದನು. ಅಲ್ಲಿಯೇ ಯಮುನೆಯಲ್ಲಿ ಅರ್ಘ್ಯವನ್ನು ಕೊಡುವಾಗ ಯಮುನೆಯ ನೀರಿನಲ್ಲಿ ಶೇಷಶಾಯಿಯಾದ ಕೃಷ್ಣನನ್ನು ಕಂಡನು.

**ನಿತ್ಯಂ ಹಿ ಶೇಷಮಭಿಪಶ್ಯತಿ ಸಿದ್ಧಮಂತ್ರೋ**
**ದಾನೇಶ್ವರಃ ಸ ತು ತದಾ ದದೃಶೇ ಹರಿಂ ಚ ।**
**ಅಗ್ರೇ ಹಿ ಬಾಲತನುಮೀಕ್ಷ್ಯ ಸ ಕೃಷ್ಣಮತ್ರ**
**ಕಿಂ ನಾಸ್ತಿ ಯಾನ ಇತಿ ಯಾನಮುಖೋ ಬಭೂವ ॥ ೯೩ ॥**

**ಅರ್ಥ** :- ಸಬಲಃ ಬಲರಾಮ ಸಹಿತನಾದ **ಯದುಪತಿಃ** ಕೃಷ್ಣನು **ತಂ** ಆ ಅಕ್ರೂರನನ್ನು **ಉತ್ಥಾಪ್ಯ** ಎಬ್ಬಿಸಿ **ಸ್ವಂ ಗೃಹಂ** ತನ್ನ ಮನೆಯನ್ನು ಕುರಿತು **ನೀತ್ವಾ** ಕರೆದುಕೊಂಡು ಹೋಗಿ, **ತಸ್ಮಿನ್** ಆ ಅಕ್ರೂರನಲ್ಲಿ **ಅಖಿಲಂ** ಎಲ್ಲಾ **ಉಪಚಾರಂ** ಷೋಡಶೋಪಚಾರಗಳನ್ನು **ಪ್ರವಿಧಾಯ** ಮಾಡಿ, **ನಿತ್ಯೋದಿತಾಕ್ಷಯಚಿದಪಿ** ನಿತ್ಯವ್ಯಕ್ತವಾದ ಅಕ್ಷಯಜ್ಞಾನವುಳ್ಳವನಾದರೂ ಕೂಡ, **ಸಃ** ಆ ಶ್ರೀಕೃಷ್ಣನು **ತಸ್ಮಾತ್** ಅಕ್ರೂರನಿಂದ **ಲೋಕಚರಿತಾನುವಿಡಂಬನೇನ** ಲೋಕ ವ್ಯವಹಾರವನ್ನು ಅನುಕರಿಸುವವನಾಗಿ **ಅಖಿಲಂ** ಎಲ್ಲಾ ವಿಷಯವನ್ನು **ಶುಶ್ರಾವ** ಕೇಳಿದನು.

**ತಾತ್ಪರ್ಯ** :- ಹೀಗೆ ಅಕ್ರೂರನು ಭಕ್ತಿಯಿಂದ ಕೃಷ್ಣನ ಪಾದಗಳಲ್ಲಿ ಬೀಳುತ್ತಿರಲು ಕೃಷ್ಣನು ಬಲ ರಾಮನೊಂದಿಗೆ ಅವನನ್ನು ಎಬ್ಬಿಸಿ ಮನೆಗೆ ಕರೆದುಕೊಂಡು ಹೋಗಿ ಷೋಡಶೋಪಚಾರ ಪೂಜೆಗಳನ್ನು ಮಾಡಿ ಅವನನ್ನು ಸತ್ಕರಿಸಿದನು. ನಂತರ ತಾನು ಎಲ್ಲಾ ವಿಷಯಗಳನ್ನು ತಿಳಿದ ಸರ್ವಜ್ಞನಾದರೂ ಲೋಕವಿಡಂಬನೆಗಾಗಿ ಅಕ್ರೂರನಿಂದ ಮಧುರೆಯ ವಿಷಗಳನ್ನು ಕೇಳಿದನು.

**ಶ್ರುತ್ವಾಸ ಕಂಸಹೃದಿ ಸಂಸ್ಥಿತಮಬ್ಜನಾಭಃ**
**ಪ್ರಾತಸ್ತು ಗೋಪಸಹಿತೋ ರಥಮಾರುರೋಹ ।**
**ರಾಮಶ್ವಫಲ್ಕತನಯಾಭಿಯುತೋ ಜಗಾಮ**
**ಯಾನೇನ ತೇನ ಯಮುನಾತಟಮವ್ಯಯಾತ್ಮಾ ॥ ೯೧ ॥**

**ಅರ್ಥ** :- **ಅಬ್ಜನಾಭಃ** ಕಮಲನಾಭನಾದ, **ಸಃ** ಆ ಶ್ರೀಕೃಷ್ಣನು **ಕಂಸಹೃದಿ** ಕಂಸನ ಮನೋಗತವನ್ನು **ಶ್ರುತ್ವಾ ತು** ಕೇಳಿ **ಪ್ರಾತಃ** ಬೆಳಿಗ್ಗೆ **ಗೋಪಸಹಿತಃ** ಗೊಲ್ಲರೊಂದಿಗೆ **ರಥಂ** ರಥವನ್ನು **ಆರುರೋಹ** ಏರಿದನು. **ರಾಮಶ್ವಫಲ್ಕ ತನಯಾಭಿಯುತಃ** ಬಲರಾಮ ಮತ್ತು ಶ್ವಫಲ್ಕನ ಮಗನಾದ ಅಕ್ರೂರನೊಂದಿಗೆ ಕೂಡಿಕೊಂಡು **ಅವ್ಯಯಾತ್ಮಾ** ನಾಶರಹಿತವಾದ ಶರೀರವುಳ್ಳ ಕೃಷ್ಣನು **ತೇನ** ಆ ಕಂಸನಿಂದ ಕಳುಹಿಸಲ್ಪಟ್ಟ **ಯಾನೇನ** ರಥದಿಂದ **ಯಮುನಾತಟಂ** ಯಮುನೆಯ ತೀರವನ್ನು **ಜಗಾಮ** ಪ್ರಯಾಣ ಮಾಡಿದನು.

**ತಾತ್ಪರ್ಯ** :- ಅಕ್ರೂರನೊಂದಿಗೆ ಕ್ಷೇಮ ಸಮಾಚಾರ ಕೇಳಿ ತಿಳಿದ ಕೃಷ್ಣನು ನಂತರ ಅಕ್ರೂರನ ಮೂಲಕ ಕಂಸನ ಮನೋಗತವನ್ನು ಕೇಳಿ ತಿಳಿದನು.

ತನ್ನನ್ನು ಬಲರಾಮ ಗೋಪರೊಂದಿಗೆ ಕರೆತರುವಂತೆ ಕಂಸ ತಿಳಿಸಿದ್ದನ್ನು ಕೇಳಿ ತಿಳಿದ ಕೃಷ್ಣ ಬಲರಾಮನು ಹಾಗೂ ಅಕ್ರೂರನೊಂದಿಗೆ ಎಲ್ಲಾ ಗೊಲ್ಲರನ್ನು ಕೂಡಿಕೊಂಡು ಕಂಸ ಕಳುಹಿಸಿದ ರಥವನ್ನು ಏರಿ ಯಮುನೆಯ ತೀರಕ್ಕೆ ಪ್ರಯಾಣ ಬೆಳೆಸಿದನು.

**ಸಂಸ್ಥಾಪ್ಯ ತೌ ರಥವರೇ ಜಗತಾಽಭಿವಂದ್ಯೌ**
**ಶ್ವಾಫಲ್ಕಿರಾಶ್ವವತತಾರ ಯಮಸ್ವಸಾರಮ್ ।**
**ಸ್ನಾತ್ವಾ ಸ ತತ್ರ ವಿಧಿನೈವ ಕೃತಾಘಮರ್ಷಃ**
**ಶೇಷಾಸನಂ ಪರಮಪೂರುಷಮತ್ರ ಚೈಕ್ಷತ್ ॥ ೯೨ ॥**

**ಅರ್ಥ** :- **ಶ್ವಾಫಲ್ಕಿಃ** ಅಕ್ರೂರನು **ಯಮಸ್ವಸಾರಂ** ಯಮುನಾ ನದಿಯನ್ನು ಹೊಂದಿ **ಗತಾಭಿವಂದ್ಯೌ** ಜಗತ್ತಿನಲ್ಲಿ ಎಲ್ಲರಿಂದಲೂ ನಮಿಸಲ್ಪಡುವ **ತೌ** ಆರಾಮಕೃಷ್ಣರನ್ನು **ರಥವರೇ** ಶ್ರೇಷ್ಠರಥದಲ್ಲಿ **ಸಂಸ್ಥಾಪ್ಯ** ಇರಿಸಿ **ಆಶು** ಕೂಡಲೇ **ಅವತತಾರ** ಇಳಿದನು **ಸಃ** ಆ ಅಕ್ರೂರನು **ತತ್ರ** ಆ ಯಮುನಾನದಿಯಲ್ಲಿ **ವಿಧಿನೈವ** ವಿಧಿಪೂರ್ವಕವಾಗಿ **ಸ್ನಾತ್ವಾ** ಸ್ನಾನಮಾಡಿ **ಕೃತಾಘಮರ್ಷಃ** ಮಾಡಲ್ಪಟ್ಟ **ಅಘಮರ್ಷಣ** ಸ್ನಾನ ರೂಪ ವಿಧಿಯುಳ್ಳವನಾಗಿ **ಅತ್ರ ಚ** ಆ ಯಮುನೆಯಲ್ಲಾದರೂ, **ಶೇಷಾಸನಂ** ಶೇಷಶಾಯಿಯಾದ **ಪರಮಪೂರುಷಂ** ಪರಮಪುರುಷನಾದ ಕೃಷ್ಣನನ್ನು **ಐಕ್ಷತ್** ಕಂಡನು.

**ತಾತ್ಪರ್ಯ** :- ಅಕ್ರೂರನು ಯಮುನೆಯ ತೀರಕ್ಕೆ ಬಂದಾಗ ಆ ಯಮುನೆಯಲ್ಲಿ ಸ್ನಾನಾದಿಗಳನ್ನು ಮಾಡಬೇಕೆಂದು ಕೂಡಲೇ ಅಕ್ರೂರನು ರಾಮಕೃಷ್ಣರನ್ನು ಆ ರಥದಲ್ಲಿಯೇ ಕುಳ್ಳಿರಿಸಿ ತಾನು ಯಮುನೆಯಲ್ಲಿ ಇಳಿದು ಸ್ನಾನ ಅಘಮರ್ಷಣ ಸ್ನಾನ ಮೊದಲಾದ ವಿಧಿಯನ್ನು ಪೂರೈಸಿದನು. ಅಲ್ಲಿಯೇ ಯಮುನೆಯಲ್ಲಿ ಅರ್ಘ್ಯವನ್ನು ಕೊಡುವಾಗ ಯಮುನೆಯ ನೀರಿನಲ್ಲಿ ಶೇಷಶಾಯಿಯಾದ ಕೃಷ್ಣನನ್ನು ಕಂಡನು.

**ನಿತ್ಯಂ ಹಿ ಶೇಷಮಭಿಪಶ್ಯತಿ ಸಿದ್ಧಮಂತ್ರೋ**
**ದಾನೇಶ್ವರಃ ಸ ತು ತದಾ ದದೃಶೇ ಹರಿಂ ಚ ।**
**ಅಗ್ರೇ ಹಿ ಬಾಲತನುಮೀಕ್ಷ್ಯ ಸ ಕೃಷ್ಣಮತ್ರ**
**ಕಿಂ ನಾಸ್ತಿ ಯಾನ ಇತಿ ಯಾನಮುಖೋ ಬಭೂವ ॥ ೯೩ ॥**

**ಅರ್ಥ** :- **ಸಿದ್ಧಮಂತ್ರಃ** ಸಿದ್ಧಿಸಲ್ಪಟ್ಟ **ಅಘಮರ್ಷಣ** ಮಂತ್ರವುಳ್ಳ **ದಾನೇಶ್ವರಃ** ಅಕ್ರೂರನು **ನಿತ್ಯಂ** ಯಾವಾಗಲೂ **ಶೇಷಂ** ಶೇಷನನ್ನು **ಅಭಿಪಶ್ಯತಿ** ನೋಡುತ್ತಿದ್ದನು. **ತದಾ** ಆ ಕ್ಷಣದಲ್ಲಿ **ಸ ತು** ಆ ಅಕ್ರೂರನಾದರೂ **ಹರಿಂಚ** ಹರಿಯನ್ನೂ ಕೂಡ, **ದದೃಶೇ** ನೋಡಿದನು. **ಅತ್ರ** ಈ ಯಮುನೆಯಲ್ಲಿ **ಅಗ್ರೇ** ತನ್ನ ಎದುರುಗಡೆ, **ಬಾಲತನುಂ** ಬಾಲರೂಪಿಯಾದ ಕೃಷ್ಣನನ್ನು **ಸಮೀಕ್ಷ್ಯ** ಕಂಡು **ಕೃಷ್ಣಃ** ಕೃಷ್ಣನು **ಯಾನೇ** ರಥದಲ್ಲಿ **ನಾಸ್ತಿಕಿಂ** ಇಲ್ಲವೇನೋ **ಇತಿ** ಎಂದು **ಯಾನಮುಖಃ** ರಥದ ಕಡೆಗೆ ಮುಖವುಳ್ಳವನು **ಬಭೂವ** ಆದನು.

**ತಾತ್ಪರ್ಯ** :- ಆ ಅಕ್ರೂರನು ಯಾವಾಗಲೂ ಅಘಮರ್ಷಣಮಂತ್ರ ದಿಂದ ಸ್ನಾನ ಮಾಡಿ ಅರ್ಘ್ಯ ಏನೂ ಕೊಡುವಾಗ ಆ ಮಂತ್ರದಲ್ಲಿ ಸಿದ್ಧಿಯಿದ್ದದ್ದರಿಂದ ಪ್ರತಿನಿತ್ಯ ಶೇಷನನ್ನು ನೋಡುತ್ತಿದ್ದನು. ಈ ದಿನ ಶೇಷನ ಜೊತೆಯಲ್ಲಿ ಹರಿಯನ್ನು ಕಂಡನು. ಅಷ್ಟೇ ಅಲ್ಲದೇ ಯಮುನೆಯ ನೀರಿನಲ್ಲಿ ತನ್ನ ಮುಂದೆ ಬಾಲರೂಪಿಯಾದ ಕೃಷ್ಣನನ್ನು ನೋಡಿ ಅರೇ ಕೃಷ್ಣ ರಥದಲ್ಲಿ ಇಲ್ಲವೇ ಎಂದು ರಥದ ಕಡೆ ಮುಖ ಮಾಡಿ ನೋಡಿದನು.

**ತತ್ರಾಪಿ ಕೃಷ್ಣಮಭಿವೀಕ್ಷ್ಯ ಪುನರ್ನಿಮಜ್ಜ್ಯ**
**ಶೇಷೋರುಭೋಗಶಯನಂ ಪರಮಂ ದದರ್ಶ ।**
**ಬ್ರಹ್ಮೇಶಶಕ್ರಮುಖದೇವಮುನೀಂದ್ರವೃಂದ-**
**ಸಂವಂದಿತಾಂಘ್ರಿಯುಗಮಿಂದಿರಯಾ ಸಮೇತಮ್ ॥ ೯೪ ॥**

**ಅರ್ಥ** :- **ತತ್ರಾಪಿ** ಆರಥದಲ್ಲಿಯೂ ಕೂಡ **ಕೃಷ್ಣಂ** ಕೃಷ್ಣನನ್ನು **ಅಭಿವೀಕ್ಷ್ಯ** ನೋಡಿ **ಪುನಃ** ಮತ್ತೆ **ನಿಮಜ್ಯ** ಮುಳುಗಿ, **ಶೇಷೋರುಭೋಗ ಶಯನಂ** ಶೇಷನ ಉತ್ತಮ ಶರೀರದಲ್ಲಿ ಪವಡಿಸಿದ **ಬ್ರಹ್ಮೇಶಶಕ್ರಮುಖದೇವ ಮುನೀಂದ್ರವೃಂದಸಂಸೇವಿತಾಂಘ್ರಿಯುಗಂ** ಬ್ರಹ್ಮ ರುದ್ರ ಇಂದ್ರ ಮೊದಲಾದ ದೇವತೆಗಳು ಶ್ರೇಷ್ಠ ಮುನಿಗಳ ಸಮೂಹದಿಂದ ಚೆನ್ನಾಗಿ ಸೇವಿಸಲ್ಪಡುವ ಪಾದಯುಗ್ಮಗಳುಳ್ಳ **ಇಂದಿರಯಾ** ಲಕ್ಷ್ಮಿಯಿಂದ **ಸಮೇತಂ** ಸಹಿತನಾದ **ಪರಮಂ** ಪರಮಾತ್ಮನಾದ ಕೃಷ್ಣನನ್ನು **ದದರ್ಶ** ಕಂಡನು.

**ತಾತ್ಪರ್ಯ** :- ರಥವನ್ನು ನೋಡಿದಾಗ ಅಲ್ಲಿಯೂ ಕೃಷ್ಣನಿರುವುದನ್ನು ಕಂಡು ಪುನಃ ಯಮುನೆಯಲ್ಲಿ ಮುಳುಗಿದನು. ಅಲ್ಲಿ ಮತ್ತೆ ಬ್ರಹ್ಮರುದ್ರೇಂದ್ರಾದಿ

ದೇವತೆಗಳು ಹಾಗೂ ಋಷಿ ಶ್ರೇಷ್ಠ ಗಣಗಳಿಂದ ವಂದಿಸಲ್ಪಡುವ ಪಾದದ್ವಂದ್ವ ವುಳ್ಳ ರಮಾ ಸಹಿತನಾದ ಕೃಷ್ಣನನ್ನೇ ಕಂಡನು.

**ಸ್ತುತ್ವಾವರಸ್ತುತಿಭಿರವ್ಯಯಮಬ್ಜನಾಭಂ**
**ಸೋಽಂತರ್ಹಿತೇ ಭಗವತಿ ಸ್ವಕಮಾರುರೋಹ ।**
**ಯಾನಂ ಚ ತೇನ ಸಹಿತೋ ಭಗವಾನ್ ಜಗಾಮ**
**ಸಾಯಂ ಪುರೀಂ ಸಹಬಲೋ ಮಧುರಾಮನಂತಃ ॥ ೯೫ ॥**

**ಅರ್ಥ** :- ಸಃ ಆ ಅಕ್ರೂರನು **ಅವ್ಯಯಂ** ನಾಶರಹಿತನಾದ **ಅಬ್ಜನಾಭಂ** ಪದ್ಮನಾಭನನ್ನು **ವರಸ್ತುತಿಭಿಃ** ಶ್ರೇಷ್ಠ ಸ್ತೋತ್ರಗಳಿಂದ **ಸ್ತುತ್ವಾ** ಸ್ತೋತ್ರ ಮಾಡಿ, **ಭಗವತಿ** ಭಗವಂತನು **ಅಂತರ್ಹಿತೇ ಸತಿ** ಅಂತರ್ಧಾನನಾಗುತ್ತಿರಲು **ಸ್ವಕಂ** ತನ್ನ **ಯಾನಂ** ರಥವನ್ನು **ಆರುರೋಹ** ಏರಿದನು **ತೇನ ಸಹ** ಆ ಅಕ್ರೂರನೊಂದಿಗೆ ಕೂಡಿದ **ಸಹಬಲಃ** ಬಲರಾಮನಿಂದಲೂ ಕೂಡಿದ, **ಭಗವಾನ್ ಅನಂತಃ** ಶ್ರೀಕೃಷ್ಣನು, **ಸಾಯಂ** ಸಾಯಂಕಾಲ **ಮಧುರಾಂ ಪುರೀಂ** ಮಧುರಾಪಟ್ಟಣವನ್ನು ಕುರಿತು **ಜಗಾಮ** ಹೋದನು.

**ತಾತ್ಪರ್ಯ** :- ಹೀಗೆ ನೀರಿನಲ್ಲಿ ಭಗವಂತನ ವಿಶ್ವರೂಪವನ್ನು ನೋಡಿದ ಅಕ್ರೂರನು ಅಲ್ಲಿ ಭಗವಂತನನ್ನು ನಾನಾ ಸ್ತೋತ್ರಗಳಿಂದ ಸ್ತುತಿಸಿದನು. ನಂತರ ಭಗವಂತ ಅವನ ದೃಷ್ಟಿಯಿಂದ ಅಂತರ್ಧಾನನಾದನು. ಕೂಡಲೇ ಅಕ್ರೂರ ನೀರಿನಿಂದ ಮೇಲೆ ಬಂದು ತನ್ನ ರಥದಲ್ಲಿ ಕುಳಿತನು. ನಂತರ ಶ್ರೀಕೃಷ್ಣನು ಅಕ್ರೂರ ಹಾಗೂ ಬಲರಾಮನಿಂದ ಕೂಡಿಕೊಂಡು ಸಾಯಂಕಾಲ ಮಧುರಾ ಪಟ್ಟಣಕ್ಕೆ ಹೋದನು.

**ಅಗ್ರೇಽಥ ದಾನಪತಿಮಕ್ಷಯಪೌರುಷೋಽಸಾ-**
**ವೀಶೋ ವಿಸೃಜ್ಯ ಸಬಲಃ ಸಹಿತೋ ವಯಸ್ಯೈಃ ।**
**ದ್ರಷ್ಟುಂ ಪುರೀಮಭಿಜಗಾಮ ನರೇಂದ್ರಮಾರ್ಗೇ**
**ಪೌರೇಃ ಕುತೂಹಲಯುತೈರಭಿಪೂಜ್ಯಮಾನಃ ॥ ೯೬ ॥**

**ಅರ್ಥ** :- **ಅಥ** ಪಟ್ಟಣ ಸೇರಿದ ನಂತರ **ಅಕ್ಷಯಪೌರುಷಃ** ನಾಶವಾಗದ ಬಲವುಳ್ಳ **ಅಸೌ ಈಶಃ** ಈ ಶ್ರೀಕೃಷ್ಣನು **ದಾನಪತಿಂ** ಅಕ್ರೂರನನ್ನು **ಅಗ್ರೇ** ಮೊದಲು **ವಿಸೃಜ್ಯ** ಕಳುಹಿಸಿಕೊಟ್ಟು **ಸಬಲಃ** ಬಲರಾಮ ಸಹಿತನಾಗಿ

**ವಯಸ್ಯೈಃ ಸಹಿತಃ** ಸ್ನೇಹಿತರೊಂದಿಗೆ ಕೂಡಿಕೊಂಡು **ಕುತೂಹಲಯುತೈಃ** ಕುತೂಹಲಯುಕ್ತರಾದ **ಪೌರೈಃ** ಪಟ್ಟಣಿಗರಿಂದ **ಅಭಿಪೂಜ್ಯಮಾನಃ** ಆರಾಧಿಸಲ್ಪಟ್ಟವನಾಗಿ **ಪುರೀಂ** ಮಧುರಾಪಟ್ಟಣವನ್ನು **ದ್ರಷ್ಟುಂ** ನೋಡಲು ನರೇಂದ್ರ **ಮಾರ್ಗೇ** ರಾಜಬೀದಿಯಲ್ಲಿ **ಜಗಾಮ** ಹೋದನು.

**ತಾತ್ಪರ್ಯ :-** ಮಧುರೆಯನ್ನು ಸೇರಿದ ಕೂಡಲೇ ಕೃಷ್ಣನು ಅಕ್ರೂರನನ್ನು ಮೊದಲೇ ಒಳಕ್ಕೆ ಕಳುಹಿಸಿಕೊಟ್ಟು ತಾನು ಅಣ್ಣನೊಂದಿಗೆ ಹಾಗೂ ಸ್ನೇಹಿತ ರೊಂದಿಗೆ ಪಟ್ಟಣವನ್ನು ನೋಡಲು ರಾಜಬೀದಿಯಲ್ಲಿ ಹೋದನು. ಆಗ ಅಲ್ಲಿ ಪಟ್ಟಣಿಗರು ಕಾತರದಿಂದಲಿ ಅವನನ್ನೇ ನೋಡಿ ಅವನನ್ನು ಆರಾಧಿಸಿದರು.

**ಆಸಾದ್ಯ ಕುಂಜರಗತಂ ರಜಕಂ ಯಯಾಚೇ**
**ವಸ್ತ್ರಾಣಿ ಕಂಸದಯಿತಂ ಗಿರಿಶಾವರೇಣ ।**
**ಮೃತ್ಯೂಜ್ಝಿತಂ ಸಪದಿ ತೇನ ದುರುಕ್ತಿವಿದ್ಧಃ**
**ಪಾಪಂ ಕರಾಗ್ರಮೃದಿತಂ ವ್ಯನಯದ್ ಯಮಾಯ ॥ ೯೭ ॥**

**ಅರ್ಥ :- ಕಂಸದಯಿತಂ** ಕಂಸನಿಗೆ ಅತಿ ಪ್ರಿಯನಾದ **ಗಿರಿಶಾವರೇಣ** ಪಾರ್ವತಿಯ ವರದಿಂದ **ಮೃತ್ಯೂಜ್ಝಿತಂ** ಮರಣರಹಿತನಾದ **ಕುಂಜರಗತಂ** ಆನೆಯ ಮೇಲೆ ಕುಳಿತಿದ್ದ **ರಜಕಂ** ಅಗಸನನ್ನು ಅಸಾದ್ಯ ಹೊಂದಿ **ವಸ್ತ್ರಾಣಿ** ರಾಜವಸ್ತ್ರಗಳನ್ನು **ಯಯಾಚೇ** ಕೇಳಿದನು **ತೇನ** ಆ ಅಗಸನಿಂದ **ದುರುಕ್ತಿವಿದ್ಧಃ** ಕೆಟ್ಟ ಮಾತುಗಳಿಂದ ನಿಂದಿಸಲ್ಪಟ್ಟವನಾಗಿ **ಕರಾಗ್ರಮೃದಿತಂ** ಹಸ್ತದಿಂದ ಮರ್ದಿಸಲ್ಪಟ್ಟು **ಪಾಪಂ** ಪಾಪಿಯಾದ ಆಗಸನನ್ನು **ಯಮಾಯ** ಯಮಸದಕ್ಕೆ **ವ್ಯನಯತ್** ಕೊಂಡೊಯ್ದನು.

**ತಾತ್ಪರ್ಯ :-** ಹೀಗೆ ಕೃಷ್ಣನು ನಗರ ವೀಕ್ಷಣೆಗೆ ಮಾಡುತ್ತಿರುವಾಗ ಕಂಸನಿಗೆ ಅತಿಪ್ರಿಯನಾದ, ಪಾರ್ವತಿಯ ವರದಿಂದ ಮರಣ ರಹಿತನಾಗಿದ್ದ ಪಾಪಿಯಾದ ಅಗಸನೊಬ್ಬನು ಆನೆಯ ಮೇಲೆ ಕುಳಿತು ಬರುತ್ತಿದ್ದನು. ಅವನನ್ನು ನೋಡಿ ಶ್ರೀಕೃಷ್ಣನು ಅವನ ಬಳಿ ಬಂದು ಬಟ್ಟೆಯನ್ನು ಕೇಳಿದನು. ಆಗ ಆ ಅಗಸನು ಕೃಷ್ಣನನ್ನು ಕೆಟ್ಟ ಮಾತುಗಳಿಂದ ನಿಂದಿಸಿದನು. ಆಗ ಕೃಷ್ಣ ಅಗಸನನ್ನು ಕೈಯ ಬೆರಳ ತುದಿಯಿಂದ ಮರ್ದಿಸಿಕೊಂದನು.

ಹತ್ವಾ ತಮಕ್ಷತಬಲೋ ಭಗವಾನ್ ಪ್ರಗೃಹ್ಯ
ವಸ್ತ್ರಾಣಿ ಚಾऽತ್ಮಸಮಿತಾನಿ ಬಲಸ್ಯ ಚಾऽದಾತ್ ।
ದತ್ವಾಽಪರಾಣಿ ಸಖಿಗೋಪಜನಸ್ಯ ಶಿಷ್ಟಾ-
ನ್ಯಾಸ್ತೀರ್ಯ ತತ್ರ ಚ ಪದಂ ಪ್ರಣಿಧಾಯ ಚಾऽಗಾತ್ ॥ ೯೮ ॥

**ಅರ್ಥ** :- **ಅಕ್ಷತಬಲಃ** ನಾಶರಹಿತವಾದ ಬಲವುಳ್ಳ **ಭಗವಾನ್** ಶ್ರೀಕೃಷ್ಣನು **ತಂ** ಆ ಆಗಸನನ್ನು **ಹತ್ವಾ** ಕೊಂಡು **ಆತ್ಮಸಮಿತಾನಿ** ತನಗೆ ಯೋಗ್ಯವಾದ **ವಸ್ತ್ರಾಣಿ** ವಸ್ತ್ರಗಳನ್ನು **ಪ್ರಗೃಹ್ಯ** ತೆಗೆದುಕೊಂಡು **ಬಲಸ್ಯ ಚ** ಬಲರಾಮನಿಗೂ ಕೂಡ **ಅದಾತ್** ಕೊಟ್ಟನು **ಅಪರಾಣಿ** ಬೇರೆ ಕೆಲಸವನ್ನು **ಸಖಿ ಗೋಪಜನಸ್ಯ** ಸ್ನೇಹಿತರಾದ ಗೊಲ್ಲಜನರಿಗೂ **ದತ್ವಾ** ಕೊಟ್ಟು **ಶಿಷ್ಟಾನಿ** ಉಳಿದ ವಸ್ತ್ರಗಳನ್ನು **ಆಸ್ತೀರ್ಯ** ಮಾರ್ಗದಲ್ಲಿ ಹಾಕಿ **ತತ್ರ** ಆ ಬಟ್ಟೆಯಲ್ಲಿ **ಪದಂ** ಹೆಜ್ಜೆಗಳನ್ನು **ಪ್ರಣಿಧಾಯ** ಇಟ್ಟು **ಅಗಾತ್ ಚ** ನಡೆದುಕೊಂಡು ಹೋದನೂ ಕೂಡ.

**ತಾತ್ಪರ್ಯ** :- ಕೃಷ್ಣನು ಆ ರಜಕನನ್ನು ಅನಾಯಾಸವಾಗಿ ಕೊಂದು ಅವನಲ್ಲಿದ್ದ ಬಟ್ಟೆಗಳಲ್ಲಿ ತನಗೆ ಯೋಗ್ಯವಾದ ಬಟ್ಟೆಗಳನ್ನು ತೆಗೆದುಕೊಂಡು ಅಣ್ಣನಾದ ಬಲರಾಮನಿಗೂ ಕೊಟ್ಟು ಕೆಲವೊಂದನ್ನು ತನ್ನ ಸ್ನೇಹಿತರಾದ ಗೊಲ್ಲ ಜನರಿಗೂ ಕೊಟ್ಟು ಉಳಿದ ಬಟ್ಟೆಗಳನ್ನು ರಸ್ತೆಯಲ್ಲಿ ಹಾಸಿ ತಾನು ಅದರ ಮೇಲೆ ನಡೆದುಕೊಂಡು ಹೋದನು.

ಗ್ರಾಹ್ಯಾಪಹೇಯರಹಿತೈಕಚಿದಾತ್ಮಸಾಂದ್ರ-
ಸ್ವಾನಂದಪೂರ್ಣವಪುರಪ್ಯಯಶೋಷಹೀನಃ ।
ಲೋಕಾನ್ ವಿಡಂಬ್ಯ ನರವತ್ ಸಮಲಕ್ತಕಾದ್ಯೈ-
ರ್ವಪ್ರಾ ವಿಭೂಷಿತ ಇವಾಭವದಪ್ರಮೇಯಃ ॥ ೯೯ ॥

**ಅರ್ಥ** :- **ಗ್ರಾಹ್ಯಾಪಹೇಯರಹಿತೈಕಚಿದಾತ್ಮಸಾಂದ್ರ ಸ್ವಾನಂದ ಪೂರ್ಣ ವಪುಃ ಗ್ರಾಹ್ಯ** ಸ್ವೀಕರಿಸಲು ಯೋಗ್ಯವಾದ ಬೆಣ್ಣೆ ಮೊದಲಾದ, **ಅಪಹೇಯ** ಬಿಡ ಯೋಗ್ಯವಾದ ಕೂದಲು ಉಗುರು ಮೊದಲಾದವುಗಳಿಂದ **ರಹಿತ** ರಹಿತ ನಾದ **ಏಕಚಿದಾತ್ಮ** ಮುಖ್ಯಜ್ಞಾನ ಸ್ವರೂಪಿಯಾದ **ಸಾಂದ್ರ** ನಿಬಿಡವಾದ **ಸ್ವಾನಂದ** ಸ್ವರೂಪಾನಂದದಿಂದ **ಪೂರ್ಣವಪುಃ** ಪರಿಪೂರ್ಣದೇಹಿಯಾದ

**ಅಕ್ಷಯಶೋಷಹೀನ ಅಪಿ** ವೃದ್ಧಿಹ್ರಾಸರಹಿತನಾದರೂ ಕೂಡ **ಅಪ್ರಮೇಯಃ** ತಿಳಿಯಲು ಅಶಕ್ಯನಾದ ಕೃಷ್ಣನು **ಲೋಕಾನಿ** ಜನರನ್ನು **ವಿಡಂಬ್ಯ** ಅನುಕರಿಸಿ **ನರವತ್** ಸಾಮಾನ್ಯ ಮನುಷ್ಯವಂತೆ **ಸಮಲಕ್ತಕಾತಾದ್ಯೈಃ** ಅಲಕ್ತಕರಸಾದಿ ಗಳಿಂದ **ವಪ್ತ್ರಾ** ಕ್ಷೌರಿಕನಿಂದ **ವಿಭೂಷಿತ ಇವ** ಅಲಂಕೃತನಾದವನಂತೆ **ಅಭವತ್** ಆದನು.

**ತಾತ್ಪರ್ಯ :-** ವಸ್ತುತಃ ಭಗವಂತನ ಯಾವ ಅವಯವಗಳಿಗೂ ವೃದ್ಧಿಯಾಗಲೀ ಹ್ರಾಸವಾಗಲೀ ಇಲ್ಲ. ಸದಾ ಅನುದಜ್ಞಾನಾತ್ಮಕವಾದ ಅಪ್ರಾಕೃತದೇಹವನ್ನು ಧರಿಸಿದವನು. ಅವನಿಗೆ ದೇಹಾಲಂಕಾರಕವಾದ ಉಪಾಧೇಯ ವಸ್ತುಗಳಾದ ಅಲಕ್ತಕ ರಸ ಮುಂತಾದವುಗಳಾಗಲಿ ಅಥವಾ ಬೆಳೆದ ಕೂದಲು ಬೆಳೆದ ಉಗುರು ಇದರ ತುಂಡರಿಸುವಿಕೆಯಾಗಲೀ ಅಗತ್ಯವಿಲ್ಲ ಆದರೂ ಮನುಷ್ಯನಾಗಿ ಅವತಾರ ಮಾಡಿದ್ದರಿಂದ ಮನುಷ್ಯರಂತೆ ಅನುಕರಣೆ ಮಾಡಲು ಅಲಕ್ತಕಾದಿರಸಗಳ ಲೇಪನ ಕ್ಷೌರಾದಿಕರ್ಮಗಳನ್ನು ಮಾಡಿಸಿಕೊಂಡನು.

**ಮಾಲಾ ಅವಾಪ್ಯ ಚ ಸುದಾಮತ ಆತ್ಮತಂತ್ರ-**
**ಸ್ತಾವಕ್ಷಯೋಽನುಜಗೃಹೇ ನಿಜಪಾರ್ಷದೌ ಹಿ ।**
**ಪೂರ್ವಂ ವಿಕುಂಠಸದನಾದ್ಧರಿಸೇವನಾಯ**
**ಪ್ರಾಪ್ತೌ ಭುವಂ ಮೃಜನಪುಷ್ಪಕರೌ ಪುರಾಽಪಿ ॥ ೧೦೦ ॥**

**ಅರ್ಥ :-** **ಆತ್ಮತಂತ್ರಃ ಅಪಿ** ಸ್ವತಂತ್ರನಾದ ಕೃಷ್ಣನು **ಸುದಾಮತಃ** ಸುದಾಮ ಎಂಬಂತೆ ಹಾವಾಡಿಗನಿಂದ **ಮಾಲಾಂ** ಮಾಲೆಯನ್ನು **ಅವಾಪ್ಯ** ಪಡೆದು ಯಾವ ಕಾರಣದಿಂದ **ಪೂರ್ವಂ** ಹಿಂದೆ **ನಿಜಪಾರ್ಷದೌ** ತನ್ನ ಸೇವಕರಾಗಿಯೇ ಇದ್ದು **ವಿಕುಂಠ ಸದನಾತ್** ವೈಕುಂಠಲೋಕದಿಂದ ಹರಿಸೇವ **ನಾಯ** ಭಗವಂತನ ಸೇವೆಗಾಗಿ **ಭುವಂ** ಭೂಮಿಯನ್ನು **ಪ್ರಾಪ್ತೌ** ಬಂದಿರು ವರೋ **ಅತಃ** ಆ ಕಾರಣದಿಂದ **ತೌ** ಅವರಿಬ್ಬರನ್ನು **ಅನುಜಗೃಹೇ** ಅನುಗ್ರಹ ಮಾಡಿದನು **ತೌ** ಅವರಿಬ್ಬರೂ **ಪುರಾಪಿ** ಹಿಂದೆಯೂ ಕೂಡ **ಮೃಜನ ಪುಷ್ಪಕತೌ** ಹೂವಾಡಿಗ ಮತ್ತು ಕ್ಷೌರಿಕರೇ ಆಗಿದ್ದರು.

**ತಾತ್ಪರ್ಯ :-** ಸ್ವತಂತ್ರನಾದರೂ ಕೂಡ ಭಗವಂತ ಭಕ್ತರ ಅನುಗ್ರಹಕ್ಕಾಗಿ ಸುದಾಮನೆಂಬ ಹೂವಾಡಿಗನಿಂದ ಹೂವಿನ ಮಾಲೆಯನ್ನು ಸ್ವೀಕರಿಸಿದನು.

ಕ್ಷೌರಿಕ ಹಾಗೂ ಹೂವಾಡಿಗ ಇಬ್ಬರಿಗೂ ಅನುಗ್ರಹವನ್ನು ಮಾಡಿದನು. ಇವರಿಬ್ಬರೂ ಕೂಡ ಮೂಲರೂಪದಿಂದ ವೈಕುಂಠದಲ್ಲಿ ಅಮುಕ್ತಸ್ಥಾನದಲ್ಲಿದ್ದು ಕೊಂಡು ಭಗವಂತನ ಸೇವೆಯನ್ನು ಮಾಡುತ್ತಿದ್ದರು. ಅಲ್ಲಿಯೂ ಕೂಡ ಅವರು ಕ್ಷೌರಿಕ ಹೂವಾಡಿಗರಾಗಿದ್ದರು.

**ಸರ್ವೇಷ್ಟಪುಷ್ಟಿಮಿಹ ತತ್ರ ಸರೂಪತಾಂ ಚ**
**ಕೃಷ್ಣಸ್ತಯೋರ್ವರಮದಾದಥ ರಾಜಮಾರ್ಗೇ ।**
**ಗಚ್ಛನ್ ದದರ್ಶ ವನಿತಾಂ ನರದೇವಯೋಗ್ಯ-**
**ಮಾದಾಯ ಗಂಧಮಧಿಕಂ ಕುಟಿಲಾಂ ವ್ರಜಂತೀಮ್ ॥ ೧೦೧ ॥**

**ಅರ್ಥ :-** ಕೃಷ್ಣಃ ಶ್ರೀಕೃಷ್ಣನು, **ತಯೋಃ** ಅವರಿಬ್ಬರಿಗೆ, ಇಹ ಈ ಲೋಕದಲ್ಲಿ, ಸರ್ವೇಷ್ಟ ಪುಷ್ಟಂ ಸರ್ವಾಭೀಷ್ಟಸಿದ್ಧಿಯನ್ನು ಚ ಮತ್ತು, ತತ್ರ ವೈಕುಂಠದಲ್ಲಿ, **ಸರೂಪತಾಂ** ಸಾರೂಪ್ಯ ರೂಪಮೋಕ್ಷವನ್ನು **ಅದಾತ್** ಕೊಟ್ಟನು, **ಅಥ** ಅನಂತರ, **ರಾಜಮಾರ್ಗೇ** ರಾಜಬೀದಿಯಲ್ಲಿ, **ಗಚ್ಛನ್** ಹೋಗುತ್ತಾ, **ನರದೇವಯೋಗ್ಯಂ** ರಾಜರುಗಳಿಗೆ ಯೋಗ್ಯವಾದ, **ಗಂಧಂ** ಸುಗಂಧ ದ್ರವ್ಯವನ್ನು **ಆದಾಯ** ಹಿಡಿದುಕೊಂಡು, **ಅಧಿಕಂ** ಹೆಚ್ಚಾಗಿ, **ಕುಟಿಲಾಂ** ವಕ್ರವಾಗಿ, **ವ್ರಜಂತೀಂ** ನಡೆಯುತ್ತಿದ್ದ **ವನಿತಾಂ** ಹೆಣ್ಣನ್ನು, **ದದರ್ಶ** ಕಂಡನು.

**ತಾತ್ಪರ್ಯ :-** ಶ್ರೀಕೃಷ್ಣನು ಆ ಹೂವಾಡಿಗ ಮತ್ತು ಕ್ಷೌರಿಕನಿಗೆ ಅವರು ಮಾಡಿದ ಭಕ್ತಿಯಿಂದ ಸಂಪ್ರೀತನಾಗಿ ಅವರಿಗೆ ಐಹಿತವಾಗಿ ಬೇಕಾದ ಸರ್ವಾಭೀಷ್ಟಗಳನ್ನು ಕೊಟ್ಟು ಮುಂದೆ ವೈಕುಂಠ ಲೋಕದಲ್ಲಿ ಸಾರೂಪ್ಯ ರೂಪ ಮೋಕ್ಷವನ್ನು ಕೊಟ್ಟನು. ಹೀಗೆ ಅವರಿಗೆ ಅನುಗ್ರಹಿಸಿ ರಾಜ ಮಾರ್ಗದಲ್ಲಿ ಮುಂದೆ ಹೋಗುತ್ತಿರುವಾಗ ಮಾರ್ಗ ಮಧ್ಯದಲ್ಲಿ ರಾಜರು ಉಪಯೋಗಿಸಲು ಯೋಗ್ಯವಾದ ಸುಗಂಧ ದ್ರವ್ಯವನ್ನು ಕೈಯಲ್ಲಿ ಹಿಡಿದುಕೊಂಡು, ವಕ್ರವಕ್ರಯಾಗಿ ನಡೆದುಕೊಂಡು ಹೋಗುತ್ತಿದ್ದ ಗೂನುಬೆನ್ನಿನ ಹೆಂಗಸನ್ನು ಕಂಡನು.

**ತೇನಾರ್ಥಿತಾ ಸಪದಿ ಗಂಧಮದಾತ್ ತ್ರಿವಕ್ರಾ**
**ತೇನಾಗ್ರಜೇನ ಸಹಿತೋ ಭಗವಾನ್ ಲಿಲಿಂಪೇ ।**
**ತಾಂ ಚಾಽಽಜುತ್ವಮನಯತ್ ಸ ತಯಾಽರ್ಥಿತೋಽಲ-**
**ಮಾಯಾಮಿ ಕಾಲತ ಇತಿ ಪ್ರಹಸನ್ನಮುಂಚತ್ ॥ ೧೦೨ ॥**

**ಅರ್ಥ** :- **ತೇನ** ಆ ಕೃಷ್ಣನಿಂದ, **ಅರ್ಥಿತಾ** ಕೇಳಲ್ಪಟ್ಟ **ತ್ರಿವಕ್ರಾ** ತ್ರಿವಕ್ರೆಯು, **ಸಪದಿ** ಕೂಡಲೇ, **ಗಂಧಂ** ಸುಗಂಧ ದ್ರವ್ಯವನ್ನು, **ಅದಾತ್** ಕೊಟ್ಟಳು, **ತೇನ** ಆಗಂಧದಿಂದ, **ಅಗ್ರಜೇನ** ಅಣ್ಣನಿಂದ, **ಸಹಿತಃ** ಕೂಡಿದ **ಭಗವಾನ್** ಕೃಷ್ಣನು, **ಲಿಲಿಂಪೇ** ಮೈಯೆಲ್ಲಾ ಲೇಪಿಸಿಕೊಂಡ, **ತಾಂ ಚ** ಆ ತ್ರಿವಕ್ರೆಯನ್ನಾದರೂ, **ಆಶು** ಕೂಡಲೇ, **ಋಜುತ್ವಂ** ನೇರವಾಗುವಿಕೆಯನ್ನಾಗಿ **ಅನಯತ್** ಮಾಡಿದನು, **ತಯಾ** ಅವಳಿಂದ, **ಅಲಂ ಅರ್ಥಿತಃ** ನಿನ್ನ ಅಂಗ ಸಂಗ ಬೇಕೆಂದು ಬಹಳವಾಗಿ ಪ್ರಾರ್ಥಿಸಲ್ಪಟ್ಟವನಾದರೂ, **ಕಾಲತಃ** ಇನ್ನೊಮ್ಮೆ ಎಂದಾದರೂ, **ಆಯಾಮಿ** ಬರುತ್ತೇನೆ, **ಇತಿ** ಎಂದು **ಪ್ರಹಸನ್** ನಸುನಗುತ್ತಾ, **ಅಮುಂಚತ್** ಅವಳನ್ನು ಬಿಟ್ಟು ಕಳುಹಿಸಿದ.

**ತಾತ್ಪರ್ಯ** :- ಆ ತ್ರಿವಕ್ರೆಯ ಬಳಿ ಇದ್ದ ಸುಗಂಧ ದ್ರವ್ಯವನ್ನು ಕೃಷ್ಣ ಅವಳ ಬಳಿ ಕೇಳಿದ. ಕೂಡಲೇ ಅವಳು ಆ ದ್ರವ್ಯವನ್ನು ಅವನಿಗೆ ಕೊಟ್ಟಳು. ಕೃಷ್ಣ ಆ ಗಂಧವನ್ನು ಅಣ್ಣನೊಂದಿಗೆ ಸೇರಿ ಮೈಯೆಲ್ಲಾ ಹಚ್ಚಿಕೊಂಡನು. ನಂತರ ಮೂರು ಕಡೆ ವಕ್ರವಾಗಿದ್ದ ಆ ತ್ರಿವಕ್ರೆಯನ್ನು ನೇರವಾಗಿ ಮಾಡಿ ಅವಳನ್ನು ಸುಂದರ ಸ್ತ್ರೀಯಾಗುವಂತೆ ಮಾಡಿದನು. ಅವನಿಂದ ಅನುಗೃಹೀತಳಾದ ಅವಳು ಕೃಷ್ಣನ ಅಂಗಸಂಗಕ್ಕಾಗಿ ಬಹಳ ಬೇಡಿದಳು. ಆದರೆ ಅವಳ ಬೇಡಿಕೆಯನ್ನು ನಯವಾಗಿ ತಿರಸ್ಕರಿಸಿ ಸ್ವಲ್ಪಕಾಲದ ನಂತರ ಬರುತ್ತೇನೆ ಎಂದು ಅವಳನ್ನು ಸಮಾಧಾನಪಡಿಸಿ ಅವಳನ್ನು ಕಳುಹಿಸಿಕೊಟ್ಟನು.

**ಪೂರ್ಣೇಂದುವೃಂದನಿವಹಾಧಿಕಕಾಂತಶಾಂತ-**
**ಸೂರ್ಯಾಮಿತೋರುಪರಮದ್ಯುತಿಸೌಖ್ಯದೇಹಃ ।**
**ಪೀತಾಂಬರಃ ಕನಕಭಾಸುರಗಂಧಮಾಲ್ಯಃ**
**ಶೃಂಗಾರವಾರಿಧಿರಗಣ್ಯಗುಣಾರ್ಣವೋಽಗಾತ್ ॥ ೧೦೩ ॥**

**ಅರ್ಥ** :- **ಪೂರ್ಣೇಂದು** ವೃಂದ ನಿವಹಾಧಿಕ **ಕಾಂತಿ** ಕಾಂತ **ಸೂರ್ಯಾಮಿತೋರುಪರಮದ್ಯುತಿಸೌಖ್ಯದೇಹಃ ಪೂರ್ಣೇಂದುವೃಂದ** ಪರಿಪೂರ್ಣ ಚಂದ್ರರ **ವೃಂದ** ರೂಪ ಸಂಖ್ಯಾ ವಿಶೇಷಗಳ ನಿವಹ ಸಮೂಹ ಕ್ಕಿಂತಲೂ, **ಅಧಿಕಕಾಂತಿ** ಶ್ರೇಷ್ಠಕಾಂತಿಯಿಂದ, **ಕಾಂತ** ಮನೋಹರವಾದ, **ಸೂರ್ಯಾಮಿತೋರುಪರಮದ್ಯುತಿ** ಅನಂತ ಸೂರ್ಯರಿಂದಲೂ ಹೋಲಿಸ ಲಾಗದ ಬಹಳ ಉತ್ಕೃಷ್ಟ ಪ್ರಕಾಶ ಉಳ್ಳ, **ಸೌಖ್ಯದೇಹ** ಸುಖಮಯ ಶರೀರವುಳ್ಳ,

**ಪೀತಾಂಬರಃ** ಪೀತಾಂಬರವನ್ನು ಉಟ್ಟಿರುವ, **ಕನಕಭಾಸುರಗಂಧಮಾಲ್ಯಃ** ಬಂಗಾರದಂತೆ ಹೊಳೆಯುವ ಗಂಧದ ಮಾಲೆ ಉಳ್ಳ, **ಶೃಂಗಾರವಾರಿಧಿಃ** ಸೌಂದರ್ಯ ಸಾಗರನಾದ, **ಅಗಣ್ಯಗುಣಾರ್ಣವಃ** ಅಗಣಿತ ಗುಣಗಳಿಗೆ ಸಮುದ್ರದಂತಿರುವ, ಕೃಷ್ಣನು, **ಅಗಾತ್** ರಾಜಮಾರ್ಗದಲ್ಲಿ ಹೊರಟನು.

**ತಾತ್ಪರ್ಯ :-** ನಂತರ ಪೂರ್ಣಚಂದ್ರನ ವೃಂದ ಎಂಬ ಅಧಿಕ ಸಂಖ್ಯಾ ವಿಶೇಷದ ಸಮೂಹಗಳಿಗಿಂತಲೂ ಅಥವಾ ಪೂರ್ಣಚಂದ್ರನ ಸಮೂಹಗಳ ಸಮೂಹಗಳಿಗಿಂತ ಅಧಿಕವಾದ ಕಾಂತಿಯಿಂದ ಮನೋಹರನಾದ, ಅನಂತರ ಸೂರ್ಯರಿಂದಲೂ ಹೋಲಿಸಲಾಗದ ಬಹು ಉತ್ಕೃಷ್ಟ ಪ್ರಕಾಶ ಉಳ್ಳ, ಸುಖಮಯ ಶರೀರಿಯಾದ ಪೀತಾಂಬರವನ್ನು ಧರಿಸಿದ ಬಂಗಾರದಂತೆ ಹೊಳೆಯುವ ಗಂಧಮಾಲೆಯನ್ನು ಧರಿಸಿರುವ, ಸೌಂದರ್ಯ ಸಾಗರನಾದ ಎಣಿಸಲಾಸಾಧ್ಯವಾದ ಗುಣಗಳಿಗೆ ಸಮುದ್ರದಂತಿರುವ ಶ್ರೀಕೃಷ್ಣನು ರಾಜ ಮಾರ್ಗದಲ್ಲಿ ನಡೆದುಕೊಂಡು ಹೋದನು.

**ಪ್ರಾಪ್ಯಾಥ ಚಾಽಯುಧಗೃಹಂ ಧನುರೀಶದತ್ತಂ**
**ಕೃಷ್ಣಃ ಪ್ರಸಹ್ಯ ಜಗೃಹೇ ಸಕಲೈರಭೇದ್ಯಮ್ ।**
**ಕಾಂಸಂ ಸ ನಿತ್ಯಪರಿಪೂರ್ಣಸಮಸ್ತಶಕ್ತಿ-**
**ರಾರೋಪ್ಯ ಚೈನಮನುಕೃಷ್ಯ ಬಭಂಜ ಮಧ್ಯೇ ॥ ೧೦೪ ॥**

**ಅರ್ಥ :- ಅಥ** ಅನಂತರ, **ನಿತ್ಯಪರಿಪೂರ್ಣಸಮಸ್ತಶಕ್ತಿಃ** ನಿತ್ಯವಾದ ಪರಿಪೂರ್ಣವಾದ ಅಪರಿಮಿತಶಕ್ತಿಯುಳ್ಳ, **ಸಃ** ಆ, **ಕೃಷ್ಣಃ** ಕೃಷ್ಣನು, **ಆಯುಧಗೃಹಂ** ಆಯುಧಾಗಾರವನ್ನು, **ಪ್ರಾಪ್ಯ** ಹೊಂದಿ, **ಈಶದತ್ತಂ** ರುದ್ರನಿಂದ ಕೊಡಲ್ಪಟ್ಟ **ಕಾಂಸಂ** ಕಂಸಸಂಬಂಧಿಯಾದ, **ಧನುಃ** ಬಿಲ್ಲನ್ನು **ಪ್ರಸಹ್ಯ** ಬಲಾತ್ಕಾರದಿಂದ, **ಜಗೃಹೇ** ತೆಗೆದುಕೊಂಡನು, **ಚ** ಮತ್ತು, **ಏತತ್** ಆ ಧನುಸ್ಸನ್ನು **ಆರೋಪ್ಯ** ಹೆದೆ ಏರಿಸಿ, **ಅನುಕೃಷ್ಯ** ಸೆಳೆದು, **ಮಧ್ಯೆ** ಮಧ್ಯಭಾಗದಲ್ಲಿ, **ಬಭಂಜ** ತುಂಡರಿಸಿದನು.

**ತಾತ್ಪರ್ಯ :-** ನಂತರ ಸದಾಪರಿಪೂರ್ಣವಾದ ಅನಂತ ಶಕ್ತಿಯುಳ್ಳ ಭಗವಂತನು ಆಯುಧಾಗಾರವನ್ನು ಪ್ರವೇಶ ಮಾಡಿದನು. ಅಲ್ಲಿ ಕಂಸನಿಗೆ ರುದ್ರನಿಂದ ಪ್ರಾಪ್ತಿಯಾದ ಯಾರಿಂದಲೂ ಎತ್ತಲು ಸಾಧ್ಯವಾಗದ ಒಂದು

ಬಿಲ್ಲು ಇದ್ದಿತು. ಆ ಬಿಲ್ಲನ್ನು ಬಲಾತ್ಕಾರದಿಂದಲೇ ತೆಗೆದುಕೊಂಡು ಅದನ್ನು ಅನಾಯಾಸವಾಗಿ ಎತ್ತಿ ಅದಕ್ಕೆ ಹೆದೆಯನ್ನೇರಿಸಿ ಅದರ ಮಧ್ಯಭಾಗವನ್ನು ತುಂಡರಿಸಿದನು.

**ತಸ್ಮಿನ್ ಸುರಾಸುರಗಣೈರಖಿಲೈರಭೇದ್ಯೇ**
**ಭಗ್ನೇ ಬಭೂವ ಜಗದಂಡವಿಭೇದಭೀಮಃ ।**
**ಶಬ್ದಃ ಸ ಯೇನ ನಿಪಪಾತ ಭುವಿ ಪ್ರಭಗ್ನ-**
**ಸಾರೋಽಸುರೋ ಧೃತಿಯುತೋಽಪಿ ತದೈವ ಕಂಸಃ ॥ ೧೦೫ ॥**

**ಅರ್ಥ :- ಅಖಿಲೈಃ** ಎಲ್ಲಾ, **ಸುರಾಸುರಗಣೈಃ** ದೇವದಾನವರ ಸಮೂಹಗಳಿಂದ, **ಅಭೇದ್ಯೇ** ಭೇದಿಸಲು ಅಸಾಧ್ಯವಾದ, **ತಸ್ಮಿನ್** ಆ ಶಿವ ಧನುಸ್ಸು **ಭಗ್ನೇ ಸತಿ** ಮುರಿಯುತ್ತಿರಲು, **ಜಗದಂಡ ವಿಭೇದ ಭೀಮಃ** ಬ್ರಹ್ಮಾಂಡವೇ ಒಡೆದುಹೋದಂತಹ ಭಯಂಕರವಾದ, **ಶಬ್ದಃ** ಶಬ್ದವು **ಬಭೂವ** ಆಯಿತು, **ಯೇನ** ಯಾವ ಶಬ್ದದಿಂದ, **ಧೃತಿಯುತೋಽಪಿ** ಧೈರ್ಯಶಾಲಿಯಾದರೂ, **ಸಃ** ಆ ಯಾವ, **ಅಸುರಃ** ದೈತ್ಯನಾದ, **ಕಂಸಃ** ಕಂಸನು, **ಪ್ರಭಗ್ನಸಾರಃ** ಉಡುಗಿದ ಶಕ್ತಿಯುಳ್ಳವನಾಗಿ, **ತದೈವ** ಆ ಕ್ಷಣವೇ, **ಭುವಿ** ಭೂಮಿಯಲ್ಲಿ **ನಿಪಪಾತ** ಬಿದ್ದನು.

**ತಾತ್ಪರ್ಯ :-** ದೇವಾಸುರರಿಂದಲೂ ಕೂಡ ಮುರಿಯಲು ಅಸಾಧ್ಯವಾದ ಈ ಬಿಲ್ಲನ್ನು ಕೃಷ್ಣನು ಅನಾಯಾಸವಾಗಿ ಎತ್ತಿ ಮುರಿಯುತ್ತಿರಲು ಇಡೀ ಬ್ರಹ್ಮಾಂಡವೇ ಒಡೆದು ಹೋದಂತಹ ಶಬ್ದವಾಯಿತು. ಆ ಕ್ಷಣದಲ್ಲಿ ಬಹಳ ಧೈರ್ಯವಂತನಾದರೂ ಕೂಡ ಅಸುರನಾದ ದೈತ್ಯನು ಆಶಬ್ದವನ್ನು ಕೇಳಿ ಧೈರ್ಯ ಉಡುಗಿ ಕೂಡಲೇ ಆಸನದಿಂದ ಕೆಳಗೆ ಬಿದ್ದನು.

**ಆದಿಷ್ಟಮುಪ್ಯುರುಬಲಂ ಭಗವಾನ್ ಸ ತೇನ**
**ಸರ್ವಂ ನಿಹತ್ಯ ಸಬಲಃ ಪ್ರಯಯೌ ಪುನಶ್ಚ ।**
**ನಂದಾದಿಗೋಪಸಮಿತಿಂ ಹರಿರತ್ರ ರಾತ್ರೌ**
**ಭುಕ್ತ್ವಾಪಯೋಽನ್ವಿತಶುಭಾನ್ನಮುವಾಸ ಕಾಮಮ್ ॥ ೧೦೬ ॥**

**ಅರ್ಥ :- ಭಗವಾನ್** ಶ್ರೀಕೃಷ್ಣನು, **ತೇನ** ಆ ಕಂಸನಿಂದ, **ಆದಿಷ್ಟಂ** ಆಜ್ಞಾಪಿಸಲ್ಪಟ್ಟ **ಉರುಬಲಂ** ಉತ್ಕೃಷ್ಟ ಬಲವುಳ್ಳ, **ಸರ್ವಮಪಿ** ಎಲ್ಲಾ

ಸೈನ್ಯವನ್ನು ಕೂಡ, **ಸಬಲಃ** ಬಲರಾಮನೊಂದಿಗೆ ಕೂಡಿಕೊಂಡು, **ನಿಹತ್ಯ** ಕೊಂದು, **ಪುನಶ್ಚ** ಮತ್ತೊಮ್ಮೆ **ನಂದಾದಿಗೋಪಸಮಿತಿಂ** ನಂದಾದಿ ಗೊಲ್ಲರ ಸಮೂಹವನ್ನು **ಪ್ರಯಯೌ** ಸೇರಿದನು, **ಸಃ ಹರಿಃ** ಆ ಶ್ರೀಕೃಷ್ಣನು, **ಅತ್ರ** ಈ ನಂದಾದಿಗಳು ಇದ್ದ ಸ್ಥಳದಲ್ಲಿ **ರಾತ್ರೌ** ರಾತ್ರಿಯಲ್ಲಿ, **ಪಯೋಽನ್ವಿತಶುಭಾನ್ನಂ** ಹಾಲಿನಿಂದ ಕೂಡಿದ ಶುಭಾನ್ನವನ್ನು **ಭುಕ್ತ್ವಾ** ಉಂಡು, **ಕಾಮಂ** ನಿರ್ಭಯವಾಗಿ, **ಉವಾಸ** ವಾಸಮಾಡಿದನು.

**ತಾತ್ಪರ್ಯ** :- ಈ ರೀತಿಯಾಗಿ ಕಂಸನು ಭಯಭೀತನಾಗಿ ಕೃಷ್ಣನನ್ನು ಸಂಹಾರ ಮಾಡಲು ತನ್ನಲ್ಲಿದ್ದ ಶ್ರೇಷ್ಠ ಬಲವುಳ್ಳ ಸೈನ್ಯವನ್ನು ಕಳುಹಿಸಿದನು. ಕೃಷ್ಣ ರಾಮರು ಸೇರಿಕೊಂಡ ಆ ಸೈನ್ಯವನ್ನು ಕೊಂದು ಮತ್ತೆ ನಂದಗೋಪರ ಗುಂಪನ್ನು ಸೇರಿಕೊಂಡರು. ಅಲ್ಲಿ ಹಾಲಿನಿಂದ ಕೂಡಿದ ಶುಭಾನ್ನವನ್ನು ತಿಂದು ಯಾವುದೇ ಹೆದರಿಕೆಯಿಲ್ಲದೇ ರಾತ್ರಿಯನ್ನು ಕಳೆದನು.

**ಕಂಸೋಽಪ್ಯತೀವ ಭಯಕಂಪಿತಹೃತ್ಸರೋಜಃ**
**ಪ್ರಾತರ್ನರೇಂದ್ರಗಣಮಧ್ಯಗತೋಽಧಿಕೋಚ್ಚಮ್ ।**
**ಮಂಚಂ ವಿವೇಶ ಸಹ ಜಾನಪದೈಶ್ಚ ಪೌರೈ-**
**ರ್ನಾನಾಽನುಮಂಚಕಗತೈರ್ಯುವತೀಸಮೇತೈಃ ॥ ೧೦೭ ॥**

**ಅರ್ಥ** :- **ಕಂಸೋಽಪಿ** ಕಂಸನಾದರೂ, **ಅತೀವ ಭಯಕಂಪಿತ ಹೃತ್ಸರೋಜಃ** ಬಹಳ ಭಯದಿಂದ ಕಂಪಿಸಿದ ಹೃತ್ಕಮಲವುಳ್ಳವನಾಗಿ, **ಪ್ರಾತಃ** ಬೆಳಿಗ್ಗೆ **ಯುವತೀಸಮೇತೈಃ** ಪತ್ನಿಸಹಿತನಾಗಿ, **ನಾನಾಽನುಮಂಚಕಗತೈಃ** ಅನೇಕ ಸಣ್ಣ ಸಣ್ಣ ಆಸನಗಳಲ್ಲಿ ಕುಳಿತಿರುವ **ಪೌರೈಃ** ದೇಶವಾಸಿಗಳೊಂದಿಗೆ, **ಜಾನಪದೈಶ್ಚ** ನಾಗರೀಕರೊಂದಿಗೂ ಕೂಡ, **ಸಹ** ಕೂಡಿಕೊಂಡು ನರೇಂದ್ರ **ಗಣಮಧ್ಯಗತಃ** ರಾಜಶ್ರೇಷ್ಠರ ಗುಂಪಿನ ಮಧ್ಯದಲ್ಲಿರುವ, **ಅಧಿಕೋಚ್ಚಮ್** ಬಲು ಎತ್ತರದ, **ಮಂಚಂ** ಆಸನವನ್ನು **ವಿವೇಶ** ಏರಿದನು.

**ತಾತ್ಪರ್ಯ** :- ಕಂಸನಾದರೂ ಆ ರಾತ್ರಿಯನ್ನು ಬಹಳ ಭಯದಿಂದ ಕಳೆದನು. ಬೆಳಿಗ್ಗೆ ನಾನಾ ಸಣ್ಣಸಣ್ಣ ಆಸನಗಳಲ್ಲಿ ಪತ್ನಿಸಮೇತರಾಗಿ ಕುಳಿತ ದೇಶವಾಸಿಗಳು ಹಾಗೂ ನಾಗರೀಕರೊಂದಿಗೆ ಸೇರಿಕೊಂಡು, ಸುತ್ತಲೂ ಕುಳಿತ ದೊಡ್ಡ ರಾಜರಸಮೂಹದ ಮಧ್ಯದಲ್ಲಿ ಇದ್ದ ದೊಡ್ಡ ಸಿಂಹಾಸನವನ್ನು ಏರಿ ಕುಳಿತನು.

**ಸಂಸ್ಥಾಪ್ಯ ನಾಗಮುರುರಂಗಮುಖೇ ಕುವಲ್ಯಾ-**
**ಪೀಡಂ ಗಿರೀಂದ್ರಸದೃಶಂ ಕರಿಸಾದಿಯುಕ್ತಮ್ ।**
**ಚಾಣೂರಮುಷ್ಟಿಕಮುಖಾನಪಿ ಮಲ್ಲವೀರಾನ್**
**ರಂಗೇ ನಿಧಾಯ ಹರಿಸಂಯಮನಂ ಕಿಲೈಚ್ಛತ್ ॥ ೧೦೮ ॥**

**ಅರ್ಥ** :- **ಕಂಸಃ** ಕಂಸನು, **ಉರುರಂಗಮುಖೇ** ಶ್ರೇಷ್ಠವಾದ ರಂಗದ ಹೆಬ್ಬಾಗಿಲಲ್ಲಿ **ಗಿರಿಂದ್ರಸದೃಶಂ** ಬೆಟ್ಟಕ್ಕೆ ಸದೃಶವಾದ **ಕರಿಸಾದಿಯುಕ್ತಂ** ಮಾವುತನಿಂದ ಕೂಡಿದ, **ಕುವಲ್ಯಾಪೀಡಂ** ಕುವಲಯಾಪೀಡವೆಂಬ **ನಾಗಂ** ಆನೆಯನ್ನು **ಸಂಸ್ಥಾಪ್ಯ** ನಿಲ್ಲಿಸಿ, **ಚಾಣೂರಮುಷ್ಟಿಕಮುಖಾನ್** ಚಾಣೂರ ಮುಷ್ಟಿಕರೇ ಮೊದಲಾದ, **ಮಲ್ಲವೀರಾನ್** ಶ್ರೇಷ್ಠ ಮಲ್ಲರನ್ನು, **ರಂಗೇ** ರಂಗದಲ್ಲಿ, **ನಿಧಾಯ** ಇಟ್ಟು, **ಹರಿಸಂಯಮನಂ** ಭಗವಂತನ ನಿಗ್ರಹವನ್ನು ಮಾಡಲು, **ಐಚ್ಛತ ಕಿಲ** ಬಯಸಿದನಷ್ಟೇ.

**ತಾತ್ಪರ್ಯ** :- ಕಂಸನು ಕೃಷ್ಣನನ್ನು ನಿಗ್ರಹ ಮಾಡಬೇಕೆಂಬ ಬಯಕೆಯಿಂದ ರಂಗದ ಹೆಬ್ಬಾಗಿಲಿನಲ್ಲಿ ಬೆಟ್ಟದಂತೆ ದೊಡ್ಡ ದೇಹವುಳ್ಳ ಕುವಲಯಾಪೀಡ ಎಂಬ ಹೆಸರಿನ ಆನೆಯನ್ನು ಮಾವುತನೊಂದಿಗೆ ಇರಿಸಿದ್ದ ರಂಗದಲ್ಲಿಯೂ ಕೂಡ ಚಾಣೂರ ಮುಷ್ಟಿಕ ಮೊದಲಾದ ದೊಡ್ಡ ದೊಡ್ಡ ಮಲ್ಲರನ್ನು ಇರಿಸಿದ್ದ.

**ಅಕ್ಷೋಹಿಣೀಗಣಿತಮಸ್ಯ ಬಲಂ ಚ ವಿಂಶ-**
**ದಾಸೀದಸಹ್ಯಮುರುವೀರ್ಯಮನನ್ಯವಧ್ಯಮ್ ।**
**ಶಂಭೋರ್ವರಾದಪಿ ಚ ತಸ್ಯ ಸುನೀಥನಾಮಾ**
**ಯಃ ಪೂರ್ವಮಾಸ ವೃಕ ಇತ್ಯಸುರೋಽನುಜೋಽಭೂತ್ ॥ ೧೦೯ ॥**

**ಅರ್ಥ** :- **ಅಸ್ಯ** ಈ ಕಂಸನಿಗೆ, **ಶಂಭೋಃ** ಶಿವನ, **ವರಾತ್** ವರದಿಂದ, **ಅನನ್ಯವಧ್ಯಂ** ಯಾರಿಂದಲೂ ಸಂಹರಿಸಲು ಅಶಕ್ಯವಾದ, **ಅಸಹ್ಯಂ ಚ** ಯಾರಿಂದಲೂ ಎದುರಿಸಲಶಕ್ಯವೂ ಆದ, **ಉರುವೀರ್ಯಂ** ಮಹಾಬಲಶಾಲಿಗಳಾದ, **ವಿಂಶದ್‌ಅಕ್ಷೋಹಿಣೀಗಣಿತಂ** ಇಪ್ಪತ್ತು ಅಕ್ಷೋಹಿಣೀಗಳಷ್ಟು **ಬಲಂ** ಸೈನ್ಯವು, **ಆಸೀತ್** ಇತ್ತು, **ವೃಕಃ ಇತಿ** ವೃಕನೆಂಬ ಅಸುರನು, **ಆಸ** ಆಗಿದ್ದನೋ **ಸಃ** ಅವನು **ಸುನೀಥನಾಮಾ** ಸುನೀಥ ಎಂಬ ಹೆಸರಿನಿಂದ, **ಅನುಜ** ತಮ್ಮನು **ಅಭೂತ್** ಆಗಿದ್ದನು.

**ತಾತ್ಪರ್ಯ** :- ಈ ಕಂಸನ ಬಳಿ ೨೦ ಅಕ್ಷೋಹಿಣೀ ಸೈನ್ಯವಿತ್ತು. ಅದು ಶಿವವರದ ಬಲದಿಂದ ಅವಧ್ಯವಾಗಿತ್ತು. ಬಹಳ ಬಲಶಾಲಿಯಾಗಿತ್ತು. ಯಾರಿಂದಲೂ ಎದಿರಿಸಲು ಕೂಡ ಅಶಕ್ಯವಾಗಿತ್ತು. ಅಲ್ಲದೇ ಆ ಕಂಸನಿಗೆ ಹಿಂದಿನ ಜನ್ಮದಲ್ಲಿ ವೃಕನೆಂಬ ಅಸುರಾಗಿದ್ದವನು ಸುನೀಥ ಎಂಬ ಹೆಸರಿನಿಂದ ತಮ್ಮನಾಗಿದ್ದ

**ಸಪ್ತಾನುಜಾ ಅಪಿ ಹಿ ತಸ್ಯ ಪುರಾತನಾ ಯೇ**
**ಸರ್ವೇಽಪಿ ಕಂಸಪೃತನಾಸಹಿತಾಃ ಸ್ಮ ರಂಗೇ ।**
**ತಸ್ಥುಃ ಸರಾಮಮಭಿಯಾಂತಮುದೀಕ್ಷ್ಯ ಕೃಷ್ಣ-**
**ಮಾತ್ತಾಯುಧಾ ಯುಧಿ ವಿಜೇತುಮಜಂ ಸುಪಾಪಾಃ ॥ ೧೧೦ ॥**

**ಅರ್ಥ** :- **ತಸ್ಯ** ಆ ಕಂಸನಿಗೆ, (ಸುನೀಥನಿಗೆ), **ಪುರಾತನಾ ಅಪಿ** ಹಿಂದಿನ ಜನ್ಮದಲ್ಲಿಯೂ ಕೂಡ, **ಯೇ** ಯಾರು, **ಸಪ್ತಾನುಜಾಃ** ಏಳುಮಂದಿ ತಮ್ಮಂದಿರೋ, **ಸುಪಾಪಾಃ** ಮಹಾಪಾಪಿಗಳಾದ, **ತೇ ಸರ್ವೇಽಪಿ** ಆ ಏಳೂ ಮಂದಿಕೂಡ, **ಸರಾಮಂ** ಬಲರಾಮನಿಂದ ಕೂಡಿದ, **ಕೃಷ್ಣಂ** ಕೃಷ್ಣನನ್ನು **ಅಭಿಯಾಂತಂ** ಬರುತ್ತಿರುವುದನ್ನು **ಉದೀಕ್ಷ್ಯ** ನೋಡಿ, **ಯುಧಿ** ಯುದ್ಧದಲ್ಲಿ **ಅಜಂ** ಕೃಷ್ಣನನ್ನು **ವಿಜೇತುಂ** ಜಯಿಸಲು, **ಆತ್ತಾ ಯುಧಾಃ** ಹಿಡಿದ ಆಯುಧವುಳ್ಳವರಾಗಿ, **ರಂಗೇ** ರಂಗಸ್ಥಳದಲ್ಲಿ, **ಕಂಸಪೃತನಾಸಹಿತಃ** ಕಂಸನ ಸೇನೆಯೊಂದಿಗೆ ಕೂಡಿಕೊಂಡು, **ತಸ್ಥುಃ ಸ್ಮ** ನಿಂತಿದ್ದರು.

**ತಾತ್ಪರ್ಯ** :- ಈ ಕಂಸನಿಗೆ (ಸುನಿಥನಿಗೆ) ಏಳು ಮಂದಿ ತಮ್ಮಂದಿರು. ಇವರು ಏಳೂ ಮಂದಿ ಕೂಡ ಹಿಂದಿನ ಜನ್ಮದಲ್ಲಿಯೂ ಕೂಡ ತಮ್ಮಂದಿರೇ ಆಗಿದ್ದರು. ಅವರೆಲ್ಲರೂ ಕೃಷ್ಣರಾಮರು ಬರುವುದನ್ನು ನೋಡಿ ಅವರನ್ನು ಸಂಹಾರ ಮಾಡಬೇಕೆಂದು ಆಯುಧವನ್ನು ಎತ್ತಿಕೊಂಡು ಕಂಸನ ಸೈನ್ಯದೊಂದಿಗೆ ನಿಂತಿದ್ದರು.

**ಕೃಷ್ಣೋಽಪಿ ಸೂರ ಉದಿತೇ ಸಬಲೋ ವಯಸ್ಯೈಃ**
**ಸಾರ್ಧ, ಜಗಾಮ ವರರಂಗಮುಖಂ ಸುರೇಶೈಃ ।**
**ಸಂಸ್ತೂಯಮಾನ ಉರುವಿಕ್ರಮ ಆಸುರಾಣಾಂ**
**ನಿರ್ಮೂಲನಾಯ ಸಕಳಾಚಲಿತೋರುಶಕ್ತಿಃ ॥ ೧೧೧ ॥**

**ಅರ್ಥ** :- **ಉರುಕ್ರಮ** ಶ್ರೇಷ್ಠ ಪರಾಕ್ರಮವುಳ್ಳ, **ಸಕಲಾಚರಿತೋರುಶಕ್ತಿಃ** ಸೃಷ್ಟ್ಯಾದಿ ಸಕಲ ಕರ್ಮಗಳಲ್ಲಿ ಉತ್ಕೃಷ್ಟ ಶಕ್ತಿಯುಳ್ಳ, **ಕೃಷ್ಣೋऽಪಿ** ಕೃಷ್ಣನಾದರೂ, **ಸೂರ್ಯಃ** ಸೂರ್ಯನು, **ಉದಿತೇ** ಸತಿ ಉದಯಿಸುತ್ತಿರಲು, **ಸಬಲಃ** ಬಲರಾಮನೊಂದಿಗೆ, **ವಯಸ್ಯೈಃ ಸಾರ್ಧಂ** ಗೆಳೆಯರಾದ ಗೊಲ್ಲರೊಂದಿಗೂ ಕೂಡಿಕೊಂಡು, **ಸುರೇಶೈಃ** ದೇವಶ್ರೇಷ್ಠರಿಂದ, **ಸಂಸ್ತೂಯಮಾನಃ** ಸ್ತೋತ್ರ ಮಾಡಲ್ಪಡುತ್ತಿರಲು, **ಅಸುರಾಣಾಂ** ದೈತ್ಯರ **ನಿರ್ಮೂಲನಾಯ** ನಾಶಕ್ಕಾಗಿ **ವರರಂಗಮುಖಂ** ರಂಗದ ಹೆಬ್ಬಾಗಿಲಿಗೆ, **ಜಗಾಮ** ಹೋದನು (ಬಂದನು).

**ತಾತ್ಪರ್ಯ** :- ಸೂರ್ಯೋದಯವಾಗುತ್ತಿರಲು ಸಕಲ ಕಾರ್ಯಗಳಲ್ಲಿ ಸಮರ್ಥನಾದ ಮಹಾಬಲಶಾಲಿಯಾದ ಕೃಷ್ಣನು ಬಲರಾಮ ಹಾಗೂ ಸ್ನೇಹಿತ ಗೊಲ್ಲರೊಂದಿಗೆ ಕೂಡಿಕೊಂಡು ದೇವತೆಗಳೆಲ್ಲರೂ ಸ್ತೋತ್ರ ಮಾಡುತ್ತಿರಲು ಅಸುರ ಸಂಹಾರಕ್ಕಾಗಿ ರಂಗದ ದ್ವಾರಕ್ಕೆ ಬಂದನು.

**ಆಯನ್ ಜಗದ್ಗುರುತಮೋ ಬಲಿನಂ ಗಜೇಂದ್ರಂ**
**ರುದ್ರಪ್ರಸಾದಪರಿರಕ್ಷಿತಮಾಶ್ವಪಶ್ಯತ್ ।**
**ದುಷ್ಟೋರುರಂಗಮುಖಸಂಸ್ಥಿತಮೀಕ್ಷ್ಯ ಚೈಭ್ಯಂ**
**ಪಾಪಾಪಯಾಹಿ ನಚಿರಾದಿತಿ ವಾಚಮೂದೇ ॥ ೧೧೨ ॥**

**ಅರ್ಥ** :- **ಜಗದ್ಗುರುತಮಃ** ಜಗತ್ತಿಗೇ ಮುಖ್ಯಗುರುವಾದ ಶ್ರೀಕೃಷ್ಣನು, **ಆಯನ್** ರಂಗದ ಹೆಬ್ಬಾಗಿಲಿಗೆ ಬರುತ್ತಾ, **ರುದ್ರಪ್ರಸಾದಪರಿರಕ್ಷಿತಂ** ರುದ್ರಾನುಗ್ರಹದಿಂದ ರಕ್ಷಿತವಾದ, **ಬಲಿನಂ** ಬಲಶಾಲಿಯಾದ, **ಗಜೇಂದ್ರಂ** ಗಜರಾಜನನ್ನು **ಅಪಶ್ಯತ** ನೋಡಿದನು, **ದುಷ್ಟೋರುರಂಗಮುಖಸಂಸ್ಥಿತಂ** ದುಷ್ಟಕಂಸನ ರಂಗದ್ವಾರದಲ್ಲಿ ನಿಂತಂತಿರುವ ಆ ಆನೆಯನ್ನು **ಚ** ಮತ್ತು ಏಭ್ಯಂ ಮಾವುತನನ್ನು **ಈಕ್ಷ್ಯ** ನೋಡಿ, **ಆಶು** ಕೂಡಲೇ, **ಪಾಪ** ಹೇ ಪಾಪಿಷ್ಟ ಮಾವುತನೇ, **ನಚಿರಾದ್** ತಡಮಾಡದೇ, **ಅಪಯಾಹಿ** ತೊಲಗು, ಇತಿ ಎಂಬ, **ವಾಚಂ** ಮಾತನ್ನು, **ಊಚೇ** ಹೇಳಿದನು.

**ತಾತ್ಪರ್ಯ** :- ಕೃಷ್ಣನು ದ್ವಾರದಲ್ಲಿ ರುದ್ರ ಪ್ರಸಾದದಿಂದ ರಕ್ಷಿಸಲಾಗಿದ್ದ ಬಲಿಷ್ಠವಾಗಿದ್ದ ಕುವಲಯಾಪೀಡ ಎಂಬ ಆನೆಯನ್ನು ನೋಡಿದನು. ಆನೆಯ

ಜೊತೆಯಲ್ಲಿ ಮಾವುತನೂ ದುಷ್ಟ ಕಂಸನ ಹೆಬ್ಬಾಗಿಲಿನಲ್ಲಿ ನಿಂತದ್ದನ್ನು ನೋಡಿ ಕೂಡಲೇ ಹೇ ದುಷ್ಟ ಈ ಸ್ಥಳವನ್ನು ಬಿಟ್ಟು ತೊಲಗು ಎಂದು ಹೇಳಿದನು.

**ಕ್ಷಿಪ್ತಃ ಸ ಈಶ್ವರತಮೇನ ಗಿರೀಶಲಬ್ಧಾದ್**
**ದೃಪ್ತೋ ವರಾಜ್ಜಗತಿ ಸರ್ವಜನೈರವಧ್ಯಃ ।**
**ನಾಗಂ ತ್ವವಧ್ಯಮಭಿಯಾಪಯತೇ ತತೋऽಗ್ರೇ**
**ಪಾಪೋ ದುರಂತಮಹಿಮಂ ಪ್ರತಿ ವಾಸುದೇವಮ್ ॥ ೧೧೩ ॥**

**ಅರ್ಥ :-** **ಗಿರೀಶಲಬ್ಧಾತ್** ರುದ್ರನಿಂದ ಪಡೆದ **ವರಾತ್** ವರದಿಂದ, **ದೃಪ್ತಃ** ಉನ್ಮತ್ತನಾಗಿದ್ದ, **ಜಗತಿ** ಜಗತ್ತಿನಲ್ಲಿ, **ಸರ್ವಜನೈಃ** ಎಲ್ಲರಿಂದಲೂ, **ಅವಧ್ಯಃ** ಅವಧ್ಯನಾಗಿದ್ದ **ಈಶ್ವರತಮೇನ** ಭಗವಂತನಿಂದ, **ಕ್ಷಿಪ್ತಃ** ನಿಂದಿಸಲ್ಪಟ್ಟ **ಸಃ** ಆ **ಪಾಪಃ** ಪಾಪಿಯಾದ ಮಾವುತನು, **ತತಃ** ರಂಗದ್ವಾರದಿಂದ **ಅಗ್ರೇ** ಕೃಷ್ಣನ ಎದುರಿಗೆ, **ಅವಧ್ಯಂ** ಸಂಹರಿಸಲು ಅಶಕ್ಯವಾದ **ನಾಗಂ** ಆನೆಯನ್ನು **ದುರಂತಮಹಮಂ** ನಿಸ್ಸೀಮ ಮಹಿಮನಾದ, **ವಾಸುದೇವಂ** ಭಗವಂತನನ್ನು ಕುರಿತು, **ಅಭಿಯಾಪಯತೇ** ನಡೆಸಲು ತೊಡಗಿದನು.

**ತಾತ್ಪರ್ಯ :-** ಈ ಮಾವುತನು ಶಿವನ ವರದಿಂದ ಕೊಬ್ಬಿದವನಾಗಿದ್ದನು. ಯಾರಿಂದಲೂ ಸಂಹರಿಸಲು ಅಶಕ್ಯನಾಗಿದ್ದನು. ಅವನು ಭಗವಂತನಿಂದ ಪಾಪಿ ತೊಲಗು ಎಂದು ನಿಂದಿಸಲ್ಪಟ್ಟರೂ ಕೂಡ ಅದನ್ನು ಲೆಕ್ಕಿಸದೇ ರಂಗದ್ವಾರದಲ್ಲಿ ನಿಸ್ಸೀಮ ಬಲಶಾಲಿಯಾದ ಭಗವಂತನ ಮೇಲೆ ಆನೆಯನ್ನು ನಡೆಸಲು ಶುರು ಮಾಡಿದನು.

**ವಿಕ್ರೀಡ್ಯ ತೇನ ಕರಿಣಾ ಭಗವಾನ್ ಸ ಕಿಂಚಿದ್**
**ಹಸ್ತೇ ಪ್ರಗೃಹ್ಯ ವಿನಿಕೃಷ್ಯ ನಿಪಾತ್ಯ ಭೂಮೌ ।**
**ಕುಂಭೇ ಪದಂ ಪ್ರತಿನಿಧಾಯ ವಿಷಾಣಯುಗ್ಮ-**
**ಮುತ್ಕೃಷ್ಯ ಹಸ್ತಿಪಮಹನ್ ನಿಪಪಾತ ಸೋऽಪಿ ॥ ೧೧೪ ॥**

**ಅರ್ಥ :-** **ಸಃ ಭಗವಾನ್** ಆ ಶ್ರೀಕೃಷ್ಣನು, **ತೇನ ಕರಿಣಾ** ಆ ಆನೆಯೊಂದಿಗೆ **ಕಿಂಚಿತ್** ಸ್ವಲ್ಪಹೊತ್ತು, **ವಿಕ್ರೀಡ್ಯ** ಆಟವಾಡಿ, **ಹಸ್ತೇ** ಸೊಂಡಿಲಿನಲ್ಲಿ **ಪ್ರಗೃಹ್ಯ** ಹಿಡಿದು, **ವಿನಿಕೃಷ್ಯ** ಎಳೆದು, **ಭೂಮೌ** ಭೂಮಿಯಲ್ಲಿ **ನಿಪಾತ್ಯ** ಬೀಳಿಸಿ, **ಕುಂಭೇ** ಕುಂಭಸ್ಥಳದಲ್ಲಿ **ಪದಂ** ಕಾಲನ್ನು **ಪ್ರತಿನಿಧಾಯ**

ಇಟ್ಟು **ವಿಷಾಣಯುಗ್ಮಂ** ಎರಡೂ ದಂತಗಳನ್ನೂ **ಉತ್ಕೃಷ್ಯ** ಕಿತ್ತು, **ಹಸ್ತಿಪಂ** ಮಾವುತನೂ **ಅಹನ್** ಅದರಿಂದಲೇ ಹೊಡೆದನು, **ಸೋಽಪಿ** ಆ ಮಾವುತನಾದರೂ **ನಿಪಪಾತ** ಕೆಳಗೆ ಬಿದ್ದನು.

**ತಾತ್ಪರ್ಯ :-** ಕೃಷ್ಣನು ಆ ಆನೆಯೊಂದಿಗೆ ಸ್ವಲ್ಪಹೊತ್ತು ಆಟವಾಡಿ ನಂತರ ಅದರ ಸೊಂಡಿಲಲ್ಲಿ ಕೈಯನ್ನು ಇಟ್ಟು ಅದರ ಸೊಂಡಿಲನ್ನು ಎಳೆದು ನೆಲಕ್ಕೆ ಬೀಳಿಸಿ, ಅದರ ಕುಂಭ ಸ್ಥಳದಲ್ಲಿ ಕಾಲನ್ನು ಇಟ್ಟು ಅದರ ಎರಡು ದಂತಗಳನ್ನೂ ಕಿತ್ತು ಆದಂತಗಳಿಂದಲೇ ಅದರ ಮಾವುತನನ್ನು ಹೊಡೆದನು. ಕೂಡಲೇ ಮಾವುತನು ಆನೆಯಿಂದ ಕೆಳಗೆ ಬಿದ್ದನು.

**ನಾಗಂ ಸಸಾದಿನಮವಧ್ಯಮಸೌ ನಿಹತ್ಯ**
**ಸ್ಕಂಧೇ ವಿಷಾಣಮವಸಜ್ಯ ಸಹಾಗ್ರಜೇನ ।**
**ನಾಗೇಂದ್ರಸಾಂದ್ರಮದಬಿಂದುಭಿರಂಚಿತಾಂಗಃ**
**ಪೂರ್ಣಾತ್ಮಶಕ್ತಿರಮಲಃ ಪ್ರವಿವೇಶ ರಂಗಮ್ ॥ ೧೧೫ ॥**

**ಅರ್ಥ :- ಸಸಾದಿನಂ** ಮಾವುತನೊಂದಿಗೆ **ಅವಧ್ಯಂ** ಯಾರಿಂದಲೂ ವಧಿಸಲು ಅಶಕ್ಯವಾದ, **ನಾಗಂ** ಆನೆಯನ್ನು **ನಿಹತ್ಯ** ಕೊಂದು **ವಿಷಾಣಂ** ದಂತವನ್ನು, **ಸ್ಕಂಧೇ** ಹೆಗಲಲ್ಲಿ, **ಅವಸಜ್ಯ** ಇಟ್ಟುಕೊಂಡು, **ಸಹಾಗ್ರಜೇನ** ಅಣ್ಣನಾದ ಬಲರಾಮನೊಂದಿಗೆ **ನಾಗೇಂದ್ರಸಾಂದ್ರ ಮದಬಿಂದುಭಿಃ ನಾಗೇಂದ್ರ** ಆನೆಯ, **ಸಾಂದ್ರ** ನಿಬಿಡವಾದ, **ಮದಬಿಂದುಭಿಃ** ಮದ ಜಲಬಿಂದುಗಳಿಂದ, **ಅಂಚಿತಾಂಗಃ** ಕಂಗೊಳಿಸುವ ಮೈಯುಳ್ಳ **ಪೂರ್ಣಶಕ್ತಿಃ** ಪರಿಪೂರ್ಣ ಸಾಮರ್ಥ್ಯವುಳ್ಳ **ಅಮಲಃ** ನಿರ್ಮಲನಾದ **ಅಸೌ** ಈ ಶ್ರೀಕೃಷ್ಣನು, **ರಂಗಂ** ರಂಗಸ್ಥಳವನ್ನು **ಪ್ರವಿವೇಶ** ಪ್ರವೇಶ ಮಾಡಿದನು.

**ತಾತ್ಪರ್ಯ :-** ಕೃಷ್ಣನು ಮಾವುತನನ್ನು, ಆನೆಯನ್ನು ಕೊಂದು ಆನೆಯ ದಂತವನ್ನು ಕಿತ್ತು ಹೆಗಲಿಲ್ಲ ಇಟ್ಟುಕೊಂಡು ರಂಗ ಸ್ಥಳಪ್ರವೇಶ ಮಾಡಿದನು. ಎಂತಹ ಕೃಷ್ಣನು ಎಂದು ವರ್ಣಿಸುತ್ತಾರೆ ಆನೆಯ ಮದಜಲರಸದ ಬಿಂದುಗಳಿಂದ ಕಂಗೊಳಿಸುವ ಮೈಯುಳ್ಳವನಾಗಿ ಪರಿಪೂರ್ಣವಾದ ಶಕ್ತಿಯುಳ್ಳ ನಿರ್ಮಲನಾದ ಶ್ರೀಕೃಷ್ಣ ರಂಗಸ್ಥಳ ಪ್ರವೇಶಿಸಿದ.

ವಿಷ್ಟೇ ಜಗದ್ಗುರುತಮೇ ಬಲವೀರ್ಯಮೂರ್ತೌ
ರಂಗಂ ಮುಮೋದ ಚ ಶುಶೋಷ ಜನೋಽಖಿಲೋಽತ್ರ ।
ಕಂಜಂ ತಥಾಽಪಿ ಕುಮುದಂ ಚ ಯಥೈವ ಸೂರ್ಯ
ಉದ್ಯತ್ಯಜೇಽನುಭವಿನೋ ವಿಪರೀತಕಾಶ್ಚ ॥ ೧೧೬ ॥

**ಅರ್ಥ** :- **ಜಗದ್ಗುರುತಮೇ** ಜಗತ್ತಿಗೇ ಮುಖ್ಯಗುರುವಾದ, **ಬಲವೀರ್ಯಮೂರ್ತೌ** ಬಲಪರಾಕ್ರಮಗಳ ಸ್ವರೂಪವಾಗಿರುವ ಆಕೃಷ್ಣನು, **ರಂಗಂ** ರಂಗಸ್ಥಳವನ್ನು **ವಿಷ್ಟೆ** ಸತಿ ಪ್ರವೇಶ ಮಾಡುತ್ತಿರಲು, **ಅತ್ರ** ಈ ರಂಗಸ್ಥಳದಲ್ಲಿ ಇರುವ **ಅಖಿಲಃ** ಎಲ್ಲಾ **ಜನಃ** ಭಕ್ತಜನರು, **ಮುಮೋದ** ಸಂತೋಷಪಟ್ಟರು, **ಅಖಿಲಃ ಜನಃ** ದುಷ್ಟರು, **ಶುಶೋಷ** ದುಃಖಪಟ್ಟರು, **ಸೂರ್ಯೇ** ಸೂರ್ಯನು, **ಉದ್ಯತೀ** ಸತಿ ಉದಯಸುತ್ತಿರಲು, **ಕಂಜಂ** ಕಮಲವು **ಯಥಾ** ಹೇಗೆಯೋ **ತಥಾ** ಹಾಗೆ, **ಅಜೇ** ಕೃಷ್ಣನು, **ಉದ್ಯತಿ ಸತಿ** ಉದಯಿಸುತ್ತಿರಲು, **ಅನುಭಾವಿನಃ** ಜ್ಞಾನಿಗಳು **ಮುಮುದುಃ** ಸಂತೋಷ ಪಟ್ಟರು, **ತಥಾಽಪಿ** ಹಾಗೆಯೇ, **ಯಥಾ** ಹೇಗೆ **ಕುಮುದಂ** ನೈದಿಲೆಯು, **ಶುಶೋಷ** ಮುದುಡಿತೋ **ತಥಾ** ಹಾಗೆಯೇ **ವಿಪರೀತಕಾಶ್ಚ** ಅಜ್ಞಾನಿಗಳು **ಶುಶುಷುಃ** ದುಃಖಪಟ್ಟರು.

**ತಾತ್ಪರ್ಯ** :- ಜಗತ್ತಿಗೇ ಮುಖ್ಯ ಗುರುವಾದ ಬಲಪರಾಕ್ರಮಿಶಾಲಿ ಯಾದ ಕೃಷ್ಣನು ರಂಗಸ್ಥಲವನ್ನು ಪ್ರವೇಶ ಮಾಡುತ್ತಿರಲು ಭಕ್ತಜನರು ಸಂತೋಷಪಟ್ಟರು. ದುಷ್ಟಜನರು ದುಃಖ ಪಟ್ಟರು, ಹೇಗೆ ಸೂರ್ಯನು ಉದಯಿಸುತ್ತಿರಲು ಕಮಲವು ಸಂತೋಷ ಪಡುವುದೋ ಅದರಂತೆ ಕೃಷ್ಣನು ಬರುತ್ತಿರಲು ಜ್ಞಾನಿಗಳು ಸಂತೋಷ ಪಟ್ಟರು ಹೇಗೆ ನೈದಿಲೆಯು ಮುದುಡುವುದೋ ಅದರಂತೆ ಅಜ್ಞಾನಿಗಳು ದುಃಖಪಟ್ಟರು.

ರಂಗಪ್ರವಿಷ್ಟಮಭಿವೀಕ್ಷ್ಯ ಜಗಾದ ಮಲ್ಲಃ
ಕಂಸಪ್ರಿಯಾರ್ಥಮಭಿಭಾಷ್ಯ ಜಗನ್ನಿವಾಸಮ್ ।
ಚಾಣೂರ ಇತ್ಯಭಿಹಿತೋ ಜಗತಾಮವಧ್ಯಃ
ಶಂಭುಪ್ರಸಾದತ ಇದಂ ಶೃಣು ಮಾಧವೇತಿ ॥ ೧೧೭ ॥

**ಅರ್ಥ** :- **ಶಂಭುಪ್ರಸಾದತಃ** ಶಿವನ ವರದಿಂದ, **ಜಗತಾಂ** ಜಗತ್ತಿಗೆ **ಅವಧ್ಯಃ** ನಾಶ ಮಾಡಲು ಅಶಕ್ಯನಾಗಿದ್ದ **ಚಾಣೂರ ಇತಿ** ಚಾಣೂರ ಎಂದು,

**ಅಭಿಹಿತಃ** ಹೆಸರುಳ್ಳ, **ಮಲ್ಲಃ** ಮಲ್ಲನು, **ಕಂಸಪ್ರಿಯಾರ್ಥಂ** ಕಂಸನನ್ನು ಮೆಚ್ಚಿಸುವುದಕ್ಕೋಸ್ಕರ, **ರಂಗಂ** ರಂಗಸ್ಥಳವನ್ನು, **ಪ್ರವಿಷ್ಟಂ** ಪ್ರವೇಶಿಸುತ್ತಿರುವ, **ಜಗನ್ನಿವಾಸಂ** ಜಗನ್ನಾಥನಾದ ಕೃಷ್ಣನನ್ನು **ಅಭಿವೀಕ್ಷ್ಯ** ನೋಡಿ, **ಅಭಿಭಾಷ್ಯ** ಕರೆದು, **ಮಾಧವ** ಕೃಷ್ಣನೇ **ಇದಂ** ಈ ಮಾತನ್ನು **ಶೃಣು** ಕೇಳು **ಇತಿ** ಎಂದು **ಜಗಾದ** ಹೇಳಿದನು.

**ತಾತ್ಪರ್ಯ** :- ಜಗನ್ನಾಥನಾದ ಕೃಷ್ಣನು ರಂಗಪ್ರವೇಶ ಮಾಡುತ್ತಿರಲು ಶಿವವರದಿಂದ ಅವಧ್ಯನಾಗಿದ್ದ ಚಾಣೂರ ಎಂಬ ಮಲ್ಲನು ಕಂಸನನ್ನು ಮೆಚ್ಚಿಸು ವುದಕ್ಕಾಗಿ ಕೃಷ್ಣನನ್ನು ಕರೆದು ಎಲೈ ಕೃಷ್ಣನೇ ನನ್ನ ಈ ಮಾತನ್ನು ಕೇಳು ಎಂದನು.

**ರಾಜೈವ ದೈವತಮಿತಿ ಪ್ರವದಂತಿ ವಿಪ್ರಾ**
**ರಾಜ್ಞಃ ಪ್ರಿಯಂ ಕೃತವತಃ ಪರಮಾ ಹಿ ಸಿದ್ಧಿಃ ।**
**ಯೋತ್ಸ್ಯಾವ ತೇನ ನೃಪತಿಪ್ರಿಯಕಾಮ್ಯಯಾ ವಾಂ**
**ರಾಮೋಽಭಿಯುಧ್ಯತು ಬಲೀ ಸಹ ಮುಷ್ಟಿಕೇನ ॥ ೧೧೮ ॥**

**ಅರ್ಥ** :- **ವಿಪ್ರಾಃ** ಬ್ರಾಹ್ಮಣರು, **ರಾಜೈವ** ರಾಜನೇ, **ದೈವತಮಿತಿ** ದೈವವೆಂದು, **ಪ್ರವದಂತಿ** ಹೇಳುತ್ತಾರೆ, **ರಾಜ್ಞಃ** ರಾಜನಿಗೆ, **ಪ್ರಿಯಂ** ಪ್ರೀಯವಾದದ್ದನ್ನು, **ಕೃತವತಃ** ಮಾಡಿದವನಿಗೆ, **ಪರಮಾ** ಶ್ರೇಷ್ಠವಾದ, **ಸಿದ್ಧಿಃ ಹಿ** ಗತಿಯುಂಟಷ್ಟೆ **ತೇನ** ಆ ಕಾರಣದಿಂದ, **ನೃಪತಿಪ್ರಿಯಕಾಮ್ಯಯಾ** ರಾಜನಿಗೆ ಸಂತೋಷ ಉಂಟು ಮಾಡುವದಕ್ಕಾಗಿ, **ವಾಂ** ನಾನಿಬ್ಬರು, **ಯೋತ್ಸ್ಯಾವಃ** ಯುದ್ಧ ಮಾಡೋಣ **ಬಲೀ** ಬಲಿಷ್ಠನಾದ, **ರಾಮಃ** ರಾಮನು, **ಮುಷ್ಟಿಕೇನ ಸಹ** ಮುಷ್ಠಿಕನೊಂದಿಗೆ **ಅಭಿಯುದ್ಧ್ಯತು** ಯುದ್ಧ ಮಾಡಲಿ.

**ತಾತ್ಪರ್ಯ** :- ಚಾಣೂರನು ಹೇಳುತ್ತಾನೆ. ಕೃಷ್ಣನೇ ಲೋಕದಲ್ಲಿ ರಾಜನೇ ಪ್ರತ್ಯಕ್ಷ ದೇವರೆಂದು ಜ್ಞಾನಿಗಳು ಹೇಳುತ್ತಾರೆ. ರಾಜನಿಗೆ ಸಂತೋಷ ಉಂಟುಮಾಡಿದವನಿಗೆ ಮೋಕ್ಷವಾಗುತ್ತದೆ ಎಂದು ಶಾಸ್ತ್ರವಿದೆ ಆದ್ದರಿಂದ ಕಂಸನಿಗೆ ಪ್ರೀತಿ ಉಂಟು ಮಾಡಲು ನಾವಿಬ್ಬರೂ ಯುದ್ಧವನ್ನು ಮಾಡೋಣ. ಬಲಿಷ್ಠನಾದ ಬಲರಾಮನು ಮುಷ್ಟಿಕನೊಂದಿಗೆ ಹೋರಾಡಲಿ ಎಂದು.

**ಇತ್ಯುಕ್ತ ಆಹ ಭಗವಾನ್ ಪರಿಹಾಸಪೂರ್ವ-**
**ಮೇವಂ ಭವತ್ವಿತಿ ಸ ತೇನ ತದಾಽಭಿಯಾತಃ ।**

ಸಂದರ್ಶ್ಯ ದೈವತಪತಿರ್ಯುಧಿ ಮಲ್ಲಲೀಲಾಂ
ಮೌಹೂರ್ತಿಕೀಮಥ ಪದೋರ್ಜಗೃಹೇ ಸ್ವಶತ್ರುಮ್ ॥೧೧೯॥

**ಅರ್ಥ** :- ಇತ್ಯುಕ್ತಃ ಈ ರೀತಿಯಾಗಿ ಹೇಳಲ್ಪಟ್ಟ ಭಗವಾನ್ ಶ್ರೀಕೃಷ್ಣನು, ಪರಿಹಾಸಪೂರ್ವಂ ಮಂದಹಾಸ ಪೂರ್ವಕವಾಗಿ, ಏವಮೇವ ಹೀಗೆಯೇ, ಭವತು ಆಗಲಿ ಇತಿ ಎಂದು, ಆಹ ಹೇಳಿದನು, ತದಾ ಆವಾಗ, ತೇನ ಆ ಮಲ್ಲನಿಂದ, ಅಭಿಘಾತಃ ಹೊಡೆಯಲ್ಪಟ್ಟ ಸಃ ಆ, ದೈವಪತಿಃ ಶ್ರೀಕೃಷ್ಣನು, ಯುಧಿ ಮಲ್ಲಯುದ್ಧದಲ್ಲಿ, ಮೌಹೂರ್ತಿಕೀಂ ಒಂದು ಮೂಹುರ್ತಕಾಲ, ಮಲ್ಲಲೀಲಾಂ ಮಲ್ಲ ಕ್ರೀಡೆಯನ್ನೂ, ಸಂದರ್ಶ್ಯ ತೋರಿಸಿ, ಅಥ ಅನಂತರ, ಸ್ವಶತ್ರುಂ ತನ್ನ ಶತ್ರುವಾದ ಮಲ್ಲನನ್ನು, ಪದೋಃ ಕಾಲಗಳಲ್ಲಿ, ಜಗೃಹೇ ಹಿಡಿದನು.

**ತಾತ್ಪರ್ಯ** :- ಹೀಗೆ ಚಾಣೂರ ಹೇಳಲು ಮುಗುಳುನಕ್ಕ ಕೃಷ್ಣನು ಹಾಗೇ ಆಗಲಿ ಎಂದು ಹೇಳಿದನು. ಕೂಡಲೇ ಆ ಮಲ್ಲನು ಕೃಷ್ಣನನ್ನು ಹೊಡೆಯಲು ಬಂದನು. ಕೃಷ್ಣನು ಅವನ ಜೊತೆಗೆ ಒಂದು ಮುಹೂರ್ತ ಕಾಲ ಅಂದರೆ ೨ ಘಳಿಗೆ ಅಂದರೆ ೪೮ ನಿಮಿಷಗಳವರೆಗೆ ಮಲ್ಲಕ್ರೀಡೆಯನ್ನು ಮಾಡಿ ಕೊನೆಗೆ ಅವನನ್ನು ಕಾಲುಗಳಲ್ಲಿ ಹಿಡಿದುಕೊಂಡನು.

ಉತ್‌ಕ್ಷಿಪ್ಯತಂ ಗಗನಗಂ ಗಿರಿಸನ್ನಿಕಾಶ-
ಮುದ್‌ಭ್ರಾಮ್ಯ ಚಾಥ ಶತಶಃ ಕುಲಿಶಾಕ್ಷತಾಂಗಮ್ ।
ಆವಿಧ್ಯ ದುರ್ಧರಬಲೋ ಭುವಿ ನಿಷ್ಪಿಪೇಷ
ಚೂರ್ಣೀಕೃತಃ ಸ ನಿಪಪಾತ ಯಥಾ ಗಿರೀಂದ್ರಃ ॥ ೧೨೦ ॥

**ಅರ್ಥ** :- ದುರ್ಧರಬಲಃ ಸಹಿಸಲು ಅಶಕ್ಯವಾದ ಬಲವುಳ್ಳ, ಸಃ ಆ ಕೃಷ್ಣನು, ತಂ ಆ ಮಲ್ಲನನ್ನು, ಉತ್ಕ್ಷಿಪ್ಯ ಮೇಲಕ್ಕೆ ಎತ್ತಿ ಗಗನಗಂ ಆಕಾಶದಲ್ಲಿರುವ, ಗಿರಿಸನ್ನಿಕಾಶಂ ಪರ್ವತ ಸದೃಶವಾದ, ಕುಲಿಶಾಕ್ಷತಾಂಗಂ ವಜ್ರಾಯುಧದಿಂದಲೂ ಗಾಯ ಹೊಂದದ ದೇಹವುಳ್ಳ ಚಾಣೂರನನ್ನು ಶತಶಃ ನೂರು ಬಾರಿ ಉದ್ಭ್ರಾಮ್ಯ ತಿರುಗಿಸಿ ಅಥ ಅನಂತರ, ಭುವಿ ಭೂಮಿಯಲ್ಲಿ, ಆವಿಧ್ಯ ಅಪ್ಪಳಿಸಿ, ನಿಷ್ಪಿಪೇಷ ಕಾಲಿನಿಂದ ತುಳಿದನು, ಸಃ ಆ ಚಾಣೂರನು, ಯಥಾ ಹೇಗೆ ಗಿರೀಂದ್ರಃ ಬೆಟ್ಟವು, ಚೂರ್ಣೀಕೃತಃ ಪುಡಿಯಾಗುವುದೋ ಹಾಗೆ ನಿಪಪಾತ ಪುಡಿಯಾಗಿ ಬಿದ್ದನು.

**ತಾತ್ಪರ್ಯ** :- ಅನಂತ ಬಲವುಳ್ಳ ಶ್ರೀಕೃಷ್ಣನು ಆ ವಜ್ರಾಯುಧದಿಂದಲೂ ಗಾಯವಾಗದಂತಹ ದೇಹವುಳ್ಳ ಮಲ್ಲನನ್ನು ಮೇಲಕ್ಕೆ ಎತ್ತಿ ಆಕಾಶದಲ್ಲಿ ಬೆಟ್ಟದಂತಹ ಆಕಾರದ ಅವನನ್ನು ನೂರು ಬಾರಿ ತಿರುಗಿಸಿ ಭೂಮಿಗೆ ಅಪ್ಪಳಿಸಿದನು. ನಂತರ ಕಾಲಿನಿಂದ ತಲೆಯನ್ನು ಒತ್ತಿ ಹೇಗೆ ಪರ್ವತವು ಪುಡಿಯಾಗುವುದೋ ಹಾಗೆ ಅವನನ್ನು ಪುಡಿ ಮಾಡಿದನು.

**ಕೃಷ್ಣಂ ಚ ತುಷ್ಟುವುರಥೋ ದಿವಿ ದೇವಸಂಘಾ**
**ಮರ್ತ್ಯಾ ಭುವಿ ಪ್ರವರಮುತ್ತಮಪೂರುಷಾಣಾಮ್ ।**
**ತದ್ವದ್ ಬಲಸ್ಯ ದೃಢಮುಷ್ಟಿನಿಪಿಷ್ಟಮೂರ್ಧಾ**
**ಭ್ರಷ್ಟಸ್ತದೈವ ನಿಪಪಾತ ಸ ಮುಷ್ಟಿಕೋಽಪಿ ॥ ೧೨೧ ॥**

**ಅರ್ಥ** :- **ಅಥ** ಈ ಮಲ್ಲನು ಸತ್ತನಂತರ, **ದಿವಿ** ಆಕಾಶದಲ್ಲಿ **ದೇವಸಂಘಃ** ದೇವತೆಗಳ ಸಮೂಹವು, **ಭುವಿ** ಭೂಮಿಯಲ್ಲಿ, **ಮರ್ತ್ಯಾಃ** ಮಾನವರು, **ಉತ್ತಮ ಪುರುಷಾಣಾಂ** ಶ್ರೇಷ್ಠ ಪುರುಷರ ಮಧ್ಯೇ, **ಪ್ರವರಂ** ಉತ್ತಮನಾದ, **ಕೃಷ್ಣಂ** ಕೃಷ್ಣನನ್ನು, **ತುಷ್ಟುವುಃ** ಸ್ತೋತ್ರ ಮಾಡಿದರು, **ತದೈವ** ಆ ಚಾಣೂರನು ಸಾಯುವ ಸಮಯದಲ್ಲಿಯೇ **ತದ್ವತ್** ಚಾಣೂರನಂತಯೇ, **ಬಲಸ್ಯ** ಬಲರಾಮನ **ದೃಢಮುಷ್ಟಿನಿಪಿಷ್ಟಮೂರ್ಧಾ** ದೃಢವಾದ ಮುಷ್ಠಿಪಾತ ದಿಂದ ಪುಡಿಯಾದ ತಲೆಯುಳ್ಳವನಾಗಿ **ಸೋಽಪಿ** ಆ ಮುಷ್ಟಿಕನೂ ಕೂಡ, **ಭ್ರಷ್ಟಃ ಸನ್** ಸತ್ತವನಾಗಿ, **ನಿಪಪಾತ** ಕೆಳಗೆ ಬಿದ್ದನು.

**ತಾತ್ಪರ್ಯ** :- ಹೀಗೆ ಕೃಷ್ಣನು ಚಾಣೂರನನ್ನು ಸಾಯಿಸುತ್ತಿರಲು ಆಗ ಆಕಾಶದಲ್ಲಿ ದೇವತೆಗಳು, ಭೂಮಿಯಲ್ಲಿ ಮನುಷ್ಯರೂ ಕೂಡ ಸರ್ವೋತ್ತಮ ನೆಂದು ಕೃಷ್ಣನನ್ನು ಕೊಂಡಾಡಿದರು. ಅದೇ ಸಮಯದಲ್ಲಿ ಬಲರಾಮನೂ ಕೂಡ ತನ್ನ ದೃಢವಾದ ಮುಷ್ಟಿಯಿಂದ ಮುಷ್ಠಿಕನ ತಲೆಯನ್ನು ಪುಡಿ ಮಾಡಿ ಕೃಷ್ಣ ಚಾಣೂರನನ್ನು ಸಾಯಿಸಿದಂತೆ ಮುಷ್ಠಿಕನನ್ನು ಬಡಿದು ಕೊಂದನು.

**ಕೂಟಶ್ಚ ಕೋಸಲ ಉತ ಚ್ಛಲನಾಮಧೇಯೋ**
**ದ್ವೌತತ್ರ ಕೃಷ್ಣನಿಹತಾವಪರೋ ಬಲೇನ ।**
**ಕಂಸಸ್ಯ ಯೇ ತ್ವವರಜಾಶ್ಚ ಸುನೀಥಮುಖ್ಯಾಃ**
**ಸರ್ವೇ ಬಲೇನ ನಿಹತಾಃ ಪರಿಘೇಣ ವೀರಾಃ ॥ ೧೨೨ ॥**

**ಅರ್ಥ** :- ತತ್ರ ಆ ಯುದ್ಧದಲ್ಲಿ **ಕೂಟಃ** ಕೂಟನೆಂಬ ಹೆಸರಿನ ಮಲ್ಲನು, **ಚ** ಮತ್ತು **ಕೋಸಲಃ** ಕೋಸಲ ಎಂಬ ಹೆಸರಿನ ಮಲ್ಲನು, **ದ್ವೌ** ಇಬ್ಬರು, **ಕೃಷ್ಣನಿಹಿತೌ** ಕೃಷ್ಣನಿಂದ ಕೊಲ್ಲಲ್ಪಟ್ಟರು, **ಉತ** ಅನಂತರ **ಅಪರಃ** ಇನ್ನೊಬ್ಬನಾದ, **ಛಲನಾಮದೇಯಃ** ಛಲನೆಂಬ ಹೆಸರಿನ ಮಲ್ಲನು, **ಬಲೇನ** ಬಲರಾಮನಿಂದ **ನಿಹತಃ** ಕೊಲ್ಲಲ್ಪಟ್ಟನು, **ಕಂಸಸ್ಯ** ಕಂಸನ **ಯೇ** ಯಾವ, **ಸುನಿಥಮುಖ್ಯಾಃ** ಸುನಿಥನೇ ಮೊದಲಾದ **ಅವರಜಾಃ** ತಮ್ಮಂದಿರೋ **ತೇ ಸರ್ವೇ** ಅವರೆಲ್ಲಾ **ವೀರಾಃ ಚ** ವೀರರಾದರೂ, **ಬಲೇನ** ಬಲರಾಮನಿಂದ, **ಪರಿಘೇಣ** ಪರಿಘಾಯುಧದಿಂದ **ನಿಹತಾಃ** ಕೊಲ್ಲಲ್ಪಟ್ಟರು.

**ತಾತ್ಪರ್ಯ** :- ಅದೇ ಯುದ್ಧದಲ್ಲಿ ನಂತರ ಕೂಟ ಮತ್ತು ಕೋಸಲ ಎಂಬ ಹೆಸರಿನ ಮಲ್ಲರು ಯುದ್ಧಕ್ಕೆ ಬಂದರು. ಅವರನ್ನು ಕೃಷ್ಣನು ಕೊಂದುಹಾಕಿದನು. ಇನ್ನೊಬ್ಬ ಛಲ ಎಂಬ ಮಲ್ಲನನ್ನು ಬಲರಾಮನು ಕೊಂದು ಹಾಕಿದನು. ನಂತರ ಕಂಸನ ತಮ್ಮಂದಿರಾದ, ಶೂರರಾದ ಸುನೀಥ ಮೊದಲಾದವರನ್ನು ಬಲರಾಮನು ಪರಿಘಾಯುಧದಿಂದ ಕೊಂದು ಹಾಕಿದನು.

**ತಾಭ್ಯಾಂ ಹತಾನಭಿಸಮೀಕ್ಷ್ಯ ನಿಜಾನ್ ಸಮಸ್ತಾನ್**
**ಕಂಸೋ ದಿದೇಶ ಬಲಮಕ್ಷಯಮುಗ್ರವೀರ್ಯಮ್ ।**
**ರುದ್ರಪ್ರಸಾದಕೃತರಕ್ಷಮವಧ್ಯಮೇನೋ**
**ನಿಸ್ಸಾರ್ಯ ದಂಡಮಧಿಕಂ ಕುರುತೇತಿ ಪಾಪಃ ॥ ೧೨೩ ॥**

**ಅರ್ಥ** :- **ಪಾಪ** ಪಾಪಿಷ್ಠನಾದ ಕಂಸನು **ನಿಜಾನ್** ತನ್ನವರಾದ **ಸಮಸ್ತಾನ್** ಎಲ್ಲರನ್ನೂ **ತಾಭ್ಯಾಂ** ಆ ಕೃಷ್ಣರಾಮರಿಂದ **ಹತಾನ್** ಸತ್ತವರನ್ನಾಗಿ **ಅಭಿಸಮೀಕ್ಷ್ಯ** ನೋಡಿ **ರುದ್ರಪ್ರಸಾದಕೃತರಕ್ಷಂ** ರುದ್ರನ ವರದಿಂದ ರಕ್ಷಿತವಾದ **ಉಗ್ರವೀರ್ಯಂ** ಅಧಿಕವಾದ ಬಲವುಳ್ಳ **ಅವಧ್ಯಂ** ಯಾರಿಂದಲೂ ನಾಶ ಮಾಡಲು ಅಶಕ್ಯವಾದ **ಅಕ್ಷಯಂ** ಅವಿನಾಶಿಯಾದ **ಬಲಂ** ಸೈನ್ಯವನ್ನು ಕುರಿತು **ಏತೌ** ಈ ರಾಮಕೃಷ್ಣರನ್ನು **ನಿಸ್ಸಾರ್ಯ** ಇಲ್ಲಿಂದ ಕರೆದುಕೊಂಡು ಹೋಗಿ **ಅಧಿಕಂ** ಹೆಚ್ಚಿನ **ದಂಡಂ** ಶಿಕ್ಷೆಯನ್ನು **ಕುರುತ** ಮಾಡಿರಿ **ಇತಿ** ಎಂದು **ದಿದೇಶ** ಅಪ್ಪಣೆ ಮಾಡಿದನು.

**ತಾತ್ಪರ್ಯ** :- ಅನಂತ ಬಲವುಳ್ಳ ಶ್ರೀಕೃಷ್ಣನು ಆ ವಜ್ರಾಯುಧದಿಂದಲೂ ಗಾಯವಾಗದಂತಹ ದೇಹವುಳ್ಳ ಮಲ್ಲನನ್ನು ಮೇಲಕ್ಕೆ ಎತ್ತಿ ಆಕಾಶದಲ್ಲಿ ಬೆಟ್ಟದಂತಹ ಆಕಾರದ ಅವನನ್ನು ನೂರು ಬಾರಿ ತಿರುಗಿಸಿ ಭೂಮಿಗೆ ಅಪ್ಪಳಿಸಿದನು. ನಂತರ ಕಾಲಿನಿಂದ ತಲೆಯನ್ನು ಒತ್ತಿ ಹೇಗೆ ಪರ್ವತವು ಪುಡಿಯಾಗುವುದೋ ಹಾಗೆ ಅವನನ್ನು ಪುಡಿ ಮಾಡಿದನು.

**ಕೃಷ್ಣಂ ಚ ತುಷ್ಟುವುರಥೋ ದಿವಿ ದೇವಸಂಘಾ**
**ಮರ್ತ್ಯಾ ಭುವಿ ಪ್ರವರಮುತ್ತಮಪೂರುಷಾಣಾಮ್ ।**
**ತದ್ವದ್ ಬಲಸ್ಯ ದೃಢಮುಷ್ಟಿನಿಪಿಷ್ಟಮೂರ್ಧಾ**
**ಭ್ರಷ್ಟಸ್ತದೈವ ನಿಪಪಾತ ಸ ಮುಷ್ಟಿಕೋऽಪಿ ॥ ೧೨೧ ॥**

**ಅರ್ಥ** :- **ಅಥ** ಈ ಮಲ್ಲನು ಸತ್ತನಂತರ, **ದಿವಿ** ಆಕಾಶದಲ್ಲಿ **ದೇವಸಂಘಃ** ದೇವತೆಗಳ ಸಮೂಹವು, **ಭುವಿ** ಭೂಮಿಯಲ್ಲಿ, **ಮರ್ತ್ಯಾಃ** ಮಾನವರು, **ಉತ್ತಮ ಪುರುಷಾಣಾಂ** ಶ್ರೇಷ್ಠ ಪುರುಷರ ಮಧ್ಯೇ, **ಪ್ರವರಂ** ಉತ್ತಮನಾದ, **ಕೃಷ್ಣಂ** ಕೃಷ್ಣನನ್ನು, **ತುಷ್ಟುವುಃ** ಸ್ತೋತ್ರ ಮಾಡಿದರು, **ತದೈವ** ಆ ಚಾಣೂರನು ಸಾಯುವ ಸಮಯದಲ್ಲಿಯೇ **ತದ್ವತ್** ಚಾಣೂರನಂತಯೇ, **ಬಲಸ್ಯ** ಬಲರಾಮನ **ದೃಢಮುಷ್ಟಿನಿಪಿಷ್ಟಮೂರ್ಧಾ** ದೃಢವಾದ ಮುಷ್ಠಿಪಾತ ದಿಂದ ಪುಡಿಯಾದ ತಳೆಯುಳ್ಳವನಾಗಿ **ಸೋऽಪಿ** ಆ ಮುಷ್ಟಿಕನೂ ಕೂಡ, ಭ್ರಷ್ಟಃ ಸನ್ ಸತ್ತವನಾಗಿ, ನಿಪಪಾತ ಕೆಳಗೆ ಬಿದ್ದನು.

**ತಾತ್ಪರ್ಯ** :- ಹೀಗೆ ಕೃಷ್ಣನು ಚಾಣೂರನನ್ನು ಸಾಯಿಸುತ್ತಿರಲು ಆಗ ಆಕಾಶದಲ್ಲಿ ದೇವತೆಗಳು, ಭೂಮಿಯಲ್ಲಿ ಮನುಷ್ಯರೂ ಕೂಡ ಸರ್ವೋತ್ತಮ ನೆಂದು ಕೃಷ್ಣನನ್ನು ಕೊಂಡಾಡಿದರು. ಅದೇ ಸಮಯದಲ್ಲಿ ಬಲರಾಮನೂ ಕೂಡ ತನ್ನ ದೃಢವಾದ ಮುಷ್ಟಿಯಿಂದ ಮುಷ್ಠಿಕನ ತಲೆಯನ್ನು ಪುಡಿ ಮಾಡಿ ಕೃಷ್ಣ ಚಾಣೂರನನ್ನು ಸಾಯಿಸಿದಂತೆ ಮುಷ್ಠಿಕನನ್ನು ಬಡಿದು ಕೊಂದನು.

**ಕೂಟಶ್ಚ ಕೋಸಲ ಉತ ಚ್ಛಲನಾಮಧೇಯೋ**
**ದೌತ್ವತ್ರ ಕೃಷ್ಣನಿಹತಾವಪರೋ ಬಲೇನ ।**
**ಕಂಸಸ್ಯ ಯೇ ತ್ವವರಜಾಶ್ಚ ಸುನೀಥಮುಖ್ಯಾಃ**
**ಸರ್ವೇ ಬಲೇನ ನಿಹತಾಃ ಪರಿಘೇಣ ವೀರಾಃ ॥ ೧೨೨ ॥**

**ಅರ್ಥ** :- ತತ್ರ ಆ ಯುದ್ಧದಲ್ಲಿ **ಕೂಟಃ** ಕೂಟನೆಂಬ ಹೆಸರಿನ ಮಲ್ಲನು, **ಚ** ಮತ್ತು **ಕೋಸಲಃ** ಕೋಸಲ ಎಂಬ ಹೆಸರಿನ ಮಲ್ಲನು, **ದ್ವೌ** ಇಬ್ಬರು, **ಕೃಷ್ಣನಿಹಿತೌ** ಕೃಷ್ಣನಿಂದ ಕೊಲ್ಲಲ್ಪಟ್ಟರು, **ಉತ** ಅನಂತರ **ಅಪರಃ** ಇನ್ನೊಬ್ಬನಾದ, **ಛಲನಾಮದೇಯಃ** ಛಲನೆಂಬ ಹೆಸರಿನ ಮಲ್ಲನು, **ಬಲೇನ** ಬಲರಾಮನಿಂದ **ನಿಹತಃ** ಕೊಲ್ಲಲ್ಪಟ್ಟನು, **ಕಂಸಸ್ಯ** ಕಂಸನ **ಯೇ** ಯಾವ, **ಸುನಿಥಮುಖ್ಯಾಃ** ಸುನಿಥನೇ ಮೊದಲಾದ **ಅವರಜಾಃ** ತಮ್ಮಂದಿರೋ **ತೇ ಸರ್ವೇ** ಅವರೆಲ್ಲಾ **ವೀರಾಃ ಚ** ವೀರರಾದರೂ, **ಬಲೇನ** ಬಲರಾಮನಿಂದ, **ಪರಿಘೇಣ** ಪರಿಘಾಯುಧದಿಂದ **ನಿಹತಾಃ** ಕೊಲ್ಲಲ್ಪಟ್ಟರು.

**ತಾತ್ಪರ್ಯ** :- ಅದೇ ಯುದ್ಧದಲ್ಲಿ ನಂತರ ಕೂಟ ಮತ್ತು ಕೋಸಲ ಎಂಬ ಹೆಸರಿನ ಮಲ್ಲರು ಯುದ್ಧಕ್ಕೆ ಬಂದರು. ಅವರನ್ನು ಕೃಷ್ಣನು ಕೊಂದುಹಾಕಿದನು. ಇನ್ನೊಬ್ಬ ಛಲ ಎಂಬ ಮಲ್ಲನನ್ನು ಬಲರಾಮನು ಕೊಂದು ಹಾಕಿದನು. ನಂತರ ಕಂಸನ ತಮ್ಮಂದಿರಾದ, ಶೂರರಾದ ಸುನೀಥ ಮೊದಲಾದವರನ್ನು ಬಲರಾಮನು ಪರಿಘಾಯುಧದಿಂದ ಕೊಂದು ಹಾಕಿದನು.

**ತಾಭ್ಯಾಂ ಹತಾನಭಿಸಮೀಕ್ಷ್ಯ ನಿಜಾನ್ ಸಮಸ್ತಾನ್**
**ಕಂಸೋ ದಿದೇಶ ಬಲಮಕ್ಷಯಮುಗ್ರವೀರ್ಯಮ್ ।**
**ರುದ್ರಪ್ರಸಾದಕೃತರಕ್ಷಮವಧ್ಯಮೇನೋ**
**ನಿಸ್ಸಾರ್ಯ ದಂಡಮಧಿಕಂ ಕುರುತೇತಿ ಪಾಪಃ ॥ ೧೨೩ ॥**

**ಅರ್ಥ** :- **ಪಾಪ** ಪಾಪಿಷ್ಟನಾದ ಕಂಸನು **ನಿಜಾನ್** ತನ್ನವರಾದ **ಸಮಸ್ತಾನ್** ಎಲ್ಲರನ್ನೂ **ತಾಭ್ಯಾಂ** ಆ ಕೃಷ್ಣರಾಮರಿಂದ **ಹತಾನ್** ಸತ್ತವರನ್ನಾಗಿ **ಅಭಿಸಮೀಕ್ಷ್ಯ** ನೋಡಿ **ರುದ್ರಪ್ರಸಾದಕೃತರಕ್ಷಂ** ರುದ್ರನ ವರದಿಂದ ರಕ್ಷಿತವಾದ **ಉಗ್ರವೀರ್ಯಂ** ಅಧಿಕವಾದ ಬಲವುಳ್ಳ **ಅವಧ್ಯಂ** ಯಾರಿಂದಲೂ ನಾಶ ಮಾಡಲು ಅಶಕ್ಯವಾದ **ಅಕ್ಷಯಂ** ಅವಿನಾಶಿಯಾದ **ಬಲಂ** ಸೈನ್ಯವನ್ನು ಕುರಿತು **ಏತೌ** ಈ ರಾಮಕೃಷ್ಣರನ್ನು **ನಿಸ್ಸಾರ್ಯ** ಇಲ್ಲಿಂದ ಕರೆದುಕೊಂಡು ಹೋಗಿ **ಅಧಿಕಂ** ಹೆಚ್ಚಿನ **ದಂಡಂ** ಶಿಕ್ಷೆಯನ್ನು **ಕುರುತ** ಮಾಡಿರಿ **ಇತಿ** ಎಂದು **ದಿದೇಶ** ಅಪ್ಪಣೆ ಮಾಡಿದನು.

**ತಾತ್ಪರ್ಯ** :- ಕಂಸನು ಎಲ್ಲಾ ತನ್ನ ವೀರರು ಕೃಷ್ಣರಾಮರಿಂದ ಹತರಾಗುತ್ತಿದ್ದದ್ದನ್ನು ನೋಡಿ ರುದ್ರಪ್ರಸಾದದಿಂದ ಅವಧ್ಯವಾಗಿದ್ದ ನಾಶವೇ ಆಗದಿದ್ದ ಬಲಶಾಲಿಯಾದತನ್ನ ೨೦ ಅಕ್ಷೋಹಿಣಿ ಸೈನ್ಯವನ್ನುಕುರಿತು ನೀವು ಈಗಲೇ ಇವರಿಬ್ಬರನ್ನು ಇಲ್ಲಿಂದ ಹೊರಗೆ ಕರದುಕೊಂಡು ಹೋಗಿ ಇವರಿಬ್ಬರಿಗೆ ಬಹಳ ಶಿಕ್ಷೆಯನ್ನು ಕೊಡಿರಿ ಎಂದು ಆಜ್ಞಾಪಿಸಿದನು.

**ಶ್ರುತ್ವೈವ ರಾಜವಚನಂ ಬಲಮಕ್ಷಯಂ ತ-**
**ದಕ್ಷೋಹಿಣೀದಶಕಯುಗ್ಮಮನಂತವೀರ್ಯಮ್ ।**
**ಕೃಷ್ಣಂ ಚಕಾರ ವಿವಿಧಾಸ್ತ್ರಧರಂ ಸ್ವಕೋಷ್ಠೇ**
**ಸಿಂಹಂ ಯಥಾ ಕಿಲ ಸೃಗಾಲಬಲಂ ಸಮೇತಮ್ ॥ ೧೨೪ ॥**

**ಅರ್ಥ** :- **ರಾಜವಚನಂ** ಕಂಸನ ಮಾತನ್ನು **ಶ್ರುತ್ವೈವ** ಕೇಳಿದ ಕೂಡಲೇ **ವಿವಿಧಾಸ್ತ್ರಧರಂ** ನಾನಾ ಶಸ್ತ್ರಗಳನ್ನು ಹಿಡಿದ **ಅಕ್ಷಯಂ** ಅವಿನಾಶಿಯಾದ **ಅಕ್ಷೌಹಿಣೀ** ದಶಕಯುಗ್ಮಂ ಇಪ್ಪತ್ತು **ಅಕ್ಷೋಹಿಣೀ** ಸಂಖ್ಯಾತವಾದ **ತದ್ ಬಲಂ** ಆ ಕಂಸನ ಸೈನ್ಯವು **ಯಥಾ** ಹೇಗೆ **ಸಮೇತಂ** ಒಟ್ಟು ಸೇರಿದ **ಸೃಗಾಲ ಬಲಂ** ನರಿಗಳ ಸೈನ್ಯವು **ಸಿಂಹಂ** ಸಿಂಹವನ್ನು **ಸ್ವಕೋಷ್ಠೇ** ತಮ್ಮ ಮಧ್ಯದಲ್ಲಿರು ವಂತೆ ಸುತ್ತುವರಿಯುತ್ತವೆಯೋ **ತಥಾ** ಹೀಗೆ **ಅನಂತ ವೀರ್ಯಂ** ಅಪರಿಮಿತ ಪರಾಕ್ರಮವುಳ್ಳ **ಕೃಷ್ಣಂ** ಕೃಷ್ಣನನ್ನು **ಸ್ವಕೋಷ್ಠೇ** ತಮ್ಮ ಮಧ್ಯದಲ್ಲಿರುವಂತೆ **ಚಕಾರ** ಮಾಡಿದವು.

**ತಾತ್ಪರ್ಯ** :- ಕಂಸನು ಹೀಗೆ ಆಜ್ಞಾಪಿಸಲು ಕೂಡಲೇ ಅವಿನಾಶಿಯಾದ ೨೦ ಅಕ್ಷೋಹಿಣೀ ಸೈನ್ಯವು ಅಪರಿಮಿತ ಬಲಶಾಲಿಯಾದ ಕೃಷ್ಣನನ್ನು ಸುತ್ತು ವರೆಯಿತು. ಅದು ಹೇಗೆಂದರೆ ನರಿಗಳ ಅನಂತ ಸಮೂಹವು ಸಿಂಪವನ್ನು ಹೇಗೆ ಸುತ್ತುವರೆದರೆ ನಿಷ್ಪ್ರಯೋಜಕವೋ ಹಾಗೆಯೇ ಆಗಿತ್ತು.

**ಜಾನನ್ನಪೀಶ್ವರಮನಂತಬಲಂ ಮಹೇಂದ್ರಃ**
**ಕೃಷ್ಣಂ ರಥಂ ನಿಜಮಯಾಪಯದಾಯುಧಾಢ್ಯಮ್ ।**
**ಶುಶ್ರೂಷಣಾಯ ಪರಮಸ್ಯ ಯಥಾ ಸಮುದ್ರ-**
**ಮರ್ಘ್ಯೇಣ ಪೂರಯತಿ ಪೂರ್ಣಜಲಂ ಜನೋಽಯಮ್ ॥ ೧೨೫ ॥**

**ಅರ್ಥ** :- **ಮಹೇಂದ್ರಃ** ಇಂದ್ರನು **ಈಶ್ವರಂ** ಸರ್ವಸಮರ್ಥನಾದ **ಕೃಷ್ಣಂ** ಕೃಷ್ಣನನ್ನು **ಅನಂತಬಲಂ** ರಥ ಆಯುಧಾದಿಗಳ ಅಪೇಕ್ಷವಿಲ್ಲದ **ಅಪರಿಮಿತ** ಬಲಶಾಲಿಯನ್ನಾಗಿ **ಜಾನನ್ನಪಿ** ತಿಳಿದಿದ್ದರೂ ಕೂಡ, **ಪರಮಸ್ಯ** ಶ್ರೀಕೃಷ್ಣನ **ಶುಶ್ರೂಷಣಾಯ** ಸೇವೆಗಾಗಿ **ಯಥಾ** ಹೇಗೆ, **ಅಯಂ ಜನಃ** ಲೋಕದ ಜನರು **ಪೂರ್ಣಜಲಂ** ನೀರಿನಿಂದ ತುಂಬಿದ **ಸಮುದ್ರಂ** ಸಮುದ್ರವನ್ನು **ಅರ್ಘ್ಯೇ** ಅರ್ಘ್ಯದಿಂದ **ಪೂರಯತಿ** ತುಂಬಿಸುತ್ತಾರೋ **ತಥಾ** ಹಾಗೆ **ಆಯುಧಾಢ್ಯಂ** ಆಯುಧಗಳಿಂದ ತುಂಬಿದ **ನಿಜಂ** ತನ್ನ **ರಥಂ** ರಥವನ್ನು **ಅಯಾತಯತ್** ಕಳುಹಿಸಿದನು.

**ತಾತ್ಪರ್ಯ** :- ಕೃಷ್ಣನು ಸರ್ವಸಮರ್ಥನೂ ಅವನಿಗೆ ಯಾವುದೇ ಆಯುಧ ರಥಗಳ ಅವಶ್ಯಕತೆ ಇಲ್ಲದ ಪರಿಪೂರ್ಣನು ಎಂದು ದೇವೇಂದ್ರನು ತಿಳಿದಿದ್ದರೂ ಕೂಡ ಹೇಗೆ ಲೋಕದ ಜನರು ಸಮುದ್ರದ ನೀರು ಪರಿಪೂರ್ಣವಾಗಿದ್ದರೂ ತಮ್ಮ ಪುಣ್ಯಾಭಿವೃದ್ಧಿಗಾಗಿ ಸಮುದ್ರದಿಂದ ನೀರನ್ನು ತೆಗೆದುಕೊಂಡು ಮತ್ತೆ ಸಮುದ್ರಕ್ಕೆ ಅರ್ಘ್ಯವನ್ನು ಬಿಡುತ್ತಾರೋ ಅದರಂತೆ ದೇವೇಂದ್ರನು ತನಗೆ ಕೃಷ್ಣನಿಂದಲೇ ಲಭಿಸಿದ ಎಲ್ಲಾ ವಸ್ತುಗಳಲ್ಲಿ ರಥ ಆಯುಧಗಳನ್ನು ಮತ್ತೆ ಆ ಕೃಷ್ಣನ ಸೇವೆಗಾಗಿಯೇ ಕಳುಹಿಸಿ ತಾನು ಪುಣ್ಯ ಸಂಪಾದಿಸಿಕೊಂಡನು.

**ಸ್ವಸ್ಯಂದನಂ ತು ಭಗವಾನ್ ಸ ಮಹೇಂದ್ರದತ್ತ-**
**ಮಾರುಹ್ಯ ಸೂತವರಮಾತಲಿಸಂಗೃಹೀತಮ್ ।**
**ನಾನಾಯುಧೋಗ್ರಕಿರಣಸ್ತರಣಿರ್ಯಥೈವ**
**ಧ್ವಾಂತಂ ವ್ಯನಾಶಯದಶೇಷತ ಆಶು ಸೈನ್ಯಮ್ ॥ ೧೨೬ ॥**

**ಅರ್ಥ** :- **ಸಃ ಭಗವಾನ್** ಆ ಶ್ರೀಕೃಷ್ಣನು **ಸೂತವರಮಾತಲಿ ಸಂಗೃಹೀತಂ** ಶ್ರೇಷ್ಠ ಸಾರಥಿಯಾದ ಮಾತಲಿಯಿಂದ ಹಿಡಿಯಲ್ಪಟ್ಟ **ಮಹೇಂದ್ರದತ್ತಂ** ದೇವೇಂದ್ರ ಕೊಡಲ್ಪಟ್ಟ **ಸ್ವಂ ಸ್ಯಂದನಂತು** ತನ್ನದ್ದೇ ಆದ ರಥವನ್ನು **ಆರುಹ್ಯ** ಏರಿ **ನಾನಾಯುಧೋಗ್ರಕರಣಃ** ನಾನಾ ವಿಧವಾದ ಆಯುಧಗಳ ಪ್ರಖರ ಪ್ರಕಾಶದಿಂದ ಬೆಳಗುತ್ತ **ಯಥಾ** ಹೇಗೆ **ತರಣಿಃ** ಸೂರ್ಯನು, **ಧ್ವಾಂತಂ** ಕತ್ತಲೆಯನೂ **ತಥಾ** ಹಾಗೆ **ಅಶೇಷತಃ** ಎಲ್ಲಾ ಕಂಸನ **ಸೈನ್ಯಂ** ಸೈನ್ಯವನ್ನು **ಆಶು** ಕೂಡಲೇ **ವ್ಯನಾಶಯತ್** ನಾಶ ಮಾಡಿದನು.

ತಾತ್ಪರ್ಯ :- ಕೃಷ್ಣನು ದೇವೇಂದ್ರನ ಸಾರಥಿಯಾದ ಮಾತಲಿಯು ನಡೆಸುತ್ತಿದ್ದ ವಸ್ತುತಃ ತಾನೇ ದೇವೇಂದ್ರನಿಗೆ ಕೊಟ್ಟಿದ್ದ ಆ ರಥವನ್ನು ಏರಿ ಪ್ರಖರವಾದ ಪ್ರಕಾಶದಿಂದ ಬೆಳಗುವ ಆಯುಧಗಳಿಂದ ಕೂಡಿದವನಾಗಿ ಹೇಗೆ ಸೂರ್ಯನು ಕತ್ತಲೆಯನ್ನು ನಾಶ ಮಾಡುತ್ತಾನೋ ಅದರಂತೆ ಎಲ್ಲಾ ಕಂಸ ಸೈನ್ಯವನ್ನು ನಾಶ ಮಾಡಿದ.

ನಿಃಶೇಷತೋ ವಿನಿಹತೇ ಸ್ವಬಲೇ ಸ ಕಂಸ-
ಶ್ಚರ್ಮಾಸಿಪಾಣಿರಭಿಯಾತುಮಿಯೇಷ ಕೃಷ್ಣಮ್ ।
ತಾವತ್ ತಮೇವ ಭಗವಂತಮಭಿಪ್ರಯಾತ-
ಮುತ್ತುಂಗಮಂಚಶಿರಸಿ ಪ್ರದದರ್ಶ ವೀರಮ್ ॥ ೧೨೭ ॥

ಅರ್ಥ :- ಸ್ವ ಬಲೇ ತನ್ನ ಸೈನ್ಯವು ನಿಃಶೇಷತಃ ಸಂಪೂರ್ಣವಾಗಿ ವಿನಿಹತೇ ಸತಿ ನಾಶವಾಗುತ್ತಿರಲು ಸಃ ಕಂಸಃ ಆ ಕಂಸನು ಚರ್ಮಾಸಿಪಾಣಿಃ ಗುರಾಣಿ ಕತ್ತಿಗಳನ್ನು ಹಿಡಿದವನಾಗಿ ಕೃಷ್ಣಂ ಕೃಷ್ಣನನ್ನು ಅಭಯಾತುಂ ಎದುರಿಸಲು ಇಯೇಷ ಬಯಸಿದನು ತಾವತ್ ಆವಾಗಲೇ ಅಭಿಪ್ರಯಾಂ ತಂ ತನಗೆ ಅಭಿಮುಖವಾಗಿ ಬರುತ್ತಿರುವ ವೀರಂ ಪರಾಕ್ರಮಶಾಲಿಯಾದ ತಂ ಆ ಭಗವಂತಂ ಕೃಷ್ಣನನ್ನು ಉತ್ತುಂಗಮಂಚಶಿರಸಿ ಉನ್ನತವಾದ ಆಸನದ ತುದಿಭಾಗದಲ್ಲಿ ಪ್ರದದರ್ಶ ಕಂಡನು.

ತಾತ್ಪರ್ಯ :- ಹೀಗೆ ಕಂಸನು ತನ್ನ ಸೈನ್ಯವನ್ನು ಸಂಪೂರ್ಣನಾಗಿ ಕೃಷ್ಣನು ನಾಶ ಮಾಡಿದ್ದನ್ನುನೋಡಿ ತಾನೇ ಕೃಷ್ಣನ ಮೇಲೇರಿ ಹೋಗಬೇಕೆಂದು ಕತ್ತಿ ಗುರಾಣಿಗಳನ್ನು ಹಿಡಿದು ಹೊರಟನು. ಆದರ ಅಷ್ಟರಲ್ಲಿಯೇ ಎತ್ತರದ ಆಸನದ ತುದಿಯನ್ನೇರಿ ತನ್ನ ಹತ್ತಿರವೇ ಬರುತ್ತಿದ್ದ ವೀರನಾದ ಕೃಷ್ಣನನ್ನು ಕಂಡನು.

ತಂ ಶ್ಯೇನವೇಗಮಭಿತಃ ಪ್ರತಿಸಂಚರಂತಂ
ನಿಶ್ಛಿದ್ರಮಾಶು ಜಗೃಹೇ ಭಗವಾನ್ ಪ್ರಸಹ್ಯ ।
ಕೇಶೇಷು ಚೈನಮಭಿಮೃಶ್ಯ ಕರೇಯ ವಾಮೇ-
ನೋದ್‌ಧೃತ್ಯ ದಕ್ಷಿಣಕರೇಣ ಜಘಾನ ಕೇऽಸ್ಯ ॥ ೧೨೮ ॥

**ಅರ್ಥ** :- ಭಗವಾನ್ ಶ್ರೀಕೃಷ್ಣನು, **ಶ್ಯೇನವೇಗಂ** ಹದ್ದಿನ ವೇಗದಂತೆ ವೇಗವುಳ್ಳ **ಅಭಿತಃ** ಸುತ್ತಲೂ **ನಿಶ್ಛಿದ್ರಂ** ನಿರಂತರವಾಗಿ **ಪ್ರತಿಸಂಚರಂತಂ** ತಿರುಗುತ್ತಿರುವ **ತಂ** ಆ ಕಂಸನನ್ನು **ಆಶು** ಕೂಡಲೇ **ಪ್ರಸಹ್ಯ**ಬಲಾತ್ಕಾರದಿಂದ **ಕೇಶೇಷು** ಕೂದಲುಗಳಲ್ಲಿ **ಅಭಿಮೃಶ್ಯ** ಎಳೆದು **ಜಗೃಹೇ** ಹಿಡಿದನು **ಚ** ಮತ್ತು **ಏನಂ** ಈ ಕಂಸನನ್ನು **ವಾಮೇನಕರೇಣ** ಎಡಕೈಯಿಂದ **ಉದ್ಧೃತ್ಯ** ಎತ್ತಿ **ದಕ್ಷಿಣಕರೇಣ** ಬಲಗೈಯಿಂದ **ಅಸ್ಯ** ಈ ಕಂಸನ **ಕೆ** ತಲೆಯಲ್ಲಿ **ಜಘಾನ** ಹೊಡೆದನು.

**ತಾತ್ಪರ್ಯ** :- ಕೃಷ್ಣ ಹದ್ದಿನ ವೇಗದಂತೆ ವೇಗವಾಗಿ ಅತ್ತಿತ್ತ ಸುತ್ತಲೂ ಎಡಬಿಡದೇ ಚಲಿಸುತ್ತಿದ್ದ ಕಂಸನನ್ನು ಬಲಾತ್ಕಾರದಿಂದ ಕೂದಲಿನಲ್ಲಿ ಕೈ ಹಾಕಿ ಎಳೆದು ಹಿಡಿದನು. ಮತ್ತು ಎಡಕೈಯಿಂದ ಅವನನ್ನು ಎತ್ತಿ ಬಲಗೈಯಿಂದ ಅವನ ತಲೆಗೆ ಹೊಡೆದನು.

**ಸಂಚಾಲಿತೇನ ಮಕುಟೇನ ವಿಕುಂಡಲೇನ**
**ಕರ್ಣದ್ವಯೇನ ವಿಗತಾಭರಣೋರಸಾ ಚ ।**
**ಪ್ರಸ್ತಾಂಬರೇಣ ಜಘನೇನ ಸುಶೋಚ್ಯರೂಪಃ**
**ಕಂಸೋ ಬಭೂವ ನರಸಿಂಹಕರಾಗ್ರಸಂಸ್ಥಃ ॥ ೧೨೯ ॥**

**ಅರ್ಥ** :- **ನರಸಿಂಹಕರಾಗ್ರಸ್ಥಿತಃ** ಪುರುಷೋತ್ತಮನಾದ ಭಗವಂತನ ಕೈಯಲ್ಲಿ ಸಿಕ್ಕಿದ **ಕಂಸಃ** ಕಂಸನು **ಸಂಚಾಲಿತೇನ** ಕೆಳಗೆ ಬಿದ್ದ **ಮುಕುಟೇನ** ಕಿರೀಟದಿಂದ **ವಿಕುಂಡಲೇನ** ಕಳಚಿಬಿದ್ದ ಕುಂಡಲಗಳುಳ್ಳ **ಕರ್ಣದ್ವಯೇನ** ಎರಡು ಕಿವಿಗಳಿಂದ **ವಿಗತಾಭರಣೋರಸಾ** ಜಾರಿಬಿದ್ದ ಎದೆಯ ಆಭರಣ ಗಳಿಂದ **ಪ್ರಸ್ತಾಂಭರೇಣ** ಬಿಚ್ಚಿಹೋದ ಬಟ್ಟೆಯುಳ್ಳ **ಜಘನೇನ** ಸೊಂಟದಿಂದ **ನರಸಿಂಹಕರಾಗ್ರಸ್ಥಿತಃ** ನರಸಿಂಹನ ಕೈಯಲ್ಲಿ ಸಿಕ್ಕಿಬಿದ್ದಿರುವ ಹಿರಣ್ಯಕಶಿಪುವಿನಂತೆ **ಸುಶೋಚ್ಯರೂಪಃ** ಶೋಚನೀಯಸ್ಥಿತಿಯುಳ್ಳವನಾಗಿ **ಬಭೂವ** ಆದನು.

**ತಾತ್ಪರ್ಯ** :- ಯಾವಾಗ ಪುರುಷೋತ್ತಮನಾದ ಕೃಷ್ಣನು ಕಂಸನನ್ನು ಕೈಯಿಂದ ಹಿಡಿದು ಬಡಿದನೋ ಆಗ ಕಂಸನ ತಲೆಯಲ್ಲಿದ್ದ ಕಿರೀಟ ಕಳಚಿ ಬಿತ್ತು. ಕಿವಿಯಿಂದ ಕುಂಡಲಗಳು ಕಳಚಿಬಿತ್ತು. ಎದೆಯಲ್ಲಿದ್ದ ಆಭರಣಗಳು ಜಾರಿ ಬಿದ್ದವು. ಸೊಂಟದಬಟ್ಟೆ ಬಿಚ್ಚಿಹೋಯಿತು. ಹೀಗೆ ಕಂಸನ ಅವಸ್ಥೆ ನರಸಿಂಹನಕೈಯಲ್ಲಿ ಸಿಕ್ಕಿಬಿದ್ದ ಹಿರಣ್ಯಕಶಿಪುವಿನಂತೆ ಶೋಚನೀಯವಾಯಿತು.

**ಉತ್ಕೃಷ್ಯ ತಂ ಸುರಪತಿಃ ಪರಮೋಚ್ಚಮಂಚಾ-**
**ದನ್ಯೈರಜೇಯಮತಿವೀರ್ಯಬಲೋಪಪನ್ನಮ್ ।**
**ಅಬ್ಜೋದ್ಭವೇಶವರಗುಪ್ತಮನಂತಶಕ್ತಿ-**
**ರ್ಭೂಮೌ ನಿಪಾತ್ಯ ಸ ದದೌ ಪದಯೋಃ ಪ್ರಹಾರಮ್ ॥೧೩೦॥**

**ಅರ್ಥ :- ಅನಂತಶಕ್ತಿಃ** ಅನಂತ ಪರಾಕ್ರಮವುಳ್ಳ **ಸುರಪತಿಃ** ಶ್ರೀಕೃಷ್ಣನು **ಅಬ್ಜೋದ್ಭವೇಶವರಗುಪ್ತಂ** ಬ್ರಹ್ಮರುದ್ರರ ವರದಿಂದ ರಕ್ಷಿತನಾದ, **ಅನ್ಯೈಃ** ಬೇರೆಯವರಿಂದ **ಅಜೇಯಂ** ಸೋಲಿಸಲು ಅಸಾಧ್ಯನಾದ **ಅತಿವೀರ್ಯ ಬಲೋಪಪನ್ನಂ** ಅತ್ಯಂತ ವೀರ್ಯ ಪರಾಕ್ರಮಗಳುಳ್ಳ **ತಂ** ಆ ಕಂಸನನ್ನು **ಪರಮೋಚ್ಚಮಂಚಾತ್** ಅತ್ಯುನ್ನತವಾದ ಮಂಚದಿಂದ **ಉತ್ಕೃಷ್ಯ** ಎಳೆದು **ಭೂಮೌ** ಭೂಮಿಯಲ್ಲಿ **ನಿಪಾತ್ಯ** ಬೀಳಿಸಿ **ಪದಯೋಃ** ಕಾಲುಗಳಿಂದ **ಪ್ರಹಾರಂ** ಏಟುಗಳನ್ನು **ದದೌ** ಕೊಟ್ಟನು.

**ತಾತ್ಪರ್ಯ :-** ಅಪರಿಮಿತವಾದ ಬಲವುಳ್ಳ ಶ್ರೀಕೃಷ್ಣನು ಬ್ರಹ್ಮರುದ್ರರ ವರದ ಬಲದಿಂದ ರಕ್ಷಿತನಾದ ಆದ್ದರಿಂದಲೇ ಬೇರೆ ಯಾರಿಂದಲೂ ಸೋಲಿಸಲು ಅಶಕ್ಯನಾದ ಕಂಸನನ್ನು ಎತ್ತರದ ಆಸನದಿಂದ ಎಳೆದು ಭೂಮಿ ಯಲ್ಲಿ ಬೀಳಿಸಿ ಕಾಲಿನಿಂದ ತುಳಿದನು.

**ದೇಹೇ ತು ಯೋಽಭವದಮುಷ್ಯ ರಮೇಶಬಂಧು-**
**ರ್ವಾಯುಃ ಸ ಕೃಷ್ಣತನುಮಾಶ್ರಯದನ್ಯಪಾಪಮ್ ।**
**ದೈತ್ಯಂ ಚಕರ್ಷ ಹರಿರತ್ರ ಶರೀರಸಂಸ್ಥಂ**
**ಪಶ್ಯತ್ಸು ಕಂಜಜಮುಖೇಷು ಸುರೇಷ್ವನಂತಃ ॥ ೧೩೧ ॥**

**ಅರ್ಥ :-ಅಮುಷ್ಯ** ಈ ಕಂಸನ, **ದೇಹೇ** ದೇಹದಲ್ಲಿ **ರಮೇಶಬಂಧುಃ** ಹರಿಯ ಬಂಧುವಾದ **ಯಃ** ಯಾವ **ವಾಯುಃ** ವಾಯುವು **ಅಭವತ್** ಇದ್ದನೋ **ಸಃ** ಆ ವಾಯುವು **ಕೃಷ್ಣತನುಂ** ಕೃಷ್ಣನ ದೇಹವನ್ನು **ಆಶ್ರಯತ್** ಪ್ರವೇಶಿಸಿದನು. **ಅನಂತಃ ಹರಿಃ** ನಾಶರಹಿತನಾದ ಶ್ರೀಕೃಷ್ಣನು **ಅತ್ರ** ಈ ಕಂಸನ **ಶರೀರಸಂಸ್ಥಂ** ಶರೀರದಲ್ಲಿದ್ದ **ಅನ್ಯತ್** ವಾಯುವಿಗಿಂತ ಬೇರೆಯವನಾದ **ಪಾಪಂ** ಪಾಪಿಯಾದ **ದೈತ್ಯಂ** ಅಸುರನಾದ ಕಾಲನೇಮಿಯನ್ನು **ಕಂಜಜ ಮುಖೇಷು** ಬ್ರಹ್ಮನೇ ಮೊದಲಾದ **ಸುರೇಷು** ದೇವತೆಗಳು, **ಪಶ್ಯತ್ಸು** ಸತ್ಸು ನೋಡುತ್ತಿರಲು **ಚಕರ್ಷ** ಎಳೆದು **ಅಂಧಂ** ತಮಸ್ಸನ್ನು ಸೇರಿಸಿದನು.

**ತಾತ್ಪರ್ಯ :-** ಕೃಷ್ಣನು ಕಂಸನನ್ನುಸಂಹರಿಸಿದ ಕೂಡಲೇ ಆ ಕಂಸನಲ್ಲಿ ಆವಿಷ್ಟನಾಗಿ ಅವನಿಗೆ ವಿಶೇಷವಾದ ಬಲ ಪರಾಕ್ರಮಗಳನ್ನು ನೀಡಿದ್ದ ವಾಯುವು ಕೂಡಲೇ ಭಗವಂತನ ದೇಹವನ್ನು ಪ್ರವೇಶ ಮಾಡಿದನು. ಆ ಮೇಲೆ ಭಗವಂತ ಈ ಕಂಸನ ದೇಹದಲ್ಲಿದ್ದು ಅಲ್ಲಿ ಪಾಪಕೆಲಸಗಳನ್ನು ಮಾಡುತ್ತಿದ್ದ ದುಷ್ಟನಾದ ಪಾಪಿಯಾದ ಕಾಲನೇಮಿಯೆಂಬ ದೈತ್ಯನನ್ನು ಎಲ್ಲಾ ಬ್ರಹ್ಮಾದಿ ದೇವತೆಗಳು ನೋಡುತ್ತಿದ್ದಂತೆ ಅಂದಂ ತಮಸ್ಸಿಗೆ ಕಳುಹಿಸಿದನು.

**ದ್ವೇಷಾತ್ ಸ ಸರ್ವಜಗದೇಕಗುರೋಃ ಸ್ವಕೀಯೈಃ**
**ಪೂರ್ವಪ್ರಮಾಪಿತಜನೈಃ ಸಹಿತಃ ಸಮಸ್ತೈಃ ।**
**ಧಾತ್ರ್ಯಾದಿಭಿಃ ಪ್ರತಿಯಯೌ ಕುಮತಿಸ್ತಮೋಽಂಧ-**
**ಮನ್ಯೇಽಪಿ ಚೈವಮುಪಯಾಂತಿ ಹರಾವಭಕ್ತಾಃ ॥ ೧೩೨ ॥**

**ಅರ್ಥ :- ಸರ್ವಜಗದೇಕಗುರೋಃ** ಸಕಲ ಜಗತ್ತಿಗೆ ಮುಖ್ಯಗುರುವಾದ ಶ್ರೀಕೃಷ್ಣನಲ್ಲಿ **ದ್ವೇಷಾತ್** ದ್ವೇಷ ಮಾಡಿದ್ದರಿಂದ **ಸಃ ಕುಮತಿಃ** ಆ ಪಾಪ ಬುದ್ಧಿಯವನಾದ ಕಂಸನು **ಪೂರ್ವಂ ಪ್ರಮಾಹಿತಜನೈಃ** ಕೃಷ್ಣನಿಂದ ಹಿಂದೆ ಹತರಾದ **ಧಾತ್ರ್ಯಾದಿಭಿಃ** ಪೂತನೆ ಮೊದಲಾದ, **ಸಮಸ್ತೈಃ** ಎಲ್ಲಾ **ಸ್ವಕೀಯೈಃ** ಸಹ ತನ್ನಸಂಗಡಿಗರೊಂದಿಗೆ ಕೂಡಿಕೊಂಡು **ಹರೌ** ಹರಿಯಲ್ಲಿ **ಅಭಕ್ತಾಃ** ದ್ವೇಷ ಮಾಡುವ **ಅನ್ಯೇಽಪಿ ಚ** ಈರದ ಬೇರೆ ದೈತ್ಯರೂ ಕೂಡ **ಅಂಧಂ ತಮಃ ಅಂಧಂ** ತಮಸ್ಸನ್ನೂ **ಉಪಯಾಂತಿ** ಹೋಗುತ್ತಾರೆ.

**ತಾತ್ಪರ್ಯ :-** ಈ ಕಂಸರೂಪಿಯಾದ ಕಾಲನೇಮಿಯು ಸದಾಕಾಲ ಸಕಲ ಜಗತ್ತಿಗೇ ಮುಖ್ಯ ಆಶ್ರಯನಾದ ಭಗವಂತನನ್ನುದ್ವೇಷ ಮಾಡಿದ್ದರಿಂದ ಅಂಧಂ ತಮಸ್ಸಿಗೆ ಹೋದನು. ಕೇವಲ ಅವನೊಬ್ಬನೇ ಹೋಗಲಿಲ್ಲ, ಅವನನ್ನು ಆಶ್ರಯಿಸಿ ಅವನ ಸಂತೋಷಕ್ಕಾಗಿ ಹರಿದ್ವೇಷವನ್ನು ಮಾಡಿ ಕೃಷ್ಣನ ಕೈಯಿಂದಲೇ ಹತರಾದ ಪೂತನೀ ಮೊದಲಾದ ದೈತ್ಯರನ್ನೆಲ್ಲಾ ಕಟ್ಟಿಕೊಂಡು ಒಂದು ಅಂಶದಿಂದ ಅವರೆಲ್ಲರೂ ಅಂಧಂ ತಮಸ್ಸಿಗೆ ಪ್ರವೇಶ ಮಾಡಿದರು.

**ನಿತ್ಯಾತಿದುಃಖಮನಿವೃತ್ತಿ ಸುಖವ್ಯಪೇತ-**
**ಮಂಧಂ ತಮೋ ನಿಯತಮೇತಿ ಹರಾವಭಕ್ತಃ ।**
**ಭಕ್ತೋಽಪಿ ಕಂಜಜಗಿರೀಶಮುಖೇಷು ಸರ್ವ-**
**ಧರ್ಮಾರ್ಣವೋಽಪಿ ನಿಖಿಲಾಗಮನಿರ್ಣಯೇನ ॥ ೧೩೩ ॥**

**ಅರ್ಥ :- ಕಂಜಜಗಿರೀಶಮುಖೇಷು** ಬ್ರಹ್ಮರುದ್ರಮುಂತಾದ ದೇವತೆಗಳಲ್ಲಿ **ಭಕ್ತೋಽಪಿ** ಭಕ್ತನಾದರೂ ಕೂಡ **ಸರ್ವಧರ್ಮಾರ್ಣವೋಽಪಿ** ತನಗೆ ವಿಹಿತವಾದ ಸಕಲ ಧರ್ಮಾನುಷ್ಠಾನವಂತನಾದರೂ ಕೂಡ, **ಹರೌ** ಭಗವಂತನಲ್ಲಿ **ಅಭಕ್ತಃ ಚೇತ್** ಭಕ್ತಿಯಿಲ್ಲದವನಾದರೆ, **ನಿತ್ಯಾತಿದುಃಖಂ** ನಿತ್ಯವಾಗಿ ಅತ್ಯಂತ ದುಃಖದಿಂದ ತುಂಬಿದ **ಅನಿವೃತ್ತಸುಖವ್ಯಪೇತಂ** ಪುನರಾವೃತ್ತಿರಹಿತವಾದ ಸುಖದಲೇಪವೂ ಇಲ್ಲದ, **ಅಂಧಂ ತಮಃ** ಅಂಧಂ ತಮಸ್ಸನ್ನು **ನಿಖಿಲಾಗಮನಿರ್ಣಯೇನ** ಎಲ್ಲಾ ಶೃತಿಸ್ಮೃತಿಗಳ ನಿರ್ಣಯದಂತೆ **ನಿಯತಂ** ನಿಯಮವಾಗಿ ಏತಿ ಹೊಂದುತ್ತಾನೆ.

**ತಾತ್ಪರ್ಯ :-** ಹರಿದ್ವೇಷಿಗಳಿಗೆ ಯಾವಾಗಲೂ ಮೋಕ್ಷ ಇಲ್ಲ, ಅವರಿಗೆ ನಿಯಮವಾಗಿ ಅಂಧಂ ತಮಸ್ಸೇ ಗತಿ ಎಂದು ಹೇಳುತ್ತಿದ್ದಾರೆ. ಯಾವನು ಬ್ರಹ್ಮರುದ್ರಾದಿ ಇತರದೇವತೆಗಳಲ್ಲಿ ಭಕ್ತಿಯುಳ್ಳವನಾಗಿದ್ದರೂ, ಅವನು ಧರ್ಮಾಚರಣೆಯಲ್ಲಿ ಆಸಕ್ತನಾಗಿದ್ದರೂ ಹರಿಯಲ್ಲಿ ಭಕ್ತಿಯನ್ನು ಮಾಡದಿದ್ದರೆ ಆಗ ನಿತ್ಯ ಅತಿಭಯಂಕರ ದುಃಖಸ್ಥಾನವಾದ, ಯಾವಾಗಲೂ ಹಿಂತಿರುಗಿ ಬರಲು ಅಸಾಧ್ಯವಾದ ಸುಖದ ಲೇಶವೂ ಇಲ್ಲದ ಅಂಧಂ ತಮಸ್ಸನ್ನೂ ಹೊಂದುತ್ತಾನೆ.

**ಯೋ ವೇತ್ತಿ ನಿಶ್ಚಿತಮತಿರ್ಹರಿಮಬ್ಜಜೇಶ-**
**ಪೂರ್ವಾಖಿಲಸ್ಯ ಜಗತಃ ಸಕಲೇಽಪಿ ಕಾಲೇ ।**
**ಸೃಷ್ಟಿಸ್ಥಿತಿಪ್ರಳಯಮೋಕ್ಷದಮಾತ್ಮತಂತ್ರಂ**
**ಲಕ್ಷ್ಮ್ಯಾ ಅಪೀಶಮತಿಭಕ್ತಿಯುತಃ ಸ ಮುಚ್ಯೇತ್ ॥ ೧೩೪ ॥**

**ಅರ್ಥ :- ಯಃ** ಯಾವ ಪುರುಷನು, **ಹರಿಂ** ಭಗವಂತನನ್ನು **ಅಬ್ಜಜೇಶಪೂರ್ವಾಖಿಲಸ್ಯ** ಬ್ರಹ್ಮರುದ್ರ ಮೊದಲಾದ ಎಲ್ಲಾ **ಜಗತಃ** ಪ್ರಪಂಚಕ್ಕೆ **ಸಕಲೇಽಪಿಕಾಲೇ** ಎಲ್ಲಾ ಕಾಲದಲ್ಲಿ **ಸೃಷ್ಟಸ್ಥಿತಿಪ್ರಲಯಮೋಕ್ಷದಂ** ಸೃಷ್ಟಿಸ್ಥಿತಿಲಯ ಮೋಕ್ಷವನ್ನು ಕೊಡುವವನ್ನಾಗಿ, **ಲಕ್ಷ್ಮ್ಯಾ ಅಪಿ** ಲಕ್ಷ್ಮೀದೇವಿಗೂ **ಈಶಂ** ಸ್ವಾಮಿಯನ್ನಾಗಿ, **ಆತ್ಮತಂತ್ರಂ** ಸ್ವತಂತ್ರನನ್ನಾಗಿ **ವೇತ್ತಿ** ತಿಳಿಯುತ್ತಾನೋ, **ಸಃ** ಆ **ನಿಶ್ಚಿತಮತಿಃ** ಹರಿಯಲ್ಲಿ ಅಚಲವಾದ ನಿಷ್ಠೆಯುಳ್ಳ, **ಅತಿಭಕ್ತಿಯುತಃ** ಅತ್ಯಂತ ಭಕ್ತಿಯುಳ್ಳ ಪುರುಷನು, **ಮುಚ್ಯೇತ್** ಮೋಕ್ಷವನ್ನೂ ಪಡೆಯುತ್ತಾನೆ.

**ತಾತ್ಪರ್ಯ :-** ಎಂತವನು ಮೋಕ್ಷ ಪಡೆಯುತ್ತಾನೆ ಎಂದು ವಿವರಿಸುತ್ತಾರೆ. ಯಾರು ಹರಿಯೇ ಬ್ರಹ್ಮರುದ್ರಾದಿ ದೇವತೆಗಳಿಗೆ ಎಲ್ಲಾಸಮಯದಲ್ಲಿಯೂ

ಎಲ್ಲಾ ಪ್ರಪಂಚಂಕ್ಕೆ ಸೃಷ್ಟಿ ಸ್ಥಿತಿ, ಲಯ, ಮೋಕ್ಷಗಳನ್ನು ನೀಡುವನು ಎಂದು ಲಕ್ಷ್ಮೀದೇವಿಗೂ ಸ್ವಾಮಿಯು ಎಂದು, ಸರ್ವತಂತ್ರಸ್ವತಂತ್ರ ಎಂದು ನಿಶ್ಚಯ ವಾಗಿ ತಿಳಿಯುತ್ತಾನೋ ಅವನು ಹರಿಯಲ್ಲಿ ಅಚಲವಾದ ಭಕ್ತಿಯುಳ್ಳವನಾಗಿ ಮೋಕ್ಷವನ್ನೂ ಪಡೆಯುತ್ತಾನೆ.

**ತಸ್ಮಾದನಂತಗುಣಪೂರ್ಣಮಮುಂ ರಮೇಶಂ**
**ನಿಶ್ಚಿತ್ಯ ದೋಷರಹಿತಂ ಪರಯೈವ ಭಕ್ತ್ಯಾ ।**
**ವಿಜ್ಞಾಯ ದೈವತಗಣಾಶ್ಚ ಯಥಾಕ್ರಮೇಣ**
**ಭಕ್ತಾ ಹರೇರಿತಿ ಸದೈವ ಭಜೇತ ಧೀರಃ ॥ ೧೩೫ ॥**

**ಅರ್ಥ** :- **ತಸ್ಮಾತ್** ಆದ ಕಾರಣದಿಂದ, **ಧೀರಃ** ಧೃಢವಾದ ಮತಿಯುಳ್ಳ ಪುರುಷನು **ಅಮುಂ** ಈ ಹರಿಯನ್ನು **ಅನಂತಗುಣಪೂರ್ಣಂ** ಅನಂತಗುಣ ಪೂರ್ಣನೆಂದು **ದೋಷರಹಿತಂ** ದೋಷವಿಲ್ಲದವನೆಂದು, **ರಮೇಶಂ** ಲಕ್ಷ್ಮೀಪತಿಯೆಂದು **ನಿಶ್ಚಿತ್ಯ** ನಿಶ್ಚಯಿಸಿ **ಪರಯೈವ ಭಕ್ತ್ಯಾ** ಎಲ್ಲರಿಗಿಂತಲೂ ಅಧಿಕವಾದ ಭಕ್ತಿಯಿಂದ **ಚ** ಮತ್ತು **ದೈವತಗಣಃ** ಬ್ರಹ್ಮಾದಿ ದೇವತೆಗಳ ಸಮೂಹವು, **ಯಥಾಕ್ರಮೇಣ** ತಾರತಮ್ಯಕ್ರಮದಿಂದ, **ಹರೇಃ** ಭಗವಂತನ, **ಭಕ್ತಾಃ** ಭಕ್ತರು, **ಇತಿ** ಎಂದು, **ಸದೈವ** ಯಾವಾಗಲೂ, **ಭಜೇತ** ಸೇವಿಸಬೇಕು.

**ತಾತ್ಪರ್ಯ** :- ಭಕ್ತಿಯೇ ಮೋಕ್ಷಕ್ಕೆ ಕಾರಣವಾಗಿದ್ದರಿಂದ ಧೃಢಬುದ್ಧಿ ಯುಳ್ಳ ಪುರುಷನು ಶ್ರೀಹರಿಯು ಅನಂತಗುಣ ಪರಿಪೂರ್ಣನು, ದೋಷ ರಹಿತನು, ಲಕ್ಷ್ಮೀಪತಿಯೆಂದು ನಿಶ್ಚಯಿಸಬೇಕು. ಅವನಲ್ಲಿಯೂ ಅಧಿಕವಾದ ಭಕ್ತಿಯನ್ನೂ ಮಾಡಿ, ಬ್ರಹ್ಮಾದಿದೇವತೆಗಳೂ ಕೂಡ ಭಗವಂತನ ಅನುಚರರು ಅದೂ ಕೂಡ ತಾರತಮ್ಯದಿಂದ ಅವನ ಭಕ್ತರು ಎಂದು ತಿಳಿದು ಸದಾಕಾಲ ಭಗವಂತನನ್ನೂ ಭಕ್ತಿ ಮಾಡಿದಾಗ ಮೋಕ್ಷವನ್ನು ಹೊಂದುತ್ತಾನೆ.

**ನಿಹತ್ಯ ಕಂಸಮೋಜಸಾ ವಿಧಾತೃಶಂಭುಪೂರ್ವಕೈಃ ।**
**ಸ್ತುತಃ ಪ್ರಸೂನವರ್ಷಿಭಿರ್ಮುಮೋದ ಕೇಶವೋಽಧಿಕಮ್ ॥ ೧೩೬ ॥**

**ಅರ್ಥ** :- **ಓಜಸಾ** ವಿಶೇಷ ಸಾಮರ್ಥ್ಯದಿಂದ **ಕಂಸಂ** ಕಂಸನನ್ನು **ನಿಹತ್ಯ** ಕೊಂದು **ವಿಧಾತೃ ಶಂಭುಪೂರ್ವಕೈಃ** ಬ್ರಹ್ಮರುದ್ರ ಮೊದಲಾದವರಿಂದ **ಪ್ರಸೂ ನವರ್ಷಿಭಿಃ** ಹೂವಿನ ಮಳೆಗಳಿಂದ, **ಸ್ತುತಃ** ಸ್ತೋತ್ರ ಮಾಡಲ್ಪಟ್ಟ **ಕೇಶವಃ** ಶ್ರೀಕೃಷ್ಣನು **ಅಧಿಕಂ** ಬಹಳವಾಗಿ, **ಮುಮೋದ** ಸಂತೋಷಪಟ್ಟನು.

**ತಾತ್ಪರ್ಯ** :- ಕಂಸನನ್ನು ಬಲಾತ್ಕಾರದಿಂದ ಕೊಂದ ಶ್ರೀಕೃಷ್ಣನನ್ನು ಬ್ರಹ್ಮರುದ್ರಾದಿ ದೇವತೆಗಳು ಹೂವಿನ ಮಳೆಗರೆಯುವ ಮೂಲಕ ಸ್ತೋತ್ರ ಮಾಡಿದರು. ಕೃಷ್ಣ ಬಹಳ ಪ್ರಸನ್ನನಾದ.

**ಸದೈವ ಮೋದರೂಪಿಣೋ ಮುದೋಕ್ತಿರಸ್ಯ ಲೌಕಿಕೀ ।**
**ಯಥೋದಯೋ ರವೇರ್ಭವೇತ್ ಸದೋದಿತಸ್ಯ ಲೋಕತಃ ॥ ೧೩೭ ॥**

**ಅರ್ಥ** :- **ಸದೈವ** ಯಾವಾಗಲೂ **ಮೋದರೂಪಿಗಣಃ** ಆನಂದ ಸ್ವರೂಪಿಯಾದ, **ಅಸ್ಯ** ಈ ಶ್ರೀಕೃಷ್ಣನಿಗೆ, **ಮೋದೋಕ್ತಿಃ** ಸಂತೋಷ ವಾಯಿತೆನ್ನುವ ಮಾತು, **ಯಥಾ** ಹೇಗೆ **ಸದೋದಿತಸ್ಯ** ಯಾವಾಗಲೂ ಉದಯವಾಗಿಯೇ ಇರುವ, **ರವೇಃ** ಸೂರ್ಯನಿಗೆ **ಲೋಕತಃ** ಲೋಕ ದೃಷ್ಟಿಯಿಂದ, **ಉದಯಃ** ಉದಯವಾಯಿತೆನ್ನುವರೋ **ತಥಾ** ಹಾಗೇ **ಲೌಕಿಕೀ** ಲೋಕದದೃಷ್ಟಿಯಿಂದಷ್ಟೇ **ಭವೇತ್** ಆಯಿತು.

**ತಾತ್ಪರ್ಯ** :- ಶ್ರೀಕೃಷ್ಣನು ಸದಾ ಆನಂದ ರೂಪೀ ಅವನಿಗೆ ಒಮ್ಮೆ ಆನಂದವಾಯಿತು. ಮತ್ತೊಮ್ಮೆ ಇಲ್ಲ ಎಂದೆಲ್ಲಾ ಹೇಳಲು ಬರುವುದಿಲ್ಲ. ಆದರೂ ಲೋಕದದೃಷ್ಟಿಯಿಂದ ಹೇಗೆ ಯಾವಾಗಲೂ ಅಸ್ತವೇ ಇಲ್ಲದ ಉದಿಸಿಯೇ ಇರುವ ಸೂರ್ಯನನ್ನು ಲೋಕದಲ್ಲಿ ಇಲ್ಲಿ ಉದಿಸಿದ ಅಲ್ಲಿ ಅಸ್ತನಾದ ಎಂದು ವ್ಯವಹಾರ ಮಾಡುತ್ತಾರೋ ಅದರಂತೆ ಕೃಷ್ಣನಿಗೆ ಆನಂದ ವಾಯಿತೆನ್ನುವುದು ಕೇವಲ ಲೋಕದದೃಷ್ಟಿಯಿಂದಷ್ಟೇ.

**ಅನಂತಚಿತ್ಸುಖಾರ್ಣವಃ ಸದೋದಿತೈಕರೂಪಕಃ ।**
**ಸಮಸ್ತದೋಷವರ್ಜಿತೋ ಹರಿರ್ಗುಣಾತ್ಮಕಃ ಸದಾ ॥ ೧೩೮ ॥**

**ಅರ್ಥ** :- **ಹರಿಃ** ಶ್ರೀಹರಿಯು, **ಅನಂತಚಿತ್‌ಸುಖಾರ್ಣವಃ** ಅನಂತ ಜ್ಞಾನಾನಂದಸಾಗರನು, **ಸದಾ** ಯಾವಾಗಲೂ **ಉದಿತೈಕರೂಪಕಃ** ಅಭಿವ್ಯಕ್ತ ವಾದ ಸ್ವರೂಪವುಳ್ಳವನು, **ಸಮಸ್ತದೋಷವರ್ಜಿತಃ** ಸಕಲದೋಷಗಳಿಂದಲೂ ದೂರನಾದವನು, **ಸದಾ** ಯಾವಾಗಲೂ **ಗುಣಾತ್ಮಕಃ** ಆನಂದಾದಿ ಗುಣಗಳೇ ದೇಹವಾಗಿ ಉಳ್ಳವನು.

**ತಾತ್ಪರ್ಯ** :- ಈ ಅಧ್ಯಾಯವನ್ನು ಮುಗಿಸುತ್ತಾ ಆಚಾರ್ಯರು ಭಗವಂತನ ಸ್ತೋತ್ರವನ್ನು ಮಾಡುತ್ತಿದ್ದಾರೆ. ಶ್ರೀಹರಿಯು ಅಪರಿಮಿತವಾದ ಜ್ಞಾನಾನಂದಗಳಿಗೆ ಸಾಗರದಂತಿರುವವನು. ಯಾವಾಗಲೂ ಸ್ವರೂಪ ಗುಣಗಳನ್ನು ಅಭಿವ್ಯಕ್ತಿಗೊಳಿಸುತ್ತಿರುವವನು. ಸಕಲದೋಷದೂರನು. ಜ್ಞಾನಾ ನಂದಗಳೇ ಅವನ ದೇಹವು ಇಂತಹ ಶ್ರೀಹರಿಗೆ ನಮಸ್ಕಾರ ಎಂದರ್ಥ.

**ಇತಿ ಶ್ರೀಮದಾನಂದತೀರ್ಥಭಗವತ್ಪಾದವಿರಚಿತೇ**
**ಶ್ರೀಮಹಾಭಾರತತಾತ್ಪರ್ಯನಿರ್ಣಯೇ**
**ಕಂಸವಧೋ ನಾಮ**
**ತ್ರಯೋದಶೋಽಧ್ಯಾಯಃ**

# ಅಧ್ಯಾಯ - 14

ಕೃಷ್ಣೋ ವಿಮೋಚ್ಯ ಪಿತರಾವಭಿವಂದ್ಯ ಸರ್ವ-
ವಂದ್ಯೋऽಪಿ ರಾಮಸಹಿತಃ ಪ್ರತಿಪಾಲನಾಯ ।
ಧರ್ಮಸ್ಯ ರಾಜ್ಯಪದವೀಂ ಪ್ರಣಿಧಾಯ ಚೋಗ್ರ-
ಸೇನೇ ದ್ವಿಜತ್ವಮುಪಗಮ್ಯ ಮುಮೋಚ ನಂದಂ ॥ ೧ ॥

**ಅರ್ಥ** :- **ಕೃಷ್ಣಃ** ಶ್ರೀಕೃಷ್ಣನು, **ಪಿತರೌ** ತಾಯಿ ತಂದೆಯರಾದ ದೇವಕಿ ವಸುದೇವರನ್ನು **ವಿಮೋಚ್ಯ** ಜೈಲಿನಿಂದ ಬಿಡುಗಡೆಗೊಳಿಸಿ ಅಥವಾ ಕಂಸ ತೊಡಿಸಿದ ಸಂಕೋಲೆಯಿಂದ ಬಿಡಿಸಿ, **ಧರ್ಮಸ್ಯ** ಧರ್ಮದ, **ಪ್ರತಿಪಾಲನಾಯ** ರಕ್ಷಣೆಗೋಸ್ಕರ, **ರಾಮಸಹಿತಃ** ಬಲರಾಮನಿಂದ ಜೊತೆಗೂಡಿ, **ಸರ್ವವಂದ್ಯೋऽಪಿ** (ತಾನು) ಎಲ್ಲರಿಂದ ನಮಸ್ಕರಿಸಲ್ಪಟ್ಟವನಾದರೂ, **ಪಿತರೌ** ದೇವಕೀ ವಸುದೇವರನ್ನು **ಅಭಿವಂದ್ಯ** ನಮಸ್ಕರಿಸಿ, **ಉಗ್ರಸೇನೇ** ಉಗ್ರಸೇನನಲ್ಲಿ **ರಾಜ್ಯಪದವೀಂ** ಮಧುರೆಯ ಒಡೆತನವನ್ನು **ಪ್ರಣಿಧಾಯ** ಇಟ್ಟು **ದ್ವಿಜತ್ವಂ** ಕ್ಷತ್ರಿಯೋಚಿತ ದ್ವಿಜಸಂಸ್ಕಾರವನ್ನು **ಉಪಗಮ್ಯ** (ವಸುದೇವನಿಂದ) ಹೊಂದಿ, **ನಂದಂ** ನಂದನನ್ನು (ಸಂತೈಸಿ), **ಮುಮೋಚ** (ವೃಂದಾವನಕ್ಕೆ) ಕಳಿಸಿದನು.

**ತಾತ್ಪರ್ಯ** :- ಕಂಸವಧೆಯ ನಂತರ ಬಲರಾಮಸಮೇತನಾದ ಶ್ರೀಕೃಷ್ಣ ತಾಯಿತಂದೆಯರನ್ನು ಜೈಲಿನಿಂದ ಬಿಡಿಸಿ ತಾನು ಎಲ್ಲರಿಂದ ನಮಸ್ಕೃತನಾದರೂ ಸಜ್ಜನರಿಗೆ ಧರ್ಮಶಿಕ್ಷಣ ನೀಡುವದಕ್ಕಾಗಿ ಅವರಿಗೆ ನಮಸ್ಕರಿಸಿ ಮಧುರೆಯ ಒಡೆತನವನ್ನು ಉಗ್ರಸೇನನಿಗೆ ಒಪ್ಪಿಸಿ ಕ್ಷತ್ರಿಯೋಚಿತ ದ್ವಿಜಸಂಸ್ಕಾರವನ್ನು ಪಡೆದು ನಂದಗೋಪನನ್ನು ಸಂತೈಸಿ ವೃಂದಾವನಕ್ಕೆ ಕಳಿಸಿಕೊಟ್ಟ.

**ವಿಶೇಷ ವಿಷಯ** :- ಸರ್ವರಿಂದ ನಮಸ್ಕೃತನಾದ ಶ್ರೀ ಕೃಷ್ಣ ತಾಯಿ ತಂದೆಯರಿಗೆ ನಮಸ್ಕರಿಸಿದುದು, ಉಗ್ರಸೇನನಿಗೆ ರಾಜ್ಯವನ್ನು ಒಪ್ಪಿಸಿದುದು, ದ್ವಿಜಸಂಸ್ಕಾರವನ್ನು ವಸುದೇವನಿಂದ ಪಡೆದುದು ಎಲ್ಲವೂ ಸಜ್ಜನರಿಗೆ ಧರ್ಮಶಿಕ್ಷಣ ನೀಡುವುದಕ್ಕಾಗಿ ಎಂದು 'ಧರ್ಮಸ್ಯ ಪ್ರತಿಪಾಲನಾಯ' ಎಂಬ ಅಂಶವನ್ನು ಮೂರು ಕಡೆಗೂ 'ಜನಾರ್ದನೀಯ'ದಲ್ಲಿ ಅನ್ವಯಿಸಲಾಗಿದೆ.

ನಂದೋऽಪಿ ಸಾಂತ್ವವಚನೈರನುನೀಯ ಮುಕ್ತಃ
ಕೃಷ್ಣೇನ ತಚ್ಚರಣಪಂಕಜಮಾತ್ಮಸಂಸ್ಥಮ್ ।

ಕೃತ್ವಾ ಜಗಾಮ ಸಹ ಗೋಪಗಣೇನ ಕೃಚ್ಛ್ರಾದ್
ಧ್ಯಾಯನ್ ಜನಾರ್ದನಮುವಾಸ ವನೇ ಸಭಾರ್ಯಃ ॥ ೨ ॥

**ಅರ್ಥ** :- **ಕೃಷ್ಣೇನ** ಶ್ರೀಕೃಷ್ಣನಿಂದ, **ನಂದೋಽಪಿ** ನಂದಗೋಪನಾದರೂ, **ಸಾಂತ್ವವಚನೈಃ** ದುಃಖವನ್ನು ಪರಿಹರಿಸುವ ಮಾತುಗಳಿಂದ, **ಅನುನೀಯ** ಸಂತೈಸಿ, **ಮುಕ್ತಃ** ಕಳಿಸಲ್ಪಟ್ಟನು, **ತಸ್ಯ** ಆ ಕೃಷ್ಣನ, **ಚರಣಪಂಕಜಂ** ಪಾದಕಮಲ ವನ್ನು **ಆತ್ಮಸಂಸ್ಥಂ ಕೃತ್ವಾ** ಅಂತಃಕರಣದಲ್ಲಿ ಚೆನ್ನಾಗಿ ಇರಿಸಿಕೊಂಡು, **ಗೋಪಗಣೇನ** ಗೋಪಾಲಕರ ಸಮೂಹದಿಂದ, **ಸಹ** ಕೂಡಿಕೊಂಡು (ನಂದಗೋಪನು), **ಕೃಚ್ಛ್ರಾತ್** ಕಷ್ಟದಿಂದ, **ಜಗಾಮ** ಹೋದನು, **ಸಭಾರ್ಯಃ** ಪತ್ನಿಯಾದ ಯಶೋದೆಯಿಂದ ಸಹಿತನಾದ ನಂದಗೋಪನು, **ಜನಾರ್ದನಂ** ಶ್ರೀಕೃಷ್ಣನನ್ನು, **ಧ್ಯಾಯನ್** ಧ್ಯಾನಿಸುತ್ತಾ, **ವನೇ** ವೃಂದಾವನದಲ್ಲಿ **ಉವಾಸ** ವಾಸಮಾಡಿದನು.

**ತಾತ್ಪರ್ಯ** :- ಶ್ರೀಕೃಷ್ಣನು ನಂದಗೋಪನನ್ನು ಸಾಂತ್ವ ವಚನಗಳಿಂದ ಸಂತೈಸಿ ಬೀಳ್ಕೊಟ್ಟನು. ಅವನು ಶ್ರೀಕೃಷ್ಣನ ಚರಣಕಮಲವನ್ನು ಅಂತಃಕರಣದಲ್ಲಿ ಇರಿಸಿಕೊಂಡು ಬಹಳ ಕಷ್ಟದಿಂದ ಗೋಪಾಲಕರ ಸಮೂಹದೊಂದಿಗೆ ವೃಂದಾವನಕ್ಕೆ ತೆರಳಿದನು. ಅಲ್ಲಿ ಹೆಂಡತಿಯಾದ ಯಶೋದೆಯೊಂದಿಗೆ ಶ್ರೀಕೃಷ್ಣನನ್ನು ಧ್ಯಾನಿಸುತ್ತಾ ವಾಸಮಾಡಿದನು.

ಕೃಷ್ಣೋಽಪ್ಯವಂತಿಪುರವಾಸಿನಮೇತ್ಯ ವಿಪ್ರಂ
ಸಾಂದೀಪನಿಂ ಸಹ ಬಲೇನ ತತೋಽಧ್ಯಗೀಷ್ಟ ।
ವೇದಾನ್ ಸಕೃನ್ನಿಗದಿತಾನ್ ನಿಖಿಲಾಶ್ಚ ವಿದ್ಯಾಃ
ಸಂಪೂರ್ಣಸಂವಿದಪಿ ದೈವತಶಿಕ್ಷಣಾಯ ॥ ೩ ॥

**ಅರ್ಥ** :- **ಸಂಪೂರ್ಣಸಂವಿದಪಿ** ಸಂಪೂರ್ಣವಾದ ಜ್ಞಾನವುಳ್ಳವ ನಾದರೂ, **ಕೃಷ್ಣಃ** ಶ್ರೀಕೃಷ್ಣನು ಬಲರಾಮನಿಂದೊಡಗೂಡಿ, **ಅವಂತಿಪುರ ವಾಸಿನಂ** ಅವಂತೀನಗರವಾಸಿಯಾದ, **ಸಾಂದೀಪನಿಂ** ಸಾಂದೀಪನಿ ಎಂಬ ಹೆಸರಿನ, **ವಿಪ್ರಂ** ಬ್ರಾಹ್ಮಣನನ್ನು **ಏತ್ಯ** ಹೊಂದಿ (ಅವನ ಶಿಷ್ಯತ್ವ ವಹಿಸಿ), **ತತಃ** ಆ ಬ್ರಾಹ್ಮಣನಿಂದ, **ಸಕೃತ್** ಒಂದು ಬಾರಿ, **ನಿಗದಿತಾನ್** ಹೇಳಲ್ಪಟ್ಟ **ವೇದಾನ್** ವೇದಗಳನ್ನು **ನಿಖಿಲಾಃ** ಎಲ್ಲ **ವಿದ್ಯಾಶ್ಚ** ವಿದ್ಯೆಗಳನ್ನೂ, **ದೈವತಶಿಕ್ಷಣಾಯ** ದೇವತೆಗಳ ಶಿಕ್ಷಣಕ್ಕಾಗಿ, **ಅಧ್ಯಗೀಷ್ಟ** ಅಧ್ಯಯನ ಮಾಡಿದನು.

**ತಾತ್ಪರ್ಯ** :- ಶ್ರೀಕೃಷ್ಣ ಪೂರ್ಣಜ್ಞಾನಸ್ವರೂಪಿ ಆಗಿದ್ದರೂ ಬಲರಾಮನೊಂದಿಗೆ ಅವಂತೀನಗರವಾಸಿಯಾದ ಸಾಂದೀಪನಿ ಎಂಬ ಬ್ರಾಹ್ಮಣನ ಮನೆಗೆ ತೆರಳಿ ಅವನ ಶಿಷ್ಯತ್ವ ವಹಿಸಿದ. ಒಂದು ಬಾರಿ ಹೇಳಿಕೊಟ್ಟ ಮಾತ್ರಕ್ಕೇ ವೇದಗಳನ್ನೂ ಎಲ್ಲ ವಿದ್ಯೆಗಳನ್ನೂ ದೇವತೆಗಳಿಗೆ ಶಿಕ್ಷಣ ನೀಡುವದಕ್ಕಾಗಿ ಅಧ್ಯಯನ ಮಾಡಿದನು.

**ಧರ್ಮೋ ಹಿ ಸರ್ವವಿದುಷಾಮಪಿ ದೈವತಾನಾಂ**
**ಪ್ರಾಪ್ತೇ ನರೇಷು ಜನನೇ ನರವತ್ ಪ್ರವೃತ್ತಿಃ ।**
**ಜ್ಞಾನಾದಿಗೂಹನಮುತಾಧ್ಯಯನಾದಿರತ್ರ**
**ತಜ್ಞಾಪನಾರ್ಥಮವಸದ್ ಭಗವಾನ್ ಗುರೌ ಚ ॥ ೪ ॥**

**ಅರ್ಥ** :- **ಸರ್ವವಿದುಷಾಮಪಿ ದೈವತಾನಾಂ** ಸರ್ವಜ್ಞರಾದ ದೇವತೆಗಳಿಗೂ, **ನರೇಷು** ಮನುಷ್ಯರಲ್ಲಿ **ಜನನೇ** ಅವತಾರವು, **ಪ್ರಾಪ್ತೇ ಸತಿ** ಪ್ರಾಪ್ತವಾಗಲು ಅಂದರೆ ಮನುಷ್ಯರಾಗಿ ಅವತರಿಸಿದಾಗ, **ನರವತ್** ಮನುಷ್ಯರಂತೆ, **ಪ್ರವೃತ್ತಿಃ** ನಡೆದುಕೊಳ್ಳುವಿಕೆಯು, **ಜ್ಞಾನಾದಿಗೂಹನಂ** ಜ್ಞಾನ ಮೊದಲಾದವುಗಳ ಮರೆಮಾಚುವಿಕೆಯು, **ಉತ** ಹಾಗೇ, **ಅಧ್ಯಯನಾದಿಃ** ಅಧ್ಯಯನ ಮುಂತಾದುದು, **ಹಿ** ಯಾವ ಕಾರಣದಿಂದ, **ಧರ್ಮಃ** ಧರ್ಮವೋ ಆ ಕಾರಣದಿಂದ, **ಭಗವಾನ್** ಶ್ರೀ ಕೃಷ್ಣನು, **ತಜ್ಞಾಪನಾರ್ಥಂ** ಮನುಷ್ಯರಾಗಿ ಅವತರಿಸಿದ ದೇವತೆಗಳ ಧರ್ಮವನ್ನು ತಿಳಿಸುವದಕ್ಕೋಸ್ಕರ, **ಗುರೌ ಚ** ಗುರುಗಳ ಬಳಿಯಲ್ಲೂ **ಅವಸತ್** ವಾಸ ಮಾಡಿದನು.

**ತಾತ್ಪರ್ಯ** :- ದೇವತೆಗಳು ಸರ್ವಜ್ಞರಾದರೂ ಮನುಷ್ಯರಾಗಿ ಅವತರಿಸಿದಾಗ ಮನುಷ್ಯರಂತೆಯೇ ನಡೆದುಕೊಳ್ಳುವದು ಜ್ಞಾನಾದಿಗಳನ್ನು ಮರೆಮಾಚುವದು ಅಧ್ಯಯನ ಮೊದಲಾದುದು ಅವರಿಗೆ ಧರ್ಮವೆನಿಸುವುದು. ಅದನ್ನು ತಿಳಿಸುವ ಸಲುವಾಗಿಯೇ ಶ್ರೀಕೃಷ್ಣ ಸಾಂದೀಪನಿ ಗುರುಗಳ ಬಳಿ ವಾಸ ಮಾಡಿದನು. ಅಂದರೆ ಅವರ ಶಿಷ್ಯತ್ವ ವಹಿಸಿದನು ಎಂದು ಭಾವ.

**ವಿಶೇಷ ವಿಷಯ** :'ಅಧ್ಯಯನಾದಿಃ' ಎಂಬಲ್ಲಿ ಅಧ್ಯಯನ ಶಬ್ದದಿಂದ ವೇದಾಧ್ಯಯನವನ್ನೂ ಆದಿಶಬ್ದದಿಂದ ವರ್ಣೋಚಿತವಾದ ವಿದ್ಯಾಭ್ಯಾಸವನ್ನೂ ಇಟ್ಟುಕೊಳ್ಳಬೇಕೆಂದು 'ಜನಾರ್ದನೀಯ'ದಲ್ಲಿದೆ.

ಗುರ್ವರ್ಥಮೇಷ ಮೃತಪುತ್ರಮದಾತ್ ಪುನಶ್ಚ
ರಾಮೇಣ ಸಾರ್ಧಮಗಮನ್ಮಧುರಾಂ ರಮೇಶಃ ।
ಪೌರೈಃ ಸಜಾನಪದಬಂಧುಜನೈರಜಸ್ರಂ
ಅಭ್ಯರ್ಚಿತೋ ನ್ಯವಸದಿಷ್ಟಕೃದಾತ್ಮಪಿತ್ರೋಃ ॥ ೫ ॥

**ಅರ್ಥ** :- **ಏಷಃ** ಶ್ರೀಕೃಷ್ಣನು, **ಗುರ್ವರ್ಥಂ** ಗುರುವಿಗಾಗಿ **ಮೃತಪುತ್ರಂ** ಸತ್ತಮಗನನ್ನು **ಅದಾತ್** (ಬದುಕಿಸಿ) ಕೊಟ್ಟನು, **ಪುನಶ್ಚ** ಮತ್ತೆ, **ರಾಮೇಣ ಸಾರ್ಧಂ** ಬಲರಾಮನೊಂದಿಗೆ, **ಮಧುರಾಂ ಅಗಮತ್** ಮಧುರಾಪಟ್ಟಣಕ್ಕೆ ಹೋದನು, **ಸಜಾನಪದಬಂಧುಜನೈಃ** ಗ್ರಾಮೀಣಜನರು ಮತ್ತು ಬಂಧು ಜನರಿಂದ ಸಹಿತರಾದ, **ಪೌರೈಃ** ನಾಗರಿಕರಿಂದ, **ಅಜಸ್ರಂ** ಚೆನ್ನಾಗಿ, **ಅಭ್ಯರ್ಚಿತಃ** ಪೂಜಿಸಲ್ಪಟ್ಟವನಾಗಿ, **ಆತ್ಮಪಿತ್ರೋಃ** ತನ್ನ ತಾಯಿತಂದೆಯರ, **ಇಷ್ಟಕೃತ್** ಅಭೀಷ್ಟವನ್ನು ಪೂರೈಸುತ್ತ, **ನ್ಯವಸತ್** ವಾಸ ಮಾಡಿದನು.

**ತಾತ್ಪರ್ಯ** :- ಶ್ರೀಕೃಷ್ಣ ಹಿಂದೆ ಪ್ರಭಾಸದಲ್ಲಿ ಮೃತನಾಗಿದ್ದ ಗುರುಪುತ್ರ ನನ್ನು ಪುನಃ ಬದುಕಿಸಿ ಗುರುದಕ್ಷಿಣೆಯಾಗಿ ಅವರಿಗೆ ಸಮರ್ಪಿಸಿದ ಬಳಿಕ ಬಲರಾಮನೊಂದಿಗೆ ಮಧುರೆಗೆ ತೆರಳಿದ. ಗ್ರಾಮೀಣಜನರು ಹಾಗೂ ಬಂಧುಜನ ಸಮೇತರಾದ ನಾಗರಿಕರು ತನ್ನನ್ನು ಪೂಜಿಸುತ್ತಿದ್ದಂತೆಯೇ ಸದಾ ತಾಯಿತಂದೆಯರ ಅಭೀಷ್ಟಗಳನ್ನು ಪೂರೈಸುತ್ತ ಅಲ್ಲಿ ವಾಸಮಾಡಿದ.

**ವಿಶೇಷ ವಿಷಯ** :- ಪ್ರಭಾಸಕ್ಷೇತ್ರದಲ್ಲಿರುವ ಸಮುದ್ರದಲ್ಲಿ ಪಂಚಜನ ಎಂಬ ರಾಕ್ಷಸ ವಾಸವಾಗಿದ್ದ. ಅವನು ಪ್ರಹ್ಲಾದನ ತಮ್ಮ ಸಹ್ಲಾದನ ಮಗ ಎಂದು ಭಾಗವತದಲ್ಲಿ ಹೇಳಿದೆ. ಅವನನ್ನು ಕೊಂದು ಶ್ರೀಕೃಷ್ಣ ಅವನ ಶರೀರ ದಿಂದ ಪಾಂಚಜನ್ಯವನ್ನು ತಯಾರಿಸಿ ಯಮಪುರಿಗೆ ತೆರಳಿದ. ಯಮನಿಂದ ಪೂಜಿತನಾದ. ಅಲ್ಲಿಂದ ಗುರುಪುತ್ರನನ್ನು ಕರೆತಂದು ಗುರುಗಳಿಗೆ ಗುರುದಕ್ಷಿಣೆ ಯಾಗಿ ಸಮರ್ಪಿಸಿದ.

ಸರ್ವೇಽಪಿ ತೇ ಪತಿಮವಾಪ್ಯ ಹರಿಂ ಪುರಾ ಹಿ
ತಪ್ತಾ ಹಿ ಭೋಜಪತಿನಾ ಮುಮುದುರ್ನಿತಾಂತಂ ।
ಕಿಂ ವಾಚ್ಯಮತ್ರ ಸುತಮಾಪ್ಯ ಹರಿಂ ಸ್ವಪಿತ್ರೋಃ
ಯತ್ರಾಖಿಲಸ್ಯ ಸುಜನಸ್ಯ ಬಭೂವ ಮೋದಃ ॥ ೬ ॥

**ಅರ್ಥ** :- **ತೇ ಸರ್ವೇऽಪಿ** ಆ ಎಲ್ಲ ಮಧುರೆಯ ನಾಗರಿಕರೂ, **ಪುರಾ** ಹಿಂದೆ, **ಭೋಜಪತಿನಾ** ಭೋಜಪತಿಯಾದ ಕಂಸನಿಂದ, **ಹಿ** ಯಾವ ಕಾರಣದಿಂದ, **ತಪ್ತಾಃ** ಪೀಡಿತರಾಗಿದ್ದರೊ, ಆ ಕಾರಣದಿಂದ, **ಹರಿಂ** ಶ್ರೀಕೃಷ್ಣ ನನ್ನು, **ಪತಿಂ** ಒಡೆಯನನ್ನಾಗಿ, **ಅವಾಪ್ಯ** ಹೊಂದಿ, **ನಿತಾಂತಂ** ಅತ್ಯಂತವಾಗಿ, **ಮುಮುದುಃ** ಸಂತೋಷಪಟ್ಟರು, **ಯತ್ರ** ಯಾವಾಗ, **ಅಖಿಲಸ್ಯ ಸುಜನಸ್ಯ** ಎಲ್ಲ ಸಜ್ಜನರಿಗೆ, **ಮೋದಃ** ಸಂತೋಷವು **ಬಭೂವ** ಆಯಿತೋ, ಆಗ **ಹರಿಂ** ಶ್ರೀಕೃಷ್ಣನನ್ನು **ಸುತಂ** ಮಗನನ್ನಾಗಿ, **ಅವಾಪ್ಯ** ಹೊಂದಿ (ಪಡೆದು) **ಆತ್ಮಪಿತ್ರೋಃ** ಶ್ರೀಕೃಷ್ಣನ ತಾಯಿತಂದೆಯರಿಗೆ, **ಅತ್ರ** ಸಂತೋಷವಾಯಿತು ಎಂಬ ವಿಷಯದಲ್ಲಿ, **ಕಿಂ ವಾಚ್ಯಮ್?** ಹೇಳುವದೇನಿದೆ?

**ತಾತ್ಪರ್ಯ** :- ಮಧುರೆಯ ನಾಗರಿಕರೆಲ್ಲರೂ ಹಿಂದೆ ಕಂಸನಿಂದ ಬಹಳ ಪೀಡಿತರಾಗಿದ್ದರು. ಈಗ ಕೃಷ್ಣನು ಒಡೆಯನಾಗಿ ದೊರಕಿದ ಮೇಲೆ ಅವರ ಆನಂದಕ್ಕೆ ಪಾರವಿಲ್ಲದಂತಾಯಿತು. ಹೀಗೆ ಎಲ್ಲ ಸುಜನರಿಗೆ ಆನಂದ ವಾಯಿತೆಂದ ಮೇಲೆ ಶ್ರೀಕೃಷ್ಣನನ್ನು ಮಗನನ್ನಾಗಿ ಪಡೆದ ದೇವಕಿ-ವಸುದೇವ ರಿಗೆ ಆನಂದವಾಯಿತೆಂದು ಹೇಳಬೇಕೇನು?

**ಕೃಷ್ಣಾಶ್ರಯೋ ವಸತಿ ಯತ್ರ ಜನೋऽಪಿ ತತ್ರ**
**ವೃದ್ಧಿರ್ಭವೇತ್ ಕಿಮು ರಮಾಧಿಪತೇರ್ನಿವಾಸೇ ।**
**ವೃಂದಾವನಂ ಯದಧಿವಾಸತ ಆಸ ಸಧ್ರ್ಯಜ್**
**ಮಾಹೇಂದ್ರಸದ್ಮಸದೃಶಂ ಕಿಮು ತತ್ರ ಪುರ್ಯಾಂ ॥ ೭ ॥**

**ಅರ್ಥ** :- **ಯತ್ರ** ಯಾವ ದೇಶದಲ್ಲಿ, **ಕೃಷ್ಣಾಶ್ರಯಃ ಜನಃ** ಕೃಷ್ಣನೇ ಆಶ್ರಯವಾಗಿವುಳ್ಳ ಜನರು (ಕೃಷ್ಣನನ್ನು ಆಶ್ರಯಿಸಿದ ಜನರು), **ವಸತಿ** ವಾಸಮಾಡುತ್ತಾರೋ, **ತತ್ರಾಪಿ** ಆ ದೇಶದಲ್ಲಿಯೂ, **ವೃದ್ಧಿಃ** ಸಮೃದ್ಧಿಯು, **ಭವೇತ್** ಆಗುವದು, **ರಮಾಧಿಪತೇಃ** ಸಂಪತ್ತಿನ ಅಭಿಮಾನಿನಿಯಾದ ಲಕ್ಷ್ಮೀ ದೇವಿಗೆ ಮುಖ್ಯಸ್ವಾಮಿಯಾದ ಶ್ರೀಕೃಷ್ಣನ, **ನಿವಾಸೇ** ವಾಸಸ್ಥಳದಲ್ಲಿ, **ಕಿಮು** **(ವಕ್ತವ್ಯಂ)** ಸಮೃದ್ಧಿಯಾಗುವದೆಂದು ಹೇಳಬೇಕೇನು?, **ವೃಂದಾವನಂ** ವೃಂದಾವನವು, **ಯದಧಿವಾಸತಃ** ಶ್ರೀಕೃಷ್ಣನ ಅಧಿಷ್ಠಾನದಿಂದ, **ಸಧ್ರ್ಯಜ್** ಚೆನ್ನಾಗಿ, **ಮಾಹೇಂದ್ರಸದ್ಮಸದೃಶಂ** **ಮಾಹೇಂದ್ರ** ಮಹೇಂದ್ರನಿಗೆ ಸಂಬಂಧಿ ಸಿದ, **ಸದ್ಮ** ಸ್ವರ್ಗಲೋಕಕ್ಕೆ, **ಸದೃಶಂ** ಸಮಾನವು, **ಆಸ** ಆಯಿತೋ, **ತತ್ರ**

ಪುರ್ಯಾಂ ಆ ಮಧುರಾಪಟ್ಟಣದಲ್ಲಿ ಕಿಮು (ವಕ್ತವ್ಯಂ) ಸಂಪತ್ತಿನ ಸಮೃದ್ಧಿಯಾಯಿತೆಂದು ಹೇಳಬೇಕೇನು?

ತಾತ್ಪರ್ಯ :- ಶ್ರೀಕೃಷ್ಣನನ್ನು ಆಶ್ರಯಿಸಿದ ಜನರು ಎಲ್ಲಿ ವಾಸಮಾಡುವರೋ ಅಲ್ಲಿಯೇ ಎಲ್ಲ ಸಮೃದ್ಧಿಯಾಗುವದು. ಇನ್ನು ಶ್ರೀಕೃಷ್ಣನೇ ವಾಸ ಮಾಡುವಲ್ಲಿ ಹೇಳಬೇಕೆ ? ಶ್ರೀಕೃಷ್ಣನು ವಾಸಮಾಡಿದ್ದರಿಂದ ವೃಂದಾವನವೇ ಸ್ವರ್ಗತುಲ್ಯವಾಯಿತೆಂದ ಮೇಲೆ ಮಧುರಾಪಟ್ಟಣದಲ್ಲಿ ಸಂಪತ್ತಿನ ಸಮೃದ್ಧಿ ಯಾಯಿತೆಂದು ಹೇಳುವುದೇನಿದೆ?

ಯೇನಾಧಿವಾಸಮೃಷಭೋ ಜಗತಾಂ ವಿಧತ್ತೇ
ವಿಷ್ಣುಸ್ತತೋ ಹಿ ವರತಾ ಸದನೇ ವಿಧಾತುಃ ।
ತಸ್ಮಾತ್ ಪ್ರಭೋರ್ನಿವಸನಾತ್ ಮಧುರಾಪುರೀ ಸಾ
ಶಶ್ವತ್ ಸಮೃದ್ಧಜನಸಂಕುಲಿತಾ ಬಭೂವ ॥ ೮ ॥

ಅರ್ಥ :- ಯೇನ ಯಾವ ಕಾರಣದಿಂದ, ಜಗತಾಂ ಋಷಭಃ ಜಗದುತ್ತಮನಾದ, ವಿಷ್ಣುಃ ವಿಷ್ಣುವು, ವಿಧಾತುಃ ಚತುರ್ಮುಖ ಬ್ರಹ್ಮದೇವರ, ಸದನೇ ಸ್ಥಾನವಾದ ಸತ್ಯಲೋಕದಲ್ಲಿ, ಅಧಿವಾಸಂ ಮುಖ್ಯವಾಗಿ ವಾಸವನ್ನು ವಿಧತ್ತೇ ಮಾಡುತ್ತಾನೋ, ತತಃ ಆ ಕಾರಣದಿಂದ, ವರತಾ ಸತ್ಯಲೋಕಕ್ಕೆ ಉತ್ತಮತ್ವವು, ಹ ನಿಶ್ಚಯ, ತಸ್ಮಾತ್ ಆದ್ದರಿಂದ, ಪ್ರಭೋಃ ಶ್ರೀಕೃಷ್ಣನ, ನಿವಸನಾತ್ ವಾಸಮಾಡುವಿಕೆಯಿಂದ, ಸಾ ಆ ಮಧುರಾಪುರೀ ಮಧುರಾ ಪಟ್ಟಣವು, ಶಶ್ವತ್ ಯಾವಾಗಲೂ, ಸಮೃದ್ಧಜನಸಂಕುಲಿತಾ ಸಮೃದ್ಧರಾದ ಜನರಿಂದ ಕೂಡಿದ್ದು ಬಭೂವ ಆಯಿತು.

ರಕ್ಷತ್ಯಜೇ ತ್ರಿಜಗತಾಂ ಪರಿರಕ್ಷಕೇಽಸ್ಮಿನ್
ಸರ್ವಾನ್ ಯದೂನ್ ಮಗಧರಾಜಸುತೇ ಸ್ವಭರ್ತುಃ ।
ಕೃಷ್ಣಾನ್ಮೃತಿಂ ಪಿತುರವಾಪ್ಯ ಸಮೀಪಮಸ್ತಿ
ಪ್ರಾಸ್ತೀ ಶಶಂಸತುರತೀವ ಚ ದುಃಖಿತೇಽಸ್ಮೈ ॥ ೯ ॥

ಅರ್ಥ :- ಅಸ್ಮಿನ್ ಈ ಭೂಲೋಕದಲ್ಲಿ, ತ್ರಿಜಗತಾಂ ಮೂರು ಲೋಕಗಳ, ರಕ್ಷಕೇ ರಕ್ಷಕನಾದ, ಅಜೇ ಜನನ ರಹಿತನಾದ ಶ್ರೀಕೃಷ್ಣನು, ಸರ್ವಾನ್ ಎಲ್ಲಾ ಯದೂನ್ ಯದುಗಳನ್ನು (ಯಾದವರನ್ನು) ರಕ್ಷತಿ ಸತಿ

ರಕ್ಷಿಸುತ್ತಿರಲು, **ಮಗಧರಾಜಸುತೇ** ಮಗಧರಾಜ ಜರಾಸಂಧನ ಕುವರಿಯ ರಾದ, **ಅಸ್ತಿ-ಪ್ರಾಸ್ತೀ** ಅಸ್ತಿ ಪ್ರಾಸ್ತಿ ಎಂಬುವರು, **ಅತೀವ** ಅತ್ಯಂತವಾಗಿ, **ದುಃಖಿತೇ** ವೈಧವ್ಯದಿಂದುಂಟಾದ ದುಃಖವುಳ್ಳವರಾಗಿ, **ಪಿತುಃ** ತಂದೆಯಾದ ಜರಾಸಂಧನ, **ಸಮೀಪಂ** ಸಮೀಪವನ್ನು, **ಅವಾಪ್ಯ** ಹೊಂದಿ, **ಸ್ವಭರ್ತುಃ** ತಮ್ಮ ಗಂಡನಾದ ಕಂಸನಿಗೆ, **ಕೃಷ್ಣಾತ್** ಶ್ರೀಕೃಷ್ಣನಿಂದ ಉಂಟಾದ, **ಮೃತಿಂ** ಮರಣವನ್ನು, **ಅಸ್ಮೈ** ತಂದೆಯಾದ ಜರಾಸಂಧನಿಗೆ, **ಶಶಂಸತುಃ** ಅರುಹಿದರು.

**ತಾತ್ಪರ್ಯ** :- ತ್ರಿಲೋಕರಕ್ಷಕನಾದ ಶ್ರೀಕೃಷ್ಣ ಭೂಲೋಕದಲ್ಲಿ ಎಲ್ಲ ಯಾದವರನ್ನು ರಕ್ಷಿಸುತ್ತಿದ್ದಾಗ, ಅಸ್ತಿ ಪ್ರಾಸ್ತಿ ಎಂಬ ಇಬ್ಬರು ಜರಾಸಂಧನ ಕುವರಿಯರು ಅತ್ಯಂತ ದುಃಖಿತರಾಗಿ ತಮ್ಮ ತಂದೆಯ ಬಳಿ ಬಂದು, ತಮ್ಮ ಪತಿಯಾದ ಕಂಸ ಶ್ರೀಕೃಷ್ಣನಿಂದ ಹತನಾದ್ದನ್ನು ಅರುಹಿದರು.

**ಶ್ರುತ್ವೈವ ತನ್ಮಗಧರಾಜ ಉರುಪ್ರರೂಢ-**
**ಬಾಹ್ವೋರ್ಬಲೇನ ನಜಿತೋ ಯುಧಿ ಸರ್ವಲೋಕೈಃ ।**
**ಬ್ರಹ್ಮೇಶಚಂಡಮುನಿದತ್ತವರೈರಜೇಯೋ**
**ಮೃತ್ಯೂಜ್ಝಿತಶ್ಚ ವಿಜಯೀ ಜಗತಶ್ಚುಕೋಪ ॥ ೧೦ ॥**

**ಅರ್ಥ** :- **ಉರುಪ್ರರೂಢಬಾಹ್ವೋಃ** = **ಉರು** ಚೆನ್ನಾಗಿ, **ಪ್ರರೂಢ** ಬಲಿತ, **ಬಾಹ್ವೋಃ** ತೋಳುಗಳ , **ಬಲೇನ** ಬಲದಿಂದ, **ಯುಧಿ** ಯುದ್ಧದಲ್ಲಿ **ಸರ್ವಲೋಕೈಃ** ಎಲ್ಲ ಜನರಿಂದ, **ನಜಿತಃ** ಪರಾಜಿತನಾಗದ, **ಬ್ರಹ್ಮೇಶಚಂಡ ಮುನಿದತ್ತವರೈಃ** = **ಬ್ರಹ್ಮ** ಬ್ರಹ್ಮದೇವರು, **ಈಶ** ರುದ್ರದೇವರು, **ಚಂಡಮುನಿ** ಚಂಡಕೌಶಿಕಮುನಿಗಳು ಇವರುಗಳು, **ದತ್ತ** ಕೊಟ್ಟ, **ವರೈಃ** ವರಗಳಿಂದ, **ಜಗತಃ** ಜಗತ್ತಿಗೆ, **ಅಜೇಯಃ** ಅಜೇಯನಾದ, **ಚ** ಮತ್ತು, **ಮೃತ್ಯೂಜ್ಝಿತಃ** ಮರಣ ರಹಿತನಾದ, ಆದ್ದರಿಂದಲೇ, **ವಿಜಯೀ** ವಿಶೇಷವಾಗಿ ಜಯಶೀಲನಾದ, **ಮಗಧರಾಜ** ಮಗಧಾಧಿಪತಿ ಜರಾಸಂಧನು, **ತತ್ ಶ್ರುತ್ವೈವ** ತನ್ನ ಮಕ್ಕಳ ಮಾತನ್ನು ಕೇಳಿದ ಕೂಡಲೇ, **ಚುಕೋಪ** ಕುಪಿತನಾದನು.

**ತಾತ್ಪರ್ಯ** :- ಮಗಧರಾಜ ಜರಾಸಂಧ, ಚೆನ್ನಾಗಿ ಬಲಿತ ತೋಳುಗಳ ಬಲದಿಂದಲೂ, ಬ್ರಹ್ಮದೇವರು-ರುದ್ರದೇವರು-ಚಂಡಕೌಶಿಕಮುನಿಗಳು ಹಾಗೂ ದೂರ್ವಾಸರು ಕೊಟ್ಟ ವರಬಲದಿಂದಲೂ ಯುದ್ಧದಲ್ಲಿ ಪರಾಭವವನ್ನು

ಹೊಂದಿದ ಎಲ್ಲ ಜನರಿಗೂ ಅಜೇಯನಾಗಿದ್ದ. ಮರಣರಹಿತನಾಗಿದ್ದ. ಆದ್ದರಿಂದಲೇ ಜಗದ್‌ವಿಜಯಿಯಾಗಿದ್ದ. ಅವನು ತನ್ನ ಮಕ್ಕಳ ಮಾತನ್ನು ಕೇಳಿದ ಕೂಡಲೇ ಕುಪಿತನಾದ.

ಕ್ಷುಬ್ಧೋಽತಿಕೋಪವಶತಃ ಸ್ವಗದಾಮಮೋಘಾಂ
ದತ್ತಾಂ ಶಿವೇನ ಜಗೃಹೇ ಶಿವಭಕ್ತವಂದ್ಯಃ ।
ಶೈವಾಗಮಾಖಿಲವಿದತ್ರ ಚ ಸುಸ್ಥಿರೋಽಸೌ
ಚಿಕ್ಷೇಪ ಯೋಜನಶತಂ ಸ ತು ತಾಂ ಪರಸ್ಮೈ ॥ ೧೧ ॥

**ಅರ್ಥ** :- **ಅತಿಕೋಪವಶತಃ** ಅತಿಕೋಪವಶದಿಂದ, **ಕ್ಷುಬ್ಧಃ** ಕ್ಷೋಭೆಯನ್ನು ಹೊಂದಿದ, **ಶೈವಾಗಮಾಖಿಲವಿತ್** ಎಲ್ಲ ಶೈವಾಗಮಗಳನ್ನು ಬಲ್ಲ, **ಚ** ಮತ್ತು, **ಅತ್ರ ಸುಸ್ಥಿರಃ** ಅವುಗಳಲ್ಲಿ ಒಳ್ಳೇ ನಿಷ್ಠೆಯುಳ್ಳ **ಶಿವಭಕ್ತವಂದ್ಯಃ** ಶಿವಭಕ್ತರಿಗೆಲ್ಲ ವಂದ್ಯನಾದ, **ಅಸೌ** ಈ ಜರಾಸಂಧನು, **ಶಿವೇನ** ಶಿವನಿಂದ, **ದತ್ತಾಂ** ಕೊಡಲ್ಪಟ್ಟ **ಅಮೋಘಾಂ** ಅಮೋಘವಾದ, **ಸ್ವಗದಾಂ** ತನ್ನ ಗದೆಯನ್ನು **ಜಗೃಹೇ** ಸ್ವೀಕರಿಸಿದನು ಅಂದರೆ ಕೈಗೆತ್ತಿಕೊಂಡನು, **ತಾಂ** ಆ ಗದೆಯನ್ನು **ಸತು** ಅವನಾದರೂ, **ಅತ್ರ ಚ** ತನ್ನ ಪಟ್ಟಣದಲ್ಲಿಯೇ, **ಸುಸ್ಥಿರಃ** = **ಸು** ಚೆನ್ನಾಗಿ, **ಸ್ಥಿರಃ** ನಿಂತುಕೊಂಡೇ, **ಯೋಜನಶತಂ** ನೂರು ಯೋಜನೆ (ದೂರಕ್ಕೆ), **ಪರಸ್ಮೈ** ಶ್ರೀಕೃಷ್ಣನಿಗೆ, **ಚಿಕ್ಷೇಪ** ಎಸೆದನು.

**ತಾತ್ಪರ್ಯ** :- ಮಗಧರಾಜ ಜರಾಸಂಧ ಎಲ್ಲ ಶೈವಾಗಮಗಳನ್ನು ಬಲ್ಲವ. ಅವುಗಳಲ್ಲಿ ಒಳ್ಳೇ ನಿಷ್ಠೆಯನ್ನು ಹೊಂದಿದವ. ಶಿವಭಕ್ತರಿಗೆಲ್ಲ ವಂದ್ಯ. ಆದ್ದರಿಂದ ಶ್ರೀಕೃಷ್ಣನಲ್ಲಿ ಅತಿ ಕೋಪವಶದಿಂದ ಕ್ಷೋಭೆಗೊಂಡು ಶಿವದತ್ತವಾಗ ಅಮೋಘವಾದ ತನ್ನ ಗದೆಯನ್ನು ಕೈಗೆತ್ತಿಕೊಂಡ. ಮಗಧ ರಾಜಧಾನಿಯಾದ ಗಿರಿವ್ರಜದಲ್ಲಿ ನಿಂತುಕೊಂಡೇ ನೂರು ಯೋಜನದಷ್ಟು ದೂರ ಆ ಗದೆಯನ್ನು ಕೃಷ್ಣನಿಗೆ ಎಸೆದ.

**ವಿಶೇಷ ವಿಷಯ** : 'ಶೈವಾಗಮಾಖಿಲವಿತ್' ಎಂಬುದಕ್ಕೆ ೧. ಎಲ್ಲ ಶೈವಾಗಮಗಳನ್ನು ಬಲ್ಲವ, ೨. ಶೈವಾಗಮಗಳಿಂದ ಎಲ್ಲವನ್ನು ಅಂದರೆ ತತ್ವ ಮೊದಲಾದ ಜಗತ್ತನ್ನು ತಿಳಿದವ, ೩. ಶೈವಾಗಮಗಳ ಎಲ್ಲ ಅರ್ಥಸಾರವನ್ನು ತಿಳಿದವ ಎಂದು ಮೂರು ರೀತಿಯಾದ ಅರ್ಥವಿವರಣೆ 'ಜನಾರ್ದನೀಯ'ದಲ್ಲಿದೆ.

ಅರ್ವಾಕ್ ಪಪಾತ ಚ ಗದಾ ಮಧುರಾಪ್ರದೇಶಾತ್
ಸಾ ಯೋಜನೇನ ಯದಿಮಂ ಪ್ರಜಗಾದ ಪೃಷ್ಟಃ ।
ಏಕೋತ್ತರಾಮಪಿ ಶತಾಚ್ಛತಯೋಜನೇತಿ
ದೇವರ್ಷಿರತ್ರ ಮಧುರಾಂ ಭಗವತ್ಪ್ರಿಯಾರ್ಥೇ ॥ ೧೨ ॥

**ಅರ್ಥ** :- **ಸಾ ಗದಾ ಚ** ಆ ಗದೆಯಾದರೂ, **ಮಧುರಾಪ್ರದೇಶಾತ್** ಮಧುರೆಯ ಪ್ರದೇಶಕ್ಕಿಂತ, **ಯೋಜನೇನ ಅರ್ವಾಕ್** ಒಂದು ಯೋಜನ ಮುಂಚೆಯೇ **ಪಪಾತ** ಬಿದ್ದಿತು, **ಯತ್** ಯಾವ ಕಾರಣದಿಂದ, **ಪೃಷ್ಟಃ** ಮಧುರೆಯು ಇಲ್ಲಿಂದ (ಗಿರಿವ್ರಜದಿಂದ) ಎಷ್ಟು ಯೋಜನ ದೂರವಿದೆ ಎಂದು ಜರಾಸಂಧನಿಂದ ಕೇಳಲ್ಪಟ್ಟ, **ದೇವರ್ಷಿಃ** ನಾರದಮಹರ್ಷಿಗಳು, **ಶತಾತ್ ಏಕೋತ್ತರಾಮಪಿ** ನೂರೊಂದು ಯೋಜನೆ ದೂರವಿದ್ದರೂ, **ಮಧುರಾಂ** ಮಧುರೆಯನ್ನು **ಭಗವತ್ಪ್ರಿಯಾರ್ಥೇ** ಶ್ರೀಕೃಷ್ಣನ ಪ್ರೀತಿಗಾಗಿ, **ಅತ್ರ** ಇಲ್ಲಿಂದ (ನಿನ್ನ ನಗರದಿಂದ), **ಶತಯೋಜನಾ ಇತಿ** ನೂರು ಯೋಜನೆ ದೂರವಿದೆಯೆಂದು, **ಇಮಂ** ಈ ಜರಾಸಂಧನನ್ನು ಕುರಿತು, **ಪ್ರಜಗಾದ** ಹೇಳಿದ್ದರು, ಆದ್ದರಿಂದ ಆ ಗದೆಯು ಒಂದು ಯೋಜನೆ ಮೊದಲೇ ಬಿದ್ದಿತು.

**ತಾತ್ಪರ್ಯ** :- ಶಿವದತ್ತವಾದ ಆ ಗದೆ ಮಧುರೆಯ ಪ್ರದೇಶಕ್ಕಿಂತ ಒಂದು ಯೋಜನ ಮುಂಚೆಯೇ ಬಿದ್ದಿತು. ಏಕೆಂದರೆ ಮಗಧರಾಜಧಾನಿ ಗಿರಿವ್ರಜದಿಂದ ಮಧುರಾಪುರಿ ನೂರೊಂದು ಯೋಜನ ದೂರದಲ್ಲಿದ್ದರೂ, ಜರಾಸಂಧ ಕೇಳಿದಾಗ ನಾರದರು ಶ್ರೀಕೃಷ್ಣನ ಪ್ರೀತಿಗಾಗಿ ನೂರು ಯೋಜನ ಎಂದಿದ್ದರು. ಆದ್ದರಿಂದ ಆ ಗದೆಯು ಮಧುರಾಪುರಿಗಿಂತ ಒಂದು ಯೋಜನ ಈಚೆಗೇ ಬಿದ್ದಿತು.

ಶಕ್ತಸ್ಯ ಚಾಪಿ ಹಿ ಗದಾಪ್ರತಿಘಾತನೇ ತು
ಶುಶ್ರೂಷಣಂ ಮದುಚಿತಂ ತ್ವಿತಿ ಚಿಂತಯಾನಃ ।
ವಿಷ್ಣೋರ್ಮುನಿಃ ಸ ನಿಜಗಾದ ಹಿ ಯೋಜನೋನಂ
ಮಾರ್ಗಂ ಪುರೋ ಭಗವತೋ ಮಗಧೇಶಪೃಷ್ಟಃ ॥ ೧೩ ॥

**ಅರ್ಥ** :- **ಮಗಧೇಶಪೃಷ್ಟಃ** ಮಗಧಾಧಿಪತಿ ಜರಾಸಂಧನಿಂದ, **ಪೃಷ್ಟಃ** ಕೇಳಲ್ಪಟ್ಟ ಅಂದರೆ ಜರಾಸಂಧ ಕೇಳಿದಾಗ, **ಸ ಮುನಿಃ** ಆ ನಾರದ

ಮಹರ್ಷಿಯು, **ಗದಾಪ್ರತಿಘಾತನೇ** ಗದೆಯನ್ನು ಎದುರಿಸುವ ವಿಷಯದಲ್ಲಿ **ಶಕ್ತಸ್ಯಾಪಿ** ಸಮರ್ಥನಾಗಿದ್ದರೂ, **ವಿಷ್ಣೋಃ** ಶ್ರೀಕೃಷ್ಣನ, **ಶುಶ್ರೂಷಣಂ** ಗದಾಪ್ರಹಾರಪರಿಹಾರರೂಪವಾದ ಸೇವೆಯು, **ಮದುಚಿತಂ** ನನಗೆ ಯೋಗ್ಯವಾದುದು, ಇತಿ ಎಂದು, **ಚಿಂತಯಾನಃ ಸನ್** ಚಿಂತಿಸುವವನಾಗಿ, **ಭಗವತಃ** ಶ್ರೀಕೃಷ್ಣನ, **ಪುರಃ** ಪಟ್ಟಣವಾದ ಮಧುರೆಯ, **ಮಾರ್ಗಂ** ಮಾರ್ಗವನ್ನು **ಯೋಜನೋನಂ** ಒಂದು ಯೋಜನ ಕಡಿಮೆಯನ್ನಾಗಿ, **ನಿಜಗಾದ ಹ** ಹೇಳಿದ್ದನಷ್ಟೆ ಆದ್ದರಿಂದ ಆ ಗದೆ ಮೊದಲೇ ಬಿದ್ದಿತು.

**ತಾತ್ಪರ್ಯ** :- ಗದೆಯನ್ನು ಎದುರಿಸುವ ಶಕ್ತಿ ಶ್ರೀಕೃಷ್ಣನಿಗಿದ್ದರೂ ನಾರದಮಹರ್ಷಿಗಳು. ತಾವು ಅವನ ಸೇವೆ ಮಾಡುವದು ಉಚಿತವೆಂದು ಭಾವಿಸಿ ಜರಾಸಂಧ ಕೇಳಿದಾಗ ಮಧುರೆಯ ಮಾರ್ಗವನ್ನು ಒಂದು ಯೋಜನ ಕಡಿಮೆ ಮಾಡಿ ಹೇಳಿದ್ದರು.

**ಕ್ಷಿಪ್ತಾ ತು ಸಾ ಭಗವತೋಥ ಗದಾ ಜರಾಖ್ಯಾಂ**
**ತತ್ಸಂಧಿನೀಮಸುಭಿರಾಶು ವಿಯೋಜ್ಯ ಪಾಪಾಂ ।**
**ಮರ್ತ್ಯಾಶನೀಂ ಭಗವತಃ ಪುನರಾಜ್ಞಯೈವ**
**ಯಾತಾ ಗಿರೀಶಸದನಂ ಮಗಧಂ ವಿಸೃಜ್ಯ ॥ ೧೪ ॥**

**ಅರ್ಥ :- ಅಥ** ನಾರದರು ಹೇಳಿದ ನಂತರ, **ಭಗವತಃ** ಶ್ರೀಕೃಷ್ಣನಿಗಾಗಿ, **ಕ್ಷಿಪ್ತಾ** ಎಸೆಯಲ್ಪಟ್ಟ **ಸಾ ಗದಾ ತು** ಆ ಗದೆಯಾದರೂ, **ತತ್ಸಂಧಿನೀಂ** ಆ ಜರಾಸಂಧನ ಶರೀರದ ಎರಡು ಸೀಳುಗಳನ್ನು ಜೋಡಿಸಿದ್ದ **ಮರ್ತ್ಯಾಶನೀಂ** ನರಭಕ್ಷಕಿಯಾದ, ಆದ್ದರಿಂದಲೇ, **ಪಾಪಾಂ** ಪಾಪಿಷ್ಠಳಾದ, **ಜರಾಖ್ಯಾಂ** ಜರಾ ಎಂಬ ಹೆಸರಿನ ರಾಕ್ಷಸಿಯನ್ನು **ಅಸುಭಿಃ** ಪ್ರಾಣಗಳಿಂದ, **ವಿಯೋಜ್ಯ** ವಿಯೋಜನೆ ಮಾಡಿಸಿ ಅಂದರೆ ಸಂಹರಿಸಿ, **ಮಾಗಧಂ** ಜರಾಸಂಧನನ್ನು **ವಿಸೃಜ್ಯ** ತೊರೆದು, **ಭಗವತಃ** ಶ್ರೀಕೃಷ್ಣನ, **ಆಜ್ಞಯೈವ** ಆಜ್ಞೆಯಿಂದಲೇ, **ಪುನಃ** ಮತ್ತೆ, **ಗಿರೀಶಸದನಂ ಗಿರೀಶ** ರುದ್ರದೇವರ, **ಸದನಂ** ಮನೆಯನ್ನು ಅಂದರೆ ಕೈಲಾಸವನ್ನು **ಯಾತಾ** ಸೇರಿತು.

**ತಾತ್ಪರ್ಯ** :- ಶ್ರೀಕೃಷ್ಣನಿಗೆ ಎಸೆದ ಆ ಗದೆ, ಜರಾಸಂಧನ ಶರೀರದ ಎರಡು ಸೀಳುಗಳನ್ನು ಒಂದುಗೂಡಿಸಿದ್ದ ನರಭಕ್ಷಕಿಯಾಗಿದ್ದ ಆದ್ದರಿಂದಲೇ ಮಹಾಪಾಪಿಷ್ಠಳಾದ ಜರಾ ಎಂಬ ರಾಕ್ಷಸಿಯ ಪ್ರಾಣವಿಯೋಜನೆ ಮಾಡಿಸಿ, ಬಳಿಕ ಶ್ರೀಕೃಷ್ಣನ ಆಜ್ಞೆಯಿಂದಲೇ ಕೈಲಾಸಕ್ಕೆ ಹೊರಟು ಹೋಯಿತು.

**ರಾಜಾ ಸ್ವಮಾತೃತ ಉತೋ ಗದಯಾ ಚ ಹೀನಃ**
**ಕ್ರೋಧಾತ್ ಸಮಸ್ತನೃಪತೀನ್ ಅಭಿಸನ್ನಿಪಾತ್ಯ ।**
**ಅಕ್ಷೌಹಿಣೀತ್ರ್ಯಧಿಕವಿಂಶಯುತೋಽತಿವೇಲಂ**
**ದರ್ಪೋದ್ಧತಃ ಸಪದಿ ಕೃಷ್ಣಪುರೀಂ ಜಗಾಮ ॥ ೧೫ ॥**

**ಅರ್ಥ** :- **ರಾಜಾ** ರಾಜನಾದ ಜರಾಸಂಧನು, **ಸ್ವಮಾತೃತಃ** ತನ್ನ ತಾಯಿಯಿಂದ, **ಉತೋ** ಹಾಗೇ, **ಗದಯಾ ಚ** ಗದೆಯಿಂದಲೂ, **ಹೀನಃ** ರಹಿತನಾಗಿ, **ಕ್ರೋಧಾತ್** ಕ್ರೋಧದಿಂದ, **ಸಪದಿ** ಕೂಡಲೇ, **ಸಮಸ್ತನೃಪತೀನ್** ಎಲ್ಲ ರಾಜರುಗಳನ್ನು **ಅಭಿಸನ್ನಿಪಾತ್ಯ** ಒಂದುಗೂಡಿಸಿ, **ಅಕ್ಷೌಹಿಣೀತ್ರ್ಯಧಿಕವಿಂಶಯುತಃ** ಇಪ್ಪತ್ತಮೂರು ಅಕ್ಷೋಹಿಣೀಸೈನ್ಯಯುಕ್ತನಾಗಿ, **ಅತಿವೇಲಂ** ಬಹಳ, **ದರ್ಪೇಣ** ದರ್ಪದಿಂದ, **ಉದ್ಧತಃ** ಉನ್ಮತ್ತನಾಗಿ, **ಸಪದಿ** ಕೂಡಲೇ, **ಕೃಷ್ಣಪುರೀಂ ಜಗಾಮ** ಮಧುರೆಯ ಮೇಲೆ ಏರಿ ಹೋದ.

**ತಾತ್ಪರ್ಯ** :- ಹೀಗೆ ರಾಜನಾದ ಜರಾಸಂಧ ತಾಯಿಯನ್ನೂ ಕಳೆದುಕೊಂಡ. ಗದೆಯನ್ನೂ ಕಳೆದುಕೊಂಡ. ಕ್ರೋಧದಿಂದ ಕೂಡಲೇ ಭೂಮಂಡಲದ ಎಲ್ಲ ರಾಜರುಗಳನ್ನೂ ಒಟ್ಟುಗೂಡಿಸಿ ಇಪ್ಪತ್ತಮೂರು ಅಕ್ಷೋಹಿಣಿಸೇನೆಯೊಂದಿಗೆ ಬಹಳ ದರ್ಪದಿಂದ ಉನ್ಮತ್ತನಾಗಿ ಮಧುರೆಯ ಮೇಲೇರಿ ಹೋದ.

**ಸರ್ವಾಂ ಪುರೀಂ ಪ್ರತಿನಿರುಧ್ಯ ದಿದೇಶ ವಿಂದ**
**ವಿಂದಾನುಜೌ ಭಗವತಃ ಕುಮತಿಃ ಸ ದೂತೌ ।**
**ತಾ ಊಚತುರ್ಭಗವತೇಽಸ್ಯ ವಚೋಽತಿದರ್ಪ-**
**ಪೂರ್ಣಂ ತಥಾ ಭಗವತೋಽಪ್ಯಪಹಾಸಯುಕ್ತಮ್ ॥ ೧೬ ॥**

**ಅರ್ಥ** :- **ಕುಮತಿಃ** ದುರ್ಬುದ್ಧಿಯುಳ್ಳ, **ಸಃ** ಆ ಜರಾಸಂಧನು, **ಸರ್ವಾಂ ಪುರೀಂ** ಇಡೀ ಮಧುರಾಪಟ್ಟವನ್ನು **ಪ್ರತಿನಿರುಧ್ಯ** ತಡೆಹಿಡಿದು, **ವಿಂದವಿಂದಾನುಜೌ** ವಿಂದ ಅವನ ತಮ್ಮನಾದ ಅನುವಿಂದ ಎಂಬ ಇಬ್ಬರು ಸೋದರರನ್ನು **ದೂತೌ** ದೂತರನ್ನಾಗಿ, **ಭಗವತಃ ಸಕಾಶಂ** ಶ್ರೀಕೃಷ್ಣನ ಸಮೀಪಕ್ಕೆ, **ದಿದೇಶ** ಕಳಿಸಿದನು, **ತೌ** ಆ ವಿಂದ ಅನುವಿಂದರು, **ಭಗವತೇ** ಶ್ರೀಕೃಷ್ಣನಿಗೆ, **ಅಸ್ಯ** ಈ ಜರಾಸಂಧನ, **ಅತಿದರ್ಪಪೂರ್ಣಂ** ಮಹಾಗರ್ವದಿಂದ ಪೂರ್ಣವಾದ, **ಭಗವತೋಽಪಿ ಅಪಹಾಸಯುಕ್ತಂ** ಶ್ರೀಕೃಷ್ಣನ ಅಪಹಾಸದಿಂದಲೂ ಕೂಡಿದ, **ವಚಃ** ಮಾತನ್ನು **ಊಚತುಃ** ಹೇಳಿದರು.

ತಾತ್ಪರ್ಯ :- ದುರ್ಬುದ್ಧಿಯ ಜರಾಸಂಧ ಇಡೀ ಮಧುರಾ ಪಟ್ಟಣ ವನ್ನು ತಡೆಹಿಡಿದು ವಿಂದ ಅನುವಿಂದರನ್ನು ಶ್ರೀಕೃಷ್ಣನ ಬಳಿಗೆ ದೂತರನ್ನಾಗಿ ಕಳಿಸಿಕೊಟ್ಟ. ಅವರು ಶ್ರೀಕೃಷ್ಣನಿಗೆ ಜರಾಸಂಧನ, ಅಪಹಾಸಕರವಾದ ಅತಿ ದರ್ಪದಿಂದ ಕೂಡಿದ ಮಾತನ್ನು ಹೇಳಿದರು.

**ಲೋಕೇಽಪ್ರತೀತಬಲಪೌರುಷಸಾರರೂಪಃ**
**ತ್ವಂ ಹ್ಯೇಕ ಏಷ್ಯಭವತೋ ಬಲವೀರ್ಯಸಾರಂ ।**
**ಜ್ಞಾತ್ವಾ ಸುತೇ ನತು ಮಯಾ ಪ್ರತಿಪಾದಿತೇ ಹಿ**
**ಕಂಸಸ್ಯ ವೀರ್ಯರಹಿತೇನ ಹತಸ್ತ್ವಯಾ ಸಃ ॥ ೧೭ ॥**

**ಅರ್ಥ** :- **ಲೋಕೇ** ಜಗತ್ತಿನಲ್ಲಿ, **ಅಪ್ರತೀತ ಬಲಪೌರುಷಸಾರರೂಪಃ ಅಪ್ರತೀತ** ಅಪ್ರಸಿದ್ಧವಾದ, **ಬಲಪೌರುಷ** ಬಲಪೌರುಷಗಳಿಂದ, **ಸಾರರೂಪಃ** ಶ್ರೇಷ್ಠಸ್ವರೂಪನೆನಿಸಿದವನು, **ತ್ವಂ ಏಕ** ಏವ ನೀನೊಬ್ಬನೇ, **ಹಿ** ಪ್ರಸಿದ್ಧವು, **ವೀರ್ಯರಹಿತೇನ** ನಿರ್ವೀರ್ಯನಾದ, **ಮಯಾ** ನನ್ನಿಂದ, **ಏಷ್ಯಭವತಃ** ಮುಂದೆ ಹುಟ್ಟಲಿರುವ ನಿನ್ನ, **ಬಲವೀರ್ಯಸಾರಂ** ಬಲ-ವೀರ್ಯಗಳ ಮಹತ್ವ ವನ್ನು, **ನ ಜ್ಞಾತ್ವಾ** ತಿಳಿಯದೆ, **ಸುತೇ** ಮಕ್ಕಳು (ಅಸ್ತಿಪ್ರಾಸ್ತಿಯರು), **ಕಂಸಸ್ಯ** ಕಂಸನಿಗೆ, **ಪ್ರತಿಪಾದಿತೇ** ಕೊಡಲ್ಪಟ್ಟರು, **ಸಃ** ಆ ಕಂಸನು, **ತ್ವಯಾ** ನಿನ್ನಿಂದ, **ಹತಃ** ಹತನಾದನು.

ತಾತ್ಪರ್ಯ :- ಜಗತ್ತಿನಲ್ಲಿ ಅಪ್ರಸಿದ್ಧವಾದ ಬಲಪೌರುಷಗಳಿಂದ ಶ್ರೇಷ್ಠಸ್ವರೂಪನೆನಿಸಿದವನು ನೀನೊಬ್ಬನೇ. ಆದರೆ ನಿರ್ವೀರ್ಯನಾದ ನಾನು ಮುಂದೆ ಹುಟ್ಟಲಿದ್ದ ನಿನ್ನ ಬಲ-ವೀರ್ಯಗಳ ಮಹತ್ವವನ್ನರಿಯದೇ ನನ್ನ ಮಕ್ಕಳನ್ನು ಕಂಸನಿಗೆ ಧಾರೆಯರೆದು ಕೊಟ್ಟೆ. ಈಗ ಅವನು ನಿನ್ನಿಂದ ಹತನಾಗಿದ್ದಾನೆ.

**ವಿಶೇಷ ವಿಷಯ** :'ಲೋಕೇಪ್ರತೀತ' ಎಂಬಲ್ಲಿ 'ಲೋಕೇ ಅಪ್ರತೀತ' ಎಂದೂ 'ಲೋಕೇ ಪ್ರತೀತ' ಎಂದೂ ಪದವಿಭಾಗ ಮಾಡಬಹುದು. ಲೋಕೇ ಅಪ್ರತೀತ ಎಂದು ಜನಾರ್ದನೀಯದಲ್ಲಿ ಪದವಿಭಾಗ ಮಾಡಲಾಗಿದೆ. ಅದಕ್ಕನುಗುಣವಾಗಿ ಮೇಲಿನ ತಾತ್ಪರ್ಯವಿದೆ. ಶ್ರೀಕೃಷ್ಣನು ಭೂಮಿಯಲ್ಲಿ ಜನಿಸಿ ಕಂಸನನ್ನು ಕೊಲ್ಲುವವರೆಗೆ ಅವನ ಬಲಪೌರುಷಗಳು ಪ್ರಸಿದ್ಧ ವಾಗಿರಲಿಲ್ಲ. ಆದ್ದರಿಂದ ಲೋಕದಲ್ಲಿ ಅಪ್ರಸಿದ್ಧವಾದ ಬಲಪೌರುಷ ಎಂದು

'ಜನಾರ್ದನೀಯ'ದಲ್ಲಿ ಹೇಳಲಾಗಿದೆ. 'ಲೋಕೇ ಪ್ರತೀತ' ಎಂದು ಪದ ವಿಭಾಗ ಮಾಡಿ 'ಲೋಕ ಪ್ರಸಿದ್ಧವಾದ ಬಲಪೌರುಷಗಳಿಂದ ಕೂಡಿದವ' ಎಂದು 'ವಾದಿರಾಜೀಯ'ದಲ್ಲಿ ವ್ಯಾಖ್ಯಾನಿಸಲಾಗಿದೆ. 'ಲೋಕೇಽಪ್ರತೀಪ...' ಎಂದು ಪಾಠಾಂತರವನ್ನು ಸ್ವೀಕರಿಸಿ ಜಗತ್ತಿನಲ್ಲಿ ಸಾಟಿಯಿಲ್ಲದ ಬಲಪೌರುಷ ಗಳಿಂದ ಕೂಡಿದವ ಎಂದು 'ವರದರಾಜೀಯ'ದಲ್ಲಿ ವ್ಯಾಖ್ಯಾನಿಸಲಾಗಿದೆ.

**ಸೋಽಹಂ ಹಿ ದುರ್ಬಲತಮೋ ಬಲಿನಾಂ ವರಿಷ್ಠಂ**
**ಕೃತ್ವೈವ ದೃಷ್ಟಿವಿಷಯಂ ವಿಗತಪ್ರತಾಪಃ ।**
**ಯಾಸ್ಯೇ ತಪೋವನಮಥೋ ಸಹಿತಃ ಸುತಾಭ್ಯಾಂ**
**ಕ್ಷಿಪ್ರಂ ಮಮಾದ್ಯ ವಿಷಯೋ ಭವ ಚಕ್ಷುಷೋಽತಃ ॥ ೧೮ ॥**

**ಅರ್ಥ :- ದುರ್ಬಲತಮಃ** ಅತ್ಯಂತ ದುರ್ಬಲನಾದ, **ಸೋಽಹಂ** ಆ ನಾನು, **ಬಲಿನಾಂ** ಬಲಿಷ್ಠರ ಮಧ್ಯದಲ್ಲಿ, **ವರಿಷ್ಠಂ** ಶ್ರೇಷ್ಠನಾದ, **ತ್ವಾಂ** ನಿನ್ನನ್ನು **ದೃಷ್ಟಿವಿಷಯಂ ಕೃತ್ವೈವ** ದೃಗ್ಗೋಚರನನ್ನಾಗಿ ಮಾಡಿಯೇ ಅಂದರೆ ನೋಡಿಯೇ, **ವಿಗತಪ್ರತಾಪಃ ಸನ್** ವಿಗತ ಕಳೆದುಹೋದ, **ಪ್ರತಾಪಃ** ಪ್ರತಾಪವುಳ್ಳವನಾಗಿ, **ಅಥೋ** ಅನಂತರ, **ಸುತಾಭ್ಯಾಂ** ಮಕ್ಕಳಾದ ಅಸ್ತಿ-ಪ್ರಾಸ್ತಿಯರಿಂದ, **ಸಹಿತಃ** ಕೂಡಿಕೊಂಡು, **ತಪೋವನಂ** ತಪಸ್ಸಿಗಾಗಿ ಕಾಡಿಗೆ **ಯಾಸ್ಯೇ** ಹೋಗುವವನು, **ಅತಃ** ಆದ್ದರಿಂದ, **ಅದ್ಯ** ಈಗ, **ಕ್ಷಿಪ್ರಂ** ಬೇಗನೆ, **ಮಮ** ನನ್ನ **ಚಕ್ಷುಷಃ** ಕಣ್ಣಿಗೆ, **ವಿಷಯೋ ಭವ** ಗೋಚರನಾಗು.

**ತಾತ್ಪರ್ಯ :-** ನಾನು ಅತ್ಯಂತ ದುರ್ಬಲನು. ಪ್ರತಾಪವಿಲ್ಲದವನು. ಬಲಿಷ್ಠರಲ್ಲಿ ಶ್ರೇಷ್ಠವಾದ ನಿನ್ನನ್ನು ಕಂಡೇ ಕೃತಕೃತ್ಯನಾಗಿ ಮಕ್ಕಳೊಂದಿಗೆ ತಪಸ್ಸಿಗಾಗಿ ಕಾಡಿಗೆ ಹೋಗುವವನು. ಆದ್ದರಿಂದ ಈಗ ಬೇಗನೇ ನನ್ನ ಕಣ್ಣಿಗೆ ಬೀಳು.

**ವಿಶೇಷ ವಿಷಯ :**'ತಪೋವನಂ' ಎಂಬುದಕ್ಕೆ 'ತಪಸ್ಸಿಗಾಗಿ ಕಾಡಿಗೆ ಎಂದು ಒಂದು ಅರ್ಥ. ತಪೋವನಕ್ಕೆ ಎಂದು ಇನ್ನೊಂದು ಅರ್ಥ. ಮಗಧ ದೇಶದಲ್ಲಿ ತಪೋವನ ಎಂದು ಪ್ರಸಿದ್ಧವಾದ ವನವೊಂದಿದೆ ಎಂದು 'ಜನಾರ್ದನೀಯ'ದಲ್ಲಿ ಹೇಳಲಾಗಿದೆ.

ಸಾಕ್ಷೇಪಮೀರಿತಮಿದಂ ಬಲದರ್ಪಪೂರ್ಣಂ
ಆತ್ಮಾಪಹಾಸಸಹಿತಂ ಭಗವಾನ್ ನಿಶಮ್ಯ ।
ಸತ್ಯಂ ತದಿತ್ಯುರುವಚೋಽರ್ಥವದಿತ್ಯುದೀರ್ಯ
ಮಂದಂ ಪ್ರಹಸ್ಯ ನಿರಗಾತ್ ಸಹಿತೋ ಬಲೇನ ॥ ೧೯ ॥

**ಅರ್ಥ :- ಬಲದರ್ಪಪೂರ್ಣಂ** ಬಲ-ದರ್ಪಗಳಿಂದ ಪೂರ್ಣವಾದ, **ಆತ್ಮಾಪಹಾಸಸಹಿತಂ** ತನ್ನ ಅಪಹಾಸದಿಂದ ಕೂಡಿದ, **ಸಾಕ್ಷೇಪಂ** ಆಕ್ಷೇಪಗರ್ಭಿತವಾಗಿ, **ಈರಿತಂ** ಹೇಳಲ್ಪಟ್ಟ **ಇದಂ** ಈ ಮಾತನ್ನು **ಭಗವಾನ್** ಶ್ರೀಕೃಷ್ಣನು, **ನಿಶಮ್ಯ** ಕೇಳಿ, **ತತ್** ಅದು, **ಸತ್ಯಂ** ಸತ್ಯವು, **ಅರ್ಥವತ್** ಅರ್ಥಗರ್ಭಿತವು, **ಇತಿ** ಎಂದು, **ಉರುವಚಃ** = **ಉರು** ಶ್ರೇಷ್ಠವಾದ ಅಥವಾ ಗಂಭೀರವಾದ, **ವಚಃ** ಮಾತನ್ನು **ಉದೀರ್ಯ** (ಅವರೆದುರಿಗೆ) ಹೇಳಿ, **ಮಂದಂ ಪ್ರಹಸ್ಯ** ಮಂದಹಾಸ ಬೀರಿ, **ಬಲೇನ ಸಹ** ಬಲರಾಮನ ಜೊತೆಗೆ, **ನಿರಗಾತ್** ಹೊರಟುಹೋದನು.

**ತಾತ್ಪರ್ಯ :-** ಜರಾಸಂಧನ ಮಾತು ಆಕ್ಷೇಪಗರ್ಭಿತವಾಗಿತ್ತು. ಬಲದರ್ಪಗಳಿಂದ ಪೂರ್ಣವಾಗಿತ್ತು. ಅಪಹಾಸದಿಂದ ಕೂಡಿದ ಅವನ ಮಾತನ್ನು ಕೇಳಿ, ಅದು ಸತ್ಯ, ಅರ್ಥವತ್ತಾಗಿದೆ ಎಂದು ಅರ್ಥಗರ್ಭಿತವಾದ ಮಾತನ್ನು ಹೇಳಿ ಮಂದಹಾಸವನ್ನು ಬೀರಿ ಶ್ರೀಕೃಷ್ಣ ಬಲರಾಮನೊಂದಿಗೆ ಹೊರಟ.

**ವಿಶೇಷ ವಿಷಯ :-** 'ಸತ್ಯ' ಎಂದರೆ ಅರ್ಧಾಂಗೀಕಾರವೆಂದಿಟ್ಟು ಕೊಳ್ಳಬೇಕು. ಜರಾಸಂಧ ಹೇಳಿದ್ದರಲ್ಲಿ ಎಲ್ಲವೂ ಸತ್ಯವಲ್ಲ, ಅರ್ಧ ಮಾತ್ರ ಸತ್ಯ. ಕೃಷ್ಣನ ಕೇವಲ ದರ್ಶನದಿಂದ ಜರಾಸಂಧ ತನ್ನ ಪ್ರತಾಪವನ್ನು ಕಳೆದು ಕೊಳ್ಳುತ್ತಾನೆ ಎಂಬ ಅಂಶ ಅಂಗೀಕಾರಾರ್ಹ. ತಪಸ್ಸಿಗೆ ಕಾಡಿಗೆ ಹೋಗುತ್ತಾನೆ ಎಂಬ ಅಂಶ ಅಂಗೀಕಾರಾರ್ಹವಲ್ಲ ಎಂದು ಜನಾರ್ದನೀಯದಲ್ಲಿದೆ.

ದ್ವಾರೇಷು ಸಾತ್ಯಕಿಪುರಸ್ಸರಮಾತ್ಮಸೈನ್ಯಂ
ತ್ರಿಷ್ವಭ್ಯುದೀರ್ಯ ಭಗವಾನ್ ಸ್ವಯಮುತ್ತರೇಣ ।
ರಾಮದ್ವಿತೀಯ ಉದಗಾನ್ಮಗಧಾಧಿರಾಜಂ
ಯೋದ್ಧುಂ ನೃಪೇಂದ್ರಕಟಕೇನ ಯುತಂ ಪರೇಶಃ ॥ ೨೦ ॥

**ಅರ್ಥ :- ಭಗವಾನ್ ಪರೇಶಃ** ಭಗವಾನ ಶ್ರೀಕೃಷ್ಣನು, **ಸಾತ್ಯಕಿಪುರಸ್ಸರಂ** ಸಾತ್ಯಕಿನೇತೃತ್ವದ, **ಆತ್ಮಸೈನ್ಯಂ** ತನ್ನ ಸೈನ್ಯವನ್ನು **ತ್ರಿಷು ದ್ವಾರೇಷು** (ನಗರದ) ಮೂರು ದ್ವಾರಗಳಲ್ಲಿ **ಅಭ್ಯುದೀರ್ಯ** ಆಜ್ಞಾಪಿಸಿ (ನೇಮಿಸಿ), **ಉತ್ತರೇಣ** ಉತ್ತರದ್ವಾರದಿಂದ, **ನೃಪೇಂದ್ರಕಟಕೇನ** ರಾಜಶ್ರೇಷ್ಠರ ಸಮೂಹದಿಂದ ಅಥವಾ ಸೈನ್ಯದಿಂದ, **ಯುತಂ** ಕೂಡಿದ್ದ **ಮಗಧಾಧಿರಾಜಂ ಯೋದ್ಧುಂ** ಮಗಧಾಧಿಪತಿ ಜರಾಸಂಧನೊಡನೆ ಯುದ್ಧಮಾಡಲು, **ರಾಮದ್ವಿತೀಯಃ** ಬಲರಾಮನೊಂದಿಗೆ, **ಸ್ವಯಂ** ತಾನೇ, **ಉದಗಾತ್** ಹೊರಟನು.

**ತಾತ್ಪರ್ಯ :-** ಭಗವಾನ ಶ್ರೀಕೃಷ್ಣನು ಸಾತ್ಯಕಿನೇತೃತ್ವದ ತನ್ನ ಸೈನ್ಯವನ್ನು ಮಧುರಾಪುರಿಯ ಮೂರು ದ್ವಾರಗಳಲ್ಲಿ ನೇಮಿಸಿ ಉತ್ತರದ ದ್ವಾರದಿಂದ ಸ್ವತಃ ತಾನೇ, ರಾಜಶ್ರೇಷ್ಠರ ಸೈನ್ಯದಿಂದ ಸಮೇತನಾದ ಮಗಧಾಧಿಪತಿ ಜರಾಸಂಧನನ್ನು ಎದುರಿಸಲು ಬಲರಾಮನೊಂದಿಗೆ ಹೊರಟ.

**ತಸ್ಯೇಚ್ಛಯೈವ ಪೃಥಿವೀಮವತೇರುರಾಶು**
**ತಸ್ಯಾಽಯುಧಾನಿ ಸಬಲಸ್ಯ ಸುಭಾಸ್ವರಾಣಿ ।**
**ಶಾರ್ಙ್ಗಾಸಿಚಕ್ರದರತೂಣಗದಾಃ ಸ್ವಕೀಯಾ**
**ಜಗ್ರಾಹ ದಾರುಕಗೃಹೀತರಥೇ ಸ್ಥಿತಃ ಸಃ ॥ ೨೧ ॥**

**ಅರ್ಥ :- ತಸ್ಯ** ಆ ಕೃಷ್ಣನ, **ಇಚ್ಛಯೈವ** ಇಚ್ಛೆಯಿಂದಲೇ, **ಸಬಲಸ್ಯ** ಬಲರಾಮ ಸಮೇತವಾದ, **ತಸ್ಯ** ಶ್ರೀಕೃಷ್ಣನಿಗೆ, **ಸುಭಾಸ್ವರಾಣಿ** ಅತ್ಯಂತ ಪ್ರಕಾಶಮಾನವಾದ, **ಆಯುಧಾನಿ** ಆಯುಧಗಳು, **ಆಶು** ಬೇಗನೆ, **ಪೃಥಿವೀಮವತೇರುಃ** ಭೂಮಿಗಿಳಿದು ಬಂದವು, **ದಾರುಕಗೃಹೀತರಥೇ** ದಾರುಕನ ಸಾರಥ್ಯದ ರಥದಲ್ಲಿ **ಸ್ಥಿತಃ** ಇದ್ದುಕೊಂಡು (ಕುಳಿತುಕೊಂಡು), **ಸ್ವಕೀಯಾಃ** ತನ್ನದಾಗ, **ಶಾರ್ಙ್ಗಾಸಿಚಕ್ರದರತೂಣಗದಾಃ = ಶಾರ್ಙ್ಗ** ಶಾರ್ಙ್ಗಧನುಸ್ಸು **ಅಸಿ** ಖಡ್ಗ **ಚಕ್ರ** ಚಕ್ರವು, **ದರ** ಶಂಖ, **ತೂಣ** ಬತ್ತಳಕೆ, **ಗದಾ** ಗದೆ ಇವುಗಳನ್ನು **ಜಗ್ರಾಹ** ಸ್ವೀಕರಿಸಿದನು (ಕೈಗೆತ್ತಿಕೊಂಡನು).

**ತಾತ್ಪರ್ಯ :-** ಶ್ರೀಕೃಷ್ಣನು ಇಚ್ಛಿಸಿದ ಕೂಡಲೇ ಅವನಿಗೂ ಬಲರಾಮನಿಗೂ ದೇದೀಪ್ಯಮಾನವಾದ ಆಯುಧಗಳು ಬೇಗನೆ ಭೂಮಿಗೆ ಇಳಿದು ಬಂದವು. ದಾರುಕ ತೆಗೆದುಕೊಂಡು ಬಂದ ರಥದಲ್ಲಿ ಕುಳಿತು ಶ್ರೀಕೃಷ್ಣ ತನ್ನ ಶಾರ್ಙ್ಗಧನುಸ್ಸು ಖಡ್ಗ ಚಕ್ರ, ಶಂಖ, ಬತ್ತಳಕೆ, ಗದೆಗಳನ್ನು ಕೈಗೆತ್ತಿಕೊಂಡನು.

ಆರುಹ್ಯ ಭೂಮಯರಥಂ ಪ್ರತಿಯುಕ್ತಮಶ್ವೈಃ
ವೇದಾತ್ಮಕೈರ್ಧನುರಧಿಜ್ಯಮಥ ಪ್ರಗೃಹ್ಯ ।
ಶಾರ್ಙ್ಗಂ ಶರಾಂಶ್ಚ ನಿಶಿತಾನ್ಮಗಧಾಧಿರಾಜ-
ಮುಗ್ರಂ ನೃಪೇಂದ್ರಸಹಿತಂ ಪ್ರಯಯೌ ಜವೇನ ॥ ೨೨ ॥

**ಅರ್ಥ** :- ಶ್ರೀಕೃಷ್ಣನು **ವೇದಾತ್ಮಕೈಃ** ವೇದಾತ್ಮಕವಾದ, **ಅಶ್ವೈಃ** ಕುದುರೆಗಳಿಂದ, **ಪ್ರತಿಯುಕ್ತಂ** ಹೂಡಲ್ಪಟ್ಟ, **ಭೂಮಯರಥಂ** ಭೂಮಯರಥವನ್ನು (ಭೂ ದೇವಿಯು ಅಭಿಮಾನಿಯಾಗಿವುಳ್ಳ ರಥವನ್ನು) **ಆರುಹ್ಯ** ಏರಿ, **ಅಧಿಜ್ಯಂ** ಹೆದ ಏರಿಸಿದ, **ಶಾಙ್ಗಂ** ಶಾಙ್ಗಧನುಸ್ಸನ್ನು, **ನಿಶಿತಾನ್** ಹರಿತವಾದ, **ಶರಾಂಶ್ಚ** ಬಾಣಗಳನ್ನೂ, **ಪ್ರಗೃಹ್ಯ** ಧರಿಸಿ, **ಅಥ** ಅನಂತರ, **ಜವೇನ** ವೇಗದಿಂದ, **ನೃಪೇಂದ್ರಸಹಿತಂ** ರಾಜಶ್ರೇಷ್ಠರಿಂದ ಸಹಿತನಾದ, **ಉಗ್ರಂ** ಕ್ರೂರನಾದ, **ಮಗಧಾಧಿರಾಜಂ ಪ್ರಯಯೌ** ಜರಾಸಂಧನನ್ನು ಎದುರಿಸಲು ಹೋದನು.

**ತಾತ್ಪರ್ಯ** :- ಶ್ರೀಕೃಷ್ಣನು ವೇದಾತ್ಮಕ ಅಶ್ವಗಳನ್ನು ಹೂಡಿದ ಭೂಮಯರಥವನ್ನೇರಿ, ಹೆದೆ ಏರಿಸಿದ ಶಾಙ್ಗಧನುಸ್ಸನ್ನೂ ಹರಿತವಾದ ಬಾಣಗಳನ್ನೂ ಧರಿಸಿ, ವೇಗದಿಂದ, ರಾಜಶ್ರೇಷ್ಠರಿಂದ ಸಹಿತನಾದ ಕ್ರೂರ ಜರಾಸಂಧನ ಮೇಲೇರಿ ಹೋದನು.

ರಾಮಃ ಪ್ರಗೃಹ್ಯ ಮುಸಲಂ ಸಹಲಂ ಚ ಯಾನ-
ಮಾಸ್ಥಾಯ ಸಾಯಕಶರಾಸನತೂಣಯುಕ್ತಃ ।
ಸೈನ್ಯಂ ಜರಾಸುತಸುರಕ್ಷಿತಮಭ್ಯಧಾವದ್
ಹರ್ಷಾನ್ನದನ್ನುರುಬಲೋಽರಿಬಲೈರಧೃಷ್ಯಃ ॥ ೨೩ ॥

**ಅರ್ಥ** :- **ಉರುಬಲಃ** ಮಹಾಬಲಶಾಲಿಯಾದ, **ಅರಿಬಲೈರಧೃಷ್ಯಃ** ಶತ್ರುಸೈನ್ಯಗಳಿಗೆ ಸಹಿಸಲಸಾಧ್ಯನಾದ, **ರಾಮಃ** ಬಲರಾಮನು, **ಮುಸಲಂ** ಮುಸಲಾಯುಧ (ಒನಕೆ) ವನ್ನು ಧರಿಸಿ, **ಸಹಲಂ** ಹಲಾಯುಧ (ನೇಗಿಲು) ದಿಂದ ಕೂಡಿದ, **ಯಾನಂ** ರಥವನ್ನು, **ಆಸ್ಥಾಯ** ಏರಿ, **ಸಾಯಕಶರಾಸನತೂಣಯುಕ್ತಃ** = **ಸಾಯಕ** ಬಾಣ, **ಶರಾಸನ** ಬಿಲ್ಲು, **ತೂಣ** ಬತ್ತಳಿಕೆ ಇವುಗಳಿಂದ, **ಯುಕ್ತಃ** ಕೂಡಿದವನಾಗಿ, **ಹರ್ಷಾತ್** ಸಂತೋಷದಿಂದ, **ಉನ್ನದನ್** ಸಿಂಹನಾದಗೈಯುತ್ತಾ, **ಜರಾಸುತಸುರಕ್ಷಿತಂ** ಜರಾಸಂಧನಿಂದ ಚೆನ್ನಾಗಿ ರಕ್ಷಿಸಲ್ಪಟ್ಟ **ಸೈನ್ಯಂ ಅಭ್ಯಧಾವತ್** ಸೈನ್ಯದ ಮೇಲೇರಿ ಹೋದನು.

ಉದ್ವೀಕ್ಷ್ಯ ಕೃಷ್ಣಮಭಿಯಾಂತಮನಂತಶಕ್ತಿಂ
ರಾಜೇಂದ್ರಬೃಂದಸಹಿತೋ ಮಗಧಾಧಿರಾಜಃ ।
ಉದ್ವೇಲಸಾಗರವದಾಶ್ವಭಿಯಾಯ ಕೋಪಾತ್
ನಾನಾವಿಧಾಯುಧವರ್ರೈರಭಿವರ್ಷಮಾಣಃ ॥ ೨೪ ॥

**ಅರ್ಥ** :- **ರಾಜೇಂದ್ರಬೃಂದಸಹಿತಃ** = **ರಾಜೇಂದ್ರ** ರಾಜಶ್ರೇಷ್ಠರ, **ಬೃಂದ** ಸಮೂಹದಿಂದ, **ಸಹಿತಃ** ಕೂಡಿದ, **ಅನಂತಶಕ್ತಿಂ** ಅಮಿತಶಕ್ತಿಯುಳ್ಳ, **ಅಭಿಯಾಂತಂ** ಎದುರಾದ, **ಕೃಷ್ಣಂ** ಕೃಷ್ಣನನ್ನು, **ಉದ್ವೀಕ್ಷ್ಯ** ನೋಡಿ, **ಕೋಪಾತ್** ಕೋಪದಿಂದ, **ನಾನಾವಿಧಾಯುಧವರ್ರೈಃ** ನಾನಾವಿಧವಾದ ಶ್ರೇಷ್ಠ ಆಯುಧಗಳಿಂದ, **ಅಭಿವರ್ಷಮಾಣಃ** ಮಳೆಗರೆಯುವವನಾಗಿ, **ಆಶು** ಕೂಡಲೇ, **ಉದ್ವೇಲಸಾಗರವತ್** = **ಉದ್ವೇಲ** ಎಲ್ಲೆಯನ್ನು ಮೀರಿದ, **ಸಾಗರವತ್** ಸಮುದ್ರದಂತೆ, **ಅಭಿಯಾಯ** ಮೇಲೇರಿ ಹೋದನು.

**ತಾತ್ಪರ್ಯ** :- ಜರಾಸಂಧ ಶ್ರೀಕೃಷ್ಣನನ್ನೆದುರಿಸಲು ದೊಡ್ಡ ರಾಜರ ಗುಂಪಿನೊಂದಿಗೇ ಬಂದಿದ್ದ. ಅನಂತಶಕ್ತಿಯುಳ್ಳ ಶ್ರೀಕೃಷ್ಣನನ್ನು ಕಂಡು ಕುಪಿತನಾದ. ಕೂಡಲೇ ಎಲ್ಲೆ ಮೀರಿದ ಸಾಗರದಂತೆ ಆವನನ್ನು ಸುತ್ತುವರಿದು ನಾನಾವಿಧ ಶ್ರೇಷ್ಠ ಆಯುಧಗಳ ಮಳೆ ಸುರಿಸಿದ.

ತಂ ವೈ ಚುಕೋಪಯಿಷುರಗ್ರತ ಉಗ್ರಸೇನಂ
ಕೃಷ್ಣೋ ನಿಧಾಯ ಸಮಗಾತ್ ಸ್ವಯಮಸ್ಯ ಪಶ್ಚಾತ್ ।
ದೃಷ್ಟ್ವಾಽಗ್ರತೋ ಮಗಧರಾಟ್ ಸ್ಥಿತಮುಗ್ರಸೇನಂ
ಕೋಪಾಚ್ಚಲತ್ತನುರಿದಂ ವಚನಂ ಬಭಾಷೇ ॥ ೨೫ ॥

**ಅರ್ಥ** :- ತಂ ಆ ಜರಾಸಂಧನನ್ನು, **ಚುಕೋಪಯಿಷುಃ** ಕೋಪಗೊಳಿಸಲಿಚ್ಛಿಸಿದವನಾಗಿ, **ಕೃಷ್ಣಃ** ಶ್ರೀಕೃಷ್ಣನು, **ಉಗ್ರಸೇನಂ** ಉಗ್ರಸೇನನನ್ನು, **ಅಗ್ರತಃ** ಮುಂದುಗಡೆ, **ನಿಧಾಯ** ಇಟ್ಟುಕೊಂಡು, **ಸ್ವಯಂ** ತಾನು, **ಅಸ್ಯ** ಈ ಉಗ್ರಸೇನನ, **ಪಶ್ಚಾತ್** ಹಿಂದಿನಿಂದ, **ಸಮಗಾತ್** ಹೋದನು, **ಮಗಧರಾಟ್** ಜರಾಸಂಧನು, **ಅಗ್ರತಃ** (ತನ್ನ) ಎದುರಿನಲ್ಲಿ, **ಉಗ್ರಸೇನಂ** ಉಗ್ರಸೇನನನ್ನು, **ದೃಷ್ಟ್ವಾ** ನೋಡಿ, **ಕೋಪಾತ್** ಕೋಪದಿಂದ, **ಚಲತ್ತನುಃ** ಕಂಪಿಸುವ ಶರೀರವುಳ್ಳವನಾಗಿ, **ಇದಂ** ಈ ಮುಂದೆ ಹೇಳುವ, **ವಚನಂ** ಮಾತನ್ನು **ಬಭಾಷೇ** ನುಡಿದನು.

**ತಾತ್ಪರ್ಯ** :- ಯುದ್ಧದಲ್ಲಿ ಜರಾಸಂಧನನ್ನು ಕೋಪಗೊಳಿಸಬಯಸಿ ಶ್ರೀಕೃಷ್ಣ ಉಗ್ರಸೇನನನ್ನು ಮುಂದೆ ಮಾಡಿ ತಾನು ಅವನ ಹಿಂದೆ ಬಂದ. ಜರಾಸಂಧ ತನ್ನೆದುರಿನಲ್ಲಿ ಉಗ್ರಸೇನನನ್ನು ನೋಡಿ ಕುಪಿತನಾದ. ಮೈಯೆಲ್ಲ ನಡುಗುತ್ತಾ ಈ ಮಾತನ್ನಾಡಿದ.

**ಪಾಪಾಪಯಾಹಿ ಪುರತೋ ಮಮ ರಾಜ್ಯಕಾಮ**
**ನಿರ್ಲಜ್ಜ ಪುತ್ರವಧಕಾರಣ ಶತ್ರುಪಕ್ಷ ।**
**ತ್ವಂ ಜೀರ್ಣಬಸ್ತಸದೃಶೋ ನ ಮಯೇಹ ವಧ್ಯಃ**
**ಸಿಂಹೋ ಹಿ ಸಿಂಹಮಭಿಯಾತಿ ನ ವೈ ಸೃಗಾಲಂ ॥ ೨೬ ॥**

**ಅರ್ಥ** :- **ಪಾಪ** ಪಾಪಿಯೇ, **ಮಮ** ನನ್ನ **ಪುರತಃ** ಎದುರಿನಿಂದ, **ಅಪಯಾಹಿ** ತೊಲಗು, **ಪುತ್ರವಧಕಾರಣ** ಮಗನ ಸಾವಿಗೆ ಕಾರಣನಾದವನೇ!, **ರಾಜ್ಯಕಾಮ** ರಾಜ್ಯಕಾಮುಕನೇ, **ನಿರ್ಲಜ್ಜ** ನಾಚಿಕೆಯಿಲ್ಲದವನೇ, **ಶತ್ರುಪಕ್ಷ** ಶತ್ರುವಿನಪಕ್ಷದಲ್ಲಿರುವವನೇ, **ಜೀರ್ಣಬಸ್ತಸದೃಶಃ** ಮುದಿ ಆಡಿನಂತಿರುವ, **ತ್ವಂ** ನೀನು, **ಇಹ** ಈ ಯುದ್ಧದಲ್ಲಿ **ಮಯಾ** ನನ್ನಿಂದ, **ವಧ್ಯಃ ನ** ವಧಾರ್ಹನಲ್ಲ, **ಸಿಂಹಃ** ಸಿಂಹವು, **ಸಿಂಹಂ ಅಭಿಯಾತಿ** ಸಿಂಹದ ಮೇಲೇರಿ ಹೋಗುತ್ತದೆ, **ನ ವೈ ಸೃಗಾಲಂ** ನರಿಯ ಮೇಲೇರಿ ಅಲ್ಲ **ಹಿ** ನಿಶ್ಚಯ.

**ತಾತ್ಪರ್ಯ** :- ಛೀ, ಪಾಪಿ! ನನ್ನೆದುರಿನಿಂದ ತೊಲಗಾಚೆ. ಮಗನ ಕೊಲೆ ಮಾಡಿಸಿ ರಾಜ್ಯವಾಳಲು ಬಯಸಿದವ ನೀನು. ನಾಚಿಕೆ ಇಲ್ಲದವ. ಶತ್ರುಪಕ್ಷದಲ್ಲಿರುವವ, ಮುದಿ ಆಡಿನಂತಿರುವ ನೀನು ನನ್ನಿಂದ ವಧೆಗೆ ಅರ್ಹನಲ್ಲ, ಏಕೆಂದರೆ ಸಿಂಹವು ಸಿಂಹದ ಮೇಲೇರಿ ಹೋಗುತ್ತದೆಯೇ ವಿನಃ ನರಿಯ ಮೇಲಲ್ಲ.

**ಆಕ್ಷಿಪ್ತ ಇತ್ಥಮಮುನಾಽಥ ಸ ಭೋಜರಾಜಃ**
**ತೂಣಾತ್ ಪ್ರಗೃಹ್ಯ ನಿಶಿತಂ ಶರಮಾಶು ತೇನ ।**
**ಛಿತ್ವಾ ಜರಾಸುತಧನುರ್ಬಲವಾನ್ ನನಾದ**
**ವಿವ್ಯಾಧ ಸಾಯಕಗಣೈಶ್ಚ ಪುನಸ್ತಮುಗ್ರೈಃ ॥ ೨೭ ॥**

**ಅರ್ಥ** :- **ಇತ್ಥಂ** ಈ ರೀತಿ, **ಅಮುನಾ** ಈ ಜರಾಸಂಧನಿಂದ, **ಆಕ್ಷಿಪ್ತಃ** ಆಕ್ಷೇಪಿಸಲ್ಪಟ್ಟ **ಬಲವಾನ್** ಬಲಿಷ್ಠನಾದ, **ಸಃ** ಆ, **ಭೋಜರಾಜಃ**

ಉಗ್ರಸೇನನು, **ಅಥ** ಅನಂತರ, **ತೂಣಾತ್** ಬತ್ತಳಿಕೆಯಿಂದ, **ನಿಶಿತಂ** ತೀಕ್ಷ್ಣವಾದ, **ಶರಂ** ಬಾಣವನ್ನು, **ಪ್ರಗೃಹ್ಯ** ತೆಗೆದು, **ತೇನ** ಅದರಿಂದ, **ಆಶು** ಬೇಗನೆ, **ಜರಾಸುತಧನುಃ** ಜರಾಸಂಧನ ಬಿಲ್ಲನ್ನು, **ಛಿತ್ವಾ** ಕತ್ತರಿಸಿ, **ನನಾದ** ಸಿಂಹನಾದಗೈದನು, **ಉಗ್ರೈಃ** ಭಯಂಕರವಾದ, **ಸಾಯಕಗಣೈಃ = ಸಾಯಕ** ಬಾಣಗಳ, **ಗಣೈಃ** ಸಮೂಹಗಳಿಂದ, **ಪುನಃ** ಮತ್ತೆ, **ತಂ** ಆ ಜರಾಸಂಧನನ್ನು **ವಿವ್ಯಾಧ ಚ** ಹೊಡೆದನೂ ಕೂಡ.

**ತಾತ್ಪರ್ಯ** :- ಜರಾಸಂಧ ಈ ರೀತಿ ಆಕ್ಷೇಪಿಸಿದಾಗ ಬಲಶಾಲಿಯಾದ ಭೋಜಪತಿ ಉಗ್ರಸೇನ ತನ್ನ ಬತ್ತಳಿಕೆಯಿಂದ ತೀಕ್ಷ್ಣವಾದ ಬಾಣವೊಂದನ್ನೆತ್ತಿ ಕೊಂಡ. ಅದರಿಂದ ಜರಾಸಂಧನ ಬಿಲ್ಲನ್ನು ಕತ್ತರಿಸಿ ಸಿಂಹನಾದಗೈದ. ತೀಕ್ಷ್ಣವಾದ ಬಾಣಸಮೂಹಗಳಿಂದ ಅವನನ್ನು ಮತ್ತೆ ಹೊಡೆದ.

**ಅನ್ಯಚ್ಛರಾಸನವರಂ ಪ್ರತಿಗೃಹ್ಯ ಕೋಪಾತ್**
**ಸಂರಕ್ತನೇತ್ರಮಭಿಯಾತಮುದೀಕ್ಷ್ಯ ಕೃಷ್ಣಃ ।**
**ಭೋಜಾಧಿರಾಜವಧಕಾಂಕ್ಷಿಣಮುಗ್ರವೇಗಂ**
**ಬಾರ್ಹದ್ರಥಂ ಪ್ರತಿ ಯಯೌ ಪರಮೋ ರಥೇನ ॥ ೨೮ ॥**

**ಅರ್ಥ** :- **ಉಗ್ರವೇಗಂ** = **ಉಗ್ರ** ಭಯಂಕರವಾದ, **ವೇಗಂ** ವೇಗವುಳ್ಳ, **ಭೋಜಾಧಿರಾಜವಧಕಾಂಕ್ಷಿಣಂ** = **ಭೋಜಾಧಿರಾಜ** ಉಗ್ರಸೇನನ, **ವಧಕಾಂಕ್ಷಿಣಂ** ವಧೆಯನ್ನು ಬಯಸುವ, **ಕೋಪಾತ್** ಕೋಪದಿಂದ, **ಸಂರಕ್ತನೇತ್ರಂ** = **ಸಂರಕ್ತ** ಚೆನ್ನಾಗಿ ಕೆಂಪಾದ, **ನೇತ್ರಂ** ಕಣ್ಣುಗಳುಳ್ಳ, **ಅನ್ಯತ್** ಬೇರೆ, **ಶರಾಸನವರಂ** ಶ್ರೇಷ್ಠವಾದ ಬಿಲ್ಲನ್ನು, **ಪ್ರತಿಗೃಹ್ಯ** ಎತ್ತಿಕೊಂಡು, **ಅಭಿಯಾತಂ** ಉಗ್ರಸೇನನಿಗೆದುರಾಗಿ (ಜರಾಸಂಧ) ಹೋದುದನ್ನು, **ಉದೀಕ್ಷ್ಯ** ನೋಡಿ, **ಪರಮಃ** ಸರ್ವೋತ್ತಮನಾದ, **ಕೃಷ್ಣಃ** ಶ್ರೀಕೃಷ್ಣನು, **ರಥೇನ** ರಥದಿಂದ **ಬಾರ್ಹದ್ರಥಂ ಪ್ರತಿಯಯೌ** ಜರಾಸಂಧನಿಗೆದುರಾಗಿ ಹೋದನು.

**ತಾತ್ಪರ್ಯ** :- ಆಗ ಉಗ್ರವೇಗಿ ಜರಾಸಂಧ ಉಗ್ರಸೇನನ ವಧಾಪೇಕ್ಷಿ ಯಾಗಿ, ಕೋಪದಿಂದ ಕಣ್ಣು ಕೆಂಪಗೆ ಮಾಡಿ, ಬೇರೆ ಶ್ರೇಷ್ಠವಾದ ಬಿಲ್ಲನ್ನೆತ್ತಿ ಕೊಂಡು ಉಗ್ರಸೇನನಿಗೆದುರಾಗಿ ಬಂದ. ಅದನ್ನು ವೀಕ್ಷಿಸಿದ ಸರ್ವೋತ್ತಮ ಶ್ರೀಕೃಷ್ಣ ಅವನಿಗೆದುರಾಗಿ ರಥದಲ್ಲಿ ಬಂದ.

ಆಯಾಂತಮೀಕ್ಷ್ಯ ಭಗವಂತಮನಂತವೀರ್ಯಂ
ಚೇದೀಶ ಪೌಂಡ್ರಮುಖರಾಜಗಣೈಃ ಸಮೇತಃ -
ನಾನಾವಿಧಾಸ್ತ್ರವರಶಸ್ತ್ರಗಣೈರ್ವವರ್ಷ
ಮೇರುಂಯಥಾ ಘನ ಉದೀರ್ಣರವೋ ಜಲೌಘೈಃ ॥ ೨೯ ॥

**ಅರ್ಥ** :- **ಆಯಾಂತಂ** ಬರುತ್ತಿರುವ, **ಅನಂತವೀರ್ಯಂ** ಅನಂತ ಶಕ್ತಿವುಳ್ಳ, **ಭಗವಂತಂ** ಭಗವಂತನನ್ನು **ವೀಕ್ಷ್ಯ** ನೋಡಿ, **ಚೇದೀಶ-ಪೌಂಡ್ರ-ಮುಖರಾಜಗಣೈಃ** = ಚೇದೀಶ ಶಿಶುಪಾಲನು, **ಪೌಂಡ್ರ** ಪೌಂಡ್ರಕನು, **ಮುಖ** ಮುಂತಾದ, **ರಾಜಗಣೈಃ** ರಾಜರ ಸಮೂಹಗಳಿಂದ, **ಸಮೇತಃ** ಕೂಡಿದ ಜರಾಸಂಧನು, **ನಾನಾವಿಧಾಸ್ತ್ರವರಶಸ್ತ್ರಗಣೈಃ** = ನಾನಾವಿಧವಾದ ಮಹಾಅಸ್ತ್ರ ಶಸ್ತ್ರಗಳ ಸಮೂಹಗಳಿಂದ, **ವವರ್ಷ** ಮಳೆಗರೆದನು, **ಉದೀರ್ಣರವಃ** ಉಚ್ಚ ಧ್ವನಿಯುಳ್ಳ, **ಘನಃ** ಮೋಡವು, **ಜಲೌಘೈಃ** ಜಲಸಮೂಹಗಳಿಂದ, **ಮೇರುಂ ಯಥಾ** ಮೇರುಪರ್ವತವನ್ನು ಹೇಗೋ ಹಾಗೆ.

**ತಾತ್ಪರ್ಯ** :- ಅನಂತಶಕ್ತಿಯುಳ್ಳ ಭಗವಂತ ಶ್ರೀಕೃಷ್ಣ ಬರುವುದನ್ನು ನೋಡಿದ ಜರಾಸಂಧ. ಶಿಶುಪಾಲ–ಪೌಂಡ್ರಕ ಮುಂತಾದ ರಾಜರ ಸಮೂಹಗಳಿಂದ ಕೂಡಿದ ಅವನು ನಾನಾವಿಧ ಮಹಾ ಅಸ್ತ್ರಶಸ್ತ್ರಗಳನ್ನು ಮಳೆಗರೆದ. ಇದು ಮೋಡ ದೊಡ್ಡ ಧ್ವನಿಯಿಂದ ಮೇರುಪರ್ವತದ ಮೇಲೆ ಜಲಧಾರೆಗಳನ್ನು ಸುರಿಸಿದಂತಿತ್ತು.

ಶಸ್ತ್ರಾಸ್ತ್ರವೃಷ್ಟಿಮಭಿತೋ ಭಗವಾನ್ ವಿವೃಶ್ಚ್ಯ
ಶಾರ್ಙ್ಗೋತ್ಥಸಾಯಕಗಣೈರ್ವಿರಥಾಶ್ವಸೂತಮ್ ।
ಚಕ್ರೇ ನಿರಾಯುಧಮಸೌ ಮಗಧೇಂದ್ರಮಾಶು
ಭಿನ್ನಾತಪತ್ರವರಕೇತುಮಚಿಂತ್ಯಶಕ್ತಿಃ ॥ ೩೦ ॥

**ಅರ್ಥ** :- **ಅಚಿತ್ಯಶಕ್ತಿಃ** ಅಚಿಂತ್ಯಶಕ್ತಿಯುಳ್ಳ, **ಭಗವಾನ್** ಶ್ರೀಕೃಷ್ಣನು, **ಶಸ್ತ್ರಾಸ್ತ್ರವೃಷ್ಟಿಂ** ಶಸ್ತ್ರಾಸ್ತ್ರಗಳ ಮಳೆಯನ್ನು, **ಶಾರ್ಙ್ಗೋತ್ಥಸಾಯಕಗಣೈಃ** = **ಶಾರ್ಙ್ಗೋತ್ಥ** ಶಾರ್ಙ್ಗಧನುಸ್ಸಿನಿಂದ ಹೊರಹೊಮ್ಮಿದ, **ಸಾಯಕಗಣೈಃ** ಬಾಣ ಸಮೂಹಗಳಿಂದ, **ಅಭಿತಃ** ಎಲ್ಲೆಡೆ, **ವಿವೃಶ್ಚ್ಯ** ಛೇದಿಸಿ, **ಆಶು** ಬೇಗನೆ, **ಮಗಧೇಂದ್ರಂ** ಜರಾಸಂಧನನ್ನು, **ವಿರಥಾಶ್ವಸೂತಂ** ರಥ ಕುದುರೆ ಸಾರಥಿ

ರಹಿತನನ್ನಾಗಿ, **ಛಿನ್ನಾತಪತ್ರವರಕೇತುಂ** = ಛಿನ್ನ ಕತ್ತರಿಸಲ್ಪಟ್ಟ ಆತಪತ್ರವರ ಕೇತುಂ ಛತ್ರ-ಧ್ವಜಗಳುಳ್ಳವನನ್ನಾಗಿ, **ನಿರಾಯುಧಂ** ಆಯುಧರಹಿತನನ್ನಾಗಿ, **ಅಸೌ** ಈ ಶ್ರೀಕೃಷ್ಣನು, **ಚಕ್ರೇ** ಮಾಡಿದನು.

**ತಾತ್ಪರ್ಯ :-** ಅಚಿಂತ್ಯ ಶಕ್ತಿಯ ಶ್ರೀಕೃಷ್ಣ ಜರಾಸಂಧನ ಶಸ್ತ್ರಾಸ್ತ್ರಗಳ ಮಳೆಯನ್ನು ಶಾರ್ಙ್ಗಧನುಸ್ಸಿನಿಂದ ಹೊರಟ ಬಾಣಸಮೂಹಗಳಿಂದ ಎಲ್ಲೆಡೆ ಕತ್ತರಿಸಿ, ಅವನನ್ನು ರಥ-ಕುದುರೆ-ಸಾರಥಿಗಳಿಂದಲೂ, ಆಯುಧಗಳಿಂದಲೂ ರಹಿತನನ್ನಾಗಿಸಿದ. ಅವನ ಛತ್ರಧ್ವಜಗಳನ್ನೂ ಛೇದಿಸಿದ.

**ನೈನಂ ಜಘಾನ ಭಗವಾನ್ ಸುಶಕಂ ಚ ಭೀಮೇ**
**ಭಕ್ತಿಂ ನಿಜಾಂ ಪ್ರಥಯಿತುಂ ಯಶ ಉಚ್ಚಧರ್ಮಂ ।**
**ಚೇದೀಶಪೌಂಡ್ರಕಸಕೀಚಕಮದ್ರರಾಜ-**
**ಸಾಲ್ವೈಕಲವ್ಯಕಮುಖಾನ್ ವಿರಥಾಂಶ್ಚಕಾರ ॥ ೩೧ ॥**

**ಅರ್ಥ :-** **ಭಗವಾನ್** ಶ್ರೀಕೃಷ್ಣನು, **ಭೀಮೇ** ಭೀಮಸೇನನಲ್ಲಿರುವ, **ನಿಜಾಂ ಭಕ್ತಿಂ** ತನ್ನ (ಶ್ರೀಕೃಷ್ಣನ) ಕುರಿತಾದ ಭಕ್ತಿಯನ್ನು, **ಯಶಃ** ಕೀರ್ತಿಯನ್ನು, **ಉಚ್ಚಧರ್ಮಂ ಚ** ಉನ್ನತವಾದ ಭಾಗವತಧರ್ಮವನ್ನೂ, **ಪ್ರಥಯಿತುಂ** ಪ್ರಸಿದ್ಧಿಗೊಳಿಸಲು, **ಏನಂ** ಈ ಜರಾಸಂಧನನ್ನು **ಸುಶಕಂ ಚ ಹಂತುಂ** ಕೊಲ್ಲುವುದು ಸುಲಭಸಾಧ್ಯವಾಗಿದ್ದರೂ, **ನ ಜಘಾನ** ಕೊಲ್ಲಲಿಲ್ಲ, **ಚೇದೀಶ ಪೌಂಡ್ರಕಸಕೀಚಕಮದ್ರರಾಜಸಾಲ್ವೈಕಲವ್ಯಕಮುಖಾನ್** = **ಚೇದೀಶ** ಶಿಶುಪಾಲ, **ಪೌಂಡ್ರಕ** ಪೌಂಡ್ರಕ ವಾಸುದೇವ, **ಸಕೀಚಕ** ಕೀಚಕನಿಂದ ಕೂಡಿದ, **ಮದ್ರರಾಜ** ಶಲ್ಯ, **ಸಾಲ್ವ** ಬ್ರಹ್ಮದತ್ತನ ಮಗನಾದ ಸಾಲ್ವ, **ಏಕಲವ್ಯಕ ಮುಖಾನ್** ಕುತ್ಸಿತನಾದ ಏಕಲವ್ಯ ಮುಂತಾದವರನ್ನು, **ವಿರಥಾನ್ ಚಕಾರ** ರಥಹೀನರನ್ನಾಗಿಸಿದ.

**ತಾತ್ಪರ್ಯ :-** ಶ್ರೀಕೃಷ್ಣ ಜರಾಸಂಧನನ್ನು ಕೊಲ್ಲುವದು ಸುಲಭಸಾಧ್ಯ ವಾಗಿದ್ದರೂ ಕೊಲ್ಲಲಿಲ್ಲ. ಅದಕ್ಕೆ ಮುಖ್ಯ ಕಾರಣ ಅವನನ್ನು ಭೀಮಸೇನನಿಂದ ಕೊಲ್ಲಿಸಿ ಭೀಮಸೇನನಿಗೆ ತನ್ನಲ್ಲಿರುವ ಭಕ್ತಿಯನ್ನೂ, ಯಶಸ್ಸನ್ನೂ ಉನ್ನತ ಭಾಗವತ ಧರ್ಮವನ್ನೂ ಜಗಜ್ಜಾಹೀರುಗೊಳಿಸುವುದು. ಶ್ರೀಕೃಷ್ಣ ಯುದ್ಧದಲ್ಲಿ ತನ್ನನ್ನು ಎದುರಿಸಲು ಬಂದ ಶಿಶುಪಾಲ-ಪೌಂಡ್ರಕವಾಸುದೇವ, ಕೀಚಕ, ಮದ್ರದೇಶದ ಅರಸನಾದ ಶಲ್ಯ, ಸಾಲ್ವ ಏಕಲವ್ಯ ಮುಂತಾದವರನ್ನು ರಥರಹಿತರನ್ನಾಗಿ ಮಾಡಿದ.

ಯೇ ಚಾಪಿ ಹಂಸಡಿಭಿಕದ್ರುಮರುಗ್ಮಿಮುಖ್ಯಾಃ
ಬಾಹ್ಲೀಕ ಭೌಮಸುತಮೈಂದ ಪುರಸ್ಸರಾಶ್ಚ ।
ಸರ್ವೇ ಪ್ರದುದ್ರವುರಜಸ್ಯ ಶರೈರ್ವಿಭಿನ್ನಾ
ಅನ್ಯೇ ಚ ಭೂಮಿಪತಯೋ ಯ ಇಹಾಽಽಸುರುರ್ವ್ಯಾಮ್ ॥೩೨॥

**ಅರ್ಥ** :- **ಹಂಸಡಿಭಿಕದ್ರುಮರುಗ್ಮಿಮುಖ್ಯಾಃ** = ಹಂಸಡಿಭಿಕ (ಸಾಲ್ವ ಬ್ರಹ್ಮದತ್ತನ ಮಕ್ಕಳಾದ) ಹಂಸ ಡಿಭಿಕರು, ದ್ರುಮ ದ್ರುಮ ಎಂಬ ದೈತ್ಯ, **ರುಗ್ಮಿಮುಖ್ಯಾಃ** ರುಗ್ಮಿ ಮುಂತಾದವರು, **ಬಾಹ್ಲೀಕಭೌಮಸುತ ಮೈಂದಪುರಸ್ಸರಾಶ್ಚ** = **ಬಾಹ್ಲೀಕ** ಬಾಹ್ಲೀಕ, **ಭೌಮಸುತ** ನರಕಾಸುರನ ಮಗನಾದ ಭಗದತ್ತ, **ಮೈಂದಪುರಸ್ಸರಾಶ್ಚ** ಮೈಂದ ವಿವಿದ ಮುಂತಾದವರೂ, **ಯೇ ಚಾಪಿ ಇಹ ಆಸುಃ** ಯಾರು ಈ ಭೂಮಿಯಲ್ಲಿ ಜನಿಸಿದ್ದರೋ ಅಂತಹ ಜರಾಸಂಧನ ಅನುಯಾಯಿಗಳು, **ಅನ್ಯೇ ಚ** ಹಿಂದೆ ಹೇಳಿದವರನ್ನು ಬಿಟ್ಟು ಬೇರೆಯೇ, **ಭೂಮಿಪತಯಃ** ಯಾವ ರಾಜರು, **ಇಹ** ಭೂಮಿಯಲ್ಲಿ, **ಆಸುಃ** ಇದ್ದರೋ, **ತೇ ಸರ್ವೇ** ಅವರೆಲ್ಲರೂ, **ಅಜಸ್ಯ** ಶ್ರೀಕೃಷ್ಣನ, **ಶರೈಃ** ಬಾಣಗಳಿಂದ, **ವಿಭಿನ್ನಾಃ ಸಂತಃ** ಝುರ್ಝುರಿತರಾಗಿ (ಏಟು ತಿಂದು) **ಪ್ರದುದ್ರುವುಃ** ಪಲಾಯನ ಮಾಡಿದರು.

**ತಾತ್ಪರ್ಯ** :- ಸಾಲ್ವಬ್ರಹ್ಮದತ್ತನ ಮಕ್ಕಳಾದ ಹಂಸಡಿಭಿಕರು, ದ್ರುಮ ಎಂಬ ಹೆಸರಿನ ದೈತ್ಯ, ರುಗ್ಮಿ ಮುಂತಾದವರೂ, ಬಾಹ್ಲೀಕ-ಭಗದತ್ತ-ಮೈಂದವಿವಿದ ಮುಂತಾದವರೂ, ಆಗ ಭೂಮಿಯಲ್ಲಿ ಬೇರೆ ರಾಜರೆಲ್ಲರೂ ಶ್ರೀಕೃಷ್ಣನ ಬಾಣದ ಏಟಿನಿಂದ ಝುರ್ಝುರಿತರಾಗಿ ಕಾಲಿಗೆ ಬುದ್ಧಿ ಹೇಳಿದರು.

**ವಿಶೇಷ ವಿಷಯ** :ಹಂಸ-ಡಿಭಿಕ ಮುಂತಾದವರು ಅಸುರರು, ಬಾಹ್ಲೀಕ ಮುಂತಾದವರು ಅಸುರಾವಿಷ್ಟರು ಆದ್ದರಿಂದ ಪ್ರತ್ಯೇಕ ಪ್ರತ್ಯೇಕವಾಗಿ ನಿರ್ದೇಶಿಸಲಾಗಿದೆ. 'ಜನಾರ್ದನೀಯ'ದಲ್ಲಿ 'ಡಿಭಿಕ' ಎಂಬ ಪಾಠವನ್ನು ಸ್ವೀಕರಿಸಲಾಗಿದ್ದರೂ 'ಡಿಭಕ' ಎಂಬುದಾಗಿ ಕೆಲವರು ಪಾಠವನ್ನು ಸ್ವೀಕರಿಸುತ್ತಾರೆ. ಅದಕ್ಕೆ ಆಧಾರ ಹರಿವಂಶದ ವಚನ. 'ಹಂಸೋ ಜ್ಯೇಷ್ಠೋ ನೃಪಸುತೋ ಡಿಭಕೋಽನಂತರೋಽಭವತ್' (ಹರಿವಂಶ ೧೮) ಎಂದು.

ಭಿನ್ನಾಯುಧಧ್ವಜಪತಾಕರಥಾಶ್ವಸೂತ-
ವರ್ಮಾಣ ಉಗ್ರಶರತಾಡಿತಭಿನ್ನಗಾತ್ರಾಃ ।
ಪ್ರಸ್ತಾಂಬರಾಭರಣಮೂರ್ಧಜಮಾಲ್ಯಹೀನಾಃ
ರಕ್ತಂ ವಮಂತ ಉರು ದುದ್ರುವುರಾಶು ಭೀತಾಃ ॥ ೩೩ ॥

**ಅರ್ಥ :- ಭಿನ್ನಾಯುಧಧ್ವಜಪತಾಕರಥಾಶ್ವಸೂತವರ್ಮಾಣಃ = ಭಿನ್ನ** ಕತ್ತರಿಸಲ್ಪಟ್ಟ **ಆಯುಧ** ಆಯುಧಗಳು, **ಧ್ವಜ** ಧ್ವಜಗಳು, **ಪತಾಕ** ಪತಾಕೆಗಳು, **ರಥ** ರಥಗಳು, **ಅಶ್ವ** ಕುದುರೆಗಳು, **ಸೂತ** ಸಾರಥಿಗಳು, **ವರ್ಮಾಣಃ** ಕವಚಗಳು ಇವುಗಳುಳ್ಳವರಾಗಿ, **ಉಗ್ರಶರತಾಡಿತಭಿನ್ನಗಾತ್ರಾಃ = ಉಗ್ರ** ಭಯಂಕರವಾದ, **ಶರ** ಬಾಣಗಳ, **ತಾಡಿತ** ಹೊಡೆತದಿಂದ, **ಭಿನ್ನ** ಘಾಸಿಗೊಂಡ, **ಗಾತ್ರಾಃ** ಶರಿರವುಳ್ಳವರಾಗಿ, **ಪ್ರಸ್ತಾಂಬರಾಭರಣಮೂರ್ಧಜಮಾಲ್ಯಹೀನಾಃ = ಪ್ರಸ್ತ** ಜಾರಿದ, **ಅಂಬರ** ವಸ್ತ್ರಗಳು, **ಆಭರಣ** ಆಭರಣಗಳು, **ಮೂರ್ಧಜ** ಕೂದಲು, **ಮಾಲ್ಯ** ಮಾಲೆಗಳ ಸಮೂಹಗಳಿಂದ, **ಹೀನಾಃ** ರಹಿತರಾಗಿ, **ಉರು** ಬಹಳ, **ರಕ್ತಂ** ರಕ್ತವನ್ನು **ವಮಂತಃ** ಕಾರುತ್ತಾ, **ಭೀತಾಃ** ಭೀತರಾಗಿ, **ಆಶು** ಬೇಗನೆ, **ದುದ್ರುವುಃ** ಓಡಿಹೋದರು.

**ತಾತ್ಪರ್ಯ :-** ಆ ರಾಜರುಗಳ ಆಯುಧ ಧ್ವಜ ಪತಾಕೆಗಳು ರಥ ಕುದುರೆ ಸಾರಥಿಗಳು ಕವಚಗಳು ಭೂಮಿಯಲ್ಲಿ ಕಡಿದು ಬಿದ್ದವು. ಅವರ ಶರೀರ ಭಯಂಕರ ಬಾಣಗಳ ಹೊಡೆತದಿಂದ ಘಾಸಿಗೊಂಡಿತು. ವಸ್ತ್ರಾಭರಣಗಳು ಕಳಚಿದವು. ಕೂದಲು ಬಿಚ್ಚಿದವು. ಮಾಲೆಗಳು ಬಿದ್ದವು. ಅವರು ಬಹಳ ರಕ್ತಕಾರುತ್ತಾ ಹೆದರಿಕೆಯಿಂದ ಬೇಗ ಓಡಿ ಹೋದರು.

ಶೋಚ್ಯಾಂ ದಶಾಮುಪಗತೇಷು ನೃಪೇಷು ಸರ್ವೇ-
ಷ್ವಸ್ತಾಯುಧೇಷು ಹರಿಣಾ ಯುಧಿ ವಿದ್ರವತ್ಸು ।
ನಾನಾಯುಧಾಢ್ಯಮಪರಂ ರಥಮುಗ್ರವೀರ್ಯ
ಆಸ್ಥಾಯ ಮಾಗಧಪತಿಃ ಪ್ರಸಸಾರ ರಾಮಮ್ ॥ ೩೪ ॥

**ಅರ್ಥ :- ಅಸ್ತಾಯುಧೇಷು = ಅಸ್ತ** ಕಳೆದು ಹೋದ ಆಯುಧಗಳುಳ್ಳ, **ಸರ್ವೇಷು** ಎಲ್ಲ, **ನೃಪೇಷು** ರಾಜರು, **ಯುಧಿ** ಯುದ್ಧದಲ್ಲಿ, **ಹರಿಣಾ** ಶ್ರೀಕೃಷ್ಣನಿಂದ, **ಶೋಚ್ಯಾಂ** ಶೋಚನೀಯವಾದ, **ದಶಾಂ** ಅವಸ್ಥೆಯನ್ನು **ಉಪಗತೇಷು** ಹೊಂದುತ್ತಿರಲು (ಹಾಗೂ) **ವಿದ್ರವತ್ಸು** ಓಡಿ ಹೋಗುತ್ತಿರಲು,

**ಉಗ್ರವೀರ್ಯಃ** = ಉಗ್ರ ಭಯಂಕರವಾದ, ವೀರ್ಯಃ ಪರಾಕ್ರಮವುಳ್ಳ, **ಮಾಗಧಪತಿಃ** ಜರಾಸಂಧನು, **ನಾನಾಯುಧಾಢ್ಯಂ** ನಾನಾ ವಿಧ ಆಯುಧ ಗಳಿಂದ ತುಂಬಿದ, **ಅಪರಂ** ಇನ್ನೊಂದು, **ರಥಂ** ರಥವನ್ನು **ಆಸ್ಥಾಯ** ಏರಿ, **ರಾಮಂ ಪ್ರಸಸಾರ** ಬಲರಾಮನೆಡೆಗೆ ಧಾವಿಸಿದನು.

**ತಾತ್ಪರ್ಯ** :- ಯುದ್ಧದಲ್ಲಿ ರಾಜರೆಲ್ಲರೂ ಶ್ರೀಕೃಷ್ಣನಿಂದ ನಿರಾಯುಧ ರಾಗಿ ಶೋಚನೀಯ ಸ್ಥಿತಿಯನ್ನು ಹೊಂದಿದರು. ಓಡಿಹೋಗ ಲಾರಂಭಿಸಿದರು. ಆಗ ಮಹಾಬಲಶಾಲಿಯಾದ ಜರಾಸಂಧ ನಾನಾವಿಧ ಆಯುಧಗಳಿಂದ ತುಂಬಿತುಳುಕುವ ಮತ್ತೊಂದು ರಥವನ್ನೇರಿ ಬಲರಾಮ ನೆಡೆಗೆ ಧಾವಿಸಿದ.

**ವಿಶೇಷ ವಿಷಯ** :'ಅಸ್ತಾಯುಧೇಷು' ಎಂಬಲ್ಲಿ 'ಆತ್ತಾಯುಧೇಷು' ಎಂಬುದಾಗಿ ಪಾಠಾಂತರ 'ಜನಾರ್ದನೀಯ'ದಲ್ಲಿದೆ. ಆಗ ಹರಿಯಿಂದ ಆತ್ತ = ಆಪಹೃತವಾದ ಯುಧೇಷು ಆ ಆಯುಧವುಳ್ಳ ನೃಪೇಷು ರಾಜರುಗಳು ಎಂಬುದಾಗಿ ಅರ್ಥ ಹೇಳಬೇಕು.

**ಆಧಾವತೋಽಸ್ಯ ಮುಸಲೇನ ರಥಂ ಬಭಂಜ**
**ರಾಮೋ ಗದಾಮುರುತರೋರಸಿ ಸೋಽಪಿ ತಸ್ಯ ।**
**ಚಿಕ್ಷೇಪ ತಂ ಚ ಮುಸಲೇನ ತತಾಡ ರಾಮಃ**
**ತಾವುತ್ತಮೌ ಬಲವತಾಂ ಯುಯುಧಾತ ಉಗ್ರಮ್ ॥ ೩೫ ॥**

**ಅರ್ಥ** :- **ರಾಮಃ** ಬಲರಾಮನು, **ಆಧಾವತಃ** ತನ್ನೆಡೆಗೆ ಧಾವಿಸುತ್ತಿದ್ದ **ಅಸ್ಯ** ಈ ಜರಾಸಂಧನ, **ರಥಂ** ರಥವನ್ನು **ಮುಸಲೇನ** ಮುಸಲಾಯುಧ ದಿಂದ, **ಬಭಂಜ** ಮುರಿದನು, **ಸೋಽಪಿ** ಆ ಜರಾಸಂಧನಾದರೂ, **ತಸ್ಯ** ಆ ಬಲರಾಮನ, **ಉರುತರೋರಸಿ** ಅತಿವಿಶಾಲವಾದ ಎದೆಯ ಮೇಲೆ, **ಗದಾಂ** ಗದೆಯನ್ನು **ಚಿಕ್ಷೇಪ** ಎಸೆದನು, **ತಂ ಚ** ಆ ಜರಾಸಂಧನನ್ನಾದರೂ, **ರಾಮಃ** ಬಲರಾಮನು, **ಮುಸಲೇನ** ಮುಸಲಾಯುಧದಿಂದ, **ತತಾಡ** ಹೊಡೆದನು, **ಬಲವತಾಂ ಉತ್ತಮೌ** ಬಲಿಷ್ಠರಲ್ಲಿ ಉತ್ತಮರಾದ, **ತೌ** ಅವರಿಬ್ಬರು (ಬಲರಾಮ-ಜರಾಸಂಧರು) **ಉಗ್ರಂ** ಭಯಂಕರವಾಗಿ, **ಯುಯುಧಾತೇ** ಯುದ್ಧಮಾಡಿದರು.

**ತಾತ್ಪರ್ಯ** :- ಯುದ್ಧದಲ್ಲಿ ಬಲರಾಮ ತನ್ನೆಡೆಗೆ ಧಾವಿಸಿ ಬರುತ್ತಿದ್ದ ಜರಾಸಂಧನ ರಥವನ್ನು ಮುಸಲಾಯುಧದಿಂದ ಮುರಿದ ಆಗ ಜರಾಸಂಧ ಬಲರಾಮನ ಅತಿವಿಶಾಲವಾದ ವಕ್ಷಃಸ್ಥಲದ ಮೇಲೆ ಗದೆಯನ್ನು ಬಿಸಾಡಿದ. ಅವನನ್ನು (ಜರಾಸಂಧನನ್ನು) ಬಲರಾಮ ಮುಸಲಾಯುಧದಿಂದ ಪ್ರಹರಿಸಿದ. ಬಲಿಷ್ಠರಲ್ಲಿ ಶ್ರೇಷ್ಠರಾದ ಅವರಿಬ್ಬರೂ ಭಯಂಕರವಾಗಿ ಯುದ್ಧ ಮಾಡಿದರು.

**ತೌ ಚಕ್ರತುಃ ಪುರು ನಿಯುದ್ಧಮಪಿ ಸ್ಮ ತತ್ರ**
**ಸಂಚೂರ್ಣ್ಯ ಸರ್ವಗಿರಿವೃಕ್ಷಶಿಲಾಸಮೂಹಾನ್ ।**
**ದೀರ್ಘಂ ನಿಯುದ್ಧಮಭವತ್ ಸಮಮೇತಯೋಸ್ತು**
**ವಜ್ರಾದ್ ದೃಢಾಂಗತಮಯೋರ್ಬಲಿನೋರ್ನಿತಾಂತಮ್ ॥ ೩೬ ॥**

**ಅರ್ಥ** :- **ತೌ** ಅವರಿಬ್ಬರು (ಬಲರಾಮ-ಜರಾಸಂಧರು), **ತತ್ರ** ಆಯುದ್ಧ ಸ್ಥಳದಲ್ಲಿ ಸನಿಹದಲ್ಲಿರುವ, **ಸರ್ವಗಿರಿವೃಕ್ಷಶಿಲಾಸಮೂಹಾನ್** = **ಸರ್ವ** ಎಲ್ಲ, **ಗಿರಿ** ಪರ್ವತಗಳು, **ವೃಕ್ಷ** ಮರಗಳು, **ಶಿಲಾ** ಕಲ್ಲುಗಳು (ಇವುಗಳ) **ಸಮೂಹಾನ್** ಸಮೂಹಗಳನ್ನು, **ಸಂಚೂರ್ಣ್ಯ** ಪುಡಿ ಪುಡಿ ಮಾಡಿ, **ಪುರು** ದೊಡ್ಡ, **ನಿಯುದ್ಧಂ ಚಕ್ರತುಃ** ಮುಷ್ಟಿಯುದ್ಧ ಮಾಡಿದರು, **ವಜ್ರಾತ್** ವಜ್ರಕ್ಕಿಂತ, **ದೃಢಾಂಗತಮಯೋಃ** ಅತಿ ಕಠಿಣವಾದ ಮೈಯುಳ್ಳ, **ನಿತಾಂತಂ** ಅತ್ಯಂತವಾಗಿ, **ಬಲಿನೋಃ** ಬಲಿಷ್ಠರಾದ, **ಏತಯೋಃ** ಈ ಬಲರಾಮ-ಜರಾಸಂಧರ, **ದೀರ್ಘಂ** ದೀರ್ಘವಾದ, **ನಿಯುದ್ಧಂ ತು** (ಆ) ಮುಷ್ಟಿಯುದ್ಧವಾದರೂ, **ಸಮಂ ಅಭವತ್** ಸಮಾನವಾಗಿತ್ತು.

**ತಾತ್ಪರ್ಯ** :- ಆ ಬಲರಾಮ-ಜರಾಸಂಧರಿಬ್ಬರೂ ಯುದ್ಧಸ್ಥಳದ ಸನಿಹದಲ್ಲಿರುವ ಎಲ್ಲ ಪರ್ವತ-ಮರ, ಕಲ್ಲುಗಳ ಸಮೂಹಗಳನ್ನು ಪುಡಿ ಪುಡಿ ಮಾಡುತ್ತ ದೊಡ್ಡ ಮುಷ್ಟಿಯುದ್ಧ ಮಾಡಿದರು. ಅತ್ಯಂತ ಬಲಿಷ್ಠರಾಗಿದ್ದ ಅವರಿಬ್ಬರ ಮೈ ವಜ್ರಕ್ಕಿಂತಲೂ ಅತ್ಯಂತ ಕಠಿಣವಾಗಿತ್ತು. ಇವರಿಬ್ಬರ ದೀರ್ಘವಾದ ಮುಷ್ಟಿಯುದ್ಧ ಸಮಾನವಾಗಿತ್ತು.

**ವಿಶೇಷ ವಿಷಯ** :'ಸಮಮೇತಯೋಸ್ತು' ಎಂಬಲ್ಲಿ ಕೆಲವೆಡೆ 'ಸಮಮೇತಯೋಸ್ತದ್' ಎಂಬುದಾಗಿ ಪಾಠವಿದೆ.

ಶ್ರುತ್ವಾಽಥ ಶಂಖರವಮಂಬುಜಲೋಚನಸ್ಯ
ವಿದ್ರಾವಿತಾನಪಿ ನೃಪಾನಭಿವೀಕ್ಷ್ಯರಾಮಃ ।
ಯುಧ್ಯಂತಮೀಕ್ಷ್ಯ ಚ ರಿಪುಂ ವವೃಧೇ ಬಲೇನ
ತ್ಯಕ್ತ್ವಾ ರಿಪುಂ ಮುಸಲಮಾದದ ಆಶ್ವಮೋಘಮ್ ॥ ೩೭ ॥

**ಅರ್ಥ** :- **ಅಥ** ಅನಂತರ, **ರಾಮಃ** ಬಲರಾಮನು, **ಅಂಬುಜ ಲೋಚನಸ್ಯ** ಕಮಲನೇತ್ರನಾದ ಶ್ರೀಕೃಷ್ಣನ, **ಶಂಖರವಂ** ಶಂಖಧ್ವನಿಯನ್ನು, **ಶ್ರುತ್ವಾ** ಕೇಳಿ, **ನೃಪಾನ್** ರಾಜರುಗಳನ್ನು **ವಿದ್ರಾವಿತಾನಪಿ** ಓಡಿದ್ದನ್ನೂ, **ಅಭಿವೀಕ್ಷ್ಯ** ನೋಡಿ, **ಚ** ಮತ್ತು, **ಯುಧ್ಯಂತಂ** (ಇನ್ನೂ) ಯುದ್ಧ ಮಾಡುತ್ತಿರುವ, **ರಿಪುಂ** ಜರಾಸಂಧನನ್ನು **ಈಕ್ಷ್ಯ** ನೋಡಿ, **ಬಲೇನ** ಬಲದಿಂದ, **ವವೃಧೇ** ತುಂಬಿಕೊಂಡನು, **ರಿಪುಂ** ಶತ್ರುವಾದ ಜರಾಸಂಧನನ್ನು **ತ್ಯಕ್ತ್ವಾ** ಬಿಟ್ಟು (ಮುಷ್ಟಿಯುದ್ಧದಲ್ಲಿ ತನ್ನ ಕೈ ಹಿಡಿದಿದ್ದ ಜರಾಸಂಧನನ್ನು ತೊರೆದು) **ಆಶು** ಬೇಗನೆ, **ಅಮೋಘಂ** ಅಮೋಘವಾದ, **ಮುಸಲಂ** ಮುಸಲಾಯುಧವನ್ನು **ಆದದೇ** ಎತ್ತಿಕೊಂಡನು.

**ತಾತ್ಪರ್ಯ** :- ಬಳಿಕ ಬಲರಾಮ ಶ್ರೀಕೃಷ್ಣನ ಶಂಖಧ್ವನಿಯನ್ನು ಕೇಳಿ, ರಾಜರುಗಳು ಓಡಿಹೋಗುತ್ತಿದ್ದುದನ್ನೂ ನೋಡಿ ಇನ್ನೂ ಜರಾಸಂಧ ಯುದ್ಧಮಾಡುತ್ತಿರುವದನ್ನು ಗಮನಿಸಿ ಬಲದಿಂದ ತುಂಬಿಕೊಂಡ. ಮುಷ್ಟಿ ಯುದ್ಧದಲ್ಲಿ ತನ್ನ ಕೈಹಿಡಿದಿದ್ದ ಜರಾಸಂಧನನ್ನು ತೊರೆದು, ಅವನನ್ನು ಕೊಲ್ಲುವ ದಕ್ಕಾಗಿ ಬೇಗನೆ ಅಮೋಘವಾದ ಮುಸಲಾಯುಧವನ್ನು ಕೈಗೆತ್ತಿಕೊಂಡ.

ತೇನಾಽಹತಃ ಶಿರಸಿ ಸಂಮುಮುಹೇಽತಿವೇಲಂ
ಬಾರ್ಹದ್ರಥೋ ಜಗ್ರಹ ಏನಮಥೋ ಹಲೀ ಸಃ ।
ತತ್ರೈಕಲವ್ಯ ಉತ ಕೃಷ್ಣಶರೈಃ ಪಲಾಯನ್
ಅಸ್ತ್ರಾಣಿ ರಾಮಶಿರಸಿ ಪ್ರಮುಮೋಚ ಶೀಘ್ರಮ್ ॥ ೩೮ ॥

**ಅರ್ಥ** :- **ತೇನ** ಆ ಮುಸಲಾಯುಧದಿಂದ, **ಶಿರಸಿ** ತಲೆಯಲ್ಲಿ, **ಆಹತಃ** ಹೊಡೆಯಲ್ಪಟ್ಟ **ಬಾರ್ಹದ್ರಥಃ** ಜರಾಸಂಧನು, **ಅತಿವೇಲಂ** ಅತ್ಯಂತವಾಗಿ, **ಸಂಮುಮುಹೇ** ಮೂರ್ಛಿತನಾದನು, **ಅಥೋ** ಅನಂತರ, **ಸಃ ಹಲೀ** ಆ ಬಲರಾಮನು, **ಏನಂ** ಈ ಜರಾಸಂಧನನ್ನು **ಜಗ್ರಹೇ** ಸೆರೆ ಹಿಡಿದನು, **ತತ್ರ**

ಆಗ, **ಕೃಷ್ಣಶರೈಃ** ಕೃಷ್ಣನ ಬಾಣಗಳಿಂದ (ಹೊಡೆಯಲ್ಪಟ್ಟ), **ಪಲಾಯನ್** ಓಡುತ್ತಾ, **ಏಕಲವ್ಯಃ** ಏಕಲವ್ಯನು, **ಶೀಘ್ರಂ** ಬೇಗನೆ, **ರಾಮಶಿರಸಿ** ಬಲರಾಮನ ತಲೆಗೆ, **ಅಸ್ತ್ರಾಣಿ** ಅಸ್ತ್ರಗಳನ್ನು **ಪ್ರಮುಮೋಚ** ಎಸೆದನು.

**ತಾತ್ಪರ್ಯ** :- ಬಲರಾಮನು ಮುಸಲಾಯುಧದಿಂದ ಜರಾಸಂಧನ ತಲೆಗೆ ಹೊಡೆದಾಗ ಅವನು ಬಹಳ ಮೂರ್ಛಿತನಾದ. ಅವನನ್ನು ಬಲರಾಮ ಸೆರೆಹಿಡಿದ. ಅಷ್ಟರಲ್ಲೇ ಶ್ರೀಕೃಷ್ಣನ ಬಾಣದ ಏಟಿಗೆ ಓಡಿಹೋಗುತ್ತಿದ್ದ ಏಕಲವ್ಯ ಬೇಗನೆ ಬಲರಾಮನ ತಲೆಮೇಲೆ ಅಸ್ತ್ರಗಳನ್ನು ಎಸೆದ.

**ಭೀತೇನ ತೇನ ಸಮರಂ ಭಗವಾನ್ ಅನಿಚ್ಛನ್**
**ಪ್ರದ್ಯುಮ್ನಮಾಶ್ವಸೃಜದಾತ್ಮಸುತಂ ಮನೋಜಮ್ ।**
**ಪ್ರದ್ಯುಮ್ನ ಏನಮಭಿಯಾಯ ಮಹಾಸ್ತ್ರಜಾಲೈಃ**
**ರಾಮಸ್ತು ಮಾಗಧಮಥಾತ್ಮರಥಂ ನಿನಾಯ ॥ ೩೯ ॥**

**ಅರ್ಥ** :- **ಭಗವಾನ್** ಶ್ರೀಕೃಷ್ಣನು, **ಭೀತೇನ** ಹೆದರಿದ, **ತೇನ** ಏಕಲವ್ಯನೊಂದಿಗೆ, **ಸಮರಂ** ಯುದ್ಧವನ್ನು, **ಅನಿಚ್ಛನ್** ಬಯಸದೇ, **ಆತ್ಮಸುತಂ** ತನ್ನ ಮಗನಾದ, **ಮನೋಜಂ** ಮನ್ಮಥನನ್ನು **ಪ್ರದ್ಯುಮ್ನಂ** ಪ್ರದ್ಯುಮ್ನನನ್ನಾಗಿ, **ಆಶು** ಬೇಗನೆ, **ಅಸೃಜತ್** ಸೃಷ್ಟಿಸಿದನು, **ಪ್ರದ್ಯುಮ್ನಃ** ಪ್ರದ್ಯುಮ್ನನು, **ಏನಂ** ಈ ಏಕಲವ್ಯನನ್ನು **ಮಹಾಸ್ತ್ರಜಾಲೈಃ** ದೊಡ್ಡ ಅಸ್ತ್ರ ಸಮೂಹಗಳಿಂದ, **ಅಭಿಯಾಯ** ಬೆನ್ನಟ್ಟಿ ಹೋದನು, **ಅಥ** ಬಳಿಕ, **ರಾಮಸ್ತು** ಬಲರಾಮನಾದರೂ, **ಆತ್ಮರಥಂ** ತನ್ನ ರಥವನ್ನು **ಮಾಗಧಂ** **ನಿನಾಯ** ಜರಾಸಂಧನೆಡೆಗೆ ಕೊಂಡೊಯ್ದನು.

**ತಾತ್ಪರ್ಯ** :- ಶ್ರೀಕೃಷ್ಣನು ಹೆದರಿದ ಏಕಲವ್ಯನೊಂದಿಗೆ ಯುದ್ಧ ಮಾಡಲು ಇಚ್ಛಿಸಲಿಲ್ಲ. ಆದ್ದರಿಂದ ತತ್ಕಾಲದಲ್ಲಿ ತನ್ನ ಮಗನಾದ ಕಾಮನನ್ನು ಪ್ರದ್ಯುಮ್ನನನ್ನಾಗಿ ಸೃಷ್ಟಿಸಿದ. ಆ ಪ್ರದ್ಯುಮ್ನ ಮಹಾಸ್ತ್ರಗಳಿಂದ ಏಕಲವ್ಯನನ್ನು ಬೆನ್ನಟ್ಟಿ ಹೋದ. ಆಗ ಬಲರಾಮ ಜರಾಸಂಧನೆಡೆಗೆ ತನ್ನ ರಥವನ್ನು ಕೊಂಡೊಯ್ದ.

**ಯುದ್ಧ್ವಾ ಚಿರಂ ರಣಮುಖೇ ಭಗವತ್ಸುತೋಽಸೌ**
**ಚಕ್ರೇ ನಿರಾಯುಧಮಮುಂ ಸ್ಥಿರಮೇಕಲವ್ಯಮ್ ।**

ಅಂಶೇನ ಯೋ ಭುವಮಗಾನ್ಮಣಿಮಾನಿತಿ ಸ್ಮ
ಸ ಕ್ರೋಧತಂತ್ರಕಗಣೇಷ್ವಧಿಪೋ ನಿಷಾದಃ ॥ ೪೦ ॥

**ಅರ್ಥ** :- ಭಗವತ್ಸುತಃ ಭಗವಂತನ ಮಗನಾದ, **ಅಸೌ** ಈ ಪ್ರದ್ಯುಮ್ನನು, **ಚಿರಂ** ಬಹುಕಾಲ, **ಯುಧ್ವಾ** ಯುದ್ಧ ಮಾಡಿ, **ರಣಮುಖೇ** ಯುದ್ಧರಂಗದಲ್ಲಿ, ಸ್ಥಿರಂ ಅಚಲನಾದ, **ಅಮುಂ** ಈ ಏಕಲವ್ಯನನ್ನು **ನಿರಾಯುಧಂ** ಆಯುಧ ಇಲ್ಲದವನನ್ನಾಗಿ, **ಚಕ್ರೇ** ಮಾಡಿದನು, **ಯಃ** ಯಾರು, **ಪೂರ್ವಂ** ಹಿಂದೆ, **ಕ್ರೋಧಕತಂತ್ರಕಗಣೇಷು** ಕ್ರೋಧವಶರೆಂಬ ರಾಕ್ಷಸಗಣಗಳಲ್ಲಿ, **ಅಧಿಪಃ** ಒಡೆಯನಾಗಿ, **ಮಣಿಮಾನ್ ಇತಿ ಸ್ಮ** ಮಣಿಮಂತನೆಂದು ಪ್ರಸಿದ್ಧನಾಗಿದ್ದನೋ, **ಸಃ** ಅವನು, **ಅಂಶೇನ** ಒಂದಂಶ ದಿಂದ, **ನಿಷಾದಃ ಸನ್** ಬೇಡನಾಗಿ, **ಭುವಮಗಾತ್** ಭೂಮಿಯಲ್ಲಿ ಜನಿಸಿದ.

**ತಾತ್ಪರ್ಯ** :- ಯುದ್ಧದಲ್ಲಿ ಸ್ಥಿರವಾಗಿ ನಿಂತ ಏಕಲವ್ಯನೊಂದಿಗೆ ಬಹುಕಾಲ ಯುದ್ಧಮಾಡಿದ ಪ್ರದ್ಯುಮ್ನ, ಆ ಮೇಲೆ ಅವನನ್ನು ನಿರಾಯುಧನನ್ನಾಗಿಸಿದ. ಈ ಏಕಲವ್ಯ ಹಿಂದೆ ಕ್ರೋಧವಶರೆಂಬ ರಾಕ್ಷಸ ಗಣಗಳ ಅಧಿಪತಿ ಮಣಿಮಂತ ಎಂಬ ಹೆಸರಿನಿಂದ ಪ್ರಸಿದ್ಧನಾಗಿದ್ದ. ಈಗ ಒಂದಂಶದಿಂದ ಭೂಮಿಯಲ್ಲಿ ಬೇಡಜಾತಿಯವನಾಗಿ ಜನಿಸಿದ್ದ.

ಪ್ರದ್ಯುಮ್ನಮಾತ್ಮನಿ ನಿಧಾಯ ಪುನಃ ಸ ಕೃಷ್ಣಃ
ಸಂಹೃತ್ಯ ಮಾಗಧಬಲಂ ನಿಖಿಲಂ ಶರೌಘೈಃ ।
ಭೂಯಶ್ಚಮೂಮಭಿವಿನೇತುಮುದಾರಕರ್ಮಾ
ಬಾರ್ಹದ್ರಥಂ ತ್ವಮುಚದಕ್ಷಯಪೌರುಷೋಽಜಃ ॥ ೪೧ ॥

**ಅರ್ಥ** :- **ಅಕ್ಷಯಪೌರುಷಃ = ಅಕ್ಷಯ** ನಾಶವಿಲ್ಲದ, **ಪೌರುಷಃ** ಪೌರುಷವುಳ್ಳ, **ಅಜಃ** ಜನನರಹಿತನಾದ, **ಉದಾರಕರ್ಮಾ = ಉದಾರ** ಉತ್ಕೃಷ್ಟವಾದ, **ಕರ್ಮಾ** ಕರ್ಮವುಳ್ಳ, **ಸಃ** ಆ, **ಕೃಷ್ಣಃ** ಶ್ರೀಕೃಷ್ಣನು, **ಪ್ರದ್ಯುಮ್ನಂ** ಪ್ರದ್ಯುಮ್ನನನ್ನು **ಪುನಃ** ಮತ್ತೆ, **ಆತ್ಮನಿ** ತನ್ನ ಉದರದಲ್ಲಿ, **ನಿಧಾಯ** ಸ್ಥಾಪಿಸಿ, **ನಿಖಿಲಂ** ಎಲ್ಲ, **ಮಾಗಧಬಲಂ** ಜರಾಸಂಧನ ಸೈನ್ಯವನ್ನು, **ಶರೌಘೈಃ** ಬಾಣ ಸಮೂಹಗಳಿಂದ, **ಸಂಹೃತ್ಯ** ಸಂಹರಿಸಿ, **ಬಾರ್ಹದ್ರಥಂ ತು** ಜರಾಸಂಧ ನನ್ನಾದರೂ, **ಭೂಯಃ** ಮತ್ತೆ, **ಚಮೂಂ** ಸೇನೆಯನ್ನು, **ಅಭಿವಿನೇತುಂ** ತರಲು, **ಅಮುಚತ್** ಬಿಟ್ಟನು.

**ತಾತ್ಪರ್ಯ** :- ನಾಶವಿಲ್ಲದ ಪೌರುಷವಂತ ಶ್ರೀಕೃಷ್ಣ ಜನನರಹಿತನಾದ ಉತ್ತಮಕರ್ಮವುಳ್ಳ ಅವನು, ಏಕಲವ್ಯನನ್ನು ನಿಗ್ರಹಿಸುವ ಕೆಲಸ ಮುಗಿದ ಮೇಲೆ ಪ್ರದ್ಯುಮ್ನನನ್ನು ಪುನಃ ತನ್ನ ಉದರದೊಳಗೆ ಸೇರಿಸಿಕೊಂಡ ಮುಂದೆ ರುಕ್ಮಿಣಿಯಲ್ಲಿ ಹುಟ್ಟಿಸುವದಕ್ಕಾಗಿ. ಆಮೇಲೆ ಜರಾಸಂಧನ ಎಲ್ಲ ಸೈನ್ಯವನ್ನು ಬಾಣಸಮೂಹಗಳಿಂದ ಸಂಹರಿಸಿ ಅವನು ಮತ್ತೆ ಸೈನ್ಯ ತರಲಿ ಎಂದು ಬಿಟ್ಟುಬಿಟ್ಟ.

**ವ್ರೀಡಾನತಾಚ್ಛವಿಮುಖಃ ಸಹಿತೋ ನೃಪೈಸ್ತೈಃ**
**ಬಾರ್ಹದ್ರಥಃ ಪ್ರತಿಯಯೌ ಸ್ವಪುರೀಂ ಸ ಪಾಪಃ ।**
**ಆತ್ಮಾಭಿಷಿಕ್ತಮಪಿ ಭೋಜವರಾಧಿಪತ್ಯೇ**
**ದೌಹಿತ್ರಮಗ್ರತ ಉತ ಪ್ರಣಿಧಾಯ ಮಂದಃ ॥ ೪೨ ॥**

**ಅರ್ಥ** :- **ಮಂದಃ** ಅಪಟುವಾದ (ಕರ್ತವ್ಯಾಕರ್ತವ್ಯ ಜ್ಞಾನಶೂನ್ಯನಾದ), **ಪಾಪಃ** ಪಾಪಿಷ್ಠನಾದ, **ಸಃ** ಆ ಜರಾಸಂಧನು, **ಭೋಜವರಾಧಿಪತ್ಯೇ** ಭೋಜಶ್ರೇಷ್ಠರ ಆಧಿಪತ್ಯದಲ್ಲಿ, **ಆತ್ಮಾಭಿಷಿಕ್ತಂ** ತನ್ನಿಂದ ಅಭಿಷಿಕ್ತನಾದ, **ದೌಹಿತ್ರಂ** ಮಗಳ ಮಗನನ್ನು, **ಉತಾಪಿ** ಪಲಾಯನ ಸಮಯದಲ್ಲಿಯೂ, **ಅಗ್ರತಃ ಪ್ರಣಿಧಾಯ** ಮುಂದಿಟ್ಟುಕೊಂಡು, **ವ್ರೀಡಾನತಾಚ್ಛವಿಮುಖಃ** = **ವ್ರೀಡಾ** ನಾಚಿಕೆಯಿಂದ, **ಆನತ** ತಗ್ಗಿದ, **ಅಚ್ಛವಿಮುಖಃ** ಕಳೆಗುಂದಿದ ಮುಖವುಳ್ಳವನಾಗಿ, **ತೈಃ ನೃಪೈಃ** ಆ ರಾಜರುಗಳೊಂದಿಗೆ, **ಸ್ವಪುರೀಂ ಪ್ರತಿ** ತನ್ನ ಪಟ್ಟಣವನ್ನು ಕುರಿತು, **ಯಯೌ** (ಹಿಂತಿರುಗಿ) ಹೋದನು.

**ತಾತ್ಪರ್ಯ** :- ಕರ್ತವ್ಯಾಕರ್ತವ್ಯಜ್ಞಾನವಿಲ್ಲದ ಮಹಾಪಾಪಿ ಈ ಜರಾಸಂಧ. ಅವನು ತಾನೇ ಭೋಜಶ್ರೇಷ್ಠರ ಆಧಿಪತ್ಯದಲ್ಲಿ ತನ್ನ ಮಗಳ ಮಗನಿಗೆ ಪಟ್ಟಾಭಿಷೇಕ ಮಾಡಿ ಅವನೇ ಭೋಜರ ದೊರೆಯೆಂದು ಸಾರಿದ್ದ. ಈಗ ಅವನನ್ನೇ ಮುಂದೆ ಮಾಡಿಕೊಂಡು ರಾಜಶ್ರೇಷ್ಠರೊಂದಿಗೆ ತನ್ನ ಪಟ್ಟಣಕ್ಕೆ ಪಲಾಯನಗೈದ. ಆಗ ಅವರ ಮುಖ ನಾಚಿಕೆಯಿಂದ ತಗ್ಗಿ ಕಳೆಗುಂದಿತ್ತು.

**ಜಿತ್ವಾ ತಮೂರ್ಜಿತಬಲಂ ಭಗವಾನಜೇಶ-**
**ಶಕ್ರಾದಿಭಿಃ ಕುಸುಮವರ್ಷಿಭಿರೀಡ್ಯಮಾನಃ ।**
**ರಾಮಾದಿಭಿಃ ಸಹಿತ ಆಶು ಪುರೀಂ ಪ್ರವಿಶ್ಯ**
**ರೇಮೇಽಭಿವಂದಿತಪದೋ ಮಹತಾಂ ಸಮೂಹೈಃ ॥ ೪೩ ॥**

**ಅರ್ಥ** :- ಭಗವಾನ್ ಶ್ರೀಕೃಷ್ಣನು, **ಊರ್ಜಿತಬಲಂ** = ಊರ್ಜಿತ ಉತ್ತಮವಾದ, **ಬಲಂ** ಬಲವುಳ್ಳ, **ತಂ** ಆ ಜರಾಸಂಧನನ್ನು **ಜಿತ್ವಾ** ಗೆದ್ದು **ಕುಸುಮವರ್ಷಿಭಿಃ** ಹೂಮಳೆಗರೆಯುತ್ತಿರುವ, **ಅಜೇಶಶಕ್ರಾದಿಭಿಃ** ಬ್ರಹ್ಮರುದ್ರ ಇಂದ್ರಾದಿಗಳಿಂದ, **ಈಡ್ಯಮಾನಃ** ಸ್ತೋತ್ರ ಮಾಡಿಸಿಕೊಳ್ಳುವವನಾಗಿ, **ರಾಮಾದಿಭಿಃ** ಬಲರಾಮ ಮುಂತಾದವರಿಂದ, **ಸಹಿತಃ** ಕೂಡಿಕೊಂಡು, **ಆಶು** ಬೇಗನೆ, **ಪುರೀಂ** ಮಧುರಾಪುರಿಯನ್ನು, **ಪ್ರವಿಶ್ಯ** ಪ್ರವೇಶಿಸಿ, **ಮಹತಾಂ ಸಮೂಹೈಃ** ಮಹಾಜನ ಸಮೂಹಗಳಿಂದ, **ಅಭಿವಂದಿತಪದಃ** ನಮಸ್ಕೃತ ಪಾದವುಳ್ಳವನಾಗಿ, **ರೇಮೇ** ಆನಂದಿಸಿದನು.

**ತಾತ್ಪರ್ಯ** :- ಶ್ರೀಕೃಷ್ಣ ಬಲಶಾಲಿಯಾದ ಜರಾಸಂಧನನ್ನು ಗೆದ್ದು ಬ್ರಹ್ಮ-ರುದ್ರ-ಇಂದ್ರಾದಿಗಳಿಂದ ಪುಷ್ಪವೃಷ್ಟಿ ಮಾಡಿಸಿಕೊಂಡ. ಸ್ತೋತ್ರ ಮಾಡಿಸಿ ಕೊಂಡ. ಬಲರಾಮ ಮೊದಲಾದವರಿಂದ ಕೂಡಿಕೊಂಡು ಮಧುರೆಯನ್ನು ಪ್ರವೇಶಿಸಿದ. ಅಲ್ಲಿ ಮಹಾಜನರಿಂದ ಪಾದವಂದನೆ ಕೈಗೊಳ್ಳುತ್ತ ಆನಂದಿಸಿದ.

**ವರ್ಧತ್ಸು ಪಾಂಡುತನಯೇಷು ಚತುರ್ದಶಂ ತು**
**ಜನ್ಮರ್ಕ್ಷಮಾಸ ತನಯಸ್ಯ ಸಹಸ್ರದೃಷ್ಟೇಃ ।**
**ಪ್ರತ್ಯಾಬ್ದಿಕಂ ಮುನಿಗಣಾನ್ ಪರಿವೇಷಯಂತೀ**
**ಕುಂತೀ ತದಾಸ ಬಹುಕಾರ್ಯಪರಾ ನಯಜ್ಞಾ ॥ ೪೪ ॥**

**ಅರ್ಥ** :- **ಪಾಂಡುತನಯೇಷು** ಪಾಂಡವರು, **ವರ್ಧತ್ಸು** ಸತ್ಸು ಬೆಳೆಯುತ್ತಿರಲು, **ಸಹಸ್ರದೃಷ್ಟೇಃ** ಸಹಸ್ರನೇತ್ರನಾದ ಇಂದ್ರನ, **ತನಯಸ್ಯ** ಮಗನಾದ ಅರ್ಜುನನ, **ಚತುರ್ದಶಂ** ಹದಿನಾಲ್ಕನೆಯ, **ಪ್ರತ್ಯಾಬ್ದಿಕಂ** ವಾರ್ಷಿಕ, **ಜನ್ಮರ್ಕ್ಷಂ** ಜನ್ಮನಕ್ಷತ್ರವು (ಯದಾ ಯಾವಾಗ) **ಆಸ** ಬಂದಿತೋ, **ತದಾ** ಆದಿನದಲ್ಲಿ **ನಯಜ್ಞಾ** ನೀತಿಜ್ಞಳಾದ, **ಕುಂತೀ** ಕುಂತಿಯು, **ಮುನಿಗಣಾನ್ ಪರಿವೇಷಯಂತೀ** ಮುನಿಸಮೂಹಗಳಿಗೆ ಅನ್ನವನ್ನು ಬಡಿಸುವ ವಳಾಗಿ, **ಬಹುಕಾರ್ಯತತ್ಪರಾ** **ಆಸ** ಬಹಳ ಕಾರ್ಯಗಳಲ್ಲಿ ತಲ್ಲೀನಳಾಗಿದ್ದಳು.

**ತಾತ್ಪರ್ಯ** :- ಇತ್ತ ಪಾಂಡವರು ಕಾಡಿನಲ್ಲಿ ಬೆಳೆಯುತ್ತಿದ್ದಾಗ ಅರ್ಜುನನ ಹದಿನಾಲ್ಕನೇ ವಾರ್ಷಿಕ ಜನ್ಮನಕ್ಷತ್ರದ ದಿನ ಬಂದಿತ್ತು. ಆಗ ನೀತಿಜ್ಞಳಾದ ಕುಂತಿ ಮುನಿಗಣಗಳಿಗೆ ಅನ್ನಬಡಿಸುತ್ತಾ ಬಹಳ ಕಾರ್ಯ ತತ್ಪರಳಾಗಿದ್ದಳು.

ತತ್ಕಾಲ ಏವ ನೃಪತಿಃ ಸಹ ಮಾದ್ರವತ್ಯಾ
ಪುಂಸ್ಕೋಕಿಲಾಕುಲಿತಪುಲ್ಲವನಂ ದದರ್ಶ ।
ತಸ್ಮಿನ್ ವಸಂತಪವನಸ್ಪರ್ಶೇಧಿತಃ ಸ
ಕಂದರ್ಪಮಾರ್ಗಣವಶಂ ಸಹಸಾ ಜಗಾಮ ॥ ೪೫ ॥

**ಅರ್ಥ** :- **ನೃಪತಿಃ** ಪಾಂಡುರಾಜನು, **ತತ್ಕಾಲ ಏವ** ಅದೇ ಕಾಲದಲ್ಲಿ **ಮಾದ್ರವತ್ಯಾ ಸಹ** ಮಾದ್ರಿಯೊಂದಿಗೆ, **ಪುಂಸ್ಕೋಕಿಲಾಕುಲಿತಪುಲ್ಲವನಂ** = **ಪುಂಸ್ಕೋಕಿಲ** ಗಂಡು ಕೋಗಿಲೆಗಳಿಂದ, **ಆಕುಲಿತ** ತುಂಬಿದ, **ಪುಲ್ಲವನಂ** ವಿಕಸಿತ ವನವನ್ನು, **ದದರ್ಶ** ಕಂಡನು, **ತಸ್ಮಿನ್** ಆ ವನದಲ್ಲಿ, **ವಸಂತಪವನ ಸ್ಪರ್ಶೇಧಿತಃ** = **ವಸಂತಪವನ** ವಸಂತ ಮಾರುತದ, **ಸ್ಪರ್ಶ** = ಸ್ಪರ್ಶದಿಂದ, ಏಧಿತಃ ಉದ್ರಿಕ್ತನಾದ, **ಸಃ** ಆ ಪಾಂಡುರಾಜನು, **ಸಹಸಾ** ಅಕಸ್ಮಾತ್ (ಕಿಂದಮಮುನಿಗಳ ಶಾಪವನ್ನು ವಿಚಾರ ಮಾಡದೇ) **ಕಂದರ್ಪಮಾರ್ಗಣ ವಶಂ ಜಗಾಮ** ಮನ್ಮಥನ ಬಾಣಕ್ಕೆ ವಶನಾದನು.

**ತಾತ್ಪರ್ಯ** :- ಅದೇ ಕಾಲದಲ್ಲಿ ಪಾಂಡುಮಹಾರಾಜ ಮಾದ್ರೀ ದೇವಿಯೊಂದಿಗೆ, ಕೋಗಿಲೆಗಳಿಂದ ತುಂಬಿದ ಪುಷ್ಪವಿಕಸಿತವಾದ ವನವನ್ನು ಕಂಡ. ಅಲ್ಲಿ ವಸಂತ ಮಾರುತಸ್ಪರ್ಶದಿಂದ ಉದ್ರಿಕ್ತನಾಗಿ, ಕಿಂದಮಮುನಿಗಳ ಶಾಪವನ್ನು ವಿಚಾರಮಾಡದೇ ಅಕಸ್ಮಾತ್ ಕಾಮನ ಬಾಣಕ್ಕೆ ತುತ್ತಾದ.

**ವಿಶೇಷ ವಿಷಯ** :- ವಾಸ್ತವಿಕವಾಗಿಯ ಅರ್ಜುನನ ಜನ್ಮ ನಕ್ಷತ್ರ 'ಫಾಲ್ಗುನೇ ಫಲ್ಗುನೋऽಭೂತ್' ಎಂಬ ವಚನದಂತೆ ಫಾಲ್ಗುನಮಾಸದಲ್ಲಿ ಬರುವದು. ಆದರೂ ಸೌರಮಾಸದ ಪ್ರಕಾರ ಫಾಲ್ಗುನ ಮಾಸದಲ್ಲಿ ವಸಂತ ಋತು ಬರಬಹುದು ಎನ್ನುತ್ತಿದೆ ಜನಾರ್ದನೀಯ.

ಜಗ್ರಾಹ ತಾಮಥ ತಯಾ ರಮಮಾಣ ಏವ
ಯಾತೋ ಯಮಸ್ಯ ಸದನಂ ಹರಿಪಾದಸಂಗೀ ।
ಪೂರ್ವಂ ಶಚೀರಮಣಮಿಚ್ಛತ ಏಷ ವಿಘ್ನಂ
ಶಕ್ರಸ್ಯ ತದ್ದರ್ಶನೋಪಗತೋ ಹಿ ಚಕ್ರೇ ॥ ೪೬ ॥

**ಅರ್ಥ** :- **ಅಥ** ಅನಂತರ, **ಹರಿಪಾದಸಂಗೀ** ಹರಿಪಾದಾಸಕ್ತನಾದ ಪಾಂಡುರಾಜನು, **ತಾಂ** ಆ ಮಾದ್ರಿಯನ್ನು **ಜಗ್ರಾಹ** (ರತಿಕ್ರೀಡೆಗಾಗಿ)

ಹಿಡಿದುಕೊಂಡನು, **ತಯಾ** ಅವಳೊಂದಿಗೆ, ರಮಮಾಣ ಏವ ಕ್ರೀಡಿಸುತ್ತಲೇ, **ಯಮಸ್ಯ** ಯಮನ, ಸದನಂ ಸ್ಥಾನವನ್ನು **ಯಾತಃ** ಹೊಂದಿದನು, **ಏಷಃ** ಈ ಪಾಂಡುವು, **ಪೂರ್ವಂ** ಹಿಂದೆ (ಪರಾವಹನಾಗಿದ್ದಾಗ), **ಶಚೀರಮಣಂ** ಶಚಿಯೊಡನೆ ರತಿಯನ್ನು **ಇಚ್ಛತಃ** ಬಯಸುತ್ತಿರುವ, **ಶಕ್ರಸ್ಯ** ಇಂದ್ರನಿಗೆ, **ತದ್ದರ್ಶನೋಪಗತಃ** ಆ ಇಂದ್ರನ ಕಣ್ಣಿಗೆ ಬಿದ್ದವನಾಗಿ, **ವಿಘ್ನಂ** ವಿಘ್ನವನ್ನು **ಹಿ** ಯಾವ ಕಾರಣದಿಂದ ಮಾಡಿದ್ದನೋ ಆ ಕಾರಣದಿಂದ ಹೆಂಡತಿಯೊಂದಿಗೆ ರಮಿಸುವಾಗಲೇ ಮರಣಹೊಂದಿದ.

**ತಾತ್ಪರ್ಯ** :- ಪಾಂಡುರಾಜ ರತಿಕ್ರೀಡೆಗಾಗಿ ಮಾದ್ರೀದೇವಿಯನ್ನು ಹಿಡಿದುಕೊಂಡ. ಅವಳೊಡನೆ ಕ್ರೀಡಿಸುತ್ತಿದ್ದಂತೇ ಹರಿಭಕ್ತನಾದ ಅವನು ಯಮಸದನವನ್ನು ಸೇರಿದ. ಹಿಂದೆ ಅವನು ಪರಾವಹ ಎಂಬ ಮರುತ್ ಆಗಿದ್ದಾಗ ಇಂದ್ರನ ದರ್ಶನ ಪಡೆಯಲು ಹೋಗಿ ಅವನಿಗೆ ವಿಘ್ನಮಾಡಿದ್ದ. ಏಕೆಂದರೆ ಆಗ ಇಂದ್ರ ಶಚಿಯೊಡನೆ ರಮಿಸಲು ಬಯಸಿದ್ದ. ಆದ್ದರಿಂದ ರತಿಕಾಲದಲ್ಲಿಯೇ ಮರಣ ಹೊಂದಿದ.

**ವಿಶೇಷ ವಿಷಯ** : ೧) ಯಮಸದನವನ್ನು ಹೊಂದಿದ ಅಂದರೆ ನರಕಭಾಗಿಯಾದ ಎಂದು ಅರ್ಥೈಸಬಾರದು. ಪುಣ್ಯವಂತರಾದ ರಾಜರೂ ಯಮಸಭೆಯಲ್ಲಿ ವಿರಾಜಮಾನರಾಗಿರುತ್ತಾರೆ. ಅವರು ಯಮಪುರಿಗೆ ದಕ್ಷಿಣದ್ವಾರವನ್ನು ಬಿಟ್ಟು ಬೇರೆ ದ್ವಾರದಿಂದ ಪ್ರವೇಶಿಸುವರು ಎಂದು ಗರುಡ ಪುರಾಣದ ಪ್ರೇತಖಂಡದಲ್ಲಿ ಹೇಳಿದೆ. ಹಾಗೇ ಪಾಂಡುವು ಯಮಸದನ ಪ್ರವೇಶಿಸಿದ ಎಂದು ತಿಳಿಯಬೇಕು.

೨) ರತಿಕಾಲದಲ್ಲಿ ಮರಣ ಹೊಂದಿದರೂ ಪುಣ್ಯವಂತರಾದ ರಾಜರು ಪಡೆಯುವ ಯಮಸದನಪ್ರಾಪ್ತಿಯು ಪಾಂಡುರಾಜನಿಗೆ ದೊರೆತದ್ದು ಹರಿಭಕ್ತನಾದ ಕಾರಣದಿಂದ ಎಂಬುದನ್ನು 'ಹರಿಪಾದಸಂಗೀ' ಎಂಬ ವಿಶೇಷಣ ತಿಳಿಸುತ್ತಿದೆ ಎಂದು 'ಜನಾರ್ದನೀಯ' ದಲ್ಲಿದೆ.

**ತೇನೈವ ಮಾನುಷಮವಾಪ್ಯ ರತಿಸ್ಥ ಏವ**
**ಪಂಚತ್ವಮಾಪ ರತಿವಿಘ್ನಮಪುತ್ರತಾಂ ಚ ।**
**ಸ್ವಾತ್ಮೋತ್ತಮೇಷ್ವಥ ಸುರೇಷು ವಿಶೇಷತಶ್ಚ**
**ಸ್ವಲ್ಪೋಽಪಿ ದೋಷ ಉರುತಾಮಭಿಯಾತಿ ಯಸ್ಮಾತ್ ॥೪೭॥**

ತತ್ಕಾಲ ಏವ ನೃಪತಿಃ ಸಹ ಮಾದ್ರವತ್ಯಾ
ಪುಂಸ್ಕೋಕಿಲಾಕುಲಿತಫುಲ್ಲವನಂ ದದರ್ಶ ।
ತಸ್ಮಿನ್ ವಸಂತಪವನಸ್ಪರ್ಶೇಧಿತಃ ಸ
ಕಂದರ್ಪಮಾರ್ಗಣವಶಂ ಸಹಸಾ ಜಗಾಮ ॥ ೪೫ ॥

**ಅರ್ಥ** :- **ನೃಪತಿಃ** ಪಾಂಡುರಾಜನು, **ತತ್ಕಾಲ ಏವ** ಅದೇ ಕಾಲದಲ್ಲಿ **ಮಾದ್ರವತ್ಯಾ ಸಹ** ಮಾದ್ರಿಯೊಂದಿಗೆ, **ಪುಂಸ್ಕೋಕಿಲಾಕುಲಿತಫುಲ್ಲವನಂ** = **ಪುಂಸ್ಕೋಕಿಲ** ಗಂಡು ಕೋಗಿಲೆಗಳಿಂದ, **ಆಕುಲಿತ** ತುಂಬಿದ, **ಫುಲ್ಲವನಂ** ವಿಕಸಿತ ವನವನ್ನು **ದದರ್ಶ** ಕಂಡನು, **ತಸ್ಮಿನ್** ಆ ವನದಲ್ಲಿ, **ವಸಂತಪವನ ಸ್ಪರ್ಶೇಧಿತಃ** = **ವಸಂತಪವನ** ವಸಂತ ಮಾರುತದ, **ಸ್ಪರ್ಶ** = ಸ್ಪರ್ಶದಿಂದ, ಏಧಿತಃ ಉದ್ರಿಕ್ತನಾದ, **ಸಃ** ಆ ಪಾಂಡುರಾಜನು, **ಸಹಸಾ** ಅಕಸ್ಮಾತ್ (ಕಿಂದಮಮುನಿಗಳ ಶಾಪವನ್ನು ವಿಚಾರ ಮಾಡದೇ) **ಕಂದರ್ಪಮಾರ್ಗಣ ವಶಂ ಜಗಾಮ** ಮನ್ಮಥನ ಬಾಣಕ್ಕೆ ವಶನಾದನು.

**ತಾತ್ಪರ್ಯ** :- ಅದೇ ಕಾಲದಲ್ಲಿ ಪಾಂಡುಮಹಾರಾಜ ಮಾದ್ರೀ ದೇವಿಯೊಂದಿಗೆ, ಕೋಗಿಲೆಗಳಿಂದ ತುಂಬಿದ ಪುಷ್ಪವಿಕಸಿತವಾದ ವನವನ್ನು ಕಂಡ. ಅಲ್ಲಿ ವಸಂತ ಮಾರುತಸ್ಪರ್ಶದಿಂದ ಉದ್ರಿಕ್ತನಾಗಿ, ಕಿಂದಮಮುನಿಗಳ ಶಾಪವನ್ನು ವಿಚಾರಮಾಡದೇ ಅಕಸ್ಮಾತ್ ಕಾಮನ ಬಾಣಕ್ಕೆ ತುತ್ತಾದ.

**ವಿಶೇಷ ವಿಷಯ** :- ವಾಸ್ತವಿಕವಾಗಿಯ ಅರ್ಜುನನ ಜನ್ಮ ನಕ್ಷತ್ರ 'ಫಾಲ್ಗುನೇ ಫಲ್ಗುನೋऽಭೂತ್' ಎಂಬ ವಚನದಂತೆ ಫಾಲ್ಗುನಮಾಸದಲ್ಲಿ ಬರುವದು. ಆದರೂ ಸೌರಮಾಸದ ಪ್ರಕಾರ ಫಾಲ್ಗುನ ಮಾಸದಲ್ಲಿ ವಸಂತ ಋತು ಬರಬಹುದು ಎನ್ನುತ್ತಿದೆ ಜನಾರ್ದನೀಯ.

ಜಗ್ರಾಹ ತಾಮಥ ತಯಾ ರಮಮಾಣ ಏವ
ಯಾತೋ ಯಮಸ್ಯ ಸದನಂ ಹರಿಪಾದಸಂಗೀ ।
ಪೂರ್ವಂ ಶಚೀರಮಣಮಿಚ್ಛತ ಏಷ ವಿಘ್ನಂ
ಶಕ್ರಸ್ಯ ತದ್ದರ್ಶನೋಪಗತೋ ಹಿ ಚಕ್ರೇ ॥ ೪೬ ॥

**ಅರ್ಥ** :- **ಅಥ** ಅನಂತರ, **ಹರಿಪಾದಸಂಗೀ** ಹರಿಪಾದಾಸಕ್ತನಾದ ಪಾಂಡುರಾಜನು, **ತಾಂ** ಆ ಮಾದ್ರಿಯನ್ನು **ಜಗ್ರಾಹ** (ರತಿಕ್ರೀಡೆಗಾಗಿ)

ಹಿಡಿದುಕೊಂಡನು, **ತಯಾ** ಅವಳೊಂದಿಗೆ, ರಮಮಾಣ ಏವ ಕ್ರೀಡಿಸುತ್ತಲೇ, **ಯಮಸ್ಯ** ಯಮನ, ಸದನಂ ಸ್ಥಾನವನ್ನು **ಯಾತಃ** ಹೊಂದಿದನು, **ಏಷಃ** ಈ ಪಾಂಡುವು, **ಪೂರ್ವಂ** ಹಿಂದೆ (ಪರಾವಹನಾಗಿದ್ದಾಗ), **ಶಚೀರಮಣಂ** ಶಚಿಯೊಡನೆ ರತಿಯನ್ನು **ಇಚ್ಛತಃ** ಬಯಸುತ್ತಿರುವ, **ಶಕ್ರಸ್ಯ** ಇಂದ್ರನಿಗೆ, **ತದ್ದರ್ಶನೋಪಗತಃ** ಆ ಇಂದ್ರನ ಕಣ್ಣಿಗೆ ಬಿದ್ದವನಾಗಿ, **ವಿಘ್ನಂ** ವಿಘ್ನವನ್ನು **ಹಿ** ಯಾವ ಕಾರಣದಿಂದ ಮಾಡಿದ್ದನೋ ಆ ಕಾರಣದಿಂದ ಹೆಂಡತಿಯೊಂದಿಗೆ ರಮಿಸುವಾಗಲೇ ಮರಣಹೊಂದಿದ.

**ತಾತ್ಪರ್ಯ** :- ಪಾಂಡುರಾಜ ರತಿಕ್ರೀಡೆಗಾಗಿ ಮಾದ್ರೀದೇವಿಯನ್ನು ಹಿಡಿದುಕೊಂಡ. ಅವಳೊಡನೆ ಕ್ರೀಡಿಸುತ್ತಿದ್ದಂತೇ ಹರಿಭಕ್ತನಾದ ಅವನು ಯಮಸದನವನ್ನು ಸೇರಿದ. ಹಿಂದೆ ಅವನು ಪರಾವಹ ಎಂಬ ಮರುತ್ ಆಗಿದ್ದಾಗ ಇಂದ್ರನ ದರ್ಶನ ಪಡೆಯಲು ಹೋಗಿ ಅವನಿಗೆ ವಿಘ್ನಮಾಡಿದ್ದ. ಏಕೆಂದರೆ ಆಗ ಇಂದ್ರ ಶಚಿಯೊಡನೆ ರಮಿಸಲು ಬಯಸಿದ್ದ. ಆದ್ದರಿಂದ ರತಿಕಾಲದಲ್ಲಿಯೇ ಮರಣ ಹೊಂದಿದ.

**ವಿಶೇಷ ವಿಷಯ** : ೧) ಯಮಸದನವನ್ನು ಹೊಂದಿದ ಅಂದರೆ ನರಕಭಾಗಿಯಾದ ಎಂದು ಅರ್ಥೈಸಬಾರದು. ಪುಣ್ಯವಂತರಾದ ರಾಜರೂ ಯಮಸಭೆಯಲ್ಲಿ ವಿರಾಜಮಾನರಾಗಿರುತ್ತಾರೆ. ಅವರು ಯಮಪುರಿಗೆ ದಕ್ಷಿಣದ್ವಾರವನ್ನು ಬಿಟ್ಟು ಬೇರೆ ದ್ವಾರದಿಂದ ಪ್ರವೇಶಿಸುವರು ಎಂದು ಗರುಡ ಪುರಾಣದ ಪ್ರೇತಖಂಡದಲ್ಲಿ ಹೇಳಿದೆ. ಹಾಗೇ ಪಾಂಡುವು ಯಮಸದನ ಪ್ರವೇಶಿಸಿದ ಎಂದು ತಿಳಿಯಬೇಕು.

೨) ರತಿಕಾಲದಲ್ಲಿ ಮರಣ ಹೊಂದಿದರೂ ಪುಣ್ಯವಂತರಾದ ರಾಜರು ಪಡೆಯುವ ಯಮಸದನಪ್ರಾಪ್ತಿಯು ಪಾಂಡುರಾಜನಿಗೆ ದೊರೆತದ್ದು ಹರಿಭಕ್ತನಾದ ಕಾರಣದಿಂದ ಎಂಬುದನ್ನು 'ಹರಿಪಾದಸಂಗೀ' ಎಂಬ ವಿಶೇಷಣ ತಿಳಿಸುತ್ತಿದೆ ಎಂದು 'ಜನಾರ್ದನೀಯ' ದಲ್ಲಿದೆ.

**ತೇನೈವ ಮಾನುಷಮವಾಪ್ಯ ರತಿಸ್ಥ ಏವ**
**ಪಂಚತ್ವಮಾಪ ರತಿವಿಘ್ನಮಪುತ್ರತಾಂ ಚ ।**
**ಸ್ವಾತ್ಮೋತ್ತಮೇಷ್ವಥ ಸುರೇಷು ವಿಶೇಷತಶ್ಚ**
**ಸ್ವಲ್ಪೋಽಪಿ ದೋಷ ಉರುತಾಮಭಿಯಾತಿ ಯಸ್ಮಾತ್ ॥೪೭॥**

**ಅರ್ಥ** :- **ತೇನೈವ** ಅದರಿಂದಲೇ (ರತಿಗೆ ವಿಘ್ನಮಾಡಿದ ಕಾರಣ ದಿಂದಲೇ), **ಮಾನುಷಂ** ಮನುಷ್ಯಜನ್ಮವನ್ನು **ಅವಾಪ್ಯ** ಹೊಂದಿ, **ರತಿಸ್ಥ ಏವ** ರತಿಕ್ರೀಡೆಯಲ್ಲಿರುವಾಗಲೇ, **ಪಂಚತ್ವಂ** ಮರಣವನ್ನು **ಆಪ** ಹೊಂದಿದನು. **ತೇನೈವ** ಅದರಿಂದಲೇ, **ರತಿವಿಘ್ನಂ** ರತಿಕ್ರೀಡೆಗೆ ವಿಘ್ನವನ್ನು **ಅಪುತ್ರತಾಂ ಚ** ಪುತ್ರಹೀನತೆಯನ್ನೂ (ಔರಸಪುತ್ರರಾಹಿತ್ಯವನ್ನೂ), **ಆಪ** ಹೊಂದಿದನು, **ಯಸ್ಮಾತ್** ಯಾವ ಕಾರಣದಿಂದ, **ಸ್ವಾತ್ಮೋತ್ತಮೇಷು** ಸ್ವಾತ್ಮ ತನಗಿಂತ, **ಉತ್ತಮೇಷು** ಗುಣತಃ ಉತ್ತಮರಾದವರಲ್ಲಿ, **ಸ್ವಲ್ಪೋಽಪಿ ದೋಷಃ** ಅಲ್ಪಾಪ ರಾಧವೂ, **ಉರುತಾಂ ಅಭಿಯಾತಿ** ಮದತ್ತಾಗುತ್ತದೆ, **ಅಥೋಽಪಿ** ಸ್ವೋತ್ತಮಾ ಪರಾಧದಿಂದಲೂ, **ವಿಶೇಷತಃ** ವಿಶೇಷವಾಗಿ, **ಸುರೇಷು** ಸ್ವೋತ್ತಮರಾದ ದೇವತೆಗಳಲ್ಲಿ **ಸ್ವಲ್ಪೋಽಪಿ ದೋಷಃ** ಅಲ್ಪಾಪರಾಧವೂ, **ಉರುತಾಂ ಅಭಿಯಾತಿ** ಮಹತ್ತಾಗುತ್ತದೆ, **ತಸ್ಮಾತ್** ಆದ್ದರಿಂದ ಮನುಷ್ಯ ಜನ್ಮ ಹೊಂದಿ ರತಿಕ್ರೀಡಾ ಸಮಯದಲ್ಲಿ ಮರಣ ಮುಂತಾದ ಫಲವನ್ನು ಹೊಂದಿದು ಯುಕ್ತವೇ.

**ತಾತ್ಪರ್ಯ** :- ಆದ್ದರಿಂದಲೇ ಪಾಂಡುರಾಜ ಮನುಷ್ಯನಾಗಿ ಜನಿಸಿ ರತಿಕ್ರೀಡಾ ಸಮಯದಲ್ಲಿಯೇ ಮರಣ ಹೊಂದಿದ. ಅದರಿಂದಲೇ ಅವನಿಗೆ ಕಿಂದಮಮುನಿಗಳ ಶಾಪದ ಮೂಲಕ ರತಿಕ್ರೀಡೆಗೆ ವಿಘ್ನ ಬಂದೊದಗಿತ್ತು. ಪುತ್ರ (ಔರಸ) ಭಾಗ್ಯವೂ ಇಲ್ಲವಾಗಿತ್ತು. ಏಕೆಂದರೆ ತನಗಿಂತ ಗುಣತಃ ಉತ್ತಮರಾದವರಲ್ಲಿ ಮಾಡುವ ಸಣ್ಣ ಅಪರಾಧವೂ ದೊಡ್ಡದಾಗುತ್ತದೆ. ವಿಶೇಷವಾಗಿ ಸ್ವೋತ್ತಮ ದೇವತೆಗಳಲ್ಲಿ ಮಾಡುವ ಅಪರಾಧ ಇನ್ನೂ ದೊಡ್ಡದಾಗುತ್ತದೆ.

**ವಿಶೇಷ ವಿಷಯ** :ಪಾಂಡುರಾಜ ರತಿಕಾಲದಲ್ಲಿಯೇ ಮರಣಹೊಂದಲು ಕಿಂದಮಮುನಿಗಳ ಶಾಪ ನಿಮಿತ್ತಮಾತ್ರ. ಪ್ರಬಲ ಕಾರಣ ಬೇರೆಯೇ ಇದೆ ಎನ್ನುವದು ಆಚಾರ್ಯರ ಅಭಿಪ್ರಾಯ. ಒಮ್ಮೆ ದೇವೇಂದ್ರನಿಗೆ ಪರಾವಹ ಎಂಬ ಮರುತ್ ರತಿವಿಘ್ನ ಮಾಡಿದ್ದ. ಅದು ಉದ್ದೇಶಪೂರ್ವಕವಾಗಿರದಿದ್ದರೂ ದೇವೇಂದ್ರನ ಸಂದರ್ಶನಕ್ಕೆ ಅವನು ಹೋಗಿದ್ದರಿಂದ ಆಗ ದೇವೇಂದ್ರನಿಗೆ ಶಚಿಯ ಸನಿಹ ಹೋಗಲು ಅವಕಾಶವಾಗಿರಲಿಲ್ಲ. ಇದು ಸಣ್ಣ ಅಪರಾಧ ನಿಜ. ಆದರೂ ಸ್ವೋತ್ತಮರಲ್ಲಿ ಅದರಲ್ಲೂ ದೇವತೆಗಳಲ್ಲಿ ಮಾಡುವ ಸಣ್ಣ

ಅಪರಾಧವೂ ದೊಡ್ಡದಾಗುತ್ತದೆ. ಈ ಸ್ತೋತ್ರಮಾಪರಾಧ ಕಾರಣದಿಂದಲೇ ರತಿಕಾಲದಲ್ಲಿಯೇ ಪಾಂಡುರಾಜನಿಗೆ ಮರಣವುಂಟಾಯಿತು. ಈ ಸ್ತೋತ್ತ ಮಾಪರಾಧ ಕಾರಣದಿಂದಲೇ ಕಿಂದಮಮುನಿಯ ಶಾಪ ಬಂದಾಗಿನಿಂದ ರತಿಕ್ರೀಡೆಗೆ ವಿಘ್ನ ಬಂದೊದಗಿತ್ತು. ಪುತ್ರಭಾಗ್ಯವೂ ಇಲ್ಲವಾಗಿತ್ತು. ಮುನಿಶಾಪ ಎಲ್ಲಕ್ಕೂ ನಿಮಿತ್ತಮಾತ್ರ ಎಂದು 'ವಾದಿರಾಜೀಯ' ದಲ್ಲಿದೆ.

**ಮಾದ್ರೀ ಪತಿಂ ಮೃತಮವೇಕ್ಷ್ಯರುರಾವ ದೂರಾತ್**
**ತಚ್ಛುಶ್ರುವುಶ್ಚ ಪೃಥಯಾ ಸಹ ಪಾಂಡುಪುತ್ರಾಃ ।**
**ತೇಷ್ವಾಗತೇಷು ವಚನಾದಪಿ ಮಾದ್ರವತ್ಯಾಃ**
**ಪುತ್ರಾನ್ನಿವಾರ್ಯ ತು ಪೃಥಾ ಸ್ವಯಮೇವ ಚಾಗಾತ್ ॥ ೪೮ ॥**

**ಅರ್ಥ** :- **ಮಾದ್ರೀ** ಮಾದ್ರಿಯು, **ಮೃತಂ** ಮೃತನಾದ, **ಪತಿಂ** ಪತಿಯನ್ನು **ಅವೇಕ್ಷ್ಯ** ನೋಡಿ, **ರುರಾವ** ಕೂಗಿಕೊಂಡಳು (ರೋದನ ಮಾಡಿದಳು), **ಪೃಥಯಾ ಸಹ** ಕುಂತಿಯೊಂದಿಗೆ, **ಪಾಂಡುಪುತ್ರಾಶ್ಚ** ಪಾಂಡು ಪುತ್ರರೂ ಕೂಡ, **ತತ್** ಆ ರೋದನ ಧ್ವನಿಯನ್ನು **ದೂರಾತ್** ದೂರದಿಂದ, **ಶುಶ್ರುವುಃ** ಕೇಳಿದರು, **ತೇಷು** ಆ ಪಾಂಡವರು, **ಆಗತೇಷು ಸತ್ಸು** ಬರಲಾರಂಭಿಸಿದಾಗ, **ಪೃಥಾ** ಕುಂತಿಯು, **ಸ್ವಯಂ** ತಾನು, **ಪುತ್ರಾನ್** ಮಕ್ಕಳನ್ನು **ನಿವಾರ್ಯ** (ನನಗೆ ಸಹಾಯಕರಾಗಿ ಬರಕೂಡದು ಎಂದು) ತಡೆದು, **ಮಾದ್ರವತ್ಯಾಃ** ಮಾದ್ರೀದೇವಿಯ, **ವಚನಾದಪಿ** ಮಾತಿನಿಂದಲೂ (ಮಕ್ಕಳನ್ನು ಬಿಟ್ಟು ನೀನೊಬ್ಬಳೇ ಬಾ ಎಂಬ ಮಾತಿನಿಂದಲೂ), **ಪುತ್ರಾನ್ ನಿವಾರ್ಯ** ಮಕ್ಕಳನ್ನು ತಡೆದು, **ಸ್ವಯಮೇವ** ತಾನೊಬ್ಬಳೆ, **ಆಗಾತ್** (ಶವದ ಸಮೀಪಕ್ಕೆ) ಹೋದಳು.

**ತಾತ್ಪರ್ಯ** :- ಪತಿ ಮೃತನಾದುದನ್ನು ನೋಡಿ ಗಾಬರಿಯಾಗಿ ಮಾದ್ರಿ ಹೋ ಎಂದು ಅತ್ತಳು. ಅದನ್ನು ಕುಂತಿಯೊಂದಿಗೆ ದೂರದಿಂದಲೇ ಪಾಂಡವರು ಕೇಳಿದರು. ಬರಲು ಹೊರಟರು. ಆದರೆ ನನಗೆ ಸಹಾಯಯಕ ರಾಗಿ ನನ್ನ ಜೊತೆಗೆ ಬರಕೂಡದು ಎಂದು ಕುಂತಿ ಸ್ವಯಂ ಅವರನ್ನು ತಡೆದಳು. 'ಮಕ್ಕಳನ್ನು ಬಿಟ್ಟು ನೀನೊಬ್ಬಳೇ ಬಾ' ಎಂಬ ಮಾದ್ರಿಯ ಮಾತಿ ನಿಂದಲೂ ಮಕ್ಕಳನ್ನು ತಡೆದು ಕುಂತಿ ತಾನೊಬ್ಬಳೇ ಮಾದ್ರಿಯ ಬಳಿಗೆ ಬಂದಳು.

**ಪತ್ಯುಃ ಕಲೇವರಮವೇಕ್ಷ್ಯ ನಿಶಮ್ಯ ಮಾದ್ರ್ಯಾಃ**
**ಕುಂತೀ ಭೃಶಂ ವ್ಯಥಿತಹೃತ್ಕಮಲೈವ ಮಾದ್ರೀಮ್ ।**
**ಧಿಕ್ಕೃತ್ಯ ಚಾನುಮರಣಾಯ ಮತಿಂ ಚಕಾರ**
**ತಸ್ಯಾಃ ಸ್ವನೋ ರುದಿತಜಃ ಶ್ರುತ ಆಶು ಪಾರ್ಥೈಃ ॥ ೪೯ ॥**

**ಅರ್ಥ :- ಕುಂತೀ** ಕುಂತಿಯು, **ಪತ್ಯುಃ** ಪತಿಯ, **ಕಲೇವರಂ** ಮೃತಶರೀರವನ್ನು, **ಅವೇಕ್ಷ್ಯ** ನೋಡಿ, **ಮಾದ್ರ್ಯಾ** ಮಾದ್ರಿಯಿಂದ, **ನಿಶಮ್ಯ** (ಮರಣಹೇಗಾಯಿತೆಂಬುದನ್ನು) ಕೇಳಿ, **ಭೃಶಂ** ಬಹಳ, **ವ್ಯಥಿತಹೃತ್ಕಮಲಾ** = **ವ್ಯಥಿತ** ದುಃಖ ತುಂಬಿದ, **ಹೃತ್ಕಮಲಾ** ಹೃದಯ ಕಮಲವುಳ್ಳವನಾಗಿ, **ಮಾದ್ರೀಂ** ಏವ ಮಾದ್ರಿಯನ್ನೇ, **ಧಿಕ್ಕೃತ್ಯ** ಬೈದು, **ಅನುಮರಣಾಯ** ಪತಿ ಸಹಗಮನಕ್ಕೆ, **ಮತಿಂ ಚಕಾರ** ಸಂಕಲ್ಪ ಮಾಡಿದಳು, **ತಸ್ಯಾಃ** ಆ ಕುಂತಿಯ, **ರುದಿತಜಃ ಸ್ವನಃ** ಅಳುವಿನ ಶಬ್ದ, **ಆಶು** ಕೂಡಲೆ, **ಪಾರ್ಥೈಃ** ಪಾಂಡವರಿಂದ, **ಶ್ರುತಃ** ಕೇಳಲ್ಪಟ್ಟಿತು.

**ತಾತ್ಪರ್ಯ :-** ಕುಂತಿಯು ಪತಿಯ ಮೃತಶರೀರವನ್ನು ನೋಡಿ, ಮರಣ ಹೇಗಾಯಿತೆಂಬುದನ್ನು ಮಾದ್ರಿಯಿಂದ ಕೇಳಿ, ಬಹಳ ವ್ಯಥೆ ತುಂಬಿದ ಹೃದಯ ಕಮಲವುಳ್ಳವಳಾಗಿ ಮಾದ್ರಿಗೆ ಚೆನ್ನಾಗಿ ಬಯ್ದಳು. ಬಳಿಕ ಪತಿಯೊಂದಿಗೆ ಸಹಗಮನ ಮಾಡಲು ನಿಶ್ಚಯಿಸಿದಳು. ಅವಳ ಅಳುವಿನ ಶಬ್ದ ದೂರದಲ್ಲಿದ್ದ ಪಾಂಡವರಿಗೆ ಕೇಳಿಸಿತು.

**ತೇಷ್ವಾಗತೇಷ್ವಧಿಕ ಆಸ ವಿರಾವ ಏತಂ**
**ಸರ್ವೇಽಪಿ ಶುಶ್ರುವು ಋಷಿಪ್ರವರಾ ಅಥಾತ್ರ ।**
**ಆಜಗ್ಮುರುತ್ತಮಕೃಪಾ ಋಷಿಲೋಕಮಧ್ಯೇ**
**ಪತ್ನೀ ನೃಪಾನುಗಮನಾಯ ಚ ಪಸ್ಪೃಧಾತೇ ॥ ೫೦ ॥**

**ಅರ್ಥ :- ತೇಷು ಆಗತೇಷು** ಪಾಂಡವರು ಬಂದಾಗ, **ವಿರಾವಃ** ಅಳುವಿನ ಧ್ವನಿ, **ಅಧಿಕ ಆಸ** ಮತ್ತಷ್ಟು ಹೆಚ್ಚಾಯಿತು, **ಸರ್ವೇಽಪಿ ಋಷಿಶ್ರೇಷ್ಠಾಃ** (ಅಲ್ಲಿದ್ದ) ಋಷಿಶ್ರೇಷ್ಠರೆಲ್ಲರೂ, **ಏತಂ** ಈ ಅಳುವಿನ ಶಬ್ದವನ್ನು **ಶುಶ್ರುವುಃ** ಕೇಳಿದರು, **ಅಥ** ಬಳಿಕ, **ಅತ್ರ ಋಷಿಲೋಕಮಧ್ಯೇ** ಈ ಋಷಿ ಜನರುಗಳ ನಡುವೆ, **ಉತ್ತಮಕೃಪಾಃ** ಹೆಚ್ಚು ಕೃಪಾಶಾಲಿಗಳಾದ, **ಋಷಿ ಪ್ರವರಾಃ** ಋಷಿಶ್ರೇಷ್ಠರು, **ಅತ್ರ** ಇಲ್ಲಿಗೆ, **ಆಜಗ್ಮುಃ** ಬಂದರು. **ಪತ್ನೀ**

ಪತ್ನಿಯರಾದ ಕುಂತೀ ಮಾದ್ರಿಯರು, ನೃಪಾನುಗಮನಾಯ ಪತಿಯೊಂದಿಗೆ ಸಹಗಮನಕ್ಕಾಗಿ, ಪಸ್ಪೃಧಾತೇ ಸ್ಪರ್ಧಿಸಿದರು.

**ತಾತ್ಪರ್ಯ** :- ಪಾಂಡವರು ಹತ್ತಿರ ಬಂದಾಗ ಅಳುವ ಧ್ವನಿ ಮತ್ತಷ್ಟು ಹೆಚ್ಚಿತು. ಅಲ್ಲಿದ್ದ ಋಷಿಶ್ರೇಷ್ಠರೆಲ್ಲರೂ ಅದನ್ನು ಕೇಳಿದರು. ಅವರ ನಡುವೆ ಹೆಚ್ಚು ಕೃಪಾಶಾಲಿಗಳಾದ ಋಷಿವರರು ಅಲ್ಲಿಗೆ ಆಗಮಿಸಿದರು. ಆಗ ಗಂಡನೊಂದಿಗೆ ಸಹಗಮನಕ್ಕಾಗಿ ಕುಂತಿಮಾದ್ರಿಯರಿಬ್ಬರೂ 'ನಾನು' 'ನಾನು' ಎಂಬುದಾಗಿ ಸ್ಪರ್ಧಿಸಿದರು.

**ವಿಶೇಷ ವಿಷಯ** :ಮಕ್ಕಳು ಚಿಕ್ಕವರಿರುವಾಗ ಇಬ್ಬರೂ ತಾಯಂದಿರು ಸಹಗಮನ ಮಾಡುವದು ಉಚಿತವೆನಿಸುವದಿಲ್ಲ. ಒಬ್ಬಳಿಗೆ ಮಾತ್ರ ಅವಕಾಶ. ಅದು ಯಾರಿಗೆ? ಈ ಪ್ರಶ್ನೆ ಬಂದಾಗ ಇಬ್ಬರೂ ನನಗೆ ಅವಕಾಶ ದೊರೆಯಲಿ ಎಂದು ಸ್ಪರ್ಧೆಗಿಳಿದರು ಎಂದು 'ವಾದಿರಾಜೀಯ'ದಲ್ಲಿದೆ.

**ತೇ ಸನ್ನಿವಾರ್ಯ ತು ಪೃಥಾಮಥ ಮಾದ್ರವತ್ಯಾ**
**ಭರ್ತುಃ ಸಹಾನುಗಮನಂ ಬಹುಶೋಽರ್ಥಯಂತ್ಯಾಃ ।**
**ಸಂವಾದಮೇವ ನಿಜದೋಷಮವೇಕ್ಷ್ಯ ತಸ್ಯಾ -**
**ಶ್ಚಕ್ರುಃ ಸದಾಽವಗತಭಾಗವತೋಚ್ಚಧರ್ಮಾಃ ॥ ೫೧ ॥**

**ಅರ್ಥ** :- ಸದಾ ಯಾವಾಗಲೂ, **ಅವಗತಭಾಗವತೋಚ್ಚಧರ್ಮಾಃ** = **ಅವಗತ** ತಿಳಿಯಲ್ಪಟ್ಟ **ಭಾಗವತೋಚ್ಚಧರ್ಮಾಃ** ಶ್ರೇಷ್ಠಭಾಗವತಧರ್ಮವುಳ್ಳ, **ತೇ** ಆ ಋಷಿಶ್ರೇಷ್ಠರು, **ಪೃಥಾಂ ತು** ಕುಂತಿಯನ್ನು, **ಸನ್ನಿವಾರ್ಯ** ತಡೆದು, **ಭರ್ತುಃ ಸಹಾನುಗಮನಂ** ಪತಿಯ ಜೊತೆ ಸಹಗಮನವನ್ನು, **ಬಹುಶಃ** ಬಹಳವಾಗಿ, **ಅರ್ಥಯಂತ್ಯಾಃ** ಬೇಡುತ್ತಿದ್ದ **ಮಾದ್ರವತ್ಯಾ** ಏವ ಮಾದ್ರಿಗೇ, **ನಿಜದೋಷಂ** ಅವಳ ದೋಷವನ್ನು **ಅವೇಕ್ಷ್ಯ** ನೋಡಿ, **ಸಂವಾದಂ ಚಕ್ರತುಃ** ಸಮ್ಮತಿಸಿದರು.

**ತಾತ್ಪರ್ಯ** :- ಸದಾ ಉತ್ತಮ ಭಾಗವತ ಧರ್ಮವನ್ನು ಬಲ್ಲವರು ಆ ಋಷಿಶ್ರೇಷ್ಠರು. ಅವರು ಸಹಗಮನಕ್ಕಾಗಿ ಸ್ಪರ್ಧಿಸುತ್ತಿದ್ದ ಕುಂತೀಮಾದ್ರಿಯರಲ್ಲಿ ಕುಂತಿಯನ್ನು ತಡೆದರು. ಪತಿಯೊಂದಿಗೆ ಸಹಗಮನಕ್ಕಾಗಿ ಪರಿಪರಿಯಿಂದ ಬೇಡುತ್ತಿದ್ದ ಮಾದ್ರಿಗೇ ಅವಳ ತಪ್ಪನ್ನು ಗಮನಿಸಿ ಸಮ್ಮತಿಯಿತ್ತರು.

**ಭರ್ತುರ್ಗುಣೈರನಧಿಕೌ ತನಯಾರ್ಥಮೇವ**
**ಮಾದ್ರ್ಯಾ ಕೃತೌ ಸುರವರಾವಧಿಕೌ ಸ್ವತೋಽಪಿ ।**
**ತೇನೈವ ಭರ್ತೃಮೃತಿಹೇತುರಭೂತ್ ಸಮಸ್ತ -**
**ಲೋಕೈಶ್ಚ ನಾತಿಮಹಿತಾ ಸುಗುಣಾಽಪಿ ಮಾದ್ರೀ ॥ ೫೨ ॥**

**ಅರ್ಥ** :- **ಮಾದ್ರ್ಯಾ** ಮಾದ್ರೀದೇವಿಯಿಂದ, **ತನಯಾರ್ಥಮೇವ** ಸಂತತಿಗಾಗಿಯೇ **ಕೃತೌ** ಸ್ವೀಕರಿಸಲ್ಪಟ್ಟ **ಸುರವರೌ** ದೇವಶ್ರೇಷ್ಠರಾದ ಅಶ್ವಿನಿದೇವತೆಗಳು, **ಸ್ವತಃ** ತನಗಿಂತ, **ಅಧಿಕಾವಪಿ** ಹೆಚ್ಚಿನವರಾದರೂ, **ಭರ್ತುರ್ಗುಣೈಃ** ತನ್ನ ಗಂಡನ (ಪರಾವಹನ) ಗುಣಗಳಿಗಿಂತ, **ಅನಧಿಕೌ** ಹೆಚ್ಚಿನ ಗುಣವಂತರಲ್ಲ, **ತೇನೈವ** ಆದರಿಂದಲೇ, **ಮಾದ್ರೀ** ಮಾದ್ರಿಯು, **ಭರ್ತೃಮೃತಿಹೇತುಃ** = **ಭರ್ತೃ** ಗಂಡದ, **ಮೃತಿ** ಮರಣಕ್ಕೆ, **ಹೇತುಃ** ಕಾರಣಳು, **ಅಭೂತ್** ಆದಳು, **ಚ** ಮತ್ತು, **ಸುಗುಣಾ ಅಪಿ** ಒಳ್ಳೇಗುಣವತಿಯಾದರೂ **ಸಮಸ್ತಲೋಕೈಃ** ಎಲ್ಲ ಜನರಿಂದ, **ಅತಿಮಹಿತಾ** ಅತಿಶಯವಾಗಿ ಪೂಜ್ಯಳು, **ನಾಭೂತ್** ಆಗಲಿಲ್ಲ.

**ತಾತ್ಪರ್ಯ** :- ಸಂತಾನಭಾಗ್ಯಕ್ಕಾಗಿ ಮಾದ್ರೀದೇವಿ ಅಶ್ವಿನೀದೇವತೆಗಳನ್ನು ಕರೆದಿದ್ದಳು. ಅವರು ಅವಳಿಗಿಂತ ಹೆಚ್ಚಿನವರಾಗಿದ್ದರೂ ಅವಳ ಗಂಡನಾದ ಪರಾವಹನ ಗುಣಗಳಿಗಿಂತ ಹೆಚ್ಚಿನವರಲ್ಲ. ಆದರಿಂದಲೇ ಅವಳು ಗಂಡನ ಮರಣಕ್ಕೆ ಕಾರಣಳಾದಳು. ಒಳ್ಳೇ ಗುಣವತಿಯಾಗಿದ್ದರೂ ಜನರಿಗೆ ಹೆಚ್ಚು ಪೂಜ್ಯಳೆನಿಸಲಿಲ್ಲ.

**ವಿಶೇಷ ವಿಷಯ** :- 'ವಾದಿರಾಜೀಯ' ಹೇಳುವಂತೆ 'ವಿಷ್ವಕ್ ಸೇನೋಽಶ್ವಿನೌ ತೌ ಗಣಪತಿಧನಪಾವುಕ್ತಶೇಷಾಃ ಶತಸ್ಥಾ ದೇವಾಶ್ಚೋಕ್ತೇತರಾಯೇ' ಎಂಬಲ್ಲಿ ಚಶಬ್ದವಿರುವದರಿಂದ ಶೇಷಶತಸ್ಥದೇವತೆಗಳಲ್ಲಿ ಒಬ್ಬನಾದ ಪರಾವಹಮರುತ್ತಿನ ಕಕ್ಷೆಯಲ್ಲಿಯೇ ಅಶ್ವಿನೀದೇವತೆಗಳು ಬರುತ್ತಾರೆ. ಆದ್ದರಿಂದ ಅಶ್ವಿನೀದೇವತೆಗಳು ಪಾಂಡುವಿಗಿಂತ ಅಧಿಕರಲ್ಲ. ಈ ಅಭಿಪ್ರಾಯದಿಂದ 'ಭರ್ತುರ್ಗುಣೈರನಧಿಕೌ' ಎನ್ನಲಾಗಿದೆ.

ಆದರೆ 'ಜನಾರ್ದನೀಯ'ದಲ್ಲಿ ಹೀಗೆ ಹೇಳಲಾಗಿದೆ. ದೇವಾದಿಷ್ವೇವ ಸರ್ವೇಷು ಪ್ರೋಕ್ತಾ ಅಪಿ ವಿಶೇಷಿಣಾಮ್ । ಪಂಚಾಂಶತೋ ದಶಾಂಶಾದ್

ವಾ ಸ್ವಸ್ವಜಾತ್ಯಾಂ ಪರಸ್ಪರಮ್ ॥ (ಬೃ.ಭಾ. ೩-೫ ಅವ್ಯಾಕೃತಬ್ರಾಹ್ಮಣ) ಎಂಬ ಪ್ರಮಾಣವಚನದಂತೆ ಒಂದೇ ಕಕ್ಷೆಯಲ್ಲಿದ್ದರೂ ಅವರಲ್ಲಿ ಪರಸ್ಪರ ಅವಾಂತರತಾರತಮ್ಯವಿರುತ್ತದೆ. ಈ ತಾರತಮ್ಯದ ಪ್ರಕಾರ ಪರಾವಹ ಮರುತ್ತಿಗಿಂತಲೂ ಅಶ್ವಿನೀದೇವತೆಗಳು ಕೆಳಗಿನವರು. ಹೀಗೆ ಕಕ್ಷ್ಯಾತಾರತಮ್ಯ ದಲ್ಲಿ ಸಮಾನರೂ ಹೌದು. ಅವಾಂತರ ತಾರತಮ್ಯದಲ್ಲಿ ಕೆಳಗಿನವರೂ ಹೌದು. ಈ ಹಿನ್ನೆಲೆಯಲ್ಲಿ 'ಸಮೌ ನೀಚೌ' ಎಂಬ ಶಬ್ದಗಳನ್ನು ಬಳಸದೇ 'ಅನಧಿಕೌ' ಎಂಬ ಸಾಧಾರಣಶಬ್ದವನ್ನು ಆಚಾರ್ಯರು ಪ್ರಯೋಗಿಸಿದ್ದಾರೆ.

**ಪಾಂಡೋಃ ಸುತಾ ಮುನಿಗಣೈಃ ಪಿತೃಮೇಧಮತ್ರ**
**ಚಕ್ರುರ್ಯಥಾವದಥ ತೇನ ಸಹೈವ ಮಾದ್ರೀ ।**
**ಹುತ್ವಾಽಽತ್ಮದೇಹಮುರುಪಾಪಮದಃ ಕೃತಂ ಚ**
**ಸಂಮಾರ್ಜ್ಯ ಲೋಕಮಗಮನ್ನಿಜಭರ್ತುರೇವ ॥ ೫೩ ॥**

**ಅರ್ಥ :- ಪಾಂಡೋಃ ಸುತಾಃ** ಪಾಂಡುವಿನ ಮಕ್ಕಳಾದ ಪಾಂಡವರು, **ಅತ್ರ** ಈ ವ್ಯಾಸಾಶ್ರಮದಲ್ಲಿ, **ಮುನಿಗಣೈಃ** ಸಹ ಮುನಿಸಮೂಹಗಳೊಂದಿಗೆ (ಅವರ ಸಹಾಯದಿಂದ), **ಪಿತೃಮೇಧಂ** ದೇಹದಾಹ ಮುಂತಾದ ಪಿತೃಯಜ್ಞ ವನ್ನು **ಯಥಾವತ್** ವಿಧ್ಯುಕ್ತವಾಗಿ, **ಚಕ್ರುಃ** ಮಾಡಿದರು, **ಅಥ** ತರುವಾಯ, **ಮಾದ್ರೀ** ಮಾದ್ರಿಯು, **ತೇನ ಸಹೈವ** ತನ್ನ ಪತಿಯ ಶರೀರದೊಂದಿಗೇ, **ಆತ್ಮದೇಹಂ** ತನ್ನ ಶರೀರವನ್ನು **ಹುತ್ವಾ** ಚಿತಾಗ್ನಿಯಲ್ಲಿ ಹೋಮಿಸಿಕೊಂಡು, **ಅದಃ** ಈ ಜನ್ಮದಲ್ಲಿ **ಕೃತಂ** ಮಾಡಲ್ಪಟ್ಟ **ಉರು** ಬಹಳವಾದ (ಅಲ್ಪಪ್ರಾಯಶ್ಚಿತ್ತದಿಂದ ಪರಿಹರಿಸಲಾಗದ), **ಪಾಪಂ** 'ಪತಿಮರಣಹೇತು' ಎಂಬ ಪಾಪವನ್ನು **ಸಂಮಾರ್ಜ್ಯ** ಪರಿಹರಿಸಿಕೊಂಡು, **ನಿಜಭರ್ತುರೇವ ಲೋಕಂ** ತನ್ನ ಗಂಡನ ಲೋಕವನ್ನೇ, **ಅಗಮತ್** ಸೇರಿದಳು.

**ತಾತ್ಪರ್ಯ :-** ಪಾಂಡವರು ಬದರಿಕಾಶ್ರಮದಲ್ಲಿ ಮುನಿಗಣಗಳ ಸಹಾಯದಿಂದ ದೇಹದಾಹಾದಿ ಪಿತೃಯಜ್ಞವನ್ನು ಶಾಸ್ತ್ರೋಕ್ತವಾಗಿ ನೆರವೇರಿಸಿ ದರು. ಬಳಿಕ ಮಾದ್ರಿ ಪತಿಯ ಶರೀರದೊಂದಿಗೇ ತನ್ನ ಶರೀರವನ್ನು ಹೋಮಿಸಿ ಕೊಂಡು ಈ ಜನ್ಮದಲ್ಲಿ ಅಶ್ವಿನೀದೇವತೆಗಳ ಸಂಬಂಧ, ಅದರಿಂದುಂಟಾದ ಪತಿಮರಣಕ್ಕೆ ಕಾರಣವಾಗುವಿಕೆಯೆಂಬ ಪಾಪವನ್ನು ಪರಿಹರಿಸಿಕೊಂಡು ತನ್ನ ಪತಿಯ ಲೋಕವನ್ನು ಸೇರಿದಳು.

**ಪಾಂಡುಶ್ಚ ಪುತ್ರಕಗುಣೈಃ ಸ್ವಗುಣೈಶ್ಚ ಸಾಕ್ಷಾತ್**
**ಕೃಷ್ಣಾತ್ಮಜಃ ಸತತಮಸ್ಯ ಪದೈಕಭಕ್ತಃ ।**
**ಲೋಕಾನವಾಪ ವಿಮಲಾನ್ ಮಹಿತಾನ್ ಮಹದ್ಭಿಃ**
**ಕಿಂ ಚಿತ್ರಮತ್ರ ಹರಿಪಾದವಿನಮ್ರಚಿತ್ತೇ ॥ ೫೪ ॥**

**ಅರ್ಥ :- ಸಾಕ್ಷಾತ್ ಕೃಷ್ಣಾತ್ಮಜಃ** ಸಾಕ್ಷಾತ್ ವ್ಯಾಸರ ಔರಸಪುತ್ರನಾದ, **ಸತತಂ** ಯಾವಾಗಲೂ, **ಅಸ್ಯ** ಈ ವ್ಯಾಸರ, **ಪದೈಕಭಕ್ತಃ** ಪಾದಗಳಲ್ಲಿಯೇ ಮುಖ್ಯಭಕ್ತಿಯುಳ್ಳ, **ಪಾಂಡುಃ** ಪಾಂಡುರಾಜನು, **ಸ್ವಗುಣೈಃ** ತನ್ನ ಗುಣಗಳಿಂದ, **ಚ** ಮತ್ತು, **ಪುತ್ರಕಗುಣೈಃ** ಮಕ್ಕಳ ಗುಣಗಳಿಂದ, **ಮಹದ್ಭಿಃ** ಮಹಾತ್ಮರಿಂದ, **ಮಹಿತಾನ್** ಪೂಜಿತವಾದ, **ವಿಮಲಾನ್** ಪವಿತ್ರವಾದ, **ಲೋಕಾನ್** ಲೋಕಗಳನ್ನು **ಅವಾಪ** ಹೊಂದಿದನು, **ಹರಿಪಾದವಿನಮ್ರಚಿತ್ತೇ** = **ಹರಿಪಾದ** ಭಗವಂತನ ಪಾದಗಳಲ್ಲಿ **ವಿನಮ್ರ** ವಿನಮ್ರವಾದ, **ಚಿತ್ತೇ** ಮನಸ್ಸುಳ್ಳ, **ಅತ್ರ** ಈ ಪಾಂಡುವಿನ ವಿಷಯದಲ್ಲಿ **ಚಿತ್ರಂ ಕಿಂ** ? ಅವನಿಗೆ ಉತ್ತಮಲೋಕ ಪ್ರಾಪ್ತಿಯಾಯಿತೆಂಬುದು ಆಶ್ಚರ್ಯವೇನು? ಖಂಡಿತ ಆಶ್ಚರ್ಯವಲ್ಲ ಎಂದು ಭಾವ.

**ತಾತ್ಪರ್ಯ :-** ಪಾಂಡುರಾಜ ಸಾಕ್ಷಾತ್ ವ್ಯಾಸರ ಔರಸಪುತ್ರ. ಯಾವಾಗಲೂ ಅವರ ಪಾದಗಳಲ್ಲಿಯೇ ಮುಖ್ಯಭಕ್ತಿವುಳ್ಳವ. ಅಂತಹವನು ಮಕ್ಕಳ ಸದ್ಗುಣಗಳಿಂದ ಹಾಗೂ ತನ್ನ ಸದ್ಗುಣಗಳಿಂದಲೂ ಮಹಾತ್ಮರು ಪೂಜಿಸುವ ನಿರ್ಮಲ ಲೋಕಗಳನ್ನೇ ಗಳಿಸಿದ. ಹರಿಪಾದಗಳಲ್ಲಿಯೇ ವಿನಮ್ರ ಚಿತ್ತನಾದ ಪಾಂಡುರಾಜನಿಗೆ ಉತ್ತಮ ಲೋಕ ದೊರೆತರೆ ಆಶ್ಚರ್ಯ ಪಡುವದೇನಿದೆ?

**ಪಾಂಡೋಃ ಸುತಾಶ್ಚ ಪೃಥಯಾ ಸಹಿತಾ ಮುನೀಂದ್ರೈಃ**
**ನಾರಾಯಣಾಶ್ರಮತ ಆಶು ಪುರಂ ಸ್ವಕೀಯಮ್ ।**
**ಜಗ್ಮುಸ್ತಥೈವ ಧೃತರಾಷ್ಟ್ರಪುರೋ ಮುನೀಂದ್ರಾಃ**
**ವೃತ್ತಂ ಸಮಸ್ತಮವದನ್ ಅನುಜಂ ಮೃತಂ ಚ ॥ ೫೫ ॥**

**ಅರ್ಥ :- ಪಾಂಡೋಃ ಸುತಾಃ** ಪಾಂಡವರು, **ಪೃಥಯಾ** ಕುಂತಿಯಿಂದ, **ಮುನೀಂದ್ರೈಶ್ಚ** ಮುನಿಶ್ರೇಷ್ಠರಿಂದಲೂ, **ಸಹಿತಾಃ** ಕೂಡಿಕೊಂಡು,

**ನಾರಾಯಣಾಶ್ರಮತಃ** ಬದರಿಕಾಶ್ರಮದಿಂದ, **ಆಶು** ಬೇಗನೆ, **ಸ್ವಕೀಯಂ** ತಮ್ಮ **ಪುರೀಂ ಜಗ್ಮುಃ** ಹಸ್ತಿನಾವತಿಗೆ ಹೋದರು, **ಮುನೀಂದ್ರಾಃ** ಮುನಿಶ್ರೇಷ್ಠರು, **ಧೃತರಾಷ್ಟ್ರಪುರಃ** ಧೃತರಾಷ್ಟ್ರನ ಮುಂದೆ, **ಸಮಸ್ತಂ ವೃತ್ತಂ** ನಡೆದುದೆಲ್ಲವನ್ನು **ತಥೈವ** ಹೇಗೆ ನಡೆದಿತ್ತೋ ಹಾಗೆಯೇ, **ಅವದನ್** ಹೇಳಿದರು, **ಮೃತಂ ಅನುಜಂ ಚ** ತಮ್ಮನಾದ ಪಾಂಡು ಮೃತನಾದುದನ್ನೂ **ಅವದನ್** ಅರುಹಿದರು.

**ತಾತ್ಪರ್ಯ :-** ಪಾಂಡವರು ಕುಂತೀಸಮೇತರಾಗಿ ಮುನಿಶ್ರೇಷ್ಠರಿಂದಲೂ ಕೂಡಿಕೊಂಡು ಬದರೀಕಾಶ್ರಮದಿಂದ ತಮ್ಮ ಹಸ್ತಿನಾವತೀನಗರಕ್ಕೆ ಹೋದರು. ಅಲ್ಲಿ ಧೃತರಾಷ್ಟ್ರನ ಮುಂದೆ ಮುನಿಶ್ರೇಷ್ಠರು ನಡೆದುದೆಲ್ಲವನ್ನೂ ಯಥಾವತ್ತಾಗಿ ತಿಳಿಸಿದರು. ತಮ್ಮನಾದ ಪಾಂಡುವಿನ ಮರಣವಾರ್ತೆಯನ್ನು ಅರುಹಿದರು.

**ತೂಷ್ಣೀಂ ಸ್ಥಿತೇ ಚ ನೃಪತೌ ತನುಜೇ ಚ ನದ್ಯಾಃ**
**ಕ್ಷತ್ತರ್ಯುತಾಪ್ತ ಉರುಮೋದಮತೀವ ಪಾಪಾಃ ।**
**ಊಚುಃ ಸುಯೋಧನಮುಖಾಃ ಸಹ ಸೌಬಲೇನ**
**ಪಾಂಡೋರ್ಮೃತಿಃ ಕಿಲ ಪುರಾ ತನಯಾಃ ಕ್ವ ತಸ್ಯ ॥ ೫೬ ॥**

**ಅರ್ಥ :- ನೃಪತೌ** ಧೃತರಾಷ್ಟ್ರನು, **ನದ್ಯಾಃ ತನುಜೇ ಚ** ಗಂಗಾಪುತ್ರನಾದ ಭೀಷ್ಮನೂ **ತೂಷ್ಣೀಂ ಸ್ಥಿತೇ** ಸತಿ ಸುಮ್ಮನಿರಲು, **ಕ್ಷತ್ತರಿ** ವಿದುರನು, **ಉರುಮೋದಂ** ಬಹಳ ಸಂತೋಷವನ್ನು, **ಆಪ್ತೇ** ಸತಿ ಹೊಂದುತ್ತಿರಲು, **ಅತೀವಪಾಪಾಃ** ಅತ್ಯಂತ ಪಾಪಿಷ್ಠರಾದ, **ಸುಯೋಧನಮುಖಾಃ** ದುರ್ಯೋಧನ ಮೊದಲಾದವರು, **ಸೌಬಲೇನ ಸಹ** ಶಕುನಿಯೊಂದಿಗೆ, **ಊಚುಃ** ಹೇಳಿದರು, **ಪಾಂಡೋಃ** ಪಾಂಡುರಾಜನ, **ಮೃತಿಃ** ಮರಣವು, **ಪುರಾ ಕಿಲ** ಪುತ್ರೋತ್ಪತ್ತಿಗಿಂತ ಮುಂಚೆಯಷ್ಟೆ **ತಸ್ಯ** ಅವನಿಗೆ, **ತನಯಾಃ ಕ್ವ** ಮಕ್ಕಳೆಲ್ಲಿ?

**ವಿಶೇಷ ವಿಷಯ :-** ಧೃತರಾಷ್ಟ್ರ ಭೀಷ್ಮರೇಕೆ ಸುಮ್ಮನಿದ್ದರು? ಏಕೆ ವಿದುರ ಬಹಳ ಸಂತೋಷಪಟ್ಟ? ಧೃತರಾಷ್ಟ್ರಭೀಷ್ಮರಿಗೆ ಪಾಂಡುವಿನ ವಿಯೋಗ ಸಹಿಸಲಸಾಧ್ಯವಾಗಿತ್ತು. ಆದ್ದರಿಂದ ದುಃಖದಿಂದ ಸುಮ್ಮನಿದ್ದರು.

ವಿದುರ ಆ ದುಃಖವನ್ನು ನುಂಗಿಕೊಂಡು ಸಜ್ಜನರಾದ ಪಾಂಡವರ ಸಂಗವಾಯಿತೆಂದು ಸಂತಸಪಟ್ಟ. ಅಥವಾ ಧೃತರಾಷ್ಟ್ರ ಭೀಷ್ಮರು ಸುಮ್ಮನಿದ್ದ ರೆಂದರೆ ಪಾಂಡವರು ಪಾಂಡುವಿನ ಮಕ್ಕಳು ಎಂಬ ವಿಷಯದಲ್ಲಿ ಯಾವುದೇ ತಗಾದೆ ತೆಗೆಯಲಿಲ್ಲ, ಸುಮ್ಮನಿದ್ದರು ಎಂದರ್ಥ. ಇದರಿಂದ ವಿದುರನಿಗೆ ಒಂದು ಚಿಂತೆ ದೂರವಾಯಿತು. ಒಂದು ವೇಳೆ ಧೃತರಾಷ್ಟ್ರ ಭೀಷ್ಮರು ಪಾಂಡವರನ್ನು ಪಾಂಡುಪುತ್ರರೆಂದು ಒಪ್ಪಿಕೊಳ್ಳದಿದ್ದರೆ ಏನು ಮಾಡುವದು? ಎಂದು ಆತ ಚಿಂತಿಸುತ್ತಿದ್ದ. ಅವರು ಮೌನವಾಗಿದ್ದರಿಂದ 'ಮೌನಂ ಸಂಮತಿಲಕ್ಷಣಂ' ಎಂಬಂತೆ ಪಾಂಡವರನ್ನು ಸ್ವೀಕಾರಾರ್ಹರೆಂದು ಹೇಳಿದಂತಾಯಿತು. ಪಾಂಡು ಮೃತನಾಗಿ ಇಂದಿಗೆ ೧೭ ದಿನಗಳಾದವು ಎಂದು ಬದರಿಕಾಶ್ರಮ ವಾಸಿಗಳಾದ ಮುನಿಗಳು ಹೇಳಿದರೂ ದುರ್ಯೋಧನಾದಿಗಳು ಕುಹಕದಿಂದ ನುಡಿಯುತ್ತಾರೆ. ನೀವು ಹೇಳುವದು ಸುಳ್ಳು. ಪಾಂಡು ಎಂದೋ ಸತ್ತಿದ್ದಾನೆ. ಬಳಿಕ ಕುಂತಿ ವ್ಯಭಿಚಾರದಿಂದ ಈ ಮಕ್ಕಳನ್ನು ಪಡೆದಿದ್ದಾಳೆ ಆದ್ದರಿಂದ ಇವರಿಗೆ ರಾಜ್ಯಾಧಿಕಾರವಿಲ್ಲ ಎಂದು.

> ನ ಕ್ಷೇತ್ರಜಾಅಪಿ ಮೃತೇ ಪಿತರಿ ಸ್ವಕೀಯೈಃ
> ಸಮ್ಯಙ್ ನಿಯೋಗಮನವಾಪ್ಯ ಭವಾಯ ಯೋಗ್ಯಾಃ ।
> ತೇಷಾಮಿತೀರಿತವಚೋಽನು ಜಗಾದ ವಾಯು-
> ರಾಭಾಷ್ಯ ಕೌರವಗಣಾನ್ ಗಗನಸ್ಥ ಏವ ॥ ೫೭ ॥

**ಅರ್ಥ** :- **ಪಿತರಿ** ತಂದೆಯು, **ಮೃತೇ ಸತಿ** ಸತ್ತ ಬಳಿಕ ತಾಯಿಯು, **ಸ್ವಕೀಯೈಃ** ಬಂಧುಗಳಿಂದ, **ಸಮ್ಯಕ್** ಚೆನ್ನಾಗಿ ಅಂದರೆ ಪ್ರೀತಿಪೂರ್ವಕವಾಗಿ, **ನಿಯೋಗಂ ಅನವಾಪ್ಯ** ಆಜ್ಞೆಯನ್ನು ಪಡೆಯದೆ, **ಯೇ** ಯಾರು, **ಭವಾಯ ಯೋಗ್ಯಾಃ** ಹುಟ್ಟಲು ಅರ್ಹರಾಗಿರುವರೋ, **ತೇ** ಅವರು, **ಕ್ಷೇತ್ರಜಾ ಅಪಿ ನ** ಕ್ಷೇತ್ರಜಪುತ್ರರೂ ಆಗುವದಿಲ್ಲ, ಆದ್ದರಿಂದ ಪಾಂಡವರು ಕ್ಷೇತ್ರಜಪುತ್ರರೂ ಅಲ್ಲ ಎಂಬುದಾಗಿ ದುರ್ಯೋಧನಾದಗಳು ಹೇಳಿದರು, **ತೇಷಾಂ** ಕೌರವರ, **ಇತಿ** ಈ ರೀತಿಯಾದ, **ವಚೋಽನು ಏವ** ವಚನಾನಂತರವೇ (ದುರ್ಯೋಧನಾದಿ ಗಳು ಈ ರೀತಿಯ ಮಾತನ್ನು ಹೇಳಿದೊಡನೆಯೇ), **ಗಗನಸ್ಥಃ** ಆಕಾಶದಲ್ಲಿದ್ದು ಕೊಂಡು, **ವಾಯುಃ** ವಾಯುವು, **ಕೌರವಗಣಾನ್** ಕೌರವಸಮೂಹಗಳನ್ನು, **ಆ ಭಾಷ್ಯ** ಕರೆದು, **ಜಗಾದ** ಹೇಳಿದನು.

**ತಾತ್ಪರ್ಯ** :- ತಂದೆ ಸತ್ತ ಬಳಿಕ ತಾಯಿ ಬಾಂಧವರಿಂದ ಸರಿಯಾಗಿ ಆಜ್ಞೆ ಪಡೆಯದೆ ಇದ್ದಾಗ ಹುಟ್ಟುವ ಮಕ್ಕಳು ಕ್ಷೇತ್ರಜಪುತ್ರರೂ ಆಗಲಾರರು ಎಂದರು ಸುಯೋಧನಾದಿಗಳು. ಅವರು ಈ ಮಾತನ್ನು ಹೇಳಿದೊಡನೆಯೇ ವಾಯುದೇವ ಆಕಾಶದಲ್ಲಿದ್ದುಕೊಂಡು ಕೌರವಗಣಗಳನ್ನು ಕರೆದು ಹೇಳಿದ.

**ವಿಶೇಷ ವಿಷಯ** :- ಪಾಂಡು ಮೃತನಾದ ಬಳಿಕ ಹುಟ್ಟಿದ್ದರಿಂದ ಇವರು ಔರಸಪುತ್ರರೆನ್ನಲು ಸಾಧ್ಯವಿಲ್ಲ. ತಾಯಿ ಬಂಧುಗಳಿಂದ ಅಧಿಕೃತವಾಗಿ ಆಜ್ಞೆಯನ್ನು ಪಡೆಯದೇ ವ್ಯಭಿಚಾರದಿಂದ ಮಕ್ಕಳನ್ನು ಪಡೆದರೆ ಅವರು ಕ್ಷೇತ್ರಜಪುತ್ರರೂ ಆಗಲಾರರು. ಆದ್ದರಿಂದ ಇವರು ಪಾಂಡುಪುತ್ರರೇ ಅಲ್ಲ ಎಂದು ದುರ್ಯೋಧನಾದಿಗಳ ವಾದ. ಅವರು ಹೀಗೆ ವಾದಿಸುತ್ತಿದ್ದಂತೆ ಆಕಾಶದಲ್ಲಿ ಅಶರೀರವಾಣಿಯಾಯಿತು. ಅಶರೀರ ಎಂದರೆ ಶರೀರಾಭಿಮಾನ ವಿಲ್ಲದ ವಾಯು. ಅವನೇ ಆಕಾಶದಲ್ಲಿ ಅದೃಶ್ಯನಾಗಿ ನಿಂತು ನುಡಿದ.

**ಏತೇ ಹಿ ಧರ್ಮಮರುದಿಂದ್ರಭಿಷಗ್‌ವರೇಭ್ಯೋ**
**ಜಾತಾಃ ಪ್ರಜೀವತಿ ಪಿತರ್ಯುರುಧರ್ಮಸಾರಾಃ ।**
**ಶಕ್ಯಾಶ್ಚ ನೈವ ಭವತಾಂ ಕ್ವಚಿದಗ್ರಹಾಯ**
**ನಾರಾಯಣೇನ ಸತತಂ ಪರಿರಕ್ಷಿತಾಯತ್ ॥ ೫೮ ॥**

**ಅರ್ಥ** :- **ಉರುಧರ್ಮಸಾರಾಃ** = **ಉರುಧರ್ಮ** ಉತ್ಕೃಷ್ಟನಾದ ಭಗವಂತನಿಗೆ ಪ್ರೀತಿಕರವಾದ ಧರ್ಮವುಳ್ಳ (ಮಹಾಧರ್ಮಿಷ್ಠರಾದ) ಆದ್ದರಿಂದಲೇ, **ಸಾರಾಃ** ಶ್ರೇಷ್ಠರಾದ **ಏತೇ** ಪಾಂಡವರು, **ಪಿತರಿ** ತಂದೆಯು, **ಪ್ರಜೀವತಿ** ಚೆನ್ನಾಗಿ ಬದುಕಿದ್ದಾಗಲೇ, **ಧರ್ಮಮರುದಿಂದ್ರಭಿಷಗ್‌ವರೇಭ್ಯಃ** = **ಧರ್ಮ** ಯಮಧರ್ಮರಾಜನು, **ವಾಯು** ಮುಖ್ಯವಾಯು, **ಇಂದ್ರ** ದೇವೇಂದ್ರ, **ಭಿಷಗ್‌ವರೇಭ್ಯಃ** ಅಶ್ವಿನೀದೇವತೆಗಳಿಂದ, **ಜಾತಾಃ** ಹುಟ್ಟಿದ್ದಾರೆ, **ಭವತಾಂ ಅಗ್ರಹಾಯ** ನಿಮಗೆ ಪರಿತ್ಯಾಗಮಾಡಲಿಕ್ಕೆ, **ಕ್ವಚಿತ್ ನೈವ ಶಕ್ಯಾಃ** ಯಾವುದೇ ದೃಷ್ಟಿಯಿಂದಲೂ ಶಕ್ಯರಲ್ಲ, **ಯತ್** ಯಾವಕಾರಣದಿಂದ, **ನಾರಾಯಣೇನ** ನಿಮ್ಮ ಪಿತಾಮಹರಾದ ವೇದವ್ಯಾಸರಿಂದ, **ಸತತಂ** ಯಾವಾಗಲೂ (ಮೂಲರೂಪದಲ್ಲಿ ಅವತಾರದಲ್ಲಿ ಮುಕ್ತಿಯಲ್ಲಿಯೂ) **ಪರಿರಕ್ಷಿತಾಃ** ರಕ್ಷಿಸಲ್ಪಟ್ಟಿರುವರೋ ಆದ್ದರಿಂದ ಪರಿತ್ಯಾಗಕ್ಕೆ ಅರ್ಹರಲ್ಲ.

**ತಾತ್ಪರ್ಯ** :- ಪಾಂಡವರು ತಮ್ಮ ತಂದೆ ಚೆನ್ನಾಗಿ ಬದುಕಿದ್ದಾಗಲೇ, ಯಮಧರ್ಮ, ವಾಯು, ದೇವೇಂದ್ರ ಅಶ್ವಿನೀದೇವತೆಗಳಿಗೆ ಹುಟ್ಟಿದವರು. ಮಹಾಧಾರ್ಮಿಕರು, ಉತ್ತಮರು, ಯಾವುದೇ ರೀತಿಯಿಂದಲೂ ಇವರು ನಿಮಗೆ ಪರಿತ್ಯಾಗಕ್ಕೆ ಅರ್ಹರಲ್ಲ. ಏಕೆಂದರೆ ವೇದವ್ಯಾಸರಿಂದ ಯಾವಾಗಲೂ ರಕ್ಷಿತರಾಗಿದ್ದಾರೆ.

**ವಿಶೇಷ ವಿಷಯ** :'ತಂದೆ ಚೆನ್ನಾಗಿ ಬದುಕಿದ್ದಾಗ' ಎಂದರೆ ಉನ್ಮಾದ ಮೂರ್ಛಾದಿ ಅವಸ್ಥೆಯಲ್ಲಿಲ್ಲದೇ ಆರೋಗ್ಯದಿಂದಿದ್ದು ತಮ್ಮ ಭಾರ್ಯೆಯರಿಗೆ ನಿಯೋಗಕ್ಕೆ ಆಜ್ಞೆ ನೀಡುವ ಸ್ಥಿತಿಯಲ್ಲಿದ್ದ ಪಾಂಡು ಎಂದು ಅಭಿಪ್ರಾಯ. ಆದ್ದರಿಂದ ಅವನ ಆಜ್ಞೆಯಿಂದ ಕುಂತೀ ಮಾದ್ರಿಯರು ಮಕ್ಕಳನ್ನು ಪಡೆದಿರುವದರಿಂದ ಪಾಂಡವರು ಕ್ಷೇತ್ರಜರೆನಿಸಲು ಯಾವುದೇ ತೊಂದರೆ ಇಲ್ಲ.

**ವಾಯೋರದೃಶ್ಯವಚನಂ ಪರಿಶಂಕಮಾನೇ -**
**ಷ್ವಾವಿರ್ಬಭೂವ ಭಗವಾನ್ ಸ್ವಯಮಬ್ಜನಾಭಃ ।**
**ವ್ಯಾಸಸ್ವರೂಪ ಉರುಸರ್ವಗುಣೈಕದೇಹ**
**ಆದಾಯ ತಾನಗಮದಾಶು ಚ ಪಾಂಡುಗೇಹಮ್ ॥ ೫೯ ॥**

**ಅರ್ಥ** :- **ವಾಯೋಃ** ವಾಯುವಿನ, **ಅದೃಶ್ಯವಚನಂ** ಅದೃಶ್ಯವಾಣಿಯನ್ನು ದುರ್ಯೋಧನಾದಿಗಳು, **ಪರಿಶಂಕಮಾನೇಷು** ಸತ್ಸು ಶಂಕಿಸುತ್ತಿರಲು, **ವ್ಯಾಸಸ್ವರೂಪಃ** ವ್ಯಾಸರೂಪಿ, **ಭಗವಾನ್ ಪದ್ಮನಾಭಃ** ಭಗವಾನ್ ಪದ್ಮನಾಭನು, **ಸ್ವಯಂ** ತಾನಾಗಿ, **ಆವಿರ್ಬಭೂವ** ಪ್ರಕಟನಾದನು. **ಚ** ಮತ್ತು, **ಉರುಸರ್ವಗುಣೈಕದೇಹಃ** ಪೂರ್ಣ ಸರ್ವಗುಣಾತ್ಮಕ ಶರೀರವುಳ್ಳ ಆ ಹರಿ, **ತಾನ್ ಆದಾಯ** ಆ ಪಾಂಡವರನ್ನು ಕರೆದುಕೊಂಡು, **ಆಶು** ಬೇಗನೆ, **ಪಾಂಡು ಗೇಹಂ** ಪಾಂಡುವಿನ ಅರಮನೆಯನ್ನು **ಅವಿಶತ್** ಪ್ರವೇಶಿಸಿದನು.

**ತಾತ್ಪರ್ಯ** :- ವಾಯುವಿನ ಅದೃಶ್ಯವಾಣಿಯನ್ನು ದುರ್ಯೋಧನಾದಿಗಳು ನಂಬದಿದ್ದಾಗ ಆಗ ಭಗವಾನ್ ವ್ಯಾಸರೂಪಿ ಪದ್ಮನಾಭನೇ ಸಾಕ್ಷಾತ್ತಾಗಿ ಕಾಣಿಸಿಕೊಂಡ. ಪೂರ್ಣಸರ್ವಗುಣಾತ್ಮಕ ಶರೀರವುಳ್ಳ ಆ ಭಗವಂತ ಪಾಂಡವರನ್ನು ಕರೆದುಕೊಂಡು ಬೇಗನೆ ಪಾಂಡುವಿನ ಅರಮನೆಯನ್ನು ಪ್ರವೇಶಿಸಿದ.

ತತ್ಸ್ವೀಕೃತೇಷು ಸಕಲಾ ಅಪಿ ಭೀಷ್ಮಮುಖ್ಯಾ
ವೈಚಿತ್ರ್ಯವೀರ್ಯಸಹಿತಾಃ ಪರಿಪೂಜ್ಯ ಸರ್ವಾನ್ ।
ಕುಂತ್ಯಾ ಸಹೈವ ಜಗೃಹುಃ ಸುಭೃಶಂ ತದಾರ್ತಾ
ವೈಚಿತ್ರ್ಯವೀರ್ಯತನಯಾಃ ಸಹ ಸೌಬಲೇನ ॥ ೬೦ ॥

**ಅರ್ಥ** :- **ತತ್ಸ್ವೀಕೃತೇಷು ಸತ್ಸು** = ತತ್ ವೇದವ್ಯಾಸರಿಂದ, **ಸ್ವೀಕೃತೇಷು ಸತ್ಸು** ಪಾಂಡವರು ಸ್ವೀಕರಿಸಲ್ಪಟ್ಟಾಗ, **ವೈಚಿತ್ರ್ಯವೀರ್ಯಸಹಿತಾಃ** ಧೃತರಾಷ್ಟ್ರ ಸಮೇತರಾದ, **ಭೀಷ್ಮಮುಖ್ಯಾಃ** ಭೀಷ್ಮ ಮುಂತಾದವರು, **ಕುಂತ್ಯಾ ಸಹ** ಕುಂತಿಯೊಂದಿಗೆ, **ಸರ್ವಾನ್** ಎಲ್ಲ ಐವರು ಪಾಂಡವರನ್ನು **ಪರಿಪೂಜ್ಯ** ಆದರಿಸಿ, **ಯದಾ** ಯಾವಾಗ, **ಜಗೃಹುಃ** ಸ್ವೀಕರಿಸಿದರೋ ಆಗ, **ವೈಚಿತ್ರ ವೀರ್ಯತನಯಾಃ** ದುರ್ಯೋಧನಾದಿಗಳು, **ಸೌಬಲೇನ ಸಹ** ಶಕುನಿ ಯೊಂದಿಗೆ, **ಸುಭೃಶಂ** ಬಹಳವಾಗಿ, **ಆರ್ತಾ ಬಭೂವುಃ** ದುಃಖಿತರಾದರು.

**ತಾತ್ಪರ್ಯ** :- ವೇದವ್ಯಾಸರು ಪಾಂಡವರನ್ನು ಸ್ವೀಕರಿಸಿದಾಗ ಧೃತರಾಷ್ಟ್ರ ಸಹಿತರಾದ ಭೀಷ್ಮಾದಿಗಳೆಲ್ಲರೂ, ಕುಂತೀ ಸಮೇತರಾದ ಪಾಂಡವರನ್ನು ಅತ್ಯಾದರದಿಂದ ಪರಿಗ್ರಹಿಸಿದರು. ಆಗ ಶಕುನಿಸಮೇತರಾದ ಕೌರವರು ದುಃಖಿತರಾದರು.

ವೈಚಿತ್ರವೀರ್ಯತನಯಾಃ ಕೃಪತೋ ಮಹಾಸ್ತ್ರಾ-
ಣ್ಯಾಪುಶ್ಚ ಪಾಂಡುತನಯೈಃ ಸಹ ಸರ್ವರಾಜ್ಞಾಮ್ ।
ಪುತ್ರಾಶ್ಚ ತತ್ರ ವಿವಿಧಾ ಅಪಿ ಬಾಲಚೇಷ್ಟಾಃ
ಕುರ್ವತ್ಸು ವಾಯುತನಯೇನ ಜಿತಾಃ ಸಮಸ್ತಾಃ ॥ ೬೧ ॥

**ಅರ್ಥ** :- **ಪಾಂಡುತನಯೈಃ ಸಹ** ಪಾಂಡವರೊಂದಿಗೆ, **ವೈಚಿತ್ರ ವೀರ್ಯತನಯಾಃ** = **ವೈಚಿತ್ರವೀರ್ಯ** ಧೃತರಾಷ್ಟ್ರನ, **ತನಯಾಃ** ಮಕ್ಕಳಾದ ಕೌರವರು, **ಸರ್ವರಾಜ್ಞಾಂ ಪುತ್ರಾಶ್ಚ** ಎಲ್ಲ ರಾಜಕುಮಾರರೂ, **ಕೃಪತಃ** ಕೃಪಾಚಾರ್ಯರಿಂದ, **ಮಹಾಸ್ತ್ರಾಣಿ** ಮಹಾಸ್ತ್ರಗಳನ್ನು **ಆಪುಃ** ಹೊಂದಿದರು (ಉಪದೇಶ ಪಡೆದರು), **ತತ್ರ** ಅಲ್ಲಿ ಆ ಕುಮಾರರು, **ವಿವಿಧಾಃ** ನಾನಾವಿಧವಾದ, **ಬಾಲಚೇಷ್ಟಾಃ** ಬಾಲಕ್ರೀಡೆಗಳನ್ನು **ಕುರ್ವತ್ಸು ಸತ್ಸು** ಆಡುತ್ತಿರಲು, **ವಾಯುತನಯೇನ** ವಾಯುಕುಮಾರನಾದ ಭೀಮಸೇನನಿಂದ, **ಸಮಸ್ತಾಃ ಅಪಿ** ಎಲ್ಲರೂ, **ಜಿತಾಃ** ಪರಾಜಿತರಾದರು.

ತಾತ್ಪರ್ಯ :- ಪಾಂಡವರೊಂದಿಗೆ ಕೌರವರೂ ಇತರ ಎಲ್ಲ ರಾಜಕುಮಾರರೂ ಕೃಪಾಚಾರ್ಯರಿಂದ ಮಹಾಸ್ತ್ರಗಳ ಉಪದೇಶ ಪಡೆದರು. ಆ ಸಮಯದಲ್ಲಿ ಅವರು ನಾನಾರೀತಿಯ ಬಾಲಕ್ರೀಡೆಗಳನ್ನು ಆಡುತ್ತಿದ್ದಾಗ ವಾಯುಕುಮಾರ ಭೀಮಸೇನನಿಂದ ಪರಾಜಿತರಾದರು.

ಪಕ್ವೋರುಭೋಜ್ಯಫಲ ಸನ್ನಯನಾಯ ವೃಕ್ಷೇ -
ಷ್ವಾರೂಢರಾಜತನಯಾನ್ ಅಭಿವೀಕ್ಷ್ಯ ಭೀಮಃ ।
ಪಾದಪ್ರಹಾರಮುರುವೃಕ್ಷತಲೇ ಪ್ರದಾಯ
ಸಾಕಂ ಫಲೈರ್ವಿನಿಪತತ್ಸು ಫಲಾನ್ಯಭುಂಕ್ತ ॥ ೬೨ ॥

ಅರ್ಥ :- ಪಕ್ವೋರುಭೋಜ್ಯಫಲಸನ್ನಯನಾಯ = ಪಕ್ವ ಮಾಗಿದ, ಉರು ಶ್ರೇಷ್ಠವಾದ, ಭೋಜ್ಯ ಭಕ್ಷಿಸಲು ಅರ್ಹವಾದ, ಫಲ ಹಣ್ಣುಗಳನ್ನು ಸನ್ನಯನಾಯ ತರುವುದಕ್ಕೋಸ್ಕರ, ವೃಕ್ಷೇಷು ಮರಗಳಲ್ಲಿ, ಆರೂಢರಾಜ ತನಯಾನ್ = ಆರೂಢ ಏರಿದ, ರಾಜತನಯಾನ್ ರಾಜಕುಮಾರನನ್ನು ಅಭಿವೀಕ್ಷ್ಯ ನೋಡಿ, ಭೀಮಃ ಭೀಮಸೇನನು, ಉರುವೃಕ್ಷತಲೇ ಹೆಮ್ಮರದ ಬುಡದಲ್ಲಿ, ಪಾದಪ್ರಹಾರಂ ಪ್ರದಾಯ ಕಾಲಿನಿಂದ ಒದ್ದು, ಫಲೈಃ ಸಾಕಂ ಹಣ್ಣುಗಳೊಂದಿಗೆ, ವಿನಿಪತತ್ಸು ಸತ್ಸು ರಾಜಕುಮಾರರು ಬೀಳುತ್ತಿರಲು, ಸ್ವಯಂ ತಾನು, ಫಲಾನಿ ಹಣ್ಣುಗಳನ್ನು ಅಭುಂಕ್ತ ತಿಂದನು.

ತಾತ್ಪರ್ಯ :- ಮಾಗಿದ ಶ್ರೇಷ್ಠ ಭೋಜ್ಯ ಫಲಗಳನ್ನು ತರಲು ರಾಜಕುಮಾರರು ಮರಗಳ ಮೇಲೇರುತ್ತಿದ್ದರು. ಆಗ ಅದನ್ನು ನೋಡಿ ಭೀಮ ಸೇನ ಆ ಹೆಮ್ಮರದ ಬುಡಕ್ಕೆ ಕಾಲಿನಿಂದ ಜೋರಾಗಿ ಒದೆಯುತ್ತಿದ್ದ. ಆಗ ಹಣ್ಣುಗಳ ಜೊತೆಗೆ ಕೌರವರು ಬೀಳುತ್ತಿದ್ದರೆ ತಾನು ಆ ಹಣ್ಣುಗಳನ್ನು ತಿನ್ನುತ್ತಿದ್ದ.

ಯುದ್ಧೇ ನಿಯುದ್ಧ ಉತ ಧಾವನ ಉತ್‌ಪ್ಲವೇಚ
ವಾರಿಪ್ಲವೇ ಚ ನಿಖಿಲಾನ್ ಸಹಿತಾನ್ ಕುಮಾರಾನ್ ।
ಏಕೋ ಜಿಗಾಯ ತರಸಾ ಪರಮಾರ್ಯಕರ್ಮಾ
ವಿಷ್ಣೋಃ ಸುಪೂರ್ಣಸದನುಗ್ರಹತಃ ಸುನಿತ್ಯಾತ್ ॥ ೬೩ ॥

ಅರ್ಥ :- ಯುದ್ಧೇ ಯುದ್ಧದಲ್ಲಿ ನಿಯುದ್ಧೇ ನಿಯುದ್ಧದಲ್ಲಿ ಉತ ಹಾಗೆ, ಧಾವನೇ ಓಡುವದರಲ್ಲಿ, ಚ ಮತ್ತು, ಉತ್‌ಪ್ಲವೇ ನೆಗೆಯುವದರಲ್ಲಿ

**ವಾರಿಪ್ಲವೇ ಚ** ನೀರಾಟದಲ್ಲಿಯೂ, **ಸಹಿತಾನ್** ಒಂದಾಗಿ ಸೇರಿದ, **ನಿಖಿಲಾನ್** ಎಲ್ಲ **ಕುಮಾರಾನ್** ರಾಜಕುಮಾರರನ್ನು **ಪರಮಾರ್ಯಕರ್ಮಾ** = **ಪರಮಾರ್ಯ** ಪರಮಪೂಜ್ಯನಾದ, **ಕರ್ಮಾ** ಕರ್ಮವುಳ್ಳ, **ಏಕಃ** ಭೀಮಸೇನನೊಬ್ಬನೇ, **ವಿಷ್ಣೋಃ** ವಿಷ್ಣುವಿನ, **ಸುನಿತ್ಯಾತ್** ನಿರಂತರವಾಗಿರುವ, **ಸಂಪೂರ್ಣಸದನುಗ್ರಹತಃ** ಸಂಪೂರ್ಣ ಪರಮಾನುಗ್ರಹದಿಂದ, **ತರಸಾ** ಬೇಗನೆ, **ಜಿಗಾಯ** ಗೆದ್ದನು.

**ತಾತ್ಪರ್ಯ :-** ಯುದ್ಧದಲ್ಲಿ ಆಗಲಿ ನಿಯುದ್ಧದಲ್ಲಿ ಆಗಲೀ ಓಡುವ ದರಲ್ಲಾಗಲೀ, ನೆಗೆಯುವದರಲ್ಲಾಗಲೀ, ನೀರಾಟದಲ್ಲಾಗಲಿ ಎಲ್ಲ ರಾಜ ಕುಮಾರರು ಒಟ್ಟಿಗೆ ಸೇರಿ ಬಂದರೂ ಅವರನ್ನು ಉತ್ತಮಕರ್ಮ ಕಾರಿಯಾದ ಭೀಮಸೇನ ಬೇಗನೆ ಗೆಲ್ಲುತ್ತಿದ್ದ. ಅದಕ್ಕೆ ಕಾರಣ ಅವನ ಮೇಲಿದ್ದ ಹರಿಯ ನಿರಂತರ ಪೂರ್ಣ ಪರಮಾನುಗ್ರಹ.

**ವಿಶೇಷ ವಿಷಯ** :ಯುದ್ಧವೆಂದರೆ ಎರಡು ಗುಂಪುಗಳಾಗಿ ನಡೆಸುವ ಹೋರಾಟ. ನಿಯುದ್ಧವೆಂದರೆ ಇಬ್ಬರ ನಡುವೆ ನಡೆಯುವ ದ್ವಂದ್ವಯುದ್ಧ. ಉತ್‌ಪ್ಲವ ಎಂದರೆ ಕಪ್ಪೆಯಂತೆ ನೆಗೆಯುವದು. ವಾರಿಪ್ಲವ ಎಂದರೆ ಎರಡು ತೋಳುಗಳಿಂದ ನೀರನ್ನು ಹಿಂದಕ್ಕೆ ತಳ್ಳುತ್ತಾ ಮುಂದೆ ಸಾಗುವದು (ಈಸುವದು) ಎಂದರ್ಥ. 'ವಾರಿಪ್ಲವ' ಎಂಬ ಸ್ಥಳದಲ್ಲಿ 'ಪಾರಿಪ್ಲವ' ಎಂಬುದಾಗಿ ವಾದಿರಾಜೀಯ ಪಾಠ. ಎಲ್ಲ ರಾಜಕುಮಾರರು ಒಟ್ಟಾಗಿ ನಡುವೆ ನಿಂತಿರುವಾಗ ಸುತ್ತಲೂ ಓಡುತ್ತಾ ಆಡುವ ಆಟ ಎಂದರ್ಥ.

**ಸರ್ವಾನ್ ಪ್ರಗೃಹ್ಯ ವಿನಿಮಜ್ಜತಿ ವಾರಿಮಧ್ಯೇ**
**ಶ್ರಾಂತಾನ್ ವಿಸೃಜ್ಯ ಹಸತಿ ಸ್ಮ ಸ ವಿಷ್ಣುಪದ್ಯಾಂ ।**
**ಸರ್ವಾನುದೂಹ್ಯ ಚ ಕದಾಚಿದುರುಪ್ರವಾಹಾಂ**
**ಗಂಗಾಂ ಸ ತಾರಯತಿ ಸಾರಸುಪೂರ್ಣಪೌಂಸ್ಯಃ ।। ೬೪ ।।**

**ಅರ್ಥ :-** **ಸಃ** ಆ ಭೀಮಸೇನನು, **ಸರ್ವಾನ್** ಎಲ್ಲರನ್ನು **ಪ್ರಗೃಹ್ಯ** ಹಿಡಿದುಕೊಂಡು, **ವಿಷ್ಣುಪದ್ಯಾಂ** ಗಂಗೆಯಲ್ಲಿ **ವಾರಿಮಧ್ಯೇ** ನೀರಿನ ನಡುವೆ, **ವಿನಿಮಜ್ಜತಿ ಸ್ಮ** ಮುಳುಗುತ್ತಿದ್ದನು. **ಶ್ರಾಂತಾನ್** ಬಳಲಿದವರನ್ನು **ವಿಸೃಜ್ಯ** ಬಿಟ್ಟು **ಹಸತಿ ಸ್ಮ** ನಗುತ್ತಿದ್ದನು, **ಸಾರಸುಪೂರ್ಣಪೌಂಸ್ಯಃ** = **ಸಾರ**

ಶ್ರೇಷ್ಠವಾದ, **ಸುಪೂರ್ಣ** ಪರಿಪೂರ್ಣವಾದ, **ಪೌಂಸ್ಯಃ** ಪೌರುಷವುಳ್ಳ **ಸಃ** ಆ ಭೀಮಸೇನನು, **ಕದಾಚಿತ್** ಕೆಲವೊಮ್ಮೆ **ಸರ್ವಾನ್** ಎಲ್ಲರನ್ನೂ **ಉದೂಹ್ಯ** ಹೊತ್ತುಕೊಂಡು, **ಉರುಪ್ರವಾಹಾಂ** ಮಹಾಪ್ರವಾಹವುಳ್ಳ, **ಗಂಗಾಂ** ಗಂಗಾ ನದಿಯನ್ನು **ತಾರಯತಿ ಸ್ಮ** ದಾಟಿಸುತ್ತಿದ್ದನು.

**ತಾತ್ಪರ್ಯ** :- ಭೀಮಸೇನ ಎಲ್ಲರನ್ನೂ ಹಿಡಿದುಕೊಂಡು ಗಂಗೆಯಲ್ಲಿ ನೀರಿನ ಮಧ್ಯೆ ಮುಳುಗುತ್ತಿದ್ದ. ಅವರು ಬಳಲಿದಾಗ ನಡುವೆ ಬಿಟ್ಟು ನಗುತ್ತಿದ್ದ, ಶ್ರೇಷ್ಠವಾದ ಪರಿಪೂರ್ಣವಾದ ಪೌರುಷವುಳ್ಳ ಆ ಭೀಮಸೇನ ಕೆಲವೊಮ್ಮೆ ಎಲ್ಲರನ್ನೂ ಹೊತ್ತುಕೊಂಡು ಮಹಾಪ್ರವಾಹದಿಂದ ಕೂಡಿದ ಗಂಗೆಯನ್ನು ದಾಟಿಸುತ್ತಿದ್ದನು.

**ದ್ವೇಷಂ ಹ್ಯೃತೇ ನಹಿ ಹರೌ ತಮಸಿ ಪ್ರವೇಶಃ**
**ಪ್ರಾಣೇ ಚ ತೇನ ಜಗತೀಮನು ತೌ ಪ್ರಪನ್ನೌ ।**
**ತತ್ಕಾರಣಾನ್ಯಕುರುತಾಂ ಪರಮೌ ಕರಾಂಸಿ**
**ದೇವದ್ವಿಷಾಂ ಸತತವಿಸ್ಪೃತ ಸಾಧುಪೌಂಸ್ಯೌ ॥ ೬೫ ॥**

**ಅರ್ಥ** :- **ದೇವದ್ವಿಷಾಂ** ಅಸುರರಿಗೆ, **ಹರೌ** ಹರಿಯಲ್ಲಿ **ಚ** ಮತ್ತು, **ಪ್ರಾಣೇ** ಮುಖ್ಯಪ್ರಾಣನಲ್ಲಿ, **ದ್ವೇಷಂ ಋತೇ** ದ್ವೇಷವಿಲ್ಲದೇ, **ತಮಸಿ** ತಮಸ್ಸಿನಲ್ಲಿ **ಪ್ರವೇಶಃ** ಪ್ರವೇಶವು, **ಹಿ** ಯಾವ ಕಾರಣದಿಂದ, **ನ ಹಿ ಭವೇತ್** ಆಗಲಾರದೋ, **ತೇನ** ಆ ಕಾರಣದಿಂದ, **ಸತತವಿಸ್ಪೃತಸಾಧುಪೌಂಸ್ಯೌ** = **ಸತತ** ನಿರಂತರವಾದ, **ವಿಸ್ಪೃತ** ಪೂರ್ಣವಾದ, **ಸಾಧು** ನಿರ್ದುಷ್ಟವಾದ, **ಪೌಂಸ್ಯೌ** ಪೌರುಷವುಳ್ಳ, ಆದ್ದರಿಂದಲೇ, **ಪರಮೌ** ಶ್ರೇಷ್ಠರಾದ, **ತೌ** ಆ ಹರಿವಾಯುಗಳು, **ಜಗತೀಂ** ಭೂಮಿಯನ್ನು ಕುರಿತು, **ಅನು** ಜೊತೆಗೆ, **ಪ್ರಪನ್ನೌ** ಕೃಷ್ಣ ಭೀಮರಾಗಿ ಬಂದು, **ತತ್ಕಾರಣಾನಿ** ದ್ವೇಷಕ್ಕೆ ಕಾರಣವಾದ, **ಕರಾಂಸಿ** ಕರ್ಮಗಳನ್ನು **ಅಕುರುತ** ಮಾಡಿದರು.

**ತಾತ್ಪರ್ಯ** :- ಹರಿಯಲ್ಲಿಯೂ, ಪ್ರಾಣನಲ್ಲಿಯೂ ದ್ವೇಷ ಮಾಡದ ಹೊರತು ಅಸುರರಿಗೆ ಅಂಧಂತಮಸ್ಸಿನಲ್ಲಿ ಪ್ರವೇಶವಿಲ್ಲ. ಈ ಹಿನ್ನೆಲೆಯಲ್ಲಿ ನಿರಂತರವಾದ ಪೂರ್ಣ ನಿರ್ದುಷ್ಟವಾದ ಪೌರುಷವುಳ್ಳ ಹರಿವಾಯುಗಳು ಜೊತೆಯಾಗಿ ಭೂಮಿಗೆ ಬಂದು ಅಸುರರಿಗೆ ತಮ್ಮಲ್ಲಿ ದ್ವೇಷಹುಟ್ಟಿಸುವ ಕರ್ಮಗಳನ್ನು ಮಾಡಿದರು.

ದೃಷ್ಟ್ವಾಮಿತಾನ್ಯಥ ಕರಾಂಸಿ ಮರುತ್ಸುತೇನ
ನಿತ್ಯಂ ಕೃತಾನಿ ತನಯಾ ನಿಖಿಲಾಶ್ಚ ರಾಜ್ಞಾಂ ।
ತಸ್ಯಾಮಿತಂ ಬಲಮುದೀಕ್ಷ್ಯ ಸದೋರುವೃದ್ಧ-
ದ್ವೇಷಾ ಬಭೂವುರಥ ಮಂತ್ರಮಮಂತ್ರಯಂಶ್ಚ ॥ ೬೬ ॥

**ಅರ್ಥ** :- **ಅಥ** ಅನಂತರ, **ನಿತ್ಯಂ** ಯಾವಾಗಲೂ, **ಮರುತ್ಸುತೇನ** ವಾಯುಪುತ್ರನಾದ ಭೀಮಸೇನನಿಂದ, **ಕೃತಾನಿ** ಮಾಡಲ್ಪಟ್ಟ **ಅಮಿತಾನಿ** ಅನುಪಮವಾದ, **ಕರಾಂಸಿ** ಕರ್ಮಗಳನ್ನು **ದೃಷ್ಟ್ವಾ** ನೋಡಿ, **ತಸ್ಯ** ಆ ಭೀಮಸೇನನ, **ಅಮಿತಂ** ಅಪರಿಮಿತವಾದ, **ಬಲಂ** ಶಕ್ತಿಯನ್ನು **ಉದೀಕ್ಷ್ಯ** ತಿಳಿದು, **ರಾಜ್ಞಾಂ ನಿಖಿಲಾಶ್ಚ** ಎಲ್ಲ ರಾಜಕುಮಾರರೂ, **ಸದಾ** ಯಾವಾಗಲೂ, **ಉರುವೃದ್ಧದ್ವೇಷಾ ಬಭೂವುಃ** ಬಲುದೀರ್ಘದ್ವೇಷವುಳ್ಳವರು, **ಬಭೂವುಃ** ಆದರು, **ಅಥ** ಬಳಿಕ, **ಮಂತ್ರಮಮಂತ್ರಯಂಶ್ಚ** (ರಹಸ್ಯವಾಗಿ) ಮಂತ್ರಾಲೋಚನೆಯನ್ನೂ ಮಾಡಿದರು.

**ತಾತ್ಪರ್ಯ** :- ನಿತ್ಯವೂ ಭೀಮನು ಮಾಡುತ್ತಿದ್ದ ಅನುಪಮವಾದ ಕರ್ಮಗಳನ್ನು ನೋಡಿ ಅವರಿಗೆ (ರಾಜಕುಮಾರರಿಗೆ) ಅವನ ಅಪರಿಮಿತ ಶಕ್ತಿಯ ಅರಿವಾಯಿತು. ಅವರೆಲ್ಲರೂ ಅವನಲ್ಲಿ ನಿರಂತರ ಬಲುದೀರ್ಘ ದ್ವೇಷ ಮಾಡಿದರು. ರಹಸ್ಯವಾಗಿ ಮಂತ್ರಾಲೋಚನೆ ಮಾಡಿದರು.

**ಯೇ ಯೇ ಹಿ ತತ್ರ ನರದೇವಸುತಾಃ ಸುರಾಂಶಾಃ**
**ಪ್ರೀತಿಂ ಪರಾಂ ಪವನಜೇ ನಿಖಿಲಾ ಅಕುರ್ವನ್ ।**
**ತಾಂಸ್ತಾನ್ ವಿಹಾಯ ದಿತಿಜಾ ನರದೇವವಂಶ-**
**ಜಾತಾ ವಿಚಾರ್ಯ ವಧನಿಶ್ಚಯಮಸ್ಯ ಚಕ್ರುಃ ॥ ೬೭ ॥**

**ಅರ್ಥ** :- **ತತ್ರ** ಅವರ ನಡುವೆ, **ಯೇ ಯೇ** ಯಾರು ಯಾರು, **ಸುರಾಂಶಾಃ** ದೇವಾಂಶರಾದ, **ನರದೇವಸುತಾಃ** ರಾಜಕುಮಾರರು, **ಪವನಜೇ** ವಾಯುಪುತ್ರನಾದ ಭೀಮಸೇನನಲ್ಲಿ, **ಪರಾಂಪ್ರೀತಿಂ** ಬಹಳ ಪ್ರೀತಿಯನ್ನು **ಅಕುರ್ವನ್** ಮಾಡಿದರೋ, **ತಾನ್ ತಾನ್** ಅವರೆಲ್ಲರನ್ನೂ **ವಿಹಾಯ** ಬಿಟ್ಟು **ನರದೇವವಂಶಜಾತಾಃ** ರಾಜವಂಶದಲ್ಲಿ ಜನಿಸಿದ, **ನಿಖಿಲಾಃ** ಎಲ್ಲ **ದಿತಿಜಾಃ** ದೈತ್ಯರು, **ವಿಚಾರ್ಯ** ವಿಚಾರ ಮಾಡಿ, **ಅಸ್ಯ** ಈ ಭೀಮಸೇನನ, **ವಧನಿಶ್ಚಯಂ** ಕೊಲ್ಲುವ ನಿರ್ಧಾರವನ್ನು **ಚಕ್ರುಃ** ಮಾಡಿದರು (ಕೈಗೊಂಡರು)

ತಾತ್ಪರ್ಯ :- ಯಾರು ಯಾರು ದೇವಾಂಶ ಸಂಭೂತರಾದ ರಾಜ ಕುಮಾರರು ಭೀಮಸೇನನಲ್ಲಿ ಬಹಳ ಪ್ರೀತಿಯನ್ನು ಮಾಡಿದರೋ ಅವರೆಲ್ಲರನ್ನೂ ಬಿಟ್ಟು ರಾಜವಂಶದಲ್ಲಿ ಜನಿಸಿದ ಆ ದೈತ್ಯರೆಲ್ಲರೂ ವಿಚಾರ ಮಾಡಿ ಭೀಮಸೇನನನ್ನು ಕೊಲ್ಲುವ ನಿರ್ಣಯಕ್ಕೆ ಬಂದರು.

**ಅಸ್ಮಿನ್ ಹತೇ ವಿನಿಹತಾ ಅಖಿಲಾಶ್ಚ ಪಾರ್ಥಾಃ**
**ಶಕ್ಯೋ ಬಲಾಚ್ಚ ನ ನಿಹಂತುಮಯಂ ಬಲಾಢ್ಯಃ ।**
**ಛದ್ಮಪ್ರಯೋಗತ ಇಮಂ ವಿನಿಹತ್ಯ ವೀರ್ಯಾತ್**
**ಪಾರ್ಥಂ ನಿಹತ್ಯ ನಿಗಡೇ ಚ ವಿದಧ್ಮಹೇಽನ್ಯಾನ್ ॥ ೬೮ ॥**

**ಅರ್ಥ** :- **ಅಸ್ಮಿನ್** ಈ ಭೀಮಸೇನನು, **ಹತೇ ಸತಿ** ಹತನಾಗುತ್ತಿರಲು, **ಅಖಿಲಾಶ್ಚ ಪಾರ್ಥಾಃ** ಎಲ್ಲ ಪಾರ್ಥರೂ, **ವಿನಿಹತಾಃ** ಹತರಾದಂತೆಯೇ (ಯತಃ ಯಾವ ಕಾರಣದಿಂದ), **ಅಯಂ** ಈ ಭೀಮಸೇನನು, **ಬಲಾಢ್ಯಃ** ಬಲಾಢ್ಯನೋ (ಅತಃ ಆದ್ದರಿಂದ), **ಬಲಾತ್** ಶರೀರಬಲದಿಂದ, **ನಿಹಂತುಂ ನ ಶಕ್ಯಃ** ಕೊಲ್ಲಲು ಶಕ್ಯನಾಗುವದಿಲ್ಲ (ಆದ್ದರಿಂದ), **ಇಮಂ** ಈ ಭೀಮಸೇನನನ್ನು **ಛದ್ಮಪ್ರಯೋಗತಃ** ಮಂತ್ರ ಔಷಧಮುಂತಾದವುಗಳ ಪ್ರಯೋಗದಿಂದ, **ಚ** ಮತ್ತು, **ಪಾರ್ಥಂ** ಅರ್ಜುನನನ್ನು **ವೀರ್ಯಾತ್** ಪರಾಕ್ರಮದಿಂದ, **ನಿಹತ್ಯ** ಕೊಂದು, **ಅನ್ಯಾನ್ ಚ** ಬೇರೆಯವರನ್ನಾದರೂ, **ನಿಗಡೇ ವಿದಧ್ಮಹೇ** ಸಂಕೋಲೆಯಲ್ಲಿ ಬಂಧಿಸಿಡೋಣ.

ತಾತ್ಪರ್ಯ :- ಭೀಮಸೇನನೊಬ್ಬ ಸತ್ತರೆ ಎಲ್ಲ ಪಾರ್ಥರೂ ಸತ್ತಂತೆಯೇ. ಆದರೆ ಭೀಮಸೇನ ಬಲಾಢ್ಯ. ಶಾರೀರಿಕಬಲದಿಂದ ಅವನನ್ನು ಕೊಲ್ಲುವದು ಅಸಾಧ್ಯ. ಅದರಿಂದ ಅವನನ್ನು ಮಂತ್ರ ಔಷಧಗಳ ಪ್ರಯೋಗ ಮುಂತಾದ ವಾಮಮಾರ್ಗದಿಂದಲೂ, ಅರ್ಜುನನನ್ನು ಪರಾಕ್ರಮದಿಂದಲೂ ಕೊಂದು ಇತರರನ್ನು ಬಂಧನದಲ್ಲಿಡೋಣ.

**ಏವಂ ಕೃತೇ ನಿಹತಕಂಟಕಮಸ್ಯ ರಾಜ್ಯಂ**
**ದುರ್ಯೋಧನಸ್ಯ ಹಿ ಭವೇನ್ನ ತತೋಽನ್ಯಥಾ ಸ್ಯಾತ್ ।**
**ಅಸ್ಮಿನ್ ಹತೇ ನಿಪತಿತೇ ಚ ಸುರೇಂದ್ರಸೂನೌ**
**ಶೇಷಾ ಭವೇಯುರಥ ಸೌಬಲಿಪುತ್ರದಾಸಾಃ ॥ ೬೯ ॥**

**ಅರ್ಥ** :- **ಏವಂ ಕೃತೇ ಸತಿ** ಈ ರೀತಿ ಮಾಡಲು, **ಅಸ್ಯ ದುರ್ಯೋಧನಸ್ಯ** ಈ ದುರ್ಯೋಧನನ, **ರಾಜ್ಯಂ** ರಾಜ್ಯವು, **ನಿಹತಕಂಟಕಂ** ನಿಷ್ಕಂಟಕವು, **ಭವೇತ್** ಆದೀತು, **ತತಃ ಅನ್ಯಥಾ** ಅದಕ್ಕಿಂತ ಬೇರೆ ರೀತಿಯಿಂದ, **ನ ಸ್ಯಾತ್** ಆಗಲಾರದು, **ಅಸ್ಮಿನ್** ಈ ಭೀಮಸೇನನು, **ಹತೇ** ಹತನಾಗಲು, **ಚ** ಮತ್ತು, **ಸುರೇಂದ್ರಸೂನೌ** ಅರ್ಜುನನು, **ನಿಪತಿತೇ** ಬೀಳಲು, **ಶೇಷಾಃ** ಉಳಿದ ಯುಧಿಷ್ಠಿರ ಮುಂತಾದ ಮೂವರು, **ಸೌಬಲಿಪುತ್ರ ದಾಸಾಃ = ಸೌಬಲಿ** ಗಾಂಧಾರಿಯ, **ಪುತ್ರ** ಮಗನಾದ ದುರ್ಯೋಧನನ, **ದಾಸಾಃ ಭವೇಯುರಪಿ** ದಾಸರಾಗುವರು.

**ತಾತ್ಪರ್ಯ** :- 'ಈ ರೀತಿ ಮಾಡಿದಾಗಲೇ ದುರ್ಯೋಧನನಿಗೆ ರಾಜ್ಯ ನಿಷ್ಕಂಟವೆನಿಸೀತು. ಬೇರೆ ರೀತಿಯಿಂದ ಸಾಧ್ಯವಿಲ್ಲ. ಭೀಮಸೇನ ಸಾಯಬೇಕು. ಅರ್ಜುನ ಬೀಳಬೇಕು. ಆಗ ಉಳಿದವರು ಕೌರವರ ದಾಸರಾಗುವರು.'

**ಏವಂ ವಿಚಾರ್ಯ ವಿಷಮುಲ್ಬಣಮಂತಕಾಭಂ**
**ಕ್ಷೀರೋದಧೇರ್ಮಥನಜಂ ತಪಸಾ ಗಿರೀಶಾತ್ ।**
**ಶುಕ್ರೇಣ ಲಬ್ಧಮಮುತಃ ಸುಬಲಾತ್ಮಜೇನ**
**ಪ್ರಾಪ್ತಂ ಪ್ರತೋಷ್ಯ ಮರುತಸ್ತನಯಾಯ ಚಾದುಃ ॥ ೭೦ ॥**

**ಅರ್ಥ** :- **ಏವಂ** ಈ ರೀತಿ, **ವಿಚಾರ್ಯ** ವಿಚಾರ ಮಾಡಿ, **ಕ್ಷೀರೋದಧೇಃ** ಕ್ಷೀರಸಮುದ್ರದ, **ಮಥನಜಂ** ಮಥನದಿಂದ ಉದ್ಭವಿಸಿದ, **ಶುಕ್ರೇಣ** ಶುಕ್ರಾಚಾರ್ಯರಿಂದ, **ತಪಸಾ** ತಪಸ್ಸಿನಿಂದ, **ಗಿರೀಶಾತ್** ರುದ್ರದೇವರಿಂದ (ರುದ್ರದೇವರ ಅನುಗ್ರಹದಿಂದ), **ಲಬ್ಧಂ** ಪ್ರಾಪ್ತವಾದ, **ಸುಬಲಾತ್ಮಜೇನ** ಶಕುನಿಯಿಂದ, **ಪ್ರತೋಷ್ಯ** ಶುಕ್ರಾಚಾರ್ಯರನ್ನು ಸಂತೋಷ ಪಡಿಸಿ, **ಅಮುತಃ** ಈ ಶುಕ್ರಾಚಾರ್ಯರಿಂದ, **ಪ್ರಾಪ್ತಂ** ಲಬ್ಧವಾದ, **ಅಂತಕಾಭಂ** ಮೃತ್ಯು ಸದೃಶವಾದ, **ಉಲ್ಬಣಂ** ಘೋರವಾದ, **ವಿಷಂ** ವಿಷವನ್ನು, **ಮರುತಃ** ವಾಯುವಿನ, **ತನಯಾಯ** ಪುತ್ರನಾದ ಭೀಮಸೇನನಿಗೆ, **ಅದುಃ** ಕೊಟ್ಟರು.

**ತಾತ್ಪರ್ಯ** :- ಹೀಗೆ ವಿಚಾರ ಮಾಡಿ ಮೃತ್ಯುಸದೃಶವಾದ ಘೋರ ವಿಷವನ್ನು ಭೀಮನಿಗೆ ಉಣಿಸಿದರು. ಆ ವಿಷ ಕ್ಷೀರಸಮುದ್ರದ ಮಥನದಿಂದ

ಉದ್ಭವಿಸಿತ್ತು. ಶುಕ್ರಾಚಾರ್ಯರು ತಪಸ್ಸಿನಿಂದ ಈಶ್ವರನನ್ನು ಮೆಚ್ಚಿಸಿ ಅದನ್ನು ಪಡೆದಿದ್ದರು. ಶುಕ್ರಾಚಾರ್ಯರನ್ನು ಪ್ರಸನ್ನಗೊಳಿಸಿ ಅವರಿಂದ ಅದನ್ನು ಶಕುನಿ ಪಡೆದಿದ್ದನು.

**ಸಮ್ಮಂತ್ರ್ಯ ರಾಜತನಯೈರ್ಧೃತರಾಷ್ಟ್ರಜೈಸ್ತು**
**ದತ್ತಂ ಸ ಸೂದಮುಖತೋಽಖಿಲಭಕ್ಷ್ಯ ಭೋಜ್ಯೇ ।**
**ಜ್ಞಾತ್ವಾ ಯುಯುತ್ಸುಗದಿತಂ ಬಲವಾನ್ ಸ ಭೀಮೋ**
**ವಿಷ್ಣೋರನುಗ್ರಹಬಲಾಜ್ಜರಯಾಂಚಕಾರ ॥ ೭೧ ॥**

**ಅರ್ಥ :-** ಬಲವಾನ್ ಬಲಿಷ್ಠನಾದ, ಸಃ ಆ, **ಭೀಮಃ** ಭೀಮಸೇನನು, **ರಾಜತನಯೈಃ** ಸಹ ರಾಜಕುಮಾರರೊಂದಿಗೆ, **ಸಮಂತ್ರ್ಯ** ಮಂತ್ರಾಲೋಚನೆ ಮಾಡಿ, **ಧೃತರಾಷ್ಟ್ರಜೈಃ** ಕೌರವರಿಂದ, **ಸ್ವಸೂದಮುಖತಃ** ತಮ್ಮ ಅಡುಗೆ ಯವನ ಮೂಲಕ, **ಅಖಿಲಭಕ್ಷ್ಯೈಭೋಜ್ಯೇ** ಎಲ್ಲ ಭಕ್ಷ್ಯ ಭೋಜ್ಯಗಳಲ್ಲಿ **ಸಂಯೋಜ್ಯ** ಸೇರಿಸಿ, **ದತ್ತಂ** (ತಿನ್ನುವದಕ್ಕೋಸ್ಕರ ತನಗೆ) ಕೊಡಲ್ಪಟ್ಟ, **ತತ್** ಆ ವಿಷವನ್ನು **ಯುಯುತ್ಸುಗದಿತಂ** ಯುಯುತ್ಸುವಿನಿಂದ ಹೇಳಲ್ಪಟ್ಟು **ಜ್ಞಾತ್ವಾऽಪಿ** (ಮೊದಲೇ) ತಿಳಿದಿದ್ದರೂ ಅದನ್ನು ತಿಂದು, **ವಿಷ್ಣೋಃ** ವಿಷ್ಣುವಿನ, **ಅನುಗ್ರಹಬಲಾತ್** ಅನುಗ್ರಹ ಬಲದಿಂದ, **ಜರಯಾಂಚಕಾರ** ಜೀರ್ಣಿಸಿ ಕೊಂಡನು.

**ತಾತ್ಪರ್ಯ :-** ಕೌರವರು ರಾಜಕುಮಾರರೊಂದಿಗೆ ಮಂತ್ರಾಲೋಚನೆ ಮಾಡಿ ತಮ್ಮ ಅಡುಗೆಯ ವನ ಮೂಲಕ ಎಲ್ಲ ಭಕ್ಷ್ಯಭೋಜ್ಯಗಳಲ್ಲಿ ವಿಷವಿಕ್ಕಿದರು. ಯುಯುತ್ಸು ಎಂಬ ಧೃತರಾಷ್ಟ್ರನ ಮಗ ಅದನ್ನು ಮೊದಲೇ ಭೀಮಸೇನನಿಗೆ ತಿಳಿಸಿದ್ದ. ಹೀಗಿದ್ದರೂ ಬಲಿಷ್ಠನಾದ ಭೀಮಸೇನ ಅದನ್ನು ತಿಂದು ವಿಷ್ಣುವಿನ ಅನುಗ್ರಹಬಲದಿಂದ ಜೀರ್ಣಿಸಿಕೊಂಡ.

**ಜೀರ್ಣೇ ವಿಷೇ ಕುಮತಯಃ ಪರಮಾಭಿತಪ್ತಾಃ**
**ಪ್ರಾಸಾದಮಾಶು ವಿದಧುರ್ಹರಿಪಾದತೋಯೇ ।**
**ಜ್ಞಾತ್ವಾ ಯುಯುತ್ಸುಮುಖತಃ ಸ್ವಯಮತ್ರಚಾಂತೇ**
**ಸುಷ್ವಾಪ ಮಾರುತಿರಮಾ ಧೃತರಾಷ್ಟ್ರಪುತ್ರೈಃ ॥ ೭೨ ॥**

**ಅರ್ಥ** :- **ವಿಷೇ** ವಿಷವು, **ಜೀರ್ಣೇಸತಿ** ಜೀರ್ಣವಾಗಲು, **ಕುಮತಯಃ** ದುರ್ಬುದ್ಧಿಗಳಾದ ಕೌರವರು **ಪರಮಾಭಿತಪ್ತಾಃ ಸಂತಃ** ಅತ್ಯಂತ ಸಂತಪ್ತರಾಗಿ, **ಆಶು** ಬೇಗನೆ, **ಹರಿಪಾದತೋಯೇ** ಗಂಗಾಪ್ರವಾಹದಲ್ಲಿ **ಪ್ರಾಸಾದಂ** ಮಾಳಿಗೆ ಮನೆಯೊಂದನ್ನು **ವಿದಧುಃ** ಮಾಡಿದರು (ಕಟ್ಟಿಸಿದರು), **ಮಾರುತಿಃ** ಭೀಮಸೇನನು, **ಯುಯುತ್ಸುಮುಖತಃ** ಯುಯುತ್ಸುವಿನ ಮುಖದಿಂದ, **ಜ್ಞಾತ್ವಾ** (ಈ ವಿಷಯವನ್ನು) ತಿಳಿದೂ, **ಸ್ವಯಂ** ತಾನು, **ಅತ್ರ** ಈ ಮಾಳಿಗೆ ಮನೆಯಲ್ಲಿ **ಧೃತರಾಷ್ಟ್ರಪುತ್ರೈಃ ಅಮಾ** ಕೌರವರೊಂದಿಗೆ, **ಅಂತೇ** ಸಮೀಪದಲ್ಲಿ **ಸುಷ್ವಾಪ** ಮಲಗಿದನು, ಅಥವಾ **ಅಂತೇ** ಕೊನೆಯಲ್ಲಿ ಅವರು ಮಲಗಿದ ಮೇಲೆ ತಾನು ಮಲಗಿದನು.

**ತಾತ್ಪರ್ಯ** :- ಭೀಮನಿಗೆ ಕೊಟ್ಟ ವಿಷವು ಜೀರ್ಣವಾದಾಗ ದುರ್ಬುದ್ಧಿಗಳಾದ ಕೌರವರು ಅತ್ಯಂತ ಸಂತಪ್ತರಾದರು. ಬೇಗನೆ ಗಂಗಾಪ್ರವಾಹದಲ್ಲಿ ಮಾಳಿಗೆ ಮನೆಯೊಂದನ್ನು ಕಟ್ಟಿಸಿದರು. ಅದರ ಉದ್ದೇಶ ಯುಯುತ್ಸುವಿನ ಮುಖದಿಂದ ಮೊದಲೇ ಭೀಮಸೇನನಿಗೆ ತಿಳಿದಿತ್ತು. ಹಾಗಿದ್ದರೂ ಆ ಮಾಳಿಗೆ ಮನೆಯಲ್ಲಿ ಕೌರವರೊಂದಿಗೆ ಅವರ ಸನಿಹದಲ್ಲಿ ಅವರು ಮಲಗಿದ ಬಳಿಕ ಮಲಗಿದನು.

**ದೋಷಾನ್ ಪ್ರಕಾಶಯಿತುಮೇವ ವಿಚಿತ್ರವೀರ್ಯ-**
**ಪುತ್ರಾತ್ಮಜೇಷು ನೃವರಂ ಪ್ರತಿಸುಪ್ತಮೀಕ್ಷ್ಯ ।**
**ಬಧ್ವಾSಭಿಮಂತ್ರಣದೃಢೈರಯಸಾ ಕೃತೈಸ್ತಂ**
**ಪಾಶೈರ್ವಿಚಿಕ್ಷಿಪುರುದೇ ಹರಿಪಾದಜಾಯಾಃ ॥ ೭೩ ॥**

**ಅರ್ಥ** :- **ವಿಚಿತ್ರವೀರ್ಯಪುತ್ರಾತ್ಮಜೇಷು** ವಿಚಿತ್ರವೀರ್ಯನ ಮಕ್ಕಳಾದ ದುರ್ಯೋಧನಾದಿಗಳಲ್ಲಿ **ದೋಷಾನ್** ದೋಷಗಳನ್ನು **ಪ್ರಕಾಶಿಯಿತು ಮೇವ** ತೋರಿಸುವದಕ್ಕಾಗಿಯೇ, **ಪ್ರತಿಸುಪ್ತಂ** ಮಲಗಿದಂತಿದ್ದ **ನೃವರಂ** ಮನುಷ್ಯೋತ್ತಮನಾದ, **ತಂ** ಆ ಭೀಮಸೇನನನ್ನು **ಈಕ್ಷ್ಯ** ನೋಡಿ, ದುರ್ಯೋಧನಾದಿಗಳು, **ಅಭಿಮಂತ್ರಣದೃಢೈಃ** = **ಅಭಿಮಂತ್ರಣ** (ಮಂತ್ರಗಳಿಂದ) ಅಭಿಮಂತ್ರಿಸಿದ್ದರಿಂದ, **ದೃಢೈಃ** ದೃಢವಾದ, **ಅಯಸಾ ಕೃತೈಃ** ಕಬ್ಬಿಣದಿಂದ ಮಾಡಲ್ಪಟ್ಟ **ಪಾಶೈಃ** ಸರಪಣಿಗಳಿಂದ, **ಬಧ್ವಾ** ಕಟ್ಟಿ **ಹರಿಪಾದಜಾಯಾಃ** ಗಂಗೆಯ, **ಉದೇ** ನೀರಿನಲ್ಲಿ **ವಿಚಿಕ್ಷಿಪುಃ** ಎಸೆದರು.

**ತಾತ್ಪರ್ಯ** :- ಕೌರವರ ದುರ್ಬುದ್ಧಿಯನ್ನು ಜಗತ್ತಿಗೆ ತೋರಿಸುವದಕ್ಕಾಗಿಯೇ ಮಲಗಿದಂತೆ ನಟನೆ ಮಾಡುತ್ತಿದ್ದ ಭೀಮಸೇನ. ಅದನ್ನು ನೋಡಿ ಕೌರವರು, ಅಭಿಮಂತ್ರಿಸಿದ ಪ್ರಯುಕ್ತ ದೃಢವಾಗಿದ್ದ ಕಬ್ಬಿಣದ ಸರಪಣಿಗಳಿಂದ ಅವನನ್ನು ಕಟ್ಟಿ ಗಂಗಾ ಜಲದಲ್ಲಿ ಎಸೆದರು.

**ತತ್ಕೋಟಿಯೋಜನಗಭೀರಮುದಂ ವಿಗಾಹ್ಯ**
**ಭೀಮೋ ವಿಜೃಂಭಣತ ಏವ ವಿವೃಶ್ಚ್ಯ ಪಾಶಾನ್ ।**
**ಉತ್ತೀರ್ಯ ಸಜ್ಜನಗಣಸ್ಯ ವಿಧಾಯ ಹರ್ಷಂ**
**ತಸ್ಥಾವನಂತಗುಣವಿಷ್ಣುಸದಾತಿಹಾರ್ದಃ ॥ ೭೪ ॥**

**ಅರ್ಥ** :- **ಅನಂತಗುಣವಿಷ್ಣುಸದಾತಿಹಾರ್ದಃ = ಅನಂತಗುಣ** ಅನಂತ ಗುಣಭರಿತನಾದ, **ವಿಷ್ಣು** ವಿಷ್ಣುವಿನಲ್ಲಿ, **ಸದಾ** ಯಾವಾಗಲೂ, **ಅತಿಹಾರ್ದಃ** ಅತಿಶಯವಾದ ಭಕ್ತಿವುಳ್ಳ, **ಭೀಮಃ** ಭೀಮಸೇನನು, **ಕೋಟಿಯೋಜನ ಗಭೀರಂ** ಕೋಟಿಯೋಜನ ಆಳವಾದ, **ತತ್ ಉದಂ** ಆ ಗಂಗಾಜಲವನ್ನು **ವಿಗಾಹ್ಯ** ಪ್ರವೇಶಿಸಿ, **ವಿಜೃಂಭಣತ ಏವ** ಆಕಳಿಕೆಯಿಂದಲೇ, **ಪಾಶಾನ್** ಸರಪಣಿಗಳನ್ನು **ವಿವೃಶ್ಚ್ಯ** ಕತ್ತರಿಸಿ, **ಉತ್ತೀರ್ಯ** ನೀರನ್ನು ದಾಟಿ, ಮೇಲೆ ದಡಕ್ಕೆ ಬಂದು, **ಸಜ್ಜನಗಣಸ್ಯ** ಸಜ್ಜನ ಸಮುದಾಯಕ್ಕೆ, **ಹರ್ಷಂ** ಸಂತೋಷವನ್ನು **ವಿಧಾಯ** ಮಾಡಿ, **ತಸ್ಥೌ** ನಿಂತನು.

**ತಾತ್ಪರ್ಯ** :- ಅನಂತಗುಣಭರಿತನಾದ ವಿಷ್ಣುವಿನಲ್ಲಿ ಯಾವಾಗಲೂ ಮಹಾಭಕ್ತಿವುಳ್ಳವ ಭೀಮಸೇನ. ಅವನು ಕೋಟಿಯೋಜನ ಆಳವಾದ ಆ ಗಂಗಾಜಲವನ್ನು ಹೊಕ್ಕು ಆಕಳಿಕೆಯಿಂದಲೇ ಎಲ್ಲ ಕಬ್ಬಿಣದ ಸರಪಣಿಗಳನ್ನು ತುಂಡರಿಸಿದ. ಆಮೇಲೆ ನೀರನ್ನು ದಾಟಿ ಮೇಲೆ ಬಂದು ಸಜ್ಜನಸಂತತಿಗೆ ಹರ್ಷವನ್ನುಂಟು ಮಾಡುತ್ತಾ ನಿಂತ.

**ವಿಶೇಷ ವಿಷಯ** :- 'ವಿಷ್ಣುಸದಾತಿಹಾರ್ದಃ' ಎಂಬಲ್ಲಿ ಕೆಲವೆಡೆ 'ವಿಷ್ಣುಪದಾತಿಹಾರ್ದಃ' ಎಂಬುದಾಗಿ ಪಾಠವಿದೆ. ಆಗ ವಿಷ್ಣುವಿನ ಪಾದದಲ್ಲಿ ಅತಿಶಯವಾದ ಭಕ್ತಿವುಳ್ಳವನು ಎಂಬುದಾಗಿ ಅರ್ಥ ಹೇಳಬೇಕು.

**ತಂ ವೀಕ್ಷ್ಯ ದುಷ್ಟಮನಸೋಽತಿವಿಷಣ್ಣಚಿತ್ತಾಃ**
**ಸಂಮಂತ್ರ್ಯ ಭೂಯ ಉರುನಾಗಗಣಾನಥಾಷ್ಟೌ ।**

**ಶುಕ್ರೋಕ್ತಮಂತ್ರಬಲತಃ ಪುರ ಆಹ್ವಯಿತ್ವಾ**
**ಪಶ್ಚಾತ್ ಸುಪಂಜರಗತಾನ್ ಪ್ರದದುಃ ಸ್ವಸೂತೇ ॥ ೭೫ ॥**

**ಅರ್ಥ** :- ನೀರಿನಿಂದ ಮೇಲೆದ್ದ **ತಂ** ಆ ಭೀಮಸೇನನನ್ನು **ವೀಕ್ಷ್ಯ** ನೋಡಿ, **ದುಷ್ಟಮನಸಃ** ದುರ್ಬುದ್ಧಿಗಳಾದ ಕೌರವರು, **ಅತಿವಿಷಣ್ಣಚಿತ್ತಾಃ ಸಂತಃ** ಅತ್ಯಂತ ದುಃಖಿತಮನಸ್ಸುಳ್ಳವರಾಗಿ, **ಭೂಯಃ** ಮತ್ತೂ, **ಸಂಮಂತ್ರ್ಯ** ಮಂತ್ರಾಲೋಚನೆ ಮಾಡಿ, **ಅಥ** ಅನಂತರ, **ಶುಕ್ರೋಕ್ತಮಂತ್ರಬಲತಃ** ಶುಕ್ರಾಚಾರ್ಯರು ಉಪದೇಶಿಸಿದ ಮಂತ್ರಬಲದಿಂದ, **ಅಷ್ಟೌ** ಎಂಟು, **ಉರುನಾಗಗಣಾನ್** ಮಹಾನಾಗಸಮೂಹಗಳನ್ನು, **ಪುರಃ** ಎದುರಿಗೆ ಅಥವಾ ಹಸ್ತಿನಾವತಿಯ ಸನಿಹದಲ್ಲಿ, **ಆಹ್ವಯಿತ್ವಾ** ಆಹ್ವಾನಿಸಿ, **ಪಶ್ಚಾತ್** ಅನಂತರ, **ಸುಪಂಜರಗತಾನ್ ಕೃತ್ವಾ** ಒಳ್ಳೇ ಪಂಜರದಲ್ಲಿ ಹಿಡಿದಿಟ್ಟು, **ಸ್ವಸೂತೇ** ತಮ್ಮ ಸಾರಥಿಯ ವಶದಲ್ಲಿ, **ಪ್ರದದುಃ** ಕೊಟ್ಟರು.

**ತಾತ್ಪರ್ಯ** :- ನೀರಿನಿಂದ ಮೇಲಕ್ಕೆ ಬಂದ ಭೀಮನನ್ನು ನೋಡಿ ದುರ್ಬುದ್ಧಿಗಳಾದ ಕೌರವರು ಅತ್ಯಂತ ವಿಷಣ್ಣಚಿತ್ತರಾದರು. ಮತ್ತೂ ಮಂತ್ರಾಲೋಚನ ಮಾಡಿ ಎಂಟು ಮಹಾನಾಗಗಣಗಳನ್ನು ಶುಕ್ರಾಚಾರ್ಯರು ಉಪದೇಶಿಸಿದ ಮಂತ್ರಬಲದಿಂದ ಎದುರಿಗೆ ಹಸ್ತಿನಾವತಿಯ ಸನಿಹದಲ್ಲಿ ಆಹ್ವಾನಿಸಿದರು. ಆಮೇಲೆ ಒಳ್ಳೆಯ ಪಂಜರದಲ್ಲಿ ಅವುಗಳನ್ನು ಹಿಡಿದಿಟ್ಟರು. ಬಳಿಕ ತಮ್ಮ ಸಾರಥಿಯ ವಶಕ್ಕೆ ಕೊಟ್ಟರು.

**ವಿಶೇಷ ವಿಷಯ** :'ಅನಂತೋ ವಾಸುಕಿಃ ಪದ್ಮೋ ಮಹಾಪದ್ಮಶ್ಚ ತಕ್ಷಕಃ । ಕರ್ಕೋಟಕಃ ಶಂಖಪಾಲೋ ಮಹಾಶಂಖಃ ... ಎಂಬುದಾಗಿ ಅಷ್ಟನಾಗಗಳ ವಿವರ 'ಜನಾರ್ದನೀಯ'ದಲ್ಲಿದೆ.

**ದುರ್ಯೋಧನೇನ ಪೃಥುಮಂತ್ರಬಲೋಪಹೂತಾನ್**
**ತತ್ಸಾರಥಿಃ ಫಣಿಗಣಾನ್ ಪವನಾತ್ಮಜಸ್ಯ ।**
**ಸುಪ್ತಸ್ಯ ವಿಸ್ಪತ ಉರಸ್ಯಮುಚದ್ ವಿಶೀರ್ಣ-**
**ದಂತಾ ಬಭೂವುರಮುಮಾಶು ವಿದಶ್ಯ ನಾಗಾಃ ॥ ೭೬ ॥**

**ಅರ್ಥ** :- **ದುರ್ಯೋಧನೇನ** ದುರ್ಯೋಧನನಿಂದ, **ಪೃಥುಮಂತ್ರ ಬಲೋಪನೀತಾನ್** ಮಹಾಮಂತ್ರ ಬಲದಿಂದ ತರಿಸಲ್ಪಟ್ಟಿದ್ದ **ಫಣಿಗಣಾನ್**

ಹಾವುಗಳ ಸಮೂಹಗಳನ್ನು, **ತತ್ಸಾರಥಿಃ** ದುರ್ಯೋಧನನ ಸಾರಥಿಯು, **ಸುಪ್ತಸ್ಯ** ಮಲಗಿದ್ದ **ಪವನಾತ್ಮಜಸ್ಯ** ವಾಯುಪುತ್ರನಾದ ಭೀಮಸೇನನ, **ವಿಸ್ತೃತೇ** ವಿಶಾಲವಾದ, **ಉರಸಿ** ಎದೆಯ ಮೇಲೆ, **ಅಮುಚತ್** ಬಿಟ್ಟನು, **ನಾಗಾಃ** ಹಾವುಗಳು, **ಅಮುಂ** ಈ ಭೀಮಸೇನನನ್ನು, **ವಿದಶ್ಯ** ಕಚ್ಚಿ, **ಆಶು** ಕೂಡಲೇ, **ವಿಶೀರ್ಣದಂತಾಃ ವಿಶೀರ್ಣ** ಮುರಿದ, **ದಂತಾಃ** ಹಲ್ಲುಗಳುಳ್ಳವುಗಳಾಗಿ, **ಬಭೂವುಃ** ಆದವು.

**ತಾತ್ಪರ್ಯ** :- ದುರ್ಯೋಧನ ಮಹಾಮಂತ್ರಬಲದಿಂದ ತರಿಸಿದ್ದ ಆ ಹಾವುಗಳ ಸಮೂಹಗಳನ್ನು ಅವನ ಸಾರಥಿ ಮಲಗಿದ್ದ ಭೀಮನ ವಿಶಾಲವಾದ ವಕ್ಷಸ್ಥಳದ ಮೇಲೆ ಬಿಟ್ಟ, ಆ ಹಾವುಗಳ ಭೀಮನನ್ನು ಕಚ್ಚಿದ್ದೇ ತಡ ಅವುಗಳ ಹಲ್ಲುಗಳು ಮುರಿದು ಹೋದವು.

**ಕ್ಷಿಪ್ತ್ವಾ ಸುದೂರಮುರುನಾಗಗಣಾನಥಾಷ್ಟೌ**
**ತದ್ವಂಶಜಾನ್ ಸ ವಿನಿಹತ್ಯ ಪಿಪೀಲಿಕಾವತ್ ।**
**ಜಘ್ನೇ ಚ ಸೂತಮಪಹಸ್ತತ ಏವ ಭೀಮಃ**
**ಸುಷ್ವಾಪ ಪೂರ್ವವದುತ್ಥಿತ ಏವ ತಲ್ಪಾತ್ ॥ ೭೭ ॥**

**ಅರ್ಥ** :- **ಅಥ** ಅನಂತರ, **ಭೀಮಃ** ಭೀಮಸೇನನು, **ಅಷ್ಟೌ** ಎಂಟು, **ಉರುನಾಗಗಣಾನ್** ಮಹಾನಾಗಸಮೂಹಗಳನ್ನು, **ಸುದೂರಂ** ಬಲುದೂರಕ್ಕೆ, **ಕ್ಷಿಪ್ತ್ವಾ** ಎಸೆದು, **ತದ್ವಂಶಜಾನ್** ಅವುಗಳ ವಂಶದಲ್ಲಿ ಹುಟ್ಟಿದ ಕೆಟ್ಟ ಹಾವುಗಳನ್ನು, **ಪಿಪೀಲಿಕಾವತ್** ಇರುವೆಗಳಂತೆ, **ವಿನಿಹತ್ಯ** ಕೊಂದು, **ಚ** ಮತ್ತು, **ಸೂತಂ** ಸಾರಥಿಯನ್ನು **ಅಪಹಸ್ತತ ಏವ** ಮುಂಗೈಯಿಂದಲೇ, **ಜಘ್ನೇ** ಕೊಂದನು, **ಪೂರ್ವವತ್** ಹಿಂದಿನಂತೆ, **ತಲ್ಪಾತ್** ಹಾಸಿಗೆಯಿಂದ, **ಅನುತ್ಥಿತ ಏವ** ಏಳದೆಯೇ, **ಸುಷ್ವಾಪ** ಮಲಗಿದನು.

**ತಾತ್ಪರ್ಯ** :- ಭೀಮಸೇನ ಎಂಟು ಮಹಾನಾಗಸಮೂಹಗಳನ್ನು ದೂರಕ್ಕೆಸೆದ. ಅವುಗಳ ವಂಶದಲ್ಲಿ ಜನಿಸಿದ ಇತರ ಕೆಟ್ಟ ಹಾವುಗಳನ್ನು ಇರುವೆಗಳಂತೆ ಹೊಸಗಿ ಹಾಕಿದ. ಸಾರಥಿಯನ್ನು ಮುಂಗೈಯಿಂದಲೇ ಕೊಂದ. ಹಿಂದಿನಂತೆ ಹಾಸಿಗೆಯಿಂದ ಏಳದೆಯೇ ಮಲಗಿದ. ('ಉರುನಾಗವರಾನ್ ಅಥಾಷ್ಟೌ' ಎಂಬುದಾಗಿಯೂ ಕೆಲವೆಡೆ ಪಾಠವಿದೆ.)

ತತ್ ತಸ್ಯ ನೈಜಬಲಮಪ್ರತಿಮಂ ನಿರೀಕ್ಷ್ಯ
ಸರ್ವೇ ಕ್ಷಿತೀಶತನಯಾ ಅಧಿಕಂ ವಿಷೇದುಃ ।
ನಿಃಶ್ವಾಸತೋ ದರ್ಶನಾದಪಿ ಭಸ್ಮ ಯೇಷಾಂ
ಭೂಯಾಸುರೇವ ಭುವನಾನಿ ಚ ತೇ ಮೃಷಾಽಽಸನ್ ॥೭೮॥

**ಅರ್ಥ** :- **ತಸ್ಯ** ಆ ಭೀಮಸೇನನ, **ಅಪ್ರತಿಮಂ** ಅಸದೃಶವಾದ, **ತತ್** ಪೂರ್ವೋಕ್ತವಾದ, **ನೈಜಬಲಂ** ಸ್ವಾಭಾವಿಕಬಲವನ್ನು, **ನಿರೀಕ್ಷ್ಯ** ನೋಡಿ, **ಸರ್ವೇ** ಎಲ್ಲ **ಕ್ಷಿತೀಶತನಯಾಃ** ರಾಜಕುಮಾರರು, **ಅಧಿಕಂ** ಬಹಳವಾಗಿ, **ವಿಷೇದುಃ** ವಿಷಾದ ಹೊಂದಿದರು, **ಯೇಷಾಂ** ಯಾವ ನಾಗಗಳ, **ನಿಃಶ್ವಾಸತಃ** ನಿಶ್ವಾಸದಿಂದ, **ಚ** ಮತ್ತು, **ದರ್ಶನಾದಪಿ** ದರ್ಶನದಿಂದಲೂ, **ಭುವನಾನಿ ಚ** ಲೋಕಗಳೂ, (ಲೋಕದಲ್ಲಿರುವ ಜನರು ಮಾತ್ರವಲ್ಲ), **ಭಸ್ಮ ಭೂಯಾಸುಃ** ಭಸ್ಮವಾಗುವವೋ, **ತೇ ಚ** ಆ ನಾಗಗಳೂ, **ಮೃಷಾಽಽಸನ್** ವ್ಯರ್ಥವಾದವು.

**ತಾತ್ಪರ್ಯ** :- ಭೀಮಸೇನನ ಅಸದೃಶವಾದ ಸ್ವಾಭಾವಿಕ ಬಲವನ್ನು ನೋಡಿ ರಾಜಕುಮಾರರೆಲ್ಲ ಅತ್ಯಂತ ವಿಷಣ್ಣರಾದರು. ಯಾವ ನಾಗಗಳ ನಿಃಶ್ವಾಸದಿಂದಲೂ ದರ್ಶನದಿಂದಲೂ, ಲೋಕದಲ್ಲಿರುವ ಜನರು ಮಾತ್ರವಲ್ಲ, ಲೋಕಗಳೂ ಭಸ್ಮವಾಗುವವೋ ಅಂತಹ ನಾಗಗಳ ಪ್ರಯತ್ನ ಭೀಮಸೇನನ ವಿಷಯದಲ್ಲಿ ವಿಫಲವಾಯಿತು.

ದದ್ಭಿರ್ವಿದಶ್ಯ ನ ವಿಕಾರಮಮುಷ್ಯ ಕರ್ತುಂ
ಶೇಕುರ್ಭುಜಂಗಮವರಾ ಅಪಿ ಸುಪ್ರಯತ್ನಾಃ ।
ಕಸ್ಯಾಪಿ ನೇದೃಶಬಲಂ ಶ್ರುತಪೂರ್ವಮಾಸೀದ್
ದ್ರಷ್ಟುಂ ಕಿಮು ಸ್ಮ ತನಯೇಽಪಿ ಹಿರಣ್ಯಕಸ್ಯ ॥ ೭೯ ॥

**ಅರ್ಥ** :- **ಭುಜಂಗಮವರಾಃ** ಶ್ರೇಷ್ಠ ಸರ್ಪಗಳು, **ಸುಪ್ರಯತ್ನಾ ಅಪಿ** ಅತಿ ಪ್ರಯತ್ನ ಮಾಡಿದರೂ, **ದದ್ಭಿಃ** ಹಲ್ಲುಗಳಿಂದ, **ವಿದಶ್ಯ** ಕಚ್ಚಿ, **ಅಮುಷ್ಯ** ಈ ಭೀಮನಿಗೆ, **ವಿಕಾರಂ** ಗಾಯ, ಮೋಹ ಮುಂತಾದ ವಿಕಾರವನ್ನು, **ಕರ್ತುಂ** ಮಾಡಲು, **ನ ಶೇಕುಃ** ಸಮರ್ಥವಾಗಲಿಲ್ಲ, **ಈದೃಶಬಲಂ** ಇಂತಹ ಬಲವು ಅಂದರೆ ಭೀಮನಿಗೆ ಸಮಾನ ಬಲವು, **ಕಸ್ಯಾಪಿ** ಯಾರಿಗೂ, **ಶ್ರುತಪೂರ್ವಂ ನಾಸೀತ್** ಈ ಮೊದಲು ಕಿವಿಗೆ ಬಿದ್ದಿಲ್ಲ, **ದ್ರಷ್ಟುಂ ಕಿಮು ಸ್ಮ** (ಹೀಗಿರುವಾಗ)

ಕಣ್ಣಿಗೆ ಹೇಗೆ ಬಿದ್ದೀತು?, **ಹಿರಣ್ಯಕಸ್ಯ** ಹಿರಣ್ಯಕಶಿಪುವಿನ, **ತನಯೇಽಪಿ** ಮಗನಾದ ಪ್ರಹ್ಲಾದನಲ್ಲಿಯೂ, **ಈ ದೃಶಬಲಂ** ಇಂತಹ ಬಲವು, **ಶ್ರುತ ಪೂರ್ವಂ ನಾಽಸೀತ್** (ಇದ್ದಿತೆಂದು) ಕಿವಿಗೆ ಬಿದ್ದಿಲ್ಲ.

**ತಾತ್ಪರ್ಯ** :- ಆ ಶ್ರೇಷ್ಠನಾಗಗಳು ಹಲ್ಲುಗಳಿಂದ ಕಚ್ಚಿ ಮಹಾಪ್ರಯತ್ನ ಮಾಡಿದರೂ ಭೀಮಸೇನನಿಗೆ ಯಾವುದೇ ವಿಕಾರವನ್ನುಂಟು ಮಾಡಲು ಸಮರ್ಥವಾಗಲಿಲ್ಲ. ಇನ್ನು ಯಾರಿಗೂ ಇಂತಹ ಬಲವಿತ್ತೆಂದು ಹಿಂದೆ ಕೇಳಿಲ್ಲ. ಹೀಗಿರುವಾಗ ಕಂಡಿಲ್ಲವೆಂದು ಇನ್ನೇನು ಹೇಳಬೇಕು. ಹಿರಣ್ಯಕಶಿಪುವಿನ ಮಗನಾದ ಪ್ರಹ್ಲಾದನಲ್ಲಿಯೂ ಇಂತಹ ಬಲವಿತ್ತೆಂದು ಕೇಳಿಲ್ಲ.

**ಸ್ವಾತ್ಮಾವನಾರ್ಥಮಧಿಕಾಂ ಸ್ತುತಿಮೇವ ಕೃತ್ವಾ**
**ವಿಷ್ಣೋಃ ಸ ದೈತ್ಯತನಯೋ ಹರಿಣಾಽಽವಿತೋಽಭೂತ್ ।**
**ನ ತ್ವೌರಸಂ ಬಲಮಮುಷ್ಯ ಸ ಕೃಷ್ಯತೇ ಹಿ**
**ಭೃತ್ಯೈರ್ಬಲಾತ್ ಸ್ವಪಿತುರೌರಸಮಸ್ಯ ವೀರ್ಯಮ್ ॥ ೮೦ ॥**

**ಅರ್ಥ** :- **ಸಃ** ಆ **ದೈತ್ಯತನಯಃ** ಹಿರಣ್ಯಕನ ಮಗನಾದ ಪ್ರಹ್ಲಾದನು, **ಸ್ವಾತ್ಮಾವನಾರ್ಥಂ** ತನ್ನ ರಕ್ಷಣೆಗಾಗಿ, **ವಿಷ್ಣೋಃ** ವಿಷ್ಣುವಿನ, **ಸ್ತುತಿಂ** ಸ್ತೋತ್ರವನ್ನು **ಕೃತ್ವೈವ** ಮಾಡಿಯೇ, **ಹರಿಣಾ** ಹರಿಯಿಂದ, **ಆವಿತಃ ಅಭೂತ್** ರಕ್ಷಿಸಲ್ಪಟ್ಟನು, **ಸಃ** ಆ ಪ್ರಹ್ಲಾದನು, **ಹಿ** ಯಾವ ಕಾರಣದಿಂದ, **ಸ್ವಪಿತುಃ** ತನ್ನ ತಂದೆಯ, **ಭೃತ್ಯೈಃ** ಸೇವಕರಿಂದ, **ಬಲಾತ್** ಬಲಾತ್ಕಾರದಿಂದ, **ಕೃಷ್ಯತೇ** ಸೆಳೆಯಲ್ಪಡುತ್ತಿದ್ದನೋ, **ತಸ್ಮಾತ್** ಆ ಕಾರಣದಿಂದ, **ಅಮುಷ್ಯ** ಈ ಪ್ರಹ್ಲಾದನ, **ಬಲಂ** ಬಲವು, **ಔರಸಂ** ಸ್ವಾಭಾವಿಕವಾದುದು, **ನ** ಅಲ್ಲ, **ಅಸ್ಯ** ಈ ಭೀಮಸೇನನ, **ವೀರ್ಯಂ** ಬಲವು, **ಔರಸಂ** ಸ್ವಾಭಾವಿಕವಾದುದು.

**ವಿಶೇಷ ವಿಷಯ** :ಪ್ರಹ್ಲಾದ ತನ್ನ ರಕ್ಷಣೆಗಾಗಿ ವಿಷ್ಣುವಿನ ಬಹಳ ಸ್ತೋತ್ರ ಮಾಡಿಯೇ ಅವನಿಂದ ರಕ್ಷಿಸಲ್ಪಟ್ಟ. ಅವನದು ಸ್ವಾಭಾವಿಕ ಬಲವಲ್ಲ. ಆದ್ದರಿಂದಲೇ ಹಿರಣ್ಯಕಶಿಪುವಿನ ಭೃತ್ಯರು ಅವನನ್ನು ಬಲಾತ್ಕಾರದಿಂದ ಆಕಡೆ ಈಕಡೆ ಸೆಳೆಯುತ್ತಿದ್ದರು. ಭೀಮನ ಬಲ ಸ್ವಾಭಾವಿಕವಾದುದು.

**ನೈಸರ್ಗಿಕಂ ಪ್ರಿಯಮಿಮಂ ಪ್ರವದಂತಿ ವಿಪ್ರಾ**
**ವಿಷ್ಣೋರ್ನಿತಾಂತಮಪಿ ಸತ್ಯಮಿದಂ ಧ್ರುವಂ ಹಿ ।**

ನೈವಾನ್ಯಥೌರಸಬಲಂ ಭವತೀದೃಶಂ ತದ್
ಉತ್ಸಾದ್ಯ ಏಷ ಹರಿಣೈವ ಸಹೈಷ ನೋಽರ್ಥಃ ॥ ೮೧ ॥

**ಅರ್ಥ** :- **ಇಮಂ** ಈ ಭೀಮನನ್ನು, **ವಿಷ್ಣೋಃ** ವಿಷ್ಣುವಿಗೆ, **ನಿತಾಂತಂ** ಅತ್ಯಂತವಾಗಿ, **ನೈಸರ್ಗಿಕಂ ಪ್ರಿಯಂ** ಸ್ವಾಭಾವಿಕವಾಗಿ ಪ್ರಿಯನು ಎಂದು, **ವಿಪ್ರಾಃ** ಬ್ರಾಹ್ಮಣರು, **ಪ್ರವದಂತಿ** ಹೇಳುತ್ತಾರೆ, **ಇದಂ** ಇದು (ಬ್ರಾಹ್ಮಣ ವಚನವು), **ಧ್ರುವಂ** ನಿಶ್ಚಯವಾಗಿ, **ಸತ್ಯಮಪಿ** ಸತ್ಯವೇ, **ಹಿ** ಇದು ಪ್ರಸಿದ್ಧ **ಅನ್ಯಥಾ** ಹಾಗಿಲ್ಲದಿದ್ದರೆ, **ಈದೃಶಂ** ಇಂತಹ, **ಔರಸಬಲಂ** ಸ್ವಾಭಾವಿಕ ಬಲವು, **ನೈವ (ಭವತಿ)** ಭೀಮನಿಗೆ ಇರಲಾರದು, **ತತ್** ಆದ್ದರಿಂದ, **ಹರಿಣಾ ಸಹ ಏವ** ಹರಿಯೊಂದಿಗೇ, **ಏಷಃ** ಈ ಭೀಮನು, **ಉತ್ಸಾದ್ಯಃ** ನಾಶಗೊಳಿಸಲು ಅರ್ಹನಾಗಿದ್ದಾನೆ, **ಏಷಃ ಏವ** ಇದೇ, ಅವರಿಬ್ಬರ ವಿನಾಶವೇ **ನಃ** ನಮಗೆ, **ಅರ್ಥಃ** ಪ್ರಯೋಜನವು (ಇಷ್ಟವು).

**ತಾತ್ಪರ್ಯ** :- ವಿಷ್ಣುವಿಗೆ ಭೀಮ ಸ್ವಾಭಾವಿಕವಾಗಿ ಅತ್ಯಂತ ಪ್ರಿಯ ನೆಂದು ಬ್ರಾಹ್ಮಣರು ಹೇಳುತ್ತಾರೆ. ಈ ಮಾತು ನಿಜಕ್ಕೂ ಸತ್ಯವೇ. ಇಲ್ಲದಿದ್ದರೆ ಇಂತಹ ಸ್ವಾಭಾವಿಕ ಬಲ ಭೀಮನಲ್ಲಿರಲಾರದು. ಆದ್ದರಿಂದ ಹರಿಯೊಂದಿಗೇ ಇವನನ್ನು ನಾಶಗೊಳಿಸಬೇಕು. ಇದೇ ನಮಗೆ ಇಷ್ಟವಾದುದು.

ಕೃಷ್ಣಃ ಕಿಲೈಷ ಚ ಹರಿರ್ಯದುಷು ಪ್ರಜಾತಃ
ಸೋಽಸ್ಯಾಶ್ರಯಃ ಕುರುತ ತಸ್ಯ ಬಹುಪ್ರತೀಪಮ್ ।
ಸಮ್ಮಂತ್ರ್ಯ ಚೈವಮತಿಪಾಪತಮಾ ನರೇಂದ್ರ-
ಪುತ್ರಾ ಹರೇಶ್ಚ ಬಹು ಚಕ್ರುರಥ ಪ್ರತೀಪಮ್ ॥ ೮೨ ॥

**ಅರ್ಥ** :- **ಯದುಷು** ಯದುಗಳಲ್ಲಿ, **ಪ್ರಜಾತಃ** ಹುಟ್ಟಿದ, **ಏಷಃ** ಈ ಕೃಷ್ಣನು, **ಹರಿಶ್ಚ ಕಿಲ** ಹರಿಯೇ ತಾನೆ, **ಸಃ** ಆ ಶ್ರೀಕೃಷ್ಣನು, **ಅಸ್ಯ** ಈ ಭೀಮಸೇನನಿಗೆ, **ಆಶ್ರಯಃ** ಆಶ್ರಯನು, **ತಸ್ಯ** ಆ ಶ್ರೀಕೃಷ್ಣನ, **ಬಹುಪ್ರತೀಪಂ** ಬಹಳ ವಿರೋಧವನ್ನು, **ಕುರುತ** ಮಾಡಿರಿ, **ಏವಂ** ಈ ರೀತಿಯಾಗಿ, **ಸಂಮಂತ್ರ್ಯ** ಮಂತ್ರಾಲೋಚನೆ ಮಾಡಿ, **ಅತಿಪಾಪತಮಾಃ** ಅತ್ಯಂತ ಪಾಪಿಷ್ಠ ರಾದ, **ನರೇಂದ್ರಪುತ್ರಾಃ** ರಾಜಕುಮಾರರು, **ಅಥ** ಬಳಿಕ **ಹರೇಃ** ಶ್ರೀಕೃಷ್ಣನಿಗೆ, **ಬಹು** ಬಹಳವಾಗಿ, **ಪ್ರತೀಪಂ** ವಿರೋಧವನ್ನು, **ಚಕ್ರುಃ** ಮಾಡಿದರು.

ತಾತ್ಪರ್ಯ :- ಹರಿಯೇ ಯಾದವರಲ್ಲಿ ಶ್ರೀಕೃಷ್ಣನಾಗಿ ಜನಿಸಿದ್ದಾನೆ ಎನ್ನುತ್ತಾರೆ. ಅವನೇ ಭೀಮನಿಗೆ ಆಶ್ರಯ. ಆದ್ದರಿಂದ ಅವನಿಗೇ ಬಹಳ ವಿರೋಧ ಮಾಡಿರಿ ಎಂದು ಮಂತ್ರಾಲೋಚನೆ ಮಾಡಿ ಬಳಿಕ ಅತ್ಯಂತ ಪಾಪಿಷ್ಠರಾದ ಆ ರಾಜಕುಮಾರರು ಶ್ರೀಕೃಷ್ಣನಿಗೆ ಬಹಳ ವಿರೋಧ ಮಾಡಿದರು.

**ತೈಃ ಪ್ರೇರಿತಾ ನೃಪತಯಃ ಪಿತರಶ್ಚ ತೇಷಾಂ**
**ಸಾಕಂ ಬೃಹದ್ರಥಸುತೇನ ಹರೇಃ ಸಕಾಶಮ್ ।**
**ಯುದ್ಧಾಯ ಜಗ್ಮುರಮುನಾಽಷ್ಟದಶೇಷು ಯುದ್ಧೇ -**
**ಷ್ವತ್ಯಂತಭಗ್ನಬಲದರ್ಪಮದಾ ನಿವೃತ್ತಾಃ ॥ ೮೩ ॥**

**ಅರ್ಥ** :- **ತೈಃ** ಅಸುರಾಂಶರಾದ ಆ ರಾಜಕುಮಾರರಿಂದ, **ಪ್ರೇರಿತಾಃ** ಪ್ರೇರಿಸಲ್ಪಟ್ಟ, **ನೃಪತಯಃ** ರಾಜರು, **ತೇಷಾಂ** ಅವರ, **ಪಿತರಶ್ಚ** ತಂದೆಯರೂ, **ಬೃಹದ್ರಥಸುತೇನ ಸಾಕಂ** ಜರಾಸಂಧನೊಂದಿಗೆ, **ಹರೇಃ ಸಕಾಶಂ** ಶ್ರೀಕೃಷ್ಣ ಬಳಿ, **ಯುದ್ಧಾಯ ಜಗ್ಮುಃ** ಯುದ್ಧಕ್ಕೆ ಹೋದರು, **ಅಮುನಾ** ಈ ಶ್ರೀಕೃಷ್ಣನಿಂದ, **ಅಷ್ಟಾದಶೇಷು** ಹದಿನೆಂಟು, **ಯುದ್ಧೇಷು** ಯುದ್ಧಗಳಲ್ಲಿ, **ಅತ್ಯಂತಭಗ್ನ ಬಲದರ್ಪಮದಾಃ ಅತ್ಯಂತ** ಅತ್ಯಂತವಾಗಿ, **ಭಗ್ನ** ಮುರಿದ, **ಬಲದರ್ಪ ಮದಾಃ ಬಲ** ಬಲವು, **ದರ್ಪ** ದರ್ಪವು, **ಮದಾಃ** ಮದ ಇವುಗಳುಳ್ಳವರಾಗಿ, **ನಿವೃತ್ತಾಃ ಜಗ್ಮುಃ** ಹಿಂತಿರುಗಿ ಹೋದರು.

ತಾತ್ಪರ್ಯ :- ಆ ಅಸುರಾಂಶ ರಾಜಕುಮಾರರಿಂದ ಪ್ರೇರಿತರಾಗಿ ರಾಜರೂ. ಅವರ ತಂದೆಯರೂ ಜರಾಸಂಧನೊಂದಿಗೆ ಶ್ರೀಕೃಷ್ಣನ ಹತ್ತಿರ ಯುದ್ಧಕ್ಕೆ ಹೋದರು. ಹದಿನೆಂಟು ಯುದ್ಧಗಳಲ್ಲೂ, ಶ್ರೀಕೃಷ್ಣ ಅವರ ಬಲದರ್ಪ ಅಹಂಕಾರಗಳನ್ನು ಬಹಳವಾಗಿ ಮುರಿದ. ಅವರು ಸೋತು ಹಿಂತಿರುಗಿದರು.

**ತೇನಾಽಗೃಹೀತಗಜವಾಜಿರಥಾ ನಿತಾಂತಂ**
**ಶಸ್ತ್ರೈ ಪರಿಕ್ಷತತನೂಭಿರಲಂ ವಮಂತಃ ॥**
**ರಕ್ತಂ ವಿಶಸ್ತ್ರ ಕವಚಧ್ವಜವಾಜಿಸೂತಾಃ**
**ಪ್ರಸ್ತಾಂಬರಾಃ ಶ್ಲಥಿತಮೂರ್ಧಜಿನೋ ನಿವೃತ್ತಾಃ ॥ ೮೪ ॥**

**ಅರ್ಥ** :- **ತೇನ** ಆ ಶ್ರೀಕೃಷ್ಣನಿಂದ, **ಆಗೃಹೀತಗಜವಾಜಿರಥಾಃ ಆಗೃಹೀತ** ಅಪಹರಿಸಲ್ಪಟ್ಟ, **ಗಜ** ಆನೆ, **ವಾಜಿ** ಕುದುರೆ, **ರಥಾಃ** ರಥಗಳುಳ್ಳವರಾಗಿ,

ನಿತಾಂತಂ ಅತ್ಯಂತವಾಗಿ, **ಶಸ್ತ್ರೈಃ** ಶಸ್ತ್ರಗಳಿಂದ, **ಪರಿಕ್ಷತತನೂಭಿಃ** ಗಾಯ ಗೊಂಡ ಅವಯವಗಳಿಂದ, **ಅಲಂ** ಚೆನ್ನಾಗಿ, **ರಕ್ತಂ** ರಕ್ತವನ್ನು **ವಮಂತಃ** ಕಾರುತ್ತಾ, **ವಿಶಸ್ತ್ರಕವಚಧ್ವಜವಾಜಿಸೂತಾಃ** ವಿ ವಿಗತವಾದ (ನಷ್ಟವಾದ), **ಶಸ್ತ್ರ** ಶಸ್ತ್ರವು, **ಕವಚ** ಕವಚವು, **ಧ್ವಜ** ಧ್ವಜವು, **ವಾಜಿ** ಕುದುರೆ, **ಸೂತಾಃ** ಸಾರಥಿ ಇವುಗಳುಳ್ಳವರಾಗಿ, **ಪ್ರಸ್ತಾಂಬರಾಃ** ಜಾರಿದ ಬಟ್ಟೆಗಳುಳ್ಳವರಾಗಿ, **ಶ್ಲಥಿತ ಮೂರ್ಧಜನಃ** ಶ್ಲಥಿತ ಬಿಚ್ಚಿದ, **ಮೂರ್ಧಜನಃ** ಕೂದಲುಳ್ಳವರಾಗಿ, **ನಿವೃತ್ತಾಃ** ಹಿಂತಿರುಗಿದರು.

**ತಾತ್ಪರ್ಯ** :- ಯುದ್ಧದಲ್ಲಿ ಶ್ರೀಕೃಷ್ಣ ಆ ರಾಜರ ರಥ-ಕುದುರೆ-ಆನೆಗಳನ್ನು ಅಪಹರಿಸಿದ. ಶಸ್ತ್ರ ಕವಚ ಧ್ವಜ ಕುದುರೆ ಸಾರಥಿಗಳನ್ನು ನಾಶಪಡಿಸಿದ. ಅವರ ಅವಯವಗಳು ಶ್ರೀಕೃಷ್ಣನ ಶಸ್ತ್ರಗಳಿಂದ ಬಹಳ ಗಾಯ ಗೊಂಡವು. ವಸ್ತ್ರಗಳು ಜಾರಿದವು. ಕೂದಲು ಬಿಚ್ಚಿದವು. ಚೆನ್ನಾಗಿ ರಕ್ತ ಕಾರುತ್ತಾ ಅವರು ಹಿಂತಿರುಗಿ ಹೋದರು.

**ಏವಂ ಬೃಹದ್ರಥಸುತೋಽಪಿ ಸುಶೋಚ್ಯರೂಪ**
**ಆರ್ತೋ ಯಯೌ ಬಹುಶ ಏವ ಪುರಂ ಸ್ವಕೀಯಮ್ ।**
**ಕೃಷ್ಣೇನ ಪೂರ್ಣಬಲವೀರ್ಯಗುಣೇನ ಮುಕ್ತೋ**
**ಜೀವೇತ್ಯತೀವ ವಿಜಿತಃ ಶ್ವಸಿತಾವಶೇಷಃ ॥ ೮೫ ॥**

**ಅರ್ಥ** :- **ಏವಂ** ಹೀಗೆ, **ಬೃಹದ್ರಥಸುತೋಽಪಿ** ಜರಾಸಂಧನೂ, **ಬಹುಶಃ** ಅನೇಕ ಬಾರಿ **ಸುಶೋಚ್ಯರೂಢಃ** ಅತಿಶೋಚನೀಯವಾದ ಆಕಾರವುಳ್ಳವನಾಗಿ, **ಆರ್ತ ಏವ** ದುಃಖಿತನಾಗಿಯೇ, **ಸ್ವಕೀಯಂ ಪುರಂ** ತನ್ನ ಪಟ್ಟಣಕ್ಕೆ, **ಯಯೌ** ಹೋದನು, **ಪೂರ್ಣಬಲವೀರ್ಯಗುಣೇನ** ಪೂರ್ಣ ವಾದ ಬಲವೀರ್ಯಗಳೆಂಬ ಗುಣಗಳುಳ್ಳ, **ತೇನ** ಆ ಕೃಷ್ಣನಿಂದ, **ಅತೀವ** ಅತ್ಯಂತವಾಗಿ, **ವಿಜಿತಃ** ಪರಾಜಿತನಾಗಿ, **ಜೀವ ಇತಿ** ಬದುಕಿಕೋ ಎಂದು, **ಶ್ವಸಿತಾವಶೇಷಃ** ಶ್ವಾಸಮಾತ್ರವುಳ್ಳವನಾಗಿ, **ಮುಕ್ತಃ** ಬಿಡಲ್ಪಟ್ಟನು.

**ತಾತ್ಪರ್ಯ** :- ಹೀಗೆ ಜರಾಸಂಧನೂ ಅನೇಕ ಬಾರಿ ಅತ್ಯಂತ ಶೋಚನೀಯ ಆಕಾರವನ್ನು ಹೊಂದಿ ದುಃಖದಿಂದಲೇ ತನ್ನ ಪಟ್ಟಣವಾದ ಗಿರಿವ್ರಜಕ್ಕೆ ತೆರಳಿದ. ಪೂರ್ಣವಾದ ಬಲವೀರ್ಯಗಳನ್ನು ಹೊಂದಿದ್ದ ಶ್ರೀಕೃಷ್ಣ ಅವನನ್ನು ಬಲುಪರಾಭವಗೊಳಿಸಿ, 'ಬದುಕಿಕೋ' ಎನ್ನುತ್ತಾ ಶ್ವಾಸಮಾತ್ರ ಉಳಿಸಿ ಬಿಟ್ಟುಬಿಟ್ಟನು.

ಏವಂ ಗತೇಷು ಬಹುಶೋ ನತಕಂಧರೇಷು
ರಾಜಸ್ವಜೋಽಪಿ ಮಧುರಾಂ ಸ್ವಪುರೀಂ ಪ್ರವಿಶ್ಯ ।
ರಾಮೇಣ ಸಾರ್ಧಮಖಿಲೈರ್ಯದುಭಿಃ ಸಮೇತೋ
ರೇಮೇ ರಮಾಪತಿರಚಿಂತ್ಯಬಲೋ ಜಯಶ್ರೀಃ ॥ ೮೬ ॥

**ಅರ್ಥ** :- **ಏವಂ** ಹೀಗೆ, **ಬಹುಶಃ** ಅನೇಕಬಾರಿ, **ನತಕಂಧರೇಷು** ತಲೆತಗ್ಗಿಸಿಕೊಂಡು, **ರಾಜಸು** ರಾಜರು, **ಗತೇಷು** ಸತ್ತು ಹೊರಟು ಹೋಗುತ್ತಿರಲು, **ಅಚಿಂತ್ಯಬಲಃ** ಅಚಿತ್ಯ ಶಕ್ತಿಯುಳ್ಳ, **ಅಜಃ** ಜನನ ರಹಿತನಾದ, **ರಮಾಪತಿರಪಿ** ಶ್ರೀಕೃಷ್ಣನೂ, **ಜಯಶ್ರೀಃ** ಜಯಲಕ್ಷ್ಮೀಸಮೇತನಾಗಿ **ಸ್ವಪುರೀಂ** ತನ್ನ ಪಟ್ಟಣವಾದ ಮಧುರೆಯನ್ನು **ಪ್ರವಿಶ್ಯ** ಪ್ರವೇಶಿಸಿ **ರಾಮೇಣ ಸಾರ್ಧಂ** ಬಲರಾಮನೊಂದಿಗೆ **ಅಖಿಲೈಃ** ಎಲ್ಲ **ಯದುಭಿಃ** ಯಾದವರಿಂದ **ಸಮೇತಃ** ಕೂಡಿಕೊಂಡು **ರೇಮೇ** ವಿಹರಿಸಿದನು.

**ತಾತ್ಪರ್ಯ** :- ಹೀಗೆ ರಾಜರು ಅನೇಕ ಬಾರಿ ಸೋತು ತಲೆ ತಗ್ಗಿಸಿಕೊಂಡು ಹೊರಟುಹೋದರು. ಆಗ ಅಚಿಂತ್ಯಶಕ್ತಿಯುಳ್ಳ ಜನನ ರಹಿತನಾದ ಶ್ರೀಕೃಷ್ಣನೂ ಜಯಲಕ್ಷ್ಮಿ ಸಮೇತನಾಗಿ ತನ್ನ ಪಟ್ಟಣವಾದ ಮಧುರೆಯನ್ನು ಪ್ರವೇಶಿಸಿದ. ಅಲ್ಲಿ ಬಲರಾಮನಿಂದಲೂ ಯಾದವರಿಂದಲೂ ಕೂಡಿಕೊಂಡು ವಿಹರಿಸಿದನು.

ವ್ಯರ್ಥೋದ್ಯಮಾಃ ಪುನರಪಿ ಸ್ಮ ಸಧಾರ್ತರಾಷ್ಟ್ರಾ
ಭೀಮಂ ನಿಹಂತುಮುರುಯತ್ನಮಕುರ್ವತಾಜ್ಞಾಃ ।
ರಾಜ್ಞಾಂ ಸುತಾಸ್ತಮಖಿಲಂ ಸ ಮೃಷೈವ ಕೃತ್ವಾ
ಚಕ್ರೇ ಜಯಾಯ ಚ ದಿಶಾಂ ಬಲವಾನ್ ಪ್ರಯತ್ನಮ್ ॥ ೮೭ ॥

**ಅರ್ಥ** :- **ಸಧಾರ್ತರಾಷ್ಟ್ರಾಃ** ಕೌರವರಿಂದ ಸಮೇತರಾದ, **ಅಜ್ಞಾಃ** ಅಜ್ಞರಾದ, **ರಾಜ್ಞಾಂ ಸುತಾಃ** ರಾಜಕುಮಾರರು, **ವ್ಯರ್ಥೋದ್ಯಮಾ ಅಪಿ** ವಿಫಲವಾದ ಪ್ರಯತ್ನವುಳ್ಳವರಾದರೂ **ಪುನಃ** ಮತ್ತೆ, **ಭೀಮಂ** ಭೀಮನನ್ನು **ನಿಹಂತುಂ** ಕೊಲ್ಲಲು, **ಉರುಯತ್ನಂ** ಮಹಾಪ್ರಯತ್ನವನ್ನು **ಅಕುರ್ವತ** ಮಾಡಿದರು, **ಬಲವಾನ್** ಬಲಿಷ್ಠನಾದ, **ಸಃ** ಆ ಭೀಮಸೇನನು, **ಅಖಿಲಂ** ಎಲ್ಲ, **ತಂ** ವಧೆಯ ಪ್ರಯತ್ನವನ್ನು **ಮೃಷೈವ ಕೃತ್ವಾ** ವ್ಯರ್ಥಗೊಳಿಸಿ, **ದಿಶಾಂ ವಿಜಯಾಯ** ದಿಗ್ವಿಜಯಕ್ಕಾಗಿ, **ಪ್ರಯತ್ನಂ ಚಕ್ರೇ** ಪ್ರಯತ್ನ ಮಾಡಿದನು.

**ತಾತ್ಪರ್ಯ :-** ಕೌರವರ ಜೊತೆಗಿದ್ದ ಆ ರಾಜಕುಮಾರರು ತಮ್ಮ ಪ್ರಯತ್ನ ವಿಫಲವಾದರೂ ಭೀಮನನ್ನು ಕೊಲ್ಲಲು ಪುನಃ ಮಹಾಪ್ರಯತ್ನ ಮಾಡಿದರು. ಆದರೆ ಬಲಿಷ್ಠನಾದ ಭೀಮ ಅದೆಲ್ಲವನ್ನೂ ವಿಫಲಗೊಳಿಸಿ ದಿಗ್ವಿಜಯಕ್ಕೆ ಪ್ರಯತ್ನ ಮಾಡಿದ.

**ಪ್ರಾಚೀಂ ದಿಶಂ ಪ್ರಥಮಮೇವ ಜಿಗಾಯ ಪಶ್ಚಾದ್**
**ಯಾಮ್ಯಾಂ ಜಲೇಶಪರಿಪಾಲಿತಯಾ ಸಹಾನ್ಯಾಂ ।**
**ಯೌ ತೌ ಪುರಾತನದಶಾನನಕುಂಭಕರ್ಣೌ**
**ಮಾತೃಷ್ವಸಾತನಯತಾಂ ಚ ಗತೌ ಜಿಗಾಯ ॥ ೮೮ ॥**

**ಅರ್ಥ :-** (ಭೀಮಸೇನನು) **ಪ್ರಥಮಂ** ಮೊದಲು, **ಪ್ರಾಚೀಂ ದಿಶಂ** ಪೂರ್ವದಿಕ್ಕನ್ನು, **ಜಿಗಾಯ** ಗೆದ್ದನು, **ಪಶ್ಚಾತ್** ಅನಂತರ, **ಯಾಮ್ಯಾಂ ದಿಶಂ** ದಕ್ಷಿಣದಿಕ್ಕನ್ನು, **ಜಲೇಶ ಪರಿಪಾಲಿತಯಾ ಸಹ ಜಲೇಶ** ವರುಣನಿಂದ, **ಪರಿಪಾಲಿತಯಾ** ರಕ್ಷಿಸಲ್ಪಟ್ಟ ಪಶ್ಚಿಮದಿಕ್ಕಿನೊಂದಿಗೆ, **ಅನ್ಯಾಂ ದಿಶಂ** ಉತ್ತರ ದಿಕ್ಕನ್ನೂ, **ಜಿಗಾಯ** ಗೆದ್ದನು, **ಯೌ** ಯಾರು **ಪುರಾತನದಶಾನನ ಕುಂಭಕರ್ಣೌ** ಹಿಂದೆ ರಾವಣ ಕುಂಭಕರ್ಣರಾಗಿದ್ದರೋ, ಈಗ **ಮಾತೃಷ್ವಸಾ ತನಯತಾಂ ಚ ಗತೌ** ತಾಯಿಯಾದ ಕುಂತಿಯ ತಂಗಿಯ ಮಕ್ಕಳಾಗಿ ಹುಟ್ಟಿದ್ದವರನ್ನೂ, **ಜಿಗಾಯ** ಗೆದ್ದನು.

**ತಾತ್ಪರ್ಯ :-** ಭೀಮಸೇನ ಮೊದಲಿಗೆ ಪೂರ್ವದಿಕ್ಕನ್ನು ಗೆದ್ದ. ಬಳಿಕ ದಕ್ಷಿಣ, ಪಶ್ಚಿಮ, ಉತ್ತರದಿಕ್ಕುಗಳನ್ನೂ ಗೆದ್ದ. ಹಿಂದೆ ರಾವಣ ಕುಂಭಕರ್ಣರಾಗಿ ಜನಿಸಿದ್ದವರು ಈಗ ಭೀಮನ ಚಿಕ್ಕಮ್ಮನ ಮಕ್ಕಳಾಗಿ ಜನಿಸಿದ್ದರು. ಅವರನ್ನೂ ಭೀಮ ಗೆದ್ದ.

**ಪೂರ್ವಸ್ತಯೋರ್ಹಿ ದಮಘೋಷಸುತಃ ಪ್ರಜಾತಃ**
**ಪ್ರಾಹುಶ್ಚ ಯಂ ನೃಪತಯಃ ಶಿಶುಪಾಲನಾಮ್ನಾ ।**
**ಅನ್ಯಂ ವದಂತಿ ಚ ಕರೂಶನೃಪಂ ತಥಾಽನ್ಯಂ**
**ಮಾತೃಷ್ವಸಾತನಯಮೇವ ಚ ದಂತವಕ್ರಮ್ ॥ ೮೯ ॥**

**ಅರ್ಥ :- ತಯೋಃ** ಆ ರಾವಣ-ಕುಂಭಕರ್ಣರ ಮಧ್ಯದಲ್ಲಿ, **ಪೂರ್ವಃ** ಜ್ಯೇಷ್ಠನಾದ ರಾವಣನು, **ದಮಘೋಷಸುತಃ** ದಮಘೋಷರಾಜನ ಮಗನಾಗಿ,

**ಪ್ರಜಾತಃ** ಹುಟ್ಟಿದನು, **ನೃಪತಯಃ** ರಾಜರು **ಯಂ** ಯಾವ ದಮಘೋಷನ ಮಗನನ್ನು **ಶಿಶುಪಾಲನಾಮ್ನಾ** ಶಿಶುಪಾಲನೆಂಬ ಹೆಸರಿನಿಂದ, **ಪ್ರಾಹುಃ** ಕರೆಯುತ್ತಾರೆ, **ತಥಾ** ಹಾಗೆ, **ಅನ್ಯಂ** ಶಿಶುಪಾಲನಿಗಿಂತ, ಬೇರೆಯವನಾದ, **ಕರೂಶನೃಪಂ** ಕರೂಶ ದೇಶದ ಅರಸನನ್ನು **ಅನ್ಯಂ ಮಾತೃಷ್ವಸಾತನಯಂ** ಇನ್ನೊಬ್ಬ ಚಿಕ್ಕಮ್ಮನ ಮಗನನ್ನು **ದಂತವಕ್ರಂ** ದಂತವಕ್ರ ಎಂಬುದಾಗಿ, **ವದಂತಿ** ಹೇಳುತ್ತಾರೆ (ಕರೆಯುತ್ತಾರೆ)

**ತಾತ್ಪರ್ಯ** :- ರಾವಣ ಕುಂಭಕರ್ಣರಲ್ಲಿ ಹಿರಿಯನಾದ ರಾವಣ ದಮಘೋಷರಾಜನ ಮಗನಾಗಿ ಜನಿಸಿದ. ಅವನನ್ನು ರಾಜರು ಶಿಶುಪಾಲ ಎಂಬ ಹೆಸರಿನಿಂದ ಕರೆಯುತ್ತಾರೆ. ಇನ್ನೊಬ್ಬ ಕರೂಶದೇಶದ ಅರಸನಾಗಿ, ಚಿಕ್ಕಮ್ಮನ ಮಗನಾಗಿ ಜನಿಸಿದ. ಅವನನ್ನು ರಾಜರು ದಂತವಕ್ರನೆಂದು ಕರೆಯುತ್ತಾರೆ.

**ಜಿತ್ವೈವ ತಾವಪಿ ಜಗಾಯ ಚ ಪೌಂಡ್ರಕಾಖ್ಯಂ**
**ಶೌರೇಃ ಸುತಂ ಸುತಮಜೈದಥ ಭೀಷ್ಮಕಸ್ಯ ।**
**ಯಃ ಪೂರ್ವಮಾಸ ದಿತಿಜೋ ನರಹೇಲ್ವಲಾಖ್ಯೋ**
**ರುಕ್ಮೀತಿ ನಾಮ ಚ ಬಭೂವ ಸ ಕುಂಡಿನೇಶಃ ॥ ೯೦ ॥**

**ಅರ್ಥ** :- **ತಾವಪಿ** ಆ ಶಿಶುಪಾಲ ದಂತವಕ್ರರಿಬ್ಬರನ್ನೂ, **ಜಿತ್ವೈವ** ಗೆದ್ದೇ, **ಪೌಂಡ್ರಕಾಖ್ಯಂ** ಪೌಂಡ್ರಕ ಎಂಬ ಹೆಸರುಳ್ಳ, **ಶೌರೇಃ ಸುತಂ ಚ** ವಸುದೇವನ ಮಗನನ್ನೂ **ಜಗಾಯ** ಗೆದ್ದನು, **ಅಥ** ಅನಂತರ, **ಭೀಷ್ಮಕಸ್ಯ** ಭೀಷ್ಮಕನ, **ಸುತಂ** ಮಗನನ್ನು **ಅಜೈತ್** ಗೆದ್ದನು, **ಯಃ** ಯಾರು, **ಪೂರ್ವಂ** ಹಿಂದೆ, **ಇಲ್ವಲಾಖ್ಯಃ** ಇಲ್ವಲ ಎಂಬ ಹೆಸರುಳ್ಳ, **ನರಹಾ** ನರಹಂತಕನು (ರಾಕ್ಷಸನು), **ಆಸ** ಆಗಿದ್ದನೋ, **ಸಃ** ಅವನು, **ರುಕ್ಮೀತಿ** ರುಕ್ಮೀ ಎಂಬುದಾಗಿ, **ನಾಮಸನ್** ಪ್ರಸಿದ್ಧನಾಗಿ, **ಕುಂಡಿನೇಶಃ ಬಭೂವ** ಕುಂಡಿನಪುರದ ಅಧೀಶನಾದನು.

**ತಾತ್ಪರ್ಯ** :- ಭೀಮ, ಶಿಶುಪಾಲ-ದಂತವಕ್ರರಿಬ್ಬರನ್ನೂ ಗೆದ್ದು ಪೌಂಡ್ರಕ ವಾಸುದೇವ ಎಂಬ ವಸುದೇವನ ಮಗನನ್ನೂ ಗೆದ್ದ. ಅನಂತರ ಭೀಷ್ಮಕನ ಮಗನಾದ ರುಕ್ಮಿಯನ್ನೂ ಗೆದ್ದ. ಹಿಂದೆ ಇಲ್ವಲ ಎಂಬ ನರಹಂತಕ ರಾಕ್ಷಸನಾಗಿದ್ದವನೇ ಈಗ ಕುಂಡಿನಪುರದ ಅಧೀಶನಾಗಿ ರುಕ್ಮಿ ಎಂದು ಪ್ರಸಿದ್ಧನಾಗಿದ್ದ.

ಭಾಗೇತ ಏವ ತನಯಸ್ಯ ಸ ಏವ ವಹ್ನೇಃ
ನಾಮ್ನಾ ಶುಚೇಃ ಸ ತು ಪಿತಾಽಸ್ಯಹಿ ಮಿತ್ರಭಾಗಃ ।
ರಾಹ್ವಂಶಯುಕ್ ತದನುಜೌ ಕ್ರಥಕೈಶಿಕಾಖ್ಯೌ
ಭಾಗೌ ತಥಾಽಗ್ನಿಸುತಯೋಃ ಪವಮಾನಶುಂಧ್ವ್ಯೋಃ ॥ ೯೧ ॥

**ಅರ್ಥ** :- ಸ ಏವ ಅವನೇ (ರುಕ್ಮಿಯು), ವಹ್ನೇಃ ಪ್ರಧಾನಾಗ್ನಿಯ, ತನಯಸ್ಯ ಮಗನಾದ, ನಾಮ್ನಾ ಶುಚೇಃ ಶುಚಿನಾಮಕನ, ಭಾಗೇತ ಏವ : ಭಾಗ ಅಂಶದಿಂದ, ಇತಃ ಏವ ಯುಕ್ತನಾದವನೇ, ಅಸ್ಯ ಈ ರುಕ್ಮಿಯ, ಸಃ ಹಿಂದೆ ಹೇಳಿದ, ಪಿತಾ ತು ತಂದೆಯಾದ, ಭೀಷ್ಮಕನಾದರೂ, **ಮಿತ್ರಭಾಗಃ** ಮಿತ್ರನೆಂಬ ಆದಿತ್ಯನ ಅಂಶನು, ತಥಾ ಹಾಗೆಯೇ, **ರಾಹ್ವಂಶಯುಕ್** ರಾಹುವಿನ ಅಂಶದಿಂದ ಯುಕ್ತನಾದವ, ತಥಾ ಹಾಗೆ, **ಕ್ರಥಕೈಶಕಾಖ್ಯೌ** : ಕ್ರಥ ಕೈಶಿಕರೆಂಬ, **ತದನುಜೌ** ಆ ಭೀಷ್ಮಕನ ತಮ್ಮಂದಿರು, **ಅಗ್ನಿಸುತಯೋಃ** ಅಗ್ನಿಯ ಮಕ್ಕಳಾದ, **ಪವಮಾನಶುಂಧ್ವೋಃ** ಪವಮಾನ ಶುಂಧ್ಯುಗಳ, **ಭಾಗೌ** ಅಂಶರು.

**ತಾತ್ಪರ್ಯ** :- ರುಕ್ಮಿ ಶುಚಿನಾಮಕನಾದ ಪ್ರಧಾನಾಗ್ನಿ ಪುತ್ರನ ಅಂಶದಿಂದ ಕೂಡಿದವ. ಇವನ ತಂದೆ ಭೀಷ್ಮಕನು ಮಿತ್ರನೆಂಬ ಆದಿತ್ಯನ ಅಂಶನು. ಹಾಗೆ ರಾಹುವಿನ ಅಂಶದಿಂದ ಯುಕ್ತನಾಗಿದ್ದ. ಅವನ ತಮ್ಮಂದಿರಾದ ಕ್ರಥಕೈಶಿಕರು ಅಗ್ನಿಪುತ್ರರಾದ ಪವಮಾನ-ಶುಂಧ್ಯುಗಳ ಅಂಶರು.

**ವಿಶೇಷ ವಿಷಯ** :- ರುಕ್ಮಿ ಬರೀ ಇಲ್ವಲನೆಂಬ ದೈತ್ಯನೇ ಆಗಿದ್ದರೆ ರುಕ್ಮಿಣಿಗೆ ಸೋದರನಾಗಿ ಶ್ರೀಕೃಷ್ಣನಿಗೆ ಭಾವನಾಗಿ ಸಂಬಂಧಿಯಾಗುವ ಅರ್ಹತೆ ಬರುತ್ತಿರಲಿಲ್ಲ. ಅವನಲ್ಲಿ ಪ್ರಧಾನಾಗ್ನಿ ಪುತ್ರನಾದ ಶುಚಿ ಎಂಬ ಅಗ್ನಿಯ ಒಂದು ಅಂಶವೂ ಇದ್ದುದರಿಂದ ಆ ಅರ್ಹತೆ ಪ್ರಾಪ್ತವಾಗಿತ್ತು. ಭೀಷ್ಮಕ ಬರೀ ಮಿತ್ರನೆಂಬ ಆದಿತ್ಯನೇ ಆಗಿದ್ದರೆ ರುಕ್ಮಿಣಿಯನ್ನು ಶಿಶುಪಾಲನಿಗೆ ಕೊಡಲು ಮುಂದಾಗುತ್ತಿರಲಿಲ್ಲ. ಅವನಲ್ಲಿ ರಾಹುದೈತ್ಯನ ಅಂಶವಿದ್ದುದರಿಂದ ಹಾಗೆ ಮಾಡಿದ ಎಂದು 'ವಾದಿರಾಜೀಯ'ದಲ್ಲಿದೆ.

ಬಂಧೋರ್ನಿಜಸ್ಯ ತು ಬಲಂ ಸುಪರೀಕ್ಷಮಾಣಃ
ಶಲ್ಯೋಽಪಿ ತೇನ ಯುಯುಧೇ ವಿಜಿತಸ್ತಥೈವ ।
ಭೀಮೋ ಜಿಗಾಯ ಯುಧಿ ವೀರಮಥೈಕಲವ್ಯಂ
ಸರ್ವೇ ನೃಪಾಶ್ಚ ವಿಜಿತಾ ಅಮುನೈವಮೇವ ॥ ೯೨ ॥

**ಅರ್ಥ** :- **ನಿಜಸ್ಯ** ತನ್ನ **ಬಂಧೋಃ** ಬಂಧುವಾದ ಭೀಮನ, **ಬಲಂ** ಬಲವನ್ನು **ಸುಪರೀಕ್ಷಮಾಣಃ** ಚೆನ್ನಾಗಿ ಪರೀಕ್ಷಿಸುವವನಾಗಿ, ಪರೀಕ್ಷಿಸುವದಕ್ಕಾಗಿ, **ಶಲ್ಯೋऽಪಿ** ಶಲ್ಯನೂ, **ತೇನ** ಭೀಮನೊಂದಿಗೆ, **ಯುಯುಧೇ** ಯುದ್ಧಮಾಡಿದನು, **ತಥೈವ** ಶಿಶುಪಾಲಾದಿಗಳಂತೆಯೇ, **ವಿಜಿತಃ ಅಭೂತ್** ಪರಾಜಿತನಾದನು, **ಅಥ** ಬಳಿಕ, **ಭೀಮಃ** ಭೀಮನು, **ಯುಧಿ** ಯುದ್ಧದಲ್ಲಿ, **ವೀರಂ** ವೀರನಾದ, **ಏಕಲವ್ಯಂ** ಏಕಲವ್ಯನನ್ನು, **ಜಿಗಾಯ** ಗೆದ್ದನು, **ಸರ್ವೇ ನೃಪಾಶ್ಚ** ಎಲ್ಲ ರಾಜರೂ, **ಏವಮೇವ** ಹೀಗೆಯೇ, **ಅಮುನಾ** ಈ ಭೀಮನಿಂದ, **ವಿಜಿತಾಃ** ಪರಾಜಿತರಾದರು.

**ತಾತ್ಪರ್ಯ** :- ದಿಗ್ವಿಜಯ ಯಾತ್ರೆಯ ಸಮಯದಲ್ಲಿ ಭೀಮನೊಂದಿಗೆ ಸೋದರಮಾವನಾದ ಶಲ್ಯನೂ ಯುದ್ಧಮಾಡಿದನು. ತನ್ನ ಬಂಧುವಾದ ಭೀಮನ ಬಲಪರೀಕ್ಷೆಯೇ ಅವನ ಮುಖ್ಯ ಉದ್ದೇಶವಾಗಿತ್ತು. ಯುದ್ಧ ಮಾಡಿ ಶಿಶುಪಾಲಾದಿಗಳಂತೆ ಪರಾಜಿತನೂ ಆದ. ಅನಂತರ ಭೀಮ ಯುದ್ಧದಲ್ಲಿ ವೀರ ಏಕಲವ್ಯನನ್ನೂ ಗೆದ್ದನು. ಹೀಗೆ ಎಲ್ಲ ರಾಜರೂ ಭೀಮನಿಂದ ಪರಾಜಿತರಾದರು.

**ತದ್ಬಾಹುವೀರ್ಯಪರಿಪಾಲಿತ ಇಂದ್ರಸೂನುಃ**
**ಶೇಷಾನ್ ನೃಪಾಂಶ್ಚ ಸಮಜೈದ್ ಬಲವಾನಯತ್ನಾತ್ ।**
**ಸಾಲ್ವಂ ಚ ಹಂಸಡಿಭಕೌ ಚ ವಿಜಿತ್ಯ ಭೀಮೋ**
**ನಾಗಾಹ್ವಯಂ ಪುರಮಗಾತ್ ಸಹಿತೋऽರ್ಜುನೇನ ॥ ೯೩ ॥**

**ಅರ್ಥ** :- **ತದ್ಬಾಹುವೀರ್ಯಪರಿಪಾಲಿತಃ** : **ತದ್ಬಾಹುವೀರ್ಯ** ಆ ಭೀಮನ ಬಾಹುಬಲದಿಂದ, **ಪರಿಪಾಲಿತಃ** ರಕ್ಷಿಸಲ್ಪಟ್ಟ **ಬಲವಾನ್** ಬಲಿಷ್ಠನಾದ, **ಇಂದ್ರಸೂನುಃ** ಅರ್ಜುನನು, **ಶೇಷಾನ್** ಉಳಿದ, **ನೃಪಾನ್** ರಾಜರನ್ನು, **ಅಯತ್ನಾತ್** ಅನಾಯಾಸದಿಂದ, **ಸಮಜೈತ್** ಗೆದ್ದನು, **ಸಾಲ್ವಂ** ಸಾಲ್ವನನ್ನು, **ಹಂಸಡಿಭಕೌ ಚ** ಹಂಸ ಡಿಭಕರನ್ನೂ, **ವಿಜಿತ್ಯ** ಗೆದ್ದು, **ಭೀಮಃ** ಭೀಮನು, **ಅರ್ಜುನೇನ ಸಹಿತಃ** ಅರ್ಜುನ ಸಮೇತನಾಗಿ, **ನಾಗಾಹ್ವಯಂ ಪುರಂ** ಹಸ್ತಿನಾಪುರವನ್ನು, **ಅಗಾತ್** ಹೋದನು.

**ತಾತ್ಪರ್ಯ** :- ಭೀಮ ಗೆಲ್ಲದೇ ಬಿಟ್ಟದ್ದ ಉಳಿದ ರಾಜರನ್ನು ಬಲಿಷ್ಠನಾದ ಅರ್ಜುನ ಅನಾಯಾಸವಾಗಿ ಗೆದ್ದ. ಅವನಿಗೆ ಭೀಮನ ಬಾಹುಬಲದ

ರಕ್ಷಣೆಯಿತ್ತು. ಆ ಮೇಲೆ ಸಾಲ್ವನನ್ನೂ ಹಂಸ ಡಿಭಕರನ್ನೂ ಗೆದ್ದು ಭೀಮ, ಅರ್ಜುನನ ಜೊತೆಗೆ ಹಸ್ತಿನಾಪುರಕ್ಕೆ ಹೋದ.

**ತದ್‌ಬಾಹುವೀರ್ಯಮಥ ವೀಕ್ಷ್ಯ ಮುಮೋದ ಧರ್ಮ-**
**ಸೂನುಃ ಸಮಾತೃಯಮಜೋ ವಿದುರಃ ಸ ಭೀಷ್ಮಃ ।**
**ಅನ್ಯೇ ಚ ಸಜ್ಜನಗಣಾಃ ಸಹಪೌರರಾಷ್ಟ್ರಾಃ**
**ಶ್ರುತ್ವೈವ ಸರ್ವಯದವೋ ಜಹೃಷುರ್ನಿತಾಂತಮ್ ॥ ೯೪ ॥**

**ಅರ್ಥ :-** **ಅಥ** ಅನಂತರ, **ತದ್‌ಬಾಹುವೀರ್ಯಂ** ಭೀಮನ ಬಾಹು ಬಲವನ್ನು ಅಥವಾ ಭೀಮಾರ್ಜುನರ ಬಾಹುಬಲವನ್ನು, **ವೀಕ್ಷ್ಯ** ನೋಡಿ, **ಸಮಾತೃಯಮಜಃ** ಕುಂತೀ, ನಕುಲಸಹದೇವರಿಂದ ಸಹಿತನಾದ, **ಧರ್ಮ ಸೂನುಃ** ಧರ್ಮರಾಜನು, **ಮುಮೋದ** ಸಂತಸಪಟ್ಟನು, **ಸಭೀಷ್ಮಃ** ಭೀಷ್ಮರಿಂದ ಸಮೇತನಾದ, **ವಿದುರಃ** ವಿದುರನು, **ಸಹಪೌರರಾಷ್ಟ್ರಾಃ** ಪಟ್ಟಣಿಗರು-ದೇಶವಾಸಿಗಳಿಂದ ಸಹಿತರಾದ, **ಅನ್ಯೇ** ಬೇರೆ, **ಸಜ್ಜನಗಣಾಶ್ಚ** ಸಜ್ಜನ ಸಮೂಹ ಗಳೂ, **ಮುಮುದುಃ** ಸಂತಸಪಟ್ಟರು, **ಶ್ರುತ್ವೈವ** ಭೀಮನ ದಿಗ್ವಿಜಯದ ಸಮಾಚಾರವನ್ನು ಕೇಳಿಯೇ, **ಸರ್ವಯದವಃ** ಎಲ್ಲ ಯದುಗಳೂ, **ನಿತಾಂತಂ** ಅತ್ಯಂತವಾಗಿ, **ಜಹೃಷುಃ** ಆನಂದಪಟ್ಟರು.

**ತಾತ್ಪರ್ಯ :-** ಆ ಭೀಮಾರ್ಜುನರ ಅಥವಾ ಭೀಮನ ಬಾಹುಬಲವನ್ನು ನೋಡಿ ಧರ್ಮರಾಜನೂ ಕುಂತಿಯೂ ನಕುಲ ಸಹದೇವರೂ ಸಂತಸಪಟ್ಟರು. ಭೀಷ್ಮ ವಿದುರರೂ ಇತರ ಸಜ್ಜನಸಮೂಹಗಳೂ ಪಟ್ಟಣಿಗರೂ ದೇಶವಾಸಿ ಗಳೂ, ಆನಂದಿಸಿದರು. ಎಲ್ಲ ಯಾದವರೂ ಭೀಮನ ದಿಗ್ವಿಜಯದ ಸಮಾಚಾರವನ್ನು ಕೇಳಿಯೇ ಬಹಳ ಸಂತೋಷಪಟ್ಟರು.

**ಕೃಷ್ಣಃ ಸುಯೋಧನಮುಖಾಕ್ರಮಮಾಂಬಿಕೇಯಂ**
**ಜಾನನ್ ಸ್ವಪುತ್ರವಶವರ್ತಿನಮೇವ ಗತ್ವಾ ।**
**ಶ್ವಾಫಲ್ಕಿನೋ ಗೃಹಮಮುಂ ಧೃತರಾಷ್ಟ್ರಶಾಂತ್ಯೈ**
**ಗಂತುಂ ದಿದೇಶ ಗಜನಾಮ ಪುರಂ ಪರೇಶಃ ॥ ೯೫ ॥**

**ಅರ್ಥ :-** **ಪರೇಶಃ** ಪರಮೇಶ್ವರನಾದ, **ಕೃಷ್ಣಃ** ಶ್ರೀಕೃಷ್ಣನು, **ಆಂಬಿಕೇಯಂ** ಧೃತರಾಷ್ಟ್ರನನ್ನು, **ಸುಯೋಧನಮುಖಾಕ್ರಮಂ** ದುರ್ಯೋಧನನ ಪ್ರಭಾವಕ್ಕೆ

ಒಳಪಟ್ಟವನು, ಆದ್ದರಿಂದಲೇ, **ಸ್ವಪುತ್ರ ವಶವರ್ತಿನಂ** ತನ್ನ ಮಕ್ಕಳ ವಶದಲ್ಲಿರುವನು ಎಂದು, **ಜಾನನ್** ತಿಳಿದವನಾಗಿ, **ಶ್ವಾಫಲ್ಕಿನಃ** ಅಕ್ರೂರನ, **ಗೃಹಂ** ಮನೆಯನ್ನು, **ಗತ್ವಾ** ಹೋಗಿ, **ಅಮುಂ** ಇವನನ್ನು, **ಧೃತರಾಷ್ಟ್ರಶಾಂತ್ಯೈ** ಧೃತರಾಷ್ಟ್ರನ ದುರ್ನಡತೆಯ ನಿವಾರಣೆಗಾಗಿ, **ಗಜನಾಮಪುರಂ** ಹಸ್ತಿನಾಪುರಿಗೆ, **ಗಂತುಂ** ಹೋಗಲು, **ದಿದೇಶ** ಆದೇಶಿಸಿದನು.

**ತಾತ್ಪರ್ಯ** :- ಧೃತರಾಷ್ಟ್ರ, ಸುಯೋಧನ ಮುಂತಾದವರ ಪ್ರಭಾವಕ್ಕೆ ಒಳಪಟ್ಟವ. ಆದ್ದರಿಂದಲೇ ತನ್ನ ಮಕ್ಕಳ ವಶದಲ್ಲಿಯೇ ಇರುವವ ಎಂದು ಪರಮೇಶ್ವರನಾದ ಶ್ರೀಕೃಷ್ಣನಿಗೆ ಗೊತ್ತಿತ್ತು. ಆದ್ದರಿಂದಲೇ ಅವನು ಅಕ್ರೂರನ ಮನೆಗೆ ಹೋಗಿ ಅವನನ್ನು ಧೃತರಾಷ್ಟ್ರನ ದುರ್ನಡತೆಯ ನಿವಾರಣೆಗಾಗಿ ಹಸ್ತಿನಾಪುರಿಗೆ ತೆರಳಲು ಆದೇಶಿಸಿದ.

**ಸೋಽಯಾದ್ ಗಜಾಹ್ವಯಮಮುತ್ರ ವಿಚಿತ್ರವೀರ್ಯ-**
**ಪುತ್ರೇಣ ಭೀಷ್ಮಸಹಿತೈಃ ಕುರುಭಿಃ ಸಮಸ್ತೈಃ ।**
**ಸಂಪೂಜಿತಃ ಕತಿಪಯಾನವಸಚ್ಚ ಮಾಸಾನ್**
**ಜ್ಞಾತುಂ ಹಿ ಪಾಂಡುಷು ಮನಃ ಪ್ರಸೃತಿಂ ಕುರೂಣಾಮ್ ॥ ೯೬ ॥**

**ಅರ್ಥ** :- **ಸಃ** ಆ ಅಕ್ರೂರನು, **ಗಜಾಹ್ವಯಂ ಅಯಾತ್** ಹಸ್ತಿನಾಪುರಿಗೆ ಹೋದನು, **ಅಮುತ್ರ** ಈ ಹಸ್ತಿನಾಪುರಿಯಲ್ಲಿ, **ವಿಚಿತ್ರವೀರ್ಯಪುತ್ರೇಣ** : ವಿಚಿತ್ರವೀರ್ಯ ವಿಚಿತ್ರವೀರ್ಯನ, **ಪುತ್ರೇಣ** ಮಗನಾದ ಧೃತರಾಷ್ಟ್ರನಿಂದ, **ಚ** ಮತ್ತು, **ಭೀಷ್ಮ ಸಹಿತೈಃ** ಭೀಷ್ಮಸಮೇತರಾದ, **ಸಮಸ್ತೈಃ** ಎಲ್ಲ, **ಕುರುಭಿಃ** ಕೌರವರಿಂದ, **ಸಂಪೂಜಿತಃ ಸನ್** ಚೆನ್ನಾಗಿ ಆದರಿಸಲ್ಪಟ್ಟವನಾಗಿ, **ಪಾಂಡುಷು** ಪಾಂಡವರ ವಿಷಯದಲ್ಲಿ, **ಕುರೂಣಾಂ** ಕೌರವರ, **ಮನಃ ಪ್ರಸೃತಿಂ** ಮನ ಪ್ರವೃತ್ತಿಯನ್ನು, **ಜ್ಞಾತುಂ** ತಿಳಿಯಲು, **ಕತಿಪಯಾನ್ ಮಾಸಾನ್** ಕೆಲವು ತಿಂಗಳುಗಳ ಕಾಲ, **ಅವಸತ್** ವಾಸ ಮಾಡಿದನು.

**ತಾತ್ಪರ್ಯ** :- ಅಕ್ರೂರ ಶ್ರೀಕೃಷ್ಣನ ಆದೇಶದಂತೆ ಹಸ್ತಿನಾವತಿಯನ್ನು ಸೇರಿದ. ಅಲ್ಲಿ ಧೃತರಾಷ್ಟ್ರ ಭೀಷ್ಮ ಮತ್ತು ಎಲ್ಲ ಕೌರವರೂ ಅವನನ್ನು ಚೆನ್ನಾಗಿ ಆದರಿಸಿದರು. ಪಾಂಡವರ ವಿಷಯದಲ್ಲಿ ಕೌರವರ ಮನಃ ಪ್ರವೃತ್ತಿಯನ್ನು ತಿಳಿದುಕೊಳ್ಳಲು ಕೆಲವು ತಿಂಗಳುಗಳ ಕಾಲ ಅಲ್ಲಿ ಅವನು ವಾಸ ಮಾಡಿದನು.

ಜ್ಞಾತ್ವಾ ಸ ಕುಂತಿವಿದುರೋಕ್ತಿತ ಆತ್ಮನಾ ಚ
ಮಿತ್ರಾರಿಮಧ್ಯಮಜನಾನ್ ತನಯೇಷು ಪಾಂಡೋಃ ।
ವಿಜ್ಞಾಯ ಪುತ್ರವಶಗಂ ಧೃತರಾಷ್ಟ್ರಮಂಜಃ
ಸಾಮ್ನೈವ ಭೇದಸಹಿತೇನ ಜಗಾದ ವಿದ್ವಾನ್ ॥ ೯೭ ॥

**ಅರ್ಥ** :- **ಸಃ** ಆ ಅಕ್ರೂರನು, **ಕುಂತಿವಿದುರೋಕ್ತಿತಃ** ಕುಂತಿ-ವಿದುರರ ಮಾತಿನಿಂದಲೂ, **ಆತ್ಮನಾ ಚ** ಸ್ವಾನುಭವದಿಂದಲೂ, **ಪಾಂಡುತನಯೇಷು** ಪಾಂಡವರ ವಿಷಯದಲ್ಲಿ **ಮಿತ್ರಾರಿಮಧ್ಯಮಜನಾನ್** : ಮಿತ್ರ ಮಿತ್ರರು, **ಅರಿ** ಶತ್ರುಗಳು, **ಮಧ್ಯಮಜನಾನ್** ತಟಸ್ಥಜನರು ಇವರುಗಳನ್ನು **ವಿಜ್ಞಾಯ** ತಿಳಿದು, **ಧೃತರಾಷ್ಟ್ರಂ** ಧೃತರಾಷ್ಟ್ರನನ್ನು **ಪುತ್ರವಶಗಂ ಚ ವಿಜ್ಞಾಯ** ಮಕ್ಕಳ ಅಧೀನನೆಂಬುದನ್ನೂ ತಿಳಿದು, **ವಿದ್ವಾನ್** ನೀತಿ ಕೋವಿದನಾದ ಅಕ್ರೂರನು, **ಭೇದಸಹಿತೇನ** ಭೇದ ಯುಕ್ತವಾದ, **ಸಾಮ್ನೈವ** ಸಾಮದಿಂದಲೇ, **ಅಂಜಃ** ಚೆನ್ನಾಗಿ, **ಜಗಾದ** ಉಪದೇಶಿಸಿದನು.

**ತಾತ್ಪರ್ಯ** :- ಅಕ್ರೂರನು ಕುಂತಿ-ವಿದುರರ ಮಾತಿನಿಂದಲೂ ಸ್ವಾನುಭವದಿಂದಲೂ, ಪಾಂಡವರಿಗೆ ಮಿತ್ರರ್ಯಾರು ಶತ್ರುಗಳು ಯಾರು? ತಟಸ್ಥರು ಯಾರು? ಎಂಬುದನ್ನು ತಿಳಿದನು. ಧೃತರಾಷ್ಟ್ರ ಮಕ್ಕಳ ಕೈಗೊಂಬೆ ಎಂಬುದನ್ನೂ ತಿಳಿದು ನೀತಿಜ್ಞನಾದ ಅಕ್ರೂರ ಭೇದಯುಕ್ತವಾದ ಸಾಮೋಪಾಯದಿಂದಲೇ ಧೃತರಾಷ್ಟ್ರನಿಗೆ ಚೆನ್ನಾಗಿ ಉಪದೇಶಿಸಿದನು.

ಪುತ್ರೇಷು ಪಾಂಡುತನಯೇಷು ಚ ಸಾಮ್ಯವೃತ್ತಿಃ
ಕೀರ್ತಿಂ ಚ ಧರ್ಮಮುರುಮೇಷಿ ತಥಾಽರ್ಥಕಾಮೌ ।
ಪ್ರೀತಿಂ ಪರಾಂ ತ್ವಯಿ ಕರಿಷ್ಯತಿ ವಾಸುದೇವಃ
ಸಾಕಂ ಸಮಸ್ತಯದುಭಿಃ ಸಹಿತಃ ಸುರಾದ್ಯೈಃ ॥ ೯೮ ॥

**ಅರ್ಥ** :- **ಪುತ್ರೇಷು** ನಿನ್ನ ಮಕ್ಕಳಲ್ಲಿ **ಚ** ಮತ್ತು, **ಪಾಂಡುತನಯೇಷು** ಪಾಂಡವರಲ್ಲಿ **ಸಾಮ್ಯವೃತ್ತಿಃ** ಸಮಾನವರ್ತನೆವುಳ್ಳವನಾದರೆ (ಸಮಾನವಾಗಿ ನೀನು ನಡೆದು ಕೊಳ್ಳುವದರಿಂದ), **ಕೀರ್ತಿಂ** ಕೀರ್ತಿಯನ್ನು **ಚ** ಮತ್ತು, **ಉರುಂ** ಉತ್ತಮವಾದ, **ಧರ್ಮಂ** ಧರ್ಮವನ್ನು **ತಥಾ** ಹಾಗೆ, **ಅರ್ಥ ಕಾಮೌ ಚ** ಅರ್ಥ ಕಾಮಗಳನ್ನೂ **ಏಷಿ** ಹೊಂದುವಿ, **ಸುರಾದ್ಯೈಃ ಸಹಿತಃ**

ದೇವತೆಗಳೇ ಮೊದಲಾದವರಿಂದ ಕೂಡಿದ, **ವಾಸುದೇವಃ** ಶ್ರೀಕೃಷ್ಣನು, **ಸಮಸ್ತಯದುಭಿಃ ಸಾಕಂ** ಎಲ್ಲ ಯಾದವರೊಂದಿಗೆ, **ತ್ವಯಿ** ನಿನ್ನಲ್ಲಿ, **ಪರಾಂ** ಉತ್ತಮವಾದ, **ಪ್ರೀತಿಂ** ಪ್ರೀತಿಯನ್ನು, **ಕರಿಷ್ಯತಿ** ಮಾಡುವನು.

**ತಾತ್ಪರ್ಯ :-** ನೀನು, ನಿನ್ನ ಮಕ್ಕಳಲ್ಲಿಯೂ ಪಾಂಡವರಲ್ಲಿಯೂ ಸಮಾನವಾಗಿ ನಡೆದುಕೊಳ್ಳುವದರಿಂದ ಕೀರ್ತಿಯನ್ನೂ, ಮಹತ್ತಾದ ಧರ್ಮವನ್ನೂ ಅರ್ಥ-ಕಾಮಗಳನ್ನೂ ಹೊಂದುವಿ. ಶ್ರೀಕೃಷ್ಣನೂ ದೇವತೆಗಳೂ ಸಮಸ್ತ ಯಾದವರೂ ನಿನ್ನಲ್ಲಿ ಬಹಳ ಪ್ರೀತಿ ಮಾಡುವರು.

**ಧರ್ಮಾರ್ಥಕಾಮಸಹಿತಾಂ ಚ ವಿಮುಕ್ತಿಮೇಷಿ**
**ತತ್ಪ್ರೀತಿತಃ ಸುನಿಯತಂ ವಿಪರೀತವೃತ್ತಿಃ ।**
**ಯಾಸ್ಯೇವ ರಾಜವರ ತತ್ಫಲವೈಪರೀತ್ಯಂ**
**ಇತ್ಥ ವಚೋ ನಿಗದಿತಂ ತವ ಕಾರ್ಷ್ಣಮದ್ಯ ॥ ೯೯ ॥**

**ಅರ್ಥ :- ರಾಜವರ!** ಮಹಾರಾಜನೇ, **ತತ್ಪ್ರೀತಿತಃ** ಶ್ರೀಕೃಷ್ಣನ ಪ್ರೀತಿಯಿಂದ, **ಸುನಿಯತಂ** ನಿಶ್ಚಯವಾಗಿ (**ತ್ವಂ** ನೀನು), **ಧರ್ಮಾರ್ಥಕಾಮಸಹಿತಾಂ** ಧರ್ಮಾರ್ಥಕಾಮಗಳಿಂದ ಸಹಿತವಾದ, **ವಿಮುಕ್ತಿಂ ಚ** ಮುಕ್ತಿಯನ್ನೂ, **ಏಷಿ** ಹೊಂದುವಿ, **ವಿಪರೀತವೃತ್ತಿಃ** (ನಿನ್ನ ಮಕ್ಕಳಲ್ಲಿ ಹಾಗೂ ಪಾಂಡವರಲ್ಲಿ) ವಿಪರೀತವಾದ ವರ್ತನೆವುಳ್ಳವನಾದರೆ, **ತತ್ಫಲವೈಪರೀತ್ಯಂ** ಏವ ಕೃಷ್ಣ ಪ್ರೀತಿಯಿಂದ ಹುಟ್ಟುವ ಫಲಕ್ಕಿಂತ ವಿಪರಿತವಾದ ನರಕಪ್ರಾಪ್ತಿ ರೂಪ ಫಲವನ್ನೇ, **ಯಾಸಿ** ಹೊಂದುವಿ, **ಇತ್ಥಂ** ಈ ರೀತಿ, **ಕಾರ್ಷ್ಣಂ ವಚಃ** ಕೃಷ್ಣನ ಸಂದೇಶ ವಚನವು, **ತವ** ನಿನಗೆ, **ಅದ್ಯ** ಈಗ, **ನಿಗದಿತಂ** ಹೇಳಲ್ಪಟ್ಟಿತು, **ಇತಿ** ಎಂದು, **ಜಗಾದ** ಹೇಳಿದನು ಎಂದು ೯೭ನೇ ಶ್ಲೋಕದಲ್ಲಿರುವ 'ಜಗಾದ' ಎಂಬ ಪದದಿಂದ ಅನ್ವಯಿಸಬೇಕು.

**ತಾತ್ಪರ್ಯ :-** ಮಹಾರಾಜ! ಶ್ರೀಕೃಷ್ಣ ಪ್ರೀತನಾದರೆ ನೀನು ನಿಶ್ಚಯವಾಗಿ ಧರ್ಮ, ಅರ್ಥ, ಕಾಮಸಹಿತನಾಗಿ ಮೋಕ್ಷವನ್ನು ಪಡೆಯುವಿ. ಇದಕ್ಕೆ ವಿಪರೀತವಾಗಿ ನಡೆದುಕೊಂಡರೆ ನರಕಾದ್ಯನರ್ಥ ಪ್ರಾಪ್ತಿ ರೂಪ ವಿಪರೀತ ಫಲ ಕಟ್ಟಿಟ್ಟ ಬುತ್ತಿ. ಇದು ಶ್ರೀಕೃಷ್ಣ ನಿನಗೆ ಹೇಳಿ ಕಳಿಸಿದ ಸಂದೇಶವಚನ. ಅದನ್ನು ನಿನಗೆ ಈಗ ಹೇಳಿದ್ದೇನೆ ಎಂದು ನೀತಿಕೋವಿದನಾದ ಅಕ್ರೂರನು ಉಪದೇಶಿಸಿದನು.

ಇತ್ಥಂ ಸಮಸ್ತಕುರುಮಧ್ಯ ಉಪಾತ್ತ ವಾಕ್ಯೋ
ರಾಜಾಽಪಿ ಪುತ್ರವಶಗೋ ವಚನಂ ಜಗಾದ ।
ಸರ್ವಂ ವಶೇ ಭಗವತೋ ನ ವಯಂ ಸ್ವತಂತ್ರಾ
ಭೂಭಾರಸಂಹೃತಿಕೃತೇ ಸ ಇಹಾವತೀರ್ಣಃ ॥ ೧೦೦ ॥

**ಅರ್ಥ** :- **ಇತ್ಥಂ** ಈ ರೀತಿ, **ಸಮಸ್ತಕುರುಮಧ್ಯೇ** ಎಲ್ಲ ಕೌರವರ ನಡುವೆ, **ಉಪಾತ್ತವಾಕ್ಯಃ** : **ಉಪಾತ್ತ** ಸ್ವೀಕೃತವಾದ, **ವಾಕ್ಯಃ** ಶ್ರೀಕೃಷ್ಣನ ಸಂದೇಶವಚನವುಳ್ಳ, **ರಾಜಾಽಪಿ** ರಾಜ ಧೃತರಾಷ್ಟ್ರನಾದರೂ, **ಪುತ್ರವಶಗಃ** ಮಕ್ಕಳ ಅಧೀನನಾಗಿ, **ಸರ್ವಂ** ಎಲ್ಲವೂ, **ಭಗವತಃ** ಭಗವಂತನ, **ವಶೇ** ವಶದಲ್ಲಿ ಇದೆ, **ವಯಂ** ನಾವು **ಸ್ವತಂತ್ರಾಃ ನ** ಸ್ವತಂತ್ರರಲ್ಲ, **ಸಃ** ಆ ಭಗವಂತನು, **ಭೂಭಾರಸಂಹೃತಿಕೃತೇ** ಭೂಭಾರಹರಣಕ್ಕೋಸ್ಕರ, **ಇಹ** ಈ ಭೂಮಿಯಲ್ಲಿ, **ಅವತೀರ್ಣಃ** ಅವತರಿಸಿದ್ದಾನೆ ಎಂದು, **ವಚನಂ ಜಗಾದ** ನುಡಿದನು.

**ತಾತ್ಪರ್ಯ** :- ಅಕ್ರೂರನ ಮಾತನ್ನು ಕೇಳಿ, ಎಲ್ಲ ಕೌರವರ ನಡುವೆ ಕುಳಿತಿದ್ದ ಧೃತರಾಷ್ಟ್ರ ಪುತ್ರವಶನಾಗಿ ನುಡಿದ. ಎಲ್ಲವೂ ಭಗವಂತನ ಅಧೀನ. ನಾವು ಅಸ್ವತಂತ್ರರು. ಆ ಭಗವಂತ ಭೂಭಾರಹರಣಕ್ಕಾಗಿ ಭೂಮಿಯಲ್ಲಿ ಅವತರಿಸಿದ್ದಾನೆ ಎಂದು.

ಏವಂ ನಿಶಮ್ಯ ವಚನಂ ಸ ತು ಯಾದವೋಽಸ್ಯ
ಜ್ಞಾತ್ವಾ ಮನೋಽಸ್ಯ ಕಲುಷಂ ತವ ನೈವ ಪುತ್ರಾಃ ।
ಇತ್ಯೂಚಿವಾನ್ ಸಹ ಮರುತ್ತನಯಾರ್ಜುನಾಭ್ಯಾಂ
ಪ್ರಾಯಾತ್ ಪುರೀಂ ಚ ಸಹದೇವಯುತಃ ಸ್ವಕೀಯಾಮ್ ॥೧೦೧॥

**ಅರ್ಥ** :- **ಸಃ ಯಾದವಸ್ತು** ಆ ಅಕ್ರೂರನಾದರೂ, **ಅಸ್ಯ** ಈ ಧೃತರಾಷ್ಟ್ರನ, **ಏವಂ** ಈ ರೀತಿಯ, **ವಚನಂ** ಕಪಟದ ಮಾತನ್ನು, **ನಿಶಮ್ಯ** ಕೇಳಿ, **ಅಸ್ಯ** ಈ ಧೃತರಾಷ್ಟ್ರನ, **ಮನಃ** ಮನಸ್ಸು **ಕಲುಷಂ** ಕಲುಷಿತವಾಗಿದೆ ಎಂದು, **ಜ್ಞಾತ್ವಾ** ತಿಳಿದು, **ತವ** ನಿನ್ನ **ಪುತ್ರಾಃ** ಮಕ್ಕಳು, **ನೈವ** ಉಳಿಯಲಾರರು, **ಇತಿ** ಎಂದು, **ಊಚಿವಾನ್** ನುಡಿದನು, **ಮರುತ್ತನಯಾರ್ಜುನಾಭ್ಯಾಂ ಸಹ** ಭೀಮಾರ್ಜುನರೊಂದಿಗೆ, **ಸಹದೇವಯುತಃ** ಸಹದೇವನಿಂದ ಕೂಡಿಕೊಂಡು, **ಸ್ವಕೀಯಾಂ** ತನ್ನ, **ಪುರೀಂ ಚ ಪ್ರಾಯಾತ್** ಮಧುರಾಪುರಿಗೆ ತೆರಳಿದ.

ತಾತ್ಪರ್ಯ :- ಅಕ್ರೂರ-ಧೃತರಾಷ್ಟ್ರ ಹೀಗೆ ಹೇಳಿದ್ದನ್ನು ಕೇಳಿದ. ಅವನ ಮನಸ್ಸು ಕಲುಷಿತವಾಗಿದೆ ಎಂದು ತಿಳಿದು, ಧೃತರಾಷ್ಟ್ರ! ನಿನ್ನ ಮಕ್ಕಳು ಉಳಿಯಲಾರರು ಎಂದ. ಬಳಿಕ ಭೀಮಾರ್ಜುನರನ್ನೂ ಸಹದೇವನನ್ನೂ ಜೊತೆಗೆ ಕರೆದುಕೊಂಡು ತನ್ನ ಪಟ್ಟಣವಾದ ಮಧುರೆಗೆ ಹಿಂತಿರುಗಿದ.

**ಜ್ಞಾನಂ ತು ಭಾಗವತಮುತ್ತಮಮಾತ್ಮಯೋಗ್ಯಂ**
**ಭೀಮಾರ್ಜುನೌ ಭಗವತಃ ಸಮವಾಪ್ಯ ಕೃಷ್ಣಾತ್ ।**
**ತತ್ರೋಷತುರ್ಭಗವತಾ ಸಹಯುಕ್ತಚೇಷ್ಟೌ**
**ಸಂಪೂಜಿತಾ ಯದುಭಿರುತ್ತಮಕರ್ಮಸಾರೌ ॥ ೧೦೨ ॥**

**ಅರ್ಥ** :- **ಉತ್ತಮಕರ್ಮಸಾರೌ** ಉತ್ತಮಕರ್ಮಗಳಿಂದ ಶ್ರೇಷ್ಠರಾದ, **ಯುಕ್ತಚೇಷ್ಟೌ : ಯುಕ್ತ** ತಮಗೆ ಯೋಗ್ಯವಾದ, **ಚೇಷ್ಟೌ** ವ್ಯಾಪಾರವುಳ್ಳ, **ಭೀಮಾರ್ಜುನೌ** ಭೀಮಾರ್ಜುನರು, **ಆತ್ಮಯೋಗ್ಯಂ** ತಮಗೆ ಯೋಗ್ಯವಾದ, **ಉತ್ತಮಂ** ಉತ್ತಮವಾದ, **ಭಾಗವತಂ ಜ್ಞಾನಂ** ಭಗವದ್ ಜ್ಞಾನವನ್ನು, **ಭಗವತಃ ಶ್ರೀಕೃಷ್ಣಾತ್** ಭಗವಂತ ಶ್ರೀಕೃಷ್ಣನಿಂದ, **ಸಮವಾಪ್ಯ** ಹೊಂದಿ, **ಯದುಭಿಃ** ಯಾದವರಿಂದ, **ಸಂಪೂಜಿತೌ** ಚೆನ್ನಾಗಿ ಪೂಜಿಸಲ್ಪಟ್ಟವರಾಗಿ, **ಭಗವತಾ ಸಹೈವ** ಭಗವಂತನ ಜೊತೆಗೇ, **ತತ್ರ** ಮಧುರೆಯಲ್ಲಿ, **ಊಷತುಃ** ವಾಸಮಾಡಿದರು.

ತಾತ್ಪರ್ಯ :- ಉತ್ತಮಕರ್ಮಗಳಿಂದ ಶ್ರೇಷ್ಠರೆನಿಸಿ ಭೀಮಾರ್ಜುನರು ತಮಗೆ ಯೋಗ್ಯವಾದ ಚೇಷ್ಟೆಗಳನ್ನು ಮಾಡುತ್ತಿದ್ದರು. ಅವರು ತಮಗೆ ಯೋಗ್ಯವಾದ ಉತ್ತಮ ಭಗವದ್ ಜ್ಞಾನವನ್ನು ಭಗವಾನ್ ಶ್ರೀಕೃಷ್ಣನಿಂದಲೇ ಪಡೆದರು. ಬಳಿಕ ಎಲ್ಲ ಯಾದವರ ಗೌರವಾದರಗಳಿಗೆ ಪಾತ್ರರಾಗಿ ಭಗವಂತನ ಜೊತೆಗೇ ಮಧುರೆಯಲ್ಲಿ ವಾಸಮಾಡಿದರು.

**ಪ್ರತ್ಯುದ್ಯಮೋ ಭಗವತಾಽಪಿ ಭವೇದ್ ಗದಾಯಾಃ**
**ಶಿಕ್ಷಾ ಯದಾ ಭಗವತಾ ಕ್ರಿಯತೇ ನ ಚೇಮಮ್ ।**
**ಕುರ್ಯಾಮಿತಿ ಸ್ಮ ಭಗವತ್ಸಮನುಜ್ಞಯೈವ**
**ರಾಮಾದಶಿಕ್ಷದುರುಗಾಯಪುರಃ ಸ ಭೀಮಃ ॥ ೧೦೩ ॥**

**ಅರ್ಥ** :- **ಯದಾ** ಯಾವಾಗ, **ಭಗವತಾ ಸಹ** ಶ್ರೀಕೃಷ್ಣನೊಡನೆ, **ಗದಾಯಾಃ** ಗದೆಯ, **ಶಿಕ್ಷಾ** ಅಭ್ಯಾಸವು, **ಕ್ರಿಯತೇ** ಮಾಡಲ್ಪಡುತ್ತದೋ, **ತದಾ**

ಆವಾಗ, **ಭಗವತಾ** ಶ್ರೀಕೃಷ್ಣನಿಂದ, **ಪ್ರತ್ಯುದ್ಯಮೋಽಪಿ** ನನ್ನ ಮೇಲೆ ಗದೆಯ ಎತ್ತುವಿಕೆಯು, **ಭವೇತ** ಆಗುವದು, ಆದ್ದರಿಂದ, **ಇಮಂ** ಭಗವಂತನಿಗೆ ಪ್ರತಿಯಾಗಿ ಗದೋದ್ಧರಣವನ್ನು **ಭಗವತಾ ಸಹ ನ ಕುರ್ಯಾಂ** ಭಗವಂತನ ಜೊತೆ ನಾನು ಮಾಡಲಾರೆನು ಎಂಬ ಅಭಿಪ್ರಾಯದಿಂದ, **ಸಃ** ಆ ಭೀಮಸೇನನು, **ಭಗವತಃ** ಶ್ರೀಕೃಷ್ಣನ, **ಸಮನುಜ್ಞಯೈವ** ಆಜ್ಞೆಯಿಂದಲೇ, **ಉರುಗಾಯಸ್ಯ** ಉತ್ತಮಶ್ಲೋಕನಾದ ಶ್ರೀಕೃಷ್ಣನ, **ಪುರಃ** ಮುಂಭಾಗದಲ್ಲಿ **ರಾಮಾತ್** ಬಲರಾಮನಿಂದ, **ಅಶಿಕ್ಷತ್** ಗದಾಶಿಕ್ಷಣವನ್ನು ಪಡೆದನು.

**ತಾತ್ಪರ್ಯ** :- ಭೀಮ ಶ್ರೀಕೃಷ್ಣನಿಂದ ಗದಾಶಿಕ್ಷಣವನ್ನು ಪಡೆಯದೇ ಬಲರಾಮನಿಂದ ಪಡೆಯಲು ಕಾರಣವೇನೆಂದು ಈ ಶ್ಲೋಕದಲ್ಲಿ ತಿಳಿಸುತ್ತಾರೆ. ಭೀಮ ಹೀಗೆ ಆಲೋಚಿಸಿದ. ನಾನು ಭಗವಂತನೊಡನೆ ಗದಾಭ್ಯಾಸ ಮಾಡು ವಾಗ ಭಗವಂತ ನನ್ನ ಮೇಲೆ ಗದೆ ಎತ್ತುತ್ತಾನೆ. ಆಗ ಪ್ರತಿಯಾಗಿ ನಾನೂ ಅವನ ಮೇಲೆ ಗದೆ ಎತ್ತಬೇಕಾಗುವದು. ನಾನು ಹಾಗೆ ಮಾಡಲಾರೆ ಎಂಬ ಅಭಿಪ್ರಾಯದಿಂದ ಭಗವಂತನ ಅನುಮತಿ ಪಡೆದು ಅವನ ಎದುರಿನಲ್ಲೇ ಬಲರಾಮನಿಂದ ಗದಾಶಿಕ್ಷಣವನ್ನು ಪಡೆದನು.

**ರಾಮೋಽಪಿ ಶಿಕ್ಷಿತಮರೀಂದ್ರಧರಾತ್ ಪುರೋಽಸ್ಯ**
**ಭೀಮೇ ದದಾವಥ ಪರಾಣಿ ಹರೇರವಾಪ ।**
**ಅಸ್ತ್ರಾಣಿ ಶಕ್ರತನಯಃ ಸಹದೇವ ಆರ**
**ನೀತಿಂ ತಥೋದ್ಧವಮುಖಾತ್ ಸಕಲಾಮುದಾರಾಮ್ ॥ ೧೦೪ ॥**

**ಅರ್ಥ** :- **ರಾಮೋಽಪಿ** ಬಲರಾಮನೂ ಕೂಡ, **ಅರೀಂದ್ರಧರಾತ್** ಸುದರ್ಶನಧಾರಿಯಾದ ಶ್ರೀಕೃಷ್ಣನಿಂದ, **ಶಿಕ್ಷಿತಂ** ಕಲಿತದ್ದನ್ನು **ಅಸ್ಯ** ಈ ಶ್ರೀಕೃಷ್ಣನ, **ಪುರಃ** ಸಮ್ಮುಖದಲ್ಲಿ, **ಭೀಮೇ ದದೌ** ಭೀಮನಿಗೆ ಹೇಳಿಕೊಟ್ಟನು, **ಅಥ** ಬಳಿಕ, **ಶಕ್ರತನಯಃ** ಇಂದ್ರನ ಮಗನಾದ ಅರ್ಜುನನು, **ಪರಾಣಿ** ಉತ್ತಮವಾದ, **ಅಸ್ತ್ರಾಣಿ** ಅಸ್ತ್ರಗಳನ್ನು, **ಹರೇಃ** ಶ್ರೀಕೃಷ್ಣನಿಂದ, **ಅವಾಪ** ಹೊಂದಿದನು, **ತಥಾ** ಹಾಗೆ, **ಸಹದೇವಃ** ಸಹದೇವನು, **ಉದ್ಧವಮುಖಾತ್** ಉದ್ಧವನ ಮುಖದಿಂದ, **ಉದಾರಾಂ** ಶ್ರೇಷ್ಠವಾದ, **ಸಕಲಾಂ** ಎಲ್ಲ, **ನೀತಿಂ** ನೀತಿಶಾಸ್ತ್ರವನ್ನು, **ಆರ** ಉಪದೇಶ ಪಡೆದನು.

**ತಾತ್ಪರ್ಯ** :- ಬಲರಾಮನೂ ಶ್ರೀಕೃಷ್ಣನಿಂದ ಕಲಿತದ್ದನ್ನೇ ಅವನ ಸಂಮುಖದಲ್ಲಿ ಭೀಮನಿಗೆ ಹೇಳಿಕೊಟ್ಟನು. ಬಳಿಕ ಅರ್ಜುನನು ಶ್ರೀಕೃಷ್ಣನಿಂದಲೇ ಉತ್ತಮವಾದ ಅಸ್ತ್ರಗಳನ್ನು ಪಡೆದನು. ಸಹದೇವನು ಉದ್ಧವನ ಮುಖದಿಂದ ಶ್ರೇಷ್ಠವಾದ ಎಲ್ಲ ನೀತಿಶಾಸ್ತ್ರವನ್ನೂ ಉಪದೇಶ ಪಡೆದನು.

**ವಿಶೇಷ ವಿಷಯ** :ಬಲರಾಮ ಸಾಂದೀಪನಿಗುರುಗಳ ಬಳಿ ಗದಾ ಶಿಕ್ಷಣವನ್ನು ಪಡೆಯುತ್ತಿದ್ದಾಗ, ವಿನೋದಕ್ಕಾಗಿ ಆಗಾಗ ಶ್ರೀಕೃಷ್ಣನೊಡನೆಯೂ ಗದಾಭ್ಯಾಸ ಮಾಡುತ್ತಿದ್ದ. ಆಗ ಕೆಲವೊಂದು ವರಸೆಗಳನ್ನು ಶ್ರೀಕೃಷ್ಣನಿಂದ ಕಲಿತುಕೊಂಡಿದ್ದ. ಈಗ ಅವುಗಳನ್ನು ಶ್ರೀಕೃಷ್ಣನ ಅನುಮತಿಯಿಂದ ಅವನ ಸಂಮುಖದಲ್ಲಿ ಭೀಮನಿಗೂ ಕಲಿಸಿಕೊಟ್ಟ ಎಂದು 'ವಾದಿರಾಜೀಯ'ದಲ್ಲಿದೆ.

**ಕೃಷ್ಣೋಽಥ ಔಪಗವಿಮುತ್ತಮನೀತಿಯುಕ್ತಂ**
**ಸಂಪ್ರೇಷಯನ್ನಿದಮುವಾಚ ಹ ಗೋಕುಲಾಯ ।**
**ದುಃಖಂ ವಿನಾಶಯ ವಚೋಭಿರರೇ ಮದೀಯೈಃ**
**ನಂದಾದಿನಾಂ ವಿರಹಜಂ ಮಮ ಚಾಽಶು ಯಾಹಿ ॥ ೧೦೫ ॥**

**ಅರ್ಥ** :- **ಅಥ** ಅನಂತರ, **ಕೃಷ್ಣಃ** ಶ್ರೀಕೃಷ್ಣನು, **ಉತ್ತಮನೀತಿಯುಕ್ತಂ** ಉತ್ತಮ ನೀತಿಜ್ಞನಾದ, **ಔಪಗವಿಂ** ಉಪಗವ ಎಂಬ ಯಾದವನ ಮಗನಾದ ಉದ್ಧವನನ್ನು, **ಗೋಕುಲಾಯ** ನಂದಗೋಕುಲಕ್ಕೆ, **ಸಂಪ್ರೇಷಯನ್** ಸನ್ ಕಳಿಸಿಕೊಡುತ್ತಾ, **ಇದಂ** ಇದನ್ನು **ಉವಾಚ** ಹೇಳಿದನು, **ಅರೇ!** ಎಲೈ ಉದ್ಧವ!, **ಮದೀಯೈಃ ವಚೋಭಿಃ** ನನ್ನ ಮಾತುಗಳಿಂದ, **ಮಮ** ನನ್ನ, **ವಿರಹಜಂ** ವಿರಹದಿಂದುಂಟಾದ, **ನಂದಾದಿನಾಂ** ನಂದಗೋಪ ಮುಂತಾದವರ, **ದುಃಖಂ** ದುಃಖವನ್ನು, **ವಿನಾಶಯ** ಪರಿಹರಿಸು, **ಆಶು** ಬೇಗನೇ, **ಯಾಹಿ** ಹೋಗು ಎಂದು.

**ಮತ್ತೋ ವಿಯೋಗ ಇಹ ಕಸ್ಯಚಿದಸ್ತಿ ನೈವ**
**ಯಸ್ಮಾದಹಂ ತನುಭೃತಾಂ ನಿಹಿತೋಽಂತರೇವ ।**
**ನಾಹಂ ಮನುಷ್ಯ ಇತಿ ಕುತ್ರ ಚ ವೋಽಸ್ತು ಬುದ್ಧಿಃ**
**ಬ್ರಹ್ಮೈವ ನಿರ್ಮಲತಮಂ ಪ್ರವದಂತಿ ಮಾಂ ಹಿ ॥ ೧೦೬ ॥**

**ಅರ್ಥ** :- **ಅಹಂ** ನಾನು, **ತನುಭೃತಾಂ** ಎಲ್ಲ ದೇಹಿಗಳ (ಜೀವರಾಶಿಗಳ), **ಅಂತರೇವ** ಹೃತ್ಕಮಲದೊಳಗೇ, **ಯಸ್ಮಾತ್** ಯಾವ ಕಾರಣದಿಂದ,

**ನಿಹಿತಃ** ಇರುವೆನೋ, (**ತಸ್ಮಾತ್** ಆ ಕಾರಣದಿಂದ), **ಇಹ** ಈ ಜಗತ್ತಿನಲ್ಲಿ **ಕಸ್ಯಚಿತ್** ಯಾವುದೇ ದೇಹಿಗೆ (ಜೀವಿಗೆ), **ಮತ್ತಃ** ನಿನ್ನಿಂದ, **ವಿಯೋಗಃ** ವಿರಹವು, **ನಾಸ್ತ್ಯೈವ** ಇಲ್ಲವೇ ಇಲ್ಲ, **ಅಹಂ** ನಾನು ಮನುಷ್ಯ, **ಇತಿ** ಮನುಷ್ಯನೆಂಬ, **ಬುದ್ಧಿಃ** ಬುದ್ಧಿಯು, **ವಃ** ನಿಮಗೆ, **ಕುತ್ರ ಚ** ಯಾವುದೇ ರೀತಿಯಲ್ಲಿಯೂ, **ನ ಅಸ್ತು** ಬಾರದಿರಲಿ, **ಹಿ** ಯಾವ ಕಾರಣದಿಂದ, **ನಿರ್ಮಲತಮಂ** ಅತ್ಯಂತ ಶುದ್ಧನಾದ, **ಬ್ರಹ್ಮೈವ** ಬ್ರಹ್ಮನೇ, **ಇತಿ** ಎಂದು, **ಮಾಂ** ನನ್ನನ್ನು **ಪ್ರವದಂತಿ** ಹೇಳುತ್ತಾರೆ, ವೇದವನ್ನು ಬಲ್ಲ ಗರ್ಗಾದಿಗಳು, ಆದ್ದರಿಂದ ನಾನು ಮನುಷ್ಯನೆಂಬ ಬುದ್ಧಿಯು ಎಂದಿಗೂ ನಿಮಗೆ ಬಾರದಿರಲಿ.

**ತಾತ್ಪರ್ಯ :-** ನಾನು ಎಲ್ಲ ಜೀವರಾಶಿಗಳ ಒಳಗೇ ಇರುವದರಿಂದ ಯಾರಿಗೂ ನನ್ನಿಂದ ವಿಯೋಗವಿಲ್ಲ, ನಾನು ಮನುಷ್ಯನೆಂಬ ಬುದ್ಧಿ ನಿಮಗೆ ಎಂದಿಗೂ ಬಾರದಿರಲಿ ಏಕೆಂದರೆ ನನ್ನನ್ನು ಅತ್ಯಂತ ಶುದ್ಧನಾದ ಬ್ರಹ್ಮನೇ ಎಂದು ವೇದವನ್ನು ಬಲ್ಲ ಗರ್ಗಾದಿಗಳು ಹೇಳುತ್ತಾರೆ.

**ಪೂರ್ವಂ ಯದಾ ಹ್ಯಜಗರೋ ನಿಜಗಾರ ನಂದಂ**
**ಸರ್ವೇ ನ ಶೇಕುರಥ ತತ್ ಪ್ರವಿಮೋಕ್ಷಣಾಯ ।**
**ಮತ್ಪಾದಸಂಸ್ಪರ್ಶತಃ ಸ ತದಾऽತಿದಿವ್ಯೋ**
**ವಿದ್ಯಾಧರಸ್ತದುದಿತಂ ನಿಖಿಲಂ ಸ್ಮರಂತು ॥ ೧೦೭ ॥**

**ಅರ್ಥ :- ಪೂರ್ವಂ** ಹಿಂದೆ, **ಯದಾ** ಯಾವಾಗ, **ಅಜಗರಃ** ಹೆಬ್ಬಾವು, **ನಂದಂ** ನಂದಗೋಪನನ್ನು, **ನಿಜಗಾರ** ನುಂಗಿತೋ ಆಗ, **ತತ್ಪ್ರವಿಮೋಕ್ಷಣಾಯ** ನಂದನನ್ನು ಬಿಡಿಸುವದಕ್ಕೋಸ್ಕರ, **ಸರ್ವೇ** ಎಲ್ಲ ಗೋಪಾಲಕರು, **ನ ಶೇಕುಃ** ಸಮರ್ಥರಾಗಲಿಲ್ಲವೋ, **ತದಾ** ಆಗ, **ಮತ್ಪಾದಸಂಸ್ಪರ್ಶತಃ** ನನ್ನ ಪಾದಸ್ಪರ್ಶದಿಂದ, **ಸಃ** ಆ ಹೆಬ್ಬಾವು, **ಅತಿದಿವ್ಯಃ** ಅತಿದಿವ್ಯನಾದ, **ವಿದ್ಯಾಧರಃ** ವಿದ್ಯಾಧರನು, **ಅಭೂತ್** ಆದನೋ, **ತದುದಿತಂ** ಆ ವಿದ್ಯಾಧರನಿಂದ, ಹೇಳಲ್ಪಟ್ಟಿದ್ದನ್ನು, **ಸ್ಮರಂತು** ಸ್ಮರಿಸಿರಿ (ನೆನೆಯಿರಿ).

**ತಾತ್ಪರ್ಯ :-** ಹಿಂದೆ ಹೆಬ್ಬಾವು ನಂದಗೋಪನನ್ನು ನುಂಗಿದಾಗ ಅವನನ್ನು ಬಿಡಿಸಲು ಎಲ್ಲ ಗೋಪಾಲಕರೂ ಅಶಕ್ತರಾದರು. ಆಗ ನನ್ನ ಪಾದಸ್ಪರ್ಶದಿಂದ ಆ ಹೆಬ್ಬಾವು ಅತಿದಿವ್ಯ ವಿದ್ಯಾಧರನಾಯಿತು. ಆ ವಿದ್ಯಾಧರ ಆಗ ಹೇಳಿದ್ದನ್ನೆಲ್ಲ ನೀವು ಸ್ಮರಿಸಿಕೊಳ್ಳಿ.

**ಪೂರ್ವಂ ಸ ರೂಪಮದತಃ ಪ್ರಜಹಾಸ ವಿಪ್ರಾನ್**
**ನಿತ್ಯಂ ತಪಃ ಕೃಶತರಾಂಗಿರಸೋ ವಿರೂಪಾನ್ ।**
**ತೈಃ ಪ್ರಾಪಿತಃ ಸಪದಿ ಸೋऽಜಗರತ್ವಮೇವ**
**ಮತ್ತೋ ನಿಜಾಂ ತನುಮವಾಪ್ಯ ಜಗಾದ ನಂದಮ್ ॥ ೧೦೮ ॥**

**ಅರ್ಥ :- ಪೂರ್ವಂ** ಹಿಂದೆ, **ಸಃ** ಆ ವಿದ್ಯಾಧರನು, **ರೂಪಮದತಃ** ಸೌಂದರ್ಯಮದದಿಂದ, **ನಿತ್ಯಂ** ನಿರಂತರ, **ತಪಃಕೃಶತರಾಂಗಿರಸಃ** : **ತಪಃಕೃಶತರ** ತಪಸ್ಸಿನಿಂದ ಅತ್ಯಂತ ಕೃಶರಾದ, **ಅಂಗಿರಸಃ** ಅಂಗಿರಸರೆಂಬ, **ವಿರೂಪಾನ್** ವಿಕಾರರೂಪವುಳ್ಳ, (ಕುರೂಪಿಗಳಾದ), **ವಿಪ್ರಾನ್** ಬ್ರಾಹ್ಮಣರನ್ನು **ಪ್ರಜಹಾಸ** ಅಪಹಾಸ ಮಾಡಿದನು, **ತೈಃ** ಅವರಿಂದ, **ಸಪದಿ** ಕೂಡಲೇ, **ಅಜಗರತ್ವಂ ಪ್ರಾಪಿತಃ** ಹೆಬ್ಬಾವಾದ (ಹೆಬ್ಬಾವಾಗೆಂದು ಶಾಪ ಪಡೆದ), **ಸಃ** ಆ ವಿದ್ಯಾಧರನು, **ಮತ್ತ ಏವ** ನನ್ನಿಂದಲೇ, **ನಿಜಾಂ ತನುಂ** ನಿಜರೂಪವನ್ನು (ವಿದ್ಯಾಧರತ್ವವನ್ನು), **ಅವಾಪ್ಯ** ಪಡೆದು, **ನಂದಂ ಜಗಾದ** ನಂದನಿಗೆ ಹೇಳಿದನು.

**ತಾತ್ಪರ್ಯ** :- ಹಿಂದೆ ಆ ವಿದ್ಯಾಧರ ಸೌಂದರ್ಯ ಮದದಿಂದ ನಿರಂತರ ತಪಸ್ಸು ಮಾಡಿ ಅತ್ಯಂತ ಕೃಶರಾಗಿದ್ದ ಅಂಗಿರಸರೆಂಬ ಬ್ರಾಹ್ಮಣರನ್ನು ಕುರೂಪಿಗಳೆಂದು ಅಪಹಾಸಗೈದ. ಅದರಿಂದ ಕೂಡಲೇ ಹೆಬ್ಬಾವಾಗೆಂದು ಅವರು ಶಾಪ ಕೊಟ್ಟಿದ್ದರು. ಈಗ ನನ್ನಿಂದ ನಿಜರೂಪವನ್ನು ತಳೆದು ಬಳಿಕ ನಂದನಿಗೆ ಹೇಳಿದನು.

**ನಾಯಂ ನರೋ ಹರಿರಯಂ ಪರಮಃ ಪರೇಭ್ಯೋ**
**ವಿಶ್ವೇಶ್ವರಃ ಸಕಲಕಾರಣ ಆತ್ಮತಂತ್ರಃ ।**
**ವಿಜ್ಞಾಯ ಚೈನಮುರುಸಂಸೃತಿತೋ ವಿಮುಕ್ತಾ**
**ಯಾಂತ್ಯಸ್ಯ ಪಾದಯುಗಲಂ ಮುನಯೋ ವಿರಾಗಾಃ ॥ ೧೦೯ ॥**

**ಅರ್ಥ :- ಅಯಂ** ಈ ಕೃಷ್ಣನು, **ನ ನರಃ** ಮನುಷ್ಯನಲ್ಲ, **ಅಯಂ** ಈ ಶ್ರೀಕೃಷ್ಣನು, **ಪರೇಭ್ಯಃ** ಉತ್ತಮರಾದ ಬ್ರಹ್ಮಾದಿಗಳಿಗಿಂತ, **ಪರಮಃ** ಉತ್ತಮನಾದ, **ಹರಿಃ** ಹರಿಯು, **ವಿಶ್ವೇಶ್ವರಃ** ಜಗತ್ತಿಗೆ ಒಡೆಯನು, **ಸಕಲ ಕಾರಣಃ** ಎಲ್ಲರ ಸೃಷ್ಟ್ಯಾದಿಗಳಿಗೆ ಕಾರಣನು, **ಆತ್ಮತಂತ್ರಃ** ಸ್ವತಂತ್ರನು, **ಏನಂ** ಇವನನ್ನು, **ವಿಜ್ಞಾಯ** ಚೆನ್ನಾಗಿ ತಿಳಿದು, **ವಿರಾಗಾಃ** ವಿರಕ್ತರಾಗಿ, **ಉರುಸಂಸೃತಿತಃ**

ಬಹುಕಾಲದ ಸಂಸಾರದಿಂದ, **ವಿಮುಕ್ತಾಶ್ಚ ಸಂತಃ** ವಿಮುಕ್ತರೂ ಆಗಿ, **ಮುನಯಃ** ಮುನಿಗಳು, **ಅಸ್ಯ** ಇವನ, **ಪಾದಯುಗಲಂ** ಚರಣದ್ವಂದ್ವವನ್ನು **ಯಾಂತಿ** ಸೇರುತ್ತಾರೆ.

**ತಾತ್ಪರ್ಯ** :- ಈ ಶ್ರೀಕೃಷ್ಣ ಮನುಷ್ಯನಲ್ಲ. ಉತ್ತಮರಾದ ಬ್ರಹ್ಮಾದಿಗಳಿಗಿಂತ ಉತ್ತಮನಾದ ಹರಿ. ಜಗತ್ತಿಗೆ ಒಡೆಯ. ಎಲ್ಲರ ಸೃಷ್ಟ್ಯಾದಿಗಳಿಗೆ ಕಾರಣ. ಸ್ವತಂತ್ರ. ಇವನನ್ನು ಚೆನ್ನಾಗಿ ತಿಳಿದು ವಿರಕ್ತರಾಗಿ, ದೀರ್ಘಕಾಲದ ಸಂಸಾರದಿಂದ ಮುಕ್ತರಾಗುತ್ತಾರೆ ಮುನಿಗಳು. ಬಳಿಕ ಇವನ ಚರಣ ದ್ವಂದ್ವವನ್ನೆ ಪಡೆಯುತ್ತಾರೆ.

**ವಿಶೇಷ ವಿಷಯ** :- ಒಮ್ಮೆ ಗೋಪಾಲಕರೆಲ್ಲರೂ ಕುಲದೇವಿಯಾತ್ರೆಗೆ ಅಂಬಿಕಾವನಕ್ಕೆ ಹೋಗಿದ್ದರು. ಅಲ್ಲಿ ರಾತ್ರಿ ನಿದ್ರಿಸುತ್ತಿದ್ದಾಗ ಒಂದು ಹೆಬ್ಬಾವು ನಂದನ ಕಾಲನ್ನು ಹಿಡಿದು ನುಂಗಲಾರಂಭಿಸಿತು. ಆಗ ಗೋಪಾಲಕರೆಲ್ಲರೂ ಬೆಂಕಿಕೊಳ್ಳಿಗಳಿಂದ ಹೆಬ್ಬಾವನ್ನು ಹೊಡೆದರೂ ಅದು ನಂದನನ್ನು ಬಿಡಲೇ ಇಲ್ಲ. ಕೊನೆಗೆ ಗಲಾಟೆ ಕೇಳಿ ಎದ್ದು ಬಂದ ಶ್ರೀಕೃಷ್ಣ ಅದನ್ನು ಕಾಲಿನಿಂದ ಒದ್ದ. ಕೂಡಲೇ ಆ ಹೆಬ್ಬಾವು ವಿದ್ಯಾಧರನ ರೂಪ ತಳೆಯಿತು. ಯಾರು ನೀನು ಎಂದು ಶ್ರೀಕೃಷ್ಣ ಕೇಳಿದ. ಸ್ವತಃ ಸರ್ವಜ್ಞನಾದರೂ ಗೊಲ್ಲರ ತಿಳುವಳಿಕೆಗಾಗಿ ಕೃಷ್ಣ ಹಾಗೆ ಕೇಳಿದ. ಆಗ ಆ ವಿದ್ಯಾಧರ ತನ್ನ ಶಾಪಸಮಾಚಾರವನ್ನು ತಿಳಿಸಿ ಶ್ರೀಕೃಷ್ಣನ ಸ್ವರೂಪದ ಬಗ್ಗೆ ಗೋಪಾಲಕರಿಗೆ ಸರಿಯಾದ ಮಾಹಿತಿ ನೀಡಿದ.

**ನಂದಂ ಯದಾ ಚ ಜಗೃಹೇ ವರುಣಸ್ಯ ದೂತಃ**
**ತತ್ರಾಪಿ ಮಾಂ ಜಲಪತೇರ್ಗೃಹಮಾಶು ಯಾಂತಮ್ ।**
**ಸಂಪೂಜ್ಯ ವಾರಿಪತಿರಾಹ ವಿಮುಚ್ಯ ನಂದಂ**
**ನಾಯಂ ಸುತಸ್ತವ ಪುಮಾನ್ ಪರಮಃ ಸ ಏಷಃ ॥ ೧೧೦ ॥**

**ಅರ್ಥ** :- **ವರುಣಸ್ಯ** ವರುಣನ, **ದೂತಃ** ದೂತನಾದ ಅಸುರನು, **ಯದಾ** ಯಾವಾಗ (ಸ್ನಾನ ಕಾಲದಲ್ಲಿ). **ನಂದಂ ಜಗೃಹೇ** ನಂದನನ್ನು ಹಿಡಿದನೋ, **ತತ್ರಾಪಿ** ಆ ಸಮಯದಲ್ಲಿಯೂ, **ಜಲಪತೇಃ** ವರುಣನ, **ಗೃಹಂ ಯಾಂತಂ** ಮನೆಗೆ ಹೋದ, **ಮಾಂ** ನನ್ನನ್ನು ಶ್ರೀಕೃಷ್ಣನನ್ನು, **(ಆಶು)** ಬೇಗನೆ, **ಸಂಪೂಜ್ಯ** ಸತ್ಕರಿಸಿ, **ನಂದಂ** ನಂದನನ್ನು, **ವಿಮೋಚ್ಯ** ಬಿಡುಗಡೆ ಮಾಡಿ, **ವಾರಿಪತಿಃ** ವರುಣನು, **ಆಹ** ಹೇಳಿದನು, **ಅಯಂ** ಈ ಶ್ರೀಕೃಷ್ಣನು, **ತವ** ನಿನ್ನ **ಸುತಃ ನ** ಮಗನಲ್ಲ, **ಏಷಃ** ಇವನು, **ಸಃ** ಆ ಪ್ರಸಿದ್ಧನಾದ, **ಪರಮಃ ಪುಮಾನ್** ಪುರುಷೋತ್ತಮನಾದ ಹರಿ ಎಂದು ಹೇಳಿದ್ದನ್ನೂ ಸ್ಮರಿಸಿಕೊಳ್ಳಿ.

**ತಾತ್ಪರ್ಯ** :- ವರುಣನ ಭೃತ್ಯನಾದ ಅಸುರನೊಬ್ಬ ಸ್ನಾನದ ಸಮಯದಲ್ಲಿ ನಂದನನ್ನು ಹಿಡಿದ. ಆಗ ಅವನನ್ನು ಬಿಡಿಸಿಕೊಂಡು ಬರಲು ನಾನು ವರುಣನ ಮನೆಗೆ ಹೋದೆ. ವರುಣ ನನ್ನನ್ನು ಸತ್ಕರಿಸಿ ನಂದನನ್ನು ಬಿಡುಗಡೆ ಮಾಡಿ ನುಡಿದ. ನಂದಗೋಪ! ಶ್ರೀಕೃಷ್ಣ ನಿನ್ನ ಮಗನಲ್ಲ, ಅವನು ಪ್ರಸಿದ್ಧನಾದ ಪುರುಷೋತ್ತಮ ಹರಿ ಎಂದು. ಅದನ್ನೂ ಸ್ಮರಿಸಿಕೊಳ್ಳಿರಿ.

**ವಿಶೇಷ ವಿಷಯ** :ಒಮ್ಮೆ ಏಕಾದಶಿ ಉಪವಾಸ ಮಾಡಿದ್ದ ನಂದಗೋಪ ಬೇಗನೆ ಪಾರಣೆ ಮಾಡುವ ಸಲುವಾಗಿ ಸ್ನಾನ ಮಾಡಲು ಯಮುನೆಗೆ ಹೋದ. ಮಧ್ಯರಾತ್ರಿಯ ಆ ಸಮಯ ಅಕಾಲವಾದ್ದರಿಂದ ವರುಣನ ಭೃತ್ಯನೊಬ್ಬ ಅವನನ್ನು ಸೆರೆಹಿಡಿದು ವರುಣಲೋಕಕ್ಕೆ ಒಯ್ದ. ಶ್ರೀಕೃಷ್ಣ ಅಲ್ಲಿಗೆ ತೆರಳಿ ವರುಣನಿಂದ ಸತ್ಕೃತನಾಗಿ ನಂದಗೋಪನನ್ನು ಬಿಡಿಸಿಕೊಂಡು ಬಂದ.

**ಸಂದರ್ಶಿತೋ ನನು ಮಯೈವ ವಿಕುಂಠಲೋಕೋ**
**ಗೋಜೀವಿನಾಂ ಸ್ಥಿತಿರಪಿ ಪ್ರವರಾ ಮದೀಯಾ ।**
**ಮಾನುಷ್ಯಬುದ್ಧಿಮಪನೇತುಮಜೇ ಮಯಿ ಸ್ಮ**
**ತಸ್ಮಾನ್ಮಯಿ ಸ್ಥಿತಮವಾಪ್ಯ ಶಮಂ ಪ್ರಯಾಂತು ॥ ೧೧೧ ॥**

**ಅರ್ಥ** :- **ಮಯೈವ** (ವೈಕುಂಠ ಲೋಕವನ್ನು ತೋರಿಸು ಎಂದು ಪ್ರಾರ್ಥಿತನಾದ), ನನ್ನಿಂದಲೇ, **ಗೋಜೀವಿನಾಂ** ಗೋಪಾಲಕರಿಗೆ, **ವಿಕುಂಠ ಲೋಕಃ** ವೈಕುಂಠಲೋಕವು, **ಸಂದರ್ಶಿತೋ ನನು** ತೋರಿಸಲ್ಪಟ್ಟಿತಷ್ಟೇ. **ಅಜೇ** ಜನನ ರಹಿತನಾದ, **ಮಯಿ** ನನ್ನಲ್ಲಿ, **ಮನುಷ್ಯಬುದ್ಧಿಂ** ಮನುಷ್ಯನೆಂಬ ಭಾವನೆಯನ್ನು, **ಅಪನೇತುಂ** ಹೋಗಲಾಡಿಸಲು, **ಪ್ರವರಾ** ಅತಿಶ್ರೇಷ್ಠವಾದ, **ಮದಿಯಾ ಸ್ಥಿತಿರಪಿ** ನನ್ನ ಉತ್ತಮ ಮಹಿಮೆಯೂ (ವರ್ತಮಾನ ಸ್ಥಿತಿಯೂ), **ಯಸ್ಮಾತ್** ಯಾವ ಕಾರಣದಿಂದ, **ಸಂದರ್ಶಿತಾ** ತೋರಿಸಲ್ಪಟ್ಟಿತೋ, **ತಸ್ಮಾತ್** ಆ ಕಾರಣದಿಂದ, **ಮಯಿ** ನನ್ನಲ್ಲಿ, **ಸ್ಥಿತಿಂ** ನಿಷ್ಠೆಯನ್ನು, **ಅವಾಪ್ಯ** ಹೊಂದಿ, **ಶಮಂ** ಶಾಂತಿಯನ್ನು (ದುಃಖ ಶಾಂತಿಯನ್ನು), **ಪ್ರಯಾಂತು** ಪಡೆಯಿರಿ.

**ತಾತ್ಪರ್ಯ** :- 'ನೀನು ನಾರಾಯಣನಾದರೆ ನಿನ್ನ ವೈಕುಂಠಲೋಕವನ್ನು ನಮಗೆ ತೋರಿಸು' ಎಂದು ಗೋಪಾಲಕರು ಪ್ರಾರ್ಥಿಸಿದರು. ಆಗ ನಾನು ಅವರಿಗೆ ವೈಕುಂಠ ಲೋಕವನ್ನು ತೋರಿಸಲಿಲ್ಲವೆ? ಜನನ ರಹಿತನಾದ ನನ್ನ ಬಗ್ಗೆ ಮನುಷ್ಯನೆಂಬ ಭಾವನೆಯನ್ನು ಹೋಗಲಾಡಿಸಲು ನನ್ನ ಉತ್ತಮ ಮಹಿಮೆಯನ್ನು

ತೋರಿಸಿದೆ. ಆದ್ದರಿಂದ ನೀವೆಲ್ಲರೂ ನನ್ನಲ್ಲಿ ನಿಷ್ಠೆ ಹೊಂದಿ ದುಃಖದಿಂದ ಬಿಡುಗಡೆಯನ್ನು ಪಡೆಯಿರಿ.

ಶ್ರುತ್ವೋದ್ಧವೋ ನಿಗದಿತಂ ಪರಮಸ್ಯ ಪುಂಸೋ
ವೃಂದಾವನಂ ಪ್ರತಿ ಯಯೌ ವಚನೈಶ್ಚ ತಸ್ಯ ।
ದುಃಖಂ ವ್ಯಪೋಹ್ಯ ನಿಖಿಲಂ ಪಶುಜೀವನಾನಾಂ
ಆಯಾತ್ ಪುನಶ್ಚರಣಸನ್ನಿಧಿಮೇವ ವಿಷ್ಣೋಃ ॥ ೧೧೨ ॥

**ಅರ್ಥ** :- ಪರಮಸ್ಯ ಸರ್ವೋತ್ತಮ, ಪುಂಸಃ ಪುರುಷನಾದ ಶ್ರೀಕೃಷ್ಣನ, **ನಿಗದಿತಂ** ಮಾತನ್ನು (ಪರಮಪುರುಷ ಶ್ರೀಕೃಷ್ಣನಿಂದ ಹೇಳಲ್ಪಟ್ಟಿದ್ದನ್ನು), **ಶ್ರುತ್ವಾ** ಕೇಳಿ, **ಉದ್ಧವಃ** ಉದ್ಧವನು, **ವೃಂದಾವನಂ ಪ್ರತಿ ಯಯೌ** ವೃಂದಾವನಕ್ಕೆ ಹೋದನು, **ತಸ್ಯ** ಆ ಶ್ರೀಕೃಷ್ಣನ, **ವಚನೈಶ್ಚ** ಮಾತುಗಳಿಂದಲೇ, **ಪಶುಜೀವನಾನಾಂ** ಗೊಲ್ಲರ, **ನಿಖಿಲಂ** ಎಲ್ಲ, **ದುಃಖಂ** ದುಖವನ್ನು, **ವ್ಯಪೋಹ್ಯ** ಹೋಗಲಾಡಿಸಿ, **ಪುನಃ** ಮತ್ತೆ, **ವಿಷ್ಣೋಃ** ಶ್ರೀಕೃಷ್ಣನ, **ಚರಣಸನ್ನಿಧಿಮೇವ** ಚರಣಸನ್ನಿಧಿಗೇ, **ಆಯಾತ್** ಬಂದನು.

**ತಾತ್ಪರ್ಯ** :- ಪುರುಷೋತ್ತಮನಾದ ಶ್ರೀಕೃಷ್ಣ ಹೇಳಿದ್ದನ್ನು ಕೇಳಿ ಉದ್ಧವ ವೃಂದಾವನಕ್ಕೆ ತೆರಳಿದ. ಅಲ್ಲಿ ಶ್ರೀಕೃಷ್ಣನ ಮಾತುಗಳಿಂದಲೇ ಎಲ್ಲ ಗೋಪಾಲಕರ ದುಃಖವನ್ನು ದೂರ ಮಾಡಿದ. ಬಳಿಕ ಶ್ರೀ ಕೃಷ್ಣನ ಚರಣಸನ್ನಿಧಿಗೇ ಬಂದ.

ಮಹಾಭಾರತತಾತ್ಪರ್ಯನಿರ್ಣಯಾಖ್ಯಾऽಸ್ತಿ ಯಾ ಕೃತಿಃ ।
ಪೂರ್ಣಬೋಧಸ್ಯ ರುಚಿರಾ ವಸುಧಾಸುರಮೋದಿನೀ ।
ತಸ್ಯಾಂ ಚತುರ್ದಶಾಧ್ಯಾಯಸ್ಯಾನುವಾದಃ ಕೃತೋऽಧುನಾ ।
ಕಾರ್ನಾಟಕ್ಯಾ ಭಾಷಯಾ ಚ ರಂಗನಾಥೇನ ಕಟ್ಟಿನಾ ।
ಭೀಮಾಚಾರ್ಯತನೂಜೇನ ವಿಶ್ವೇಶಗುರುಸೇವಿನಾ ॥
ಪ್ರೀಯತಾಂ ತೇನ ಶ್ರೀಪ್ರಾಣನಾಥೋऽಭೀತಿಕರಃ ಸತಾಮ್ ॥

॥ ಶ್ರೀಮದಾನಂದತೀರ್ಥಭಗವತ್ಪಾದಪ್ರಣೀತೇ
ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯೇ
ಚತುರ್ದಶಾಧ್ಯಾಯಃ ಸಮಾಪ್ತಃ ॥

## ಅಧ್ಯಾಯ - 15

ಏವಂ ಪ್ರಶಾಸತಿ ಜಗತ್ ಪುರುಷೋತ್ತಮೇಽಸ್ಮಿನ್
ಭೀಮಾರ್ಜುನೌ ತು ಸಹದೇವಯುತಾವನುಜ್ಞಾಮ್ ।
ಕೃಷ್ಣಾದವಾಪ್ಯ ವರ್ಷತ್ರಿತಯಾತ್ ಪುರಂ ಸ್ವ-
ಮಾಜಗ್ಮತುರ್ಹರಿಸುತೇನ ವಿಶೋಕನಾಮ್ನಾ ॥ ೧ ॥

**ಅರ್ಥ** :- **ಏವಂ** ಈ ರೀತಿಯಾಗಿ **ಜಗತ್** ಜಗತ್ತನ್ನು **ಪುರುಷೋತ್ತಮೇ** ಕ್ಷರಾಕ್ಷರ ಪುರುಷರಿಂದ ಉತ್ತಮನಾದ ಶ್ರೀಕೃಷ್ಣನು **ಪ್ರಶಾಸತಿ ಸತಿ** ರಕ್ಷಿಸುತ್ತಿರಲು **ಸಹದೇವಯುತಾಂ** ಸಹದೇವನಿಂದ ಕೂಡಿದ **ಭೀಮಾರ್ಜುನೌ ತು** ಭೀಮಾರ್ಜುನರಾದರು **ವರ್ಷತ್ರಿತಯಾತ್** ಮೂರು ವರ್ಷಗಳ ನಂತರ **ಕೃಷ್ಣಾತ್** ಕೃಷ್ಣನಿಂದ **ಅನುಜ್ಞಾಂ** ಆಜ್ಞೆಯನ್ನು **ಅವಾಪ್ಯ** ಪಡೆದು **ಸ್ವಂ ಪುರಂ** ಹಸ್ತಿನಾಪುರಕ್ಕೆ **ಹರಿಸುತೇನ** ಶ್ರೀಕೃಷ್ಣನ ಮಗನಾದ **ವಿಶೋಕನಾಮ್ನಾ** ವಿಶೋಕನಿಂದ ಸಹ ಕೂಡಿಕೊಂಡು **ಆಜಗ್ಮತುಃ** ಮರಳಿದರು.

**ತಾತ್ಪರ್ಯ** :- ಆ ಕ್ರೂರನ ಜೊತೆಗೆ ಭೀಮಾರ್ಜುನರು ಸಹದೇವನ ಜೊತೆಗೆ ಕೂಡಿ ಮಧುರೆಗೆ ಹೋಗಿ ಅಲ್ಲಿ ಮೂರು ವರ್ಷಗಳ ಕಾಲ ಇದ್ದು ಅನಂತರ ಶ್ರೀಕೃಷ್ಣನ ಅಪ್ಪಣೆಯನ್ನು ಪಡೆದು ಅವನ ಪುತ್ರನಾದ ವಿಶೋಕನ ಜೊತೆಗೆ ಹಸ್ತಿನಾಪುರಕ್ಕೆ ಮರಳಿ ಬಂದರು.

ಸ್ವೈರಂಧ್ರಿಕೋದರಭವಃ ಸ ತು ನಾರದಸ್ಯ
ಶಿಷ್ಯೋ ವೃಕೋದರರಥಸ್ಯ ಬಭೂವ ಯಂತಾ ।
ಯಾ ಪಿಂಗಲಾಽನ್ಯಭವ ಆತ್ಮನಿ ಸಂಸ್ಥಿತಂ ತಂ
ಸಂಸ್ಮೃತ್ಯ ಕಾಂತಮುರುಗಾಯಮಭೂತ್ ತ್ರಿವಕ್ರಾ ॥ ೨ ॥

**ಅರ್ಥ** :- **ಸ್ವೈರಂಧ್ರಿಕೋದರಭವಃ** ತ್ರಿವಕ್ರೆಯಲ್ಲಿ ಶ್ರೀಕೃಷ್ಣನಿಂದ ಜನಿಸಿದ **ನಾರದಸ್ಯ** ನಾರದರ **ಶಿಷ್ಯಃ** ಶಿಷ್ಯನಾದ **ಸತು** ಆ ವಿಶೋಕನಾದರು **ವೃಕೋದರರಥಸ್ಯ** ಭೀಮಸೇನನ ರಥದ **ಯಂತಾ** ಸಾರಥಿಯು **ಬಭೂವ** ಆದನು **ಯಾ** ಯಾವ ತ್ರಿವಕ್ರೆಯು **ಅನ್ಯಭವೆ** ಹಿಂದಿನ ಜನ್ಮದಲ್ಲಿ **ಪಿಂಗಲಾ** ಪಿಂಗಳೆ ಎಂಬವಳಾಗಿದ್ದು **ಆತ್ಮನಿ** ತನ್ನಲ್ಲಿ **ಸಂಸ್ಥಿತಂ** ಇರುವ **ತಂ** ಆ **ಉರುಗಾಯಂ** ಉತ್ಕೃಷ್ಟವಾದ ಕೀರ್ತಿಯುಳ್ಳ ಭಗವಂತನನ್ನು (ಶ್ರೀಕೃಷ್ಣನನ್ನು) **ಕಾಂತಂ** ಪತಿಯೆಂದು **ಸಂಸ್ಮೃತ್ವ** ಧ್ಯಾನ ಮಾಡಿ **ತ್ರಿವಕ್ರಾ** ತ್ರಿವಕ್ರೆಯು **ಅಭೂತ್** ಆದಳು.

ತಾತ್ಪರ್ಯ :- ಹಿಂದಿನ ಜನ್ಮದಲ್ಲಿ ಪಿಂಗಳೆಯೆಂಬ ವೈಶ್ಯೆಯು ವೈರಾಗ್ಯದಿಂದ ತನ್ನಲ್ಲಿಯೇ ಇರುವ ಭಗವಂತನನ್ನು ಪತಿಯೆಂದು ಧ್ಯಾನಿಸಿ. ಮುಂದಿನ ಜನ್ಮದಲ್ಲಿ ತ್ರಿವಕ್ರೆಯಾಗಿ ಶ್ರೀಕೃಷ್ಣನನ್ನು ಪತಿಯನ್ನಾಗಿ ಪಡೆದಳು. ಇವಳಲ್ಲಿ ಜನಿಸಿದ ವಿಶೋಕನು ನಾರದರ ಶಿಷ್ಯನು. ಇವನು ಭೀಮನ ರಥಕ್ಕೆ ಸಾರಥಿಯಾದನು.

**ತಂ ಪಂಚರಾತ್ರವಿದಮಾಪ್ಯ ಸುಸ್ಸಾರಥಿಂ ಸ**
**ಭೀಮೋ ಮುಮೋದ ಪುನರಾಪ ಪರಾತ್ಮವಿದ್ಯಾಮ್ ।**
**ವ್ಯಾಸಾತ್ ಪರಾತ್ಮತ ಉವಾಚ ಚ ಫಲ್ಗುನಾದಿ-**
**ದೈವೇಷು ಸರ್ವವಿಜಯೀ ಪರವಿದ್ಯಯೈಷಃ ॥ ೩ ॥**

**ಅರ್ಥ** :- **ಪಂಚರಾತ್ರ ವಿದಂ** ಪಂಚರಾತ್ರ ಆಗಮವನ್ನು ತಿಳಿದ **ತಂ** ಅಂತಹ **ಸುಸಾರಥಿಂ** ಉತ್ತಮ ಸಾರಥಿಯನ್ನು **ಆಪ್ಯ** ಹೊಂದಿ **ಸಃ** ಆ **ಭೀಮ** ಭೀಮಸೇನನು **ಮುಮೋದ** ಸಂತೋಷ ಪಟ್ಟನು **ಪುನಃ** ಮತ್ತೆ **ವ್ಯಾಸಾತ್** ವೇದವ್ಯಾಸ ದೇವರಿಂದ **ಪರಾತ್ಮವಿದ್ಯಾಮ್** ಉತ್ತಮವಾದ ತತ್ವಜ್ಞಾನವನ್ನು **ಆಪ** ಹೊಂದಿದನು **ಚ** ಮತ್ತು **ಪರಾತ್ಮತಃ** ಆ ಶ್ರೇಷ್ಠ ಶಾಸ್ತ್ರಜ್ಞಾನದಿಂದ **ಸರ್ವವಿಜಯೀ** ಎಲ್ಲರನ್ನೂ ಜಯಿಸುವ **ಏಷಃ** ಈ ಭೀಮನು **ಪರವಿದ್ಯಯಾ** ಆ ತತ್ವಜ್ಞಾನವನ್ನು **ಫಲ್ಗುನಾದಿದೇವೇಷು** ಅರ್ಜುನ ಮೊದಲಾದ ದೇವತೆಗಳಿಗೆ **ಉವಾಚ** ಉಪದೇಶಿಸಿದನು.

ತಾತ್ಪರ್ಯ :- ಪಂಚರಾತ್ರ ಮೊದಲಾದ ಆಗಮಗಳನ್ನು ಚೆನ್ನಾಗಿ ತಿಳಿದ ವಿಶೋಕನು ತನ್ನ ಸಾರಥಿಯಾದದನ್ನು ಕಂಡು ಭೀಮನು ಸಂತೋಷಪಟ್ಟನು. ಮತ್ತೆ ತಾನು ವೇದವ್ಯಾಸರ ಮುಖಕಮಲದಿಂದ ಪರವಿದ್ಯೆಯನ್ನು ಮತ್ತಷ್ಟು ಶ್ರವಣ ಮಾಡಿ ಸರ್ವವಿಜಯಿಯಾಗಿ ತಾನು ಕಲಿತ ಉತ್ತಮ ವಿದ್ಯೆಯನ್ನು ಅರ್ಜುನಾದಿ ದೇವತೆಗಳಿಗೆ ಉಪದೇಶಿಸಿದನು.

**ಸರ್ವಾನಭಾಗವತಶಾಸ್ತ್ರಪಥಾನ್ ವಿಧೂಯ**
**ಮಾರ್ಗಂ ಚಕಾರ ಸ ತು ವೈಷ್ಣವಮೇವ ಶುಭ್ರಮ್ ।**
**ಕ್ರೀಡಾರ್ಥಮೇವ ವಿಜಿಗಾಯ ತಥೋಭಯಾತ್ಮ-**
**ಯುದ್ಧೇ ಬಲಂ ಚ ಕರವಾಕ್ ಪ್ರಭವೇಽಮಿತಾತ್ಮಾ ॥ ೪ ॥**

**ಅರ್ಥ** :- **ಸಃ ತು** ಭೀಮನಾದರು **ಸರ್ವಾನ್** ಎಲ್ಲ **ಅಭಾಗವತ ಶಾಸ್ತ್ರಪಥಾನ್** ಅವೈಷ್ಣವ ಶಾಸ್ತ್ರದ ಪದ್ಧತಿಗಳನ್ನು **ವಿಧೂಯ** ನಾಶಗೊಳಿಸಿ **ಶುಭ್ರಮ್** ಶುದ್ಧವಾದ **ವೈಷ್ಣವಮೇವ** ವಿಷ್ಣುವಿಗೆ ಪ್ರಿಯವಾದ **ಮಾರ್ಗಂ** ಪದ್ಧತಿಯನ್ನು **ಚಕಾರ** ಮಾಡಿದನು **ತಥ** ಹಾಗೆಯೇ **ಕ್ರೀಡಾರ್ಥಂ ಏವ** ಕೇವಲ ವಿನೋದಕ್ಕಾಗಿಯೇ **ಉಭಯಾತ್ಮ** ಜ್ಞಾನಬಲ ಸ್ವರೂಪನಾದ **ಅಮಿತಾತ್ಮಾ** ಅಪಾರಬಲಉಳ್ಳ ಭೀಮನು **ಕರವಾಕ್ಕೃಭವೇ** ಬಾಹು ಮತ್ತು ಮಾತಿನಿಂದ ನಡೆಯುವ **ಯುದ್ಧೇ** ಎರಡು ಬಗೆಯ ಯುದ್ಧದಲ್ಲಿ **ಬಲಂ** ಬಲರಾಮನನ್ನು **ವಿಜಿಗಾಯ** ಪರಾಭವಗೊಳಿಸಿದ.

**ತಾತ್ಪರ್ಯ** :- ಭೀಮನು ತನ್ನ ರಾಜ್ಯದಲ್ಲಿ ಅವೈಷ್ಣವ ಎಲ್ಲ ಪದ್ಧತಿಗಳನ್ನು ನಾಶಪಡಿಸಿ, ಶುದ್ಧ ವೈಷ್ಣವಪದ್ಧತಿಯನ್ನು ಜಾರಿಗೊಳಿಸಿದನು. ಇಂತಹ ಜ್ಞಾನ ಬಲ ಸ್ವರೂಪನಾದ ಭೀಮನು ಬಾಹು ಯುದ್ಧ ಮತ್ತು ವಾಕ್ ಯುದ್ಧಗಳಲ್ಲಿ ಬಲರಾಮನನ್ನು ವಿನೋದಕ್ಕಾಗಿ ಪರಾಭವಗೊಳಿಸಿದನು ಎಂದು ಭಾವಾರ್ಥ.

**ನಿತ್ಯಪ್ರಭೂತಸುಶುಭಪ್ರತಿಭೋಽಪಿ ವಿಷ್ಣೋಃ**
**ಶ್ರುತ್ವಾ ಪರಾಂ ಪುನರಪಿ ಪ್ರತಿಭಾಮವಾಪ ।**
**ಕೋ ನಾಮ ವಿಷ್ಣುನುಪಜೀವಕ ಆಸ ಯಸ್ಯ**
**ನಿತ್ಯಾಶ್ರಯಾದಭಿಹಿತಾಽಪಿ ರಮಾ ಸದಾ ಶ್ರೀಃ ॥ ೫ ॥**

**ಅರ್ಥ** :- **ನಿತ್ಯ ಪ್ರಭೂತ ಸುಶುಭಪ್ರತಿಭಃ ಅಪಿ** ನಿತ್ಯದಲ್ಲಿಯೂ ವ್ಯಕ್ತವಾದ, ಪರಿಪೂರ್ಣವಾದ, ಶುದ್ಧವಾದ, ಜ್ಞಾನ ಉಳ್ಳವನಾದರೂ ಕೂಡ ಭೀಮನು **ವಿಷ್ಣೋಃ** ವ್ಯಾಸರೂಪಿಯಾದ ಶ್ರೀಹರಿಯಿಂದ **ಪುನರಪಿ** ಮತ್ತೆ ಮತ್ತೆ **ಶ್ರುತ್ವಾ** ತತ್ವಜ್ಞಾನವನ್ನು ಪಡೆದು **ಪರಾಂ** ಇನ್ನೂ ಹೆಚ್ಚಿನ **ಪ್ರತಿಭಾಂ** ಜ್ಞಾನವನ್ನು **ಅವಾಪ** ಹೊಂದಿದನು. **ಸದಾ** ಯಾವಾಗಲು **ಶ್ರೀಃ ರಮಾ** ಲಕ್ಷ್ಮೀದೇವಿಯೂ **ಅಪಿ** ಕೂಡ **ಯಸ್ಯ** ಯಾವ ಭಗವಂತನ **ನಿತ್ಯಾಶ್ರಯಾತ್** ನಿತ್ಯದಲ್ಲಿಯು ಅವಲಂಬಿಸಿದ್ದಾಳೆಯೆಂದು **ಅಭಿಹಿತಾ** ಶೃತಿಗಳಲ್ಲಿ ಹೇಳಲ್ಪಟ್ಟಿ ದಿಯೋ ಅಂತಹ ವಿಷ್ಣುವನ್ನು **ಅನ್ನುಪಜೀವಕಃ** ಆಶ್ರಯಿಸದೇ **ಕಃ ಆಸ ನಾಮ** ಯಾರು ಇರಲು ಸಾಧ್ಯ.

**ತಾತ್ಪರ್ಯ** :- ರಮಾ ದೇವಿಯೇ ನಿತ್ಯದಲ್ಲಿಯು ಭಗವಂತನ ಪಾದಗಳನ್ನು ಆಶ್ರಯಿಸಿ ಇದ್ದಾಳೆಯೋ ಅಂತಹ ಶ್ರೀಹರಿಯ ಅವತಾರರಾದ ವೇದವ್ಯಾಸರ ಉಪದೇಶವನ್ನು ಪಡೆದು ನಿತ್ಯಶುದ್ಧ ಜ್ಞಾನಸ್ವರೂಪರಾದ ಭೀಮಸೇನದೇವರು ಇನ್ನು ಹೆಚ್ಚಿನ ಜ್ಞಾನವನ್ನು ಪಡೆದರು.

ವ್ಯಾಸಾದವಾಪ ಪರಮಾತ್ಮಸತತ್ತ್ವವಿದ್ಯಾಂ
ಧರ್ಮಾತ್ಮಜೋಽಪಿ ಸತತಂ ಭಗವತ್ ಪ್ರಪನ್ನಾಃ ।
ತೇ ಪಂಚ ಪಾಂಡುತನಯಾ ಮುಮುದುರ್ನಿತಾಂತಂ
ಸದ್ಧರ್ಮಚಾರಿಣ ಉರುಕ್ರಮಶಿಕ್ಷಿತಾರ್ಥಾಃ ॥ ೬ ॥

**ಅರ್ಥ** :- **ಸತತಂ** ಯಾವಾಗಲೂ **ಭಗವತ್ಪ್ರಪನ್ನಃ** ಭಗವಂತನನ್ನು ಆಶ್ರಯಿಸಿದ **ಧರ್ಮಾತ್ಮಜಃ ಅಪಿ** ಯಮಧರ್ಮರಾಜನ ಪುತ್ರನಾದ ಧರ್ಮರಾಜನು ಕೂಡ **ವ್ಯಾಸಾತ್** ವೇದವ್ಯಾಸದೇವರಿಂದ **ಪರಮಾತ್ಮಸುತತ್ತ್ವ ವಿದ್ಯಾಂ** ಉತ್ತಮ ಭಗವತತ್ತ್ವಜ್ಞಾನವನ್ನು **ಅವಾಪ** ಪಡೆದನು **ತೇ** ಆ **ಪಂಚ ಪಾಂಡುತನಯಾಃ** ಪಂಚಪಾಂಡವರು **ಸದ್ಧರ್ಮಚಾರಿಣಃ ಸಂತಃ** ಉತ್ತಮ ಧರ್ಮಚಾರಿಗಳೂ **ಉರುಕ್ರಮಶಿಕ್ಷಿತಾರ್ಥಾಃ** ಶ್ರೀವೇದವ್ಯಾಸದೇವರ ಉಪದೇಶ ವನ್ನು ಪಡೆದು **ನಿತಾಂತಂ** ಚೆನ್ನಾಗಿ **ಮುಮುದುಃ** ಸಂತೋಷಪಟ್ಟರು.

**ತಾತ್ಪರ್ಯ** :- ಯಮನ ಮಗನಾದ ಯುಧಿಷ್ಠಿರನು ಮತ್ತು ಉಳಿದ ಅರ್ಜುನ, ನಕುಲ, ಸಹದೇವರು ಭಗವಂತನಲ್ಲಿ ವಿಶೇಷವಾದ ಭಕ್ತಿಯುಳ್ಳವ ರಾಗಿ ಸದಾಚಾರಿಗಳಾಗಿ ವೇದವ್ಯಾಸರಿಂದ ಶಾಸ್ತ್ರಜ್ಞಾನವನ್ನು ಪಡೆದು ಸಂತೋಷಪಟ್ಟರು.

ಯದಾ ಭರದ್ವಾಜಸುತಸ್ತ್ವಸಂಚಯೀ
ಪ್ರತಿಗ್ರಹೋಜ್ಝೋ ನಿಜಧರ್ಮವರ್ತೀ ।
ದ್ರೌಣಿಸ್ತದಾ ಧಾರ್ತರಾಷ್ಟ್ರೈಃ ಸಮೇತ್ಯ
ಕ್ರೀಡನ್ ಪಯಃ ಪಾತುಮುಪೈತಿ ಸದ್ಮ ॥ ೭ ॥

**ಅರ್ಥ** :- **ಯದಾ** ಯಾವಾಗ **ಭರದ್ವಾಜಸುತಃ** ಭರದ್ವಾಜರ ಮಕ್ಕಳಾದ ದ್ರೋಣರು **ನಿಜಧರ್ಮವರ್ತೀ ಸನ್** ಬ್ರಾಹ್ಮಣರಿಗೆ ಯೋಗ್ಯನಾದ ಧರ್ಮ ವನ್ನು ಅನುಷ್ಠಾನ ಮಾಡುವರಾಗಿ **ಅಸಂಚಯೀ** ಧನವನ್ನು ಕೂಡಿಡುತ್ತಿರಲಿಲ್ಲ **ಪ್ರತಿಗ್ರಹೋಜ್ಝಃ** ಯಾರನ್ನು ಬೇಡುತ್ತಿರಲಿಲ್ಲ **ತದಾ** ಆಗ **ದ್ರೌಣಿಃ** ದ್ರೋಣಾ ಚಾರ್ಯರ ಪುತ್ರನಾದ ಅಶ್ವತ್ಥಾಮನು **ಧಾರ್ತರಾಷ್ಟ್ರೈಃ** ದುರ್ಯೋಧನಾದಿ ಗಳಿಂದ **ಸಮೇತ್ಯ** ಜೊತೆಗೂಡಿ **ಕ್ರೀಡನ್** ಆಟವಾಡುತ್ತಾ **ಪಯಃ** ಹಾಲನ್ನು **ಪಾತುಂ** ಕುಡಿಯಲು **ಸದ್ಮ** ಮನೆಗೆ **ಉಪೈತಿ** ಹೊಂದಿದನು (ಬಂದನು).

ತಾತ್ಪರ್ಯ :- ಬ್ರಾಹ್ಮಣರ ನಿಜಧರ್ಮವಾದ ಶಿಲೋಂಛ ವೃತ್ತಿಯನ್ನು ಆಶ್ರಯಿಸಿ ಜೀವನವನ್ನು ಮಾಡುತ್ತಿದ್ದ ದ್ರೋಣಾಚಾರ್ಯರಿಗೆ ಅಶ್ವತ್ಥಾಮ ನೆಂಬ ಪುತ್ರನಿದ್ದನು. ಅಶ್ವತ್ಥಾಮನು ಕೌರವರ ಜೊತೆಗೂಡಿ ಆಟವಾಡಿ ಬಳಲಿ ವಿರಾಮದ ಸಮಯದಲ್ಲಿ ಎಲ್ಲ ಮಕ್ಕಳಂತೆ ತಾನು ಹಾಲುಕುಡಿಯಲು ಮನೆಗೆ ಬರುತಿದ್ದನು.

**ತಸ್ಮೈ ಮಾತಾ ಪಿಷ್ಟಮಾಲೋಡ್ಯ ಪಾತುಂ**
**ದದಾತಿ ಪೀತ್ವೈತಿ ತದೇಷ ನಿತ್ಯಮ್ ।**
**ಪೀತಕ್ಷೀರಾನ್ ಧಾರ್ತರಾಷ್ಟ್ರಾನ್ ಸ ಚೈತ್ಯ**
**ಮಯಾ ಪೀತಂ ಕ್ಷೀರಮಿತ್ಯಾಹ ನಿತ್ಯಮ್ ॥ ೮ ॥**

**ಅರ್ಥ** :- **ತಸ್ಮೈ** ಆ ಅಶ್ವತ್ಥಾಮನಿಗೆ **ಮಾತಾ** ತಾಯಿಯಾದ **ಕೃಪಿಯು ಪಿಷ್ಟಂ** ಹಿಟ್ಟನು **ಆಲೋಡ್ಯ** ಕಲಕಿ (ಹಿಟ್ಟಿನ ಹಾಲನ್ನು) **ಪಾತುಂ** ಕುಡಿಯಲು **ದದಾತಿ** ಕೊಡುತಿದ್ದಳು **ಏಷಃ** ಈ ಅಶ್ವತ್ಥಾಮನು **ನಿತ್ಯಂ** ನಿತ್ಯದಲ್ಲಿಯು **ತತ್** ಹಿಟ್ಟಿನ ಹಾಲನ್ನು **ಪೀತ್ವ** ಕುಡಿದು **ಪೀತಕ್ಷೀರಾನ್** ನಿಜವಾದ ಹಾಲನ್ನು ಕುಡಿದು **ಧಾರ್ತರಾಷ್ಟ್ರಾನ್** ದುರ್ಯೋಧನಾದಿಗಳನ್ನು **ಸಮೇತ್ಯ** ಹೊಂದಿ **ಮಯಾ** ನನ್ನಿಂದ **ಕ್ಷೀರಂ** ಹಾಲು **ಪೀತಂ** ಕುಡಿಯಲ್ಪಟ್ಟಿತು **ಇತಿ** ಎಂದು **ನಿತ್ಯಂ** ಪ್ರತಿದಿನವು **ಆಹ** ಹೇಳುತಿದ್ದನು.

ತಾತ್ಪರ್ಯ :- ಅಶ್ವತ್ಥಾಮನು ಪ್ರತಿದಿನದಲ್ಲಿಯು ತಾಯಿಕೊಟ್ಟ ಹಿಟ್ಟಿನ ಹಾಲನ್ನು ನಿಜವಾದ ಹಾಲೆಂದು ಭಾವಿಸಿ ಕುಡಿದು ನಿಜವಾದ ಹಾಲನ್ನು ಕುಡಿದು ಬಂದ ದುರ್ಯೋಧನಾದಿಗಳ ಮುಂದೆ ನಾನು ಹಾಲನ್ನು ಕುಡಿದು ಬಂದೆ ಎಂದು ಹೇಳುತ್ತಿದ್ದನು.

**ನೃತ್ಯಂತಮೇನಂ ಪಾಯಯಾಮಾಸುರೇತೇ**
**ಪಯಃ ಕದಾಚಿದ್ ರಸಮಸ್ಯ ಸೋಽವೇತ್ ।**
**ಪುನಃ ಕದಾಚಿತ್ ಸ ತು ಮಾತೃದತ್ತೇ**
**ಪಿಷ್ಟೇ ನೇದಂ ಕ್ಷೀರಮಿತ್ಯಾರುರಾವ ॥ ೯ ॥**

**ಅರ್ಥ** :- **ನೃತ್ಯಂತಂ** (ನಾನು ಹಾಲನ್ನು ಕುಡಿದೆ ಎಂದು) ಕುಣಿಯುತ್ತಿದ್ದ **ಏನಂ** ಈ ಅಶ್ವತ್ಥಾಮನಿಗೆ **ಕದಾಚಿತ್** ಒಮ್ಮೆ **ಏತೇ** ಈ ಕೌರವರು

(ದುರ್ಯೋಧನಾದಿಗಳು) **ಪಯಃ** ನಿಜವಾದ ಹಾಲನ್ನು **ಪಾಯಯಾಮಾಸುಃ** ಕುಡಿಸಿದರು **ಸಃ** ಆ ಅಶ್ವತ್ಥಾಮನು **ಅಸ್ಯ** ಹಾಲಿನ **ರಸಂ** ರುಚಿ (ಸವಿ)ಯನ್ನು **ಅವೈತ್** ತಿಳಿದನು **ಪುನಃ** ಮತ್ತೆ **ಕದಾಚಿತ್** ಒಮ್ಮೆ **ಸಃ** ಅವನು **ತು** ಆದರು **ಮಾತೃದತ್ತೇ** ತಾಯಿಯಿಂದ ಕೊಡಲ್ಪಟ್ಟ **ಪಿಷ್ಟೇ** ಹಿಟ್ಟಿನ ನೀರನ್ನು **ಇದಂ** ಇದು **ಕ್ಷೀರಂ** ಹಾಲು **ನ** ಅಲ್ಲ **ಇತಿ** ಎಂದು **ರುರಾವ** ಅತ್ತನು.

**ತಾತ್ಪರ್ಯ** :- ನಾನು ಹಾಲು ಕುಡಿದೆ ಎಂದು ಕುಣಿದಾಡುತ್ತಿರುವ ಅಶ್ವತ್ಥಾಮನನ್ನು ದುರ್ಯೋಧನನು ಒಮ್ಮೆ ಮನೆಗೆ ಕರೆದುಕೊಂಡು ಹೋದನು. ಅಲ್ಲಿ ಉತ್ತಮವಾದ ಕ್ಷೀರವನ್ನು ಅಶ್ವತ್ಥಾಮನಿಗೆ ನೀಡಿದನು. ಅದನ್ನು ಕುಡಿದು ಮರಳಿ ಬಂದ ಅಶ್ವತ್ಥಾಮನು ತಾಯಿ ಕೊಟ್ಟ ಹಿಟ್ಟಿನ ನೀರನ್ನು ಇದು ಹಾಲಲ್ಲ ಎಂದು ತಿರಸ್ಕರಿಸಿ ಅಳತೊಡಗಿದನು.

**ದೃಷ್ಟ್ವಾ ರುವಂತಂ ಸುತಮಾತ್ಮಜಸ್ಯ**
**ಸ್ನೇಹಾನ್ನಿಯತ್ಯೈವ ಜನಾರ್ದನಸ್ಯ ।**
**ಸಂಪ್ರೇರಿತಃ ಕೃಪಯಾ ಚಾऽರ್ತರೂಪೋ**
**ದ್ರೋಣೋ ಯಯಾವಾರ್ಜಯಿತುಂ ತದಾ ಗಾಮ್ ॥ ೧೦ ॥**

**ಅರ್ಥ** :- **ಆರುವಂತಂ** ಅಳುತ್ತಿರುವ **ಸುತಂ** ಮಗನನ್ನು **ದೃಷ್ಟ್ವಾ** ನೋಡಿ **ಆತ್ಮಜಸ್ಯ** ಮಗನ ಮೇಲಿನ **ಸ್ನೇಹಾತ್** ಪ್ರೀತಿಯಿಂದ **ಜನಾರ್ದನಸ್ಯ** ದೇವರ **ನಿಯತ್ಯೈವ** (ಸಂಕಲನ) ನಿಯಮದಿಂದಲೇ **ಸಂಪೇರಿತಃ** ಪ್ರೇರಿತನಾದ **ಚ** ಮತ್ತು **ಕೃಪಯಾ** ಕೃಪೆಯಿಂದ **ಆರ್ತರೂಪಃ** ಪ್ರಾರ್ಥನೆಯಿಂದ ಕೂಡಿ **ದ್ರೋಣಃ** ದ್ರೋಣಾಚಾರ್ಯರು **ತದಾ** ಆಗ **ಗಾಂ** ಆಕಳನ್ನು **ಆರ್ಜಯಿತುಂ** ಸಂಪಾದಿಸಲು **ಯಯೌ** ಹೊರಟರು.

**ತಾತ್ಪರ್ಯ** :- ಹಾಲಿಗಾಗಿ ಬಹಳ ಹಟಮಾಡುತ್ತಿರುವ ಮಗನನ್ನು ಕಂಡು ಮಗುವಿನ ಸ್ನೇಹದಿಂದ ಮತ್ತು ಶ್ರೀಹರಿಯ ಸಂಕಲ್ಪದಿಂದ ಕೃಪಿಯ ಪ್ರಾರ್ಥನೆಯಿಂದಲೂ ದ್ರೋಣಾಚಾರ್ಯರು ಗೋವನ್ನು ಸಂಪಾದಿಸಲೆಂದು ಹೊರಟರು.

**ಪ್ರತಿಗ್ರಹಾತ್ ಸನ್ನಿವೃತ್ತಃ ಸ ರಾಮಂ**
**ಯಯೌ ನ ವಿಷ್ಣೋರ್ಹಿ ಭವೇತ್ ಪ್ರತಿಗ್ರಹಃ ।**
**ದೋಷಾಯ ಯಸ್ಮಾತ್ ಸ ಪಿತಾऽಖಿಲಸ್ಯ**
**ಸ್ವಾಮೀ ಗುರುಃ ಪರಮಂ ದೈವತಂ ಚ ॥ ೧೧ ॥**

**ಅರ್ಥ** :- **ಪ್ರತಿಗ್ರಹಾತ್** ದಾನವನ್ನು ತೆಗೆದುಕೊಳ್ಳುವದರಿಂದ **ಸನ್ನಿವೃತ್ತಃ** ನಿವೃತ್ತರಾದ **ಸಃ** ದ್ರೋಣಾಚಾರ್ಯರು **ರಾಮಂ** ಪರಶುರಾಮನ ಬಳಿಗೆ **ಯಯೌ** ಹೋದರು **ಯಸ್ಮಾತ್** ಯಾವ ಕಾರಣದಿಂದ **ಸಃ** ವಿಷ್ಣುವು **ಅಖಿಲಸ್ಯ** ಸಮಸ್ತ ಜಗತ್ತಿಗೆ **ಪಿತಾ** ತಂದೆಯು **ಸ್ವಾಮಿ** ಸ್ವಾಮಿಯು **ಗುರುಃ** ಗುರುವು **ಚ** ಮತ್ತು **ಪರಮ** ಉತ್ತಮವಾದ **ದೈವತಂ** ದೇವತೆಯು (ಆಗಿರುವನೋ) **ತಸ್ಮಾತ್** ಆದ್ದರಿಂದ **ವಿಷ್ಣೋಃ** ವಿಷ್ಣುವಿನಿಂದ **ಪ್ರತಿಗ್ರಹಃ** ತೆಗೆದುಕೊಳ್ಳುವುದು **ದೋಷಾಯ** ದೋಷಕರವು **ನ** ಆಗುವುದಿಲ್ಲ **ಹಿ** ನಿಶ್ಚಯ (ಪ್ರಮಾಣ ಪ್ರಸಿದ್ಧವು)

**ತಾತ್ಪರ್ಯ** :- ಪ್ರತಿಗ್ರಹವನ್ನು ಬಿಡಲು ಮನಸ್ಸಿಲ್ಲದ ದ್ರೋಣರು, ಗೋವನ್ನು ಪಡೆಯಲು ಮಾಡಿದ ಉಪಾಯ ಇದಾಗಿತ್ತು ಪರಶುರಾಮನು ಸಾಕ್ಷಾತ್ ವಿಷ್ಣುವಿನ ಅವತಾರ. ಆದ್ದರಿಂದ ದೇವರಲ್ಲಿ ಬೇಡಿ ಪಡೆದರೆ ಅದು ಪ್ರತಿಗ್ರಹವೆಂದು ಆಗುವುದಿಲ್ಲ ಎಂದು ಪರಶುರಾಮರ ಬಳಿ ತೆರಳಿದರು.

**ದೃಷ್ಟ್ವೈವೈನಂ ಜಾಮದಗ್ನ್ಯೋಽಪ್ಯಚಿಂತಯದ್**
**ದ್ರೋಣಂ ಕರ್ತುಂ ಕ್ಷಿತಿಭಾರಾಪನೋದೇ ।**
**ಹೇತುಂ ಸುರಾಣಾಂ ನರಯೋನಿಜಾನಾಂ**
**ಹಂತಾ ಚಾಯಂ ಸ್ಯಾತ್ ಸಹ ಪುತ್ರೇಣ ಚೇತಿ ॥ ೧೨ ॥**

**ಅರ್ಥ** :- **ತಂ** ಆ ದ್ರೋಣರನ್ನು **ದೃಷ್ಟ್ವೈವ** ನೋಡಿದ ಕೂಡಲೇ **ಜಾಮದಗ್ನ್ಯಃ** ಜಮದಗ್ನಿಯ ಪುತ್ರನಾದ ಪರಶುರಾಮನು **ದ್ರೋಣಂ** ದ್ರೋಣರನ್ನು **ಕ್ಷಿತಿಭಾರಾಪನೋದೇ** ಭೂಮಿಯ ಭಾರವನು ಕಳೆಯುವ ಕಾರ್ಯದಲ್ಲಿ **ಹೇತುಂ** ನಿಮಿತ್ತನನ್ನಾಗಿ **ಕರ್ತುಂ** ಮಾಡಲು **ನರಯೋನಿಜಾನಾಂ** ಮನುಷ್ಯಯೋನಿಯಲ್ಲಿ ಜನಿಸಿದ **ಸುರಾಣಾಂ** ದೇವತೆಗಳ **ಹಂತಾ** ಸಂಹಾರ ಮಾಡುವವನು **ಪುತ್ರೇಣ** ಮಗನಾದ ಅಶ್ವತ್ಥಾಮನಿಂದ **ಸಹ** ಕೂಡಿ **ಅಯಂ** ಈ ದ್ರೋಣರು **ಸ್ಯಾತ್** ಆಗಲಿ **ಇತಿ** ಎಂದು **ಅಚಿಂತಯತ್** ಯೋಚಿಸಿದನು.

**ತಾತ್ಪರ್ಯ** :- ಪರಶುರಾಮನಾದರು ಈ ದ್ರೋಣರನ್ನು ನೋಡುತ್ತಲೇ ಮಹಾಭಾರತ ಯುದ್ಧದಲ್ಲಿ ಮನುಷ್ಯರಾಗಿ ಅವತಾರ ಮಾಡಿದ ದೇವತೆಗಳ

ಸಂಹಾರವನ್ನು ಮಾಡಲು ಇವನು ಮತ್ತು ಇವನ ಪುತ್ರನಾದ ಅಶ್ವತ್ಥಾಮನು ಕಾರಣನಾಗಲಿ ಎಂದು ವಿಚಾರ ಮಾಡಿದನು.

**ತೇಷಾಂ ವೃದ್ಧಿಃ ಸ್ಯಾತ್ ಪಾಂಡವಾರ್ಥೇ ಹತಾನಾಂ**
**ಮೋಕ್ಷೇಽಪಿ ಸೌಖ್ಯಸ್ಯ ನ ಸಂತತಿಶ್ಚ ।**
**ಯೋಗ್ಯಾ ಸುರಾಣಾಂ ಕಲಿಜಾ ಸುಪಾಪಾಃ**
**ಪ್ರಾಯೋ ಯಸ್ಮಾತ್ ಕಲಿಜಾಃ ಸಂಭವಂತಿ ॥ ೧೩ ॥**

**ಅರ್ಥ** :- **ಪಾಂಡವಾರ್ಥೇ** ಪಾಂಡವರ ಸಲುವಾಗಿ **ಹತಾನಾಂ** ಮೃತರಾಗುವ **ತೇಷಾಂ** ಆ ದೇವತೆಗಳಿಗೆ **ಮೋಕ್ಷೇಽಪಿ** ಮೋಕ್ಷದಲ್ಲಿಯೂ **ಸೌಖ್ಯಸ್ಯ** ಆನಂದದ **ವೃದ್ಧಿಃ** ಅಭಿವೃದ್ಧಿಯು **ಸ್ಯಾತ್** ಆಗಲಿ **ಚ** ಮತ್ತು **ಯಸ್ಮಾತ್** ಯಾವಕಾರಣದಿಂದ **ಪ್ರಾಯಃ** ಬಹುಮಟ್ಟಿಗೆ **ಸುಪಾಪಾಃ** ಮಹಾಪಾಪಿಗಳು **ಕಲಜಾಃ** ಕಲಿಯುಗದಲ್ಲಿ **ಸಂಭವಂತಿ** ಹುಟ್ಟುತ್ತಾರೆ **ತಸ್ಮಾತ್** ಸಂತಾನವು **ಕಲಿಜಾಃ** ಕಲಿಯುಗದಲ್ಲಿ ಹುಟ್ಟಲು **ಯೋಗ್ಯಾಃ** ಯೋಗ್ಯರು ನ ಅಲ್ಲ

**ತಾತ್ಪರ್ಯ** :- ಪರಶುರಾಮದೇವರು ಪಾಂಡವರಿಗೆ ಸಹಾಯ ಮಾಡಿ ಯುದ್ಧದಲ್ಲಿ ಮೃತರಾದ ಎಲ್ಲ ದೇವತೆಗಳಿಗೆ ಮೋಕ್ಷದಲ್ಲಿ ಸುಖದ ಅಭಿವೃದ್ಧಿಯೇ ಆಗುತ್ತದೆ ಮತ್ತು ಕಲಿಯುಗದಲ್ಲಿ ಪಾಪಿಗಳೆ ಹುಟ್ಟುವುದ ರಿಂದ ದೇವತೆಗಳ ಸಂತತಿಯು ಕಲಿಯುಗದಲ್ಲಿ ಜನಿಸುವುದು ಯೋಗ್ಯವಲ್ಲ ಎಂದು ಚಿಂತಿಸಿದರು.

**ನ ದೇವಾನಾಮಾಶತಂ ಪೂರುಷಾ ಹಿ**
**ಸಂತಾನಜಾಃ ಪ್ರಾಯಶಃ ಪಾಪಯೋಗ್ಯಾಃ ।**
**ನಾಕಾರಣಾತ್ ಸಂತತೇರಪ್ಯಭಾವೋ**
**ಯೋಗ್ಯಃ ಸುರಾಣಾಂ ಸದಮೋಘರೇತಸಾಮ್ ॥ ೧೪ ॥**

**ಅರ್ಥ** :- **ದೇವಾನಾಂ** ದೇವತೆಗಳ **ಸಂತಾನಜಾಃ** ಸಂತತಿಯಲ್ಲಿ ಹುಟ್ಟಿದ **ಆಶತಂ ಪುರುಷಾಃ** ನೂರು ತಲೆಮಾರಿನ ಜನರು **ಪ್ರಾಯಶಃ** ಸಾಮಾನ್ಯವಾಗಿ **ಪಾಪಯೋಗ್ಯಾಃ** ಪಾಪಯೋಗ್ಯರು ನ ಆಗಿರುವುದಿಲ್ಲ **ತಥಾ** ಹಾಗೆಯೇ **ಸದಮೋಘರೇತಸಾಮ್** ಅಮೋಘವೀರ್ಯಉಳ್ಳ **ಸುರಾಣಾಂ** ದೇವತೆಗಳಿಗೆ

**ಅಕಾರಣಾತ್** (ಶಾಪಾದಿಕಾರಣಗಳಿಲ್ಲದಲೇ) ನಿಷ್ಕಾರಣವಾಗಿ **ಸಂತತೇಃ** ಸಂತತಿಯ ಅಭಾವ **ಅಪಿ** ಇಲ್ಲದೇ ಇರುವಿಕೆಯೂ ಕೂಡ **ಯೋಗ್ಯಃ** ಉಚಿತವು ನ ಅಲ್ಲ.

**ತಾತ್ಪರ್ಯ** :- ದೇವತೆಗಳ ವಂಶದಲ್ಲಿ ಬಂದು ಒಂದುನೂರು ತಲೆಮಾರಿನ ಜನರು ಸಾಮಾನ್ಯವಾಗಿ ಪಾಪವನ್ನೇ ಮಾಡುವುದಿಲ್ಲ ಮತ್ತು ಶಾಪಾದಿಯಾದ ನಿಮಿತ್ತವು ಇಲ್ಲದೇ ಅವರ ಸಂತತಿಯು ಉಳಿಯದೇ ಇರಲು ಸಾಧ್ಯವಿಲ್ಲ ಎಂದು ಪರಶುರಾಮರು ವಿಚಾರ ಮಾಡಿದರು.

**ಅವ್ಯುಚ್ಛಿನ್ನೇ ಸಕಲಾನಾಂ ಸುರಾಣಾಂ**
**ತಂತೌ ಕಲಿರ್ನೋ ಭವಿತಾ ಕಥಂಚಿತ್ ।**
**ತಸ್ಮಾದುತ್ಸಾದ್ಯಾಃ ಸರ್ವ ಏತೇ ಸುರಾಂಶಾ**
**ಏತೇನ ಸಾಕಂ ತನಯೇನ ವೀರಾಃ ॥ ೧೫ ॥**

**ಅರ್ಥ** :- **ಸಕಲಾನಾಂ** ಎಲ್ಲ **ಸುರಾಣಾಂ** ದೇವತೆಗಳ, **ತಂತೌ** ಸಂತಾನವು, **ಅವ್ಯುಚ್ಛಿನ್ನೆ** ನಾಶವಾಗದಿರಲು, **ಕಲಿ** ಕಲಿಯುಗವು, **ಕಥಂಚಿತ್** ಎಂದಿಗೂ, **ಭವಿತಾ** ನ ಪ್ರವೃತ್ತವಾಗುವುದಿಲ್ಲ, **ತಸ್ಮಾತ್** ಆದ್ದರಿಂದ, **ಏತೇ** ಈ, **ಸರ್ವೆ** ಎಲ್ಲ, **ಸುರಾಂಶಾ** ದೇವತಾಂಶರಾದ ಜನರು, **ವೀರಾಃ** ಪರಾಕ್ರಮಿಗಳು, **ತನಯೇನ** ಅಶ್ವತ್ಥಾಮನಿಂದ, **ಸಾಕಂ** ಕೂಡಿಕೊಂಡು, **ಏತೇನ** ಈ ದ್ರೋಣಾ ಚಾರ್ಯರಿಂದ, **ಉತ್ಸಾದ್ಯಾಃ** ಕೊಲ್ಲಲ್ಪಡಬೇಕು.

**ತಾತ್ಪರ್ಯ** :- ದೇವತೆಗಳ ಸಂತತಿಯು ಎಲ್ಲಿಯವರೆಗೂ ಭೂಮಿಯಲ್ಲಿ ಇರುತ್ತದೆಯೋ ಅಲ್ಲಿಯವರೆಗೂ ಕಲಿಯುಗವು ಪ್ರವೃತ್ತವಾಗುವುದಿಲ್ಲ. ಆದ್ದರಿಂದ ಈ ಎಲ್ಲ ದೇವತೆಗಳ ಅಂಶರಾದ ಪಾಂಡವರ ಪಕ್ಷದಲ್ಲಿ ಇರುವ ವೀರರೆಲ್ಲ ಅಶ್ವತ್ಥಾಮನಿಂದ ಕೂಡಿದ ದ್ರೋಣರಿಂದ ಹತರಾಗಲಿ ಎಂದು ಪರಶುರಾಮದೇವರು ವಿಚಾರ ಮಾಡಿದರು.

**ಏವಂ ವಿಚಿಂತ್ಯಾಪ್ರತಿಮಃ ಸ ಭಾರ್ಗವೋ**
**ಬಭಾಷ ಈಷತ್ಸ್ಮಿತಶೋಚಿಷಾ ಗಿರಾ ।**
**ಅನಂತಶಕ್ತಿಃ ಸಕಲೇಶ್ವರೋಽಪಿ**
**ತ್ಯಕ್ತಂ ಸರ್ವಂ ನಾದ್ಯ ವಿತ್ತಂ ಮಮಾಸ್ತಿ ॥ ೧೬ ॥**

**ಅರ್ಥ** :- ಏವಂ ಈ ರೀತಿಯಾಗಿ, **ವಿಚಿಂತ್ಯ** ವಿಚಾರ ಮಾಡಿ, **ಅಪ್ರತಿಮಃ** ಅಸದೃಷನು, **ಅನಂತಶಕ್ತಿ** ಅಪರಿಮಿತವಾದ ಶಕ್ತಿಯುಳ್ಳವನು, **ಸಕಲೇಶ್ವರಃ ಅಪಿ** ಸರ್ವೇಶ್ವರನಾದರು ಕೂಡ, **ಸಃ** ಆ, **ಭಾರ್ಗವಃ** ಪರಶು ರಾಮನು, **ಈಷತ್‌ಸ್ಮಿತಶೋಚಿಷಾ** ಸ್ವಲ್ಪ ಮಂದಹಾಸದಿಂದ ಕೂಡಿದ, **ಗಿರಾ** ಮಾತನ್ನು **ಬಭಾಷೆ** ಆಡಿದನು, (**ಮಯಾ** ನನ್ನಿಂದ), **ಸರ್ವಂ** ಎಲ್ಲವು, **ತ್ಯಕ್ತಂ** ಕೊಡಲ್ಪಟ್ಟಿದೆ, **ಅದ್ಯ** ಈಗ, **ಮಮ** ನನ್ನಲ್ಲಿ, **ವಿತ್ತಂ** ಹಣವು, **ನ ಅಸ್ತಿ** ಇಲ್ಲ.

**ತಾತ್ಪರ್ಯ** :- ಸರ್ವೇಶ್ವರನಾದ ಅಚಿಂತ್ಯ ಶಕ್ತಿಯುಳ್ಳ ಅಪ್ರತಿಮನಾದ ಪರಶುರಾಮದೇವರು ಹೀಗೆ ವಿಚಾರ ಮಾಡಿ ಮಂದಹಾಸದಿಂದ ದ್ರೋಣ ರನ್ನು ಕುರಿತು. ನಾನು ಎಲ್ಲವನ್ನು ದಾನ ಮಾಡಿದ್ದೇನೆ. ಈಗ ನನ್ನ ಬಳಿ ಏನು ಇಲ್ಲ ಎಂದು ಹೇಳಿದರು.

**ಆತ್ಮಾ ವಿದ್ಯಾ ಶಸ್ತ್ರಮೇತಾವದಸ್ತಿ**
**ತೇಷಾಂ ಮಧ್ಯೇ ರುಚಿತಂ ತ್ವಂ ಗೃಹಾಣ ।**
**ಉಕ್ತಃ ಸ ಇತ್ಥಂ ಪ್ರವಿಚಿಂತ್ಯ ವಿಪ್ರೋ**
**ಜಗಾದ ಕಸ್ತ್ವದ್ ಗ್ರಹಣೇ ಸಮರ್ಥಃ ॥ ೧೭ ॥**

**ಅರ್ಥ** :- **ಆತ್ಮಾ** ನಾನು, **ವಿದ್ಯಾ** ಶಾಸ್ತ್ರವಿದ್ಯೆ, **ಶಾಸ್ತ್ರಂ** ಆಯುಧ, **ಏತಾವತ್** ಇವುಗಳಷ್ಟೆ **ಅಸ್ತಿ** (ನನ್ನಬಳಿ) ಇದೆ, **ತೇಷಾಂ** ಅವುಗಳ, **ಮಧ್ಯೇ** ಮಧ್ಯದಲ್ಲಿ **ರುಚಿತಂ** ಅಪೇಕ್ಷಿತವಾದದ್ದನ್ನು **ತ್ವಂ** ನೀನು, **ಗೃಹಾಣ** ತೆಗೆದುಕೋ, **ಇತ್ಥಂ** ಈ ರೀತಿಯಾಗಿ, **ಉಕ್ತಃ** ಹೇಳಿಸಿಕೊಳಲ್ಪಟ್ಟ, **ಸಃ** ಆ, **ವಿಪ್ರಃ** ಬ್ರಾಹ್ಮಣರಾದ ದ್ರೋಣರು, **ಪ್ರವಿಚಿಂತ್ಯ** ಚೆನ್ನಾಗಿ ವಿಚಾರಮಾಡಿ, **ತ್ವದ್ಗ್ರಹಣೇ** ನಿನ್ನನ್ನು ಸ್ವೀಕರಿಸಲು, **ಸಮರ್ಥಃ** ಸಮರ್ಥನು, **ಕಃ** ಯಾರು?, **ಇತಿ** ಎಂದು, **ಜಗಾದ** ಹೇಳಿದರು.

**ತಾತ್ಪರ್ಯ** :- ಪರಶುರಾಮನು ನನ್ನ ಬಳಿ ಕೇವಲ ನಾನು, ವಿದ್ಯೆ ಮತ್ತು ಆಯುಧಗಳು ಇವೆ. ಆದ್ದರಿಂದ ಇವುಗಳ ಮಧ್ಯದಲ್ಲಿ ನೀನು ಯಾವುದನ್ನು ಬೇಕಾದರು ತೆಗೆದುಕೋ ಎಂದು ಹೇಳಲು ಬ್ರಾಹ್ಮಣರಾದ ದ್ರೋಣಾ ಚಾರ್ಯರು "ನಿನ್ನನ್ನು ದಾನವಾಗಿ ತೆಗೆದುಕೊಳ್ಳಲು ಯಾರು ಸಮರ್ಥ ರಾಗುತ್ತಾರೆ" ಎಂದು ಹೇಳಿದರು.

ಸರ್ವೇಶಿತಾ ಸರ್ವಪರಃ ಸ್ವತಂತ್ರ-
ಸ್ತ್ವಮೇವ ಕೋಽನ್ಯಃ ಸದೃಶಸ್ತವೇಶ ।
ಸ್ವಾಮ್ಯಂ ತವೇಚ್ಛನ್ ಪ್ರತಿಯಾತ್ಯಧೋ ಹಿ
ಯಸ್ಮಾನ್ನಚೋತ್ಥಾತುಮಲಂ ಕದಾಚಿತ್ ॥ ೧೮ ॥

**ಅರ್ಥ** :- **ಈಶ** ಎಲೋ ಸ್ವಾಮಿಯೇ, **ತ್ವಂ ಏವ** ನೀನೇ, **ಸರ್ವೇಶಿತಾ** ಎಲ್ಲರಿಗೂ ಒಡೆಯ, **ಸರ್ವಪರಃ** ಎಲ್ಲರಿಗಿಂತಲು ಉತ್ತಮ, **ಸ್ವತಂತ್ರಃ** ಸ್ವತಂತ್ರ, **ತವ** ನಿನಗೆ, **ಸದೃಶಃ** ಸಮಾನನು, **ಅನ್ಯಃ ಕಃ** ಬೇರಾರು ಇರುವರು?, **ತವ** ನಿನ್ನ **ಸಾಮ್ಯಂ** ಸಮಾನತೆಯನ್ನು **ಇಚ್ಛನ್** ಅಪೇಕ್ಷಿಸುವವನು, **ಯಸ್ಮಾತ್** ಯಾವ ಕಾರಣದಿಂದ, **ಕದಾಚಿತ್** ಎಂದಿಗೂ **ಉತ್ಥಾತುಂ** ಮೇಲೆ ಬರಲು, **ನ ಅಲಂ** ಸಮರ್ಥನಾಗುವುದಿಲ್ಲವೋ, (**ತತ್** ಅಂತಹ), **ಅಧಃ** ಅಧೋಗತಿಗೆ (ತಮಸ್ಸಿಗೆ), **ಪ್ರತಿಯಾತಿ** ಹೋಗುತ್ತಾನೆ.

**ತಾತ್ಪರ್ಯ** :- ಪರಶುರಾಮನನ್ನು ದಾನವಾಗಿ ಸ್ವೀಕರಿಸುವುದೆಂದರೆ, ಅವನ ಮೇಲೆ ಸ್ವಾಮಿತ್ವವನ್ನು ಸಂಪಾದಿಸುವುದೆಂದು ಅರ್ಥ ಆದರೆ ಭಗವಂತನಿಗೆ ಸಮನೇ ಇಲ್ಲದಿರುವಾಗ ಅವನಿಗಿಂತಲು ಉತ್ತಮನು ಯಾರು? ಒಂದು ವೇಳೆ ಹೀಗೆ ತಿಳಿದರೆ ಅವನಿಗೆ ಖಂಡಿತವಾಗಿಯೂ ಎಂದಿಗೂ ಮರಳಿ ಬರಲು ಸಾಧ್ಯವಿಲ್ಲದ ಅಧೋಗತಿಗೆ ಹೋಗಬೇಕಾಗುತ್ತದೆ.

ಸರ್ವೋತ್ತಮಸ್ಯೇಶ ತವೋಚ್ಚಶಸ್ತ್ರೈಃ
ಕಾರ್ಯಂ ಕಿಮಸ್ಮಾಕಮನುದ್ಬಲಾನಾಮ್ ।
ವಿದ್ಯೈವ ದೇಯಾ ಭವತಾ ತತೋಽಜ
ಸರ್ವಪ್ರಕಾಶಿನ್ಯಚಲಾ ಸುಸೂಕ್ಷ್ಮಾ ॥ ೧೯ ॥

**ಅರ್ಥ** :- **ಈಶ** ಎಲೋ ಸ್ವಾಮಿಯೇ!, **ಸರ್ವೋತ್ತಮಸ್ಯಾ** ಸರ್ವೋತ್ತಮನಾದ, **ತವ** ನಿನ್ನ **ಉಚ್ಚಶಸ್ತ್ರೈ** ಮಹತ್ತರವಾದ ಶಸ್ತ್ರಗಳಿಂದ, **ಉದ್ಬಲಾನಾಮ್** ದುರ್ಬಲರಾದ, **ಅಸ್ಮಾಕಂ** ನಮಗೆ, **ಕಿಂ** ಏನು ಪ್ರಯೋಜನವು?, **ತತಃ** ಆದ್ದರಿಂದ, **ಅಜ** ಹುಟ್ಟಿಲ್ಲದವನೇ (ಅಜನೆ), **ಸರ್ವಪ್ರಕಾಶಿನೀ** ಎಲ್ಲವನ್ನು ಪ್ರಕಾಶಿಸುವ, **ಸುಸೂಕ್ಷ್ಮಾ** ಬಹಳ ಸೂಕ್ಷ್ಮವಾದ, **ಅಚಲಾ** ಸ್ಥಿರವಾದ **ವಿದ್ಯಾ**ಏವ ತತ್ವಜ್ಞಾನವೇ, **ಭವತಾ** ನಿನ್ನಿಂದ, **ದೇಯಾ** ಕೊಡಲ್ಪಡಲಿ.

**ತಾತ್ಪರ್ಯ** :- ನಿನ್ನ ಶಸ್ತ್ರಗಳಿಂದಲು ದುರ್ಬಲರಾದ ನಮ್ಮಂತವರಿಗೆ ಯಾವ ಪ್ರಯೋಜನವು ಇಲ್ಲ ಆದ್ದರಿಂದ ಸ್ಥಿರವಾದ ಅತ್ಯಂತ ಸೂಕ್ಷ್ಮವಾದ,

ಮತ್ತು ಎಲ್ಲದರ ಜ್ಞಾನವನ್ನು ಮಾಡಿಕೊಡುವ ನಿನ್ನ ತತ್ವಜ್ಞಾನ ಒಂದನ್ನೇ ಕೂಡು ಎಂದು ದ್ರೋಣರು ಪರಶುರಾಮನನ್ನು ಪ್ರಾರ್ಥಿಸಿದರು.

**ಇತೀರಿತಸ್ತತ್ತ್ವವಿದ್ಯಾದಿಕಾಃ ಸ**
**ವಿದ್ಯಾಃ ಸರ್ವಾಃ ಪ್ರದದೌ ಸಾಸ್ತ್ರಶಸ್ತ್ರಾಃ ।**
**ಅಬ್ದದ್ವಿಷಟ್ಕೇನ ಸಮಾಪ್ಯ ತಾಃ ಸ**
**ಯಯೌ ಸಖಾಯಂ ದ್ರುಪದಂ ಮಹಾತ್ಮಾ ॥ ೨೦ ॥**

**ಅರ್ಥ** :- **ಇತೀರಿತಃ** ಈ ರೀತಿಯಾಗಿ ದ್ರೋಣರಿಂದ ಹೇಳಿಸಿಕೊಳ್ಳಲ್ಪಟ್ಟ **ಸಃ** ಪರಶುರಾಮರು, **ಸಾಸ್ತ್ರಶಸ್ತ್ರಾಃ** ಶಸ್ತ್ರಾಸ್ತ್ರ ವಿದ್ಯೆಗಳಿಂದ ಕೂಡಿದ, **ಸರ್ವಾಃ** ಎಲ್ಲ, **ತತ್ತ್ವವಿದ್ಯಾದಿಕಾಃ** ತತ್ವವಿದ್ಯೆಯೇ ಮೊದಲಾದ, **ವಿದ್ಯಾಃ** ವಿದ್ಯೆಗಳನ್ನು **ಪ್ರದದೌ** ಕೊಟ್ಟರು (ಉಪದೇಶಿಸಿದರು), **ತಾಃ** ಆ ಎಲ್ಲ ವಿದ್ಯೆಯನ್ನು **ಅಬ್ದದ್ವಿಷಟ್ಕೇನ** ಹನ್ನೆರಡು ವರ್ಷಗಳಲ್ಲಿ, **ಸಮಾಪ್ಯ** ಮುಗಿಸಿ , **ಸಃ** ಆ ದ್ರೋಣರು, **ಮಹಾತ್ಮಾ** ಪೂಜ್ಯನಾದ, **ಸಖಾಯಂ** ಗೆಳೆಯನಾದ, **ದ್ರುಪದಂ** ದ್ರುಪದನನ್ನು ಕುರಿತು, **ಯಯೌ** ಹೋದರು.

**ತಾತ್ಪರ್ಯ** :- ಹಸುವನ್ನು ತರಲು ಬಂದ ದ್ರೋಣರು ಪರಶುರಾಮನ ಬಳಿ ಹನ್ನೆರಡು ವರ್ಷಗಳ ಕಾಲ ಶಸ್ತ್ರಾಸ್ತ್ರದಿಂದ ಕೂಡಿದ ಸಕಲವಿದ್ಯೆಗಳನ್ನು ಪಡೆದು ಅನಂತರ ಅಲ್ಲಿಂದ ತನ್ನ ಗೆಳೆಯನಾದ ದ್ರುಪದನ ಬಳಿ ಹೋದರು.

**ದಾನೇಽರ್ಧರಾಜ್ಯಸ್ಯ ಹಿ ತತ್ ಪ್ರತಿಜ್ಞಾಂ**
**ಸಂಸ್ಮೃತ್ಯ ಪೂರ್ವಾಮುಪಯಾತಂ ಸಖಾಯಮ್ ।**
**ಸಖಾ ತವಾಸ್ಮೀತಿ ತದೋದಿತೋಽಪಿ**
**ಜಗಾದ ವಾಕ್ಯಂ ದ್ರುಪದೋಽತಿದರ್ಪಾತ್ ॥ ೨೧ ॥**

**ಅರ್ಥ** :- **ಅರ್ಧರಾಜ್ಯಸ್ಯ** ಅರ್ಧರಾಜ್ಯದ, **ದಾನೇ** ದಾನವನ್ನಾಗಿ ಕೊಡುವೆನು ಎಂಬ, **ಪೂರ್ವಾ** ಮೊದಲಿಗೆ ಮಾಡಿದ, **ತತ್ಪ್ರತಿಜ್ಞಾಂ** ದ್ರುಪದನ ಪ್ರತಿಜ್ಞೆಯನ್ನು, **ಸಂಸ್ಮೃತ್ಯ** ಸ್ಮರಿಸಿಕೊಂಡು, **ಸಖಾಯಾಂ** ಗೆಳೆಯನಾದ ದ್ರುಪದ ಬಳಿಗೆ, **ಉಪಯಾತಂ** ಬಂದಿರುವ, **ತವ** ನಿನ್ನ **ಸಖಾ** ಗೆಳೆಯನು, **ಅಸ್ಮಿ** ಆಗಿದ್ದೇನೆ, **ಇತಿ** ಎಂದು, **ತದೋದಿತಃ ಅಪಿ** ದ್ರೋಣರಿಂದ ಹೇಳಿಸಿಕೊಳ್ಳಲ್ಪಟ್ಟವನಾದರು ಕೂಡ, **ದ್ರುಪದಃ** ದ್ರುಪದನು, **ಅತಿ ದರ್ಪಾತ್** ಬಹಳ ಅಹಂಕಾರದಿಂದ, **ವಾಕ್ಯಂ** ಮಾತನ್ನು **ಜಗಾದ** ಹೇಳಿದನು, **ಹಿ** ನಿಶ್ಚಯ.

ತಾತ್ಪರ್ಯ :- ಹಿಂದೆ ಅರ್ಧ ರಾಜ್ಯವನ್ನು ಕೊಡುತ್ತೇನೆ ಎಂದು ದ್ರುಪದನು ಮಾಡಿದ ಪ್ರತಿಜ್ಞೆಯನ್ನು ನೆನಪಿಸಿಕೊಂಡು ತನ್ನ ಬಳಿ ಬಂದ ದ್ರೋಣರಿಗೆ ಬಹಳ ಗರ್ವಿಷ್ಠನಾದ ದ್ರುಪದನು ಹೀಗೆ ನುಡಿದನು.

**ನ ನಿರ್ಧನೋ ರಾಜಸಖೋ ಭವೇತ**
**ಯಥೇಷ್ಟತೋ ಗಚ್ಛ ವಿಪ್ರೇತಿ ದೈವಾತ್ ।**
**ಇತೀರಿತಸ್ಯಾಽಶು ಬಭೂವ ಕೋಪೋ**
**ಜಿತೇಂದ್ರಿಯಸ್ಯಾಪಿ ಮುನೇರ್ಹರೀಚ್ಛಯಾ ॥ ೨೨ ॥**

**ಅರ್ಥ** :- **ನಿರ್ಧನಃ** ದರಿದ್ರನು, **ರಾಜಸಖಃ** ರಾಜನಿಗೆ ಗೆಳೆಯನು, **ನ ಭವೇತ** ಎಂದಿಗೂ ಆಗುವುದಿಲ್ಲ, **ಹೇ ವಿಪ್ರ** ಎಲೋ ಬ್ರಾಹ್ಮಣನೇ (ದ್ರೋಣರೇ), **ಯಥೇಷ್ಟತಃ** ಇಷ್ಟ ಬಂದಲ್ಲಿ, **ಗಚ್ಛ** ಹೋಗು, **ಇತಿ** ಎಂದು, **ದೈವಾತ್** ದೈವಪ್ರೇರಣೆಯಿಂದ, **ಇತೀರಿತೇ** ಈ ರೀತಿಯಾಗಿ ಹೇಳಲು, **ಜಿತೇಂದ್ರಿಯಸ್ಯಾಪಿ** ಜಿತೇಂದ್ರಿಯನಾದರು, **ಮುನೇಃ** ಮುನಿಯಾದ, **ಅಸ್ಯ** ದ್ರೋಣರಿಗೆ, **ಹರೀಚ್ಛಯಾ** ಭಗವಂತನ ಇಚ್ಛೆಯಿಂದ, **ಅಶು** ಬೇಗನೆ, **ಕೋಪಃ** ಕೋಪವು, **ಬಭೂವ** ಬಂದಿತು.

ತಾತ್ಪರ್ಯ :- ದರಿದ್ರನಾದ ವ್ಯಕ್ತಿಯು ರಾಜನಿಗೆ ಗೆಳೆಯನಾಗಲು ಸಾಧ್ಯವೇ ಇಲ್ಲ ಎಂಬ ದ್ರುಪದನ ಮಾತನ್ನು ಕೇಳಿದ ಕೂಡಲೇ ಜಿತೇಂದ್ರಿಯನಾದ ಮುನಿಯಾದ ದ್ರೋಣರಿಗೆ ಹರಿಯ ಸಂಕಲ್ಪದಿಂದ ಕೋಪವು ಬಂದಿತು.

**ಪ್ರತಿಗ್ರಹಾತ್ ಸನ್ನಿವೃತ್ತೇನ ಸೋಽಯಂ**
**ಮಯಾ ಪ್ರಾಪ್ತೋ ಮತ್ಪಿತುಃ ಶಿಷ್ಯಕತ್ವಾತ್ ।**
**ಪಿತುಃ ಶಿಷ್ಯೋ ಹ್ಯಾತ್ಮಶಿಷ್ಯೋ ಭವೇತ**
**ಶಿಷ್ಯಸ್ಯಾರ್ಥಃ ಸ್ವೀಯ ಏವೇತಿ ಮತ್ವಾ ॥ ೨೩ ॥**

**ಅರ್ಥ** :- **ಪಿತುಃ** ತಂದೆಯ (ಭಾರದ್ವಾಜರ) **ಶಿಷ್ಯಃ** ಶಿಷ್ಯನು, **ಆತ್ಮಶಿಷ್ಯಃ** ತನ್ನ ಶಿಷ್ಯನು, **ಭವೇತ** ಆಗುವನು, **ಶಿಷ್ಯಸ್ಯಾರ್ಥಃ** ಶಿಷ್ಯನ ಸಂಪತ್ತು, **ಸ್ವೀಯಃ ಏವ** ನನ್ನದೇ ಆಗಿದೆ, **ಇತಿ** ಎಂದು, **ಮತ್ವಾ** ತಿಳಿದು, **ಮತ್ಪಿತುಃ** ನನ್ನ ತಂದೆಯ, **ಶಿಷ್ಯಕತ್ವಾತ್** ಶಿಷ್ಯನಾದುದರಿಂದ, **ಪ್ರತಿಗ್ರಹಾತ್** ಪ್ರತಿಗ್ರಹದಿಂದ (ದಾನ ತೆಗೆದುಕೊಳ್ಳುವುದರಿಂದ), **ಸನ್ನಿವೃತ್ತೇನ** ನಿವೃತ್ತನಾದ, **ಮಯಾ** ನನ್ನಿಂದ, **ಸೋಽಯಂ** ಆ ದ್ರುಪದನು, **ಪ್ರಾಪ್ತಃ** ಹೊಂದಲ್ಪಟ್ಟಿದ್ದಾನೆ.

**ತಾತ್ಪರ್ಯ** :- ತಂದೆಯ ಶಿಷ್ಯನು ನನ್ನ ಶಿಷ್ಯನೆ ಅವನ ಸಂಪತ್ತು ಇದು ನನ್ನ ಸಂಪತ್ತು ಎಂದು ಭಾವಿಸಿ ಪ್ರತಿಗ್ರಹವನ್ನು ಮಾಡದ ದ್ರೋಣರು ತಂದೆಯ ಶಿಷ್ಯನೆಂದು ದ್ರುಪದನ ಬಳಿ ಬಂದಿದ್ದರು.

**ಸೋಽಯಂ ಪಾಪೋ ಮಾಮವಜ್ಞಾಯ ಮೂಢೋ**
**ದುಷ್ಟಂ ವಚೋಽಶ್ರಾವಯದಸ್ಯ ದರ್ಪಮ್ ।**
**ಹನಿಷ್ಯ ಇತ್ಯೇವ ಮತಿಂ ನಿಧಾಯ**
**ಯಯೌ ಕುರೂನ್ ಶಿಷ್ಯತಾಂ ನೇತುಮೇತಾನ್ ॥ ೨೪ ॥**

**ಅರ್ಥ** :- **ಮೂಢಃ** ಮೂರ್ಖನಾದ, **ಪಾಪಃ** ಪಾಪಿಯಾದ, **ಸೋಽಯಂ** ಅಂತಹ ದ್ರುಪದನು, **ಮಾಂ** ನನ್ನನ್ನು **ಅವಜ್ಞಾಯ** ಅವಮಾನ ಗೊಳಿಸಿ, **ದುಷ್ಟಂ** ಕೆಟ್ಟ **ವಚಃ** ಮಾತುಗಳನ್ನು **ಅಶ್ರಾವಯತ್** ಆಡಿದ್ದಾನೆ, **ಅಸ್ಯಾ** ಇವನ, **ದರ್ಪಮ್** ಸೊಕ್ಕನ್ನು **ಹನಿಷ್ಯೆ** – ನಾಶಮಾಡುತ್ತೇನೆ, **ಇತಿ** ಏವ ಹೀಗೆಯೇ, **ಮತಿಂ ನಿಧಾಯ** ನಿಶ್ಚಯಿಸಿ, **ಏತಾನ್** ಈ ಯಾವ, **ಕುರೂನ್** ಕೌರವರನ್ನು **ಶಿಷ್ಯತಾಂ** ಶಿಷ್ಯರನ್ನಾಗಿ, **ನೇತುಂ** ಮಾಡಿಕೊಳ್ಳಲು, **ಯಯೌ** ಹೊರಟರು.

**ತಾತ್ಪರ್ಯ** :- ಪಾಪಿ ಮೂರ್ಖನಾದ ಆ ದ್ರುಪದನು ನನ್ನನ್ನು ಅಪಮಾನ ಮಾಡಿ ಬೈದು ಕಳುಹಿಸಿದನು. ಇವನ ದರ್ಪವನ್ನು ಮುರಿಯುತ್ತೇನೆಂದು ಕೋಪದಿಂದ ಪ್ರತಿಜ್ಞೆಯನ್ನು ಮಾಡಿ ಶಿಷ್ಯರನ್ನು ಹುಡುಕುತ್ತಾ ಕೌರವರ ಬಳಿ ಹೋದರು.

**ಪ್ರತಿಗ್ರಹಾದ್ ವಿನಿವೃತ್ತಸ್ಯ ಚಾರ್ಥಃ**
**ಸ್ಯಾಚ್ಛಿಷ್ಯೇಭ್ಯಃ ಕೌರವೇಭ್ಯೋ ಮಮಾತ್ರ ।**
**ಏವಂ ಮನ್ವಾನಃ ಕ್ರೀಡತಃ ಪಾಂಡವೇಯಾನ್**
**ಸಧಾರ್ತರಾಷ್ಟ್ರಾನ್ ಪುರಬಾಹ್ಯತೋಽಖ್ಯತ್ ॥ ೨೫ ॥**

**ಅರ್ಥ** :- **ಪ್ರತಿಗ್ರಹಾತ್** ಪ್ರತಿಗ್ರಹದಿಂದ, **ವಿನಿವೃತ್ತಸ್ಯ** ನಿವೃತ್ತನಾದ, **ಮಮ** ನನಗೆ, **ಅತ್ರ** ಈ ವಿಷಯದಲ್ಲಿ **ಶಿಷ್ಯೇಭ್ಯಃ** ಶಿಷ್ಯರಾದ, **ಕೌರವೇಭ್ಯಃ** ಕೌರವರಿಂದ, **ಅರ್ಥಃ** ಕಾರ್ಯಸಿದ್ಧಿಯು, **ಸ್ಯಾತ್** ಆಗಬಹುದು, **ಏವಂ** ಎಂದು, **ಮನ್ವಾನಃ** ತಿಳಿದ ದ್ರೋಣರು, **ಪುರಬಾಹ್ಯತಃ** ಪಟ್ಟಣದ ಹೊರಭಾಗದಲ್ಲಿ **ಸಧಾರ್ತರಾಷ್ಟ್ರಾನ್** ಧೃತರಾಷ್ಟ್ರಪುತ್ರರೊಂದಿಗೆ, **ಕ್ರೀಡತಃ** ಆಟವಾಡುತ್ತಿರುವ, **ಪಾಂಡವೇಯಾನ್** ಪಾಂಡವರನ್ನು **ಅಖ್ಯತ್** ನೋಡಿದರು.

ತಾತ್ಪರ್ಯ :- ಸಂಪೂರ್ಣವಾಗಿ ಪ್ರತಿಗ್ರಹವನ್ನು ತೊರೆದ ದ್ರೋಣರು ಕೌರವರಿಂದ ನನ್ನ ಕಾರ್ಯವನ್ನು ಮಾಡಿಕೊಳ್ಳಬಹುದು ಎಂದು ತಿಳಿದು ನಗರದ ಹೊರವಲಯದಲ್ಲಿ ಕೌರವರ ಜೊತೆಗೆ ಆಟವಾಡುತ್ತಿರುವ ಪಾಂಡವರನ್ನು ನೋಡಿದರು.

**ವಿಕ್ರೀಡತೋ ಧರ್ಮಸೂನೋಸ್ತದೈವ**
**ಸಹಾಂಗುಲೀಯೇನ ಚ ಕಂದುಕೋಽಪತತ್ ।**
**ಕೂಪೇ ನ ಶೇಕುಃ ಸಹಿತಾಃ ಕುಮಾರಾ**
**ಉದ್ಧರ್ತುಮೇನಂ ಪವನಾತ್ಮಜೋಽವದತ್ ॥ ೨೬ ॥**

**ಅರ್ಥ** :- **ತದಾ ಏವ** ಆ ಸಂದರ್ಭದಲ್ಲಿ, **ವಿಕ್ರೀಡತಃ** ಆಟವಾಡುತ್ತಿರುವ, **ಧರ್ಮಸೂನೋಃ** ಧರ್ಮರಾಜನ, **ಅಂಗುಲೀಯೇನ** ಉಂಗುರದಿಂದ, **ಸಹಾ** ಕೂಡಿದ, **ಕಂದುಕಃ** ಚಂಡು, **ಕೂಪೇ** ಬಾವಿಯಲ್ಲಿ, **ಅಪತತ್** ಬಿದ್ದಿತು, **ಸಹಿತಾಃ** ವಟ್ಟಿಗೆ ಕೂಡಿದ, **ಕುಮಾರಾಃ** ರಾಜಕುಮಾರರು, **ಏವಂ** ಈ ಚಂಡನ್ನು, **ಉದ್ಧರ್ತುಂ** ಮೇಲೆ ತೆಗೆಯಲು, **ನ ಶೇಕ್ಯಃ** ಸಮರ್ಥರಾಗಲಿಲ್ಲ, **ತದಾ** ಆಗ, **ಪವನಾತ್ಮಜಃ** ಭೀಮನು, **ಅವದತ್** ಹೇಳಿದನು.

ತಾತ್ಪರ್ಯ :- ಆಟವಾಡುತ್ತಿದ್ದ ಧರ್ಮರಾಜನ ಮುದ್ರೆ ಉಂಗುರದ ಜೊತೆ ಚಂಡು ಆಳವಾದ ಬಾವಿಯಲ್ಲಿ ಬಿದ್ದಿತು. ಅದನ್ನು ತೆಗೆಯಲು ಯಾರು ಸಮರ್ಥರಾಗದಿರಲು ಬಲಭೀಮನು ಹೀಗೆ ಹೇಳಿದನು.

**ನಿಷ್ಪತ್ಯ ಚೋದ್‌ಧೃತ್ಯ ಸಮುತ್ಪತಿಷ್ಯೇ**
**ಕೂಪಾದಮುಷ್ಮಾದ್ ಭೃಶನೀಚಾದಪಿ ಸ್ಮ ।**
**ಸಕಂದುಕಾಂ ಮುದ್ರಿಕಾಂ ಪಶ್ಯತಾದ್ಯ**
**ಸರ್ವೇ ಕುಮಾರಾ ಇತಿ ವೀರ್ಯಸಂಶ್ರಯಾತ್ ॥ ೨೭ ॥**

**ಅರ್ಥ** :- (ಭೀಮನು) **ನಿಷ್ಪತ್ಯ** ಹಾರಿ, **ಭೃಶನೀಚಾತ್ ಅಪಿ** ಬಹಳ ಆಳವಾದರು ಕೂಡ, **ಅಮುಷ್ಮಾತ್** ಈ ಯಾವ, **ಕೂಪಾತ್** ಬಾವಿಯಿಂದ, **ಸಕಂದುಕಾಂ** ಚಂಡಿನಿಂದ ಸಹಿತವಾಗಿ, **ಮುದ್ರಿಕಾಂ** ರಾಜ ಮುದ್ರಿಕೆಯನ್ನು **ಉದ್ಧೃತ್ಯ** ತೆಗೆದುಕೊಂಡು (ಮೇಲೆತ್ತಿ), **ಸಮುತ್ಪತಿಷ್ಯೆಸ್ಮ** ಮೇಲೆ ಬರುತ್ತೇನೆ (ನಿಶ್ಚಯ), **ಸರ್ವೇ** ಎಲ್ಲ **ಕುಮಾರಾಃ** ರಾಜಕುಮಾರರೆ, ಪಶ್ಯತ ನೋಡಿರಿ, **ಇತಿ** ಎಂದು, **ವೀರ್ಯಸಂಶ್ರಯಾತ್** ತನ್ನ ಸಾಮರ್ಥ್ಯವನ್ನು ಆಶ್ರಯಿಸಿ ಹೇಳಿದನು.

**ತಾತ್ಪರ್ಯ :-** ಈ ಆಳವಾದ ಬಾವಿಯಲ್ಲಿ ದುಮುಕಿ ಕೇವಲ ಚಂಡನ್ನಲ್ಲದೇ ರಾಜಮುದ್ರಿಕೆಯನ್ನು ತರುವ ಸಾಮರ್ಥ್ಯ ನನಗೆ ಇದೆ ಎಂದು ಭೀಮನು ರಾಜಕುಮಾರರಿಗೆ ಹೇಳಿದನು.

**ತದಾ ಕುಮಾರಾನವದತ್ ಸ ವಿಪ್ರೋ**
**ಧಿಗಸ್ತ್ರಬಾಹ್ಯಾಂ ಭವತಾಂ ಪ್ರವೃತ್ತಿಮ್ ।**
**ಜಾತಾಃ ಕುಲೇ ಭರತಾನಾಂ ನ ವಿತ್ಥ**
**ದಿವ್ಯಾನಿ ಚಾಸ್ತ್ರಾಣಿ ಸುರಾರ್ಚಿತಾನಿ ॥ ೨೮ ॥**

**ಅರ್ಥ :-** **ತದಾ** ಆಗ, **ಕುಮಾರಾನ್** ರಾಜಕುಮಾರನನ್ನು ಕುರಿತು, **ಸಃ** ಆ, **ವಿಪ್ರಃ** ಬ್ರಾಹ್ಮಣರಾದ ದ್ರೋಣಾಚಾರ್ಯರು, **ಅಸ್ತ್ರಬಾಹ್ಯಾಂ** ಅಸ್ತ್ರಬಾಹಿರರಾದ, **ಭವತಾಂ** ನಿಮ್ಮ **ಪ್ರವೃತ್ತಿಮ್** ವ್ಯಾಪಾರಕ್ಕೆ, **ಧಿಕ್** ಧಿಕ್ಕಾರವು, **ಚ** ಮತ್ತು, **ಭರತಾನಾಂ** ಭರತ ಚಕ್ರವರ್ತಿಗಳ, **ಕುಲೆ** ವಂಶದಲ್ಲಿ, **ಜಾತಾಃ** ಹುಟ್ಟಿದ ನೀವು, **ಸುರಾರ್ಚಿತಾನಿ** ದೇವತೆಗಳಿಂದ ಪೂಜಿಲ್ಪಡುವ, **ದಿವ್ಯಾನಿ** ಶ್ರೇಷ್ಠವಾದ, **ಅಸ್ತ್ರಾಣಿ** ಅಸ್ತ್ರಗಳನ್ನು **ನ ವಿತ್ಥ** ತಿಳಿದಿಲ್ಲ (ಅಷ್ಟೇ!), **ಇತಿ** ಎಂದು, **ಅವದತ್** ಹೇಳಿದರು.

**ತಾತ್ಪರ್ಯ :-** ಈ ಪ್ರಸಂಗವನ್ನು ನೋಡಿದ ಆಚಾರ್ಯ ದ್ರೋಣರು ಆ ರಾಜಕುಮಾರರಿಗೆ ಭರತನ ಕುಲದಲ್ಲಿ ಹುಟ್ಟಿ ಎಲ್ಲದರ ಸಿದ್ಧಿಯನ್ನು ತಂದುಕೊಡುವ ದಿವ್ಯಾಸ್ತ್ರಗಳ ಪರಿಚಯವೇ ಇಲ್ಲದ ಅಸ್ತ್ರಬಾಹ್ಯರಾದ ನಿಮ್ಮ ಜನ್ಮಕ್ಕೆ ಧಿಕ್ಕಾರವಿರಲಿ ಎಂದು ಹೇಳಿದರು.

**ಇತೀರಿತಾ ಅಸ್ತ್ರವಿದಂ ಕುಮಾರಾ**
**ವಿಜ್ಞಾಯ ವಿಪ್ರಂ ಸುರಪೂಜ್ಯಪೌತ್ರಮ್ ।**
**ಸಂಪ್ರಾರ್ಥಯಾಮಾಸುರಥೋದ್ಧೃತಿಂ ಪ್ರತಿ**
**ಪ್ರಧಾನಮುದ್ರಾಯುತಕಂದುಕಸ್ಯ ॥ ೨೯ ॥**

**ಅರ್ಥ :-** **ಅಥ** ಅನಂತರದಲ್ಲಿ, **ಇತಿ** ಈ ಪ್ರಕಾರವಾಗಿ, **ಈ ರಿತಾ** ಹೇಳಿಸಿಕೊಳಲ್ಪಟ್ಟ, **ಕುಮಾರಾಃ** ರಾಜಕುಮಾರರು, **ಸುರಪೂಜ್ಯ ಪೌತ್ರಮ್** ದೇವತೆಗಳ ಗುರುಗಳಾದ ಬೃಹಸ್ಪತಿಯ ಮೊಮ್ಮಗನಾದ, **ವಿಪ್ರಂ** ಆ ಬ್ರಾಹ್ಮಣನನ್ನು **ಅಸ್ತ್ರವಿದಂ** ಅಸ್ತ್ರಬಲ್ಲವನೆಂದು, **ವಿಜ್ಞಾಯ** ತಿಳಿದು, **ಪ್ರಧಾನ**

**ಮುದ್ರಾಯುತಕಂದುಕಸ್ಯ** ಪ್ರಧಾನವಾದ ರಾಜಮುದ್ರಿಕೆಯಿಂದ ಕೂಡಿದ ಚೆಂಡಿನ, **ಉದ್ಧೃತಿಂ** ಮೇಲೆತ್ತುವಿಕೆಯನ್ನು ಪ್ರತಿ ಕುರಿತು, **ಸಂಪ್ರಾರ್ಥಯಾಮಾಸುಃ** ಚೆನ್ನಾಗಿ ಪ್ರಾರ್ಥಿಸಿದರು.

**ತಾತ್ಪರ್ಯ** :- ಹೀಗೆ ನುಡಿದ ಆ (ಬೃಹಸ್ಪತಿಯ ಮೊಮ್ಮಗನಾದ) ಬ್ರಾಹ್ಮಣನನ್ನು ಅಸ್ತ್ರಜ್ಞಾನಿಯೆಂದು ತಿಳಿದು ಚಂಡಿನಿಂದ ಸಹಿತವಾದ ರಾಜ ಮುದ್ರಿಕೆಯನ್ನು ಬಾವಿಯಿಂದ ಮೇಲೆತ್ತಲು ರಾಜಕುಮಾರರು ವಿನಮ್ರರಾಗಿ ಪ್ರಾರ್ಥಿಸಿದರು.

**ಸ ಚಾऽಶ್ವಿಷೀಕಾಭಿರಥೋತ್ತರೋತ್ತರಂ**
**ಸಂಪ್ರಾಸ್ಯ ದಿವ್ಯಾಸ್ತ್ರಬಲೇನ ಕಂದುಕಮ್ ।**
**ಉದ್‌ಧೃತ್ಯ ಮುದ್ರೋದ್ಧರಣಾರ್ಥಿನಃ ಪುನ-**
**ರ್ಜಗಾದ ಭುಕ್ತಿರ್ಮಮ ಕಲ್ಪ್ಯತಾಮಿತಿ ॥ ೩೦ ॥**

**ಅರ್ಥ** :- **ಸ ಚ** ಆ ದ್ರೋಣರಾದರು, **ಅಥ** ಅನಂತರದಲ್ಲಿ, **ಆಶು** ಬೇಗನೆ, **ದಿವ್ಯಾಸ್ತ್ರಬಲೇನ** ದಿವ್ಯಾಸ್ತ್ರಬಲದಿಂದ, **ಉತ್ತರೋತ್ತರಂ** ಒಂದಾದ ಮೇಲೆ ಒಂದರಂತೆ, **ಇಷೀಕಾಭಿಃ** ಹುಲ್ಲುಕಡ್ಡಿಗಳನ್ನು, **ಸಂಪ್ರಾಸ್ಯ** ಎಸೆದು, **ಕಂದುಕಮ್** ಚೆಂಡನ್ನು **ಉದ್ಧೃತ್ಯ** ಮೇಲೆತ್ತಿ, **ಪುನಃ** ಮತ್ತೆ, **ಮುದ್ರೋದ್ಧರಣಾರ್ಥಿನಃ** ರಾಜ ಮುದ್ರಿಕೆಯನ್ನು ಮೇಲೆತ್ತುವಂತೆ ಪ್ರಾರ್ಥಿಸುತ್ತಿರುವ ರಾಜಕುಮಾರರಿಗೆ, **ಮಮ** ನನಗೆ, **ಭುಕ್ತಿಂ** ಅನ್ನವನ್ನು **ಕಲ್ಪ್ಯತಾಂ** ವ್ಯವಸ್ಥೆ ಮಾಡಿ, **ಇತಿ** ಎಂದು, **ಜಗಾದ** ಹೇಳಿದರು.

**ತಾತ್ಪರ್ಯ** :- ತನ್ನ ಸಾಮರ್ಥ್ಯದಲ್ಲಿ ವಿಶ್ವಾಸ ಬರಲೆಂದು ಅಸ್ತ್ರಬಲದಿಂದ ಹುಲ್ಲುಕಡ್ಡಿಗಳನ್ನು ಒಂದಾದ ಮೇಲೆ ಮತ್ತೊಂದರಂತೆ ಬಾವಿಯಲ್ಲಿ ಹಾಕಿ ಚಂಡನ್ನು ತೆಗೆದರು ಅನಂತರದಲ್ಲಿ ರಾಜಮುದ್ರಿಕೆಯನ್ನು ತೆಗೆಯಲು ಪ್ರಾರ್ಥಿಸುತ್ತಿರುವ ರಾಜಕುಮಾರರನ್ನು ಕುರಿತು ನನಗೆ ಅನ್ನವನ್ನು (ವೃತ್ತಿಯನ್ನು) ಕಲ್ಪಿಸಿರಿಯೆಂದು ದ್ರೋಣರು ಹೇಳಿದರು.

**ಯಥೇಷ್ಟವಿತ್ತಾಶನಪಾನಮಸ್ಯ**
**ಧರ್ಮಾತ್ಮಜಃ ಪ್ರತಿಜಜ್ಞೇ ಸುಶೀಘ್ರಮ್ ।**
**ತಥೈವ ತೇನೋದ್ಧೃತಮಂಗುಲೀಯಂ**
**ತ್ರಿವರ್ಗಮುಖ್ಯಾತ್ಮಜವಾಕ್ಯತೋऽನು ॥ ೩೧ ॥**

**ಅರ್ಥ** :- **ಧರ್ಮಾತ್ಮಜಃ** ಧರ್ಮರಾಜನು, **ಸುಶೀಘ್ರಮ್** ತಕ್ಷಣ ದಲ್ಲಿಯೇ, **ಅಸ್ಯ** ದ್ರೋಣಾಚಾರ್ಯರಿಗೆ, **ಯಥೇಷ್ಟವಿತ್ತಾಶನ ಪಾನಂ** ಯಥೇಷ್ಟವಾಗಿ ಧನ, ಅನ್ನಪಾನಾದಿಗಳ ವ್ಯವಸ್ಥೆಗೆ, **ಪ್ರತಿಜಜ್ಞೇ** ಪ್ರತಿಜ್ಞೆ ಮಾಡಿದನು, **ತ್ರಿವರ್ಗಮುಖ್ಯಾತ್ಮಜವಾಕ್ಯತಃ** ಯಮಧರ್ಮನ ಮಗನಾದ ಧರ್ಮರಾಜನ ಮಾತಿನ, **ಅನು** ಅನಂತರದಲ್ಲಿ, **ತೇನ** ದ್ರೋಣಾಚಾರ್ಯ ರಿಂದ, **ಅಂಗುಲೀಯಂ** ರಾಜಮುದ್ರಿಕೆಯು, **ಉದ್ಧೃತಂ** ಮೇಲೆತ್ತಲ್ಪಟ್ಟಿತು.

**ತಾತ್ಪರ್ಯ** :- ಧರ್ಮರಾಜನು ದ್ರೋಣರ ಅಪೇಕ್ಷೆಯಂತೆ ಅನ್ನಪಾನಾದಿಗಳನ್ನು ಕಲ್ಪಿಸುತ್ತೇನೆ ಎಂದು ಪ್ರತಿಜ್ಞೆ ಮಾಡಲು ಅವನ ಮಾತನ್ನು ಕೇಳಿ ದ್ರೋಣರು ರಾಜಮುದ್ರಿಕೆಯನ್ನು ಭಾವಿಯಿಂದ ಮೇಲೆತ್ತಿಕೊಟ್ಟರು.

**ಪಪ್ರಚ್ಛುರೇನಂ ಸಹಿತಾಃ ಕುಮಾರಾಃ**
**ಕೋಽಸೀತಿ ಸೋಽಪ್ಯಾಹ ಪಿತಾಮಹೋ ವಃ ।**
**ವಕ್ತೇತಿ ತೇ ದುದ್ರುವುರಾಶು ಭೀಷ್ಮಂ**
**ದ್ರೋಣೋಽಯಮಿತ್ಯೇವ ಸ ತಾಂಸ್ತದೋಚೇ ॥ ೩೨ ॥**

**ಅರ್ಥ** :- ಏನಂ (ಈ ಯಾವ ದ್ರೋಣರನ್ನು) ಅವನನ್ನು, **ಕುಮಾರಾಃ** ರಾಜಕುಮಾರರು, **ಸಹಿತಾಃ** ಒಟ್ಟಾಗಿ ಸೇರಿ **ಕೋಽಸೀತಿ** ಯಾರೆಂದು, **ಪಪ್ರಚ್ಛುಃ** ಪ್ರಶ್ನಿಸಿದರು, **ಸಃ ಅಪಿ** ಅವನಾದರು, **ವಃ** ನಿಮ್ಮ **ಪಿತಾಮಹಃ** ಅಜ್ಜನು (ತಾತನು), **ವಕ್ತಾ** ಹೇಳುತ್ತಾನೆ, **ಇತಿ** ಎಂದು, **ಆಹ** ಹೇಳಿದನು, **ತೇ** ಆ ರಾಜಕುಮಾರರು, **ಆಶು** ಬೇಗನೆ, **ಭೀಷ್ಮಂ** ಭೀಷ್ಮಾಚಾರ್ಯರನ್ನು ಕುರಿತು, **ದುದ್ರುವುಃ** ಓಡಿದರು, **ಸಃ** ಆ ಭೀಷ್ಮಾಚಾರ್ಯರು, **ಅಯಂ** ಇವರು, **ದ್ರೋಣ** ಏವ ದ್ರೋಣಾಚಾರ್ಯರು, **ಇತಿ** ಎಂದು, **ತಾನ್** ಅವರನ್ನು ಕುರಿತು, **ತದಾ** ಆಗ, **ಊಚೇ** ಹೇಳಿದರು.

**ತಾತ್ಪರ್ಯ** :- ರಾಜಕುಮಾರರೆಲ್ಲ ಒಟ್ಟಾಗಿ "ನೀವು ಯಾರು?" ಎಂದು ಕೇಳಲು ಅದಕ್ಕೆ ಅವರು ನಿಮ್ಮ ಅಜ್ಜನನ್ನು ಕೇಳಿ ಹೇಳುತ್ತಾರೆ ಎಂದರು. ಆಗ ಆ ಮಕ್ಕಳು ಭೀಷ್ಮಾಚಾರ್ಯರ ಬಳಿ ಹೋಗಿ ಕೇಳಲು ಭೀಷ್ಮರು "ಅವರು ದ್ರೋಣಾಚಾರ್ಯ" ಎಂದು ತಿಳಿಸಿದರು.

ನ ರಾಜಗೇಹಂ ಸ ಕದಾಚಿದೇತಿ
ತೇನಾದೃಷ್ಟಃ ಸ ಕುಮಾರೈಃ ಪುರಾಽತಃ ।

ಭೀಷ್ಮೋ ವಿದ್ಯಾಸ್ತೇನ ಸಹೈವ ಚಿಂತಯ-
ನ್ನಸ್ತ್ರಪ್ರಾಪ್ತಿಂ ತಸ್ಯ ಶುಶ್ರಾವ ರಾಮಾತ್ ॥ ೩೩ ॥

**ಅರ್ಥ** :- ಸಃ ಆ ದ್ರೋಣರು **ಕದಾಚಿತ್** ಒಮ್ಮೆಯು **ರಾಜಗೇಹಂ** ಅರಮನೆಯನ್ನು ಕುರಿತು **ನ ಏತಿ** ಹೋಗಿದ್ದವರಲ್ಲಿ **ತೇನ** ಆದ್ದರಿಂದ **ಕುಮಾರೈಃ** ರಾಜಕುಮಾರರಿಂದ **ಪುರಾ** ಹಿಂದೆ, **ಸಃ** ಅವರು **ಅದೃಷ್ಟಃ** ನೋಡಿರಲಿಲ್ಲ **ತೇನ ಸಹೈವ** ಅವರ ಜೊತೆಗೆ **ವಿದ್ಯಾಃ** ಶಾಸ್ತ್ರಗಳನ್ನು **ಚಿಂತಯನ್** ವಿಚಾರ ಮಾಡುತ್ತಿದ್ದ **ಭೀಷ್ಮಃ** ಭೀಷ್ಮಾಚಾರ್ಯರು **ತಸ್ಯ** ಅವರ **ರಾಮಾತ್** ಪರಶುರಾಮ ದೇವರಿಂದ **ಅಸ್ತ್ರಪ್ರಾಪ್ತಿಂ** ಅಸ್ತ್ರದ ಲಾಭವನ್ನು **ಶುಶ್ರಾವ** ಕೇಳಿದ್ದರು.

**ತಾತ್ಪರ್ಯ** :- ದ್ರೋಣರು ಎಂದಿಗೂ ಅರಮನೆಗೆ ಹೋದವರಲ್ಲಿ ಆದ್ದರಿಂದ ರಾಜಕುಮಾರರಿಗೆ ಅವರ ಪರಿಚಯವಿರಲಿಲ್ಲ ಆದರೆ ಭೀಷ್ಮರು ಕೆಲವು ಸಂದರ್ಭದಲ್ಲಿ ದ್ರೋಣರ ಜೊತೆಯಲ್ಲಿ ಶಾಸ್ತ್ರಚಿಂತನೆಯನ್ನು ನಡೆಸಿದ್ದರು ಮತ್ತು ಪರಶುರಾಮದೇವರಿಂದ ಅಸ್ತ್ರವಿದ್ಯೆಯ ಪ್ರಾಪ್ತಿಯಾಗಿದೆ ಯೆಂದು ಚಾರರ ಮೂಲಕ ತಿಳಿದಿದ್ದರು.

ಶ್ರುತ್ವಾ ವೃದ್ಧಂ ಕೃಷ್ಣವರ್ಣಂ ದ್ವಿಜಂ ತಂ
ಮಹಾಸ್ತ್ರವಿದ್ಯಾಮಪಿ ತಾಂ ಮಹಾಮತಿಃ ।
ದ್ರೋಣಂ ಜ್ಞಾತ್ವಾ ತಸ್ಯ ಶಿಷ್ಯತ್ವ ಏತಾನ್
ದದೌ ಕುಮಾರಾಂಸ್ತತ್ರ ಗತ್ವಾ ಸ್ವಯಂ ಚ ॥ ೩೪ ॥

**ಅರ್ಥ** :- **ತಂ ದ್ವಿಜಂ** ಆ ಬ್ರಾಹ್ಮಣರನ್ನು, **ವೃದ್ಧಂ** ವೃದ್ಧರು, **ಕೃಷ್ಣವರ್ಣಂ** ಕಪ್ಪು ಬಣ್ಣದವರು, **ಇತಿ** ಎಂದು, **ತಾಂ ಮಹಾಸ್ತ್ರವಿದ್ಯಾಂ ಅಪಿ** ಅವರ ಮಹಾಸ್ತ್ರ ವಿದ್ಯೆಯನ್ನೂ **ಶ್ರುತ್ವಾ** ಕೇಳಿ, **ಮಹಾಮತಿಃ** ಮಹಾಜ್ಞಾನಿಗಳಾದ ಭೀಷ್ಮರು, **ದ್ರೋಣಂ ಇತಿ** ದ್ರೋಣಾಚಾರ್ಯರೆಂದು, **ಜ್ಞಾತ್ವಾ** ತಿಳಿದು, **ತತ್ರ** ಅಲ್ಲಿಗೆ, **ಸ್ವಯಂ ಚ** ತಾವೇ, **ಗತ್ವಾ** ಹೋಗಿ, **ತಸ್ಯ** ಅವರ, **ಶಿಷ್ಯತ್ವೆ** ಶಿಷ್ಯರನ್ನಾಗಿ, **ಏತಾನ್** ಈ, **ಕುಮಾರಾನ್** ರಾಜಕುಮಾರರನ್ನು, **ದದೌ** ಒಪ್ಪಿಸಿದರು.

**ತಾತ್ಪರ್ಯ** :- ಆ ಬ್ರಾಹ್ಮಣ ಕಪ್ಪು ಬಣ್ಣದವ ಮತ್ತು ಮಹಾಸ್ತ್ರ ವಿದ್ಯೆಯನ್ನು ಬಲ್ಲವರು ಎಂದು ತಿಳಿದು ಇವರು ದ್ರೋಣರೆಂದು ನಿಶ್ಚಯಿಸಿ

ಸ್ವಯಂ ತಾವೇ ಅವರ ಬಳಿ ಹೋಗಿ ಈ ಎಲ್ಲ ರಾಜಕುಮಾರರನ್ನು ಅವರ ಶಿಷ್ಯರನ್ನಾಗಿ ಒಪ್ಪಿಸಿದರು.

**ದ್ರೋಣೋಽಥ ತಾನವದದ್ ಯೋ ಮದಿಷ್ಟಂ**
**ಕರ್ತುಂ ಪ್ರತಿಜ್ಞಾಂ ಪ್ರಥಮಂ ಕರೋತಿ ।**
**ತಂ ಧನ್ವಿನಾಂ ಪ್ರವರಂ ಸಾಧಯಿಷ್ಯ**
**ಇತ್ಯರ್ಜುನಸ್ತಾಮಕರೋತ್ ಪ್ರತಿಜ್ಞಾಮ್ ॥ ೩೫ ॥**

**ಅರ್ಥ** :- **ಅಥ** ಅನಂತರದಲ್ಲಿ, **ದ್ರೋಣಃ** ದ್ರೋಣಾಚಾರ್ಯರು, **ತಾನ್** ಆ ರಾಜಕುಮಾರರನ್ನು ಕುರಿತು, **ಮದಿಷ್ಟಂ** ನನಗೆ ಅಪೇಕ್ಷಿತವಾದ ಕಾರ್ಯವನ್ನು **ಕರ್ತುಂ** ಮಾಡಲು, **ಯಃ** ಯಾರು, **ಪ್ರಥಮಂ** ಮೊದಲಿಗೆ, **ಪ್ರತಿಜ್ಞಾಂ** ಪ್ರತಿಜ್ಞೆಯನ್ನು **ಕರೋತಿ** ಮಾಡುತ್ತಾನೆ, **ತಂ** ಅವನನ್ನು, **ಧನ್ವಿನಾಂ** ಧನುರ್ಧಾರಿಗಳ ಮಧ್ಯದಲ್ಲಿ **ಪ್ರವರಂ** ಶ್ರೇಷ್ಠನನ್ನಾಗಿ, **ಸಾಧಯಿಷ್ಯೆ** ಮಾಡುತ್ತೇನೆ, **ಇತಿ** ಎಂದು, **ಅವದತ್** ಹೇಳಿದರು, **ಅರ್ಜುನಃ** ಅರ್ಜುನನು, **ತಾಂ ಪ್ರತಿಜ್ಞಾಮ್** ಆ ಪ್ರತಿಜ್ಞೆಯನ್ನು **ಅಕರೋತ್** ಮಾಡಿದನು.

**ತಾತ್ಪರ್ಯ** :- ದ್ರೋಣಾಚಾರ್ಯರು ನನ್ನ ಕೆಲಸವನ್ನು ಯಾರು ಪೂರೈಸುವರೋ ಅವರನ್ನು ಧನುರ್ಧಾರಿಗಳ ಮಧ್ಯದಲ್ಲಿ ಸರ್ವಶ್ರೇಷ್ಠನನ್ನಾಗಿ ಮಾಡುತ್ತೇನೆ ಎಂದು ಹೇಳಲು ಆ ಎಲ್ಲ ರಾಜಕುಮಾರರ ಮಧ್ಯದಲ್ಲಿ ಅರ್ಜುನನನು ಪ್ರತಿಜ್ಞೆಯನ್ನು ಮಾಡಿದನು.

**ಉನ್ಮಾದನಾದೀನಿ ಸ ವೇದ ಕೃಷ್ಣಾ-**
**ದಸ್ತ್ರಾಣ್ಯನಾಪತ್ಸು ನ ತಾನಿ ಮುಂಚೇತ್ ।**
**ಇತ್ಯಾಜ್ಞಯಾ ಕೇಶವಸ್ಯಾಪರಾಣಿ**
**ಪ್ರಯೋಗಯೋಗ್ಯಾನಿ ಸದೇಚ್ಛತಿ ಸ್ಮ ॥ ೩೬ ॥**

**ಅರ್ಥ** :- **ಸಃ** ಅರ್ಜುನನು **ಕೃಷ್ಣಾತ್** ಕೃಷ್ಣನಿಂದ, **ಉನ್ಮಾದನಾದೀನಿ** ಉನ್ಮಾದ ಮೊದಲಾದ **ಅಸ್ತ್ರಾಣಿ** ಅಸ್ತ್ರಗಳನ್ನು **ವೇದ** ತಿಳಿದಿದ್ದನು **ಅನಾಪತ್ಸು** ಅಪತ್ತುಗಳ ಹೊರತು ಬೇರೆ ಕಾಲದಲ್ಲಿ **ತಾನಿ** ಆ ಅಸ್ತ್ರಗಳನ್ನು **ನ ಮುಂಚೇತ್** ಪ್ರಯೋಗಿಸುವ ಹಾಗೆ ಇಲ್ಲ **ಇತಿ** ಎಂಬ **ಕೇಶವಸ್ಯ** ಶ್ರೀಕೃಷ್ಣನ **ಆಜ್ಞಯಾ** ಆಜ್ಞೆಯಿಂದ **ಪ್ರಯೋಗಯೋಗ್ಯಾನಿ** ಪ್ರಯೋಗಿಸಲು ಯೋಗ್ಯವಾದ **ಅಪರಾಣಿ** ಬೇರೆ ಅಸ್ತ್ರಗಳನ್ನು **ಸದಾ** ಯಾವಾಗಲು **ಇಚ್ಛತಿಸ್ಮ** ಅಪೇಕ್ಷಿಸುತಿದ್ದನು.

**ತಾತ್ಪರ್ಯ** :- ಅರ್ಜುನನು ಕೃಷ್ಣನಿಂದ ಮೊದಲು ಉನ್ಮಾದನಾದಿ ಅಸ್ತ್ರಗಳನ್ನು ಕಲಿತಿದ್ದನು. ಆದರೆ "ಅಪತ್ತಿನಕಾಲ"ದಲ್ಲಿ ಮಾತ್ರ ಪ್ರಯೋಗಿಸ ಬೇಕು ಎಂಬ ಆಜ್ಞೆಯಿಂದ ಬೇರೆ ಅಸ್ತ್ರಗಳನ್ನು ಕಲಿಯಬೇಕೆಂದು ಯಾವಾಗಲು ಅಪೇಕ್ಷಿಸುತ್ತಿದ್ದನು.

**ಭೀಷ್ಮಾದಿಭಿರ್ಭವಿತಾ ಸಂಗರೋ ನ-**
**ಸ್ತದಾ ನಾಹಂ ಗುರುಭಿರ್ನಿತ್ಯಯೋದ್ಧಾ ।**
**ಭವೇಯಮೇಕಃ ಫಲ್ಗುನೋಽಸ್ತ್ರಜ್ಞ ಏಷಾಂ**
**ನಿವಾರಕಶ್ಚೇನ್ಮಮ ಧರ್ಮಲಾಭಃ ॥ ೩೭ ॥**

**ಅರ್ಥ** :- **ನಃ** ನಮಗೆ **ಭೀಷ್ಮಾದಿಭಿಃ** ಭೀಷ್ಮ ದ್ರೋಣಾದಿಗಳಿಂದ **ಸಂಗರಃ** ಯುದ್ಧವು **ಭವಿತಾ** ಉಂಟಾಗುತ್ತದೆ, **ತದಾ** ಆಗ, **ಅಹಂ** ನಾನು, **ಗುರುಭಿಃ** ಗುರುಗಳ ಜೊತೆಗೆ **ನಿತ್ಯಯೋದ್ಧಾ** ಸದಾಕಾದಾಡುವವನು **ನ ಭವೇಯಂ** ಆಗುವುದಿಲ್ಲ **ನ** ಅಲ್ಲ **ಏಕಃ ಫಲ್ಗುನಃ** ಅರ್ಜುನನೊಬ್ಬನೆ **ಅಸ್ತ್ರಜ್ಞಃ** ಅಸ್ತ್ರವನ್ನು ತಿಳಿದವನಾಗಿ **ಏಷಾಂ** ಈ ಭೀಷ್ಮಾದಿಗಳನ್ನು **ನಿವಾರಕಃ ಚೇತ್** ಸೋಲಿಸುವ ನಾದರೆ **ಮಮ** ನನಗೆ, **ಧರ್ಮಲಾಭಃ** ಪುಣ್ಯಲಾಭವು (**ಭವತಿ** ಆಗುತ್ತದೆ).

**ತಾತ್ಪರ್ಯ** :- ನಮಗೆ ಭೀಷ್ಮಾದಿಗಳ ಜೊತೆಯಲ್ಲಿ ಮುಂದೆ ಯುದ್ಧವಾಗುವುದು ನಿಶ್ಚಿತ. ಆ ಸಂದರ್ಭದಲ್ಲಿ ಅವರ ಜೊತೆಯಲ್ಲಿ ಯಾವಾ ಗಲು ಕಾದಾಡುವುದು ತರವಲ್ಲ, ಅರ್ಜುನನು ಧನುರ್ಧಾರಿಯಾಗಿ ಯುದ್ಧ ವನ್ನು ಮಾಡಿ ಭೀಷ್ಮಾದಿಗಳನು ಸೋಲಿಸಿದರೆ ಅದರಿಂದ ನನಗೆ ಹೆಚ್ಚಿನ ಪುಣ್ಯಲಾಭ ವಾಗುವುದೆಂದು ಭೀಮನು ಪ್ರತಿಜ್ಞೆಯನ್ನು ಮಾಡಲು ಹೋಗಲಿಲ್ಲ.

**ನ ಬುದ್ಧಿಪೂರ್ವಂ ವರ ಇಂದಿರಾಪತೇ-**
**ರನ್ಯತ್ರ ಮೇ ಗ್ರಾಹ್ಯ ಇತಶ್ಚ ಜಿಷ್ಣುಃ ।**
**ಕರೋತು ಗುರ್ವರ್ಥಮಿತಿ ಸ್ಮ ಚಿಂತಯನ್**
**ಭೀಮಃ ಪ್ರತಿಜ್ಞಾಂ ನ ಚಕಾರ ತತ್ರ ॥ ೩೮ ॥**

**ಅರ್ಥ** :- **ಲಕ್ಷ್ಮೀಪತೇಃ ಅನ್ಯತ್ರ** ಲಕ್ಷ್ಮೀಪತಿಯಾದ ಶ್ರೀಹರಿಯ ಹೊರತು ಇತರರಿಂದ, **ವರಃ** ವರವು, **ಬುದ್ಧಿಪೂರ್ವಂ** ಬುದ್ಧಿ ಪೂರ್ವಕವಾಗಿ, **ಗ್ರಾಹಃ** ಸ್ವೀಕರಿಸಲು, **ಮೇ** ನನಗೆ, **ನ** ಯೋಗ್ಯವಲ್ಲ **ಇತಿ** ಎಂದು, **ಜಿಷ್ಣುಃ**

ಅರ್ಜುನನು, **ಗುರ್ವರ್ಥಂ** ಗುರುಗಳ ಸಲುವಾಗಿ, **ಕರೋತು** ಪ್ರತಿಜ್ಞೆಯನ್ನು ಮಾಡಲಿ, **ಇತಿ** ಎಂದು, **ಚಿಂತಯನ್** ವಿಚಾರಮಾಡಿ, **ಭೀಮಃ** ಭೀಮನು, **ತತ್ರ** ಆ ವಿಷಯದಲ್ಲಿ **ಪ್ರತಿಜ್ಞಾಂ** ಪ್ರತಿಜ್ಞೆಯನ್ನು **ನ ಚಕಾರ ಸ್ಮ** ಮಾಡಲಿಲ್ಲ.

**ತಾತ್ಪರ್ಯ** :- ಭಗವಂತನನನ್ನು ಹೊರತುಪಡಿಸಿ ಬೇರೆ ಯಾರಿಂದಲು ವರಾದಿಗಳನ್ನು ಸ್ವೀಕರಿಸುವುದು ನನಗೆ ತರವಲ್ಲ. ಆದ್ದರಿಂದ ಅರ್ಜುನನೇ ಪ್ರತಿಜ್ಞೆಯನ್ನು ಮಾಡಲಿ ಎಂದು ಭೀಮನು ಸ್ವಯಂ ಪ್ರತಿಜ್ಞೆಯನ್ನು ಮಾಡಲಿಲ್ಲ.

**ತತ್ಪ್ರೇರಿತೇನಾರ್ಜುನೇನ ಪ್ರತಿಜ್ಞಾ**
**ಕೃತಾ ಯದಾ ವಿಪ್ರವರಸ್ತತಃ ಪರಮ್ ।**
**ಸ್ನೇಹಂ ನಿತಾಂತಂ ಸುರರಾಜಸೂನೌ**
**ಕೃತ್ವಾ ಮಹಾಸ್ತ್ರಾಣಿ ದದೌ ಸ ತಸ್ಯ ॥ ೩೯ ॥**

**ಅರ್ಥ** :- **ಯದಾ** ಯಾವಾಗ, **ತತ್ಪ್ರೇರಿತೇನ** ಭೀಮಸೇನನಿಂದ ಪ್ರೇರಿತ ನಾದ, **ಅರ್ಜುನೇನ** ಅರ್ಜುನನಿಂದ, **ಪ್ರತಿಜ್ಞಾ** ಪ್ರತಿಜ್ಞೆಯು, **ಕೃತಾ** ಮಾಡಲ್ಪಟ್ಟಿತ್ತೋ, **ತದಾ** ಆಗ, **ವಿಪ್ರವರಃ** ಬ್ರಾಹ್ಮಣೋತ್ತಮರಾದ **ಸಃ** ದ್ರೋಣಾಚಾರ್ಯರು, **ತತಃ ಪರಮ್** ಅಂದಿನಿಂದ ಆರಂಭಿಸಿ, **ಸುರರಾಜ ಸೂನೌ** ಇಂದ್ರನ ಮಗನಾದ ಅರ್ಜುನನಲ್ಲಿ, **ನಿತಾಂತಂ** ಅತ್ಯಂತವಾದ, **ಸ್ನೇಹಂ** ಪ್ರೀತಿಯನ್ನು, **ಕೃತ್ವಾ** ಮಾಡಿ, **ತಸ್ಯ** ಅರ್ಜುನನಿಗೆ, **ಮಹಾಸ್ತ್ರಾಣಿ** ಮಹಾಸ್ತ್ರಗಳನ್ನು **ದದೌ** ಕೊಟ್ಟರು.

**ತಾತ್ಪರ್ಯ** :- ಭೀಮನ ಆಜ್ಞೆಯಂತೆ ಅರ್ಜುನನು ಪ್ರತಿಜ್ಞೆಯನ್ನು ಮಾಡಲು ಅಂದಿನಿಂದ ಅವನ ಮೇಲೆ ದ್ರೋಣಾಚಾರ್ಯರು ವಿಶೇಷವಾದ ಪ್ರೀತಿಯನ್ನು ಮಾಡುತ್ತ ದಿವ್ಯ ಅಸ್ತ್ರಗಳನ್ನು ಉಪದೇಶಿಸಿದರು.

**ಸ ಪಕ್ಷಪಾತಂ ಚ ಚಕಾರ ತಸ್ಮಿನ್**
**ಕರೋತಿ ಚಾಸ್ಯೋರುತರಾಂ ಪ್ರಶಂಸಾಮ್ ।**
**ರಹಸ್ಯವಿದ್ಯಾಶ್ಚ ದದಾತಿ ತಸ್ಯ**
**ನಾನ್ಯಸ್ಯ ಕಸ್ಯಾಪಿ ತಥಾ ಕಥಂಚಿತ್ ॥ ೪೦ ॥**

**ಅರ್ಥ** :- **ಸ ಚ** ಆ ದ್ರೋಣರಾದರು, **ತಸ್ಮಿನ್** ಅರ್ಜುನನಲ್ಲಿ, **ಪಕ್ಷಪಾತಂ** ಪಕ್ಷಪಾತವನ್ನು, **ಚಕಾರ** ಮಾಡಿದರು, **ಚ** ಮತ್ತು, **ಅಸ್ಯ** ಈ ಅರ್ಜುನನ, **ಉರುತರಾಂ** ಹೆಚ್ಚಾದ, **ಪ್ರಶಂಸಾಮ್** ಪ್ರಶಂಸೆಯನ್ನು, **ಕರೋತಿ**

ಮಾಡುತಿದ್ದರು, ಚ ಮತ್ತು, ರಹಸ್ಯವಿದ್ಯಾಃ ರಹಸ್ಯವಿದ್ಯೆಗಳನ್ನು, ಸಃ ಅವರು, ತಸ್ಯ ಅರ್ಜುನನಿಗೆ, ದದಾತಿ ಕೊಟ್ಟರು, ತಥಾ ಹಾಗೆ, ಅನ್ಯಸ್ಯ ಕಸ್ಯಾಪಿ ಯಾರಿಗೂ ಕೂಡ, ಕಥಂಚಿತ್ ಎಂದಿಗೂ, ನ ದದಾತಿ ಕೊಡಲಿಲ್ಲ.

ತಾತ್ಪರ್ಯ :- ದ್ರೋಣಾಚಾರ್ಯರು ಅರ್ಜುನನ ಪಕ್ಷಪಾತವನ್ನು ವಹಿಸಿ ಅವನ ಗುಣಗಳನ್ನು ಬಹಳವಾಗಿ ಪ್ರಶಂಸಿಸುತ್ತಾ ರಹಸ್ಯ ವಿದ್ಯೆಗಳನ್ನು ಅವನಿಗೆ ಉಪದೇಶಿಸಿದರು. ಇದರಂತೆ ಮತ್ತಾರಿಗೂ ಉಪದೇಶ ಮಾಡಲಿಲ್ಲ.

ಭೀಮಃ ಸಮಸ್ತಂ ಪ್ರತಿಭಾಬಲೇನ
ಜಾನನ್ ಸ್ನೇಹಂ ತ್ವದ್ವಿತೀಯಂ ಕನಿಷ್ಠೇ ।
ದ್ರೋಣಸ್ಯ ಕೃತ್ವಾ ಸಕಲಾಸ್ತ್ರವೇದಿನಂ
ಕರ್ತುಂ ಪಾರ್ಥಂ ನಾರ್ಜುನವಚ್ಚಕಾರ ॥ ೪೧ ॥

ಅರ್ಥ :- ಭೀಮಃ ಭೀಮನು, ಸಮಸ್ತಂ ಎಲ್ಲವನ್ನು, ಪ್ರತಿಭಾಬಲೇನ ತನ್ನ ಪ್ರತಿಭಾಬಲದಿಂದಲೇ ಜಾನನ್ ತಿಳಿದವನಾಗಿ ಕನಿಷ್ಠೇ ತನ್ನ ತಮ್ಮನಾದ ಅರ್ಜುನನಲ್ಲಿ, ದ್ರೋಣಸ್ಯ ದ್ರೋಣರಿಗೆ ಅದ್ವಿತೀಯಂ ಅನುಪಮವಾದ ಸ್ನೇಹಂ ಪ್ರೀತಿಯನ್ನು, ಕೃತ್ವಾ ಹುಟ್ಟಿಸಿ, ಸಕಲಾಸ್ತ್ರವೇದಿನಂ ಎಲ್ಲ ಅಸ್ತ್ರಗಳನ್ನು ತಿಳಿದವನನ್ನಾಗಿ, ಪಾರ್ಥಂ ಅರ್ಜುನನನ್ನು ಕರ್ತುಂ ಮಾಡಲು ಅರ್ಜುನವತ್ ಅರ್ಜುನನಂತೆ, ನ ಚಕಾರ (ಗುರು ಸೇವೆಯನ್ನು) ಮಾಡಲಿಲ್ಲ.

ತಾತ್ಪರ್ಯ :- ಭೀಮನು ತನ್ನ ಬುದ್ಧಿಬಲದಿಂದ ಎಲ್ಲವನ್ನು ತಿಳಿದು ಅರ್ಜುನನ ಮೇಲೆ ದ್ರೋಣರಿಗೆ ಅತಿಯಾದ ಪ್ರೀತಿಯನ್ನು ಉಂಟುಮಾಡಿಸಿ ಎಲ್ಲ ಅಸ್ತ್ರಗಳನ್ನು ಕಲಿತವನನ್ನಾಗಿ ಮಾಡಲು ಅರ್ಜುನನಂತೆ ಗುರುಗಳ ಸೇವೆಯನ್ನು ಮಾಡಲಿಲ್ಲ.

ನೈವಾತಿಯತ್ನೇನ ದದರ್ಶ ಲಕ್ಷಂ
ಶುಶ್ರೂಷಾಯಾಂ ಪಾರ್ಥಮಗ್ರೇ ಕರೋತಿ ।
ಸ್ವಬಾಹುವೀರ್ಯಾದ್ ಭಗವತ್ಪ್ರಸಾದಾ-
ನ್ನಿಹನ್ಮಿ ಶತ್ರೂನ್ ಕಿಮನೇನ ಚೇತಿ ॥ ೪೨ ॥

ಅರ್ಥ :- ಸ್ವಬಾಹುವೀರ್ಯಾತ್ ತನ್ನ ಬಾಹು ಬಲದಿಂದ ಚ ಮತ್ತು ಭಗವತ್ಪ್ರಸಾದಾತ್ ಭಗವಂತನ ಅನುಗ್ರಹದಿಂದಲೂ ಶತ್ರೂನ್ ಶತ್ರುಗಳನ್ನು ಹನ್ಮಿ ಕೊಲ್ಲುತ್ತೇನೆ ಅನೇನ ಇದರಿಂದ ಕಿಂ ಏನು ಪ್ರಯೋಜನವು? ಇತಿ

ಎಂದು **ಅತಿಯತ್ನೇನ** ಹೆಚ್ಚು ಪ್ರಯತ್ನದಿಂದ **ಲಕ್ಷ್ಯಂ** ಗುರಿಯನ್ನು **ನೈವ ದದರ್ಶ** ನೋಡುತ್ತಿರಲಿಲ್ಲ **ಚ** ಮತ್ತು **ಶುಶ್ರೂಷಾಯಾಂ** ಸೇವಾಕಾರ್ಯ ದಲ್ಲೂ **ಪಾರ್ಥಂ** ಅರ್ಜುನನನ್ನು **ಅಗ್ರೇ** ಮುಂದೆ **ಕರೋತಿ** ಮಾಡಿದನು.

**ತಾತ್ಪರ್ಯ :-** ಭೀಮನು ತನ್ನ ಸಾಮರ್ಥ್ಯದಿಂದ ಮತ್ತು ಭಗವಂತನ ಅನುಗ್ರಹದಿಂದಲೂ ಶತ್ರುಗಳನ್ನು ಸಂಹರಿಸುವೇ, ಆದ್ದರಿಂದ ಈ ಅಸ್ತ್ರಗಳಿಂದ ನನಗೆ ಏನು ಪ್ರಯೋಜನವೆಂದು ಗುರಿಯನ್ನು ಮುಟ್ಟುವ ವಿಷಯದಲ್ಲಿ ಹೆಚ್ಚು ಆಸಕ್ತಿಯನ್ನು ತೋರಿಸುತ್ತಿರಲಿಲ್ಲ ಮತ್ತು ಅರ್ಜುನನನ್ನೇ ಗುರು ಸೇವೆಯಲ್ಲಿಯೂ ಮುಂದೆ ಮಾಡುತ್ತಿದ್ದನು.

**ತದಾ ಸಮೀಯುಃ ಸಕಲಾಃ ಕ್ಷಿತೀಶ-**
**ಪುತ್ರಾ ದ್ರೋಣಾತ್ ಸಕಲಾಸ್ತ್ರಾಣ್ಯವಾಪ್ತುಮ್ ।**
**ದದೌ ಸ ತೇಷಾಂ ಪರಮಾಸ್ತ್ರಾಣಿ ವಿಪ್ರೋ**
**ರಾಮಾದವಾಪ್ತಾನ್ಯಗತಾನಿ ಚಾನ್ಯೈಃ ॥ ೪೩ ॥**

**ಅರ್ಥ :- ತದಾ** ಆಗ, **ಸಕಲಾಃ** ಎಲ್ಲ **ಕ್ಷಿತೀಶಪುತ್ರಾಃ** ರಾಜಕುಮಾರರು, **ದ್ರೋಣಾತ್** ದ್ರೋಣಾಚಾರ್ಯರಿಂದ, **ಸಕಲಾಸ್ತ್ರಾಣಿ** ಎಲ್ಲ ಅಸ್ತ್ರಗಳನ್ನು **ಆಪ್ತುಮ್** ಹೊಂದಲು, **ಸಮೀಯುಃ** ಬಂದರು, **ಸಃ** ಆ, **ವಿಪ್ರಃ** ದ್ರೋಣಾ ಚಾರ್ಯರು, **ಅನ್ಯೈಃ** ಬೇರೆಯವರಿಂದ, **ಅಗತಾನಿ** ತಿಳಿಯದ, **ಚ** ಮತ್ತು, **ರಾಮಾತ್** ಪರಶುರಾಮರಿಂದ, **ಅವಾಪ್ತಾನಿ** ಹೊಂದಲ್ಪಟ್ಟ **ಪರಮಾಸ್ತ್ರಾಣಿ** ದಿವ್ಯಾಸ್ತ್ರಗಳನ್ನು, **ದದೌ** ಉಪದೇಶಿಸಿದರು.

**ತಾತ್ಪರ್ಯ :-** ಎಲ್ಲ ರಾಜಕುಮಾರರು ಸಕಲ ಅಸ್ತ್ರಗಳನ್ನು ತಿಳಿಯಲೆಂದು ದ್ರೋಣಾಚಾರ್ಯರ ಬಳಿ ಧಾವಿಸಿದರು. ಆಗ ದ್ರೋಣಾಚಾರ್ಯರು ಯಾರಿಗೂ ತಿಳಿಯದ ಕೇವಲ ಪರಶುರಾಮದೇವರಿಂದ ಪಡೆದ ದಿವ್ಯಾಸ್ತ್ರ ಗಳನ್ನು ಅವರಿಗೆ ಉಪದೇಶಿಸಿದರು.

**ಅಸ್ತ್ರಾಣಿ ಚಿತ್ರಾಣಿ ಮಹಾಂತಿ ದಿವ್ಯಾ-**
**ನ್ಯನ್ಯೈರ್ನೃಪೈರ್ಮನಸಾಽಪ್ಯಸ್ಮೃತಾನಿ ।**
**ಅವಾಪ್ಯ ಸರ್ವೇ ತನಯಾ ನೃಪಾಣಾಂ**
**ಶಕ್ತಾ ಬಭೂವುರ್ನ ಯಥೈವ ಪೂರ್ವೇ ॥ ೪೪ ॥**

**ಅರ್ಥ** :- **ಅನ್ಯೈಃ** ಬೇರೆ, **ನೃಪೈಃ** ರಾಜರಿಂದ, **ಮನಸಾ ಅಪಿ** ಮನಸ್ಸಿನಿಂದಲೂ, **ಅಸ್ಮೃತಾನಿ** ಯೋಚಿಸಲಾಗದ, **ಮಹಾಂತಿ** ಮಹತ್ತರವಾದ, **ಚಿತ್ರಾಣಿ** ಚಿತ್ರವಿಚಿತ್ರವಾದ, **ಅಸ್ತ್ರಾಣಿ** ಅಸ್ತ್ರಗಳನ್ನು, **ಸರ್ವೇ** ಎಲ್ಲ, **ನೃಪಾಣಾಂ** ರಾಜರ, **ತನಯಾಃ** ಮಕ್ಕಳು, **ಅವಾಪ್ಯ** ಪಡೆದು, **ನ ಯಥೈವ ಪೂರ್ವೇ** ಹಿಂದಿನವರಾರೂ ಆಗದಿದ್ದಷ್ಟು, **ಶಕ್ತಾಃ** ಸಮರ್ಥರು, **ಬಭೂವುಃ** ಆದರು.

**ತಾತ್ಪರ್ಯ** :- ಬೇರೆ ರಾಜರಿಂದ ಮನಸ್ಸಿನಿಂದಲೂ ವಿಚಾರ ಮಾಡಲು ಸಾಧ್ಯವಿಲ್ಲದ ದಿವ್ಯ ಅಸ್ತ್ರಗಳನ್ನು ದ್ರೋಣಾಚಾರ್ಯರಿಂದ ಪಡೆದು ರಾಜಕುಮಾರರು ಅತಿ ಸಮರ್ಥರಾದರು.

**ನೈತಾದೃಶಾಃ ಪೂರ್ವಮಾಸನ್ ನರೇಂದ್ರಾ**
**ಅಸ್ತ್ರೇ ಬಲೇ ಸರ್ವವಿದ್ಯಾಸು ಚೈವ ।**
**ದೌಷ್ಷಂತಿಮಾಂಧಾತೃಮರುತ್ತಪೂರ್ವಾ-**
**ಶ್ಚೈತತ್ಸಮಾನಾಃ ಸ್ಯುರುದಾರವೀರ್ಯಾಃ ॥ ೪೫ ॥**

**ಅರ್ಥ** :- **ಅಸ್ತ್ರೇ** ಅಸ್ತ್ರಪ್ರಯೋಗದಲ್ಲಿ, **ಬಲೇ** ಬಲದಲ್ಲಿ, **ಚ** ಮತ್ತು, **ಸರ್ವವಿದ್ಯಾಸು** ಎಲ್ಲ ವಿದ್ಯೆಗಳಲ್ಲಿ, **ಏತಾದೃಶಾಃ** ಇವರಂತೆ, **ನರೇಂದ್ರಾಃ** ರಾಜರು, **ಪೂರ್ವಂ** ಹಿಂದೆ, **ನ ಆಸನ್** ಏವ ಆಗಿರಲಿಲ್ಲ, **ಉದಾರ ವೀರ್ಯಾಃ** ಬಹಳ ಪರಾಕ್ರಮಿಗಳಾದ, **ದೌಷ್ಷಂತಿ ಮಾಂಧಾತೃಮರುತ್ತ ಪೂರ್ವಾಃ** ಭರತ, ಮಾಂಧಾತೃ, ಮರುತ್ತ ಮೊದಲಾದ ರಾಜರು, **ಏತತ್ಸಮಾನಾಃ** ಇವರಿಗೆ ಸಮಾನರಾದವರು, **ಸ್ಯುಃ** ಆಗಿದ್ದರು.

**ತಾತ್ಪರ್ಯ** :- ಹಿಂದಿನ ರಾಜರು ಯಾರು ಈ ರಾಜಕುಮಾರರಿಗೆ ಬಲ ಅಸ್ತ್ರಪ್ರಯೋಗ ಮೊದಲಾದವುಗಳಲ್ಲಿ ಸಮಾನರಾಗಲಿಲ್ಲ ಆದರೆ ಮಹಾ ಪರಾಕ್ರಮಶಾಲಿಗಳಾದ ಭರತ, ಮಾಂಧಾತೃ, ಮರುತ್ ಮೊದಲಾದ ಕೆಲವರೇ ಇವರಿಗೆ ಸಮನಾದರು.

**ತದಾ ಕರ್ಣೋಽಥೈಕಲವ್ಯಶ್ಚ ದಿವ್ಯಾ-**
**ನ್ಯಸ್ತ್ರಾಣ್ಯಾಪ್ತುಂ ದ್ರೋಣಸಮೀಪಮೀಯತುಃ ।**
**ಸೂತೋ ನಿಷಾದ ಇತಿ ನೈತಯೋರದಾ-**
**ದಸ್ತ್ರಾಣಿ ವಿಪ್ರಃ ಸ ತು ರಾಮಶಿಷ್ಯಃ ॥ ೪೬ ॥**

**ಅರ್ಥ** :- ಅನಂತರದಲ್ಲಿ **ತದಾ** ಆಗ, **ಕರ್ಣ** ಕರ್ಣನು, **ಚ** ಮತ್ತು, **ಏಕಲವ್ಯಃ** ಏಕಲವ್ಯನು, **ದಿವ್ಯಾಸ್ತ್ರಾಣಿ** ದಿವ್ಯಾಸ್ತ್ರಗಳನ್ನು **ಆಪ್ತುಂ** ಪಡೆಯಲು, **ದ್ರೋಣ ಸಮೀಪಂ** ದ್ರೋಣಾಚಾರ್ಯರ ಬಳಿ, **ಈಯತುಃ** ಬಂದರು, **ಸೂತಃ** ಸೂನು (ಬೆಸ್ತರಜಾತಿಯವನು), **ನಿಷಾದಃ** ಬೇಡನು, **ಇತಿ** ಎಂದು, **ರಾಮಶಿಷ್ಯಃ** ಪರಶುರಾಮನ ಶಿಷ್ಯರಾದ, **ವಿಪ್ರಃ** ಬ್ರಾಹ್ಮಣರಾದ, **ಸಃ ತು** ದ್ರೋಣಾಚಾರ್ಯರಾದರೂ, **ಅಸ್ತ್ರಾಣಿ** ಅಸ್ತ್ರಗಳನ್ನು **ಏತಯೋಃ** ಇವರಿಬ್ಬರಿಗೆ, **ನ ಅದಾತ್** ಕೊಡಲಿಲ್ಲ.

**ತಾತ್ಪರ್ಯ** :- ಅನಂತರದಲ್ಲಿ ತಾವು ದಿವ್ಯಾಸ್ತ್ರಗಳನ್ನು ಪಡೆಯಬೇಕು ಎಂಬ ಇಚ್ಛೆಯಿಂದ ಕರ್ಣ ಏಕಲವ್ಯರು ದ್ರೋಣಾಚಾರ್ಯರ ಬಳಿ ಬಂದರು. ಆದರೆ, ಪರಶುರಾಮನ ಶಿಷ್ಯರಾದ ಧರ್ಮಿಷ್ಠರಾದ ದ್ರೋಣಾಚಾರ್ಯರು ಸೂತ ಮತ್ತು ಬೇಡ ಎಂಬ ಕಾರಣದಿಂದ ಅವರಿಗೆ ಅಸ್ತ್ರವಿದ್ಯೆಯನ್ನು ನೀಡಲು ನಿರಾಕರಿಸಿದರು.

**ಕರ್ಣೋऽನವಾಪ್ಯ ನಿಜಮೀಪ್ಸಿತಮುಚ್ಚಮಾನೋ**
**ಯಸ್ಮಾದವಾಪ ಪುರುಷೋತ್ತಮತೋऽಸ್ತ್ರವೃಂದಮ್ ।**
**ವಿಪ್ರೋऽಪ್ಯಯಂ ತಮಜಮೇಮಿ ಭೃಗೋಃ ಕುಲೋತ್ಥ-**
**ಮಿತ್ಥಂ ವಿಚಿಂತ್ಯ ಸ ಯಯೌ ಭೃಗುಪಾಶ್ರಮಾಯ ॥ ೪೭ ॥**

**ಅರ್ಥ** :- **ಉಚ್ಚಮಾನಃ** ಸ್ವಾಭಿಮಾನಿಯಾದ, **ಕರ್ಣಃ** ಕರ್ಣನು, **ನಿಜಂ** ತನ್ನಿಂದ, **ಈಪ್ಸಿತಂ** ಅಪೇಕ್ಷಿತವಾದದ್ದನ್ನು, **ಅನವಾಪ್ಯ** ಹೊಂದದೇ, **ಯಸ್ಮಾತ್** ಯಾವ, **ಪುರುಷೋತ್ತಮತಃ** ಶ್ರೀಹರಿಯಿಂದ, **ವಿಪ್ರಃ** ಬ್ರಾಹ್ಮಣನು, **ಅಸ್ತ್ರವೃಂದಂ** ಅಸ್ತ್ರಸಮುದಾಯವನ್ನು **ಅವಾಪ** ಪಡೆದನೊ, **ತಂ** ಅಂತಹ, **ಭೃಗೋಃ** ಭುಗುವಿನ, **ಕುಲೋತ್ಥಂ** ಕುಲದಲ್ಲಿ ಅವತರಿಸಿದ, **ಅಜಂ** ಉತ್ಪತ್ತಿರಹಿತನಾದ ಶ್ರೀಹರಿಯನ್ನು (ಪರಶುರಾಮನನ್ನು), **ಏಮಿ** ಹೊಂದುತ್ತೇನೆ, **ಇತ್ಥಂ** ಎಂದು, **ವಿಚಿಂತ್ಯ** ವಿಚಾರಮಾಡಿ, **ಸಃ** ಆ ಕರ್ಣನು, **ಭೃಗುಪಾಶ್ರಮಾಯ** ಪರಶುರಾಮರ ಆಶ್ರಮಕ್ಕೆ, **ಯಯೌ** ಹೊರಟನು.

**ತಾತ್ಪರ್ಯ** :- ದ್ರೋಣಾಚಾರ್ಯರು ಕರ್ಣನಿಗೆ ಶಾಸ್ತ್ರವಿದ್ಯೆಯನ್ನು ಕೊಡಲು ನಿರಾಕರಿಸಿದರು. ಅದರಿಂದ ಕೋಪಗೊಂಡ ಅವನು ದ್ರೋಣಾ ಚಾರ್ಯರು ಯಾವ ಸರ್ವೋತ್ತಮನಾದ ಪರಶುರಾಮನಿಂದ ಎಲ್ಲ

ಶಾಸ್ತ್ರವಿದ್ಯೆಯನ್ನು ಪಡೆದರೊ ಅಂತಹ ಭೃಗುಕುಲತಿಲಕನಾದ ಪರಶುರಾಮನ ಬಳಿ ಕರ್ಣನು ಹೊರಟನು.

ಸ ಸರ್ವವೇತ್ತುಶ್ಚ ವಿಭೋರ್ಭಯೇನ
ವಿಪ್ರೋऽಹಮಿತ್ಯವದದಸ್ತ್ರವರಾತಿಲೋಭಾತ್ ।
ಜಾನನ್ನಪಿ ಪ್ರದದಾವಸ್ಯ ರಾಮೋ
ದಿವ್ಯಾನ್ಯಸ್ತ್ರಾಣ್ಯಖಿಲಾನ್ಯವ್ಯಯಾತ್ಮಾ ॥ ೪೮ ॥

**ಅರ್ಥ** :- **ಸಃ** ಆ ಕರ್ಣನು, **ಸರ್ವವೇತ್ತುಃ** ಸರ್ವಜ್ಞನಾದ, **ವಿಭೋಃ** ಸಮರ್ಥನಾದ ಪರಶುರಾಮನ, **ಭಯೇನ** ಭಯದಿಂದ, **ಅಹಂ** ನಾನು, **ವಿಪ್ರಃ** ಬ್ರಾಹ್ಮಣನು, **ಇತಿ** ಎಂದು, **ಅಸ್ತ್ರವರಾತಿಲೋಭಾತ್** ಶ್ರೇಷ್ಠ ಅಸ್ತ್ರಗಳ ಮೇಲಿನ ಅತಿಯಾದ ಮೋಹದಿಂದ, **ಅವದತ್** ಹೇಳಿದನು, **ಅವ್ಯಯಾತ್ಮಾ** ದೇಹಕ್ಕೂ ನಾಶವಿಲ್ಲದ, **ರಾಮಃ** ಪರಶುರಾಮನು, **ಜಾನನ್ ಅಪಿ** ಎಲ್ಲವನ್ನು ತಿಳಿದಿದ್ದರೂ, **ಅಸ್ಯ** ಇವನಿಗೆ **ಸಕಲಾನಿ** ಎಲ್ಲ **ಅಸ್ತ್ರಾಣಿ** ಅಸ್ತ್ರಗಳನ್ನು **ಪ್ರದದೌ** ಉಪದೇಶಿಸಿದನು.

**ತಾತ್ಪರ್ಯ** :- ಸರ್ವಜ್ಞನಾದ ಭಗವಂತನ ಭಯದಿಂದ ಕರ್ಣನು "ತಾನು ಬ್ರಾಹ್ಮಣ" ಎಂದು ಹೇಳಿದನು. ಆದರೆ ಇವನು ಸೂತನೆಂದು ತಿಳಿದಿದ್ದರೂ ನಾಶರಹಿತನಾದ ಪರಶುರಾಮನು ಇವನಿಗೆ ದಿವ್ಯವಾದ ಎಲ್ಲ ಅಸ್ತ್ರಗಳನ್ನು ಉಪದೇಶಿಸಿದನು.

ಅಸ್ತ್ರಜ್ಞಚೂಳಾಮಣಿಮಿಂದ್ರಸೂನುಂ
ವಿಶ್ವಸ್ಯಹಂತುಂ ಧೃತರಾಷ್ಟ್ರಪುತ್ರಃ ।
ಏನಂ ಸಮಾಶ್ರಿತ್ಯ ದೃಢೋ ಭವೇತೇ-
ತ್ಯೇತಜ್ಜ್ಞಾತ್ವೈವಾಸ್ತ್ರಮಸ್ಮೈ ರಮೇಶಃ ॥ ೪೯ ॥

**ಅರ್ಥ** :- **ಅಸ್ತ್ರಜ್ಞಚೂಡಾಮಣಿಂ** ಅಸ್ತ್ರಗಳನ್ನು ತಿಳಿದವರ ಮಧ್ಯದಲ್ಲಿ, **ಚೂಡಾಮಣಿಂ** (ಶ್ರೇಷ್ಠ)ನಾದ, **ಇಂದ್ರಸೂನುಂ** ಇಂದ್ರನ ಮಗನಾದ ಅರ್ಜುನನನ್ನು, **ಹಂತುಂ** ಕೊಲ್ಲಲು, **ಧೃತರಾಷ್ಟ್ರಪುತ್ರಃ** ದುರ್ಯೋಧನನು, **ಏನಂ** ಈ ಕರ್ಣನನ್ನು, **ಸಮಾಶ್ರಿತ್ಯ** ಆಶ್ರಯಿಸಿ, **ವಿಶ್ವಸ್ಯ** ವಿಶ್ವಾಸಮಾಡಿ, **ದೃಢೋ ಭವೇತ್** ಗಟ್ಟಿಯಾಗಲಿ, **ಇತಿ** ಎಂದು, **ರಮೇಶಃ** ಪರಶುರಾಮನು, **ಜ್ಞಾತ್ವೈವ** ತಿಳಿದೇ, **ಅಸ್ಮೈ** ಈ ಕರ್ಣನಿಗೆ, **ಅಸ್ತ್ರಂ** ಅಸ್ತ್ರವನ್ನು **ಅದಾತ್** ಕೊಟ್ಟನು.

**ತಾತ್ಪರ್ಯ** :- ಕರ್ಣನನ್ನು ಆಶ್ರಯಿಸಿ ಇಂದ್ರನ ಮಗನಾದ ಅರ್ಜುನನನ್ನು ಕೊಲ್ಲುತ್ತೇನೆ ಎಂಬ ಧೃಡವಾದ ವಿಶ್ವಾಸವು ದುರ್ಯೋಧನನಿಗೆ ಬರಲಿ ಎಂದು ಪರಶುರಾಮನು ಈ ಯಾವ ಕರ್ಣನಿಗೆ ಅಸ್ತ್ರಗಳನ್ನು ಉಪದೇಶಿಸಿದನು.

**ಜ್ಞಾನಂ ಚ ಭಾಗವತಮಪ್ಯಪರಾಶ್ಚ ವಿದ್ಯಾ**
**ರಾಮಾದವಾಪ್ಯ ವಿಜಯಂ ಧನುರಗ್ರ್ಯಯಾನಮ್ ।**
**ಅಬ್ದೈಶ್ಚತುರ್ಭಿರಥ ಚ ನ್ಯವಸತ್ ತದಂತೇ**
**ಹಾತುಂ ನ ಶಕ್ತ ಉರುಗಾಯಮಿಮಂ ಸ ಕರ್ಣಃ ॥ ೫೦ ॥**

**ಅರ್ಥ** :- **ಅಥ** ಅನಂತರದಲ್ಲಿ, **ರಾಮಾತ್** ಪರಶುರಾಮನಿಂದ, **ಸಃ ಕರ್ಣಃ** ಆ ಕರ್ಣನು (ಸೂತನೆಂದು), **ಭಗವಂತಂ** ಭಗವದ್ವಿಷಯಕವಾದ, **ಜ್ಞಾನಂ** ಜ್ಞಾನವನ್ನು **ಚ** ಮತ್ತು, **ಪರಾಃ** ಶ್ರೇಷ್ಠವಾದ, **ವಿದ್ಯಾಃ** ಶಸ್ತ್ರವಿದ್ಯೆಗಳನ್ನು **ಚ** ಮತ್ತು, **ವಿಜಯಂ** ವಿಜಯ ಎಂಬ ಹೆಸರಿನ, **ಧನುಃ** ಧನುಸ್ಸನ್ನು **ಚ** ಮತ್ತು, **ಅಗ್ರ್ಯಯಾನಮ್** ಶ್ರೇಷ್ಠವಾದ ರಥವನ್ನು **ಚತುರ್ಭಿಃ** ನಾಲ್ಕು, **ಅಬ್ದೈಃ** ವರ್ಷಗಳಲ್ಲಿ **ಅವಾಪ್ಯ** ಹೊಂದಿ, **ಉರುಗಾಯಂ ಇಮಂ** ಶ್ರೀಹರಿಯನ್ನು **ಹಾತುಂ** ಬಿಡಲು, **ನ ಶಕ್ತಃ ಸನ್** ಸಮರ್ಥನಾಗದೇ, **ತದಂತೇ** ಆ ಪರಶುರಾಮನ ಬಳಿಯಲ್ಲಿ **ನ್ಯವಸತ್** ವಾಸಮಾಡಿದನು.

**ತಾತ್ಪರ್ಯ** :- ಕರ್ಣನು ನಾಲ್ಕು ವರ್ಷಗಳಲ್ಲಿಯೇ ಪರಶುರಾಮನಿಂದ ಭಗವದ್ವಿಷಯಕವಾದ ಜ್ಞಾನವನ್ನು ಶಸ್ತ್ರವಿದ್ಯೆಯನ್ನು ವಿಜಯ ಎಂಬ ಧನುಸ್ಸನ್ನು ಮತ್ತು ರಥಗಳನ್ನು ಪಡೆದನು. ಹೀಗೆ ತನ್ನ ಇಷ್ಟವು ಪೂರೈಸಿದರು ಭಗವಂತನನ್ನು ಬಿಟ್ಟಿರಲಾಗದೇ ಆ ಪರಶುರಾಮನ ಬಳಿಯಲ್ಲಿಯೇ ವಾಸಮಾಡಿದನು.

**ಅಂಕೇ ನಿಧಾಯ ಸ ಕದಾಚಿದಮುಷ್ಯ ರಾಮಃ**
**ಶಿಶ್ಯೇ ಶಿರೋ ವಿಗತನಿದ್ರ ಉದಾರಬೋಧಃ ।**
**ಸಂಸುಪ್ತವತ್ ಸುರವರಃ ಸುರಕಾರ್ಯಹೇತೋ-**
**ರ್ದಾತುಂ ಚ ವಾಲಿನಿಧನಸ್ಯ ಫಲಂ ತದಸ್ಯ ॥ ೫೧ ॥**

**ಅರ್ಥ** :- **ಉದಾರ ಬೋಧಃ** ಪೂರ್ಣಜ್ಞಾನ ಉಳ್ಳ, **ಸುರವರಃ** ದೇವತೋತ್ತಮನಾದ, **ಸಃ ರಾಮಃ** ಆ ಪರಶುರಾಮನು, **ಸುರಕಾರ್ಯ ಹೇತೋಃ** ಕರ್ಣನ ಪರಾಜಯ ರೂಪವಾದ ದೇವಕಾರ್ಯವನ್ನು ಮಾಡುವ

ಸಲುವಾಗಿ, **ಅಸ್ಯ** ಈ ಕರ್ಣನಿಗೆ, **ತತ್** ಆ ಯಾವ, **ವಾಲಿನಿಧನಸ್ಯ** ವಾಲಿಯ ಸಂಹಾರಕ್ಕೆ, **ಫಲಂ** ವಿಚಿತ್ರವಾದ ಫಲವನ್ನು, **ದಾತುಂ** ಕೊಡಲು. **ಕದಾಚಿತ್** ಒಮ್ಮೆ **ಅಮುಷ್ಯ** ಈ ಕರ್ಣನ, **ಅಂಕೇ** ತೊಡೆಯಲ್ಲಿ, **ಶಿರಃ** ತಲೆಯನ್ನು **ನಿಧಾಯ** ಇಟ್ಟು **ವಿಗತನಿದ್ರಃ (ಅಪಿ)** ನಿದ್ರೆ ಇಲ್ಲದವನಾದರೂ, **ಸಂಸುಪ್ತವತ್** ನಿದ್ರಿಸುವವನಂತೆ, **ಶಿಶ್ಯೇ** ಮಲಗಿದನು.

**ತಾತ್ಪರ್ಯ :-** ಒಮ್ಮೆ ಸರ್ವಜ್ಞನಾದ ದೇವತೋತ್ತಮನಾದ ಶ್ರೀಹರಿಯು ನಿದ್ರೆ ಇಲ್ಲದಿದ್ದರು ನಿದ್ರಿಸುವವನಂತೆ ಕರ್ಣನ ತೊಡೆಯ ಮೇಲೆ ತಲೆಯನ್ನು ಇಟ್ಟು ಮಲಗಿದನು. ಇದಕ್ಕೆ ಕಾರಣ ವಾಲಿಯನ್ನು ಕೊಲ್ಲಿಸಿದ್ದಕ್ಕೆ ಅವನಿಗೆ ಉಚಿತ ಶಿಕ್ಷೆಯನ್ನು ನೀಡುವ ದೇವತಾಕಾರ್ಯವಾಗಿತ್ತು.

**ತತ್ರಾऽಸ ರಾಕ್ಷಸವರಃ ಸ ತು ಹೇತಿನಾಮಾ**
**ಕಾಲೇ ಮಹೇಂದ್ರಮನುಪಾಸ್ಯ ಹಿ ಶಾಪತೋऽಸ್ಯ ।**
**ಕೀಟಸ್ತಮಿಂದ್ರ ಉತ ತತ್ರ ಸಮಾವಿವೇಶ**
**ಕರ್ಣಸ್ಯ ಶಾಪಮುಪಪಾದಯಿತುಂ ಸುತಾರ್ಥೇ ॥ ೫೨ ॥**

**ಅರ್ಥ :-** **ತತ್ರ** ಅಲ್ಲಿ, **ಹೇತಿ ನಾಮ** ಹೇತಿ ಎಂಬ ಹೆಸರಿನ, **ರಾಕ್ಷಸ ವರಃ** ಶ್ರೇಷ್ಠರಾಕ್ಷಸನು, **ಕಾಲೇ** ಸಕಾಲದಲ್ಲಿ, **ಮಹೇಂದ್ರಂ** ಇಂದ್ರನನ್ನು, **ಅನುಪಾಸ್ಯ** ಸೇವಿಸದಲೆ, **ಅಸ್ಯ** ಈ ಇಂದ್ರನ, **ಶಾಪತಃ** ಶಾಪದಿಂದ, **ಕೀಟಃ** ಕೀಟವಾಗಿ, **ಆಸ** ಇದ್ದನು, **ಹಿ** ನಿಶ್ಚಯವು, **ಸುತಾರ್ಥೇ** ತನ್ನ ಮಗನಾದ ಅರ್ಜುನನಿಗಾಗಿ, **ಕರ್ಣಸ್ಯ** ಕರ್ಣನಿಗೆ, **ಶಾಪಂ** ಶಾಪವನ್ನು, **ಉಪಪಾದಯಿತುಂ** ಕೊಡಿಸಲೆಂದು, **ತತ್ರ** ಅಲ್ಲಿ, **ಇಂದ್ರಃ** ಇಂದ್ರನು, **ತಂ** ಅವನನ್ನು (**ಹೇತಿ** ಎಂಬ ಅಸುರನನ್ನು), **ಸಮಾವಿವೇಶ** ಪ್ರವೇಶಿಸಿದನು.

**ತಾತ್ಪರ್ಯ :-** ಹೇತಿ ಎಂಬ ರಾಕ್ಷಸನಾದ ವೈಷ್ಣವಜೀವನು ಸಕಾಲದಲ್ಲಿ ಇಂದ್ರನನ್ನು ಸೇವಿಸದ ಕಾರಣ ಅವನ ಶಾಪದಿಂದ ಕೀಟವಾಗಿ ಅಲ್ಲಿ ಹುಟ್ಟಿದ್ದನು. ಇಂದ್ರನು ತನ್ನ ಮಗನಾದ ಅರ್ಜುನನ ಸಲುವಾಗಿ ಕರ್ಣನಿಗೆ ಪರಶುರಾಮದೇವರಿಂದ ಶಾಪಕೊಡಿಸಲು ಅವನಲ್ಲಿ ಪ್ರವೇಶಿಸಿದನು.

**ಕರ್ಣಃ ಸ ಕೀಟತನುಗೇನ ಕಿರೀಟನೈವ**
**ಹ್ಯೂರೋರಧಸ್ತನತ ಜಾಪರಿಗಾತ್ವಚಶ್ಚ ।**

ವಿದ್ಧಃ ಶರೇಣ ಸ ಯಥಾ ರುಧಿರಸ್ಯ ಧಾರಾಂ
ಸುಸ್ರಾವ ತಂ ವಿಗತನಿದ್ರ ಇವಾऽಹ ರಾಮಃ ॥ ೫೩ ॥

**ಅರ್ಥ** :- **ಕರ್ಣಃ** ಕರ್ಣನು, **ಸಕೀಟತನುಗೇನ** ಕೀಟದ ದೇಹದಲ್ಲಿ ಇರುವ ಹೇತಿಯಿಂದಲೂ, **ಚ** ಮತ್ತು, **ಕಿರೀಟನಾ ಏವ** ಇಂದ್ರನಿಂದಲೂ, **ಉರೋಃ** ತೊಡೆಯ, **ಅಧಸ್ತಲತಃ** ಕೆಳಭಾಗವನ್ನು ಆರಂಭಿಸಿ, **ಔಪರಿಗಾತ್ವಚಃ** ಮೇಲ್ಭಾಗದ ಚರ್ಮದವರೆಗೂ, **ಶರೇಣ ಯಥಾ** ಬಾಣದಿಂದ ಹೇಗೊ, ಹಾಗೆ, **ವಿದ್ಧಃ** ಕೊರೆಯಲ್ಪಟ್ಟವನಾಗಿ, **ರುಧಿರಸ್ಯ** ರಕ್ತದ, **ಧಾರಾಂ** ಧಾರೆಯನ್ನು, **ಸುಸ್ರಾವ** ಸುರಿಸಿದನು, **ಹಿ** ನಿಶ್ಚಯವು, **ವಿಗತನಿದ್ರ ಇವ** ನಿದ್ರೆಯಿಂದ ಮೇಲೆದ್ದವನಂತೆ ಮಾಡಿ, **ರಾಮಃ** ಪರಶುರಾಮನು, **ತಂ** ಕರ್ಣನನ್ನು (ಕುರಿತು), **ಆಹ** ಹೇಳಿದನು.

**ತಾತ್ಪರ್ಯ** :- ಕೀಟದ ದೇಹದಲ್ಲಿ ಇದ್ದ ಹೇತಿ ಎಂಬ ಅಸುರನಿಂದಲು ಮತ್ತು ಇಂದ್ರನಿಂದಲೂ ಕರ್ಣನ ತೊಡೆಯ ಕೆಳಭಾಗವನ್ನು ಆರಂಭಿಸಿ ಮೇಲ್ಭಾಗದ ಚರ್ಮದವರೆಗೂ ಕೊರೆಯಲ್ಪಟ್ಟಿತು. ಆಗ ರಕ್ತವು ಧಾರಾ ಕಾರವಾಗಿ ಸುರಿಯಿತು. ಆದರಿಂದ ಎಚ್ಚರಗೊಂಡವನಂತೆ ಪರಶುರಾಮನು ಮೇಲೆದ್ದು ಕರ್ಣನನ್ನು ಕುರಿತು ಹೀಗೆ ಹೇಳಿದನು. ನಿದ್ರಿಸಿದವನಿಗೆ ಎಚ್ಚರ. ನಿದ್ರೆ ಇಲ್ಲದವನಿಗೆ ಎಚ್ಚರವಾದರೂ ಎಲ್ಲಿದೆ. ನಿತ್ಯದಲ್ಲೂ ಇವನಿಗೆ ಜಾಗೃತಿ. ಇದನ್ನು ತಿಳಿಸಲೆಂದು ಇವ ಶಬ್ದಪ್ರಯೋಗ.

ಕಿಂ ತ್ವಂ ನ ಚಾಲಯಸಿ ಮಾಂ ರುಧಿರಪ್ರಸೇಕೇ
ಪ್ರಾಪ್ತೇऽಪಿ ಪಾವನವಿರೋಧಿನಿ ಕೋऽಸಿ ಚೇತಿ ।
ತಂ ಪ್ರಾಹ ಕರ್ಣ ಇಹ ನೈವ ಮಯಾ ವಿಧೇಯೋ
ನಿದ್ರಾವಿರೋಧ ಇತಿ ಕೀಟ ಉಪೇಕ್ಷಿತೋ ಮೇ ॥ ೫೪ ॥

**ಅರ್ಥ** :- **ಪಾವನ ವಿರೋಧಿನಿ** ಅಪವಿತ್ರವಾದ, **ರುಧಿರಪ್ರಸೇಕೆ** ರಕ್ತದ ಸಂಪರ್ಕವು, **ಪ್ರಾಪ್ತೇऽಪಿ** ಉಂಟಾದರೂ, **ತ್ವಂ** ನೀನು, **ಮಾಂ** ನನ್ನನು, **ಕಿಂ** ಏತಕ್ಕಾಗಿ, **ನ ಚಾಲಯಸಿ** ಎಬ್ಬಿಸಲಿಲ್ಲ?, **ಚ** ಮತ್ತು, **ತ್ವಂ** ನೀನು, **ಕಃ ಅಸಿ** ಯಾರು, **ಇತಿ** ಎಂದು, **ಆಹ** (ಪರಶುರಾಮನು) ಕೇಳಿದನು, **ಕರ್ಣಃ** ಕರ್ಣನು, **ತಂ** ಪರಶುರಾಮನನ್ನು ಕುರಿತು, **ಮಯಾ** ನನ್ನಿಂದ, **ನಿದ್ರಾವಿರೋಧಃ** ನಿದ್ದೆಗೆ ಭಂಗವು, **ನೈವ ವಿಧೇಯಃ** ಆಗಬಾರದು, **ಇತಿ**

ಎಂದು, ಇಹ ನಿದ್ರಿಸುವ ಕಾಲದಲ್ಲಿ, **ಮೇ** ನನ್ನಿಂದ, **ಕೀಟಃ** ಕೀಟವು, **ಉಪೇಕ್ಷಿತಃ** ಉದಾಸೀನ ಮಾಡಲ್ಪಟ್ಟಿತು.

**ತಾತ್ಪರ್ಯ** :- ಅಪವಿತ್ರವಾದ ರಕ್ತವು ನನ್ನ ದೇಹವನ್ನು ತಾಕುವಂತೆ ಧಾರಾಕಾರವಾಗಿ ಸುರಿದರು ನನ್ನನ್ನು ಎಬ್ಬಿಸದೆ ಸುಮ್ಮನೆ ಯಾಕೆ ಕುಳಿತಿ. ನೀನು ಯಾರು ಎಂದು ಪರಶುರಾಮದೇವರು ಪ್ರಶ್ನಿಸಿದರು. ಕರ್ಣನು ಅದಕ್ಕೆ ಹೀಗೆ ಉತ್ತರಿಸಿದನು. ನೀವು ನಿದ್ದೆ ಮಾಡುವ ಪ್ರಸಂಗದಲ್ಲಿ ನನ್ನಿಂದ ನಿದ್ರೆ ಭಂಗವಾಗ ಬಾರದೆಂದು ಕೀಟದ ಬಾಧೆಯನ್ನು ನಿರ್ಲಕ್ಷಿಸಿದನು.

**ಜಾತ್ಯಾಽಸ್ಮಿ ಸೂತ ಉತ ತೇ ತನಯೋಽಸ್ಮಿ ಸತ್ಯಂ**
**ತೇನಾಸ್ಮಿ ವಿಪ್ರ ಇತಿ ಭಾರ್ಗವವಂಶಜೋಽಹಮ್ ।**
**ಅಗ್ರೇಽಬ್ರುವಂ ಭವತ ಈಶ ನಹಿ ತ್ವದನ್ಯೋ**
**ಮಾತಾ ಪಿತಾ ಗುರುತರೋ ಜಗತೋಽಪಿ ಮುಖ್ಯಃ ॥ ೫೫ ॥**

**ಅರ್ಥ** :- **ಅಹಂ** ನಾನು, **ಜಾತ್ಯಾ** ಜಾತಿಯಿಂದ, **ಸೂತಃ** ಸೂತನು, **ಅಸ್ಮಿ** ಆಗಿದ್ದೇನೆ, **ಉತ** ಅಥವಾ, **ಯೇನ** ಯಾವ ಕಾರಣದಿಂದ, **ತೇ** ನಿಮ್ಮ **ತನಯಃ** ಮಗನು (ಶಿಷ್ಯನು), **ಅಸ್ಮಿ** ಆಗಿದ್ದೇನೋ, **ತೇನ** ಆ ಕಾರಣದಿಂದ, **ಭಾರ್ಗವ ವಂಶಜಃ** ಭೃಗುಕುಲದಲ್ಲಿ ಹುಟ್ಟಿದ, **ವಿಪ್ರಃ** ಬ್ರಾಹ್ಮಣನು, **ಅಸ್ಮಿ** ಆಗಿದ್ದೇನೆ, **ಇತಿ** ಎಂದು, **ಭವತಃ** ನಿಮ್ಮ ಮುಂದೆ, **ಅಗ್ರೇ** ಮೊದಲಿಗೆ, **ಸತ್ಯಂ** ಸತ್ಯವನ್ನು **ಅಬ್ರುವಂ** ಹೇಳಿದ್ದೆನು, **ಈಶ** ಎಲೋ ಸ್ವಾಮಿಯೇ!, **ಜಗತಃ ಅಪಿ** ಜಗತ್ತಿಗೂ ಕೂಡ, **ತ್ವದನ್ಯಃ** ನಿನ್ನ ಹೊರತು ಮತ್ತೊಬ್ಬನು, **ಮುಖ್ಯಃ** ಮುಖ್ಯವಾದ, **ಮಾತಾ** ತಾಯಿಯು, **ಪಿತಾ** ತಂದೆಯೂ, **ಗುರುತರಃ** ಉತ್ತಮ ಗುರುವು, **ನ ಅಸ್ತಿ** ಇಲ್ಲ, **ಹಿ** ಪ್ರಮಾಣ ಪ್ರಸಿದ್ಧವು.

**ತಾತ್ಪರ್ಯ** :- ನಾನು ಮೊದಲಿಗೆ ನಿನ್ನ ಮುಂದೆ ಜಾತಿಯಿಂದ ಸೂತನು ಅಥವಾ ನಿಮ್ಮ ಶಿಷ್ಯನಾದುದ್ದರಿಂದ ನಿಮ್ಮ ಕುಲದಲ್ಲಿ ಜನಿಸಿದ ಬ್ರಾಹ್ಮಣನೆಂದು ಸತ್ಯವನ್ನೆ ಹೇಳಿದ್ದೆನು. ನೀವು ಕೇವಲ ನನಗಷ್ಟೆ ತಂದೆ ಅಲ್ಲ, ಸಮಸ್ತ ಜಗತ್ತಿಗೂ ಮುಖ್ಯವಾಗಿ ತಂದೆ, ತಾಯಿ, ಗುರುವು ಆಗಿದ್ದೀರಿ ಎಂದು ಕರ್ಣನು ಪರಶುರಾಮನಿಗೆ ಉತ್ತರಿಸಿದನು.

ಇತ್ಯುಕ್ತಮಾತ್ರವಚನೇ ಸ ತು ಕೀಟಕೋಽಸ್ಯ
ರಾಮಸ್ಯ ದೃಷ್ಟಿವಿಷಯತ್ವತ ಏವ ರೂಪಮ್ ।
ಸಂಪ್ರಾಪ್ಯ ನೈಜಮತಿಪೂರ್ಣಗುಣಸ್ಯ ತಸ್ಯ
ವಿಷ್ಣೋರನುಗ್ರಹತ ಆಪ ವಿಮಾನಗಃ ಸ್ವಃ ॥ ೫೬ ॥

**ಅರ್ಥ** :- **ಇತ್ಯುಕ್ತ ಮಾತ್ರವಚನೇ** ಹೀಗೆ ಹೇಳಿಸಿಕೊಳ್ಳುತ್ತಿರಲು (ಪರಶುರಾಮನು), **ಸ ತು ಕೀಟಕಃ** ಆ ಕೀಟವು, **ಅಸ್ಯ** ಆ ಯಾವ, **ರಾಮಸ್ಯ** ಪರಶುರಾಮನ, **ದೃಷ್ಟಿವಿಷಯತ್ವತಃ ಏವ** ಕಣ್ಣಿಗೆ ಬಿಳುವುದರಿಂದಲೇ, **ನೈಜಂ ರೂಪಂ** ನಿಜರೂಪವನ್ನು **ಸಂಪ್ರಾಪ್ಯ** ಹೊಂದಿ, **ಅತಿ ಪೂರ್ಣಗುಣಸ್ಯ** ಅತ್ಯಂತ ಗುಣಪೂರ್ಣನಾದ, **ತಸ್ಯ** ಆ, **ವಿಷ್ಣೋಃ** ಭಗವಂತನ, **ಅನುಗ್ರಹತಃ** ಅನುಗ್ರಹದಿಂದ, **ವಿಮಾನಗಃ ಸನ್** ವಿಮಾನವನ್ನು **ಸ್ವಃ** ಸ್ವರ್ಗವನ್ನು **ಆಪ** ಹೊಂದಿದನು.

**ತಾತ್ಪರ್ಯ** :- ಪರಶುರಾಮನು ಕರ್ಣನಿಂದ ಹೀಗೆ ಹೇಳಿಸಿ ಕೊಳ್ಳುತ್ತಿರಲು ಆ ರಾಮನ ದೃಷ್ಟಿಗೆ ಬಿದ್ದ ಆ ಕೀಟವು ನಿಜರೂಪವನ್ನು ಪಡೆಯಿತು. ಜ್ಞಾನಾನಂದಾದಿ ಅನಂತಗುಣಗಳಿಂದ ಪೂರ್ಣನಾದ ಭಗವಂತನ ಅನುಗ್ರಹದಿಂದ ವಿಮಾನವನ್ನು ಏರಿ ಸ್ವರ್ಗವನ್ನು ಪಡೆದನು.

ಅಥಾಽಹ ರಾಮಸ್ತಮಸತ್ಯವಾಚೋ
ನ ತೇ ಸಕಾಶೇ ಮಮ ವಾಸಯೋಗ್ಯತಾ ।
ತಥಾಽಪಿ ತೇ ನೈವ ವೃಥಾ ಮದೀಯಾ
ಭಕ್ತಿರ್ಭವೇಜ್ಜೇಷ್ಯಸಿ ಸರ್ವಶತ್ರೂನ್ ॥ ೫೭ ॥

**ಅರ್ಥ** :- **ಅಥ** ಅನಂತರದಲ್ಲಿ, **ಅಸತ್ಯವಾಚಂ** ಸುಳ್ಳನ್ನು ನುಡಿದ, **ತಂ** ಆ ಕರ್ಣನನ್ನು ಕುರಿತು, **ತೆ** ನಿನಗೆ, **ಮಮ** ನನ್ನ, **ಸಕಾಶೇ** ಸಮೀಪದಲ್ಲಿ **ವಾಸಯೋಗ್ಯತಾ** ಇರುವ ಯೋಗ್ಯತೆಯು, **ನ** ಇಲ್ಲ, **ತಥಾಽಪಿ** ಹಾಗಿದ್ದರು, **ತೇ** ನಿನಗೆ, **ಮದೀಯಾ** ನನ್ನಲ್ಲಿ ಇರುವ, **ಭಕ್ತಿಃ** ಭಕ್ತಿಯು, **ವೃಥಾ** ವ್ಯರ್ಥವು, **ನೈವ ಭವೇತ್** ಆಗುವುದಿಲ್ಲ, **ಸರ್ವಶತ್ರೂನ್** ಎಲ್ಲ ಶತ್ರುಗಳನ್ನು **ಜೇಷ್ಯಸಿ** ಗೆಲ್ಲುವಿ, **ಇತಿ** ಎಂದು, **ರಾಮಃ** ಪರಶುರಾಮನು, **ಆಹ** ಹೇಳಿದನು.

**ತಾತ್ಪರ್ಯ** :- ಅನಂತರದಲ್ಲಿ ಪರಶುರಾಮನು ಕರ್ಣನನ್ನು ಕುರಿತು "ನೀನು ಸುಳ್ಳನ್ನು ಹೇಳಿದ್ದರಿಂದ ನನ್ನ ಬಳಿ ವಾಸಮಾಡುವ ಯೋಗ್ಯತೆ ಇಲ್ಲ ಆದರು ನೀನು ನನ್ನಲ್ಲಿ ಮಾಡಿದ ಭಕ್ತಿಯು ವ್ಯರ್ಥವಾಗುವುದಿಲ್ಲ ಎಲ್ಲ ಶತ್ರುಗಳನ್ನು ಗೆಲ್ಲುವಿ" ಎಂದು ಹೇಳಿದನು.

**ಅಸ್ಪರ್ಧಮಾನಂ ನ ಕಥಂಚನ ತ್ವಾಂ**
**ಜೇತಾ ಕಶ್ಚಿತ್ ಸ್ಪರ್ಧಮಾನಸ್ತು ಯಾಸಿ ।**
**ಪರಾಭೂತಿಂ ನಾತ್ರ ವಿಚಾರ್ಯಮಸ್ತಿ**
**ಪ್ರಮಾದೀ ತ್ವಂ ಭವಿತಾ ಚಾಸ್ತ್ರಸಂಖ್ಯೇ ॥ ೫೮ ॥**

**ಅರ್ಥ** :- **ಅಸ್ಪರ್ಧಮಾನಂ** ಸ್ಪರ್ಧೆ ಮಾಡದ, **ತ್ವಾಂ** ನಿನ್ನನ್ನು, **ಕಶ್ಚಿತ್** ಯಾವ ವ್ಯಕ್ತಿಯು, **ಕಥಂಚನ** ಯಾವ ಪ್ರಕಾರದಿಂದಲೂ, **ನ ಜೇತಾ** ಜಯಿಸಲಾರ, **ತು** ಆದರೆ, **ಸ್ಪರ್ಧಮಾನ** ಸ್ಪರ್ಧಿಸುವವನಾಗಿ ನೀನು, **ಪರಾಭೂತಿಂ** ಸೋಲನ್ನು, **ಯಾಸಿ** ಹೊಂದುವಿ, **ಅತ್ರ** ಈ ವಿಷಯದಲ್ಲಿ, **ವಿಚಾರ್ಯಂ ನ ಅಸ್ತಿ** ವಿಚಾರಣೀಯವಾದದ್ದು ಏನು ಇಲ್ಲ, **ಚ** ಮತ್ತು, **ತ್ವಂ** ಅಂತಹ ನೀನು, **ಅಸ್ತ್ರಸಂಖ್ಯೇ** ಅಸ್ತ್ರಯುದ್ಧದಲ್ಲಿ, **ಪ್ರಮಾದೀ**ದೇ ಮರೆಯುವವನು **ಭವಿತಾ** ಆಗುವಿ.

**ತಾತ್ಪರ್ಯ** :- ಸ್ಪರ್ಧೆಯನ್ನು ನಡೆಸದ ನಿನ್ನನ್ನು ಯಾರು ಯಾವ ಉಪಾಯದಿಂದ ಗೆಲ್ಲಲು ಸಾಧ್ಯವಿಲ್ಲ ಆದರೆ, ಸ್ಪರ್ಧೆಯಿಂದ ಅಸ್ತ್ರಯುದ್ಧವನ್ನು ಮಾಡಿದಲ್ಲಿ ಸೋಲು ನಿಶ್ಚಿತವು. ಆ ಸಂದರ್ಭದಲ್ಲಿ ನಿನಗೆ ಎಲ್ಲ ಅಸ್ತ್ರಗಳು ಮರೆತು ಹೋಗುತ್ತದೆ ಎಂದು ಪರಶುರಾಮನು ಕರ್ಣನನ್ನು ಕುರಿತು ಹೇಳಿದನು.

**ಯಾಹೀತಿ ತೇನೋಕ್ತ ಉದಾರಕರ್ಮಣಾ**
**ಕರ್ಣೋ ಯಯೌ ತಂ ಪ್ರಣಮ್ಯೇಶಿತಾರಮ್ ।**
**ತಥೈಕಲವ್ಯೋಽಪಿ ನಿರಾಕೃತೋಽಮುನಾ**
**ದ್ರೋಣೇನ ತಸ್ಯ ಪ್ರತಿಮಾಂ ವನೇಽರ್ಚಯತ್ ॥ ೫೯ ॥**

**ಅರ್ಥ** :- **ಉದಾರಕರ್ಮಣಾ** ಉತ್ಕೃಷ್ಟಕರ್ಮಗಳುಳ್ಳ, **ತೇನ** ಆ ಪರಶುರಾಮನಿಂದ, **ಯಾಹಿ** ಹೊರಡು (ತೆರಳು), **ಇತಿ** ಎಂದು, **ಉಕ್ತಃ**

ಹೇಳಿಸಿಕೊಳ್ಳಲ್ಪಟ್ಟ, **ಕರ್ಣಃ** ಕರ್ಣನು, **ಈಶಿತಾರಮ್** ಸರ್ವಪ್ರೇರಕನಾದ, **ತಂ** ಆ ಪರಶುರಾಮನನ್ನು, **ಪ್ರಣಮ್ಯ** ನಮಸ್ಕರಿಸಿ, **ಯಯೌ** ಹೊರಟನು, **ತಥಾ** ಹಾಗೆ, **ಅಮುನಾ** ಈ ಯಾವ **ದ್ರೋಣೇನ** ದ್ರೋಣಾಚಾರ್ಯರಿಂದ, **ನಿರಾಕೃತಃ** (ನಿಷಾದನೆಂದು) ತಿರಸ್ಕರಿಸಲ್ಪಟ್ಟ, **ಏಕಲವ್ಯಃ ಅಪಿ** ಏಕಲವ್ಯನಾದರೂ, **ತಸ್ಯ** ಆ ದ್ರೋಣಾಚಾರ್ಯರ, **ಪ್ರತಿಮಾಂ** ಮಣ್ಣಿನ ಪ್ರತಿಮೆಯನ್ನು, **ವನೇ** ಅರಣ್ಯದಲ್ಲಿ, **ಅರ್ಚಯತ್** ಪೂಜಿಸಿದನು.

**ತಾತ್ಪರ್ಯ** :- ಪರಶುರಾಮನಿಂದ "ಹೊರಡು" ಎಂದು ಹೇಳಿಸಿಕೊಳ್ಳಲ್ಪಟ್ಟ ಕರ್ಣನು ಅವನಿಗೆ ನಮಸ್ಕರಿಸಿ ಅಲ್ಲಿಂದ ಹೊರಟನು ಅನಂತರದಲ್ಲಿ ಕರ್ಣನಂತೆ ದ್ರೋಣಾಚಾರ್ಯರಿಂದ "ನಿಷಾದ" ಎಂದು ನಿರಾಕರಿಸಲ್ಪಟ್ಟ ಏಕಲವ್ಯನಾದರೂ ಅರಣ್ಯದಲ್ಲಿ ಆ ದ್ರೋಣಾಚಾರ್ಯರ ಮಣ್ಣಿನ ಪ್ರತಿಮೆಯನ್ನು ಭಕ್ತಿಯಿಂದ ಪೂಜಿಸಿದನು.

**ತತಃ ಕದಾಚಿದ್ ಧೃತರಾಷ್ಟ್ರಪುತ್ರೈಃ**
**ಪಾಂಡೋಃ ಸುತಾ ಮೃಗಯಾಂ ಸಂಪ್ರಯಾತಾಃ ।**
**ಅಗ್ರೇ ಗಚ್ಛನ್ ಸಾರಮೇಯೋ ರುರಾವ**
**ಧರ್ಮಾತ್ಮಜಸ್ಯಾತ್ರ ವನೇ ಮೃಗಾರ್ಥೀ ॥ ೬೦ ॥**

**ಅರ್ಥ** :- **ತತಃ** ಅಸ್ತ್ರವನ್ನು ಪಡೆದ ನಂತರದಲ್ಲಿ, **ಕದಾಚಿತ್** ಒಮ್ಮೆ, **ಧೃತರಾಷ್ಟ್ರ ಪುತ್ರೈಃ** ಸಹ ಕೌರವರಿಂದ ಕೂಡಿದ, **ಪಾಂಡೋಃ** ಪಾಂಡುರಾಜನ, **ಸುತಾಃ** ಮಕ್ಕಳಾದ ಪಾಂಡವರು, **ಮೃಗಯಾಂ** ಬೇಟೆಗೆಂದು, **ಸಂಪ್ರಯಾತಾಃ** ತೆರಳಿದರು, **ಅಗ್ರೆ** ಮುಂದೆ ಮುಂದೆ, **ಗಚ್ಛನ್** ಹೋಗುತ್ತಿರುವ, **ಧರ್ಮಾತ್ಮಜಸ್ಯ** ಧರ್ಮರಾಜನ, **ಸಾರಮೇಯಃ** ನಾಯಿಯು, **ತತ್ರ** ವನೆ ಆ ಅರಣ್ಯದಲ್ಲಿ, **ಮೃಗಾರ್ಥಿ** ಮೃಗಾರ್ಥಿಯಾಗಿ, **ರುರಾವ** ಬೊಗಳತೊಡಗಿತು.

**ತಾತ್ಪರ್ಯ** :- ದ್ರೋಣರಿಂದ ಅಸ್ತ್ರವಿದ್ಯೆಯನ್ನು ಪಡೆದ ಪಾಂಡವರು ಮತ್ತು ಕೌರವರು ಒಮ್ಮೆ ಬೇಟೆಗಾಗಿ ಕಾಡಿಗೆ ಹೊರಟರು. ಅವರಲ್ಲಿ ಮುಂದೆ ಮುಂದೆ ಹೋಗುತ್ತಿರುವ ಧರ್ಮರಾಜನ "ನಾಯಿಯು" ಪ್ರಾಣಿಗಳ ಸಲುವಾಗಿ ಬೊಗಳತೊಡಗಿತು.

**ಶ್ರುತ್ವಾ ರಾವಂ ಸಾರಮೇಯಸ್ಯ ದೂರಾ-**
**ಚ್ಛರೈರ್ಮುಖಂ ಶಬ್ದವೇಧೀ ಪುಪೂರೇ ।**
**ಸ ಏಕಲವ್ಯೋ ವ್ರಣಮಸ್ಯ ನಾಕರೋ-**
**ಚ್ಛ್ವಾ ಪೂರಿತಾಸ್ಯಃ ಪಾಂಡವಾನಭ್ಯಯಾತ್ ಸಃ ॥ ೬೧ ॥**

**ಅರ್ಥ :-** **ಸಾರಮೇಯಸ್ಯ** ನಾಯಿಯ, **ರಾವಂ** ಬೊಗಳುವ ಧ್ವನಿಯನ್ನು, **ಶ್ರುತ್ವಾ** ಕೇಳಿ, **ಶಬ್ದವೇಧೀ** ಶಬ್ದವೇಧಿ ವಿದ್ಯೆಯನ್ನು ವಶಪಡಿಸಿ ಕೊಂಡ, **ಸಃ** ಆ ಯಾವ, **ಏಕಲವ್ಯಃ** ಏಕಲವ್ಯನು, **ದೂರಾತ್** ದೂರದಿಂದಲೇ, **ಶರೈಃ** ಬಾಣಗಳಿಂದ, **ಮುಖಂ** ಅದರ ಮುಖವನ್ನು, **ಪುಪೂರೇ** ತುಂಬಿಸಿ ದನು, **ಅಸ್ಯ** ಮುಖಕ್ಕೆ, **ವ್ರಣಂ** ಗಾಯವನ್ನು **ನ ಅಕರೋತ್** ಮಾಡಲಿಲ್ಲ, **ಪೂರಿತಾಸ್ಯಃ** ಬಾಣಗಳಿಂದ ತುಂಬಿ ಹೋದ ಬಾಯುಳ್ಳ, **ಸಃ** ಆ, **ಶ್ವಾ** ನಾಯಿಯು, **ಪಾಂಡವಾನ್** ಪಾಂಡವರ ಬಳಿಗೆ, **ಅಭ್ಯಯಾತ್** ಬಂದಿತು.

**ತಾತ್ಪರ್ಯ :-** ಜೋರಾಗಿ ಬೊಗಳುತ್ತಿರುವ ನಾಯಿಯ ಧ್ವನಿಯನ್ನು ಕೇಳಿ ಶಬ್ದವೇದಿ ವಿದ್ಯೆಯನ್ನು ಬಲ್ಲ ಏಕಲವ್ಯನು ದೂರದಿಂದಲೇ ಬಾಣಗಳಿಂದ ಬಾಯನ್ನು ಮುಚ್ಚಿದನು. ಗಾಯವನ್ನು ಮಾಡಲಿಲ್ಲ. ಬಾಯಿಯ ತುಂಬ ಬಾಣಗಳನ್ನು ತುಂಬಿಕೊಂಡ ನಾಯಿಯು ಪಾಂಡವರ ಬಳಿ ಬಂದಿತು.

**ದೃಷ್ಟ್ವಾ ಚಿತ್ರಂ ಕುರವಃ ಪಾಂಡವಾಶ್ಚ**
**ದ್ರಷ್ಟುಂ ಕರ್ತಾರಂ ಮಾರ್ಗಯಾಮಾಸುರತ್ರ ।**
**ದ್ರೋಣಾಕೃತಿಂ ಮಾರ್ತಿಕೀಂ ಪೂಜಯಂತಂ**
**ದದೃಶುಶ್ಚೈನಂ ಧನುರೇವಾಭ್ಯಸಂತಮ್ ॥ ೬೨ ॥**

**ಅರ್ಥ :-** **ಕುರವಃ** ಕೌರವರು, **ಚ** ಮತ್ತು, **ಪಾಂಡವಾಃ** ಪಾಂಡವರು, **ಚಿತ್ರಂ** ಆಶ್ಚರ್ಯವನ್ನು, **ದೃಷ್ಟ್ವಾ** ಕಂಡು, **ಕರ್ತಾರಂ** ಹಾಗೆ ಮಾಡಿದವನನ್ನು, **ದ್ರುಷ್ಟುಂ** ನೋಡಲು, **ಅತ್ರ** ಅರಣ್ಯದಲ್ಲಿ **ಮಾರ್ಗಯಾಮಾಸುಃ** ಹುಡುಕ ತೊಡಗಿದರು, **ಮಾರ್ತಿಕೀಂ** ಮಣ್ಣಿನಿಂದ ಮಾಡಲ್ಪಟ್ಟ **ದ್ರೋಣಾಕೃತಿಂ** ದ್ರೋಣರ ಪ್ರತಿಮೆಯನ್ನು, **ಪೂಜಯಂತಂ** ಪೂಜಿಸುತ್ತಿರುವ, **ಚ** ಮತ್ತು, **ಧನು** ಏವ ಧನುರ್ವಿದ್ಯೆಯನ್ನು, **ಅಭ್ಯಸಂತಮ್** ಅಭ್ಯಾಸ ಮಾಡುತ್ತಿರುವ, ಏನಂ ಏಕಲವ್ಯನನ್ನು, **ದದೃಶುಃ** ನೋಡಿದರು.

**ತಾತ್ಪರ್ಯ** :- ಕೌರವರು ಹಾಗೂ ಪಾಂಡವರು ಈ ಆಶ್ಚರ್ಯವನ್ನು ನೋಡಿದರು. ಅನಂತರ ಹೀಗೆ ಅದ್ಭುತ ಕಾರ್ಯವನ್ನು ಮಾಡಿದ ವ್ಯಕ್ತಿಯನ್ನು ನೋಡಲು ಆ ಕಾಡಿನಲ್ಲಿ ಹುಡುಕತೊಡಗಿದರು. ಆ ಸಂದರ್ಭದಲ್ಲಿ ಅಲ್ಲಿಯೇ ದ್ರೋಣಾಚಾರ್ಯರ ಮಣ್ಣಿನ ಮೂರ್ತಿಯನ್ನು ಪೂಜಿಸುತ್ತಾ ಧನುರ್ವಿದ್ಯೆಯನ್ನು ಅಭ್ಯಾಸ ಮಾಡುತ್ತಿರುವ ಏಕಲವ್ಯನನ್ನು ಕಂಡರು.

**ಪೈಶಾಚಮೇವೈಷ ಪಿಶಾಚಕೇಭ್ಯಃ**
**ಪೂರ್ವಂ ವಿವೇದಾಸ್ತ್ರವೃಂದಂ ನಿಷಾದಃ ।**
**ದಿವ್ಯಾನ್ಯಸ್ತ್ರಾಣ್ಯಾಪ್ತುಮೇತಾಂ ಚ ಶಿಕ್ಷಾಂ**
**ದ್ರೋಣಂ ಸದಾ ಪೂಜಯತಿ ಸ್ಮ ಭಕ್ತ್ಯಾ ॥ ೬೩ ॥**

**ಅರ್ಥ** :- **ಏಷಃ** ಈ ಯಾವ, **ನಿಷಾದಃ** ಬೇಡರ ಜಾತಿಯಲ್ಲಿ ಹುಟ್ಟಿದ ಏಕಲವ್ಯನು, **ಪೂರ್ವಂ ಏವ** ಮೊದಲಿಗೇ, **ಪಿಶಾಚಕೇಭ್ಯಃ** ಪಿಶಾಚಿಗಳಿಂದ, **ಪೈಶಾಚಂ** ಪಿಶಾಚ ಸಂಬಂಧಿಯಾದ, **ಅಸ್ತ್ರವೃಂದಂ** ಅಸ್ತ್ರ ಸಮುದಾಯವನ್ನು **ವಿವೇದ** ತಿಳಿದಿದ್ದನು, **ದಿವ್ಯಾನಿ ಅಸ್ತ್ರಾಣಿ** ಶ್ರೇಷ್ಠ ಅಸ್ತ್ರಗಳನ್ನು **ಆಪ್ತುಂ** ಪಡೆಯಲು, **ಚ** ಮತ್ತು, **ಏತಾಂ** ಈ ಯಾವ, **ಶಿಕ್ಷಾಂ** ಧನುರ್ವಿದ್ಯೆಯನ್ನು **ಸದಾ** ಯಾವಾಗಲು, **ದ್ರೋಣಂ** ದ್ರೋಣಾಚಾರ್ಯರನ್ನು **ಭಕ್ತ್ಯಾ** ಭಕ್ತಿಯಿಂದ, **ಪೂಜಯತಿ ಸ್ಮ** ಪೂಜಿಸುತ್ತಿದ್ದನು.

**ತಾತ್ಪರ್ಯ** :- ಮೊದಲಿಗೆ ಏಕಲವ್ಯನು ಪಿಶಾಚಿಗಳಿಂದ ಅನೇಕ ವಿದ್ಯೆಗಳನ್ನು ಕಲಿತಿದ್ದನು. ಆದರು ದಿವ್ಯಾಸ್ತ್ರಗಳನ್ನು ಪಡೆಯಬೇಕು, ಧನುರ್ವಿದ್ಯೆಯನ್ನು ಕಲಿಯಬೇಕೆಂದು ದ್ರೋಣಾಚಾರ್ಯರನ್ನು ಭಕ್ತಿಯಿಂದ ಪೂಜಿಸುತ್ತಿದ್ದನು.

**ದೃಷ್ಟ್ವಾ ವಿಶೇಷಂ ತಮಮುಷ್ಯ ಪಾರ್ಥೋ**
**ದ್ರೋಣಾಯೋಚೇ ತ್ವದ್ವರೋ ಮೇ ಮೃಷಾऽऽಸೀತ್ ।**
**ಇತ್ಯುಕ್ತ ಏನಂ ತ್ವಭಿಗಮ್ಯ ದಕ್ಷಿಣಾಂ**
**ವಿಪ್ರೋ ಯಯಾಚೇ ದಕ್ಷಿಣಾಂಗುಷ್ಠಮೇವ ॥ ೬೪ ॥**

**ಅರ್ಥ** :- **ಪಾರ್ಥಃ** ಅರ್ಜುನನು, **ಅಮುಷ್ಯ** ಈ ಏಕಲವ್ಯನ, **ತಂ** ಆ ಯಾವ, **ವಿಶೇಷಂ** ವಿಶೇಷ (ಶಬ್ದವೇದಿ ವಿದ್ಯೆಯನ್ನು)ವನ್ನು **ದೃಷ್ಟ್ವಾ** ನೋಡಿ, **ಮೇ** ನನ್ನ ವಿಷಯದಲ್ಲಿ, **ತ್ವದ್ವಚಃ** (ಶ್ರೇಷ್ಠ ಧನುರ್ಧಾರಿಯನ್ನಾಗಿ ಮಾಡುತ್ತೇನೆ

ಎಂಬ) ನಿಮ್ಮ ಮಾತು, **ಮೃಷಾ** ಸುಳ್ಳು, **ಆಸೀತ್** ಆಯಿತು, **ಇತಿ** ಎಂದು, **ದ್ರೋಣಾಯ** ದ್ರೋಣರಿಗೆ, **ಊಚೆ** ಹೇಳಿದನು, **ಇತಿ ಉಕ್ತಃ** ಈ ರೀತಿಯಾಗಿ ಹೇಳಿಸಿಕೊಳ್ಳಲ್ಪಟ್ಟ **ವಿಪ್ರಃ ತುಃ** ದ್ರೋಣಾಚಾರ್ಯರೂ, **ಏನಂ** ಈ ಯಾವ ಏಕಲವ್ಯನನ್ನು, **ಅಭಿಗಮ್ಯ** ಕುರಿತು ಹೋಗಿ, **ದಕ್ಷಿಣಾಂಗುರಷ್ಠಂ** ಏವ ಬಲಗೈ ಹೆಬ್ಬೆರಳನ್ನೇ, **ದಕ್ಷಿಣಾಂ** ಗುರುದಕ್ಷಿಣೆಯನ್ನಾಗಿ, **ಯಯಾಚೇ** ಕೇಳಿದರು.

**ತಾತ್ಪರ್ಯ** :- ಏಕಲವ್ಯನ ಅಮೋಘವಾದ ಪ್ರತಿಭೆಯನ್ನು ನೋಡಿ ಅರ್ಜುನನು "ನನ್ನನ್ನು ಧನುರ್ಧಾರಿಗಳ ಮಧ್ಯದಲ್ಲಿ ಸರ್ವಶ್ರೇಷ್ಠನನ್ನಾಗಿ ಮಾಡುತ್ತೇನೆ" ಎಂಬ ನಿಮ್ಮ ಮಾತು ಸುಳ್ಳಾಯಿತು ಎಂದು ದ್ರೋಣಾಚಾರ್ಯರಿಗೆ ಹೇಳಿದನು. ಈ ಮಾತನ್ನು ಕೇಳಿ ದ್ರೋಣರು ಏಕಲವ್ಯನ ಬಳಿ ಬಂದು ಗುರುದಕ್ಷಿಣೆಯ ರೂಪದಲ್ಲಿ ಅವನ ಬಲಗೈಯ ಹೆಬ್ಬೆರಳನ್ನೇ ಕೇಳಿದರು.

**ತಸ್ಯ ಪ್ರಸಾದೋಪಚಿತೋರುಶಿಕ್ಷೋ**
**ನಿಷಾದೋಽದಾದ್ ದಕ್ಷಿಣಾಂಗುಷ್ಠಮಸ್ಮೈ ।**
**ತತಃ ಪರಂ ನಾಸ್ಯ ಬಭೂವ ಶಿಕ್ಷಾ**
**ಸನ್ಮುಷ್ಟಿಹೀನಸ್ಯ ಸಮಾಽರ್ಜುನೇನ ॥ ೬೫ ॥**

**ಅರ್ಥ** :- **ತಸ್ಯ** ದ್ರೋಣಾಚಾರ್ಯರ, **ಪ್ರಸಾದೋಪಚಿತೋರುಶಿಕ್ಷಃ** ಅನುಗ್ರಹದಿಂದ ಶ್ರೇಷ್ಠ ವಿದ್ಯೆಯನ್ನು ಸಂಪಾದಿಸಿದ, **ನಿಷಾದಃ** ಏಕಲವ್ಯನು, **ಅಸ್ಮೈ** ದ್ರೋಣಾಚಾರ್ಯರಿಗೆ, **ದಕ್ಷಿಣಾಂಗುಷ್ಠಂ** ಬಲಗೈಯ ಹೆಬ್ಬೆರಳನ್ನು **ಅದಾತ್** ಕೊಟ್ಟನು, **ತತಃ ಪರಂ** ಅಂದಿನಿಂದ ಮುಂದೆ, **ಸನ್ಮುಷ್ಟಿ ಹೀನಸ್ಯ** ಮುಷ್ಟಿಯ ಬಲವನ್ನು ಕಳೆದುಕೊಂಡ, **ಅಸ್ಯ** ಈ ಏಕಲವ್ಯನ, **ಶಿಷಾ** ವಿದ್ಯೆಯು, **ಅರ್ಜುನೇನ** ಅರ್ಜುನನಿಗೆ, **ಸಮಾ** ಸಮಾನವು, **ನ ಬಭೂವ** ಆಗಲಿಲ್ಲ.

**ತಾತ್ಪರ್ಯ** :- ದ್ರೋಣರ ಅನುಗ್ರಹದಿಂದ ಎಲ್ಲ ವಿದ್ಯೆಯನ್ನು ಕಲಿತ ಏಕಲವ್ಯನು ಆ ದ್ರೋಣರಿಗೆ ತನ್ನ ಬಲಗೈಯ ಹೆಬ್ಬೆರಳನ್ನು ಗುರುದಕ್ಷಿಣೆಯನ್ನಾಗಿ ನೀಡಿದನು. ಅಂದಿನಿಂದ ಮುಷ್ಠಿಯ ಬಲವನ್ನು ಕಳೆದುಕೊಂಡ ಏಕಲವ್ಯನ ವಿದ್ಯೆಯು ಅರ್ಜುನನ ವಿದ್ಯೆಗೆ ಸಮವಾಗಲಿಲ್ಲ.

ಪುನಃ ಕೃಪಾಲೂ ರೈವತಪರ್ವತೇ ತಂ
ದ್ರೋಣಃ ಪ್ರಾಪ್ಯಾऽದಾದಸ್ತ್ರವರಾಣಿ ತಸ್ಮೈ ।
ಏಕಾಂತ ಏವಾಸ್ಯ ಭಕ್ತ್ಯಾ ಸುತುಷ್ಟೋ
ಧನ್ವಿಶ್ರೇಷ್ಠಂ ಕೃತವಾನರ್ಜುನಂ ಚ ॥ ೬೬ ॥

**ಅರ್ಥ** :- **ಪುನಃ** ಮತ್ತೆ, **ಕೃಪಾಳೂಃ** ಕೃಪಾಳುಗಳಾದ, **ದ್ರೋಣಃ** ದ್ರೋಣಾಚಾರ್ಯರು, **ತಂ** ಆ ಏಕಲವ್ಯನನ್ನು **ರೈವತ ಪರ್ವತೇ** ರೈವತ ಪರ್ವತದಲ್ಲಿ **ಪ್ರಾಪ್ಯ** ಹೊಂದಿ, **ಅಸ್ಯ** ಏಕಲವ್ಯನ, **ಭಕ್ತ್ಯಾ** ಭಕ್ತಿಯಿಂದ, **ಸುತುಷ್ಟಃ** ಬಹಳ ಸಂತೋಷಗೊಂಡವರಾಗಿ, **ಏಕಾಂತ ಏವ** ಏಕಾಂತದಲ್ಲಿ **ತಸ್ಮೈ** ಅವನಿಗೆ, **ಅಸ್ತ್ರವರಾಣಿ** ಶ್ರೇಷ್ಠ ಅಸ್ತ್ರಗಳನ್ನು **ಅದಾತ್** ಕೊಟ್ಟರು, **ಚ** ಮತ್ತು, **ಅರ್ಜುನಂ** ಅರ್ಜುನನನ್ನು **ಧನ್ವಿಶ್ರೇಷ್ಠಂ** ಧನುರ್ಧಾರಿಗಳಲ್ಲಿ ಶ್ರೇಷ್ಠನನ್ನಾಗಿ, **ಕೃತವಾನ್** ಮಾಡಿದರು.

**ತಾತ್ಪರ್ಯ** :- ಕೃಪಾಳುಗಳಾದ ದ್ರೋಣಾಚಾರ್ಯರು ಮತ್ತೆ ಏಕಲವ್ಯನನ್ನು ರೈವತ ಪರ್ವತದಲ್ಲಿ ಬೇಟಿಯಾಗಿ ಅವನ ಭಕ್ತಿಗೆ ಸಂತೋಷ ಪಟ್ಟು ಅವನಿಗೆ ಶ್ರೇಷ್ಠ ಅಸ್ತ್ರಗಳನ್ನು ಉಪದೇಶಿಸಿದರು. ಅರ್ಜುನನನ್ನು ಧನ್ವಿಶ್ರೇಷ್ಠನನ್ನಾಗಿ ಮಾಡಿದರು.

**ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ**
**ವಿರಚಿತವಾದ ಮಹಾಭಾರತತಾತ್ಪರ್ಯನಿರ್ಣಯ**
**ಹದಿನೈದನೆಯ ಅಧ್ಯಾಯದ ಕನ್ನಡ ಅನುವಾದವು ಮುಗಿಯಿತು**

## ಅಧ್ಯಾಯ – 16

ಕಾಲೇ ತ್ವೇತಸ್ಮಿನ್ ಭೂಯ ಏವಾಖಿಲೈಶ್ಚ
ನೃಪೈರ್ಯುಕ್ತೋ ಮಾಗಧೋ ಯೋದ್ಧುಕಾಮಃ
ಪ್ರಾಯಾದ್ ಯದೂಂಸ್ತತ್ರ ನಿತ್ಯಾವ್ಯಯಾತಿ
ಬಲೈಶ್ವರ್ಯೋऽಪೀಚ್ಛಯಾಗಾತ್ ಸ ಕೃಷ್ಣಃ ॥

**ಅರ್ಥ** :- **ಏತಸ್ಮಿನ್ ಕಾಲೇ** ರಾಜಕುಮಾರರು ದ್ರೋಣರ ಬಳಿ ಅಸ್ತ್ರಶಿಕ್ಷಣ ಪಡೆಯುತ್ತಿದ್ದ ಕಾಲದಲ್ಲಿ, **ಯೋದ್ಧುಕಾಮಃ** ಯುದ್ಧಮಾಡಲು ಬಯಕೆಯುಳ್ಳ, **ಮಾಗಧಃ** ಮಗಧದೇಶದ ರಾಜನಾದ ಜರಾಸಂಧನು, **ಭೂಯ** ಏವ ಮತ್ತೊಮ್ಮೆ **ಅಖಿಲೈಃ ನೃಪೈಃ ಯುಕ್ತಃ ಸನ್** ಎಲ್ಲಾ ರಾಜರುಗಳಿಂದ ಕೂಡಿದವನಾಗಿ, **ಯದೂನ್ ಪ್ರತಿ** ಯಾದವರನ್ನು ಕುರಿತು, **ಪ್ರಾಯಾತ್** ದಾಳಿ ಮಾಡಿದನು, **ತತ್ರ** ಆ ಯುದ್ಧದಲ್ಲಿ, **ನಿತ್ಯಾವ್ಯಯಾತಿ ಬಲೈಶ್ವರ್ಯಃ ಅಪಿ, ನಿತ್ಯ** ನಿತ್ಯವಾದ, **ಅವ್ಯಯ** ನಾಶರಹಿತವಾದ **ಅತಿ ಬಲೈಶ್ವರ್ಯ ಅಪಿ** ಬಹಳ ಬಲ ಸಾಮರ್ಥ್ಯಗಳುಳ್ಳವನಾದರೂ, **ಸಃ ಕೃಷ್ಣಃ** ಅಂತಹ ಕೃಷ್ಣನೂ, **ಯದೂನ್ ಪುರೀಂ ತ್ಯಕ್ತ್ವಾ** ಯದುಪುರಿಯನ್ನು ಬಿಟ್ಟು **ಇಚ್ಛಯಾ** ತನ್ನ ಇಚ್ಛೆಯಿಂದಲೇ, **ಅಗಾತ್** ಓಡಿ ಹೋದನು.

**ತಾತ್ಪರ್ಯ** :- ರಾಜಕುಮಾರರು ದ್ರೋಣರ ಬಳಿ ಅಸ್ತ್ರಶಿಕ್ಷಣ ಪಡೆಯುತ್ತಿದ್ದ ಕಾಲದಲ್ಲಿ ಜರಾಸಂಧನು ಪುನಃ ಎಲ್ಲ ರಾಜರುಗಳಿಂದೊಡಗೂಡಿ ಯುದ್ಧಮಾಡಲು ಬಯಸಿ ಯಾದವರ ಮೇಲೆ ದಾಳಿ ಮಾಡಿದ. ಆಗ ಕೃಷ್ಣ ನಿತ್ಯ, ಅವಿನಾಶಿ ಬಲ ಸಾಮರ್ಥ್ಯಗಳುಳ್ಳವನಾದರೂ ಸ್ವೇಚ್ಛೆಯಿಂದಲೇ ಪಲಾಯನ ಮಾಡಿದ.

ಸಂದರ್ಶಯನ್ ಬಲಿನಾಮಲ್ಪಸೇನಾ
ದ್ಯುಪಸ್ಕರಾಣಾಂ ಬಹುಲೋಪಸ್ಕರೈಶ್ಚ
ಪ್ರಾಪ್ತೇ ವಿರೋಧೇ ಬಲಿಭಿರ್ನೀತಿಮಗ್ರ್ಯಾಂ
ಯಯೌ ಸರಾಮೋ ದಕ್ಷಿಣಾಶಾಂ ರಮೇಶಃ ॥ ೨ ॥

**ಅರ್ಥ** :- **ಅಲ್ಪಸೇನಾದ್ಯುಪಸ್ಕರಾಣಾಂ** ಸೈನ್ಯ ಮುಂತಾದ ಯುದ್ಧಸಾಧನಗಳು ಕಡಿಮೆಯಾಗಿ ಉಳ್ಳ (ಸೇನಾದಿ ಸೈನ್ಯವೇ ಮುಂತಾದ, ಅಲ್ಪ ಸ್ವಲ್ಪವಾದ) **ಉಪಸ್ಕರಾಣಾಂ** ಯುದ್ಧಸಾಧನಗಳುಳ್ಳ, **ಬಲಿನಾಂ** ಬಲಿಷ್ಠರುಗಳಿಗೆ,

**ಬಹುಲೋಪಸ್ಕರೈಶ್ಚ** ಬಹಳವಾದ **ಉಪಸ್ಕರೈಃ** ಸೇನಾದಿ ಯುದ್ಧಸಾಧನಗಳುಳ್ಳ, **ಬಲಿಭಿಃ ಸಹ** ಬಲಿಷ್ಠರೊಂದಿಗೆ **ವಿರೋಧೇ ಪ್ರಾಪ್ತೇ ಸತಿ** ವಿರೋಧ ಉಂಟಾದಾಗ, **ಅಗ್ರ್ಯಾಂ** ಉತ್ಕೃಷ್ಟವಾದ (ಶ್ರೇಷ್ಠವಾದ), **ನೀತಿಂ** ರಾಜ ಅನುಸರಿಸಬೇಕಾದ ನೀತಿಯನ್ನು, **ಸಂದರ್ಶಯನ್** ತೋರಿಸಲು (ತೋರಿಸುತ್ತಾ), **ಸರಾಮಃ** ಬಲರಾಮನಿಂದ ಕೂಡಿದ, **ರಮೇಶಃ** ಲಕ್ಷ್ಮೀಪತಿಯಾದ ಕೃಷ್ಣನು, **ದಕ್ಷಿಣಾಶಾಂ** ದಕ್ಷಿಣದಿಕ್ಕನ್ನು ಕುರಿತು, **ಯಯೌ** ಹೋದನು.

**ತಾತ್ಪರ್ಯ :-** ಬಲಿಷ್ಠರಾಗಿದ್ದರೂ ಸೇನೆ ಮೊದಲಾದ ಯುದ್ಧ ಸಾಧನಗಳು ಅಲ್ಪರಾಗಿರುವವರು, ಬಹಳವಾದ ಯುದ್ಧ ಸಾಮಗ್ರಿಯಿಂದ ಕೂಡಿದ ಬಲಿಷ್ಠ ಶತ್ರುಗಳೊಂದಿಗೆ ವಿರೋಧ ಒದಗಿದಾಗ, ಪಾಲಿಸಬೇಕಾದ ಶ್ರೇಷ್ಠವಾದ ರಾಜನೀತಿಯನ್ನು ತಿಳಿಸಿಕೊಡಲೆಂದು ಕೃಷ್ಣ ಬಲರಾಮ ಸಮೇತನಾಗಿ ಹಾಗೆ ದಕ್ಷಿಣ ದಿಕ್ಕಿಗೆ ತೆರಳಿದ.

**ಸೋಽನಂತವೀರ್ಯಃ ಪರಮೋಽಭಯೋಽಪಿ**
**ನೀತ್ಯೈ ಗಚ್ಛನ್ ಜಾಮದಗ್ನ್ಯಂ ದದರ್ಶ**
**ಕ್ರೀಡಾರ್ಥಮೇಕೋಽಪಿ ತತೋಽತಿದುರ್ಗಂ**
**ಶ್ರುತ್ವಾ ಗೋಮಂತಂ ತತ್ರ ಯಯೌ ಸಹಾಗ್ರಜಃ ॥ ೩ ॥**

**ಅರ್ಥ :- ಅನಂತವೀರ್ಯಃ** ಅಪರಿಮಿತವಾದ ಶಕ್ತಿಯುಳ್ಳ, **ಪರಮಃ** ಸರ್ವೋತ್ತಮನಾದ, **ಅಭಯಃ ಅಪಿ** ನಿರ್ಭೀತನಾದರೂ, **ಸಃ** ಆ ಕೃಷ್ಣ **ನೀತ್ಯೈ** ಲೋಕಕ್ಕೆ ರಾಜ ನೀತಿಯನ್ನು ತಿಳಿಸುವುದಕ್ಕಾಗಿ (ಪಲಾಯನ ಮಾಡಿದ್ದು), **ಗಚ್ಛನ್** (ಹೋಗುತ್ತಾ) ದಾರಿಯಲ್ಲಿ **ಜಾಮದಗ್ನ್ಯಂ** ಪರಶುರಾಮನನ್ನು **ದದರ್ಶ** ಕಂಡನು, **ಏಕೋಽಪಿ** ಸಃ ಇಬ್ಬರೂ ಒಂದೇ ಆದರೂ (ಅಂದರೆ ಕೃಷ್ಣ ಪರಶುರಾಮರು ಒಬ್ಬರೇ ಆದರೂ), **ಕೀಡಾರ್ಥಂ** ಕ್ರೀಡೆಗಾಗಿ, (ಲೋಕದ ದೃಷ್ಟಿಯಿಂದ ಬೇರೆ ಬೇರೆ ಎಂಬಂತೆ ತೋರಿಸಿಕೊಂಡು), **ತತಃ** ಆ ಪರಶುರಾಮನ ದಸೆಯಿಂದ, **ಅತಿದುರ್ಗಂ** ಶತ್ರುಗಳಿಗೂ ಹೋಗಲು ಅಸಾಧ್ಯವಾದ (ಅಶಕ್ತವಾದ) ಶತ್ರುಗಳಿಗೆ ದುರ್ಗಮವಾದ ಸ್ಥಳ), **ಗೋಮಂತಂ** 'ಗೋಮಂತ' ಎಂಬ (ಪ್ರಸಿದ್ಧವಾದ) ಹೆಸರುಳ್ಳ, **ಪರ್ವತಂ** ಬೆಟ್ಟವನ್ನು **ಶ್ರುತ್ವಾ** ಕೇಳಿ (ತಿಳಿದು), **ತತ್ರ** ಆ ಪರ್ವತಕ್ಕೆ (ಗೋಮಂತ ಎಂಬ ಪರ್ವತವನ್ನು ಕುರಿತು) **ಸಹಾಗ್ರಜಃ** ಅಣ್ಣನಿಂದ ಕೂಡಿದವನಾಗಿ **ಯಯೌ** ಹೋದನು.

**ತಾತ್ಪರ್ಯ :-** ಶ್ರೀಕೃಷ್ಣನು ಅನಂತಶಕ್ತಿ ಸಂಪನ್ನ ಸರ್ವೋತ್ತಮ, ಸದಾ, ನಿರ್ಭೀತ; ಆದರೂ ರಾಜನೀತಿಯನ್ನು ತಿಳಿಸಲೆಂದೂ ಹಾಗೆ ತೆರಳಿ ದಾರಿಯಲ್ಲಿ ಪರಶುರಾಮರೂಪವನ್ನು ಕಂಡು ತಾವಿಬ್ಬರೂ ಒಂದೇ ಆದರೂ, ಕ್ರೀಡೆಗಾಗಿ ಬೇರೆ ಬೇರೆ ಎಂಬಂತೆ ತೋರಿಸಿಕೊಳ್ಳುತ್ತಾ ಗೋಮಂತಪರ್ವತವು ಶತ್ರುಗಳಿಗೆ ದುರ್ಗಮವಾದ ಸ್ಥಳ ಎಂದು ಅವರಿಂದ ಕೇಳಿ, ತಿಳಿದು, ಅಣ್ಣನಾದ ಬಲರಾಮನೊಂದಿಗೆ ಅಲ್ಲಿಗೆ ತೆರಳಿದ.

**ತದಾ ದುಗ್ಧಾಬ್ಧೌ ಸಂಸೃತಿಸ್ಥೈಃ ಸುರಾದ್ಯೈಃ**
**ಪೂಜಾಂ ಪ್ರಾಪ್ತುಂ ಸ್ಥಾನಮೇಷಾಂ ಚ ಯೋಗ್ಯಂ**
**ಮುಕ್ತಸ್ಥಾನಾದಾಪ ನಾರಾಯಣೋಽಜೋ**
**ಬಲಿಶ್ಚಾಗಾತ್ ತತ್ರ ಸಂದ್ರಷ್ಟುಮೀಶಮ್ ॥ ೪ ॥**

**ಅರ್ಥ :-** **ತದಾ** ಗೋಮಂತ ಪರ್ವತ ಗಮನ ಕಾಲದಲ್ಲಿ **ಅಜಃ** ಹುಟ್ಟು ಇಲ್ಲದ, **ನಾರಾಯಣಃ** ನಾರಾಯಣನು, **ಸಂಸೃತಿಸ್ಥೈಃ** ಅಮುಕ್ತರಾದ (ಸಂಸಾರದಲ್ಲಿರುವ), **ಸುರಾದ್ಯೈಃ** ದೇವತೆಗಳು, ಋಷಬಲಿ ಮೊದಲಾದ ಸರ್ವದೈತ್ಯರಿಂದಲೂ, **ಪೂಜಾಂ** ಪೂಜೆಯನ್ನು **ಪ್ರಾಪ್ತಂ** ಹೊಂದಲು (ಪಡೆಯಲು) **ದುಗ್ಧಾಬ್ಧೌ** ಕ್ಷೀರ ಸಮುದ್ರದಲ್ಲಿ ಇರುವ **ಮುಕ್ತಸ್ಥಾನಾತ್** ಮುಕ್ತಸ್ಥಾನದಿಂದ, **ಯೇಷಾಂ** ಅಮುಕ್ತರಿಗೆ, **ಯೋಗ್ಯಮ್** ಯೋಗ್ಯವಾದ **ಸ್ಥಾನಂ** ಸ್ಥಾನವನ್ನು ಕುರಿತು (ಅಮುಕ್ತಸ್ಥಾನವನ್ನು ಕುರಿತು) **ಆಪ** ಆಗಮಿಸಿದನು (ಹೊಂದಿದನು), **ತತ್ರ** ಅಲ್ಲಿಗೆ **ಈಶಂ** ಆ ಸರ್ವೇಶ್ವರನನ್ನು **ಸಂದ್ರಷ್ಟುಂ** ಕಾಣಲು **ಬಲಿಶ್ಚ** ಬಲಿಯೂ ಕೂಡ, **ಅಗಾತ್** ಬಂದನು.

**ತಾತ್ಪರ್ಯ :-** ಆಗ ಕ್ಷೀರ ಸಾಗರದಲ್ಲಿ ಅಮುಕ್ತ ದೇವಾದಿಗಳಿಂದ ಸೇವೆ ಕೈಗೊಳ್ಳಲು ಅವರಿಗೆ ಯೋಗ್ಯವಾದ ಅಮುಕ್ತಸ್ಥಾನಕ್ಕೆ ಮುಕ್ತಸ್ಥಾನದಿಂದ ನಾರಾಯಣನು ಬಂದ. ಆ ಸರ್ವೇಶ್ವರನನ್ನು ಕಾಣಲು ಅಲ್ಲಿಗೆ ಬಲಿಯೂ ಬಂದ.

**ತತ್ರಾಸುರಾವೇಶಮಮುಷ್ಯ ವಿಷ್ಣುಃ**
**ಸಂದರ್ಶಯನ್ ಸುಪ್ತಿಹೀನೋಽಪಿ ನಿತ್ಯಮ್**
**ಸಂಸುಪ್ತವಚ್ಚೆಶ್ಯ ಉದಾರಕರ್ಮಾ**
**ಸಂಜ್ಞಾಯೈ ದೇವಾನಾಂ ಮುಖಮೀಕ್ಷ್ಯಾ ಪ್ರಮೇಯಃ ॥ ೫ ॥**

**ಅರ್ಥ** :- ತತ್ರ ಅಲ್ಲಿಗೆ ಬಂದ **ಅಮುಷ್ಯ** ಬಲಿಗೆ **ಅಸುರಾವೇಶಂ** ಅಸುರಾವೇಶವಿದ್ದುದನ್ನು **ಸಂದರ್ಶಯನ್** ತೋರಿಸುವುದಕ್ಕೆ, **ಉದಾರ ಕರ್ಮಾ** ಉತ್ಕೃಷ್ಟ ಕಾರ್ಯಗಳನ್ನು ಮಾಡುವ **ಅಪ್ರಮೇಯ** ಅಪ್ರಮೇಯನಾದ ವಿಷ್ಣುವು **ಸುಪ್ತಿಹೀನೋऽಪಿ** ತಾನೆಂದು ನಿದ್ದೆ ಇಲ್ಲದವನಾದರೂ **ದೇವಾನಾಂ** ದೇವತೆಗಳಿಗೆ **ಸಂಜ್ಞಾಯೈ** ಸನ್ನೆಗಾಗಿ **ಮುಖಂ** ಮುಖವನ್ನು **ಈಕ್ಷ್ಯ** ನೋಡಿ (ನೀವೂ ನನ್ನಂತೆ ನಿದ್ರೆ ಬಂದವರಂತೆ ನಟಿಸಬೇಕೆಂಬ ಸೂಚನೆ ನೀಡಲು ಇತರದೇವತೆಗಳ ಮುಖವನ್ನು ನೋಡಿದ್ದು) **ಸಂಸುಪ್ತವತ್** ಗಾಢ ನಿದ್ರೆ ಮಾಡುವವನಂತೆ **ಶಿಷ್ಯೇ** ಮಲಗಿದನು.

**ತಾತ್ಪರ್ಯ** :- ಅಲ್ಲಿ ಬಂದ ಬಲಿಗೆ ಅಸುರಾವೇಶವಿದ್ದುದನ್ನು ತೋರಿಸಿ ಕೊಡಲೆಂದು ಉತ್ಕೃಷ್ಟಕಾರ್ಯವನ್ನು ಮಾಡುವ ಅಪ್ರಮೇಯನಾದ ವಿಷ್ಣುವು ತಾನು ಸದಾ ಸುಪ್ತಿಹೀನನಾದರೂ ಆಗ ದೇವತೆಗಳ ಮುಖವನ್ನೊಮ್ಮೆ ಸನ್ನೆಗಾಗಿ ನೋಡಿ, ಗಾಢ ನಿದ್ರೆಯಲ್ಲಿರುವವನಂತೆ ಮಲಗಿಬಿಟ್ಟ.

**ದೇವಾಶ್ಚ ತದ್ಭಾವವಿದೋऽಖಿಲಾಶ್ಚ**
**ನಿಮೀಲಿತಾಕ್ಷಾಃ ಶಯನೇಷು ಶಿಶ್ಯಿರೇ**
**ತದಾ ಬಲಿಸ್ತಸ್ಯ ವಿಷ್ಣೋಃ ಕಿರೀಟ**
**ಮಾದಾಯಾಗಾಜ್ಜಹಸುಃ ಸರ್ವ ದೇವಾಃ ॥ ೬ ॥**

**ಅರ್ಥ** :- **ಅಖಿಲಾಃ** ಎಲ್ಲಾ, **ತದ್ಭಾವವಿದಃ** ಆ ವಿಷ್ಣುವಿನ ಅಭಿಪ್ರಾಯ ತಿಳಿದಿರುವ, **ದೇವಾಃ** ದೇವತೆಗಳೆಲ್ಲರೂ, **ನಿಮೀಲಿತಾಕ್ಷಾಃ** ಮುಚ್ಚಿದ ಕಣ್ಣುಗಳುಳ್ಳವರಾಗಿ, **ಶಯನೇಷು** ಹಾಸಿಗೆಗಳಲ್ಲಿ, **ಶಿಶ್ಯಿರೇ** ಮಲಗಿದರು. **ತದಾ** ಆವಾಗ, **ಬಲಿ** ಬಲಿಯು, **ತಸ್ಯ** ಆ ಯಾವ , **ವಿಷ್ಣೋಃ** ವಿಷ್ಣುವಿನ, **ಕಿರೀಟಂ** ಕಿರೀಟವನ್ನು, **ಆದಾಯ** ತೆಗೆದುಕೊಂಡು, ಎತ್ತಿಕೊಂಡು, **ಅಗಾತ್** ಪಾತಾಲ ಲೋಕವನ್ನು ಕುರಿತು ಹೋದನು, **ಸರ್ವದೇವಾಃ ಚ** ಎಲ್ಲಾ ದೇವತೆಗಳೂ ಕೂಡ, **ಜಹಸುಃ** ನಕ್ಕರು.

**ತಾತ್ಪರ್ಯ** :- ದೇವತೆಗಳೆಲ್ಲರೂ ಹರಿಯ ಅಭಿಪ್ರಾಯ ತಿಳಿದು ಕಣ್ಣು ಮುಚ್ಚಿ ಹಾಸಿಗೆಗಳಲ್ಲಿ ಮಲಗಿದರು. ಆಗ ಬಲಿ ವಿಷ್ಣುವಿನ ಕಿರೀಟವನ್ನು ಎತ್ತಿಕೊಂಡು ಹೊರಟುಹೋದ. ಎಲ್ಲ ದೇವತೆಗಳೂ ನಕ್ಕರು.

**ನಾರಾಯಣೆ ಸರ್ವದೇವೈಃ ಸಮೇತೇ**
**ಬ್ರಹ್ಮಾದಿಭಿರ್ಹಾಸಮಾನೇ ಸುಪರ್ಣಃ**
**ಗತ್ವಾ ಪಾತಾಲಂ ಯುಧಿ ಜಿತ್ವಾ ಬಲಿಂ ಚ**
**ಕಿರೀಟಮಾದಾಯಾಭ್ಯಯಾದ್ ಯತ್ರ ಕೃಷ್ಣಃ ॥ ೭ ॥**

**ಅರ್ಥ** :- **ಬ್ರಹ್ಮಾದಿಭಿಃ** ಬ್ರಹ್ಮನೇ ಮೊದಲಾದ **ಸರ್ವದೇವೈಃ** ಎಲ್ಲಾ ದೇವತೆಗಳಿಂದ, **ಸಮೇತೇ** ಕೂಡಿದ **ನಾರಾಯಣೇ** ನಾರಾಯಣನು, **ಹಾಸಮಾನೇ ಸತಿ** ನಗುತ್ತಿರಲು (ನಗುತ್ತಿದ್ದಾಗ), **ಸುಪರ್ಣಃ** ಗರುಡನು, **ಪಾತಾಲಂ** ಪಾತಾಲ ಲೋಕವನ್ನು **ಗತ್ವಾ** ಹೋಗಿ, **ಯುಧಿ** ಯುದ್ಧದಲ್ಲಿ **ಬಲಿಂ** ಬಲಿಯನ್ನು **ಜಿತ್ವಾ** ಗೆದ್ದು **ಕಿರೀಟಂ** ಕಿರೀಟವನ್ನು **ಆದಾಯ** ತೆಗೆದುಕೊಂಡು, **ಕೃಷ್ಣಃ ಯತ್ರ ಅಸ್ತಿ** ಕೃಷ್ಣ ಎಲ್ಲಿ ಇದ್ದಾನೋ, **ತತ್ರ** ಆ ಪ್ರದೇಶಕ್ಕೆ (ಗೋಮಂತ ಪರ್ವತದಲ್ಲಿ), **ಅಭ್ಯಯಾತ್** ಬಂದನು.

**ತಾತ್ಪರ್ಯ** :- ನಾರಾಯಣನೊಂದಿಗೆ ಬ್ರಹ್ಮಾದಿ ಸಮಸ್ತ ದೇವತೆಗಳೂ ನಗುತ್ತಿರಲು ಗರುಡನು ಪಾತಾಳಕ್ಕೆ ತೆರಳಿ ಯುದ್ಧದಲ್ಲಿ ಬಲಿಯನ್ನು ಪರಾಭವಗೊಳಿಸಿ, ಕಿರೀಟವನ್ನು ತೆಗೆದುಕೊಂಡು ಶ್ರೀ ಕೃಷ್ಣನಿರುವಲ್ಲಿಗೆ ಬಂದ.

**ತತ್ ತಸ್ಯ ಶೀರ್ಷ್ಣಿ ಪ್ರತಿಮುಚ್ಯ ನತ್ವಾ**
**ಖಗಃ ಸ್ತುತ್ವಾ ದೇವದೇವಂ ರಮೇಶಮ್**
**ಸ್ಮೃತ ಆಗಚ್ಛೇತ್ಯೇವ ವಿಸರ್ಜಿತೋಽಮುನಾ**
**ಯಯೌ ದುಗ್ಧಾಬ್ಧಿಂ ಯತ್ರ ನಾರಾಯಣೋಽಸೌ ॥ ೮ ॥**

**ಅರ್ಥ** :- **ಖಗಃ** ಗರುಡನು, **ತತ್** ಆ ಕಿರೀಟವನ್ನು, **ತಸ್ಯ** ಆ ಕೃಷ್ಣನ **ಶೀರ್ಷ್ಣಿ** ತಲೆಯಮೇಲೆ (ತಲೆಯಲ್ಲಿ), **ಪ್ರತಿಮುಚ್ಯ** ಇಟ್ಟು, **ದೇವದೇವಂ** ದೇವದೇವನಾದ, **ರಮೇಶಂ** ರಮೇಶನನ್ನು **ನತ್ವಾ** ನಮಿಸಿ, **ಸ್ತುತ್ವಾ** ಸ್ತೋತ್ರಮಾಡಿ, **ತ್ವಂ** ನೀನು, **ಮಯಾ** ನನ್ನಿಂದ, **ಸ್ಮೃತಃ** ನೆನೆಸಲ್ಪಟ್ಟಾಗ (ನೆನೆದಾಗ) **ಆಗಚ್ಛ** ಬಾ, **ಇತ್ಯೆವ** ಹೀಗೆಂದು ಹೇಳಿ, **ಅಮುನಾ** ಕೃಷ್ಣನಿಂದ, **ವಿಸರ್ಜಿತಃ** ಕಳುಹಿಸಲ್ಪಟ್ಟವನಾಗಿ, **ಯತ್ರ** ಯಾವ, ಕ್ಷೀರಸಾಗರದಲ್ಲಿ, **ಅಸೌ** ಈ ಕೃಷ್ಣರೂಪಿಯಾದ, **ನಾರಾಯಣಃ** ನಾರಾಯಣನು, **ತಿಷ್ಠತಿ** ಇದ್ದಾನೋ, **ತಂ** ಆ **ದುಗ್ಧಾಬ್ಧಿಂ** ಕ್ಷೀರಸಮುದ್ರವನ್ನು ಕುರಿತು, **ಯಯೌ** ಹೋದನು.

**ತಾತ್ಪರ್ಯ :-** ಗರುಡ ಅದನ್ನು ಶ್ರೀ ಕೃಷ್ಣನ ಶಿರಸ್ಸಿನ ಮೇಲಿರಿಸಿ ದೇವದೇವನೂ, ಲಕ್ಷ್ಮೀಪತಿಯೂ ಆದ ಅವನನ್ನು ಸ್ತುತಿಸಿ ''ನೆನೆದಾಗ ಬಾ' ಎಂದು ಕೃಷ್ಣನಿಂದ ಕಳುಹಿಸಲ್ಪಟ್ಟವನಾಗಿ ಕ್ಷೀರಸಮುದ್ರಕ್ಕೆ ನಾರಾಯಣನಿದ್ದಲ್ಲಿಗೆ ಬಂದ.

**ಕಿರೀಟಂ ತತ್ ಕೃಷ್ಣಮೂರ್ಧ್ನಿ ಪ್ರವಿಷ್ಟಂ**
**ತತ್ತುಲ್ಯಮಾಸೀತ್ ತಸ್ಯ ರೂಪೇಷ್ವಭೇದಾತ್**
**ತದಿಚ್ಛಯಾ ಚೈವ ನಾರಾಯಣಸ್ಯ**
**ಶೀರ್ಷ್ಣ್ಯಪ್ಯಾಸೀದ್ಯುಗಪದುಗ್ಧವಾರ್ಧೌ ॥ ೧೦ ॥**

**ಅರ್ಥ :- ಕೃಷ್ಣಸ್ಯ** ಕೃಷ್ಣನ, **ಮೂರ್ಧ್ನಿ** ತಲೆಯ ಮೇಲೆ, **ಪ್ರವಿಷ್ಟಂ** ಇಡಲ್ಪಟ್ಟ ಸ್ಥಾಪಿತವಾದ, **ತತ್** ನಾರಾಯಣ ಶಿರಸ್ಸಿನಲ್ಲಿರುವ **ಕಿರೀಟಂ** ಕಿರೀಟವು, **ತಸ್ಯ** ಆ ಕೃಷ್ಣನ ಶಿರಸ್ಸಿಗೆ, **ತುಲ್ಯಂ** ಸಮವಾಯಿತು (ಸರಿಯಾಗಿ ಹೊಂದಿಕೊಂಡಿತು), **ಕುತಃ** ಏಕೆಂದರೆ, **ತಸ್ಯ** ಅ ನಾರಾಯಣ, **ರೂಪೇಷು** ಮತ್ಸ್ಯಾದಿ ರೂಪಗಳಲ್ಲಿ (ಅವತಾರಗಳಲ್ಲಿ), **ಅಭೇದಾತ್** ಭೇದವಿಲ್ಲವಾದ್ದ ರಿಂದ, **ತದಿಚ್ಛಯಾ ಏವ** ಆ ಕೃಷ್ಣನ, ಇಚ್ಛೆಯಿಂದಲೇನೇ, **ತಸ್ಯ** ಆ ಕೃಷ್ಣನ ಕಿರೀಟವು, **ಕ್ಷೀರಾಬ್ಧೌ** ಕ್ಷೀರ ಸಮುದ್ರದಲ್ಲಿ, **ಸ್ಥಿತಸ್ಯ** ಇರುವ, **ನಾರಾಯಣಸ್ಯ** ನಾರಾಯಣನ **ಶೀರ್ಷ್ಣಿ** ತಲೆಯ ಮೇಲೂ (ಅದೇ ಕಿರೀಟವು), **ಯುಗಪದ್ ಏವ** ಏಕಕಾಲದಲ್ಲಿಯೇ, **ಆಸೀತ್** ಇತ್ತು.

**ತಾತ್ಪರ್ಯ :-** ಶ್ರೀ ಹರಿಯ ರೂಪಗಳಲ್ಲಿ ಭೇದವಿಲ್ಲವಾದ್ದರಿಂದ ಶ್ರೀಕೃಷ್ಣನ ತಲೆಯ ಮೇಲೆ ಇರಿಸಲ್ಪಟ್ಟ ಆ ಕಿರೀಟ ಅದಕ್ಕೆ ಸರಿಯಾಗಿ ಹೊಂದಿಕೊಂಡಿತು. ಆ ಕೃಷ್ಣನ ಇಚ್ಛೆಯಿಂದಲೇ ಅದು ಕ್ಷೀರಸಾಗರದಲ್ಲಿನ ನಾರಾಯಣ ತಲೆಯ ಮೇಲೂ ಅದೇ ಕಾಲದಲ್ಲಿ ಕುಳಿತುಕೊಂಡಿತು.

**ಪೂರ್ವಂ ಪ್ರಾಪ್ತಾನ್ಯೇವ ದಿವ್ಯಾಯುಧಾನಿ**
**ಪುನರ್ವೈಕುಂಠಂ ಲೋಕಮಿತಾನಿ ಭೂಯಃ**
**ತದಾವರ್ತೇರೂ ರೌಹಿಣೇಯಸ್ಯ ಚೈವಂ**
**ಭಾರ್ಯಾಪ್ಯಾಗಾದ್ ವಾರುಣೀ ನಾಮ ಪೂರ್ವಾ ॥ ೧೦ ॥**

**ಅರ್ಥ :- ಪೂರ್ವಂ** ಹಿಂದೆ, ಜರಾಸಂಧನ ಜೊತೆಗೆ ಮೊದಲನೆಯ ಯುದ್ಧದಲ್ಲಿ, **ಪ್ರಾಪ್ತಾನಿ** ಬಂದಿದ್ದ ದಿವ್ಯಾಯುಧಗಳು, **ಪುನಃ** ಯುದ್ಧ ಆದನಂತರ ತಿರುಗಿ, **ವೈಕುಂಠಂ ಲೋಕಂ** ವೈಕುಂಠ ಲೋಕವನ್ನು ಕುರಿತು, **ಇತಾನಿ** ಹೋಗಿದ್ದವು, **ಭೂಯಃ** ಮತ್ತೊಮ್ಮೆ (ಗೋಮಂತ ಪರ್ವತ ಅವಸ್ಥಾನ

ಕಾಲದಲ್ಲಿ) ಕೃಷ್ಣಂ ಪ್ರತಿ ಕೃಷ್ಣನನ್ನು ಕುರಿತು **ಅವತೇರುಃ** ಅದೆ ಆಯುಧಗಳು ಇಳಿದು ಬಂದವು, **ತದಾ ಏವ** ಅದೇ ಸಮಯದಲ್ಲಿಯೇ **ರೌಹಿಣೇಯಸ್ಯ** ಬಲರಾಮನ, **ದಿವ್ಯಾಯುಧಾನಿ ಚ** ದಿವ್ಯಾಯುಧಗಳೂ ಕೂಡ, **ಇತಾನಿ** ಬಂದವು, **ತಸ್ಯ** ಆ ಬಲರಾಮನ, **ಪೂರ್ವಭಾರ್ಯಾ** ಹಿಂದೆ ಮೂಲರೂಪದಲ್ಲಿ ಪತ್ನಿಯಾಗಿದ್ದ **ವಾರುಣೀ ಇತಿ ನಾಮ** ವಾರುಣೀ ಎಂದು ಪ್ರಸಿದ್ಧಳಾಗಿದ್ದ **ಸಾಪಿ** ಆ ವಾರುಣೀ ಎಂಬುವಳೂ ಕೂಡ, **ಅಗಾತ್** ಮೂಲ ರೂಪದಿಂದ ಬಂದಳು.

**ತಾತ್ಪರ್ಯ** :- ಹಿಂದೆ ಬಂದಿದ್ದ ಕೃಷ್ಣನ ದಿವ್ಯಾಯುಧಗಳು ತಿರುಗಿ ವೈಕುಂಠಲೋಕಕ್ಕೆ ಹೋಗಿದ್ದವು. ಅವು ಈಗಲೂ ಬಂದಿಳಿದುವು. ಬಲರಾಮನಿಗೆ ಹಾಗೆ ಅವನ ದಿವ್ಯಾಯುಧಗಳು ಬಂದಿಳಿದುವು. ಹಿಂದೆ ಅವನ ಪತ್ನಿಯಾಗಿದ್ದ ವಾರುಣೀ ಎಂಬುವಳೂ ಬಂದಳು.

**ಸೈವಾಪರಂ ರೂಪಮಾಸ್ಥಾಯ ಚಾಗಾತ್**
**ಶ್ರೀರಿತ್ಯಾಖ್ಯಂ ಸೇಂದಿರಾವೇಶಮಗ್ರ್ಯಮ್**
**ಕಾಂತಿಶ್ಚಾಗಾತ್ ತಸ್ಯ ಸೋಮಸ್ಯ ಚಾನ್ಯಾ**
**ಭಾರ್ಯಾದ್ವಯೋಃ ಪೂರ್ವತನಾ ಸುರೂಪಾ ॥ ೧೧ ॥**

**ಅರ್ಥ** :- **ಸಾ ಏವ** ಆ ವಾರುಣೆಯೇ, **ಸೇಂದಿರಾವೇಶಂ** ಲಕ್ಷ್ಮೀದೇವಿಯ ಆವೇಶಯುಕ್ತವಾದ, **ಶ್ರೀರಿತ್ಯಾಖ್ಯಂ** ಶ್ರೀ ಎಂಬ ಹೆಸರಿನ, **ಅಗ್ರ್ಯಂ** ಉತ್ತಮವಾದ, **ಅಪರಂ** ಇನ್ನೊಂದು, **ರೂಪಂ** ರೂಪವನ್ನು **ಆಸ್ಥಾಯ** ಹೊಂದಿ (ತಾಳಿ), **ತಸ್ಯ** ಆ ಬಲರಾಮನ (ಸಮೀಪಕ್ಕೆ), **ಅಗಾತ್** ಬಂದಳು, **ಕಾಂತಿ** ಕಾಂತಿ ಎಂಬ ಹೆಸರಿನ, **ತಸ್ಯ** ರಾಮನ, **ಭಾರ್ಯ** ಮತ್ತೊಬ್ಬ ಹೆಂಡತಿಯೂ, **ಅಗಾತ್** ನಾಗಲೋಕದಿಂದ ಬಂದಳು, **ಸೋಮಸ್ಯ ಚ** ಚಂದ್ರನ **ಭಾರ್ಯಾ ಚ** ಹೆಂಡತಿಯಾದರೂ, **ಅನ್ಯಾ** ರಾಮನ ಹೆಂಡತಿಗಿಂತಳೂ ಭಿನ್ನಳಾಗಿದ್ದಾಳೆ, (**ಅರ್ಥಾತ್** ರಾಮನ ಹೆಂಡತಿಯು ಸೋಮನ ಹೆಂಡತಿಗಿಂತಲೂ ಭಿನ್ನಳು). **ಭಾರ್ಯಾದ್ವಯೋಃ** ವಾರುಣಿ ಕಾಂತಿ ಇವರಿಬ್ಬರಲ್ಲಿ **ಪೂರ್ವತನಾ** ಮೊದಲನೆಯವಳು, (ಜ್ಯೇಷ್ಠಳಾದವಳು), ವಾರುಣಿಯೂ **ಸುರೂಪಾ** ಹೆಚ್ಚು ಸುಂದರಿ.

**ತಾತ್ಪರ್ಯ** :- ವಾರುಣಿಯೇ ರಮಾವೇಶಯುಕ್ತವಾದ ಉತ್ತಮವಾದ ಶ್ರೀ ಎಂಬ ಹೆಸರಿನ ಇನ್ನೊಂದು ರೂಪ ತಾಳಿಯೂ ಬಲರಾಮನ ಬಳಿಗೆ ಬಂದಳು. ಕಾಂತಿ ಎಂಬ ಹೆಸರಿನ ಬಲರಾಮನ ಪತ್ನಿಯೂ ನಾಗಲೋಕದಿಂದ

ಬಂದಳು. ಚಂದ್ರನ ಮಡದಿಯಾದ ಕಾಂತಿಯೂ ಬಂದಳು ಇವರಿಬ್ಬರಲ್ಲಿ ಮೊದಲನೆಯವಳು ಹೆಚ್ಚು ಸುಂದರಿ.

**ತಾಭೀ ರಾಮೋ ಮುಮುದೇ ತತ್ರ ತಿಷ್ಠನ್**
**ಶಶಾಂಕಪೂಗೋದ್ರಿಕ್ತಕಾಂತಿಃ ಸುಧಾಮಾ**
**ತಸ್ಯಾ ವಾರುಣ್ಯಾಃ ಪ್ರತಿಮಾ ಪೇಯರೂಪಾ**
**ಕಾದಂಬರೀ ವಾರುಣೀಂ ತಾಂ ಪಪೌ ಸಃ ॥ ೧೨ ॥**

**ಅರ್ಥ :- ಶಶಾಂಕಪೂಗೋದ್ರಿಕ್ತ ಕಾಂತಿಃ, ಶಶಾಂಕಪೂಗ** ಚಂದ್ರನ ಸಮೂಹವು, ಈ ಚಂದ್ರನ ಸಮೂಹಕ್ಕಿಂತಲೂ **ಉದ್ರಿಕ್ತ** ಉತ್ಕೃಷ್ಟವಾದ, **ಕಾಂತಿಃ** ಕಾಂತಿಯುಳ್ಳ, **ಸುಧಾಮಾ** ಬಲರಾಮನು, **ತತ್ರ** ಗೋಮಂತ ಪರ್ವತದಲ್ಲಿ **ತಿಷ್ಠನ್** ವಾಸಮಾಡುತ್ತಾ **ತಾಭಿಃ** ವಾರುಣಿ ಶ್ರೀಕಾಂತಿರೊಂದಿಗೆ **ಮುಮುದೇ** ಆನಂದಿಸಿದ, **ತಸ್ಯಾಃ** ಆ ವಾರುಣಿಯ, **ಪ್ರತಿಮಾ** ಅಭಿಮನ್ಯಮಾನವಾದ (ಪ್ರತೀಕವಾದ), **ಪೇಯರೂಪಾ** ಪಾನಯೋಗ್ಯ ಮದ್ಯಸ್ವರೂಪವಾದ, **ಯಾಃ** ಯಾವ, **ಕಾದಂಬರೀ** ಕದಂಬ ಎಂಬ ಕುಸುಮದಿಂದ ಉತ್ಪನ್ನವಾದ **ವಾರುಣೀಂ** ಸಮುದ್ರದಿಂದ ಉತ್ಪನ್ನಳಾದುದರಿಂದ, ವರುಣನ ಮಗಳಾಗಿ ಜನಿಸಿದ್ದರಿಂದ ವಾರುಣೀ ಎಂಬ ಹೆಸರನ್ನು ಪಡೆದು, ಶೇಷನ ಹೆಂಡತಿಯಾದ, ಅಭಿಮನ್ಯಮಾನಳಾದ್ದರಿಂದಲೂ ವಾರುಣಿ ಎಂಬ ಹೆಸರನ್ನು ಹೊಂದಿದ, ಕಾದಂಬರಿಯನ್ನು (ಮದ್ಯವನ್ನು) **ಪಪೌ** ಕುಡಿದನು.

**ತಾತ್ಪರ್ಯ :-** ಚಂದ್ರ ಸಮೂಹಕ್ಕಿಂತ ಹೆಚ್ಚಿನ ಕಾಂತಿ ಉಳ್ಳ ಬಲರಾಮ, ಆ ಗೋಮಂತ ಪರ್ವತದಲ್ಲಿದ್ದು ವಾರುಣೀ ಶ್ರೀಕಾಂತಿಯರೊಡನೆ ಆನಂದಿಸಿದ. ವಾರುಣಿಯ ಪ್ರತೀಕವೇ ಪೇಯರೂಪವಾದ ಕಾದಂಬರಿ. ಬಲರಾಮ ಆ ಕಾದಂಬರಿಯನ್ನು ಕುಡಿದ.

**ಏವಂ ತಯೋಃ ಕ್ರೀಡತೋಃ ಸ್ವೈರಮತ್ರ**
**ರಾಜನ್ಯವೃಂದಾನುಗತೋ ಜರಾಸುತಃ**
**ಗಿರಿಂ ಗೋಮಂತಂ ಪರಿವಾರ್ಯಾದಹತ್ ತಂ**
**ದೃಷ್ಟ್ವಾ ದೇವೌ ಪುಪ್ಲುವತುರ್ಬಲಾಢ್ಯೌ ॥ ೧೩ ॥**

**ಅರ್ಥ :-** ಏವಂ ಹೀಗೆ, **ಅತ್ರ** ಈ ಗೋಮಂತ ಪರ್ವತದಲ್ಲಿ **ತಯೋಃ** ಆ ಕೃಷ್ಣರಾಮರು, **ಸ್ವೈರಂ** ಸ್ವೇಚ್ಛಾನುಸಾರವಾಗಿ **ಕ್ರೀಡತೋಃ ಸತೋಃ** ವಿಹರಿಸುತ್ತಿದ್ದಾಗ, **ರಾಜನ್ಯವೃಂದಾನುಗತಃ ರಾಜನ್ಯಾನಾಂ** ರಾಜರುಗಳ,

ವೃಂದೇನ ಸಮೂಹದಿಂದ, **ಅನುಗತಃ** ಸಹಿತನಾಗಿ **ಜರಾಸುತಃ** ಜರಾಸಂಧನು, **ಗೋಮಂತಂ** ಗೋಮಂತ ಎಂಬ, **ಗಿರಿಂ** ಪರ್ವತವನ್ನು **ಪರಿವಾರ್ಯ** ಸುತ್ತುವರೆದು, **ಅದಹತ್** ಸುಟ್ಟನು, **ತಂ** ಸುಡುತ್ತಿರುವ ಆ ಪರ್ವತವನ್ನು **ದೃಷ್ಟ್ವಾ** ನೋಡಿ, **ಬಲಾಢ್ಯೌ** ಬಲಾಢ್ಯರಾದ, **ದೇವೌ** ಕೃಷ್ಣರಾಮರು, **ಪಪ್ಲುವತಃ** ಕೆಳಗೆ ಹಾರಿದರು (ಜಿಗಿದರು)

**ತಾತ್ಪರ್ಯ** :- ಹೀಗೆ ಅವರಿಬ್ಬರೂ ಸ್ವೇಚ್ಛೆಯಾಗಿ ಕ್ರೀಡಿಸುತ್ತಿದ್ದಂತೆ ರಾಜವೃಂದದಿಂದ ಒಡಗೂಡಿದ ಜರಾಸಂಧ ಗೋಮಂತ ಪರ್ವತವನ್ನು ಸುತ್ತುವರೆದು, ಅದಕ್ಕೆ ಬೆಂಕಿ ಇಟ್ಟ. ಅದನ್ನು ನೋಡಿ ಬಲಾಢ್ಯರಾದ ಶ್ರೀಕೃಷ್ಣರಾಮರು ಬೆಟ್ಟವನ್ನು ಒತ್ತಿ ಮೇಲಕ್ಕೆ ನೆಗೆದರು.

**ಗಿರಿಸ್ತಾಭ್ಯಾಂ ಪೀಡಿತಃ ಸನ್ ನಿಮಗ್ನೋ**
**ಭೂಮೌ ಪದ್ಭ್ಯಾಂ ಯೋಜನೈಕಾದಶಂ ಸಃ ।**
**ನಿಷ್ಪೀಡಿತಾಜ್ಜಲಧಾರೋದ್ಗತಾಸ್ಮಾದ್**
**ವಹ್ನಿಂ ವ್ಯಾಪ್ತಂ ಶಮಯಾಮಾಸ ಸರ್ವಮ್ ॥ ೧೪ ॥**

**ಅರ್ಥ** :- **ತಾಭ್ಯಾಂ** ಕೃಷ್ಣರಾಮರ, **ಪದ್ಭ್ಯಾಂ** ಕಾಲುಗಳ ತುಳಿತದಿಂದ, **ಸಃ ಗಿರಿಃ** ಆ ಬೆಟ್ಟವು **ಪೀಡಿತಃ ಸನ್** ಪೀಡಿಸಲ್ಪಟ್ಟದ್ದಾಗಿ, **ಯೋಜನೈಕಾದಶಂ** ಹನ್ನೊಂದು ಯೋಜನೆಗಳಷ್ಟು **ಭೂಮೌ** ಭೂಮಿಯಲ್ಲಿ **ನಿಮಗ್ನಃ ಅಭೂತ್** ಪ್ರವೇಶಿಸಿತು (ಹುದುಗಿತು), ಪ್ರವಿಷ್ಟವಾಯಿತು. **ನಿಷ್ಪೀಡಿತಾತ್** ಪೀಡಿಸಲ್ಪಟ್ಟಿದ್ದರಿಂದ, **ಅಸ್ಮಾತ್** ಬೆಟ್ಟದೆಸೆಯಿಂದ, **ಜಲಧಾರಾ** ಜಲಧಾರೆಯು, **ಉದ್ಗತಾ** ಮೇಲಕ್ಕೆ ಬರಲ್ಪಟ್ಟಿತು, **ಸರ್ವಂ** ಎಲ್ಲ ಕಡೆಯಲ್ಲಿ **ವ್ಯಾಪ್ತಂ** ವ್ಯಾಪ್ತವಾದ, **ವಹ್ನಿಂ** ಬೆಂಕಿಯನ್ನು **ಶಮಯಾಮಾಸ** ಆರಿಸಿತು.

**ತಾತ್ಪರ್ಯ** :- ಅವರ ಪಾದಗಳ ಒತ್ತಡದಿಂದ ಬೆಟ್ಟ ಹನ್ನೊಂದು ಯೋಜನದಷ್ಟು ನೆಲದೊಳಗೆ ಹುದುಗಿತು. ಬೆಟ್ಟವನ್ನು ಒತ್ತಿದ್ದರಿಂದ ನೀರಧಾರೆ ಮೇಲೆದ್ದು ಬಂದು ಹಬ್ಬಿದ ಎಲ್ಲ ಬೆಂಕಿಯನ್ನು ಆರಿಸಿತು.

**ಸೇನಾಂ ಪ್ರವಿಷ್ಟೌ ಸರ್ವ ರಾಜನ್ಯವೃಂದಂ**
**ವ್ಯಮಥ್ನಾತಾಂ ದೇವವರೌ ಸ್ವಶಸ್ತ್ರೈಃ ।**
**ತತ್ರೈವ ಹಂಸೋ ಡಿಭಕಶ್ಚೈಕಲವ್ಯಃ**
**ಸಕೀಚಕಸ್ತೌ ಶಿಶುಪಾಲಪೌಂಡ್ರಕೌ ॥ ೧೫ ॥**

ಭೌಮಾತ್ಮಜೋ ದಂತವಕ್ರಶ್ಚ ರುಕ್ಮೀ
ಸೌಭಾಧಿಪೋ ಮೈಂದಮೈಂದಾನುಜೌ ಚ
ಅನ್ಯೇ ಚ ಯೇ ಪಾರ್ಥಿವಾಃ ಸರ್ವ ಏವ
ಕ್ರೋಧಾತ್ ಕೃಷ್ಣಂ ಪರಿವಾರ್ಯಾಭ್ಯವರ್ಷನ್ ॥ ೧೬ ॥

ಶಸ್ತ್ರೈರಸ್ತ್ರೈರ್ದ್ರುಮಪೂಗೈಃ ಶಿಲಾಭಿರ್ಭಕ್ತಾಶ್ಚ
ಯೇ ಶಲ್ಯ ಬಾಹ್ಲೀಕ ಮುಖ್ಯಾಃ ।
ಸಸೋಮದತ್ತಾಃ ಸೌಮದತ್ತಿರ್ವಿರಾಟಃ
ಪಾಂಚಾಲರಾಜಶ್ಚ ಜರಾಸುತಸ್ಯ,
ಭಯಾತ್ ಕೃಷ್ಣಂ ಶರವರ್ಷೈರವರ್ಷನ್
ಕಾರಾಗೃಹೇ ವಾಸಿತಾ ಮಾಗಧೇನ ॥ ೧೭ ॥

**ಅರ್ಥ** :- **ದೇವವರೌ** ದೇವೋತ್ತಮರಾದ ಕೃಷ್ಣರಾಮರು, **ಸೇನಾಂ** ಜರಾಸಂಧನ ಸೈನ್ಯವನ್ನು **ಪ್ರವಿಷ್ಟೌ** ಪ್ರವೇಶಿಸಿದವರಾಗಿ **ಸ್ವಶಸ್ತ್ರೈಃ** ತಮ್ಮ ಶಸ್ತ್ರಗಳಿಂದ **ಸರ್ವರಾಜನ್ಯವೃಂದಂ** ಎಲ್ಲಾ ರಾಜರುಗಳ ಸಮೂಹವನ್ನು **ವ್ಯಮಥ್ನಾತಾಂ** ಪುಡಿಮಾಡಿದರು, **ತತ್ರೈವ** ಆವಾಗಲೇ **ಹಂಸಃ ಡಿಭಕ ಏಕಲವ್ಯ ಸಕೀಚಕಃ** ಹಂಸ ಡಿಭಕ ಹಾಗೆ ಕೀಚಕನಿಂದ ಕೂಡಿದ ಏಕಲವ್ಯನು, **ತೌ** ಪ್ರಸಿದ್ಧರಾದ ಅಥವಾ (ಕೃಷ್ಣನಬಂಧುಗಳಾದ) **ಶಿಶುಪಾಲ ಪೌಂಡ್ರಕೌ** ಶಿಶುಪಾಲ, ಪೌಂಡ್ರಕರು, **ಭೌಮಾತ್ಮಜಃ** ಭಗದತ್ತನು, **ಚ** ಮತ್ತು **ದಂತವಕ್ರ** ದಂತವಕ್ರನು, **ರುಕ್ಮೀ** ರುಕ್ಮಿಯು, **ಸೌಭಾಧಿಪಃ** ಸಾಲ್ವನು, **ಮೈಂದ ಮೈಂದಾನುಜೌ** ಮೈಂದ ಮತ್ತು ವಿವಿದರು, **ಚ** ಮತ್ತು, **ಅನ್ಯೈಃ** ಬೇರೆ, **ಯೇ ಪಾರ್ಥಿವಾಃ ಸಂತಿ** ರಾಜರು ಯಾರಿದ್ದಾರೋ, **ತೇ ಸರ್ವೇ** ಆ ಎಲ್ಲಾ ರಾಜರುಗಳೂ ಕೂಡ, **ಕೃಷ್ಣಂ** ಕೃಷ್ಣನನ್ನು **ಪರಿವಾರ್ಯ** ಸುತ್ತುವರಿದು, **ದ್ರುಮಪೂಗೈಃ** ಮರಗಳ ಸಮೂಹಗಳಿಂದ, **ಶಿಲಾಭಿಃ** ಕಲ್ಲುಗಳಿಂದ **ಶಸ್ತ್ರೈಃ** ಶಸ್ತ್ರಗಳಿಂದ, **ಕ್ರೋಧಾತ್** ಕೃಷ್ಣನ ಮೇಲಿನ ಕೋಪದಿಂದ, **ಅಭ್ಯವರ್ಷನ್** ಮಳೆಗರೆದರು (ಸುರಿಸಿದರು), **ಸಸೋಮದತ್ತಾಃ** ಸೋಮದತ್ತನಿಂದ ಕೂಡಿದ **ಸೌಮಿದತ್ತಿಃ** ಭೂರಿಶ್ರವನು, **ವಿರಾಟಃ** ವಿರಾಟನು, **ಪಾಂಚಾಲರಾಜಃ** ದ್ರುಪದನು, **ಶಲ್ಯಬಾಹ್ಲಿಕಮುಖ್ಯಾಃ ಯೇ, ಪಾರ್ಥಿವಾ** ಶಲ್ಯ ಬಾಹ್ಲೀಕ ಇವರೇ ಮೊದಲಾದ ಯಾವ ರಾಜರುಗಳಿದ್ದಾರೋ, **ಏತೇ ಭಕ್ತಾಃ ಅಪಿ** ಇವರು ಕೃಷ್ಣನ ಭಕ್ತರಾಗಿದ್ದರೂ ಕೂಡ, **ಜರಾಸುತಸ್ಯ** ಜರಾಸಂಧನ, **ಭಯಾತ್** ಕ್ರೋಧದಿಂದ, **ಶರವರ್ಷೈಃ** ಬಾಣಗಳ ಮಳೆಯನ್ನು **ಅವರ್ಷನ್** ಸುರಿಸಿದರು,

ವೃಂದೇನ ಸಮೂಹದಿಂದ, **ಅನುಗತಃ** ಸಹಿತನಾಗಿ **ಜರಾಸುತಃ** ಜರಾಸಂಧನು, **ಗೋಮಂತಂ** ಗೋಮಂತ ಎಂಬ, **ಗಿರಿಂ** ಪರ್ವತವನ್ನು **ಪರಿವಾರ್ಯ** ಸುತ್ತುವರೆದು, **ಅದಹತ್** ಸುಟ್ಟನು, **ತಂ** ಸುಡುತ್ತಿರುವ ಆ ಪರ್ವತವನ್ನು **ದೃಷ್ಟ್ವಾ** ನೋಡಿ, **ಬಲಾಢ್ಯೌ** ಬಲಾಢ್ಯರಾದ, **ದೇವೌ** ಕೃಷ್ಣರಾಮರು, **ಪಪ್ಲುವತಃ** ಕೆಳಗೆ ಹಾರಿದರು (ಜಿಗಿದರು)

**ತಾತ್ಪರ್ಯ** :- ಹೀಗೆ ಅವರಿಬ್ಬರೂ ಸ್ವೇಚ್ಛೆಯಾಗಿ ಕ್ರೀಡಿಸುತ್ತಿದ್ದಂತೆ ರಾಜವೃಂದದಿಂದ ಒಡಗೂಡಿದ ಜರಾಸಂಧ ಗೋಮಂತ ಪರ್ವತವನ್ನು ಸುತ್ತುವರೆದು, ಅದಕ್ಕೆ ಬೆಂಕಿ ಇಟ್ಟ. ಅದನ್ನು ನೋಡಿ ಬಲಾಢ್ಯರಾದ ಶ್ರೀಕೃಷ್ಣರಾಮರು ಬೆಟ್ಟವನ್ನು ಒತ್ತಿ ಮೇಲಕ್ಕೆ ನೆಗೆದರು.

**ಗಿರಿಸ್ತಾಭ್ಯಾಂ ಪೀಡಿತಃ ಸನ್ ನಿಮಗ್ನೋ**
**ಭೂಮೌ ಪದ್ಭ್ಯಾಂ ಯೋಜನೈಕಾದಶಂ ಸಃ ।**
**ನಿಷ್ಪೀಡಿತಾಜ್ಜಲಧಾರೋದ್ಗತಾಸ್ಮಾದ್**
**ವಹ್ನಿಂ ವ್ಯಾಪ್ತಂ ಶಮಯಾಮಾಸ ಸರ್ವಮ್ ॥ ೧೪ ॥**

**ಅರ್ಥ** :- **ತಾಭ್ಯಾಂ** ಕೃಷ್ಣರಾಮರ, **ಪದ್ಭ್ಯಾಂ** ಕಾಲುಗಳ ತುಳಿತದಿಂದ, **ಸಃ ಗಿರಿಃ** ಆ ಬೆಟ್ಟವು **ಪೀಡಿತಃ ಸನ್** ಪೀಡಿಸಲ್ಪಟ್ಟದ್ದಾಗಿ, **ಯೋಜನೈಕಾದಶಂ** ಹನ್ನೊಂದು ಯೋಜನೆಗಳಷ್ಟು **ಭೂಮೌ** ಭೂಮಿಯಲ್ಲಿ **ನಿಮಗ್ನಃ ಅಭೂತ್** ಪ್ರವೇಶಿಸಿತು (ಹುದುಗಿತು), ಪ್ರವಿಷ್ಟವಾಯಿತು. **ನಿಷ್ಪೀಡಿತಾತ್** ಪೀಡಿಸಲ್ಪಟ್ಟಿದ್ದರಿಂದ, **ಅಸ್ಮಾತ್** ಬೆಟ್ಟದೆಸೆಯಿಂದ, **ಜಲಧಾರಾ** ಜಲಧಾರೆಯು, **ಉದ್ಗತಾ** ಮೇಲಕ್ಕೆ ಬರಲ್ಪಟ್ಟಿತು, **ಸರ್ವಂ** ಎಲ್ಲ ಕಡೆಯಲ್ಲಿ **ವ್ಯಾಪ್ತಂ** ವ್ಯಾಪ್ತವಾದ, **ವಹ್ನಿಂ** ಬೆಂಕಿಯನ್ನು **ಶಮಯಾಮಾಸ** ಆರಿಸಿತು.

**ತಾತ್ಪರ್ಯ** :- ಅವರ ಪಾದಗಳ ಒತ್ತಡದಿಂದ ಬೆಟ್ಟ ಹನ್ನೊಂದು, ಯೋಜನದಷ್ಟು ನೆಲದೊಳಗೆ ಹುದುಗಿತು. ಬೆಟ್ಟವನ್ನು ಒತ್ತಿದ್ದರಿಂದ ನೀರಧಾರೆ ಮೇಲೆದ್ದು ಬಂದು ಹಬ್ಬಿದ ಎಲ್ಲ ಬೆಂಕಿಯನ್ನು ಆರಿಸಿತು.

**ಸೇನಾಂ ಪ್ರವಿಷ್ಟೌ ಸರ್ವ ರಾಜನ್ಯವೃಂದಂ**
**ವ್ಯಮಥ್ನಾತಾಂ ದೇವವರೌ ಸ್ವಶಸ್ತ್ರೈಃ ।**
**ತತ್ರೈವ ಹಂಸೋ ಡಿಭಕಶ್ಚೈಕಲವ್ಯಃ**
**ಸಕೀಚಕಸ್ತೌ ಶಿಶುಪಾಲಪೌಂಡ್ರಕೌ ॥ ೧೫ ॥**

ಭೌಮಾತ್ಮಜೋ ದಂತವಕ್ರಶ್ಚ ರುಕ್ಮೀ
ಸೌಭಾಧಿಪೋ ಮೈಂದಮೈಂದಾನುಜೌ ಚ
ಅನ್ಯೇ ಚ ಯೇ ಪಾರ್ಥಿವಾಃ ಸರ್ವ ಏವ
ಕ್ರೋಧಾತ್ ಕೃಷ್ಣಂ ಪರಿವಾರ್ಯಾಭ್ಯವರ್ಷನ್ ॥ ೧೬ ॥

ಶಸ್ತ್ರೈರಸ್ತ್ರೈರ್ದ್ರುಮಪೂಗೈಃ ಶಿಲಾಭಿರ್ಭಕ್ತಾಶ್ಚ
ಯೇ ಶಲ್ಯ ಬಾಹ್ಲೀಕ ಮುಖ್ಯಾಃ।
ಸಸೋಮದತ್ತಾಃ ಸೌಮದತ್ತಿರ್ವಿರಾಟಃ
ಪಾಂಚಾಲರಾಜಶ್ಚ ಜರಾಸುತಸ್ಯ,
ಭಯಾತ್ ಕೃಷ್ಣಂ ಶರವರ್ಷೈರವರ್ಷನ್
ಕಾರಾಗೃಹೇ ವಾಸಿತಾ ಮಾಗಧೇನ ॥ ೧೭ ॥

**ಅರ್ಥ :-** **ದೇವವರೌ** ದೇವೋತ್ತಮರಾದ ಕೃಷ್ಣರಾಮರು, **ಸೇನಾಂ** ಜರಾಸಂಧನ ಸೈನ್ಯವನ್ನು **ಪ್ರವಿಷ್ಟೌ** ಪ್ರವೇಶಿಸಿದವರಾಗಿ **ಸ್ವಶಸ್ತ್ರೈಃ** ತಮ್ಮ ಶಸ್ತ್ರಗಳಿಂದ **ಸರ್ವರಾಜನ್ಯವೃಂದಂ** ಎಲ್ಲಾ ರಾಜರುಗಳ ಸಮೂಹವನ್ನು **ವ್ಯಮಥ್ನಾತಾಂ** ಪುಡಿಮಾಡಿದರು, **ತತ್ರೈವ** ಆವಾಗಲೇ **ಹಂಸಃ ಡಿಭಕ ಏಕಲವ್ಯ ಸಕೀಚಕಃ** ಹಂಸ ಡಿಭಕ ಹಾಗೆ ಕೀಚಕನಿಂದ ಕೂಡಿದ ಏಕಲವ್ಯನು, **ತೌ** ಪ್ರಸಿದ್ಧರಾದ ಅಥವಾ (ಕೃಷ್ಣನಬಂಧುಗಳಾದ) **ಶಿಶುಪಾಲ ಪೌಂಡ್ರಕೌ** ಶಿಶುಪಾಲ, ಪೌಂಡ್ರಕರು, **ಭೌಮಾತ್ಮಜಃ** ಭಗದತ್ತನು, **ಚ** ಮತ್ತು **ದಂತವಕ್ರ** ದಂತವಕ್ರನು, **ರುಕ್ಮೀ** ರುಕ್ಮಿಯು, **ಸೌಭಾಧಿಪಃ** ಸಾಲ್ವನು, **ಮೈಂದ ಮೈಂದಾನುಜೌ** ಮೈಂದ ಮತ್ತು ವಿವಿದರು, **ಚ** ಮತ್ತು, **ಅನ್ಯೈಃ** ಬೇರೆ, **ಯೇ ಪಾರ್ಥಿವಾಃ ಸಂತಿ** ರಾಜರು ಯಾರಿದ್ದಾರೋ, **ತೇ ಸರ್ವೇ** ಆ ಎಲ್ಲಾ ರಾಜರುಗಳೂ ಕೂಡ, **ಕೃಷ್ಣಂ** ಕೃಷ್ಣನನ್ನು, **ಪರಿವಾರ್ಯ** ಸುತ್ತುವರಿದು, **ದ್ರುಮಪೂಗೈಃ** ಮರಗಳ ಸಮೂಹಗಳಿಂದ, **ಶಿಲಾಭಿಃ** ಕಲ್ಲುಗಳಿಂದ **ಶಸ್ತ್ರೈಃ** ಶಸ್ತ್ರಗಳಿಂದ, **ಕ್ರೋಧಾತ್** ಕೃಷ್ಣನ ಮೇಲಿನ ಕೋಪದಿಂದ, **ಅಭ್ಯವರ್ಷನ್** ಮಳೆಗರೆದರು (ಸುರಿಸಿದರು), **ಸಸೋಮದತ್ತಾಃ** ಸೋಮದತ್ತನಿಂದ ಕೂಡಿದ **ಸೌಮಿದತ್ತಿಃ** ಭೂರಿಶ್ರವನು, **ವಿರಾಟಃ** ವಿರಾಟನು, **ಪಾಂಚಾಲರಾಜಃ** ದ್ರುಪದನು, **ಶಲ್ಯಬಾಹ್ಲಿಕಮುಖ್ಯಾಃ ಯೇ, ಪಾರ್ಥಿವಾ** ಶಲ್ಯ ಬಾಹ್ಲೀಕ ಇವರೇ ಮೊದಲಾದ ಯಾವ ರಾಜರುಗಳಿದ್ದಾರೋ, **ಏತೇ ಭಕ್ತಾಃ ಅಪಿ** ಇವರು ಕೃಷ್ಣನ ಭಕ್ತರಾಗಿದ್ದರೂ ಕೂಡ, **ಜರಾಸುತಸ್ಯ** ಜರಾಸಂಧನ, **ಭಯಾತ್** ಕ್ರೋಧದಿಂದ, **ಶರವರ್ಷೈಃ** ಬಾಣಗಳ ಮಳೆಯನ್ನು **ಅವರ್ಷನ್** ಸುರಿಸಿದರು,

ಯತಃ ಏಕೆಂದರೆ (ಭಯಕ್ಕೆ ಕಾರಣವೇನೆಂದರೆ?) **ಮಾಗಧೇ** ಜರಾಸಂಧನಿಂದ **ಪೂರ್ವಂ** ಹಿಂದೆ **ಏತೇ ರಾಜಾನಃ ಶಲ್ಯಬಾಹ್ಲೀಕಾದಿ** ರಾಜರುಗಳು, **ಕಾರಾಗೃಹೇ** ಕಾರಾಗೃಹದಲ್ಲಿ, **ವಾಸಿತಾಃ** ವಾಸಿಸಲ್ಪಟ್ಟವರಾಗಿದ್ದರು (ಬಂಧಿ ಸಲ್ಪಟ್ಟವರಾಗಿರುವರು).

**ತಾತ್ಪರ್ಯ** :- ದೇವೋತ್ತಮರಾದ ಕೃಷ್ಣರಾಮರು, ಜರಾಸಂಧನ ಸೈನ್ಯವನ್ನು ಹೊಕ್ಕು ತಮ್ಮ ಶಸ್ತ್ರಗಳಿಂದ ಎಲ್ಲ ರಾಜರುಗಳ ಸಮೂಹವನ್ನು ಪುಡಿಗೈಯಲು ತೊಡಗಿದರು. ಆಗಲೇ ಹಂಸ ಡಿಭಕ ಏಕಲವ್ಯ, ಕೀಚಕ ಶಿಶುಪಾಲ ಪೌಂಡ್ರಕ, ಭಗದತ್ತ ದಂತವಕ್ರ ರುಕ್ಮಿ ಸಾಲ್ವ ಮೈಂದ ವಿವಿಧ, ಮತ್ತು ಬೇರೆ ಎಲ್ಲ ರಾಜರು ಕ್ರೋಧದಿಂದ ಕೃಷ್ಣನನ್ನು ಸುತ್ತುವರೆದು ಶಸ್ತ್ರಾಸ್ತ್ರ ಗಳ ಮರ ಕಲ್ಲುಗಳ ಸಮೂಹಗಳನ್ನು ಮಳೆಗರೆದರು. ಶಲ್ಯ, ಬಾಹ್ಲೀಕ ಮುಂತಾದವರೂ ಸೋಮದತ್ತ ಭೂರಿಶ್ರವ ವಿರಾಟ, ದ್ರುಪದರೂ ಕೃಷ್ಣನ ಭಕ್ತರೇ ಆಗಿದ್ದರೂ ಜರಾಸಂಧನಿಂದ, ಹಿಂದೆ ಕಾರಾಗೃಹದಲ್ಲಿ ಇಡಲ್ಪಟ್ಟವರಾದ್ದ ರಿಂದ ಅವನ ಭಯದಿಂದ ಕೃಷ್ಣನ ಮೇಲೆ, ಬಾಣಗಳ ಮಳೆ ಸುರಿದರು.

**ಸರ್ವಾನೇತಾನ್ ಶರವರ್ಷೇಣ ಕೃಷ್ಣೋ**
**ವಿಸೂತವಾಜಿಧ್ವಜ ಶಸ್ತ್ರವರ್ಮಣಃ**
**ಕೃತ್ವಾ ವಮಚ್ಛೋಣಿತಾನಾರ್ತರೂಪಾನ್**
**ವಿದ್ರಾವಯಾಮಾಸ ಹರಿರ್ಯಥಾ ಮೃಗಾನ್ ॥ ೧೮ ॥**

**ಅರ್ಥ** :- **ಕೃಷ್ಣ** ಶ್ರೀಕೃಷ್ಣನು, **ಶರವರ್ಷೇಣ** ಬಾಣಗಳ ಮಳೆಯಿಂದ, **ವಿಸೂತವಾಜಿಧ್ವಜಶಸ್ತ್ರವರ್ಮಣಃ** ಸೂತ, ಸಾರಥಿ, ಮತ್ತು **ವಾಜ** ಕುದುರೆ, **ಧ್ವಜ** ಧ್ವಜವು, **ಶಸ್ತ್ರ** - ಶಸ್ತ್ರವು, **ವರ್ಮ** ಕವಚವು ಇವುಗಳನ್ನು ಇಲ್ಲದಂತೆ **ಕೃತ್ವಾ** ಮಾಡಿ **ವಮತ್ ಶೋಣಿತಾನ್ ವಮತ್** ಕಾರಲ್ಪಟ್ಟ **ಶೋಣಿತಾನ್** ರಕ್ತವುಳ್ಳವರನ್ನಾಗಿ, **ಆರ್ತರೂರಾನ್** ದುಃಖಸ್ವರೂಪವುಳ್ಳವರನ್ನಾಗಿ, **ಕೃತ್ವಾ** ಮಾಡಿ, **ಹರಿಃ** ಸಿಂಹವು, **ಮೃಗಾನ್** ಮೃಗಗಳನ್ನು **ಯಥಾ** ಹೇಗೆ ಓಡಿಸುತ್ತದೋ **ತಥಾ** ಹಾಗೆ **ವಿದ್ರಾವಯಾಮಾಸ** ಓಡಿಸಿದನು.

**ತಾತ್ಪರ್ಯ** :- ಶ್ರೀಕೃಷ್ಣ ಬಾಣಗಳ ಮಳೆಯಿಂದ ಇವರೆಲ್ಲರನ್ನೂ ಸಾರಥಿ, ಕುದುರೆ, ಧ್ವಜ, ಶಸ್ತ್ರ ಕವಚ ರಹಿತರಾಗುವಂತೆ, ರಕ್ತ ಕಾರುವಂತೆ, ನೋವಿ ನಿಂದ ನರಳುವಂತೆ ಮಾಡಿ ಸಿಂಹ, ಮೃಗಗಳನ್ನು ಓಡಿಸುವಂತೆ ಓಡಿಸಿದ.

ಹತ್ವಾ ಸೇನಾಂ ವಿಂಶದಕ್ಷೌಹಿಣೀಂ ತಾಂ
ತ್ರಿಭಿರ್ಯುಕ್ತಾಂ ರುಕ್ಮಿಣಂ ನೈವ ಕೃಷ್ಣಃ
ರುಕ್ಮಿಣ್ಯರ್ಥೇ ಪೀಡಯಾಮಾಸ ಶಸ್ತ್ರಾಣ್ಯಸ್ಯ
ಚ್ಛಿತ್ವಾ ವಿರಥಂ ದ್ರಾವಯಾನಃ ॥ ೧೯ ॥

**ಅರ್ಥ** :- **ತ್ರಿಭಿಃ** ಮೂರು ಅಕ್ಷೌಹಿಣಿಯಿಂದ, **ಯುಕ್ತಾಂ** ಕೂಡಿದ, **ವಿಂಶತ್** (೨೦) ಇಪ್ಪತ್ತು **ಅಕ್ಷೌಹಿಣೀಂ** ಅಕ್ಷೌಹಿಣೀ ಸೇನೆಯನ್ನು ಅಂದರೆ ಇಪ್ಪತ್ತಮೂರು ಅಕ್ಷೌಹಿಣೀ ಸೇನೆಯನ್ನು **ಹತ್ವಾ** ಕೊಂದು, ನಾಶಮಾಡಿ, **ರುಕ್ಮಿಣ್ಯರ್ಥೇ** ರುಕ್ಮಿಣಿಯ ಸಲುವಾಗಿ, **ರುಕ್ಮಿಣಂ** ರುಕ್ಮಿಣಿಯ ಅಣ್ಣನಾದ ರುಕ್ಮನನ್ನು **ನೈವ ಪೀಡಿಯಾಮಾಸ** ಹೆಚ್ಚು ಪೀಡಿಸಲಿಲ್ಲ, **ಕಿಂತು** ಆದರೆ, **ಅಸ್ಯ** ರುಕ್ಮಿಯ, **ಶಸ್ತ್ರಾಣಿ** ಶಸ್ತ್ರಗಳನ್ನು **ಚ್ಛಿತ್ವಾ** ನಾಶಮಾಡಿ, **ವಿರಥಂ** ರಥಗಳಿಂದ ರಹಿತ ನನ್ನಾಗಿ, **ಕೃತ್ವಾ** ಮಾಡಿ, **ದ್ರಾವಯಾನಃ** ಓಡಿಸುತ್ತಾ, **ಏವಂ** ಪ್ರಕಾರೇಣ **ಪೀಡಯಾ ಮಾಸ** ಈ ಪ್ರಕಾರವಾಗಿ ಪೀಡಿಸಿದನು. (ಹೆಚ್ಚಾಗಿ ಪೀಡಿಸಲಿಲ್ಲ) ಎಂದರ್ಥ.

**ತಾತ್ಪರ್ಯ** :- ಇಪ್ಪತ್ತುಮೂರು ಅಕ್ಷೋಹಿಣೀ ಸೇನೆಯನ್ನು ಸಂಹರಿಸಿದ ಕೃಷ್ಣ ರುಗ್ಮಿಯನ್ನು ಮಾತ್ರ, ರುಗ್ಮಿಣಿಗೋಸ್ಕರವಾಗಿ ಹೆಚ್ಚಾಗಿ ಪೀಡಿಸಲಿಲ್ಲ. ಅವನ ಶಸ್ತ್ರಗಳನ್ನು ತುಂಡರಿಸಿ ವಿರಥನನ್ನಾಗಿ ಮಾಡಿ ಓಡಿಸಿದನು.

ಜರಾಸುತೋ ರೌಹಿಣೇಯೇನ ಯುದ್ಧಂ
ಚಿರಂ ಕೃತ್ವಾ ತನ್ಮುಸಲೇನ ಪೋಥಿತಃ
ವಿಮೋಹಿತಃ, ಪ್ರಾಪ್ತಸಂಜ್ಞಶ್ಚಿರೇಣ
ಕ್ರುದ್ಧೋ ಗದಾಂ ತದುರಸ್ಯಭ್ಯಪಾತಯತ್ ॥ ೨೦ ॥

**ಅರ್ಥ** :- **ರೌಹಿಣೇಯೇನ** ಬಲರಾಮನೊಂದಿಗೆ **ಯುದ್ಧಂ** ಯುದ್ಧ ವನ್ನು **ಚಿರಂ** ಬಹುಕಾಲ **ಕೃತ್ವಾ** ಮಾಡಿ, **ತನ್ಮುಸಲೇನ** ತಸ್ಯ ಆ ಬಲರಾಮನ **ಮುಸಲೇನ** ಮುಸಲದಿಂದ, **ಪೋಥಿತಃ** ಹೊಡಿಯಲ್ಪಟ್ಟ **ಅತ ಏವ** ಆದ್ದರಿಂದಲೇನೆ **ವಿಮೋಹಿತಃ** ಮೂರ್ಛಿತನಾದ **ಜರಾಸುತಃ** ಜರಾಸಂಧನು, **ಚಿರಂ** ವಿಲಂಬವಾಗಿ **ಪ್ರಾಪ್ತಸಂಜ್ಞಃ ಸನ್** ಎಚ್ಚೆತ್ತವನಾಗಿ (ಹೊಂದಲ್ಪಟ್ಟ ಪ್ರಜ್ಞೆಯುಳ್ಳವನಾಗಿ) **ಕ್ರುದ್ಧಃ ಭೂತ್ವ** ಕೋಪಗೊಂಡವನಾಗಿ, ತಸ್ಯ ಆ ರಾಮನ **ಉರಸಿ** ಎದೆಯಲ್ಲಿ **ಗದಾಂ** ಗದೆಯನ್ನು **ಅಭ್ಯಪಾತಯತ್** ಬೀಳಿಸಿದನು. (ಅಪ್ಪಳಿಸಿದನು).

ತಾತ್ಪರ್ಯ :- ಜರಾಸಂಧನು ಬಲರಾಮನೊಂದಿಗೆ ಬಹುಕಾಲ ಯುದ್ಧಮಾಡಿ ಅವನ ಮುಸಲದ, ಪೆಟ್ಟಿಗೆ ಮೂರ್ಛಿತನಾದ ಬಹುಕಾಲದ ಮೇಲೆ ಪ್ರಜ್ಞೆ ಮರಳಿದವನಾದ. ಅವನು ಕ್ರುದ್ಧನಾಗಿ ಬಲರಾಮನ ಎದೆಯ ಮೇಲೆ ತನ್ನ ಗದೆಯನ್ನು ಅಪ್ಪಳಿಸಿದ.

**ತೇನಾಽಹತಃ ಸುಭೃಶಂ ರೌಹಿಣೇಯಃ**
**ಪಪಾತ ಮೂರ್ಛಾಭಿಗತಃ ಕ್ಷಣೇನ**
**ಅಜೇಯತ್ವಂ ತಸ್ಯ ದತ್ತಂ ಹಿ ಧಾತ್ರಾ**
**ಪೂರ್ವಂ ಗೃಹೀತೋ ವಿಷ್ಣುನಾ ರಾಮಗೇನ ॥ ೨೦ ॥**

**ಅರ್ಥ** :- **ತೇನ** ಆ ಜರಾಸಂಧನಿಂದ, **ಸುಭೃಶಂ** ಬಲವಾಗಿ, **ಅಹತಃ** ಹೊಡೆಯಲ್ಪಟ್ಟಾಗ, **ರೌಹಿಣೇಯಃ** ಬಲರಾಮನು, **ಕ್ಷಣೇನ** ಕ್ಷಣದಿಂದ **ಮೂರ್ಛಾಭಿಗತಃ** ಮೂರ್ಛೆಗೊಂಡವನಾಗಿ, (ಮೂರ್ಛೆಹೊಂದಿದವನಾಗಿ) **ಪಪಾತ** ಬಿಟ್ಟನು **ಹಿ** ಏಕೆಂದರೆ, **ಧಾತ್ರಾ** ಬ್ರಹ್ಮನಿಂದ, **ತಸ್ಯ** ಆ ಜರಾಸಂಧನಿಗೆ, **ಅಜೇಯತ್ವಂ** ಅಜೇಯತ್ವ ಎಂಬ ವರವು. **ದತ್ತಂ** ಕೊಡಲ್ಪಟ್ಟಿತು. **ಪೂರ್ವಂ** ಹಿಂದೆ (ಜರಾಸಂಧನ ಜೊತೆ ಪ್ರಥಮಯುದ್ಧವನ್ನು ಮಾಡಿದಾಗ) **ರಾಮಗೇನ** ಬಲರಾಮನಲ್ಲಿ ಅವಿಷ್ಟನಾಗಿದ್ದ **ವಿಷ್ಣುನಾ** ಶುಕ್ಲಕೇಶಿರೂಪಿಯಾದ ವಿಷ್ಣುವಿನಿಂದ, **ಜರಾಸಂಧಃ** ಜರಾಸಂಧನು, **ಗೃಹೀತಃ** ನಿಗ್ರಹಿಸಲ್ಪಟ್ಟನು, **ಅಭೂತ್** ಅದನು (ಸೆರೆಹಿಡಿಯಲ್ಪಟ್ಟನು).

ತಾತ್ಪರ್ಯ :- ಜರಾಸಂಧ ಬಲವಾಗಿ ಹೊಡೆದಾಗ ಕ್ಷಣದಲ್ಲಿ ಬಲರಾಮ ಮೂರ್ಛೆಗೊಂಡು ಬಿದ್ದ. ಏಕೆಂದರೆ ಬ್ರಹ್ಮ ಜರಾಸಂಧನಿಗೆ ಅಜೇಯತ್ವ ವರ ನೀಡಿದ್ದ. ಹಿಂದೆ ಜರಾಸಂಧನನ್ನು ಸೆರೆಹಿಡಿದಿದ್ದುದು ಬಲರಾಮನಲ್ಲ ಅವಿಷ್ಟನಾದ ವಿಷ್ಣು.

**ತಥಾಕೃತೇ ಬಲಭದ್ರೇತು ಕೃಷ್ಣೋ**
**ಗದಾಮಾದಾಯ ಸ್ವಾಮಿಗಾನ್ಮಾಗಧೇಶಮ್**
**ತತಾಡ ಜತ್ರೌ ಸ ತಯಾಭಿತಾಡಿತೋ**
**ಜಗಾಮ ಗಾಂ ಮೂರ್ಛಯಾಭಿಪ್ಲುತಾಂಗಃ ॥ ೨೨ ॥**

**ಅರ್ಥ** :- **ಬಲಭದ್ರೇ** ಬಲಭದ್ರನು, **ತಥಾಕೃತೇ ಸತಿ** ಮೂರ್ಛಿತನಾದಾಗ (ಮೂರ್ಛಿತನಾಗುತ್ತಿರಲು), **ಕೃಷ್ಣಃ ತು** ಕೃಷ್ಣನಾದರೂ **ಸ್ವಾಂ** ತನ್ನ **ಗದಾಂ** ಗದೆಯನ್ನು **ಆದಾಯ** ತೆಗೆದುಕೊಂಡು **ಮಾಗಧೇಶಮ್** ಜರಾಸಂಧನನ್ನು

ಕುರಿತು, **ಅಗಾತ್** (ಮೇಲೇರಿ) ಹೋದನು, **ಚ** ಮತ್ತು **ಜತ್ರೌ** ಎದೆ ಮತ್ತು ಕತ್ತಿನ ಮಧ್ಯಭಾಗದಲ್ಲಿ (ಮಧ್ಯಪ್ರದೇಶಕ್ಕೆ) **ತತಾಡ** ಹೊಡೆದನು, **ತಯಾ** ಆ ಗದೆಯಿಂದ, **ಅಭಿತಾಡಿತಃ** (ಪೆಟ್ಟು ತಿನ್ನಲ್ಪಟ್ಟ), ಹೊಡೆಯಲ್ಪಟ್ಟ **ಸಃ** ಆ ಜರಾಸಂಧನು, **ಅಭಿಪ್ಲುತಾಂಗಃ** ರಕ್ತಸಿಕ್ತವಾದ, ಅಂಗಗಳುಳ್ಳವನಾಗಿ, **ಮೂರ್ಛಯಾ** ಮೂರ್ಛೆಯಿಂದ, **ಗಾಂ** ಭೂಮಿಯನ್ನು **ಜಗಾಮ** ಹೊಂದಿದನು (ಭೂಮಿ ಮೇಲೆ ಬಿದ್ದನು)

**ತಾತ್ಪರ್ಯ** :- ಬಲರಾಮನು ಹಾಗೆ ಮೂರ್ಛಿತನಾದಾಗ ಕೃಷ್ಣ ತನ್ನ ಗದೆಯನ್ನು ತೆಗೆದುಕೊಂಡು ಜರಾಸಂಧನ ಮೇಲೆ ನುಗ್ಗಿದ. ಅವನ ಎದೆ ಮತ್ತು ಕತ್ತಿನ ಮಧ್ಯಭಾಗಕ್ಕೆ ಹೊಡೆದ. ಆದರಿಂದ ಬಹಳವಾಗಿ ಪೆಟ್ಟು ತಿಂದ ಜರಾಸಂಧ ರಕ್ತಸೋರಿ ಮೂರ್ಛೆಯಿಂದ ನೆಲಕಚ್ಚಿದ.

**ಅಥೋತ್ತಸ್ಥೌ ರೌಹಿಣೇಯಃ ಸಹೈವ**
**ಸಮುತ್ತಸ್ಥೌ ಮಾಗಧೋಽಪ್ಯುಗ್ರವೀರ್ಯಃ**
**ಕ್ರುದ್ಧೋ ಗೃಹಿತ್ವಾ ಮೌಲಿಮಸ್ಯಾಶು ರಾಮೋ**
**ವಧಾಯೋದ್ಯಚ್ಛನ್ಮುಸಲಂ ಬಾಹುಶಾಲೀ ॥ ೨೩ ॥**

**ಅರ್ಥ** :- **ಅಥ** ಅನಂತರ, **ರೌಹಿಣೇಯಃ** ಬಲರಾಮನು, **ಉತ್ತಸ್ಥೌ** ಎದ್ದನು, **ಉಗ್ರವೀರ್ಯಃ** ಮಹಾಪರಾಕ್ರಮಿಯಾದ, **ಮಾಗಧೋಽಪಿ** ಜರಾಸಂಧನೂ ಕೂಡ, **ಸಹೈವ** ಬಲರಾಮನೊಂದಿಗೇನೇ **ಸಮುತ್ತಸ್ಥೌ** ಎದ್ದನು, **ಬಾಹುಶಾಲೀ** ಬಾಹುಶಾಲಿಯಾದ, **ರಾಮಃ** ಬಲರಾಮನು, **ಕ್ರುದ್ಧಃ ಸನ್** ಕೋಪಗೊಂಡವನಾಗಿ, **ಆಶು** ಬೇಗನೆ, **ಅಸ್ಯ** ಜರಾಸಂಧನ, **ಮೌಲಿಂ** ತಲೆಯ ಕೂದಲನ್ನು, **ಗೃಹೀತ್ವಾ** ಹಿಡಿದುಕೊಂಡು, **ವಧಾಯ** ಕೊಲ್ಲುವುದ ಕ್ಕಾಗಿ, **ಮುಸಲಂ** ಮುಸಲವನ್ನು **ಉದ್ಯಚ್ಛತ್** ಮೇಲ್ಲೆತ್ತಲು ಉದ್ಯುಕ್ತನಾದನು.

**ತಾತ್ಪರ್ಯ** :- ಅನಂತರ ಬಲರಾಮ ಮೇಲೆದ್ದ, ಆದರೊಂದಿಗೆ ಮಹಾ ಪರಾಕ್ರಮಿಯಾದ ಜರಾಸಂಧನೂ ಎಚ್ಚೆತ್ತ. ಬಾಹುಶಾಲಿಯಾದ ಬಲರಾಮ ಕೆರಳಿದವನಾಗಿ ಅವನ ತಲೆಯನ್ನು ಹಿಡಿದು, ಸಂಹರಿಸಲೆಂದು ಮುಸಲವನ್ನು ಮೇಲೆತ್ತಿದ.

**ಅಥಾಬ್ರವೀದ್ ವಾಯುರೇನಂ ನ ರಾಮ**
**ತ್ವಯಾ ಹಂತುಂ ಶಕ್ಯತೆ ಮಾಗಧೋಽಯಮ್ ।**
**ವೃಥಾ ನ ತೇ ಬಾಹುಬಲಂ ಪ್ರಯೋಜ್ಯ**
**ಮಮೋಘಂ ತೇ ಯದ್ ಬಲಂ ತದ್ವದಸ್ತ್ರಮ್ ॥ ೨೪ ॥**

**ಅನ್ಯೋಽಹಂತಾ ಬಲವಾನಸ್ಯ ಚೇತಿ**
**ಶ್ರುತ್ವಾ ಯಯೌ ಬಲಭದ್ರೋ ವಿಮುಚ್ಯ**
**ಜರಾಸುತಂ ಪುನರುದ್ಯಚ್ಛಮಾನಂ**
**ಜಘಾನ ಕೃಷ್ಣೋ ಗದಯಾ ಸ್ವಯೈವ ॥ ೨೫ ॥**

**ಅರ್ಥ** :- **ಅಥ** ಅನಂತರ, **ವಾಯು** ವಾಯುವು, **ರಾಮ!** ಎಲೈ ಬಲರಾಮನೇ, **ಅಯಂ ಮಾಗಧಃ** ಈ ಜರಾಸಂಧನು, **ತ್ವಯಾ** ನಿನ್ನಿಂದ, **ಹಂತುಂ** ಕೊಲ್ಲಲು, **ನ ಶಕ್ಯತೆ** ಆಗುವುದಿಲ್ಲ, **ತೇ** ನಿನ್ನ **ಬಾಹುಬಲಂ** ಬಾಹುಬಲವು **ಅಸ್ತ್ರಂ** ಅಸ್ತ್ರವು, **ವೃಥಾ** ವ್ಯರ್ಥವಾಗಿ **ನ ಯೋಜ್ಯಂ** ಪ್ರಯೋಗಿಸಲ್ಪಡಬಾರದು, **ಯತಃ** ಏಕೆಂದರೆ, **ಯದ್ಬಲಂ ಯದ್** ಯಾವ ಕಾರಣದಿಂದ, **ಬಲಂ** ಬಾಹು ಬಲವು, **ತದ್ವತ್** ಅದರಂತೆ **ಅಸ್ತ್ರಂ ಅಪಿ** ಅಸ್ತ್ರವೂ, **ಅಮೋಘಂ** ಅಮೋಘವೂ, **ತಸ್ಮಾತ್** ಆದ್ದರಿಂದ (**ಬಾಹುಬಲಂ** ಬಾಹುಬಲವು **ನ ಪ್ರಯೋಜ್ಯಂ** ಪ್ರಯೋಗಿಸಲ್ಪಡಬಾರದು ಎಂದರ್ಥ).

**ಅರ್ಥ** :- **ಅಸ್ಯ** ಜರಾಸಂಧನ, **ಹಂತಾ** ಕೊಲ್ಲುವವನು (ಸಂಹಾರಕನು), **ಅನ್ಯಃ** ನಿನಿಗಿಂತ ಬೇರೆಯವನು, **ಬಲವಾನ್** ನಿನಗಿಂತಲೂ ಬಲಿಷ್ಠನಾದವನು, **ಅಸ್ತಿ** ಇದ್ದಾನೆ, **ಇತಿ** ಹೀಗೆ, **ಶ್ರುತ್ವಾ** ಅಶರೀರವಾಣಿಯನ್ನು ಕೇಳಿ, **ಬಲಭದ್ರಃ** ಬಲರಾಮನು, **ಶತ್ರುಂ** ಶತ್ರುವನ್ನು **ವಿಮುಚ್ಯ** ಬಿಟ್ಟು **ಯಯೌ** ಹೋದನು, **ಪುನಃ** ಮತ್ತೊಮ್ಮೆ **ತಥೈವ** ಹಿಂದಿನಂತೆ, **ಉದ್ಯಚ್ಛಮಾನಂ** ಯುದ್ಧಮಾಡಲು, ಉದ್ಯುಕ್ತನಾದ, **ಜರಾಸುತಂ** ಜರಾಸಂಧನನ್ನು **ಕೃಷ್ಣ** ಶ್ರೀಕೃಷ್ಣನು, **ಸ್ವಯಾ** ತನ್ನ ಗದಯ್ಯಾ ಗದೆಯಿಂದಲೇನೇ **ಜಘಾನ** ಸಾಯದಂತೆ ಹೊಡೆದನು, (**ನ ತು ಅಹನತ್** ಕೊಲ್ಲಲಿಲ್ಲ)

**ತಾತ್ಪರ್ಯ** :- ಆಗ ವಾಯು ಬಲರಾಮನಿಗೆ ಅಶರೀರವಾಣಿಯಿಂದ ನುಡಿದ, ಬಲರಾಮ ಈ ಜರಾಸಂಧನನ್ನು ಕೊಲ್ಲುವುದು ನಿನ್ನಿಂದಾಗದು, ವ್ಯರ್ಥವಾಗಿ ನಿನ್ನ ಬಾಹು, ಬಲವನ್ನೂ ಅಸ್ತ್ರವನ್ನೂ ಪ್ರಯೋಗಿಸಬೇಡ, ಏಕೆಂದರೆ ನಿನ್ನ ಬಲ ಅಮೋಘ ಅಸ್ತ್ರವೂ ಅಮೋಘ. ಇವನನ್ನು ಕೊಲ್ಲುವನು

ನಿನಗಿಂತ ಬಲಿಷ್ಠನಿನ್ನೊಬ್ಬನಿದ್ದಾನೆ ಎಂದು ಇದನ್ನು ಕೇಳಿ ಬಲರಾಮ ಜರಾಸಂಧನನ್ನು ಬಿಟ್ಟು ಹೊರಟುಹೋದ. ಪುನಃ ಯುದ್ಧ ಮಾಡಲು ಯತ್ನಿಸಿದ ಜರಾಸಂಧನನ್ನು ಕೃಷ್ಣ ಗದೆಯಿಂದ ಹೊಡೆದ ಹೊರತು ಕೊಲ್ಲಲಿಲ್ಲ.

**ತೇನಾಹತಃ ಪ್ರಸ್ತಸಮಸ್ತಗಾತ್ರಃ**
**ಪಪಾತ ಮೂರ್ಛಾಭಿಗತಃ ಸ ರಾಜಾ**
**ಚಿರಾತ್ ಸಂಜ್ಞಾಂ ಪ್ರಾಪ್ಯ ಚಾಂತರ್ಹಿತೋಽಸೌ**
**ಸಂಪ್ರಾದ್ರವತ್ ಭೀತಭೀತಃ ಸಲಜ್ಜಃ**
**ಯಯೌ ಶಿಷ್ಟೈ ರಾಜಭಿಃ ಸಂಯುತಶ್ಚ**
**ಪುರಂ ಜೀವೇತ್ಯೇವ ಕೃಷ್ಣೇನ ಮುಕ್ತಃ ॥ ೨೬ ॥**

**ಅರ್ಥ** :- **ತೇನ** ಆ ಕೃಷ್ಣನಿಂದ, **ಆಹತಃ** ಹೊಡೆಯಲ್ಪಟ್ಟ **ಪ್ರಸ್ತ ಸಮಸ್ತಗಾತ್ರಃ** ನುಜ್ಜಾದ ಸಕಲ ಅವಯವಗಳುಳ್ಳ, **ರಾಜಾ** ರಾಜನಾದ, **ಸಃ** ಆ ಜರಾಸಂಧನು, **ಮೂರ್ಛಾಭಿಗತಃ ಸನ್** ಮೂರ್ಛೆಗೊಂಡವನಾಗಿ, **ಭುವಿ** ಭೂಮಿಯಲ್ಲಿ, **ಪಪಾತ** ಬಿದ್ದನು. **ಚ** ಮತ್ತು, **ಚಿರಾತ್** ಬಹುಕಾಲದ ನಂತರ **ಸಂಜ್ಞಾಂ** ಎಚ್ಚರಿಕೆಯನ್ನು **ಪ್ರಾಪ್ಯ** ಹೊಂದಿ, **ಭೀತಃ ಭೀತಃ** ಬಹಳ ಭಯಭೀತನಾಗಿ, **ಸಲಜ್ಜ** ನಾಚಿಕೆಯಿಂದ ಕೂಡಿದವನಾಗಿ **ಶಿಷ್ಟೈಃ** ಬದುಕಿ ಉಳಿದ, **ರಾಜಭಿಃ** ರಾಜರಿಂದ, **ಸಂಯುತಃ** ಕೂಡಿದ, **ಅಸೌ** ಈ ಜರಾಸಂಧನು, **ಅಂತರ್ಹಿತಃ ಸನ್** ತಲೆಮರೆಸಿಕೊಂಡವನಾಗಿ, **ಸಂಪ್ರಾದ್ರ ವತ್** ಪಲಾಯನ ಮಾಡಿದನು, **ಚ** ಮತ್ತು, **ಪುರಂ** ತನ್ನ ಪಟ್ಟಣವನ್ನು ಕುರಿತು, **ಯಯೌ** ಹೋದನು, **ಅಸ್** ಈ ಜರಾಸಂಧನು, **ಕೃಷ್ಣೇನ** ಕೃಷ್ಣನಿಂದ **ಜೀವ** ಬದುಕಿಕೋ **ಇತ್ಯೇವ** ಎಂದೇ, **ಮುಕ್ತಃ ಆಸೀತ್** ಬಿಡಲ್ಪಟ್ಟಿದ್ದನು.

**ತಾತ್ಪರ್ಯ** :- ಕೃಷ್ಣನ ಏಟಿಗೆ ರಾಜಾ ಜರಾಸಂಧನ ಎಲ್ಲಾ ಅಂಗಗಳೂ ಕುಸಿದವು. ಆತ ಮೂರ್ಛೆಗೊಂಡು ಬಿದ್ದ. ದೀರ್ಘಕಾಲದ ಬಳಿಕ ಎಚ್ಚರಗೊಂಡು ಬಲು ಭೀತನಾಗಿ ನಾಚಿ, ಉಳಿದ ರಾಜನೊಂದಿಗೆ ತಲೆ ಮರೆಸಿಕೊಂಡು ಪಲಾಯನ ಮಾಡಿದ. ತನ್ನ ಪಟ್ಟಣ ಸೇರಿದ. ಬದುಕಿಕೋ ''ಹೋಗು'' ಎಂದು ಹೇಳಿ ಕೃಷ್ಣ ಅವನನ್ನು ಬಿಟ್ಟಿದ್ದ.

**ಪುನರ್ಯುದ್ಧಂ ಬಹುಶಃ ಕೇಶವೇನ**
**ಕೃತ್ವಾ ಜಿತೋ ರಾಜಗಣೈಃ ಸಮೇತಃ**
**ಕೃಷ್ಣೋ ಜಿತ್ವಾ ಮಾಗಧಂ ರೌಹಿಣೇಯ**
**ಯುಕ್ತೋ ಯಯೌ ದಮಘೋಷೇಣ ಸಾರ್ಧಮ್ ॥ ೨೭ ॥**

**ಅರ್ಥ** :- ಸಃ ಆ ಜರಾಸಂಧನು, ಪುನಃ ಮತ್ತೆ, **ರಾಜಗಣೈಃ** ರಾಜ ಸಮೂಹದಿಂದ, **ಸಮೇತಃ ಸನ್** ಕೂಡಿದವನಾಗಿ, **ಬಹುಶಃ** ಅನೇಕ ಬಾರಿ **ಕೇಶವೇನ** ಕೃಷ್ಣನೊಂದಿಗೆ, **ಯುದ್ಧಂ** ಯುದ್ಧವನ್ನು **ಕೃತ್ವಾ** ಮಾಡಿ, **ಜಿತಃ** ಸೋಲಿಸಲ್ಪಟ್ಟನು. **ಕೃಷ್ಣಃ** ಕೃಷ್ಣನು; **ಮಾಗಧಂ** ಜರಾಸಂಧನನ್ನು **ಜಿತ್ವಾ** ಗೆದ್ದು **ರೌಹಿಣೇಯ** ರೌಹಿಣೇಯ **ಯುಕ್ತಃ ಸನ್** ಬಲರಾಮಸಮೇತನಾಗಿ, **ದಮಘೋಷೇಣ** ದಮ ಘೋಷನಿಂದ, **ಸಾರ್ಧಂ** ಕೂಡಿಕೊಂಡು, **ಯಯೌ** ಹೋದನು.

**ತಾತ್ಪರ್ಯ** :- ಜರಾಸಂಧ ಪುನಃ ಅನೇಕ ಬಾರಿ ರಾಜ ಸಮೂಹದೊಂದಿಗೆ ಬಂದು ಕೃಷ್ಣನೊಡನೆ ಯುದ್ಧ ಮಾಡಿ; ಸೋತ, ಕೃಷ್ಣ ಹೀಗೆ ಜರಾಸಂಧನನ್ನು ಗೆದ್ದು ಬಲರಾಮ ಸಮೇತನಾಗಿ ದಮಘೋಷ ನೊಂದಿಗೆ, ಹೊರಟ.

**ಪಿತೃಷ್ವಸಾಯಾಃ ಪತಿನಾ ತೇನ ಚೋಕ್ತಃ**
**ಪೂರ್ವಂ ಜಿತೇನಾಪಿ ಯುಧಿ ಸ್ಮ ಬಾಂಧವಾತ್**
**ಯಾಮಃ ಪುರಂ ಕರವೀರಾಖ್ಯಮೇವ**
**ಮಹಾಲಕ್ಷ್ಮ್ಯಾಃ ಕ್ಷೇತ್ರಸಂದರ್ಶನಾಯ ॥ ೨೮ ॥**

**ಶ್ರುತ್ವಾ ವಾಕ್ಯಂ ತಸ್ಯ ಯುದ್ಧೇ ಜಿತಸ್ಯ ।**
**ಪ್ರೀತ್ಯಾ ಯುಕ್ತಸ್ಯಾತ್ಮನಾ ತದ್ಯುತೋಽಗಾತ್ ॥ ೨೯ ॥**

**ಅರ್ಥ** :- **ಪೂರ್ವಂ** ಮೊದಲು **ಜಿತೇನಾಪಿ** ಕೃಷ್ಣನಿಂದ ಸೋಲಿಸಲ್ಪಟ್ಟಿದ್ದರೂ ಕೂಡ, **ಪಿತೃಷ್ವಸಾಯಾಃ** ಸೋದರತ್ತೆಯ, **ಪತಿನಾ** ಗಂಡನಾದ, **ತೇನ ಚ** ಆ ದಮಘೋಷನಿಂದಾದರೂ, **ಬಾಂದವಾತ್** ಬಂಧುಸ್ನೇಹದಿಂದ **ಮಹಾಲಕ್ಷ್ಮ್ಯಾಃ** ಮಹಾಲಕ್ಷ್ಮಿಯ ಹೆಸರಿನ, **ಪುರಂ ಏವ** ಪುರವನ್ನೇ ಕುರಿತು, **ಯಾಮಃ** ಹೋಗೋಣ **ಇತಿ** ಎಂದು **ಆತ್ಮನಾ** ಮನಸ್ಸಿನಿಂದ **ಪ್ರೀತ್ಯಾ** ಪ್ರೀತಿಯಿಂದ; **ಯುಕ್ತಸ್ಯ** ಕೂಡಿದ, **ತಸ್ಯ** ಆ

ದಮಘೋಷೇನ ವಾಕ್ಯಂ ಮಾತನ್ನು, ಶ್ರುತ್ವಾ ಕೇಳಿ, ತದ್ಯುತಃ ಸನ್ ಅವನಿಂದ ಕೂಡಿದವನಾಗಿ ಅಗಾತ್ ಹೋದನು.

ತಾತ್ಪರ್ಯ :- ಕೃಷ್ಣನ ಸೋದರತ್ತೆಯರಲ್ಲಿ ಒಬ್ಬಳ ಪತಿ ದಮಘೋಷ ಅವನು ಹಿಂದೆ ಯುದ್ಧದಲ್ಲಿ ಕೃಷ್ಣನಿಂದ ಪರಾಜಿತನಾಗಿದ್ದರೂ, ಬಂಧುಸ್ನೇಹ ದಿಂದ ಮಹಾಲಕ್ಷ್ಮಿಯ ಕ್ಷೇತ್ರ ಸಂದರ್ಶನಕ್ಕಾಗಿ ಕರವೀರ ಪಟ್ಟಣಕ್ಕೆ ಹೋಗೋಣವೆಂದಾಗ, ಯುದ್ಧದಲ್ಲಿ ಪರಾಜಿತನಾಗಿದ್ದೂ ಪ್ರೀತಿಯಿಂದ ಅವನು ಹೇಳಿದ ಮಾತನ್ನು ಕೇಳಿ ಕೃಷ್ಣ ಅವನೊಡನೆ ಹೊರಟ.

**ಗಂಧರ್ವೋಽಸೌ ದನುನಾಮಾ ನರೋಽಭೂತ್**
**ತಸ್ಮಾತ್ ಕೃಷ್ಣೇ ಭಕ್ತಿಮಾಂಶ್ಚಾಸ ರಾಜಾ**
**ಪುರಂ ಪ್ರಾಪ್ತಾಂಸ್ತಾನ್ ಸ ವಿಜ್ಞಾಯ ಪಾಪಃ**
**ಸೃಗಾಲಾಖ್ಯೋ ವಾಸುದೇವಃ ಕ್ರುಧಾಗಾತ್ ॥ ೩೦ ॥**

**ಅರ್ಥ** :- **ಯಸ್ಮಾತ್** ಯಾವ ಕಾರಣದಿಂದ, **ಅಸೌ** ಇವನು, **ಪೂರ್ವಂ** ಹಿಂದೆ **ದನುನಾಮ** ದನು ಎಂದು ಹೆಸರುಳ್ಳ, **ಗಂಧರ್ವಃ** ಗಂಧರ್ವನು, **ಆಸ** ಆಗಿದ್ದನೋ, **ತಸ್ಮಾತ್** ಆ ಕಾರಣದಿಂದ, **ರಾಜಾ** ರಾಜನಾದ ದನು, **ಕೃಷ್ಣೇಃ** ಕೃಷ್ಣನಲ್ಲಿ **ಭಕ್ತಿಮಾನ್** ಭಕ್ತಿಯುಳ್ಳವನು, **ಆಸ** ಆಗಿದ್ದನು, **ಪಾಪಃ** ಪಾಪಿಯಾದ **ವಾಸುದೇವಃ** ವಸುದೇವನ ಮಗನಾದ, **ಸೃಗಾಲಾಖ್ಯಃ** ಸೃಗಾಲ ಎಂಬ ಹೆಸರುಳ್ಳ, **ಸಃ** ಅವನು **ತಾನ್** ಆ ಕೃಷ್ಣ ಮುಂತಾದವರನ್ನು, **ಪುರಂ** ತನ್ನ ಪಟ್ಟಣವನ್ನು ಕುರಿತು, **ಪ್ರಾಪ್ತಾನ್** ಬಂದದ್ದನ್ನು **ವಿಜ್ಞಾಯ** ತಿಳಿದು **ಕ್ರುಧಾ** ಕೋಪದಿಂದ, **ಅಗಾತ್** (ಯುದ್ಧಕ್ಕಾಗಿ) ಬಂದನು.

**ತಾತ್ಪರ್ಯ** :- ದಮಘೋಷ ದುನಾಮಗಂಧರ್ವ ಮನುಷ್ಯನಾಗಿ ಹುಟ್ಟಿ ಬಂದಿದ್ದ. ಆದರಿಂದಾಗಿ ಶ್ರೀಕೃಷ್ಣನಲ್ಲಿ ಭಕ್ತಿ ಹೊಂದಿದವನಾಗಿದ್ದ ತನ್ನ ಪಟ್ಟಣಕ್ಕೆ ಅವರು ಬಂದಿದ್ದನ್ನು ತಿಳಿದು ಪಾಪಿಯಾದ, ಸೃಗಾಲ ವಾಸುದೇವನು ಕೋಪದಿಂದ ಅವರ ಮೇಲೆ ಯುದ್ಧಕ್ಕೆ ಬಂದ.

**ಸೂರ್ಯಪ್ರದತ್ತಂ ರಥಮಾರುಹ್ಯ ದಿವ್ಯಂ**
**ವರಾದವಧ್ಯಸ್ತಿಗ್ಮರುಚೇಃ ಸ ಕೃಷ್ಣಂ**
**ಯೋದ್ಧುಂ ಯಯಾವಮುಚಚ್ಚಾಸ್ತ್ರಸಂಘಾನ್**
**ಶಿರಸ್ತಸ್ಯಾಥಾಶು ಜಹಾರ ಕೃಷ್ಣಃ ॥ ೩೧ ॥**

**ಅರ್ಥ** :- **ತಿಗ್ಮರುಚೇಃ** ಸೂರ್ಯನ, **ವರಾದ್** ವರದಿಂದ, **ಅವಧ್ಯಃ** ಅವಧ್ಯನಾದ, **ಸಃ** ಆ ವಸುದೇವನು, **ಸೂರ್ಯಪ್ರದತ್ತಂ** ಸೂರ್ಯನಿಂದ ಕೊಡಲ್ಪಟ್ಟ, **ದಿವ್ಯಂ** ಉತ್ತಮವಾದ, **ರಥಂ** ರಥವನ್ನು, **ಆರುಹ್ಯ** ಏರಿ **ಕೃಷ್ಣಂ** ಕೃಷ್ಣನನ್ನು ಕುರಿತು **ಯೋದ್ಧುಂ** ಯುದ್ಧ ಮಾಡಲು, **ಯಯೌ** ಹೋದನು, **ಚ** ಮತ್ತು **ಅಸ್ತ್ರಸಂಘಾನ್** ಅಸ್ತ್ರಸಮೂಹಗಳನ್ನು **ಅಮುಚತ್** ಬಿಟ್ಟನು, **ಅಥಃ** ಅಸ್ತ್ರಸಮೂಹ ಬಿಟ್ಟನಂತರ, **ಕೃಷ್ಣ** ಕೃಷ್ಣನು **ಆಶು** ಕೂಡಲೇ **ತಸ್ಯ** ಆ ಸೃಗಾಲ ವಾಸುದೇವನ **ಶಿರಃ** ಶಿರಸ್ಸನ್ನು **ಜಹಾರ** ಕತ್ತರಿಸಿದನು.

**ತಾತ್ಪರ್ಯ** :- ಸೂರ್ಯನ ವರದಿಂದ ಅವಧ್ಯನಾದ ಸೃಗಾಲ, ಸೂರ್ಯ ನಿತ್ತ ದಿವ್ಯರಥವನ್ನೇರಿ ಕೃಷ್ಣನೊಡನೆ ಯುದ್ಧಮಾಡಲು ಹೋದ.

ಅಸ್ತ್ರ ಸಮೂಹಗಳನ್ನೆಸೆದು, ಕೃಷ್ಣ ಬೇಗನೇ ಅವನ ಶಿರಸ್ಸನ್ನು ತರಿದ.

**ದ್ವಿಧಾ ಕೃತ್ವಾ ದೇಹಮಸ್ಯಾರಿಣಾ ಚ**
**ಪುತ್ರಂ ಭಕ್ತಂ ತಸ್ಯ ರಾಜ್ಯೇಽಭಿಷಿಚ್ಯ**
**ಸ ಶಕ್ರದೇವಂ ಮಣಿಭದ್ರಃ ಪುರಾ ಯೋ**
**ಯಯೌ ಪುರೀಂ ಸ್ವಾಂ ಸಹಿತೋಽಗ್ರಜೇನ ॥ ೩೨ ॥**

**ಅರ್ಥ** :- **ಸಃ** ಕೃಷ್ಣನು, **ಅಸ್ಯ** ಈ ಸೃಗಾಲನ, **ದೇಹಂ** ಶರೀರವನ್ನು **ಅರಿಣಾ** ಸುದರ್ಶನ ಚಕ್ರದಿಂದ, **ದ್ವಿಧಾ** ಎರಡು ಭಾಗವಾಗಿ, **ಕೃತ್ವಾ** ಮಾಡಿ, **ಪುರಾ** ಹಿಂದೆ ಮೂಲರೂಪದಲ್ಲಿ **ಮಣಿಭದ್ರ** ಮಣಿಭದ್ರ ಎಂಬ ಹೆಸರಿನ, **ಯಃ** ಯಾವ, **ದೇವಃ** ದೇವನು, **ಅಭೂತ್** ಇದ್ದನೋ, **ತಸ್ಯಃ** ಈ ಸೃಗಾಲನ **ಪುತ್ರಂ** ಮಗನಾದ, **ಭಕ್ತಂ ಚ** ಸ್ವಭಕ್ತನಾದ, **ತಂ** ಅಂತಹ, **ಶಕ್ರದೇವಂ** ಶಕ್ರದೇವ ಎಂಬುವನನ್ನು **ರಾಜ್ಯೇ** ರಾಜ್ಯದಲ್ಲಿ, **ಅಭಿಷಿಚ್ಯ** ಅಭಿಷೇಕ ಮಾಡಿ, **ಸ್ವಾಂ** ತನ್ನದ್ದಾದ **ಪುರೀಂ** ಮಥುರಾ ಪಟ್ಟಣವನ್ನು ಕುರಿತು **ಅಗ್ರಜೇನ ಸಹಿತಃ** ಅಣ್ಣಬಲರಾಮನಿಂದ ಕೂಡಿಕೊಂಡು, **ಯಯೌ** ಹೋದನು.

**ತಾತ್ಪರ್ಯ** :- ಶ್ರೀ ಕೃಷ್ಣ ಚಕ್ರದಿಂದ ಸೃಗಾಲನ ದೇಹವನ್ನು ಎರಡಾಗಿ ಸೀಳಿದ. ಅವನ ಮಗನೂ ತನ್ನ ಭಕ್ತನೂ ಆದ ಶಕ್ರದೇವನನ್ನು ರಾಜ್ಯದಲ್ಲಿ ಅಭಿಷೇಕ ಮಾಡಿ ಬಲರಾಮ ಸಮೇತನಾಗಿ ತನ್ನ ಪಟ್ಟಣಕ್ಕೆ ಹೋದ. ಶಕ್ರದೇವ ಹಿಂದೆ ಬಲಬದ್ರನೆಂಬ ಒಬ್ಬ ದೇವ.

ನೀತಿಂ ಬಲಿಷ್ಠಸ್ಯ ವಿಹಾಯ ಸೇನಾಂ
ದೂರಾದ್ ಯುದ್ಧಂ ದರ್ಶಯಿತ್ವೈವ ಗುಪ್ತ್ಯೈ
ಸ್ವ ಸೇನಾಯಾಃ ಸರ್ವ ಪೂರ್ಣಾತ್ಮಶಕ್ತಿಃ
ಪುನಃ ಪುರೀಂ ಪ್ರಾಪ್ಯ ಸಂಪೂಜಿತೋಽವಸತ್ ॥ ೩೩ ॥

**ಅರ್ಥ** :- ಸರ್ವ ಸಕಲ ವಿಷಯದಲ್ಲಿಯೂ, **ಪೂರ್ಣಾತ್ಮಶಕ್ತಿಃ**, **ಪೂರ್ಣ** ಪೂರ್ಣವಾದ, **ಆತ್ಮಶಕ್ತಿಃ** ಸ್ವರೂಪಶಕ್ತಿಯುಳ್ಳ, ಕೃಷ್ಣ ಕೃಷ್ಣನು, **ಸ್ವಸೇನಾಯಾಃ** ತನ್ನ ಸೈನ್ಯದ, **ಗುಪ್ತ್ಯೈ** ರಕ್ಷಣೆಗಾಗಿ, **ಬಲಿಷ್ಠಸ್ಯ** ಬಲಿಷ್ಠನ, **ಸೇನಾಂ** ಸೇನೆಯನ್ನು **ವಿಹಾಯ** ಬಿಟ್ಟು, **ದೂರಾದ್** ದೂರದಿಂದಲೇ, **ಯುದ್ಧಂ** ಯುದ್ಧವು, **ಕರ್ತವ್ಯಂ** ಮಾಡತಕ್ಕದ್ದು (ಮಾಡಲ್ಪಡಬೇಕು), **ಇತಿ** ಎಂಬ, **ನೀತಿಂ** ನೀತಿಯನ್ನು **ದರ್ಶಯಿತ್ವೈವ** ತೋರಿಸಿ, **ಪುನಃ** ಮತ್ತೊಮ್ಮೆ, **ಪುರೀಂ** ಪಟ್ಟಣವನ್ನು **ಪ್ರಾಪ್ಯ** ಹೊಂದಿ, **ಸಂಪೂಜಿತಃ** ಚೆನ್ನಾಗಿ ಪೂಜಿಸಲ್ಪಟ್ಟವನಾಗಿ (ಸಂಪೂಜಿತನಾಗಿ) **ಅವಸತ್** ವಾಸ ಮಾಡಿದನು.

**ತಾತ್ಪರ್ಯ** :- ಸರ್ವವಿಷಯದಲ್ಲಿಯೂ ಪೂರ್ಣ ಸ್ವರೂಪಶಕ್ತಿಯುಳ್ಳ ಕೃಷ್ಣ ತನ್ನ ಸೈನ್ಯದ ರಕ್ಷಣೆಗಾಗಿ ಬಲಿಷ್ಠನ ಸೈನ್ಯವನ್ನು ಬಿಟ್ಟು ದೂರ ಹೋಗಿ ಯುದ್ಧ ಮಾಡುವುದೇ ಸರಿಯಾದ ನೀತಿ ಎಂದು ತೋರಿಸಿ, ಪುನಃ ಪಟ್ಟಣವನ್ನು ಸೇರಿ ಎಲ್ಲರ ಆದರಕ್ಕೆ ಪಾತ್ರನಾಗಿ ವಾಸ ಮಾಡಿದ.

**ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ**
**ವಿರಚಿತವಾದ ಮಹಾಭಾರತತಾತ್ಪರ್ಯನಿರ್ಣಯ**
**ಹದಿನಾರನೆಯ ಅಧ್ಯಾಯದ ಕನ್ನಡ ಅನುವಾದವು ಮುಗಿಯಿತು**

**-: ಶ್ರೀಕೃಷ್ಣಾರ್ಪಣಮಸ್ತು :-**

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಃ

# ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಃ

ಒಂಭತ್ತನೆಯ ಅಧ್ಯಾಯದಿಂದ ಹದಿನಾರನೆಯ ಅಧ್ಯಾಯದವರೆಗೆ





ಪ್ರಕಾಶಕರು
**ಶ್ರೀಗುರುರಾಜ ಅಸೋಸಿಯೇಷನ್ (ರಿ.)**
# 53, ಮಾಡಲ್ ಹೌಸ್ ಬೀದಿ, ಬಸವನಗುಡಿ,
ಬೆಂಗಳೂರು 560 004. ದೂರವಾಣಿ: 26625658/59
Website: www.srigururajaassociation.org